ಸಂಪುಟ ೩೦.                                    ಸಂಚಿಕೆ ೫.

# ಶಿವಾನುಭವ

ಸಂಪಾದಕರು
ರಾ|| ಬ್ಯಾ|| ಫ. ಗು. ಹಳಕಟ್ಟಿ,
ಬಿ. ಎ., ಎಲ್. ಎಲ್. ಬಿ.
ವಿಜಾಪುರ

[ವಾರ್ಷಿಕ ಚಂದಾ ೫-೧೨-೦ ಅಂಚೆಯ ವೆಚ್ಚ ಬೇರೆ]

ಮೇ ೧೯೫೬

# ವಿಷಯಾನುಕ್ರಮಣಿಕೆ.





# ಶಿವಾನುಭವ

ಸಂಚಿಕೆ ೩೦ | ಮೇ ೧೯೫೬ | ಸಂಪುಟ ೩

## ಶ್ರೀಮದುಜ್ಜಯಿನಿ ಸದ್ಧರ್ಮ ಸಿಂಹಾಸನಾಧೀಶ
## ಶ್ರೀ ತರಳಬಾಳು ಜಗದ್ಗುರು
## ಶ್ರೀ ೧೧೦೮ ಶ್ರೀ ಶಿವಕುಮಾರ ಶಿವಾಚಾರ್ಯ ಮಹಾಸ್ವಾಮಿಗಳವರ ಭಾಷಣ.

ವಿಶ್ವಬಂಧು ಮರುಳಸಿದ್ಧನ ಸ್ಮಾರಕವಾಗಿ ನಡೆಯುವ ಈ ಸಮಾರಂಭದ ಸಂದರ್ಭದಲ್ಲಿ ನೀವು ನಮ್ಮ ಬಗ್ಗೆ ಸವಿನುಡಿಗಳನ್ನಾಡಿರುವುದು ಇಂಯದ ವೀರಗೆ ಇಲ್ಲದ ಸೊಬಗ ಏರಿಸಿ ನುಡಿದಂತಾಗಿದೆ. ಸೇವಾಕ್ಷೇತ್ರದ ಕಾರ್ಯಕರ್ತರಿಗೆ ಹೂಗಳಿಕೆಯು ಹೊನ್ನಶೂಲ ಮನ್ನಣೆಯು ಮಸೆದಲಗು ಸೇವಾ ಕ್ಷೇತ್ರವು ತುಂಬಾ ಜಟಿಲವಾದುದು. ಟೀಕೆಗಳಿಗೆ ಕುಗ್ಗದೆ, ಸವಿನುಡಿಗಳಿಗೆ ಹಿಗ್ಗದೆ. ನ್ಯಾಯನಿಷ್ಠುರನಾಗಿ ದಾಕ್ಷಿಣ್ಯಪರನಾಗದೆ, ಆರಿಗೂ ಅಂಜದೆ, ಅಳುಕದೆ, ತನ್ನ ಗುರಿಯತ್ತ ಸಾಗುವವನು ಮಾತ್ರ ಅಲ್ಲಿ ಯಶಸ್ವಿಯಾಗಬಲ್ಲನು. ಸೇವಾ ದೀಕ್ಷಿತನು ಸವಿನುಡಿಗಳಿಂದ ಹಿಗ್ಗಿ ಮೇಲಕ್ಕೇರದೆ ಕಿಂಕರರ ಕಿಂಕರನಾಗಿರಬೇಕು. ಅಂತೆಯೇ ಬಸವಣ್ಣನವರು "ಮೇಲಾಗಲೊಲ್ಲೆನು ಕೀಳಾಗಲೊಲ್ಲಬೆ, ಕೀಳಿಂಗಲ್ಲದೆ ಹಯನ ಕರೆವುದೇ? ಮೇಲಾಗಿ ನರಕದ ಲೋಲಾಡಲಾರೆನು, ನಿಮ್ಮ ಶರಣರ ಪಾದಕ್ಕೆ ಕೀಳಾಗಿಸು ಮಹಾದಾನಿ ಕೂಡಲಸಂಗಮದೇವ" ಎಂದು ಹೇಳಿದ್ದಾರೆ. ನಿಜವಾಗಿ ಹೇಳುವದಾದರೆ ನಿಮ್ಮ ಪ್ರಶಂಸೆಗೆ ಅರ್ಹವಾದಂತಹ ಯಾವ ಕೆಲಸವೂ ನಮ್ಮಿಂದ ಆಗಿಲ್ಲ. ಶ್ರೀಗುರು ಮರುಳಸಿದ್ಧನು ತೋರಿಸಿದ ಪಥದಲ್ಲಿ ಅವನ ಕಿಂಕರರಾಗಿ ನಡೆದಿದ್ದೇವೆ ಮಾತ್ರ.

ಕಳೆದ ೯ ದಿನಗಳಿಂದ ಇಲ್ಲಿ ಸಮಾವೇಶಗೊಂಡಿದ್ದ ಈ ಸಮಾರಂಭವು ಪ್ರತಿ ವರ್ಷಕ್ಕಿಂತ ಹೆಚ್ಚಾಗಿ ಜನರನ್ನು ಆಕರ್ಷಿಸಿತು. ನಿರ್ದಿಷ್ಟವಾದ ಕಾಲಕ್ಕೆ ಸರಿಯಾಗಿ ಪ್ರತಿದಿನ ಸ್ಥಳ-ಪರಸ್ಥಳಗಳಿಂದ ಪುರುಷರೂ ಮತ್ತು ಸ್ತ್ರೀಯರೂ ಹೆಚ್ಚು ಹೆಚ್ಚಾಗಿ ಭಾಗವಹಿಸುತ್ತಿದ್ದುದನ್ನು ನೋಡಿ ನಮಗೆ ತುಂಬಾ ಸಂತೋಷವೆನಿಸಿತು. ಈ ಸಲ ಶರಣಸಾಹಿತ್ಯದ ಬಗ್ಗೆ ಅಧಿಕೃತವಾಗಿ ಮಾತನಾಡಬಲ್ಲ ಉದ್ದಾಮ ಸಾಹಿತಿಗಳು ದೊರಕಿದ್ದುದು ಮತ್ತಷ್ಟು ವಿಶೇಷ. "ಕೆರೆಹಳ್ಳಭಾವಿಗಳು ಮೈದೆಗೆದರೆ ಗುಳ್ಳೆಗೊರಚೆ ಚಿಪ್ಪು ಕಾಣಬಹುದು. ವಾರಿಧಿ ಮೈದೆಗೆದರೆ ರತ್ನಂಗಳ ಕಾಣಬಹುದು" ಎಂಬಂತೆ ತಮ್ಮ ಅನುಭವಾಮೃತವನ್ನು ಜನತೆಗೆ ಮನದಣಿಯ ಉಣಬಡಿಸಿದರು. ನಮ್ಮ ನಾಡಿನಲ್ಲಿ ಅಜ್ಞಾನ ಅಂಧಶ್ರದ್ಧೆಯಲ್ಲಿ ಮುಳುಗಿ ತಮ್ಮನ್ನೇ ತಾವು ಮರೆತಿರುವ ಜನತೆಯನ್ನು ಎಚ್ಚರಿಸಲು ಇಂಥಹ ಸಮಾರಂಭಗಳು ತುಂಬಾ ಉಪಕಾರಿಯಾಗಿವೆ. ಆದುದರಿಂದ ಈ ತರಳಬಾಳು ಹುಣ್ಣಿಮೆ ಮಹೋತ್ಸವವು ಸ್ವಾಗತ ಭಾಷಣದಲ್ಲಿ ವಿವರಿಸಿದಂತೆ ಪ್ರತಿಯೊಂದು ಗ್ರಾಮದಲ್ಲೂ, ನಡೆಯುವುದು ಅತ್ಯಂತ ಉಚಿತವಾಗಿದೆ. ಮುಂದಿನ ವರ್ಷದಿಂದ ಈ ಮಹೋತ್ಸವವು ಇನ್ನೂ ಕೆಲವು ವಿಶೇಷ ಕಾರ್ಯಕ್ರಮಗಳೊಂದಿಗೆ ಪ್ರಾರಂಭವಾಗುತ್ತದೆಯೆಂದು ತಿಳಿದು ನಮಗೆ ತುಂಬಾ ಹರ್ಷವಾಗಿದೆ.

ವೇದ, ಧಮ್ಮಪದ, ಬೈಬಲ್, ಕುರಾನ್ ಇವುಗಳು ಆಯಾಯ ಧರ್ಮೀಯರಿಗೆ ಪ್ರಮಾಣ ಗ್ರಂಥಗಳಾಗಿರುವಂತೆ ವಚನಶಾಸ್ತ್ರವು ಶರಣ ಧರ್ಮಾನುಯಾಯಿಗಳಿಗೆ ಪ್ರಮಾಣೀಕವಾದುದಾಗಿದೆ. ಜಗತ್ತಿನ ಯಾವ ಸಾಹಿತ್ಯದಲ್ಲೂ ವಚನಶಾಸ್ತ್ರದಂತಹ ಉನ್ನತ ಮಟ್ಟದ ಸಾಹಿತ್ಯವಿಲ್ಲವೆಂದು ಬಲ್ಲವರು ಹೇಳಿರುವುದು ಶರಣ ತತ್ವ ಪ್ರೇಮಿಗಳಿಗೆ ಅಭಿಮಾನಾಸ್ಪದವಾದುದು. ವಚನಶಾಸ್ತ್ರದ ಮುಖ್ಯ ಉದ್ದೇಶ, ತಿಳಿಯಾದ ಭಾಷೆಯಲ್ಲಿ ಪಾಮರರಿಗೂ ಸಹ ಧರ್ಮವನ್ನು ಬೋಧಿಸುವುದು, ಅಜ್ಞಾನ ಅಂಧಶ್ರದ್ಧೆಗಳನ್ನು ಹೋಗಲಾಡಿಸಿ, ವಿಚಾರ ಶಕ್ತಿಯನ್ನು ಬೆಳೆಸಿ, ಜನತೆಗೆ ವಿಚಾರ ಸ್ವಾತಂತ್ರ್ಯವನ್ನು ಕೊಡುವದು, ಮಾನವರಲ್ಲಿ ರೂಢಮೂಲವಾಗಿರುವ ಮೇಲು ಕೀಳುಗಳನ್ನು ದೂರಮಾಡಿ ಗುಣಶೀಲ ಕರ್ಮಗಳ ಅರ್ಹತೆಯ ಮೇಲೆ ಮಾನವತೆಯನ್ನು ನಿರ್ಣಯಿಸುವುದು, ಇವೇ ಮುಂತಾದವುಗಳಾಗಿವೆ. ವೇದಾದಿ ಉಪನಿಷತ್ ಶಾಸ್ತ್ರಗಳು ತಿಳಿಯಾದ ಭಾಷೆಯಲ್ಲ, ಕಠಿಣವಾದ ಶೈಲಿಯಲ್ಲಿ

ಇದ್ದುದರಿಂದ ಶರಣರು ಅವುಗಳಲ್ಲಿಯ ಸಾರವನ್ನು ತಮ್ಮ ಅನುಭವದೊಡನೆ ವಚನರೂಪದಲ್ಲಿ ನಮ್ಮ ಮುಂದಿಟ್ಟಿದ್ದಾರೆ.

ಇಂದು ಧರ್ಮ ಹೇಳುವುದೊಂದು; ಜನ ಮಾಡುವುದೊಂದು ಎಂಬಂತೆ ನಮ್ಮ ನಡೆನುಡಿಗಳು ಸಹಜವಾಗಿಯೂ ಧರ್ಮಕ್ಕೆ ವಿರುದ್ಧವಾಗಿವೆ. ಸಾಮಾಜಿಕ ಕಟ್ಟು ಕಟ್ಟಳೆಗಳನ್ನೇ ಧರ್ಮವೆಂದು ಭಾವಿಸಿ ಧರ್ಮವನ್ನು ಜಾತಿಯ ಮಟ್ಟಕ್ಕೆ ಇಳಿಸಿದ್ದೇವೆ. ಈ ಪರಿಣಾಮವಾಗಿ ನಮ್ಮ ನಾಡಿನಲ್ಲಿ ಜಗತ್ತಿನಲ್ಲಿ ಎಲ್ಲೂ ಇಲ್ಲದ ಜಾತಿ ಮತಗಳ ಭಿನ್ನತೆಯು ಎದ್ದು ಕಾಣುತ್ತದೆ. ಮಾನವನೇ ಮಾನವನ ಪರಮ ಶತ್ರುವಾಗಿದ್ದಾನೆ. ನಮ್ಮ ಭಾರತವು ಧರ್ಮಗಳ ನೆಲೆವೀಡು. ಧರ್ಮವು ಶಾಂತಿಯ ಸಾಧನವು. ಆದರೆ ಇಂದು ನಮ್ಮ ನಾಡಿನ ಅಶಾಂತಿಗೆ ಧರ್ಮವೇ ಕಾರಣವಾಗಿರುವುದು. ಅದಕ್ಕೆ ಸೋಂಕಿರುವ ಜಾತೀಯತೆಯಿಂದ ಎಂಬ ಬಗ್ಗೆ ಭಿನ್ನಾಭಿಪ್ರಾಯವಿಲ್ಲ. ಆದ್ದರಿಂದಲೇ ಈ ಜಾತೀಯತೆಯಿಂದುಂಟಾದ ಸಮಸ್ಯೆಯನ್ನು ಪರಿಹರಿಸಲು ನಮ್ಮ ರಾಷ್ಟ್ರವು ಜಾತ್ಯಾತೀತವೆಂದು ಘೋಷಿಸಿತು. ಆದರೆ ನಮ್ಮಲ್ಲಿ ಎಂದಿನಂತೆಯೇ ಜಾತೀಯತೆಯು ಮೇರೆ ಮೀರಿ ಮೆರೆಯುತ್ತಿದೆ. ಜೀವನದ ಸರ್ವ ಕ್ಷೇತ್ರಗಳಲ್ಲೂ ಜನತೆಯು ಜಾತೀಯತೆಯ ದಬ್ಬಾಳಿಕೆಗೆ ತುತ್ತಾಗಿ ಬಳಲುತ್ತಿವೆ. ಇದಕ್ಕೆ ನಿಜವಾದ ಪರಿಹಾರವನ್ನು ಕಲ್ಪಿಸುವುದು ಧರ್ಮಾಧಿಕಾರಿಗಳ ಕರ್ತವ್ಯವಾಗಿದೆ. ಅವರು ಮುಂದೆಬಂದು ಸಾಮಾಜಿಕ ಪದ್ಧತಿಗಳು ಬೇರೆ ಧರ್ಮತತ್ವಗಳು ಬೇರೆಂಬುದನ್ನು ವಿವರಿಸಿ ಧರ್ಮಕ್ಕೆ ಅಂಟಿರುವ ಜಾತಿಯ ಸೋಂಕನ್ನು ನಿರ್ಮೂಲ ಮಾಡಬೇಕು. ಸಾಮಾಜಿಕ ಪದ್ಧತಿಗಳು ದೇಶ ಕಾಲಾನುಗುಣವಾಗಿ ಬದಲಾಗುತ್ತಲಿರುತ್ತವೆ. ಆದರೆ ಧರ್ಮ ತತ್ವಗಳು ಎಲ್ಲಾ ಕಾಲಕ್ಕೂ ಒಂದೇ ವಿಧವಾಗಿರುತ್ತವೆ ಎಂಬುದನ್ನು ಜನತೆಗೆ ಬೋಧಿಸಿ ಸಾಮಾಜಿಕ ಕಟ್ಟಳೆಗಳ ಆಚರಣೆಯ ಬಗ್ಗೆ ಜನತೆಗೆ ಸ್ವಾತಂತ್ರ್ಯವನ್ನು ಕೊಡಬೇಕು ಮತ್ತು ತಾವು ವಿಶಾಲ ಹೃದಯರಾಗಿ ಯಾವ ರೀತಿಯಿಂದಲೂ ಧರ್ಮವು ಯಾವುದಾದರೊಂದು ವ್ಯಕ್ತಿಯ ಅಥವಾ ಗುಂಪಿನ ಸ್ವಾರ್ಥ ಪ್ರತಿಷ್ಠೆಗಳಿಗೆ ದುರುಪಯೋಗವಾಗದಂತೆ ನೋಡಿಕೊಳ್ಳಬೇಕು. ಜನತೆಯಲ್ಲಿ ಧರ್ಮ ಜಿಜ್ಞಾಸೆಯ ಬಗ್ಗೆ ಅಂಧಶ್ರದ್ಧೆಯನ್ನು ಮೂಡಿಸದೆ ವಿಚಾರಶಕ್ತಿಯನ್ನು ಕೊಡಬೇಕು. ಆದರೆ ಇದನ್ನು ನಾವು ಇಂದಿನ ಧರ್ಮಾಧಿಕಾರಿಗಳಿಂದ ನಿರೀಕ್ಷಿಸಬಹುದೇ ಎಂದು

ಕೇಳದರೆ ಸಾಧ್ಯವಿಲ್ಲವೆಂದು ಹೇಳುವ ಸಾಹಸವನ್ನು ನಾವು ಮಾಡಲಾರೆವು. ವಸ್ತುಸ್ಥಿತಿಯೇನೋ ಇಂದೂ ವಿರೋಧವಾಗಿಯೇ ಇದೆ. ಧರ್ಮಪೀಠದ ಮೇಲೆ ಕುಳಿತು ನಿರ್ದಿಷ್ಟ ಧ್ಯೇಯವಿಲ್ಲದೆ ಬಸವಣ್ಣನವರು ಹೇಳಿರುವಂತೆ ಅವರವರ ಕಂಡರೆ ಅವರವರಂತೆ ನಡೆಯುವವರೇ ಹೆಚ್ಚಾಗಿದ್ದಾರೆ. ಇಂದು ಜನತೆ ಪ್ರಜಾಪ್ರಭುತ್ವದ ಅರ್ಥವನ್ನು ಅತಿರೇಕವಾಗಿ ಮಾಡಿಕೊಂಡು ತಮ್ಮ ಎಲ್ಲೆಗೆ ಮೀರಿದ ಕ್ಷೇತ್ರದಲ್ಲೂ ತಮ್ಮ ಪ್ರಭುತ್ವವೇ ನಡೆಯಬೇಕೆಂದು ಬಯಸುತ್ತಿದ್ದಾರೆ. ಅಂಥವರಿಗೆ ದಿಟ್ಟತನದಿಂದ ಸತ್ಯ ಪಥವನ್ನು ತೋರಿಸಲು, ಧರ್ಮಾಧಿಕಾರಿಗಳು ಅಸಮರ್ಥರಾಗಿ ಅವರನ್ನೇ ಹಿಂಬಾಲಿಸುತ್ತಿದ್ದಾರೆ. ಈ ಕಾರಣದಿಂದ "ಧರ್ಮಸ್ಯ ತತ್ವಂ ನಿಹಿತಂ ಗುಹಾಯಾಂ" ಎನ್ನುವುದಕ್ಕೆ ಬದಲಾಗಿ ಧರ್ಮದ ತತ್ವವು ಅಂಧಶ್ರದ್ಧೆಯಲ್ಲಿ ಮುಳುಗಿ ನಿರುಪಯೋಗವಾಗಿದೆ. ಎಲ್ಲೆಲ್ಲೂ ಧರ್ಮದ ಹೆಸರಿನಲಿ ಜಾತಿಯೇ ಎದ್ದು ಮೆರೆಯುತ್ತ ಇದೆ. ಇದು ನಾಡಿನ ಭವ್ಯ ಭವಿಷ್ಯಕ್ಕೆ ಅಶುಭ ಸೂಚನೆಯೆಂದು ಹೇಳದಿರಲಾರೆವು.

ಇಂತಹ ದುರ್ದೆಶೆಯು ನಮ್ಮ ನಾಡಿನ ಇತಿಹಾಸದಲಿ ಅನೇಕಬಾರಿ ಬಂದೊದಗಿದೆ. ಹನ್ನೆರಡನೆಯ ಶತಮಾನದಲ್ಲಿ ಜನತೆ ಇಂತಹದೇ ಆದ ದಬ್ಬಾಳಿಕೆಗೆ ತುತ್ತಾಗಿತ್ತು. ಧರ್ಮವು ಕೆಲವೊಂದೇ ಜನರ ಸೊತ್ತಾಗಿತ್ತು. ನಾಡಿನ ಅಸಂಖ್ಯಾತವಾದ ಜನತೆ ಧರ್ಮದ ಹೆಸರಿನಲ್ಲಿ ದಾಸ್ಯವನ್ನು ಅಂಗೀಕರಿಸಿತ್ತು. ತಿಳಿಯಲು, ಮಾತನಾಡಲು ಸಹ ಜನತೆಗೆ ಸ್ವಾತಂತ್ರ್ಯವಿರಲಿಲ್ಲ. ವಿಚಾರ ಸ್ವಾತಂತ್ರ್ಯವಂತೂ ಕನಸಿನ ಮಾತಾಗಿತ್ತು. ಆಗ ಒಂದು ದೊಡ್ಡ ಸಾಮಾಜಿಕ ಹಾಗೂ ಧಾರ್ಮಿಕ ಕ್ರಾಂತಿಯು ನಮ್ಮ ಕನ್ನಡನಾಡಿನಲ್ಲುಂಟಾಯಿತು. ಆ ಕ್ರಾಂತಿಯ ಮೂಲಪುರುಷ ಅಣ್ಣಬಸವಣ್ಣನೆಂಬುದು ನಮ್ಮೆಲ್ಲರಿಗೂ ತಿಳಿದೇ ಇದೆ.

ಅವನು ತಾನು ಜನ್ಮದಿಂದ ಉಚ್ಚಕುಲೀನನಾಗಿದ್ದರೂ ಜನತೆಯ ದಾಸ್ಯವಿಮೋಚನೆಗಾಗಿ ತನಗೆ ಜನ್ಮಸಿದ್ಧವಾದ ಉಚ್ಚ ಕುಲವನ್ನು ತ್ಯಜಿಸಿ ಜನಸಾಮಾನ್ಯರೊಂದಿಗೆ ಬೆರೆತು ಸಕಲ ಜೀವಾತ್ಮರಿಗೆ ಲೇಸನೇ ಬಯಸುವ ಉದಾರ ವಿಚಾರ ಸರಣಿಯ ತಳಹದಿಯ ಮೇಲೆ ಒಂದು ಜಾತ್ಯತೀತ ನೂತನ ಸಮಾಜವನ್ನು ಕಟ್ಟಿದನು. ಅದರಲ್ಲಿ ಉಚ್ಚನೀಚ ಜಾತಿಗಳ ಕಲ್ಪನೆಗೆ ಅವಕಾಶವಿಲ್ಲದಂತೆ ಸರ್ವರೂ ಸಮಾನರೆಂಬ ಉದಾರ ಭಾವ

ನೆಯಿಂದ ಮಾನವರನ್ನು ಒಂದುಗೂಡಿಸಲು ಯತ್ನಿಸಿದನು. ಈ ಪರಿಣಾಮವಾಗಿಯೇ ಶರಣ ಧರ್ಮವು ಉದಯಿಸಿತು. ಈ ಶರಣ ಧರ್ಮದ ಮುಖ್ಯವಾದ ಬಾಹ್ಯದ ಕುರುಹು ಲಿಂಗಧಾರಣೆ ಇಂದು ಈ ಲಿಂಗಧಾರಣೆಯ ಮೂಲಕ ಲಿಂಗವಂತವೆಂಬ ಜಾತಿಯೊಂದನ್ನು ಸಂಬೋಧಿಸುತ್ತಿದ್ದೇವೆ. ಆದರೆ ಇದು ನಿಜವಾಗಿಯೂ ಜಾತಿ ಸೂಚಕವಾದ, ಸಂಕುಚಿತವಾದ ಆಚರಣೆಯಲ್ಲ. ಲಿಂಗಧಾರಣೆಯ ಹಿನ್ನೆಲೆಯಲ್ಲಿ ಶರಣರು ವಿಶಾಲ ಹಾಗೂ ಉದಾರವಾದ ಭಾವನೆಯನ್ನು ಇಟ್ಟುಕೊಂಡಿದ್ದಾರೆ. ಅದು ಹೇಗೆಂದರೆ ಯಜ್ಞೋಪವೀತದಂತೆ ಲಿಂಗವು ಅವರವರ ಕಂಡರೆ ಅವರವರಂತಿರುವುದಿಲ್ಲ. ಬ್ರಾಹ್ಮಣನಲ್ಲಿರುವ ಲಿಂಗವು ಅವನನ್ನು ಬ್ರಾಹ್ಮಣನನ್ನಾಗಿ ಮಾಡುವುದಿಲ್ಲ. ಮಾದಿಗನಲ್ಲಿರುವ ಲಿಂಗವು ಅವನನ್ನು ಮಾದಿಗನನ್ನಾಗಿ ಮಾಡುವುದಿಲ್ಲ. ಆದರೆ ಲಿಂಗಧಾರಿಯಾದ ಬ್ರಾಹ್ಮಣ ಮತ್ತು ಲಿಂಗಧಾರಿಯಾದ ಮಾದಿಗ ಈ ಉಭಯರು ಲಿಂಗಧಾರಣೆಯಿಂದ ಜಾತಿ ಸೂಚಕವಾದ ಬ್ರಾಹ್ಮಣ ಮತ್ತು ಮಾದಿಗತನವನ್ನು ಕಳೆದುಕೊಂಡು ಉಭಯ ಸಾಮಾನ್ಯವಾದ ಮಾನವತೆಯ ವೇದಿಕೆಯ ಮೇಲೆ ಕಂಗೊಳಿಸುತ್ತಾರೆ, ಲಿಂಗವು ಶರಣರ ದೃಷ್ಟಿಯಲ್ಲಿ ಕೇವಲ ಆಧ್ಯಾತ್ಮೋನ್ನತಿಯ ಸಾಧನವಷ್ಟೇ ಮಾತ್ರವಲ್ಲ. ಮಾನವತೆಯ ಸಮೀಕರಣವಾದ ಸಾಧನವೂ ಆಗಿರುವುದು ಇದರಿಂದ ವ್ಯಕ್ತವಾಗುತ್ತದೆ. ಅಂತೆಯೇ ಬಸವಣ್ಣನವರು ಎಂಥವನಾದೊಡೇನು ಲಿಂಗ ಮುಟ್ಟಿದವನೇ ಕೀಳುಜಾತಿ ಕುಲವಹುದು ತಪ್ಪದು ಲಿಂಗಮುಟ್ಟಿದೊಡನೆ, ಶಿವಕುಲವಹುದು ತಪ್ಪದು. ಕಬ್ಬುನ ಹೊನ್ನಹುದು ತಪ್ಪದು ಪರುಷ ಮುಟ್ಟಲೊಡನೆ— ಎಂದು ಹೇಳಿದ್ದಾರೆ. ಪರುಷ ಮಣಿಯು ಕೀಳಾದ ಕಬ್ಬಿಣವನ್ನು ಬಂಗಾರವನ್ನಾಗಿ ಮಾಡುವುದು ಎಷ್ಟು ಸಹಜವಾದುದೋ ಶರಣರ ಲಿಂಗ ಪರುಷವು ಕೀಳಾದ ಹರಳಯ್ಯನನ್ನು ಮೇಲಾದ ಮಾನವನನ್ನಾಗಿ ಮಾಡಿರುವುದು ಅಷ್ಟೇ ಸಹಜವು. ಆದರೆ ಪರುಷಕ್ಕೂ ಲಿಂಗ ಪರುಷಕ್ಕೂ ಒಂದು ವಿಶೇಷವಿದೆ. ಅದೇನೆಂದರೆ ಲಿಂಗಪರುಷವು ಮೇಲೆಂಬ ಕಾರಣದಿಂದ ಮಾನವತೆಗೆ ಅತಿರೇಕ ಪ್ರಾಯವಾದ ಜಾತೀಯ ಮೇಲುತನವನ್ನೂ ಸಹ ನಿವಾರಿಸಿ ಉಚ್ಚ ಜಾತೀಯನಿಗೆ ಸಹಜ ಮಾನವತೆಯನ್ನು ಕರುಣಿಸುತ್ತದೆ. ಉದಾಹರಣೆಗೆ ಮಧುವರಸಯ್ಯನು ಜಾತಿಯಿಂದ ಬ್ರಾಹ್ಮಣನು ಲಿಂಗಧಾರಣೆಯಿಂದ ಅವನಲ್ಲಿದ್ದ ಮಾನವತೆಗೆ ಅತಿರೇಕವಾದ ಮೇಲು

ತನವು ನಷ್ಟವಾಯಿತು. ಹರಳಯ್ಯನು ಜಾತಿಯಿಂದ ಹೊಲೆಯನು. ಲಿಂಗಧಾರಣೆಯಿಂದ ಮಾನವತೆಗೆ ಕಳಂಕಪ್ರಾಯವಾದ ಜಾತೀಯ ಕೀಳುತನವನ್ನು ಕಳೆದುಕೊಂಡನು. ಈ ಕಾರಣದಿಂದ ಶರಣರ ಲಿಂಗಧಾರಣೆಯ ತತ್ವವು ಮೇಲುಕೀಳುಗಳ ನಿವಾರಣೆಯ ಮೂಲಕ ಮಾನವತೆಯ ಸಮೀಕರಣದ ಸಾಧನವಾಗಿದೆ. ಶರಣರು ಈ ತತ್ವದ ಆಧಾರದಿಂದಲೇ ಹನ್ನೆರಡನೆಯ ಶತಮಾನದಲ್ಲಿ ಅನುಭವಮಂಟಪವೆಂಬ ಮಾನವತೆಯ ಮಹಾಮಂಟಪವನ್ನು ನಿರ್ಮಿಸಿದರು. ಅಲ್ಲಿ ಸ್ತ್ರೀಪುರುಷರ ಭೇದವಿಲ್ಲದೆ, ಕಾಯಕಭೇದವಿಲ್ಲದೆ, ಜಾತಿಮತಗಳ ತಾರತಮ್ಯವಿಲ್ಲದೆ ಸರ್ವರೂ ಸಮಾನವಾಗಿ ಬಾಳಿ ಭಾರತೀಯ ಸಂಸ್ಕೃತಿಯನ್ನು ಮೇಲಕ್ಕೆ ಎತ್ತಿ ಹಿಡಿದಿದ್ದರು. ಅವರ ಆ ಮಹಾಮಂಟಪದಲ್ಲಿ ದೇಶಭಾಷೆಗಳ ಪ್ರತಿಬಂಧವೂ ಸಹ ಇರದೆ ಎಲ್ಲ ದೇಶಿಯರೂ ಎಲ್ಲ ಭಾಷಾ ಭಾಷಿಗರೂ ಸಮ್ಮಿಳಿತರಾಗಿದ್ದರು. ಇಂತಹ ಸುಂದರ ಸಮಾಜದ ರಚನೆಯು ನಿಜವಾಗಿಯೂ ವಿಶ್ವಶಾಂತಿಗೆ ಭವ್ಯ ಬುನಾದಿಯೆಂದು ಹೇಳಿದರೆ ತಪ್ಪಾಗಲಾರದು. ಶರಣರ ಈ ಕ್ರಾಂತಿಗೆ ಆಧಾರವಾಗಿ ಜಗತ್ತಿನ ಅತ್ಯಂತ ಪುರಾತನ ಸಂಸ್ಕೃತಿಯಾದ ಶೈವಸಂಸ್ಕೃತಿಯು ಹಿನ್ನೆಲೆಯಿತ್ತು. ಶೈವ ಸಂಸ್ಕೃತಿಯು ಪ್ರಾಚ್ಯ ಸಂಶೋಧಕರ ಅಭಿಪ್ರಾಯದಂತೆ ಏನಿಲ್ಲವೆಂದರೂ ಹತ್ತು ಸಹಸ್ರ ವರ್ಷಗಳ ಆಚಿನದಾಗಿದೆ. ಶಿವತತ್ವವು ಮಾನವ ಸಭ್ಯತೆಯ ಉತ್ಕ್ರಾಂತಿಯಲ್ಲಿ ಮೊಟ್ಟಮೊದಲು ಅವನ ಹೃದಯ ಪರಿವರ್ತನೆಯನ್ನು ಮಾಡಿದ ಧರ್ಮಕ್ರಾಂತಿಯ ಮೊದಲನೆಯ ಮೈಲಿಗಲ್ಲೆಂದು ಪ್ರಾಚ್ಯ ಸಂಶೋಧಕರು ಹೇಳುತ್ತಾರೆ. ಇದರ ಇತಿಹಾಸವು ಎಷ್ಟು ಪುರಾತನವಾದುದೋ ಅಷ್ಟೇ ವಿಸ್ತಾರವಾದದ್ದೂ ಆಗಿದೆ. ಭಾರತದಲ್ಲಿ ಆ ಸೇತು ಹಿಮಾಚಲಪರ್ಯಂತ ಎಲ್ಲ ಪ್ರಾಂತಗಳಲ್ಲಿಯೂ ಶೈವಧರ್ಮದ ಅವಶೇಷಗಳೂ, ಗುಹೆಗಳೂ, ಸ್ಮಾರಕಗಳೂ ನಡೆನುಡಿಗಳೂ, ಪ್ರತ್ಯಕ್ಷ ಹಾಗೂ ಅಪ್ರತ್ಯಕ್ಷವಾಗಿ ಕಾಣಬರುತ್ತಿರುವುದಲ್ಲದೆ ಭಾರತದ ಹೊರಗಡೆಯೂ ಅಂದರೆ ಈಜಿಪ್ತ್, ಮೆಸಪಟೋಮಿಯಾ, ಕ್ರೀಟ್ ದ್ವೀಪಗಳು ಚೀಣಾ, ಅಮೇರಿಕಾ ಇವೇ ಮುಂತಾದ ವಿದೇಶಗಳಲ್ಲೂ ಕಾಣಬರುತ್ತವೆ. ಈ ರೀತಿ ಶಿವಧರ್ಮವು ವಿಶ್ವದ ಎಲ್ಲ ಧರ್ಮಗಳ ಉಗಮಸ್ಥಾನವಾಗಿದೆ ಎಂದು ವಿಮರ್ಶಕರು ನಿರ್ಣಯಿಸಿರುತ್ತಾರೆ. ಪುರಾತನ ಹಾಗೂ ವಿಶ್ವವ್ಯಾಪಕವಾದ ಶೈವ ಧರ್ಮವು ಕಾಲಕಾಲಕ್ಕೆ ಜನತೆಯ ವಿಜ್ಞಾನ ಮತ್ತು ಅನುಭವಗಳು ಬೆಳೆದಂತೆ ವಿಕಾಸಹೊಂದುತ್ತಾ ಬಂದಿದೆ. ಭಾರತ

ದಲ್ಲಿ ಕಾಶ್ಮೀರ, ಬಂಗಾಳ, ತೆಲುಗು, ತಮಿಳು, ಇವೆ ಮೊದಲಾದ ಪ್ರಾಂತಗಳಲ್ಲಿ ಶೈವಧರ್ಮದ ವಿಕಾಸದ ಕ್ರಾಂತಿಯನ್ನು ನಾವು ವಿಪುಲವಾಗಿ ನೋಡಬಹುದಾಗಿದೆ. ಈ ರೀತಿ ಶೈವಸಂಸ್ಕೃತಿಯು ವಿಕಾಸರೂಪವಾದ್ದ, ಮಾನವ ಸಮಿಕರಣದ ಸಾಧನವಾದ ಈ ಶರಣ ಧರ್ಮವು ಭಾರತದ ಎಲ್ಲ ಪ್ರಾಂತಗಳು ಎಲ್ಲ ಭಾಷೆಗಳ ಮತ್ತು ಎಲ್ಲ ಜಾತಿಗಳ ಜನಾಂಗದ ಅಂಗೀಕರಿಸಲ್ಪಟ್ಟಿರುವುದರಿಂದ ವಿಶ್ವಧರ್ಮವೆಂದೂ, ಮಾನವತಾಧರ್ಮವೆಂದೂ, ಜನತಾ ಧರ್ಮವೆಂದೂ ವ್ಯವಹರಿಸಲ್ಪಡುತ್ತಿದೆ. ಇದನ್ನು ಈ ಉನ್ನತ ಮಟ್ಟಕ್ಕೆ ಏರಿಸಲು ನೂರಾರು ಪವಿತ್ರಾತ್ಮಗಳು ಬಲಿದಾನ ಮಾಡಿವೆಯೆಂಬುದನ್ನು ಹನ್ನೆರಡನೆಯ ಶತಮಾನದ ಕ್ರಾಂತಿಯಲ್ಲಿ ನಾವು ಕಾಣಬಹುದಾಗಿದೆ. ಆದುದರಿಂದಲೇ ಜಗತ್ತಿನ ಇತರ ಧರ್ಮಗಳ ಬಗ್ಗೆ ಒಬ್ಬೊಬ್ಬ ಸಂಸ್ಥಾಪಕರಿರುವಂತೆ ಈ ಧರ್ಮಕ್ಕೆ ಯಾವನೊಬ್ಬ ನಿರ್ದಿಷ್ಟ ಸಂಸ್ಥಾಪಕನೂ ಇಲ್ಲ ಮತ್ತು ಶೈವ ಸಂಸ್ಕೃತಿಯು ಪರಂಪರೆಯ ವಿಕಾಸದ ಪರಿಣಾಮವಾಗಿ ಉದಯಿಸಿದುದಾದರಿಂದ ಇತರ ಧರ್ಮಗಳಂತೆ ಇದಕ್ಕೆ ಯಾವ ನಿರ್ದಿಷ್ಟ ಕಾಲವೂ ಇಲ್ಲ. ಈ ರೀತಿ ಕಾಲಾತೀತವಾದ, ಭಾಷಾತೀತವಾದ ಜಾತ್ಯಾತೀತವಾದ, ದೇಶಾತೀತವಾದ ಈ ಶರಣ ಧರ್ಮವು ಸರ್ವಕಾಲಕ್ಕೆ ಸರ್ವಜನರಿಗೂ ಆದರಣೀಯವಾಗಿರುತ್ತದೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು.

ಈಚೆಗೆ ಇತಿಹಾಸವನ್ನು ಪರಿಶೀಲಿಸಿದರೆ ಈ ಭವ್ಯ ಸಂಸ್ಕೃತಿಯ ಭದ್ರಕಟ್ಟವನ್ನು ತಮ್ಮ ಕೈವಶ ಮಾಡಿಕೊಂಡು ಈ ಶರಣ ಧರ್ಮವನ್ನು ತಮ್ಮ ಸ್ವಾರ್ಥ ಪ್ರತಿಷ್ಠೆಗಳಿಗೆ ದುರುಪಯೋಗಪಡಿಸಿಕೊಳ್ಳಬೇಕೆಂಬ ಸಂಚು ನಡೆದಂತೆ ಕಾಣಬರುತ್ತದೆ. ಈ ಪರಿಣಾಮವಾಗಿಯೇ ಇತರ ಧರ್ಮಗಳಂತೆ ಈ ಧರ್ಮಕ್ಕೂ ನಿರ್ದಿಷ್ಟ ಸಂಸ್ಥಾಪಕರನ್ನೂ, ನಿರ್ದಿಷ್ಟ ಕಾಲವನ್ನೂ ಗೊತ್ತುಪಡಿಸುವ ಹವ್ಯಾಸಕ್ಕೆ ಕೆಲವರು ಬಿದ್ದಿರುತ್ತಾರೆ. ಈ ಸಂಸ್ಕೃತಿಯ ಕಾಲಮಾನದ ಅನಿರ್ದಿಷ್ಟತೆಯನ್ನು ಬಳಸಿಕೊಂಡ ಚಾರ್ಯರುಗಳವರೆಗೆ ಕಾಲಮಾನವನ್ನು ವಿಸ್ತಾರಗೊಳಿಸಿದ್ದಾರೆ. ಅಂತೆಯೇ ಈ ಸಂಸ್ಥಾಪಕರ ಅನಿರ್ದಿಷ್ಟತೆಯನ್ನು ದುರುಪಯೋಗಪಡಿಸಿಕೊಂಡು ಸಂಸ್ಥಾಪಕರನ್ನು ನಿರ್ದೇಶಗೊಳಿಸಲು ಯತ್ನ ಮಾಡಿದ್ದಾರೆ. ಈ ಸಂಚಿನ ಸಮುಭಾಗಿಗಳಾದ ವ್ಯಕ್ತಿಗಳು ಪೈಪೋಟಿ ಕಟ್ಟಿ ತಮ್ಮ ತಮ್ಮ ಅಭಿಪ್ರಾಯವನ್ನು ಪ್ರಮಾಣೀಕರಿಸಲು ಸಂಸ್ಕೃತ ಮತ್ತು ಕನ್ನಡಗಳಲ್ಲಿ ಗ್ರಂಥಗಳನ್ನು ರಚಿಸಿದರು. ಆದರೆ ಅದು

ಇಂದು ಯಶಸ್ವಿಯಾಗಿಲ್ಲ. ಮುಂದೂ ಯಶಸ್ವಿಯಾಗುವುದಿಲ್ಲ. ಈ ದಿನವಲ್ಲಿ ಕಣ್ಣು ಕಟ್ಟಿಕೊಂಡು ಆಲಿದಾಡುವವನಂತೆ ಈ ಉಭಯರು ಶರಣ ಧರ್ಮಾರಣ್ಯದಲ್ಲಿ ತಮ್ಮ ತಮ್ಮ ಸ್ಥಾನಗಳನ್ನು ನಿರ್ದಿಷ್ಟಗೊಳಿಸಿಕೊಳ್ಳಲು ದಿಕ್ಕು ತೋರದವರಾಗಿ ಸುಳಿದಾಡುತ್ತಿದ್ದಾರೆ. ಆದರೆ ಅವರ ಈ ಸಮಸ್ಯೆಗೆ ಅವರದೇ ದೃಷ್ಟಿಯಲ್ಲ ಪರಿಹಾರವು ಯಾವ ಕಾಲಕ್ಕೂ ದೊರೆಯುವುದಿಲ್ಲವೆಂದು ನಿಸ್ಸಂದೇಹವಾಗಿ ಹೇಳಬಯಸುತ್ತೇವೆ. ಏಕೆಂದರೆ ಜನತೆಯು ಅಜ್ಞಾನ ವಶ್ರ ಅಂಧ ಶ್ರದ್ಧೆಯಲ್ಲಿ ಮುಳುಗಿಹೋದಾಗ ಕೈವಶವಾದ ಪ್ರಭುತ್ವವನ್ನು ಜನರು ಜಾಗೃತವಾದಾಗ ಉಳಿಸಿಕೊಳ್ಳಲು ಯತ್ನಿಸುವುದೆಂದರೆ ಪ್ರಕೃತಿ ವಿರೋಧವಾದುದು. ಬ್ರಿಟಿಷರು ಭಾರತೀಯರಲ್ಲಿ ಸ್ವಾತಂತ್ರ್ಯದಾಹವಿಲ್ಲದಾಗ ಭಾರತದ ಪ್ರಭುಗಳಾಗಿದ್ದರು. ಆದರೆ ಸ್ವತಂತ್ರ್ಯದ ಕಹಳೆಯು ಮೊಳಗಿ ಜನತೆ ಎಚ್ಚತ್ತಾಗ ತಾವೇ ಮುಂದುಬಂದು ತಾವು ಕೈವಶವಾಡಿಕೊಂಡಿದ್ದ ಪ್ರಭುತ್ವವನ್ನು ಜನತೆಗೆ ಒಪ್ಪಿಸಿ ಭಾರತದ ಮಿತ್ರರಾಗಿದ್ದಾರೆ. ಇದಾದರೂ ಅಷ್ಟೇ. ಜನತೆಯಲ್ಲಿ ಸಮರಸವಾಗಿ ಬೆರೆದು ಜನಸಾಮಾನ್ಯರಿಗಿಂತ ವಿಶಿಷ್ಟವಾದ ಯಾವ ಅವಕಾಶ ಅಧಿಕಾರಗಳನ್ನು ಬಯಸದೆ ಸರ್ವರೊಳು ಒಬ್ಬರಾಗಿ ನಡೆದುಕೊಳ್ಳುವುದೇ ಈ ಸಮಸ್ಯೆಗೆ ನಿಜವಾದ ಪರಿಹಾರ. ಆದರೆ ಯಾರು ಒಂದು ಸ್ವಾರ್ಥದ ಸುಳಿಗೆ ಸಿಕ್ಕಿಬಿದ್ದಿರುತ್ತಾರೋ ಒಂದು ಪ್ರತಿಷ್ಠೆಯ ಕಟ್ಟೆಯನ್ನು ಏರಿನಿಂತಿರುತ್ತಾರೋ ಅವರು ತಾವಾಗಿಯೇ ತಿಳಿದುಕೊಂಡು ನಡೆಯು ಉದಾಹರಣೆಯು ಮಾನವ ಇತಿಹಾಸದಲ್ಲಿ ಇಲ್ಲಿಯವರೆಗೂ ಸಿಕ್ಕಿಲ್ಲ. ಇದಕ್ಕಾಗಿ ಹೋರಾಟ ನಡೆಯಲೇಬೇಕು. ಕಷ್ಟಕಾರ್ಪಣ್ಯಗಳನ್ನು ಅನುಭವಿಸಲೇಬೇಕು. ಇದು ಮಾನವ ಪ್ರಪಂಚದ ಪ್ರಕೃತಿ ನಿಯಮ. ಶರಣರ ಇತಿಹಾಸವೂ ಸಹ ಈ ಹೋರಾಟಕ್ಕೆ ನಿದರ್ಶನವಾಗಿದೆ.

ಶರಣರ ಮೇಲೆ ನಡೆದಿರುವ ಈ ಆಕ್ರಮಣವನ್ನು ತಡೆಗಟ್ಟಲೇನೋ ಎಂಬಂತೆ ಹಿಂದೆ ಶರಣರು ತಮ್ಮ ಕ್ರಾಂತಿಯ ಮುಕ್ತಾಯ ಕಾಲದಲ್ಲಿ ಮುಂದೆ ಮತ್ತೆ ಬರುತ್ತೇವೆಂದು ಕಾಲಜ್ಞಾನವನ್ನು ನುಡಿದಿದ್ದಾರೆ. ಅದು ನಿಜವೇನೋ ಎಂಬಂತೆ ಎಲ್ಲೆಲ್ಲೂ ಶರಣ ಧರ್ಮವು ಈಗ ಪ್ರಚಾರವಾಗುತ್ತಲಿದೆ. ಅಂದು ಶರಣರು ತಮ್ಮ ಅನುಭವ ಸಂದೇಶವನ್ನು ನಾಡಿನ ಮೂಲೆ ಮೂಲೆಗೂ ಪ್ರಸಾರಗೊಳಿಸಿದಂತೆ ಇಂದು ನಾವು ಆ ಪ್ರಸಾರ ಕಾರ್ಯ

ವನ್ನು ಕೈಗೊಳ್ಳಬೇಕಾಗಿದೆ. ಧರ್ಮದ ನಿಜಸ್ವರೂಪವನ್ನು ಅರಿತವರ ಸಂಖ್ಯೆ ಹೆಚ್ಚಿದಂತೆ ಆಕ್ರಮಣ ಶೀಲರ ಶಕ್ತಿಯು ಕುಂದುತ್ತಾ ಹೋಗಬಹುದು. ಅಂದು ಶರಣರ ಪ್ರಸಾರ ಕಾರ್ಯಕ್ಕೆ ಇಂದಿರುವಂತೆ ವೈಜ್ಞಾನ ಸೌಕರ್ಯಗಳಿರಲಿಲ್ಲ. ಆದರೂ ಅಣ್ಣನವರ ನೇತೃತ್ವದಲ್ಲಿ ಕೇವಲ ಅಲ್ಪ ಕಾಲಾವಧಿಯಲ್ಲಿ ಅವರ ಕ್ರಾಂತಿಯು ಯಶಸ್ವಿಯಾಗಿದೆ. ಇದು ವಿಜ್ಞಾನ ಯುಗ. ಆಂದೋಳನ ಪರ್ವ, ಪತ್ರಿಕೆಗಳೂ, ಪುಸ್ತಕಗಳು ಮತ್ತು ಭಾಷಣಗಳ ಮೂಲಕ ಶರಣ ತತ್ವವು ಪ್ರಚಾರವಾಗುತ್ತಲಿದೆ. ಆದರೆ ಶರಣರ ಧರ್ಮಾನುಯಾಯಿಗಳಲ್ಲಿ ಒಂದು ದೊಡ್ಡ ಕೊರತೆಯಿದೆ. ಅದೇನಂದರೆ ಧರ್ಮಶಾಸ್ತ್ರ ಅಭ್ಯಾಸದ ಬಗ್ಗೆ ಆಸಕ್ತಿಯಿಲ್ಲದಿರುವುದೇ ಆ ಕೊರತೆ. ಈ ಬಗ್ಗೆ ಜನರಲ್ಲಿ ಆಸಕ್ತಿಯನ್ನು ಬೆಳೆಸಲು ಶರಣರ ಚರಿತ್ರೆಗಳನ್ನು ಅವರಿಗೆ ಹಿಡಿಸುವ ರೀತಿಯಲ್ಲಿ ಪ್ರಚಾರಮಾಡಬೇಕಾಗಿದೆ. ಜನ ಒಮ್ಮೆ ಎಚ್ಚೆತ್ತಿತೆಂದರೆ ಸ್ವಾರ್ಥಿಗಳ ಜಾಲಕ್ಕೆ ಬೀಳಬಾರದು.

ಆದುದರಿಂದಲೇ ನಮ್ಮ ಗುರು ಪರಂಪರೆಯ ಮೂಲ ಪುರುಷನಾದ ಮರುಳಸಿದ್ಧನ ಸ್ಮಾರಕವಾಗಿ ನಡೆಯುವ ಈ ಸಮಾರಂಭವು ಅಂತಹ ಪ್ರಚಾರ ಕಾರ್ಯವನ್ನೆ ತನ್ನ ಮುಖ್ಯೋದ್ದೇಶ್ಯವನ್ನಾಗಿಟ್ಟುಕೊಂಡಿದೆ. ಈ ಸಲದ ಈ ಸಮಾರಂಭವು ಯಶಸ್ವಿಯಾಗಲು ಉತ್ತಮೋತ್ತಮ ಸಾಹಿತಿಗಳೂ, ಗಮಕಿಗಳೂ, ಗಾಯಕರೂ ತುಂಬಾ ನೆರವಿತ್ತಿರುತ್ತಾರೆ. ಪ್ರತಿದಿನವೂ ಜನರು ಹೆಚ್ಚು ಹೆಚ್ಚಾಗಿ ಭಾಗವಹಿಸಿ ಸ್ವಾಗತ ಭಾಷಣದಲ್ಲಿ ಸೂಚಿಸಿದಂತೆ ವಿವಿಧ ರೂಪದಲ್ಲಿ ವಚನಗಳ ಸ್ಪರ್ಧೆಯನ್ನೇರ್ಪಡಿಸುವದು ಸಮಯೋಚಿತವಾಗಿದೆ. ಈ ಪ್ರಚಾರ ಕಾರ್ಯವು ಯಶಸ್ವಿಯಾಗಿ ನಡೆಯಲು ಮುದ್ರಣ ಯಂತ್ರ ಮತ್ತು ಪತ್ರಿಕೆಗಳೂ ಸಹ ಅತ್ಯಾವಶ್ಯಕವು. ಶರಣ ತತ್ವ ಪ್ರೇಮಿಗಳು ಈ ಪವಿತ್ರ ಕಾರ್ಯದಲ್ಲಿ ಉದಾರಮನಸ್ಕರಾಗಿ ನೆರವಿತ್ತಲ್ಲಿ ಮುಂದಿನ ವರ್ಷದೊಳಗೆ ಅದ್ಭುತ ಕಾರ್ಯವನ್ನುಮಾಡಿ ತೋರಿಸಬಹುದು. ಆದ್ದರಿಂದ ನಾವು ಸಹ ಈ ಬಗ್ಗೆ ಮುಕ್ತ ಹಸ್ತದಿಂದ ಸಹಾಯ ಮಾಡಬೇಕೆಂದು ಜನತೆಗೆ ವಿಜ್ಞಾಪಿಸ ಬಯಸುತ್ತೇವೆ. ತಿಪಟೂರಿನ ಶುದ್ಧ ಶರಣರ ತತ್ವಪ್ರೇಮಿಗಳಾದ ಶ್ರೀಯುತ ಎಸ್. ಆರ್. ಮಲ್ಲಪ್ಪನವರು ಮತ್ತು ಅವರ ಸ್ನೇಹಿತರು ವಚನ ಮತ್ತು ವಚನಗಳ ಸಾರವನ್ನು ಶಿವರಾತ್ರಿಯ ಸಂದೇಶ ರೂಪದಲ್ಲಿ ಪ್ರಸಾರಮಾಡುತ್ತಾ ಈಗಾಗಲೇ ಜನರ ಮನಸ್ಸನ್ನು ಸೆಳೆದಿದ್ದಾರೆ. ಇದು ಉತ್ತಮವಾದ ಯೋಜನೆಯು. ಈ ಯೋಜನೆಗೆ ಸರ್ವರೂ ಸಹಕಾರವಿತ್ತು ತಾವೂ ಸಹ ಶಿವ

ರಾಷ್ಟ್ರೀಯ ಸಂದೇಶರೂಪವಾಗಿ ವಚನಗಳನ್ನು ಪ್ರಚಾರಮಾಡಬಹುದಾಗಿದೆ. ತಮ್ಮ ಸ್ವೈಜವಾದ ಶೀಲತೆಯ ಬಗ್ಗೆ ಜನತೆಯಲ್ಲಿ ನಂಬಿಕೆಯನ್ನು ಹುಟ್ಟಿಸಲು ವಿಶಾಲವಾಗಿ ನುಡಿಯುವದನ್ನು ಕಲಿಯಬೇಕಾಗಿದೆ.

ನಮ್ಮ ಮಟ್ಟಿಗೆ ನಾವು ಹೇಳುವುದಾದರೆ ಈ ತತ್ವ ಪ್ರಚಾರಕ್ಕೆ ನಾವು ಯಾವ ತ್ಯಾಗಕ್ಕೂ ಸಿದ್ಧರಾಗಿದ್ದೇವೆ. ಏಕೆಂದರೆ ನಮ್ಮ ಗುರು ಪರಂಪರೆಯ ಮೂಲಕರ್ತ ವಿಶ್ವಬಂಧು ಮರುಳಸಿದ್ಧನ ಸಂದೇಶವಾಗಿದೆ. ಅವನು ಅಂದಿನ ಜಾತಿವಾದಿಗಳನ್ನು ಪ್ರತಿಭಟಿಸಿ ಎಷ್ಟೇ ಸೋಲು ಸಂಕಟಗಳು ಬಂದರೂ ಯಶಸ್ವಿಯಾಗಿದ್ದಾನೆ. ಇಂದಿನ ಸ್ಥಿತಿಯೇ ಬೇರೆ. ನಮ್ಮ ಸುದೈವದಿಂದ ಜಾತಿವಾದಕ್ಕೆ ಕಾನೂನಿನ ಬೆಂಬಲವಿಲ್ಲ. ಆದರೂ ಜಾತಿ ನಿರ್ಮೂಲನದ ಸೋಗಿನಲ್ಲಿ ಜಾಣ್ಮೆಯಿಂದ ಜಾತೀಯತೆಯನ್ನು ಬೆಳೆಸುವ ಕೆಲವು ಚಾಣಾಕ್ಷರಿದ್ದಾರೆ. ಅವರ ಬಗ್ಗೆ ಜನತೆ ಜಾಗರೂಕವಾಗಿರಬೇಕು.

ಕೊನೆಯದಾಗಿ ಇಂತಹ ಅವಕಾಶವನ್ನು ಕಲ್ಪಿಸಿಕೊಟ್ಟ ಈ ಸಮಾರಂಭದ ವ್ಯವಸ್ಥಾಪಕರಾದ ಸ್ವಾಗತ ಸಮಿತಿಯವರಿಗೂ ಮತ್ತು ಇವರಿಗೆ ತನುಮನ ಧನಗಳಿಂದ ಸಹಕಾರವಿತ್ತ ಸರ್ವರಿಗೂ ಶ್ರೀ ಜಗದ್ಗುರು ಮರುಳಸಿದ್ಧನು ಸಕಲ ಸನ್ಮಂಗಳವನ್ನೀಯಲೆಂದು ಹಾರೈಸಿ ವಿರಮಿಸುತ್ತೇವೆ.

ಶ್ರೀ ಜಗದ್ಗುರುಗಳು ತಮ್ಮ ಭಾಷಣದಲ್ಲಿ ವಚನಶಾಸ್ತ್ರದ ಮಹತ್ವವನ್ನು ವಿವರಿಸುತ್ತ ಈ ಶಾಸ್ತ್ರವೇ ವೀರಶೈವರಿಗೆಲ್ಲ ಆಧಾರವಾಗಿರುತ್ತದೆಂದು ಹೇಳಿದ್ದು ಮಹತ್ವದ್ದಿರುತ್ತದೆ. ಅವರಷ್ಟು ವಿವೇಕವಾಗಿ ಬೇರೆ ಯಾರೂ ಹೇಳಿರುವದಿಲ್ಲ. ಅವರ ವಿಚಾರಗಳು ಮನನೀಯವಾಗಿರುವದರಿಂದ ಅವರ ಭಾಷಣಕ್ಕೆ ನಾವು ಪ್ರಥಮಸ್ಥಾನವನ್ನು ಕೊಟ್ಟಿದ್ದೇವೆ.

— ಸಂಪಾದಕ.

# ಉಡುತಡಿಯ ಮಹಾದೇವಿಯಕ್ಕಗಳ ಸಂಪಾದನೆ

(ಬರೆದವರು:- ಶ್ರೀ ಶಿವಾನಂದ ಸ್ವಾಮಿಗಳು ಗವಿಮಠ ತೆಗ್ಗಿಹಳ್ಳಿ ಇಂಡಿ)



ಅಕ್ಕನು ಒಡೆಯಲಾರದ ಒಗಟು. ಅನೇಕರು ಅನೇಕ ಬಗೆಯಾಗಿ ಬರೆದರೂ ಅವಳ ಬಗೆಗೆ ಬರೆಯುವದು ಇನ್ನೂ ಮುಗಿದಿಲ್ಲ. ಅಕ್ಕನ ಉಜ್ವಲ ಜೀವನ, ಅಕ್ಕಮಹಾದೇವಿ, ವೈರಾಗ್ಯನಿಧಿ ಅಕ್ಕಮಹಾದೇವಿ, ಮಹದೇವಿಯಕ್ಕ, ಅಕ್ಕನ ಬಾಳು, ಅಕ್ಕನಚರಿತೆ ಅಕ್ಕಮಹಾದೇವಿಯು ಆದರ್ಶಜೀವನ, ಅಮರ ಜ್ಯೋತಿ ಅಕ್ಕಮಹಾದೇವಿ, ಮಹದೇವಿಯಕ್ಕಗವರು, ಅಕ್ಕಮಹಾದೇವಿ, ಅಕ್ಕನತ್ಯಾಗ ಜೀವನ, ಹೀಗೆ ಇನ್ನೂ ಅನೇಕ ಬಗೆಯಿಂದ ಅಕ್ಕನನ್ನು ಕವಿಗಳು ಅನೇಕ ಬಗೆಯಾಗಿ ಕಂಡಿದ್ದಾರೆ ಕಾಣುತ್ತಲೂ ಇದ್ದಾರೆ. ಈಕೆಯ ಚರಿತೆಯುಂದರೆ ಕಲ್ಲು ಸಕ್ಕರೆಯಂತೆ ಅದನ್ನು ಯಾವ ಕಡೆ ಕಡಿದರೂ ಹೇಗೆ ಸಿಹಿಸಿಹಿ ಹತ್ತುವದೋ ಅದರಂತೆ ಅಕ್ಕನನ್ನು ಯಾವ ದೃಷ್ಟಿಯಿಂದ ಕವಿ ಕಂಡರೂ ಮಧುರ ಮಧುರವಾಗಿಯೇ ತೋರುವಳು. ಶೂನ್ಯ ಸಂಪಾದನೆಯಲ್ಲಿ ಈಕೆಯದೊಂದು ಸಂಪಾದನೆಯನ್ನು ಗೂಳೂರ ಸಿದ್ಧವೀರಣಾಚಾರ್ಯನೆಂಬ ಕವಿಯು ಬರೆದುದನ್ನು ರಾ. ಬ. ಹಳಕಟ್ಟಿಯವರು ಸಂಪಾದಿಸಿ ಪ್ರಕಟಿಸಿದ್ದಾರೆ. ಅದು ಎಲ್ಲರಿಗೂ ಒಡೆಯದ ಒಗಟಾಗಿ ಬಿಟ್ಟಿದೆ. ಅಕ್ಕನು ಕಲ್ಯಾಣಕ್ಕೆ ಬಂದ ಬಳಿಕ ಆಕೆ ಹಾಗೂ ಬಸವದೇವರು ಪ್ರಭುದೇವರು ಚನ್ನಬಸವದೇವರು ಮೊದಲಾದವರ ನಡುವೆ ಅನುಭವ ಮಂಟಪಕ್ಕೆ ಪ್ರವೇಶಿಸಿದಾಗ ಆದ ಸಂಭಾಷಣೆಗಳನ್ನು ಅವರವರ ವಚನಗಳನ್ನೇ ಸಂಗ್ರಹಮಾಡಿ ಬರೆದುದಾಗದೆ ಈಗ ೪೦೦ ವರ್ಷಗಳ ಹಿಂದೆ ವೀರಶೈವರಲ್ಲಿ ಈತರದ ಸಾಹಿತ್ಯ ರಚನೆಯನ್ನು ಮಾಡಿದ್ದು ಅವರ ವಿದ್ವತ್ತೆಯನ್ನು ಪಾಂಡಿತ್ಯವನ್ನು ವ್ಯಕ್ತಗೊಳಿಸದೆ ಇರಲಾರದು. ಅದರ ಅರ್ಥವನ್ನು ವಾಚಕರು ಅರಿಯುವಂತೆ ಶಕ್ಯವಿದ್ದ ಮಟ್ಟಿಗೆ ಭಾವಾರ್ಥ ಟೀಕೆ ಟಿಪ್ಪಣೆಗಳೊಂದಿಗೆ ವಿವರಿಸಬೇಕೆಂದು ರಾ. ಬ. ಹಳಕಟ್ಟಿಯವರು ಸೂಚಿಸಿದ್ದರಿಂದ ಈ ಕಠಿಣ ಕೆಲಸಕ್ಕೆ ಕೈಹಾಕಿದ್ದೇನೆ. ಅದನ್ನು ವಾಚಕರು ಓದಿ ಸಲಹೆ ಸೂಚನೆಗಳನ್ನು ಮಾಡುವರೆಂದು ಆಶಿಸಿ ಬರೆಯಲುಪಕ್ರಮಿಸುವೆನು.

ಅಕ್ಕನು ಕೌಶಿಕನ ಅರಸುಮಂದಿರವನ್ನೂ ಕೌಶಿಕನನ್ನು ತಿರಸ್ಕರಿಸಿ ದಿಗಂಬರೆಯಾಗಿ ಕೆಲಕಾಲ ವನದಲ್ಲಿ ತಿರುಗಿ ತಪವಮಾಡಿ ಸುಜ್ಞಾನೋದಯ ಹೊಂದಿ ಕಾವನಸುಟ್ಟ ಕುಮಾರಿಯಾಗಿ ಕಲ್ಯಾಣಕ್ಕೆಸಾಗಿ ಬರುತ್ತಿರವದನ್ನು ಬಸವದೇವರು ತಿಳಿದುಕೊಂಡು; ಅವಳ ಬರವನ್ನು ಪ್ರಭುದೇವರು ಇವಳು ಕಾಮ ಸಂಹಾರಿ ಎಂಬುದನ್ನು ಲೋಕಕ್ಕೆ ಪ್ರತ್ಯಕ್ಷ ತೋರಿಸಿಕೊಡಬೇಕೆಂದು ಕಿನ್ನರಿಯ ಬೊಮ್ಮಯನನ್ನು ಕರೆಯಲಿಕ್ಕೆ ಕಳುಹಿಸಿಕೊಟ್ಟರು. ಆಗ ಅವನು ಅಕ್ಕನ ಹತ್ತರ ವಿನಯಭಕ್ತಿಗಳಿಂದ ಬಂದು ಅವಳನ್ನು ಕಂಡು ಅವಳನ್ನು ಮೊದಲು ಮಾತಾಡಿಸಿ ಪರೀಕ್ಷಿಸಿದ್ದು ಕೆಳಗಿನ ಸಂಭಾಷಣೆಯಲ್ಲಿ ಕಂಡು ಬರುವದು.

ಕಿನ್ನರಯ್ಯಗಳು:— ಕಾಯದಲ್ಲಿ ಕಳವಳವಿರಲು, ಪ್ರಾಣದಲ್ಲಿ ಮಾಯೆ ಇರಲು ಇದೇತರ ಮನ, ಇದೇತರ ನಿರ್ವಾಣ ಮಹಾಲಿಂಗ ತ್ರಿಪುರಾಂತಕ ನಿನ್ನ ಸಂಸಾರಿ ಎಂಬನಲ್ಲದೆ ಸಜ್ಜನೆ ಎಂದು ಕೈವಿಡಿವನಲ್ಲಿ ಕೇಳಾ ಮರುಳೇ||೧||

ಭಾವ:— ಈ ಶರೀರದಲ್ಲಿ ಇನ್ನೂ ವಿಷಯ ಸುಖಗಳ ಬಗೆಗೆ ಲಾಲಸೆ ಇರುವದರಿಂದ ಅದರಲ್ಲಿ ಇನ್ನೂ ವಿಷಯ ಸುಖಹೊಂದಬೇಕೆಂಬ ಚಿಂತೆ ವ್ಯಥೆಗಳು ತೋರುವವು. ಅಂದರೆ ಶರೀರಕ್ಕೆ ವಿಷಯಸುಖದ ಆಶೆ ಇರುವದೆಂದಾಯಿತು. ಜೀವದಲ್ಲಿ; ವಿಷಯ, ಶರೀರ, ಪ್ರಪಂಚಗಳ ಬಗ್ಗೆ ಭ್ರಮೆ ಮೋಹವಿರುವದು ಕಾಣುವದು. ಅಂದರೆ ಮೋಹವು ಜೀವದಲ್ಲಿ ಬದುಕಬೇಕು ಮಾನ ಮನ್ನಣೆ ಪಡೆಯಬೇಕು ಮೊದಲಾದವುಗಳ ಬಗೆಗೆ ಮೋಹ ಭ್ರಮೆ ಇರುವದು. ಈ ತರದ ಚಿಂತೆ ಭ್ರಾಂತಿಗಳು ನಿನ್ನಲ್ಲಿ ಇರಲಿಕ್ಕಾಗಿ ನೀನು ಮಹಾತ್ಯಾಗಿಯ ಸೋಗನ್ನು ಹಾಕಿರುವಿ. ನಿನ್ನಮನ ಶುದ್ಧವಿಲ್ಲ. ನಿನ್ನಲ್ಲಿ ಜೀವನ್ಮುಕ್ತಿಯ ಸ್ಥಿತಿ ಬಂದಿಲ್ಲ ಮನ ಶುದ್ಧವಾದುದರ ಗುರ್ತೆಂದರೆ ವಿಷಯಸುಖದ ಚಿಂತೆ ಶರೀರದಿಂದ ಹೋಗಿರಬೇಕು. ಜೀವದಲ್ಲಿಯ ಬಗೆ ಬಗೆಯ ಭ್ರಾಂತಿ ಮೋಹಗಳು ತೊಲಗಿರಬೇಕು ಅಂದರೆ ಮನ ಶುದ್ಧವದೆ ಎಂದು ತಿಳಿಯಬೇಕು ಇದೆಲ್ಲ ಸಾಧಿಸಿದಾಗ ಜೀವನ್ಮುಕ್ತಿಸ್ಥಿತಿ ನಿರ್ವಾಣಸ್ಥಿತಿ ಬರುವದು. ಅಕ್ಕನಲ್ಲಿ ಇದು ಬಂದಿಲ್ಲೆಂದು ಹೀಯಾಳಿಸಿ ನುಡಿದಿರುವನು ಪರಮಾತ್ಮನು ನಿನಗೆ (ಅಕ್ಕನಿಗೆ) ಸಂಸಾರಿ ಮಾಯಾಪ್ರಪಂಚಿ ಎನ್ನುವನಲ್ಲದೆ ಸತ್ ಸ್ಥಿತಿಯನ್ನು ಪಡೆದು ಒಳ್ಳೇಯವಳೆಂದು ಎಂದೂ ನಿನ್ನನ್ನು ಅವನು ಕೈಹಿಡಿದು ಕರೆಯುವದಿಲ್ಲ, ಹುಚ್ಚಳೇ ಎಂದು ಧಿಃಕರಿಸಿ ನುಡಿದಿರುವನು.

ಟಿಪ್ಪಣಿ:— ಎಲ್ಲವನ್ನೂ ಸರ್ವಸ್ವವನ್ನೂ ತ್ಯಾಗ ಮಾಡಿದವರಂತೆ ಇವಳುಮಾತ್ರ ದಿಗಂಬರಿಯಾಗಿ ಉಡಿಗೆ ತೊಡಿಗೆ ಕಾಲಲ್ಲಿ ಮೆಟ್ಟು ಕೈಯಲ್ಲಿ ಗಂಟುಗಡಡಿ ಜೋಳಿಗೆ ಹಾಸಿಗೆಹೊದಿಕೆ ಕೂಡ ಇರಲಿಲ್ಲ. ಇವಳ ವೇಷ ನೋಡಿದರೆ ಮಹಾ ತ್ಯಾಗಿಯೆಂದೇ ಸಹಜ ಎಲ್ಲರಿಗೆ ಅನಿಸುವದು. ಅವಳ ಸೋಗಿನ ಒಳಹೊಕ್ಕು ನೋಡಿ ಪರೀಕ್ಷಿಸಿದರೆ ಮೇಲಿನ ವಿವರಣೆಯಂತೆ ತಿಳಿಯುವದೆಂದು ಸುಮ್ಮನೆ ಅಂದಿರುವನು. ಇದನ್ನಾದರೂ ಅವಳಿಂದ ಉತ್ತರ ಪಡೆಯಲಿಕ್ಕೆ, ಅವಳಕೂಡ ಹೀಗೆ ಅಲ್ಲ ಸಲ್ಲದ ಪ್ರಶ್ನೆಯನ್ನು ಮಾಡಿದ್ದಾನೆ. ಕಿನ್ನರಯ್ಯನೂ ಕೂಡ ಜ್ಞಾನಿಯೇ ಇದ್ದನು. ಇಂಥ ತ್ಯಾಗಿ ಜ್ಞಾನಿಗೆ ಈ ಪ್ರಕಾರ ಚುಚ್ಚುವ ಪ್ರಶ್ನೆ ಕೇಳುವದು ಸಮಂಜಸವೆನಿಸಲಾರದು. ಆದರೂ ಆಕೆಯ ಯೋಗ್ಯತೆಯನ್ನು ನೋಡಿ ತಿಳಿದುಕೊಂಡರೂ ಮಾತನಾಡಿ ತಿಳಿದುಕೊಳ್ಳುವದೂ ಕೂಡ ಎರಡನೇ ಮೆಟ್ಟಿಲವಾಗಿರುವದರಿಂದ ವಿಲಕ್ಷಣ ಪ್ರಶ್ನೆ ಕೇಳಿ ಆಕೆಯನ್ನು ಕೆಣಕಿದ್ದಾನೆ. ನಾಗರಹಾವಿನ ತಲೆಗೆ ತಿವಿದರೆ ಅದು ತನ್ನ ಹೆಡೆಯನ್ನು ತೋರಿಸುವಂತೆ ಆಕೆಯನ್ನು ಕೆಣಕಿ ಆಕೆಯ ಜ್ಞಾನವನ್ನು ನೋಡಲಪೇಕ್ಷಿಸಿ ಹೀಗೆ ಮಾಡಿದ್ದಾನೆ. ಬಾಹ್ಯದಲ್ಲಿ ಅದು ಬಿರುಸಾಗಿ ಕಂಡರೂ ಅಂತರಂಗದಲ್ಲಿ ಒಳ್ಳೇ ಸದುದ್ದೇಶವೇ ಅವನಲ್ಲಿ ಇರುವದು ಸಹಜ ಕಂಡು ಬರುವದು.

ಅಕ್ಕನ ಉತ್ತರ:— ಅಂಗದ ಭಂಗವ ಲಿಂಗಸುಖದಿಂದೆ ಗೆಲಿದೆ. ಮನದ ಭಂಗವ ಅರಿವಿನ ಮುಖದಿಂದೆ ಗೆಲಿದೆ ಜೀವದ ಭಂಗವ ಶಿವಾನುಭಾವದಿಂದೆ ಗೆಲಿದೆ. ಕರಣದ ಕತ್ತಲೆಯ ಬೆಳಗನುಟ್ಟು ಗೆಲಿದೆ. ಜವ್ವನದ ಹೊರ ಮಿಂಚಿನಲ್ಲಿ ನಿಮ್ಮ ಕಣ್ಣಿಂಗೆ ತೋರುವ ಕಾಮನ ಸುಟ್ಟುರುಹಿದ ಭಸ್ಮವ ನೋಡಯ್ಯಾ ಚನ್ನಮಲ್ಲಿಕಾರ್ಜುನ ಕಾಮನ ಕೊಂದು ಮನಸಿಜನಾಗುಳುಹಿದರೆ ಮನಸಿಜನ ತಲೆಯ ಬರಹವ ತೊಡೆದೆನು ॥೨॥

ಭಾವ:— ಶರೀರದ ಹೊಲಸನ್ನು (ವಿಷಯಸುಖ ಲಾಲಸೆಯನ್ನು) ಲಿಂಗಾನುಭವ (ಆತ್ಮಾನುಭವ) ದಿಂದ ಜಯಿಸಿ ಇಲ್ಲಮಾಡಿದೆನು. ಮನಸಿನ ಹೊಲಸನ್ನು (ಸಂಕಲ್ಪ ವಿಕಲ್ಪಗಳನ್ನು) ನಾನಾರೆಂಬುದನ್ನು ಚನ್ನಾಗಿ ತಿಳಿದು ಅನುಭವಿಸಿ ಅದನ್ನು ಜಯಿಸಿ ಇಲ್ಲಮಾಡಿದೆನು. ಜೀವನದ ಹೋಸಾದ ವಿಷಯಗಳು, ಶರೀರಸುಖ, ಪ್ರಪಂಚಗಳ ಭ್ರಮೆಯನ್ನು ಶಿವಜ್ಞಾನ (ಆತ್ಮಜ್ಞಾನ) ದಿಂದ ಜಯಿಸಿ ಇಲ್ಲಮಾಡಿದೆನು. ಕರಣ ಅಂದರೆ ಮನ, ಬುದ್ಧಿ, ಚಿತ್ತ,

ಅಹಂಕಾರ ಮಮಕಾರಗಳನ್ನು ಆತ್ಮ ಪ್ರಕಾಶವನ್ನು ಕಂಡು ಜಯಿಸಿ ಇಲ್ಲ ಮಾಡಿದೆನು. ಅವುಗಳ ಕೆಟ್ಟ ಆಶೆ ವಾಸನೆ ಓಡಾಟಗಳನ್ನು ಆತ್ಮಜಯದಿಂದ ಇಲ್ಲ ಮಾಡಿದೆನು. ಪ್ರಾಯದ ಈ ಹೊರಮಿಂಚು ಹೊಳಪುಗಳೆಲ್ಲ ನಿಮಗೆ ಕಾಣು ವದು ಮಾತ್ರ ಸಕಲ ಕಾಮನೆಗಳನ್ನು ಸುಟ್ಟು ಇಲ್ಲ ಮಾಡಿದ ಭಸ್ಮ; ಅಂದರೆ ಸತ್ವವಿರುವದು. ಈ ಹೊರಗಿನ ಎಲ್ಲ ರೂಪ ತೇಜ ಬಣ್ಣಗಳು ಮಾತ್ರ ಶರೀರ ಮನ, ಜೀವ, ಕರಣಗಳ ಇಪ್ಪತ್ತು ವಿಕಾರಗಳನ್ನು ಭಕ್ತಿ ಸಾಧನೆಯಿಂದ ಸುಟ್ಟ ಮೇಲೆ ಉಳಿದಂಥಾ ಆತ್ಮಜ್ಞಾನ, ಶಿವಾನುಭವ, ಲಿಂಗಾಂಗ ಸಾಮರಸ್ಯ ಗಳೆಂಬ ಭಸ್ಮವೇ ಹೊರತು ಬೇರೆ ಇಲ್ಲ. ಪರಮಾತ್ಮನು ಸಶರೀರಿಯಾದ ಕಾಮ ನನ್ನು ಕೊಂದಬಳಿಕ ಮನಸಿಜ ಅಂದರೆ ಎಲ್ಲರೂ ಮನದಲ್ಲಿಯೇ ಜನಿಸು ವಂತಾಗಿ ಉಳಿದನು ಇದರಿಂದ ಕಾಮನ ಹಣೆಯು ಬರಹವನ್ನೇ ಅಳಿಸಿ ಬಿಟ್ಟನಲ್ಲವೇ ? ಕಿನ್ನರಿಯಣ್ಣಾ ! ಎಂದು ಉತ್ತರಕೊಟ್ಟಳು.

ಟಿಪ್ಪಣೆ:- (೧) ನಾನು ಶಿವಾನುಭವಿ ಕಾಯ ಕರಣಗಳ ವಿಕಾರ ವನ್ನು ಗೆದ್ದವಳೆಂದು ಡಣಾಡಂಗುರವಾಗಿ ಅಂಜದೆ ಅಳುಕದೆ ಸಹಜ ಉತ್ತ ರಿಸಿದಳು. ಇದರಿಂದ ಇವಳಲ್ಲಿ ಸಂಪೂರ್ಣ ಧೈರ್ಯವಿತ್ತೆಂದು ಗೊತ್ತಾಗು ವದು. ಆ ಧೈರ್ಯವಿರುವದರಿಂದಲೆ ಸರ್ವ ಅಂಜಿಕೆಗಳನ್ನು ಇವಳು ಜಯಸಿದ್ದಳು. ಅಂಜಿಕೆಗಳನ್ನೆಲ್ಲ ಗೆದ್ದುದರಿಂದಲೇ ಶಿವಾನುಭವಿ ಲಿಂಗಾನು ಭವಿ ಆತ್ಮಾನುಭವಿ ಲಿಂಗಾಂಗ ಸಾಮರಸ್ಯ ಪಡೆದಿದ್ದಳೆಂದು ಧಾರಳವಾಗಿ ಹೇಳಬಹುದು. ಹೀಗೆ ಹೇಳಿಕೊಳ್ಳುವದೂ ಅಹಂಕಾರವೇ ಸರಿ. ಆದರೆ ಇದು ಪಕ್ಕಾ ಅಹಂಕಾರ, ಶರೀರ ಇಂದ್ರಿಯ ಮನಸ್ಸು ಕರಣ ಮೊದ ಲಾದ ನಾಶವಾಗುವ ವಸ್ತುಗಳ ಬಗ್ಗೆ ಹೊಂದಿದ ಅಹಂಕಾರವು ಕಚ್ಚಾ ಅಹಂಕಾರವು. ಅಕ್ಕನ ಅಹಂಕಾರವು ನಾನೇ ಶಿವನು, ನಾನೇ ಲಿಂಗ, ನಾನೇ ಆತ್ಮವೆಂಬ ಅರಿವು ಆದದ್ದರ ದ್ಯೋತಕವಾಗಿರುವದು. ಇಂಥ ಪಕ್ಕಾ ಅಹಂಕಾರದ ಸ್ಥಿತಿಯನ್ನೇ ಪ್ರತಿಯೊಬ್ಬರು ಪಡೆಯಬೇಕಾಗಿದೆ. ಆದರೆ ನಿಜ ಸುಜ್ಞಾನಿಗಳು ಹೀಗೆ ಅನ್ನುವದನ್ನು ಕಂಡು ಅಜ್ಞಾನಿಗಳೂ ಕೂಡ ಅನುಭವವಿಲ್ಲದೆ ಕಂಠುಣದೆ ಬಾಯಿಗೆ ಬಂದಂತೆ ಬಾಯಬ್ರಹ್ಮವನು ನುಡಿ ಯುವದು ಇದು ಕಚ್ಚಾದಲ್ಲಿಯ ಕಚ್ಚಾ ಅಹಂಕಾರ. ಅದೆಲ್ಲ ಪಕ್ಕಾ ಅಹಂಕಾರದ ಸೋಗನ್ನು ಹಾಕಿರುವರು. ಇದರಿಂದ ಅವರ ನಿಜವಾದ ಹೂರಣವು ಹೊರಬಿದ್ದು ಮಾನಗೇಡಿಯಾಗಬೇಕಾಗುವದು. ಆ ಸ್ಥಿತಿ ಪಡೆ ಯದೆ ಪಕ್ಕಾ ಅಹಂಕಾರದ ಮಾತುಗಳನ್ನು ಅಕ್ಕನಂತೆ ಆಡಬಾರದು.

ಇವಳು ಹೆಣ್ಣುಮಗಳು, ದಿಗಂಬರೆ, ಇದು ಪರ ಊರು, ಇಲ್ಲಿ ಪರಿಚಯು ವಾರದೂ ಇಲ್ಲ, ಸಂಗಡ ಅವಳ ಬಳಗ ಮೊದಲಾದವರು ಇಲ್ಲ, ಬಾಹ್ಯದಲ್ಲಿ ಕಾಣುವ ಯಾವ ಬಲವೂ ಇಲ್ಲ, ಹುಚ್ಚಳೂ ಅಲ್ಲ, ಆದರೂ ಈ ಪ್ರಕಾರ ಒಳ್ಳೇ ಧೈರ್ಯವಾಗಿಯೇ ನುಡಿದುದೇನು ಸಾಮಾನ್ಯ ಜ್ಞಾನದ ಲಕ್ಷಣವಲ್ಲ, ಮಹಾಜ್ಞಾನಿ ಇದ್ದದರಿಂದಲೇ ಹಾಗೆ ನುಡಿದಳು. ಮಹಾ ಜ್ಞಾನ ಬರಲಿಕ್ಕೆ ಮಹಾ ತ್ಯಾಗವಿತ್ತು. ಅದು ಭಸ್ಮದ ರೂಪದಿಂದ ಹೊರ ಹೊಮ್ಮಿ ಅಂಗೋಪಾಂಗಗಳಲ್ಲಿ ಮಿಂಚುತ್ತಿತ್ತು. ಅದಕ್ಕೆ ತಕ್ಕಂತೆ ಅವಳು ದಿಗಂಬರೆಯಾಗಿ ಒಂಟಿಗಳಾಗಿ ಪೂರ್ಣ ಸ್ವಾವಲಂಬಿಯಾಗಿ ಹೊರಗಿನ ಪ್ರಕೃತಿಯು ಯಾವ ಚಿಕ್ಕ ವಸ್ತುವಡವೆಗಳೂ ಕೂಡ ಆಕೆಯ ಹತ್ತಿರ ಇರಲಿಲ್ಲ. ಜನಿಸುವಾಗ ಹೇಗೆ ಇದ್ದಳೋ ಅದರಂತೆ ದೊಡ್ಡವಳಾಗಿ ಅಲ್ಲಿಗೆ ಬಂದಿದ್ದಳು ಆಗ ಮಾತ್ರ ಶರೀರದಲ್ಲಿ ಕೂದಲುಗಳು ಬಹಳ ಬೆಳೆದು ಬಂದಿದ್ದವು. ಇಷ್ಟೇ ಬದಲಾವಣೆ ಮಾತ್ರ ಆಗಿತ್ತು. ಅದರೆ ಶರೀರ ಪುಷ್ಟಿಗೊಂಡಂತೆ ಒಳಗಿನ ಆತ್ಮವೂ ಕೂಡ ಪುಷ್ಟಿಗೊಂಡಿತ್ತು. ಇವಳ ಮೂರನೇ ಕಣ್ಣು ತೆರದಿದ್ದರಿಂದ ಅವಳ ಕಾಮನು ಸುಟ್ಟುಕೊಂಡು ಸತ್ತಿದ್ದನೆಂದು ಹೇಳಿದರು.

೨ ಶಿವನು ಕಾಮುನನ್ನು ಸುಟ್ಟ ಕಥೆಯು ಸರ್ವಶ್ರುತವವೆ. ತನ್ನ ಅಗ್ನಿನೇತ್ರದಿಂದ ಅವನನ್ನು ಸುಟ್ಟನು ಆಗ ಅವನ ತಾಯಿಯು ಗೋಳಾಡಿದಳು. ಜನರೂ ಕೂಡ ಬಹುವಾಗಿ ಗೋಳಾಡಲು ಶರೀರ ಹೋದರೆ ಹೋಗಲಿ ಸರ್ವರ ಮನಸ್ಸಿನಲ್ಲಿ ಅವನು ಸದಾ ರೂಪ ಎಲ್ಲದೆ ಗುಪ್ತವಾಗಿ ಇರಲೆಂದನು. ಈ ಪ್ರಕಾರ ಅವನ ಬ್ರಹ್ಮಲಿಖಿತವನ್ನೇ ಶಿವನು ಬದಲಿಸಿ ಬಿಟ್ಟನೆಂದು ಕಥೆ ಇದೆ. ಅದರಂತೆ ಅಕ್ಕನಿಗೂ ಆಗಿ ಮೂರನೇ ಕಣ್ಣು ತೆರೆದು ಕಾಮದಹನ ಮಾಡಿದ್ದಳೆಂದು ಇದು ಸೂಚಿಸುವದು. ಕೆಳಗೆ ಅದೇ ಅರ್ಥವಿದೆ

೩ ಮೂರನೇ ಕಣ್ಣು ತೆರೆಯುಲು ಕಾಮುನು ಸುಟ್ಟನು. ಎರಡೇ ಕಣ್ಣುಗಳು ಇರುವ ತನಕ ಕಾಮರಾಯನು ಪ್ರತಿಯೊಬ್ಬರಲ್ಲಿ ಇರತಕ್ಕವನೇ ಸರಿ. ಯಾರು ಭಕ್ತಿ ಮೊದಲಾದ ಸಾಧನೆಮಾಡಿ ತ್ಯಾಗ ವೈರಾಗ್ಯಗಳಿಂದ ಮೂರನೇ ಕಣ್ಣನ್ನು ಅಂದರೆ ಜ್ಞಾನಚಕ್ಷುವನ್ನು ದೊರಕಿಸುವಳೋ ಆಗ ಮಾತ್ರ ಅವರಲ್ಲಿ ಕಾಮನು ಸಂಪೂರ್ಣ ನಾಶವಾಗುವನು. ಆಗ ಸರ್ವ ಕಾಮನೆಗಳು ಇಲ್ಲವಾಗಿ ಬರೇ ಆತ್ಮಾನಂದದಲ್ಲಿಯೇ ಲೋಲಾಡುವನು. ಅಲ್ಲಿಯುತನಕ ಕಾಮನೆ ಇರತಕ್ಕದ್ದೇ ಸರಿ (ಗೂಢಅರ್ಥ)

ಅಕ್ಕನ ಉತ್ತರಃ— "ಎನ್ನಂತೆ ಪುಣ್ಯಗೈದವರುಂಟೆ ? ಎನ್ನಂತೆ ಭಾಗ್ಯಗೈದವರುಂಟೆ ? ಕಿನ್ನರನಂತಪ್ಪ ಸೋದರ ಎನಗೆ. ಏಳೇಳು ಜನ್ಮದಲಿ ಶಿವಭಕ್ತರೇ ಬಂಧುಗಳೆನಗೆ. ಚನ್ನಮಲ್ಲಿಕಾರ್ಜುನಂತಪ್ಪಗಂಡ ನೋಡಾ ಎನಗೆ |೩||

ಭಾವಃ— ನನ್ನಂಥ ಪುಣ್ಯಶಾಲಿಗಳು ಯಾರಾದರೂ ಇರುವರೇ ? ನನ್ನಂಥ ಭಾಗ್ಯಶಾಲಿಗಳು ಯಾರಾದರೂ ಇರುವರೇ ? ಯಾಕಂದರೆ ಕಿನ್ನರಿ ಬ್ರಹ್ಮಯ್ಯನಂಥ ಅಂಣನು ನನಗೆ ಇರುವನು. ಜನ್ಮ ಜನ್ಮಗಳಲ್ಲಿಯೂ ಕೂಡ ಶಿವಭಕ್ತರೇ ನನಗೆ ಬಂಧು, ಬಳಗ, ಆಪ್ತ, ಮಿತ್ರ, ಗೆಳತಿ, ತಾಯಿ, ತಂದೆಗಳು ಆಗಲಿ ಮತ್ತು ಪರಮಾತ್ಮನೇ ನನ್ನ ನಚ್ಚಿನ ಪತಿಯಾಗಲಿ ಎಂದು ಬಹು ಆನಂದದಿಂದಲೇ ಹೇಳಿರುವಳು.

ಟಿಪ್ಪಣೆಃ— ಪ್ರತಿಯೊಬ್ಬರೂ ತಮ್ಮ ದುಮ್ಮನಸಿನ ಬಯಕೆಗಳನ್ನು ಅನಾಯಾಸ ದೊರಕಿಸಿದರೆ ಅವರು ಪುಣ್ಯಶಾಲಿಗಳು. ಅವರು ಭಾಗ್ಯಶಾಲಿ ಗಳೆಂದು ತಿಳಿಯುವರು. ಬೇರೆ ಬೇರೆ ಜನರ ಬಯಕೆಗಳು ಬೇರೆ ಬೇರೆ ಇರುವದುಂಟು. ಒಬ್ಬನ ಬಯಕೆ ಹೊನ್ನು, ಇನ್ನೊಬ್ಬನ ಬಯಕೆ ಹೆಣ್ಣು, ಮತ್ತೊಬ್ಬನ ಬಯಕೆ ಮಣ್ಣು, ಮಗದೊಬ್ಬನ ಬಯಕೆ ವಿಷಯ ಸುಖ ಹೀಗೆ ಇರುವುದುಂಟು.

ಆದರೆ ಅಕ್ಕನ ಬಹುದಿನದ ಬಯಕೆ ಎಂದರೆ ಶರಣರ ಸಹ ವಾಸ, ಶಿವಭಕ್ತರಸಂಗ, ಶರಣರೊಡನಾಟ, ಸತ್ಸಂಗ, ಹೊರತು ಮತ್ತೇನೂ ಇರಲಿಲ್ಲ. ಅದು ಸಹಜ ತಾನಾಗಿಯೇ ದೊರಕಿದ ಕೂಡಲೇ ಅವಳಿಗೆ ಬಹಳೇ ಆನಂದವಾಗಿ ಇದೆಲ್ಲ ತಾನು ಹಿಂದೆ ಪುಣ್ಯಮಾಡಿದ್ದರ ಫಲ. ತಾನು ಮಹಾ ಭಾಗ್ಯಶಾಲಿನಿ ಎಂದು ಅಂದಳು. ಇಂಥ ಸಂಗಳಿಂದಲೇ ಭಕ್ತರಿಗೆ ಪರಮಾನಂದ ಪರಮಶಾಂತಿಗಳು ಸಹಜ ಲಭಿಸುವವು ಯಾಕಂದರೆ ದೇವರ ಬಗ್ಗೆ ಚರ್ಚೆ, ದೇವರ ಮಾತು, ದೇವರ ವಿಚಾರ, ದೇವರಕಾರ್ಯ ದೇವರ ಸಂಬಂಧ ದೇವರ ಆಟನೋಟ, ದೇವನೊಡನೆ ಕೂಟ ಮೊದಲಾದ ವೆಲ್ಲ ತಾನಾಗಿಯೇ ಲಭಿಸುವದರಿಂದ ತಾನು ಭಾಗ್ಯಶಾಲಿ ಪುಣ್ಯಶಾಲಿ ಎಂದು ಒಳ್ಳೇ ಬಿಚ್ಚುಮನಸ್ಸಿನಿಂದ ಹೃದಯದ ಇಂಗಿತವನ್ನು ಹೇಳಿಬಿಟ್ಟಿ ರುವಳು. ಪೂರ್ಣ ವಿಷಯ, ಸಂಸಾರದ ತ್ಯಾಗ ಎಲ್ಲಿದೆ ಇಂಥ ಸತ್ಸಂಗಗಳ ಬಯಕೆ ಎಂದೂ ಉಂಟಾಗಲಾರದು. ಕಲ್ಯಾಣದ ಶರಣರು ಒಳ್ಳೇ ಸ್ಥಿತಿ ಯವರು ಅವರ ಸಂಗ ಬಂಧುತ್ವಗಳು ಅವಳಿಗೆ ಬಹು ಪಾವನವಾದವು.

ಯಾಕಂದರೆ ಸಂಸಾರದ ವಿಷಯದಿಂದ ಮನೆಬಿಟ್ಟು ಕೌಶಿಕನ ರಾಜವಾಡೆ ತೊರೆದು ಕಾನನದಲ್ಲಿ ಕೆಲವು ದಿನ ಏಕಾಕಿಯಾಗಿ ದೇವರ ಚಿಂತನೆಯಲ್ಲಿ ಕಳೆದು ಕಾಮನನ್ನು ಕೊಂದು ಮನೋಲಯವಮಾಡಿ ವಾಸನಾಕ್ಷಯ ಪಡೆದು ದಿವ್ಯಜ್ಞಾನವನ್ನು ಗಳಿಸಿದ್ದಳು. ಅದರ ಸದುಪಯೋಗ ಅನ್ಯರಿಗೆ ಶರಣರ ಮಹಿಮೆ ಕೀರ್ತಿ ಕೇಳಿ ಹಿಗ್ಗಿ ಪರಮಾನಂದದಿಂದ ಅಲ್ಲಿಗೆ ಬಂದು ಕಿನ್ನರಯ್ಯನನ್ನು ಮೊದಲು ಕಂಡು ಆನಂದದಿಂದ ಇದನ್ನು ನುಡಿದಳು. ಇದೆಲ್ಲ ಶರಣರ ಸಂಗವು ಎಂಥ ಸತ್ಸಂಗವೆಂದು ತೋರಿಸುವದು. ಐಶ್ವರ್ಯ ಸಂಪತ್ತುಗಳಿದ್ದರೆ ಜನರು ಭಾಗ್ಯವಂತರು ಪುಣ್ಯಶಾಲಿಗಳೆಂದು ತಿಳಿದರೆ ಅಕ್ಕನು ಶರಣರ ಸಂಗದೊರೆತರೆ ಭಾಗ್ಯಶಾಲಿ ಪುಣ್ಯಶಾಲಿ ಎಂದು ಬಗೆದಳು. ಸಂಸಾರಿಗಳಿಗೂ ಅಕ್ಕನಿಗೂ ಇರುವ ಅಂತರವನ್ನು ಅಳೆದು ನೋಡಿರಿ.

ಕಿನ್ನರಯ್ಯನು ಈ ಉತ್ತರವನ್ನು ಆಕೆಯಿಂದ ಕೇಳಿದೊಡನೆ ಅವನಿಗೂ ಮಹದಾನಂದವಾಯಿತು. ಆಕೆಯನ್ನು ಕರಕೊಂಡು ಕಲ್ಯಾಣದಲ್ಲಿ ಅಡಿಇಟ್ಟನು. ಆಗ ಅವಳು ಕಲ್ಯಾಣವನ್ನು ಪ್ರವೇಶಿಸಿ ಅಕ್ಕನು ಅದರ ಮಹಿಮೆಯನ್ನು ಕೆಳಗಿನಂತೆ ಬಣ್ಣಿಸಿರುವಳು. ಅದನ್ನು ಕಿನ್ನರಯ್ಯನು ಕೇಳುತ್ತ ಅಕ್ಕನಿಗೆ ಮಾರ್ಗದರ್ಶಕನಾಗಿ ಮುಂದೆ ಮುಂದೆ ನಡೆದನು. ಜನರು ಕಿಕ್ಕಿರಿದು ಆಕೆಯ ಹಿಂದೆ ಬೆನ್ನುಹತ್ತಿ ಆಕೆಯ ವಚನವನ್ನು ಕೇಳುತ್ತ ನಡೆದರು.

ಕಲ್ಯಾಣವೆಂಬುದಿನ್ನಾರಿಗೂ ಹೊಗಬಾರದು. ಅಸಾಧ್ಯವಯ್ಯಾ ! ಆಶೆ ಆ ವಿಷವ ನಳಿದವಂಗಲ್ಲದೆ ಕಲ್ಯಾಣದತ್ತಲಡಿ ಇಡಬಾರದು. ಒಳ ಹೊರಗು ಶುದ್ಧವಾದವರಿಗಲ್ಲದೆ ಕಲ್ಯಾಣವ ಹೊಗಬಾರದು ನಾನೆಂಬುದ ಹರಿದವಂಗಲ್ಲದೆ ಕಲ್ಯಾಣವ ಹೋಗಬಾರದು. ಒಳಗೆ ತಿಳಿದು ಚನ್ನಮಲ್ಲಿಕಾರ್ಜುನಂಗೊಂದು ಉಭಯ ಲಜ್ಜೆಯಳಿದೆನಾಗಿ ಕಲ್ಯಾಣವ ಕಂಡು ನಮೋ ನಮೋ ನಮೋ ಎನುತಿವೇನು ॥ ೪ ॥

ಭಾವ:— ಕಲ್ಯಾಣಕ್ಕೆ ಹೋಗಬೇಕಾದರೆ ಉಳಿದ ಊರುಗಳಿಗೆ ಹೋಗುವಂತೆ ಸಹಜ ಬೇಕಾದವರು ಹೋಗಲಿಕ್ಕೆ ಬರುವದಿಲ್ಲ. ಯಾರು ಶರೀರ ಸಂಸಾರಗಳಲ್ಲಿಯ ಆಶೆ ಲೋಭ ಮೋಹಗಳನ್ನು ತೊರೆಯುವರೋ ಅವರೇ ಕಲ್ಯಾಣಕ್ಕೆ ಹೋಗಲು ಯೋಗ್ಯರು ಇವುಗಳನ್ನು ಬಿಡದವರು ಕಲ್ಯಾಣದ ಕಡೆಗೆ ಪಾದವನ್ನಿಡಬಾರದು. ಒಳಗೂ ಹೊರಗೂ ಶುದ್ಧಪವಿತ್ರವಿದ್ದವರು ನುಡಿದಂತೆ ನಡೆಯುವವರೇ ಕಲ್ಯಾಣಕ್ಕೆ ಹೋಗಬೇಕು. ಅಹಂಕಾರ

ಮಮಕಾರಗಳನ್ನು ಹರಿದೊಗೆದವರೇ ಕಲ್ಯಾಣಕ್ಕೆ ಹೋಗಬೇಕು. ಅಹಂಕಾರ ಮಮಕಾರಗಳನ್ನು ಹರಿದೊಗೆದವರೇ ಕಲ್ಯಾಣಕ್ಕೆ ಹೋಗಬೇಕು. ನಾನು ಒಳಗೆ ಸರ್ವಜ್ಞಾನವನ್ನು ಮಾಡಿಕೊಂಡು ಪರಮಾತ್ಮನಿಗೆ ಪರಿಪೂರ್ಣ ಶರಣಾಗತಳಾಗಿ ಎರಡುತರದ ನಾಚಿಕೆಗಳನ್ನು (ಅಂತರಂಗ ಬಹಿರಂಗ) ಬಿಟ್ಟವಳಾಗಿ ಕಲ್ಯಾಣಕ್ಕೆ ಬಂದು ಅದನ್ನು ನೋಡಿ ಆನಂದದಿಂದ ಅದಕ್ಕೆ ನಮೋ ನಮೋ ಎಂದು ನಮಿಸುತ್ತಿರುವೆನು.

ಗೂಢಾರ್ಥ:— ಮಂಗಳಕರವಾದ ಸೌಖ್ಯವನ್ನು (ನಿಜಸುಖವನ್ನು) ಹೊಂದಬೇಕಾದರೆ ಶರೀರದ ಮೇಲಿನ ವ್ಯಾಮೋಹ ಸಂಸಾರದಲ್ಲಿಯ ಆಸಕ್ತಿ ಸಂಪತ್ತಿನ ಮೋಹಗಳನ್ನು ತೊರೆದು ಒಳಹೊರಗೂ (ಕಾಯ ವಾಚಾ ಮನಸಾ) ಶುದ್ಧ ಪವಿತ್ರರಾಗಿ ಅಹಂಕಾರ ಮಮಕಾರ ಬಿಟ್ಟರೆ ಮಾತ್ರ ಶಕ್ಯವಿದೆ ಹೊರತು ಏನೂ ಶುದ್ಧವಿಲ್ಲದೆ ಆ ಮಂಗಳಕರವಾದ ಸೌಖ್ಯವನ್ನು (ಕಲ್ಯಾಣವನ್ನು) ಹೊಂದುವದು ಶಕ್ಯವಿಲ್ಲ. ತಾನು ಅಂತರಂಗದಲ್ಲಿ ಸುಜ್ಞಾನ ಪಡೆದು ಪರಮಾತ್ಮನಿಗೆ ಸಂಪೂರ್ಣ ಶರಣಳಾಗಿ ಅಂತರಂಗ ಬಹಿರಂಗ ಶುದ್ಧಳಾಗಿ ಅವುಗಳ ಲಜ್ಜೆಯನ್ನು ಬಿಟ್ಟು ಈ ಮಂಗಳಕರವಾದ ಸೌಖ್ಯವನ್ನು (ನಿಜಸುಖವನ್ನು) ಪಡೆದೆನೆಂದು ಧೈರ್ಯವಾಗಿ ಹೇಳಿದಳು.

ಟೀಕೆ:— ಕಲ್ಯಾಣ ಪಟ್ಟಣದಲ್ಲಿಯೂ ಕೂಡ ಅಸಂಖ್ಯಾತ ಶರಣರು ಏಕಕಾಲಕ್ಕೆ ಸುತ್ತು ದೇಶವಿದೇಶಗಳಿಂದ ಬಂದು ಶಿವಗೋಷ್ಠಿಯಲ್ಲಿ ಸದಾ ರಮಿಸುತ್ತಿದ್ದರು. ಆಗ ಕಲ್ಯಾಣವು ನಾಡನುಡಿಗಳ ಕ್ರಾಂತಿಯ ಕಿಡಿಗಳು ಹೊತ್ತುತ್ತಿರುವ ಕೇಂದ್ರವಾಗಿತ್ತು. ಪ್ರತಿಯೊಂದರಲ್ಲಿಯೂ ಹೊಸತನದ ಬೆಳಕು ತೋರುತ್ತಿತ್ತು. ಕಾಯಕ, ದಾಸೋಹ, ನಿಷ್ಕಾಮ ಸಂಸಾರ ತ್ರಿವಿಧ ದಾಸೋಹ, ಶಿವಭಕ್ತರೆಲ್ಲ ಶಿವಕುಲ, ಸತ್ಯಾಗ್ರಹ, ಅನುಭವಮಂಟಪ, ಸ್ತ್ರೀಸ್ವಾತಂತ್ರ್ಯ ನೂಲುವದು, ನೇಯುವದು, ಉದ್ಯೋಗಗಳಲ್ಲಿ ಸಮಾನತೆ, ಅಡಿಯಿಂದ ಮುಡಿಯ ವರೆಗೆ ಬೇಕಾಗುವ ಸರ್ವಪದಾರ್ಥಗಳನ್ನು ವೀರಶೈವರೆ ತಯಾರಿಸಬೇಕು, ನಾಡ, ನುಡಿಗಳ ಸೇವೆ ಈ ಪ್ರಕಾರ ಎಲ್ಲ ಕಾರ್ಯಕ್ಷೇತ್ರಗಳಲ್ಲಿ ಕ್ರಾಂತಿಯಾಗುವ ಒಂದು ಮಹಾಯೋಜನೆಯ ಕೇಂದ್ರವಾಗಿತ್ತು. ಆಗ ಕಲ್ಯಾಣದಲ್ಲಿ ಶಿವಶರಣರು ಸದಾ ಶಿವಗೋಷ್ಠಿಯಲ್ಲಿ ಕಾಲಕಳೆಯುವದಲ್ಲದೆ ಮೇಲಿನ ಕ್ರಾಂತಿಯಲ್ಲಿ ಪ್ರತಿಯೊಬ್ಬರು ಶ್ರಮಿಸುತ್ತಿದ್ದರು. ಇಂಥ ಕಲ್ಯಾಣ ಪಟ್ಟಣದಲ್ಲಿ ಹೋಗಿ ಬಾಳಬೇಕಾದರೆ ಎಲ್ಲ ಸಂಸಾ

ರದ ಜಂಜಾಟವನ್ನೂ ಬಿಟ್ಟು ತ್ಯಾಗಿಯಾಗಿ ಸಾದಾ ಜೀವನ ಸಾಗಿಸ ಕ್ರಾಂತಿ ಮಾಡಬೇಕಾಗುವದು. ನಾಸ್ತಿಕರು, ಅಹಂಕಾರ, ಮಮಕಾರದವರು ವಿಷಯಾರಾಮಿ ಚಯನಿಯವರು ಕಲ್ಯಾಣದಲ್ಲಿ ವಾಸಿಸಲಿಕ್ಕೆ ಶಕ್ಯವಿಲ್ಲ. ಯಾಕಂದರೆ ಸರ್ವ ಶರಣರು ಶ್ರೇಷ್ಠ ತ್ಯಾಗಿಗಳಾಗಿ ನಾಡನುಡಿಯ ಸೇವೆ ಮಾಡುವಾಗ ಉಳಿದವರ ಆಟ ನಡೆಯದು. ಅವರು ಇಂಥ ಪಾರಮಾರ್ಥ ಅಗ್ನಿಯ ಸಮೀಪಕ್ಕೆ ಬಾಳಲಾರದು ಎಂದೇ ಇದರ ಭಾವ. ಇವನ್ನು ಮೀರಿ ಕಲ್ಯಾಣದಲ್ಲಿ ಹೋಗಿ ವಾಸಿಸಹತ್ತಿದರೆ ಅವರಿಗೆ ಶಿವಶರಣರ ಸಾನ್ನಿಧ್ಯದಲ್ಲಿ ಸೋಲು ಸಾವು ಸರ್ವನಾಶಗಳು ಕಟ್ಟಿಟ್ಟದ್ದೇ ಆಗಿರುವದು. ಕಾರಣ ಈತರದ ಉಚ್ಚ ಯೋಗ್ಯತೆ ಇರಲಾರದವರು ಕಲ್ಯಾಣದತ್ತ ಅಡಿ ಇಡಲೇ ಬಾರದು. ಎಂದು ಅಕ್ಕನು ಮೂರು ಅರ್ಥಗಳಿಂದ ಮಾತನಾಡಿರುವಳು. ಇಂಥ ಪವಿತ್ರ ಜನರಿಂದ ಕೂಡಿದ ಕಲ್ಯಾಣಪಟ್ಟಣಕ್ಕೆ ನಮಸ್ಕರಿಸಿದ್ದಾಳೆ. ಯಾಕಂದರೆ ಕಲ್ಯಾಣದ ಪ್ರತಿ ಮಣ್ಣು, ಕಲ್ಲು, ಜಲ, ನೆಲ, ಅಣುರೇಣು, ತೃಣ, ಕಾಷ್ಟ, ಮೊದಲಾದವುಗಳು ಶರಣರ ಪುಣ್ಯಪಾದ ಸ್ಪರ್ಶದಿಂದ ಪವಿತ್ರವಾಗಿದ್ದವು. ಅದಕ್ಕೆ ಅವಳು ಮೊಟ್ಟಮೊದಲಿಗೆ ಇಡೀ ಕಲ್ಯಾಣ ಪಟ್ಟಣಕ್ಕೇ ನಮಸ್ಕರಿಸಿದ್ದಾಳೆ. ಕಲ್ಯಾಣದಲ್ಲಿ ಸರ್ವ ಜನರೂ ಹೆಚ್ಚಾಗಿ ತ್ಯಾಗಿಗಳಾದ ಶಿವಭಕ್ತರೇ ಇದ್ದರು. ಅಲ್ಲದೆ ಅಕ್ಕನ ಹೃದಯ ಶುದ್ಧವಿದ್ದುದರಿಂದ ಬಹಿರಂಗದ ಎಲ್ಲರನ್ನೂ ಪವಿತ್ರರೆಂದೇ ಅವರು ಭಾವಿಸುವದು ಸಹಜ ಸರಳವಾಗಿದೆ. ಡಕ್ಕನದು ಶಿಶುಸರಳ ಹೃದಯವಾಗಿತ್ತು. ಎಲ್ಲರನ್ನೂ ಒಳ್ಳೇಯವರೆಂದು ಭಾವಿಸುವದು ಕೂಡ ಸಹಜವದೆ. ಆದರಲ್ಲಿ ಪವಿತ್ರ ದಿವ್ಯ ಶವಶರಣರು ಅಸಂಖ್ಯಾತರಾಗಿದ್ದರು. ಅವರ ಪ್ರಭಾವದಲ್ಲಿ ಉಳಿದ ಕೆಳದರ್ಜಯ ಕೆಲಬರು ಕೂಡಿ ಅವರಂತೆ ಕಾಣುವದೂ ಸಹ ಸಹಜವದೆ. ಯಾವ ದೃಷ್ಟಿಯಿಂದ ವಿಚಾರಿಸಿದರೂ ಕಲ್ಯಾಣವು ಅವಳಿಗೆ ಒಳ್ಳೆಯ ಪವಿತ್ರ ಪೂಜ್ಯ ನಾಡಾಗಿ ಕಂಡಿತು.

(ಮುಂದುವರಿಯುವದು.)

# ಸೀಳ್ನುಡಿಯ ವಿಮರ್ಶೆ



ತ್ಯಾಗವೀರ ಶಿವಶಂಕರೆಪ್ಪ ಚಿತ್ತರಗಿ ಇವರನ್ನು ನಾವು ರಾ. ಭಾ. ಹಳಕಟ್ಟಿಯವರಿಗಾಗಿ ನಿಧಿ ಕೂಡಿಸುವ ಕಾರ್ಯದ ಬಗ್ಗೆ ವಿಚಾರಿಸಲು ಬೆಟ್ಟಿಯಾಗಿದ್ದೆವು. ಅವರು ತಮ್ಮ ಸವಿಸ್ತಾರ ಕಾರ್ಯಕ್ರಮದ ಯೋಜನೆ ಗಳೆಲ್ಲ ವೇ. ಮಲ್ಲಿಕಾರ್ಜುನಸ್ವಾಮಿಗಳು ಗದಗ ಇವರ ಸಮ್ಮುಖದಲ್ಲಿ ನಿವೇದಿಸಿದರು. ಅದೇ ಸಮಯಕ್ಕೆ ಮೇಲಿನ ವಿಷಯದ ಪುಸ್ತಕವನ್ನು ಕೊಟ್ಟು ವಿಮರ್ಶೆಮಾಡಿರೆಂದು ಕೇಳಿಕೊಂಡರು. ಅದಕ್ಕೆ ನಾನು ಆದರದಿಂದ ಒಪ್ಪಿಕೊಂಡೆನು. ಈ ಗ್ರಂಥದ ವಿಮರ್ಶೆಮಾಡಲಿಕ್ಕೆ ನಾನು ಅಯೋಗ್ಯನಿದ್ದರೂ ಪ್ರೇಮದ ಮೂಲಕ ಒಪ್ಪಿಕೊಂಡಿರುವೆನು.

ಸೀಳ್ನುಡಿ ಎಂಬ ಹೆಸರು ಇಂಥ ಅನುಭವ ಪೂರ್ಣ, ವಿದ್ವತ್ಪೂರ್ಣ ವಿಚಾರಪೂರ್ಣ ವಿಮರ್ಶಾತ್ಮಕ ಕೃತಿಗೆ ಒಪ್ಪುವದಿಲ್ಲ. ಇದು ಸೂತ್ರಕ್ಕೆ ಅರ್ಥಬರೆದಂತಿದೆ. ಬಸವಣ್ಣನವರು ಸೂತ್ರರೂಪವಾಗಿ, ಉಪಮೇಯಗಳನ್ನು ಉಪಯೋಗಿಸಿದ್ದರೆ ಅವರ ಸಂಪೂರ್ಣ ಹೃದಯವನ್ನೇ ತೆರೆದಿಡುವಂತೆ ಶ್ರೀ ಜ. ಪ. ಚನ್ನಬಸವರಾಜ ದೇಶಿಕೇಂದ್ರ ಮಹಾ ಸ್ವಾಮಿಗಳವರು ಸುದೀರ್ಘ ವಾದ ಭಾಷ್ಯವನ್ನೇ ಬರೆದಿದ್ದಾರೆ. ಇವರು ಒಂಭತ್ತು ದಿವ್ಯರತ್ನಗಳ ಮಾಲೆಯನ್ನು ಹೆಣೆದಿದ್ದಾರೆ. ವಿರಸಾದ ಒಂಭತ್ತು ವಿಷಯಗಳ ಬಗೆಗೆ ಸುರಸವಾದ ನಿಬಂಧಗಳನ್ನು ರಚಿಸಿದ್ದಾರೆ. ಬಸವನ ಒಂಭತ್ತು ಸಂದೇಶಗಳನ್ನು ಪರಿಪೂರ್ಣ ಅರ್ಥಗಳೊಂದಿಗೆ ಈ ಮಹಾಸ್ವಾಮಿಗಳು ಗುಡುಗಿದ್ದಾರೆ. ಒಂಭತ್ತು ಒಗಟುಗಳಿಗೆ ದಿವ್ಯ ಅರ್ಥವನ್ನೇ ಮಾಡಿದುಡಿದಿದ್ದಾರೆ. ಬಸವನು ಉಪಯೋಗಿಸಿದ ಒಂಭತ್ತು ಶಬ್ದಗಳನ್ನೇ ಒಂದು ಉದ್ಗ್ರಂಥವಾಗುವಂತೆ ಬರೆದಿದ್ದಾರೆ. ಇದು ಗದ್ಯ ಕಾವ್ಯವಾಗಿದೆ. ಇದರಲ್ಲಿ ಕಾವ್ಯದ ಮಾಧುರ್ಯ ಲಾಲಿತ್ಯ ವಿದೆ. ಕಾವ್ಯದ ಚೇತನವು ತುಂಬಿಕೊಂಡಿದೆ. ತೋರಿಕೆಗೆ ಗದ್ಯದ ಉಡಿಗೆ ಉಟ್ಟರೂ ಅಂತರಂಗದಲ್ಲಿ ಕಾವ್ಯಮಯ ಉಡಪನ್ನುಟ್ಟಿರುವದು. ಇಂಥ ಈ ಗ್ರಂಥಕ್ಕೆ ಸೀಳ್ನುಡಿ ಎಂಬ ಹೆಸರು ಒಪ್ಪುವದಿಲ್ಲ. ಸ್ವಾಮಿಗಳು ಇದರ ಅರ್ಥವನ್ನು ಬರೆದಿದ್ದಾರೆ. ಇವು ತುಂಡು ನುಡಿಗಳಲ್ಲ. ಅಖಂಡನುಡಿಗಳು. ಸೀಳಿದ ನುಡಿಗಳಲ್ಲ. ಸೀಳದಪೂರ್ಣ ನುಡಿಗಳು. ಗ್ರಾಮಸಿಂಹದನುಡಿ(ಸಿಳ್ನುಡಿ)

ಯಂತೂ ಅಲ್ಲವೇ ಅಲ್ಲ. ಆದರೆ ವನರಾಜನ ವೀರ ಗಂಭೀರ ಗರ್ಜನೆ ಗುಡುಗು ಗಳೇ ಸರಿ. ಇವೆಲ್ಲ ಒಳ್ಳೇ ಅರ್ಥಪೂರ್ಣ ನುಡಿಗಳೇ ಇರುವವು. ಅದಕ್ಕೆ "ನವರತ್ನ ಮಾಲೆ" "ದಿವ್ಯನವ ಸಂದೇಶ" "ನವಜೇಂಗೊಡಲ" "ನವ ಸುಧಾಂಶು" "ನವೀಂದ್ರಚಾಪ" "ನವ ಕುಸುಮಮಾಲೆ" "ನವನೀತ" ಮೊದಲಾದ ಒಳ್ಳೇ ಹೆಸರನ್ನು ಇಟ್ಟಿದ್ದರೆ ಬಹು ಒಪ್ಪುತ್ತಿತ್ತೆಂದು ಅನಿಸುವದು.

ಈ ಒಂಭತ್ತು ಆಟಂಬಾಂಬುಗಳನ್ನೂ ೮೦೦ ವರ್ಷಗಳಹಿಂದೆ ಬಸವನು ರಚಿಸಿ ಬಚ್ಚಿಟ್ಟಿದ್ದನು. ಈಗ ಈ ಮಹಾಸ್ವಾಮಿಗಳು ಅವುಗಳನ್ನು ಹಾರಿಸಿ ಎಲ್ಲ ಕಡೆಗೂ ಅವುಗಳ ಶಕ್ತಿಸಾಮರ್ಥ್ಯಗಳನ್ನು ಪ್ರಕಟಗೊಳಿಸಿದರು. ಮಾಡಿದವರಿಗಿಂತ ಸರಸಾಗಿ ಹಾಡಿದವರೇ ಹೆಚ್ಚಲ್ಲವೇನು? ಹಡೆದವರಗಿಂತ ಪಡೆದವರೇ ಹೆಚ್ಚಲ್ಲವೇ? ಅದಕ್ಕೆ ಒಂಭತ್ತು ಆಟಂಬಾಂಬು ಎಂದರೆ ಹೆಚ್ಚಗೆ ಒಪ್ಪುವದೇನೋ? ಎಂಬ ವಿಚಾರವೂ ಬರುವದು.

'ಚಿನ್ನದ ನಾಯಿ' ಒಳ್ಳೇ ಅರ್ಥಪೂರ್ಣ ತಲೆಬರಹ. ಇದರಲ್ಲಿ ನಾಯಿಗಿಂತ ಚಿನ್ನದನಾಯಿ ಬಹುವಾಗಿ ಎಲ್ಲರಿಗೂ ಅಲ್ಲಲ್ಲಿ ಬಗೆಯಿಂದಲೂ ಕಚ್ಚೇಕೀರುವದೆಂದು ಲೇಖಕರು ಬಹು ಸುಂದರವಾಗಿ ಚಿತ್ರಿಸಿದ್ದಾರೆ. ನಾಯಿ ಗಿಂತ ಚಿನ್ನವು ಕಠಕಷ್ಟ ಚಂಚಲ ವಿಷಪೂರಿತವಾದುದು. ಸಕಲರಿಗೂ ಇದು ಕಚ್ಚುವದರಿಂದ ನಂಜೇರಿ ಸಕಲ ಇಂದ್ರಿಯಗಳು ತಮ್ಮ ಸರಿಯಾದ ಯೋಗ್ಯವಾದ ವ್ಯವಹಾರದಿಂದ ವಿಮುಖವಾಗಿ ಜೀವನವನ್ನೇ ಹಾಳುಗೆಡಿಸಿ ಬಿಡುವದು ಈ ಚಿನ್ನ. ಸಕಲ ದುಃಖಿಗಳಿಗೆ ಸಕಲ ಕೇಡುಗಳಿಗೆ ಚಿನ್ನದ ನಾಯಿಯೇ ಕಾರಣವಾಗಿರುವದೆಂದು ಬಹು ಹೃದಯಂಗಮವಾಗಿ ಬಣ್ಣಿಸಿ ದ್ದಾರೆ. ಇದು ಯಾರನ್ನೂ ಎಂದೂ ನಂಬುವದಿಲ್ಲ. ಇದನ್ನು ನಂಬಿ ನಚ್ಚಿ ದವರ ಭಂಡಾಟ, ತಿಣಕಾಟ ಮಿಡುಕಾಟಗಳನ್ನು ಹೇಳಲಾಸಲ್ಲ. ಇದರ ಚಲ್ಲಾಟವನ್ನು ಬಣ್ಣಿಸಲಾಸಲ್ಲೆಂದು ಅದರ ಅವಗುಣವನ್ನು ಚನ್ನಾಗಿ ವಿಮ ರ್ಶಿಸಿದ್ದಾರೆ. ಇದರ ಜಣ್ ಜಣ್ ಸಪ್ಪಳಕ್ಕೆ ಸಕಲರೂ ಹುಚ್ಚಾಗಿ ಬಿಡು ವರೆಂದು ಲೇಖಕರು ಚಿತ್ತಾಕರ್ಷಕವಾಗುವಂತೆ ಬಣ್ಣಿಸಿದ್ದಾರೆ. ಇದರ ಸಕಲ ಗುಣಗಳನ್ನು ಬಣ್ಣಿಸಿ ನಾಯಿಗಿಂತ ಕಠಕಷ್ಟವೆಂದು ಹೇಳಿ ಇದನ್ನು ನಂಬಬಾರದೆಂದು ಉಪದೇಶಿಸಿದ್ದು ಸರಿಯಾಗಿದೆ. ಈ ಚಿನ್ನದ ನಾಯಿಯನ್ನು ಸಾಕಲಿಕ್ಕೆ ಅಡ್ಡಿ ಇಲ್ಲ, ಆದರೆ ಅದರಲ್ಲಿ ಮೋಹಪರವಶರಾಗಬೇಡಿರಿ. ಅಂದರೆ ಮಹದಾನಂದ ಉಂಟಾಗುವದೆಂದು ಹಿರೇಸಿದ್ಧಾಂತವನ್ನೇ ಸಾರಿದ್ದಾರೆ,

ಬರಹಗಾರರ ಬುದ್ಧಿಕುಶಲತೆ, ಬೆಡಗು, ಒಗಟಪೂರ್ಣ ಅರ್ಥ ಅನುಭವ ಗಳು ಸಹಜ ಪ್ರಕಟವಾಗುವವು. ಶರಣರಂತೆ ಇವನ್ನು ಸಕಲರು ಹೇಳಿದ್ದು ಸಮಂಜಸವಿದೆ.

"ಮಾಯಾಪಂಜರ:—" ಗಿಳಿ, ಹಂಜರ, ಮಂಜರ; ಜೀವ, ಶರೀರ, ಮಾಯ ಇವುಗಳ ಗೂಡಾರ್ಥವನ್ನು ಬಹು ಸರಸಾಗಿ ಹೇಳಿ ಒಂದ ಕ್ಕೊಂದರ ಸಂಬಂಧೀಕರಣವನ್ನು ಬಹುಚನ್ನಾಗಿ ಮಾಡಿದ್ದಾರೆ. ಇದರಲ್ಲಿ ಜೀವನದ ಉದ್ದೇಶ ಗೊತ್ತುಗುರಿಗಳನ್ನು ಬಹುಹೃದಯಂಗಮವಾಗಿ ಬಣ್ಣಿಸಿ ದ್ದಾರೆ. ಗಿಳಿಗೂ ಜೀವಕ್ಕೂ; ಹಂಜರಕ್ಕೂ ಶರೀರಕ್ಕೂ; ಮಂಜರಕ್ಕೂ ಮಾಯೆಗೂ ಒಳ್ಳೇ ಜೋಡಣೆಮಾಡಿ ಅವುಗಳ ಗುಣಗಳನ್ನು ಬಣ್ಣಿಸಿದ್ದಾರೆ. ವೇದಾಂತ ಸಿದ್ಧಾಂತಗಳೆರಡನ್ನೂ ಇದರಿಂದ ಕಡೆದು ತೆಗೆದಿದ್ದಾರೆ. ಜೀವವು ಗಿಳಿಯಂತೆ ತಿಳಿಗೇಡಿ. ಮುಂದಿನ ಧೂರ್ತ ವಿಚಾರವಿಲ್ಲದ್ದು. ಶರೀರವು ಹಂಜರದಂತೆ ಅಸ್ಥಿರವಾದುದು ಮುರಿದು ಮೂಲೆಗೆ ಬೀಳುವಂಥಹದು. ಮಾಯೆಯು ಬೆಕ್ಕಿನಂತೆ (ಮಂಜರದಂತೆ) ಸಕಲವನ್ನು ಸಕಲರನೂ ತಿಂದು ತೇಗುವಂಥಹದು. ವಿಶ್ರಾಂತಿ ಇಲ್ಲದೆ ಸದಾ ತಿರುಗುವಂಥಹದು ಎಷ್ಟು ತಿಂದರೂ ತೃಪ್ತಿಯಂತೂ ಇಲ್ಲವೇ ಇಲ್ಲ. ಈ ಉಪಮಾನ ಉಪಮೇಯಗಳ ಗರ್ಭಿತ ಅರ್ಥ ವನ್ನು ಬಿಚ್ಚಿ ಬಯಲಿಗೆ ಸಕಲರಿಗೂ ತಿಳಿಯುವಂತೆ ವಿಶದಪಡಿಸಿದ್ದಾರೆ. ಪ್ರತಿಯೊಂದರ ಗುಣವಿಮರ್ಶೆಗಳನ್ನು ಬಹು ಹೃದಯಂಗಮವಾಗಿ ಮಾಡಿ ದ್ದಾರೆ. ಅಲ್ಲಿ ಸಮಯೋಚಿತವಾಗಿ ಒಳ್ಳೊಳ್ಳೆ ವಚನಗಳನ್ನು ಸೇರಿಸಿ ನಿರ್ಬಂಧಕ್ಕೆ ಒಳ್ಳೇ ಶ್ರಿಂಗಾರವನ್ನು ತಂದುಕೊಟ್ಟಿದ್ದಾರೆ. ಈ ನಿಬಂಧದ ಕಡೆಗೆ ಒಳ್ಳೇ ಜ್ಞಾನೋಪದೇಶವನ್ನು ಅದರ ಸಾರರೂಪವಾದ ಗೂಡಾರ್ಥ ವನ್ನು ಪ್ರಕಟಪಡಿಸಿದ್ದಾರೆ. ವಚನಕ್ಕೆ ಅರ್ಥಬರೆಯುವ ಇವರ ಶೈಲಿಯು ಇವರ ವಿಚಾರವು ಹೊಗಳಿಸಿಕೊಳ್ಳತಕ್ಕಂಥಾದ್ದಿದೆ. ಜೀವವೆಂಬ ಗಿಳಿಯು ತನ್ನ ಕರ್ಮಗಳ ಮೂಲಕ ದೇಹವೆಂಬ ಪಂಜರದಲ್ಲಿ ಸಿಕ್ಕು ಪಂಜರವೇ ಸುಖದ ವಾಸಸ್ಥಾನವೂ ಭದ್ರವೂ ಎಂದು ನಂಬಿ, ಮಾಯೆ ಎಂಬ ಬೆಕ್ಕಿಗೆ ತುತ್ತಾಗಿ ಸಾಯುವದು ಬೇಡ. ಮಾಯೆಯನ್ನು ಜಯಿಸಲು ಲಿಂಗಭಕ್ತ ರಾಗಿರಿ. ಆಗ ನಿಜಸುಖ ಸಿಗುವನೆಂದು ಹೃದಯಂಗಮವಾಗಿ ವರ್ಣಿಸಿದ್ದಾರೆ.

ಕಬ್ಬಿನದ ಕೋಡಗ:— ಈ ನಿಬಂಧವನ್ನು ಬರೆಯಲು ಇವರ ಎದು ರಿಗೆ ಮಂಗಗಳ ಕುಚೇಷ್ಟೆಯ ಹೀನಕೃತಿಗಳೇ ಕಾರಣವಾಗಿರುವವು. ಪ್ರತಿ

ಯೊಬ್ಬ ಕವಿ, ಸಾಹಿತಿ, ಬರಹಗಾರ ಎಲ್ಲರೂ ಮನಸ್ಸಿಗೆ ಮಂಗನನ್ನೇ ಹೋಲಿಸಿ ಬರೆದಿದ್ದಾರೆಂದು ಅವರ ನುಡಿಗಳಿಂದ ಸ್ಪಷ್ಟಮಾಡಿದ್ದಾರೆ. ಅದಕ್ಕೆ ಮಂಗನಿಗೂ ಮನಸ್ಸಿಗೂ ಪೂರ್ವದಲ್ಲಿ ಏನೋ ಸಂಸ್ಕಾರವಿರಬೇಕೆಂದು ತೋರಿಸಿದ್ದಾರೆ. ಇವರ ಶೈಲಿಯು ಹಾಸ್ಯರಸಪೂರ್ಣವಾದುದು. ಕವಿಗಳು ಕಪಿಯ ಚೇಷ್ಟೆಯವರೆಂದು ತೋರಿಸಿಕೊಡುವದು ಈ ನಿಬಂಧವು. ಈ ಎಲ್ಲಾ ನಿಬಂಧಗಳು ಹಾಸ್ಯರಸಗಳಿಂದ ತುಂಬಿಕೊಂಡಿರುವವು. ನರ ಬಾನರದೊಳಗಿನ ಸಂಬಂಧವನ್ನು ವೈಜ್ಞಾನಿಕರೂ ಮಾಡಿದ್ದನ್ನು ಸ್ಪಷ್ಟಪಡಿಸಿದ್ದಾರೆ ಇವರ ಲೇಖಣಿಯು ಸುದರ್ಶನಚಕ್ರದಂತೆ ಸುತ್ತಲೂ ತಿರುಗುವದು ಅನುಭವವಾಗುವ ಎ. " ವರಪಂಡಿತ " ವೆನ್ನುವ ಉಪಾಮೇಯವನ್ನು ಉಪಯೋಗಿಸಿ ಮತ್ತಷ್ಟು ವಾಚಕರನ್ನ ಹಾಸ್ಯಕತ್ತಲಲ್ಲಿ ಈಸುಬಿಟ್ಟಿದ್ದಾರೆ. ಕಬ್ಬಿಣ ಮಂಗನರೂಪ ಬದಲಾಯಿಸದಂತೆ ಮಾನವನಿಗೆ ಅವಿಶ್ವಾಸ ಸಂಕಲ್ಪ ವಿಕಲ್ಪ ಡಾಂಬಿಕತನಗಳಿಂದ ದೇವತ್ವ ಬರುವದಿಲ್ಲ. ಮಂಗರಾಗಿಯೇ ಉಳಿಯುವರೆಂದು ಉಪಮಾನವನ್ನು ಉಪಯೋಗಿಸಿ ಒಳ್ಳೇ ಅರ್ಥಮಾಡಿದ್ದಾರೆ. ಮನಸು-ಮಂಗಗಳು ಗುರುಶಿಷ್ಯರೆಂದು ಬಹು ಮಾರ್ಮಿಕವಾಗಿ ಹೇಳಿದ್ದಾರೆ. ಮನಸ್ಸಿನ ಚೇಷ್ಟೆಗಳನ್ನು ಬಹು ಹೃದಯಂಗಮವಾಗಿ ಬಣ್ಣಿಸಿದ್ದಾರೆ. ಮನಸ್ಸಿನ ಜೀವನ ಸವಾರಿಯನ್ನು ಮಂಗನ ಹೋತಿನ ಸವಾರಿ ಮಾಡಿದುದಕ್ಕೆ ಹೋಲಿಸಿರುವದನ್ನು ನೋಡಿದರೆ ವಿಚಾರಪೂರ್ಣ ಅನುಭವದ ಮಾತುಗಳು ಯಾರ ಹೃದಯಕ್ಕೆ ತಾಗಲಿಕ್ಕಿಲ್ಲ? ಸಕಲರಿಗೂ ಮಂಗಮನಸ್ಸಿನ ಸಹವಾಸಕ್ಕೆ ಬೀಳಬೇಡೆಂದು ವಿಧಿಸಿದ್ದು ಯೋಗ್ಯವಾಗಿದೆ. ಕೋಡಗ ಶಬ್ದವನ್ನು ಅಂಣನಉಪಯೋಗಿಸಿದ ಮರ್ಮವನ್ನು ಚನ್ನಾಗಿ ವರ್ಣಿಸಿದ್ದಾರೆ ಮಂಗನ ಗುಣರೂಪದವರಿಗೆ ಕೋಡಗ ಎಂದು ಬೈಯುವರು.

ಕಲ್ಲನಾಗರ:— ಪ್ರತಿಯೊಂದು ಉಪಮೇಯಗಳ ಗುಣ ಸ್ವಭಾವಗಳನ್ನು ಬರಹದಲ್ಲಿಯೂ ಎದ್ದು ಕಾಣುವಂತೆ ಹಾವಭಾವದಿಂದಲೇ ತಿಳಿಸಿದ್ದಾರೆ. ನಾಗರ ಎಂದ ಕೂಡಲೆ- ಭುಸ್ ಭುಸ್ ಭುಸ್ಸ್ ಎಂದು ಅವುಗಳ ಧ್ವನಿಯ ಅನುಕರಣವನ್ನು ಚಿತ್ರಿಸಿ ವಾಚಕರ ಲಕ್ಷವನ್ನು ಸೆಳೆದು ಓದಲಿಕ್ಕೆಹಚ್ಚಿದ್ದಾರೆ. ನಾಗನ ಮೂಲ ಇತಿಹಾಸವನ್ನೆಲ್ಲ ಚಿತ್ರಿಸಿದ್ದಾರೆ ನಾಗಗಳು, ನಾಗಲೋಕ ನಾಗರಾಜ, ನಾಗಕನ್ನಿಕೆ, ನಾಗೇಶ್ವರ ನಾಗೇಶ ಹೀಗೆಂದು ನಾಗನ ವಿಶಿಷ್ಟತೆಯನ್ನೆಲ್ಲ ತಿಳಿಸಿದ್ದಾರೆ. ನಾಗನಿಗೆ ವಿಷಧರ, ಪದ್ಮರಥ, ಉರಗ, ದ್ವಿಜಿಹ್ವ,

ಚಕ್ಷುಃಶ್ರೋತ್ರ, ಡೊಂಕಪ್ಪ ಎಂದು ಹಾವಿನ ಹೆಸರುಗಳನ್ನು ವಿಸ್ತರಿಸಿದ್ದಾರೆ. ನಾಗಾಭರಣ ನಾಗಾರತಿ ನಾಗಧರ ನಾಗಪೂಜೆ ಎಂಬ ಶಬ್ದಗಳು ಧಾರ್ಮಿಕ ಶಂಗದಲ್ಲಿಯೂ ಮಹತ್ವವುಳ್ಳವುಗಳಾಗಿವೆ. "ಕಲ್ಲನಾಗರಕ್ಕೆ ಹಾಲ ದಿಟನಾಗರಕ್ಕೆ ಕಲ್ಲು. ಕಲ್ಲು ನಾಗರಕ್ಕೆ ಎಡೆ ದಿಟದನಾಗರಕ್ಕೆ ಹೊಡತ ಎಂಬ ಉದಾಹರಣೆಯಿಂದ ಡಾಂಭಿಕ ಭಕ್ತರ ವಿಚಾರವನ್ನು ಶ್ರುತ ಪಡಿಸಿ ಸಜೀವ ಸೇವೆಯೇ ಪೂಜೆ ಎಂದು ಹೇಳಿರುವರು.

ಭಕ್ತಿ ಭಾವವಿಲ್ಲದೆ ಒರೆ ಒಣ ಸಂಪ್ರದಾಯಕ್ಕೆ ಬಿದ್ದು ಜನರು ಹೇಗೆ ಮೂಢ ಭಕ್ತಿಯು ಅಧರ್ಮವನ್ನೇ ಧರ್ಮವೆಂದು ತಿಳಿದಿದ್ದಾರೆಂದು ಹೃದಯಂಗಮವಾಗಿ ವರ್ಣಿಸಿದ್ದಾರೆ. ಹಾವಿನ ಹುತ್ತಕ್ಕೆ ಪೂಜೆಮಾಡಿ ಹಾಲ ನೆರೆದು ಬರುವದು ಕೂಡ ಧರ್ಮವಲ್ಲೆಂದು ಹೇಳಿದ್ದಾರೆ. ಸಜೀವಸೇವೆಯೇ ನಿಜವಾದ ಧರ್ಮವೆಂದು ಸಾರಿದ್ದಾರೆ. ಹುತ್ತು ಬಡಿದರೆ ಹಾವು ಸಾಯುದು ಎಂಬುದನ್ನು ಉದಾಹರಣೆಗಳಿಂದ ಬಹು ಸ್ಪಷ್ಟರೀತಿಯಲ್ಲಿ ಹೇಳದ್ದಾರೆ. ಮನವನ್ನು ಸರ್ಪಕ್ಕೆ ತನುವನ್ನು ಹುತ್ತಿಗೆ ಹೋಲಿಸಿದ್ದಾರೆ. ಅದಕ್ಕೆ ಹಾವಿನ ಹಲ್ಲು ತೆಗೆದು ಹಾವಾಡಿಸಬೇಕೆಂದು ನೀತಿಯನ್ನು ಬೋಧಿಸಿದ್ದಾರೆ. ತನುವೆಂಬ ಬುಟ್ಟಿಯಲ್ಲಿ ಮನನೆಂಬ ಸರ್ಪಿನ ಅಹಂಕಾರವೆಂಬ ವಿಷದ ಹಲ್ಲುಗಳನ್ನು ಮುರಿದು ಇರಿಸಿ ಆಡಿಸಬೇಕು ಎಂಬ ಒಳ್ಳೇ ಸುವಿಚಾರಪರ ಬೋಧೆಯನ್ನು ನೀಡಿದ್ದಾರೆ. ಅಂದರೆ ಆರೂಢರಾಗುವ ರೀತಿಯನ್ನು ಹೇಳಿದ್ದಾರೆ. ವಿಷದ ಹಾವು ಕಚ್ಚಿದರೆ ಒಂದೇ ಸಲ ಸಾಯುವೆವು. ವಿಷಯದ ಹಾವು ಕಚ್ಚಿದರೆ, ಅನೇಕ ಜನ್ಮ ಸತ್ತು ಸತ್ತು ಹುಟ್ಟಬೇಕಾಗುವದೆಂದು, ಮಾರ್ಮಿಕವಾಗಿ ನುಡಿದಿದ್ದಾರೆ. ತನ್ನಾತ್ಮವೇ ತನಗೆ ಹಗೆಯಾದ ಬಳಿಕ ಬಿನ್ನಾಣಉಂಟೇ "ಹಲ್ಲುಕಳೆದು ಹಾವನಾಡಿಸಿದರೆ ಹಾವಿನ ಸಂಗವೇ ಲೇಸು." ಬಸವಣ್ಣನ ನುಡಿಗಳಿಂದಲೇ ಕಡೆಗೆ ಈ ನಿಬಂಧಕ್ಕೆ ಹೊಂಗಳಸನ್ನು ಇಟ್ಟು ವಾಚಕರಿಗೆ ವಿಚಾರ ಸಾಗರದಲ್ಲಿ ಮುಳಗಿಸಿಬಿಟ್ಟಿರುವರು.

ಹರಿಕೆಯ ಕುರಿ:— ಇದನ್ನು ಬರೆಯಲಿಕ್ಕೂ ಒಂದು ಘಟನೆಯೇ ಸಂಭವಸಿರುವದು. ಬ್ಯಾ, ಬ್ಯಾ, ಬ್ಯಾ‍ಽಽಽ ಎಂದು ಅದರ ಧ್ವನಿಯ ಅನುಕರಣದಿಂದಲೇ ಬರೆಯಲು ಪ್ರಾರಂಭಿಸಿರುವರು 'ಅಜ' ಎಂದು ಕುರಿಗೆ ಹೆಸರಿರುವದರಿಂದ ಬ್ರಹ್ಮನೇ ಅದಕ್ಕೆ ಸದಾ ಹೀಗೆ ಕತ್ತನ್ನು ಕತ್ತರಿಸಿಕೊಳ್ಳುವ ಮಳ್ಳ ಕುರಿಯ ಜೀವನವನ್ನು ಮತ್ಸರದಿಂದ ಕೊಟ್ಟಿರುವನೆಂದು ಆಧಾರ ಸಹಿತ ಬರೆ

ದಿರುವರು. ಕುರಿಯು ಹುಕ್ಕ ಮಳ್ಳ ಸ್ವಭಾವವನ್ನು ಚನ್ನಾಗಿ ಚಿತ್ರಿಸಿದ್ದಾರೆ. ನಿಷ್ಕಪಟಪ್ರಾಣಿ ಅಡವಿಯಲ್ಲಿ ಬೆಳೆದ ಒಣ ಹುಲ್ಲನ್ನು ಕಂಟಿಗಳನ್ನು ತಿಂದು ಹಾಲನ್ನೂ ಉಣ್ಣೆಯನ್ನೂ ಚರ್ಮವನ್ನೂ ಮಾಂಸವನ್ನೂ ಕೊಡುವವು. ಸಂಘ ಶಕ್ತಿಯನ್ನು ಕಲಿಸುವಪ್ರಾಣಿ ಹೀಗೆ ಅದರ ಒಳ್ಳೇ ಗುಣಗಳನ್ನು ವರ್ಣಿಸಿದ್ದಾರೆ. ಇಂಥ ಮೂಕ ಪ್ರಾಣಿಗಳನ್ನು ಕೊಲ್ಲುವ ಹರಿಕೆಯನ್ನು ಹೊರುವರು. ಹಲ್ಲಿನ ರುಚಿಗಾಗಿ ಇವೆಲ್ಲ ಹರಿಕೆಗಳಿರುವವೆಂದು ಹರಿಕೆಯ ಬಗೆಗಳನ್ನು ವರ್ಣಿಸಿದ್ದಾರೆ. ಇದರಂತೆ ಮನುಷ್ಯನ ಜೀವನವೂ ಕೂಡ ಪ್ರಪಂಚದಲ್ಲಿ ಹರಿಕೆಯ ಕುರಿಯಂತೆ ಆಗಿರುವದು ಎಂದು ಹೃದಯಂಗಮವಾಗಿ ಗೂಢಾರ್ಥವನ್ನು ತೆರೆದಿಟ್ಟಿರುವರು. ವೇದ ಶಾಸ್ತ್ರ ಪುರಾಣಗಳಲ್ಲಿ ಕುರಿಯ ಯಜ್ಞಗಳನ್ನು ಹೇಳಿದ್ದು ಹೀನತರ ಹಿಂಸಾಧರ್ಮ ಅದಕ್ಕೆ ಕುರಿಗೆ ಇಂಥ ಜನರ ಮುಂದೆ ಅಳು ಎಂದು ಹೇಳಿದ್ದಾರೆ. ಬಸವನ ವಚನವನ್ನು ಸಂದರ್ಭಾನುಸಾರವಾಗಿ ಸೇರಿಸಿ ಅರ್ಥವನ್ನು ಮನದಟ್ಟಾಗುವಂತೆ ಮಾಡಿದ್ದಾರೆ. ಕುರಿಯ ಉಣ್ಣೆಗೆ ನರರ ದುರ್ಗುಣ ದುಶ್ಚಟ ದುರ್ಮೋಹ ದುರಾಗ್ರಹಗಳನ್ನು ಹೋಲಿಸಿದ್ದಾರೆ. ಕುರಿಯ ಕೊಗಿಗೆ ಅಹಂಕಾರ ಮಮಕಾರಗಳನ್ನು ಹೋಲಿಸಿ ಅವುಗಳನ್ನು ಬಿಡಲಿಕ್ಕೆ ತಿಳಿಸಿದ್ದಾರೆ. ಮಾನವನು ಮುಂದಿನ ವಿಚಾರವಿಲ್ಲದೆ ಕುರಿಯಂತೆ ತಲೆತಗ್ಗಿಸಿ ನೆಲನೋಡುತ್ತ ಸಾಗಿದ್ದಾನೆಂದು ಬಣ್ಣಿಸಿದ್ದಾರೆ. ನಾವು ಜ್ಞಾನಕ್ಕೆ ಆತ್ಮಾರ್ಪಣ ಕ್ರಿಯೆಗೆ ಕಾಯಾರ್ಪಣ. ಭಕ್ತಿಗೆ ಹೃದಯಾರ್ಪಣ ಮಾಡಿ ನಿಜವಾದ ಯಜ್ಞಮಾಡಿದಂತಾಗುವದೆಂದು ಬಹು ಸುಂದರವಾಗಿ ಹೇಳಿದ್ದಾರೆ. ವಿಷಯಕ್ಕೆ ಬಾಯಿ ತೆರೆದು ಹರಿಯಬೇಡಿರಿ ಇಂದ್ರಿಯನಿಗ್ರಹ ಮಾಡಿರಿ ಕುರಿಯಂತೆ ಸಿಕ್ಕಿದ್ದರೆ ಬಾಯಿಹಾಕಬೇಡಿರೆಂದು ಒಳ್ಳೇ ದಿವ್ಯ ತತ್ವೋಪದೇಶವನ್ನು ಮಾಡಿದ್ದಾರೆ. ಅಧ್ಯಾತ್ಮದ ಹರಿಕೆಯನ್ನು ಪೂರೈಸಲು ಸಕಲರೂ ಕಲಿಯಬೇಕೆಂದು ಸಾರಿದ್ದಾರೆ.

ಕಾಡ ಬಸವಃ— ಇದು ದೊಡ್ಡ ನಿಬಂಧವು. ಈ ನಿಬಂಧದಲ್ಲಿ ಭವರೋಗ, ಜಗದನೆಂಟ, ವರಗುರುವಿಶ್ವಕ್ಕೆಲ್ಲ, ಒಡೆಯರು ಬಂದರೆ, ಒಂದು ಮೊಲ ಹೀಗೆ ಐದು ನಿಬಂಧಗಳನ್ನು ಸಂಬಂಧೀಕರಣ ಮಾಡಿಕೊಂಡು ಕಾಡ ಬಸವ ಎಂಬ ದೊಡ್ಡನಿಬಂಧವನ್ನು ಹೆಣೆದಿದ್ದಾರೆ. ಸಂಬಂಧೀಕರಣ ಹಚ್ಚಲಿಕ್ಕೆ ಒಳ್ಳೇ ಚತುರರಿದ್ದಾರೆ.

ಒಬ್ಬನೇ ಹುಟ್ಟುವನು ತಾನೊಬ್ಬನೇ ಸಾಯುವನು, ಉಳಿದ ಆಪ್ತರು, ಇಷ್ಟಮಿತ್ರರು, ಬಂಧು, ಬಳಗ, ತಾಯಿ, ತಂದೆ, ಅಕ್ಕ, ತಂಗಿ, ಮೊದ

ಲಾದವರೆಲ್ಲ ಸಂಸಾರ ನಾಟಕದಲ್ಲಿ ಜೀವನದ ಜೊತೆಗೆ ಪಾತ್ರವಹಿಸಲಿಕ್ಕೆ ಬಂದಿರುವರಲ್ಲದೆ ನಿಜವಾದ ನೆಂಟರಾರೂ ಇಲ್ಲ. ನಾವು ಇದರಲ್ಲೆ ಮುಳುಗಿದರೆ ಅದೇ ಭವರೋಗದ ತಿಮಿರವಾಗುವದು. ಇದರಿಂದ ಶಿವನು ದೊರೆಯಲಾರನು. ನಿಜವಾದ ನಮ್ಮ ನೆಂಟನೆಂದರೆ ಶಿವನು. ಯಾಕಂದರೆ ಬೇಕಾದ ವಿಪತ್ತು, ಕಷ್ಟದ ಪ್ರಸಂಗದಲ್ಲಿಯೂ ಕೂಡ ನಮ್ಮ ಕೈಬಿಡನು. ಉಳಿದವರು ಜಾರಿಬಿಡುವರು. ಇವರೆಲ್ಲರನ್ನು ಮರದ ಹಕ್ಕಿಗೆ ಹೋಲಿಸಿದ್ದಾರೆ. ಸತಿಸುತ ಬಂಧು ಬಳಗದವರು ತನ್ನನರೆಂಬ ಮಮಕಾರ ಹೆಚ್ಚಾಗಲು ಸಕಲ ದುರಾಶೆ ದುರ್ಗುಣ ದುರಾಚಾರಗಳು ಸ್ವಾರ್ಥಗಳೂ ಬಂದು ಜೀವನವನ್ನು ಮುತ್ತಿ ಸಮೂಲ ನಾಶಮಾಡುವವೆಂದು ಈ ಎಲ್ಲ ವಿಷಯವನ್ನು ಬಹು ಹೃದಯಂಗಮವಾಗಿ ಸರಪಳಿಯಲ್ಲಿಯ ಕಳಿಗಿಗಳಂತೆ ಜೋಡಿಸಿ ಹೊಂದಿಸಿ ಅಂದವಾಗಿ ಬರೆದಿದ್ದಾರೆ. ಎಲ್ಲರನ್ನೂ ಕುಂಬಾರನ ಗಡಿಗೆಗಳಿಗೆ ಹೋಲಿಸಿ ಗಡಿಗೆಗಳು ಕುಂಬಾರನನ್ನು ಬಿಟ್ಟು ವಿಕ್ರಿಯಾಗಿ ಹೋಗುವಂತೆ ಸಕಲರೂ ಜೀವನನ್ನು ಅಗಲಿ ಹೋಗುತ್ತಾರೆಂದು ಸರಸಾಗಿ ಬಣ್ಣಿಸಿದ್ದಾರೆ. ಸಮುದ್ರ ಚಂದ್ರರ ಗಳ ತನ್ನ ರಕ್ತ ಸಂಬಂಧವನ್ನು ಹೇಳಿದ್ದೂ ಅವರಿಗೆ ಕಷ್ಟ ವಿಪತ್ತು ಬಂದಾಗ ಇವರು ಒಬ್ಬರಿಗೊಬ್ಬರು ನೆರವಾಗುವದಿಲ್ಲ. ಶಿವನೊಬ್ಬನೇ ಜಗದ ನಿಜವಾದ ನೆಂಟನೆಂದು ಸಿದ್ಧಮಾಡಿದ್ದಾರೆ. ಅವನೇ ನಮ್ಮ ಒಡೆಯನು. ಅವನೇ ನಮ್ಮ ವರಗುರು ವಿಶ್ವಗುರು ಉಳಿದವರಾರೂ ಇಲ್ಲೆಂದು ಗಂಟಾಘೋಷವಾಗಿ ಸಾರಿದ್ದಾರೆ. ಜೀವವನ್ನು ಮೊಲಕ್ಕೆ, ಶರೀರ ಇಂದ್ರಿಯ ಮನಗಳನ್ನು ನಾಯಿಗಳಿಗೆ ಹೋಲಿಸಿದ್ದು ಸಮಂಜಸವಾಗಿದೆ. ಇವುಗಳನ್ನು ಹರಿಯಬಿಟ್ಟರೆ ಜೀವನವೆಲ್ಲ ಹಾಳಾಗಿ ಹೋಗುತ್ತದೆ. ಅದಕ್ಕೆ ಮನವೆಂಬ ಹಿರೆನಾಯಿಯನ್ನು ಸಾದುವನ್ನಾಗಿ ಮಾಡುವದನ್ನು ಸೂಚಿಸಿದ್ದಾರೆ. ತಾನಾರೆಂಬುದನ್ನು ತಿಳಿಯದೆ ಕಾಡಬಸವ (ಎತ್ತು) ಆಗಿರುವನು. ಯಾರೂ ನಮ್ಮನ್ನು ಉದ್ಧರಿಸುವವರಿಲ್ಲ. ಶಿವನ ಹೊರತು ನಮ್ಮನ್ನು ಕಾಯುವರಿಲ್ಲೆಂದು ಸಿದ್ಧಮಾಡಿ ಈ ನಿಬಂಧವನ್ನು ಸಕಲರೂ ವೈರಾಗ್ಯ ತ್ಯಾಗಕ್ಕೆ ಹೋಗುವಂತೆ ಹೆಣೆದಿರುವರು. ಹಳಿಯ ಹೇಳಿಕೆಗೆ ಹೊಸರೂಪ ಬಣ್ಣ ಆಕಾರ ಕೊಟ್ಟು ಹೊಸದೆನಿಸುವಂತೆ ಈ ನಿಬಂಧವನ್ನು ರಚಿಸಿದ್ದಾರೆ.

ಬೆಣ್ಣೆಯ ಬೆನಕ:— ಈ ತಲೆಬರಹ ನೋಡಿದರೆ ಯಾರಿಗೂ ಇದರ ಸರಿಯಾದ ತಿಳುವಳಿಕೆಯುಂಟಾಗದು. ಇದರಲ್ಲಿ ಗಣಪತಿರಾಯ ಪೂಜೆಯ ವೈಶಿಷ್ಟ್ಯವನ್ನು ವಿವರಿಸಲಾಗಿದೆ. ಆದರೆ ಗಣಪ್ಪನನ್ನು ಮಣ್ಣು ಶಗಣಿಗ

ಳಿಂದ ಮಾಡುವದರಿಂದ ಅವನಿಗೆ ಒಂದುತರದ ಅಪಮಾನವೆಂದು ಹೇಳಿದ್ದಾರೆ. ಒಳ್ಳೇರಂಜನೆಯಾಗುವಂತೆ ಈನಿಬಂಧವನ್ನು ರಚಿಸಿದ್ದಾರೆ. ಬೆಣ್ಣೆಯ ಗಣಪ್ಪನನ್ನು ಮಾಡಿ ಅದರ ಬಾಯಿಯಲ್ಲಿ ಕೆಂಡದ ಕಡಬನ್ನು ಕೊಟ್ಟರೆ ಹಲ್ಲು ಹೋಗುವದಲ್ಲದೆ ಗಣಪ್ಪನೇ ಕರಗಿಹೋಗುವನು. ಸಾಮಾನ್ಯರನ್ನು ಶಗಣಿ ಮಣ್ಣುಗಳ ಗಣಪ್ಪನಿಗೆ ಹೋಲಿಸಿದರೆ; ಸತ್ಪುರುಷರನ್ನು ಬೆಣ್ಣೆಯ ಗಣಪ್ಪನಿಗೆ ಹೋಲಿಸಿದ್ದಾರೆ. ಸತ್ಪುರುಷರು ಕೂಡ ಕುಚೇಷ್ಟೆಯಾಡಿದರೆ ಸತ್ಯಾನಾಶವಾಗುವದು ಖಚಿತವೆಂದೂ ಅವರ ಕೂಡ ಸವಿ ಮೃದುವಚನಗಳನ್ನು ಭಾವಭಕ್ತಿಯಿಂದ ಆಡಿದರೆ ಅವರ ಹದಯ ಕರಗಿ ಹರಿಕೆ ಕೊಡುವರು. ಆದರಿಂದ ಒಳ್ಳೇ ಹಿತವಾಗುವದು, ಶರಣರು ಬೆಂಣಿಯಂತೆ ಮೃದು ಹೃದಯರು ಕೆಂಡಂಥ ಬಿಸಿಮಾತುಗಳನ್ನು ಆಡಬಾರದು. ಅವರ ಬಾಳು ಬೆಂದು ಬತ್ತಿಹೋಗುವದೆಂದು ವಿಧಿಸಿದ್ದಾರೆ. ಇದಕ್ಕೆ ಅಣ್ಣನ ವಚನಗಳನ್ನೇ ಸಾಕ್ಷಿಯಾಗಿ ಇಟ್ಟಿದ್ದಾರೆ. ರೂಪಕ್ಕೆ ಯಾರೂ ಮರುಳಾಗುವದಿಲ್ಲ ಗಣಪ್ಪ ಹಣಮಪ್ಪನವರ ರೂಪು ಕುರೂಪವಾದರೂ ಅವರನ್ನು ಯಾರೂ ಪೂಜಿಸುವದನ್ನೇ ಬಿಡಲಿಲ್ಲ. ಆರ್ಯರು ದ್ರಾವಿಡ ಸಂಸ್ಕೃತಿಯ ಅವಹೇಳನ ಮಾಡಲು ಗಣಪ್ಪರನ್ನು ವಿಕೃತರೂಪದವರನ್ನಾಗಿ ಚಿತ್ರಿಸಿದರೂ ಯಾರೂ ಅವರ ಪೂಜೆಯನ್ನು ಬಿಡಲಿಲ್ಲೆಂದು ಅವರ ಒಳ್ಳೇ ಮಂಗಳಕರ ಗುಣಗಳ ಮಹತ್ವವನ್ನು ತೋರಿಸಿದ್ದಾರೆ. ಈ ನಿಬಂಧವು ಬರಹಗಾರರ ತೀಕ್ಷ್ಣ ವಿಚಾರಗಳನ್ನು ಸೂಚಿಸುವದು. ಇವರು ಇದಕ್ಕೆ ಮಾಡಿದ ಅರ್ಥವು ಬಹುವಿಚಿತ್ರ. ಆದರೂ ರಸಭರಿತವಾಗಿರುವದು. ನಾಲಿಗೆ ಒಳ್ಳೇದ ದರೆ ನಾಡೆಲ್ಲ ಒಳ್ಳೇದು ಮಾತಿನಲ್ಲಿ ಹಿತಾಹಿತವಿರುವದು. ಹೀಗೆ ಮಾತಿನ ಬಗೆಗೆ ಈ ನಿಬಂಧದಿಂದ ಕಲಿಯುವ ಪಾಡವನ್ನು ತೋರಿಸಿದ್ದಾರೆ ಇದರಲ್ಲಿ ಇವರ ವಿಷಯದ ಸಂಬಂಧೀಕರಣವನ್ನು ಮಾಡಿದ ರೀತಿಯು ಬಹುವಿಚಿತ್ರವಾಗಿದೆ. ಇದರಿಂದ ಇವರ ಬುದ್ಧಿಯ ಕುಶಲತೆಯನ್ನು ಪ್ರಕಟಪಡಿಸುವದು.

ಹಾಲುತೊರೆ:— ಈ ನಿಬಂಧವು ಆದ್ಯರ ವಚನಗಳ ಮಹಿಮೆಯನ್ನು ಬಹುವಾಗಿ ಒಂದು ವಿಚಿತ್ರ ಅಚಿತ್ರ ಅಗಾಧ ಆಶ್ಚರ್ಯ ರೀತಿಯಲ್ಲಿ ಬಣ್ಣಿಸಲಾಗಿದೆ. ಈ ನಿಬಂಧವನ್ನು ಮೂಲ ಪುಸ್ತಕದಲ್ಲಿ ಓದಿಯೇ ನಲಿಯಬೇಕು. ಅದನ್ನು ಬಣ್ಣಿಸಲಿಕ್ಕಾಗುವದಿಲ್ಲ. ಮೂಲದಲ್ಲಿ ಓದಿದಾಗ ಹೃದಯ ಅರಳವುವದು ಮುಖ ಕಳೇ ಏರುವದು ಕಿವಿ ಸೋಲುವದು, ಮನ ಕರಗುವದು, ಕಣ್ಣು

ಅರಳಿಸುವದು, ಭಾವಬೆಳೆಯುವದು, ಬಾಯಿತೆರೆಯುವದು, ದಂಗುವರಿಯುದು, ಅಗಾಧವಾಗುವದು, ಮೈ ನವಿರೇರುವದು ಭಕ್ತಿ ಹೊತಿಕೊಳ್ಳುವದು. ಶಿವ ಶರಣರ ಸಾಹಿಮೆ ಮೇಲ್ಮೆ ಮನದಟ್ಟಾಗುವದು. ಅದಕ್ಕಾಗಿ ಇದನ್ನು ಓದೇ ತೀರಬೇಕೆಂದು ವಿಧಿಸುವೆನು. ಬರಹದಲ್ಲಿಯ ಬೆಡಗನ್ನೂ ಸೌಷ್ಠವವನ್ನೂ ಬಣ್ಣಿಸಲಾಸಲ್ಲ.

ಸಕಲ ವೇದ ಉಟ ನಿಪತ್ತು ಶಾಸ್ತ್ರ, ಶ್ರುತಿ, ಸ್ಮೃತಿ ಪುರಾಣ, ಆಗಮ ಕಾವ್ಯ ಮೊದಲಾದ ಸಕಲಗ್ರಂಥಗಳಿಗಿಂತ ಆದ್ಯರ ವಚನಗಳು ಅತಿಶ್ರೇಷ್ಠ ವೆಂದು ಬಹು ಹೃದಯಂಗಮವಾಗಿ ವಚನಗಳ ಸಹಾಯದಿಂದ ಕಡಿದು ಸಿದ್ಧಾಂತವನ್ನು ತೆಗೆದಿದ್ದಾರೆ- ವಚನಗಳು ನವನೀತ. ಅದಕ್ಕಂತಲೇ ಅವು ಬಹು ಮೃದುವಾಗಿ ಕಂಪುದುಂಬಿ ಸಕ್ಕರೆಗಿಂತ ಸವಿಯಾಗಿ ಜೇನಿಗಿಂತ ಸೊಗ ಸಾಗಿ ಬೆಳಗುವವು. ಚಲುವು-ಒಲವು, ಕಂಪು-ಪೆಂಪು, ರುಚಿ ಶುಚಿ, ಹಳೆ-ಹೊಸ ಬಾಳು_ಬದಕು ಗದ್ಯ-ಪದ್ಯ ಎಲ್ಲವನ್ನೂ ಒಂದೊಂದು ವಚನ ದಲ್ಲಿಯೇ ಸಿವುಡುಗಟ್ಟಿದ್ದಾರೆ. ಹೆಪ್ಪುಗೊಳಿಸಿದ್ದಾರೆಂದು ಬರಹಗಾರರು ಅವು ಗಳನ್ನು ಬಣ್ಣಿಸಿದ್ದು ಒಳ್ಳೇದೆ ಆಗಿದೆ ವಚನಗಳನ್ನು ಚಿತ್ರಿಸಿದಕುಂಚು, ಕೆತ್ತಿ ದಸಲಾಕೆ, ಬಾಜಿದ ತಂಬೂರಿ ಒಕ್ಕಣಿಸಿದ ಲೆಕ್ಕಣಿಕೆ, ಈ ಲೋಕದಲ್ಲಿ ಅವು ದೇವಲೋಕದವು. ಅಂದರೆ ವಚನಕಾರರು ಆತ್ಮದರ್ಶನ ಪಡೆದ ರಸಋಷಿ ಕವಿ ಯಾಗಿದ್ದರೆಂದು ಹೇಳಿದ್ದು ಬಹುಸಮಂಜಸವಾಗಿದೆ. ಮೊದಲು ಋಷಿ ಯಾಗಬೇಕು,ಅಂದರೆ ಉಳಿದೆಲ್ಲವೂ ರುಚಿಯಾಗಿ ಸವಿಯಾಗಿ ಹೊರಬೀಳುವದು.

ವಚನಗಳಲ್ಲಿ ಭಕ್ತಿರಸದ ನವರಸಗಳನ್ನು ಇವರು ಕಂಡುಹಿಡಿದದ್ದು ಒಂದು ಅತಿ ಚೋದ್ಯವೇ ಸರಿ. (೧) ಭಕ್ತಿಮಿಶ್ರಿತ ವೀರ ರಸ (೨) ಭಕ್ತಿ ಸಂಕಲಿತ ಕರುಣಾರಸ (೩) ಭಕ್ತಿಯು ಶೃಂಗಾರ ರಸದಿಂದ ಸಂಯುಮ ಮಾಡುವದು. ಹೀಗೆ ನವರಸರಗಳುಂಟೆಂದು ಲೇಖಕರು ಹೊಸಬಗೆಯ ರಸ ಗಳನ್ನು ವಾಚಕರಿಗೆ ಉಣಿಸಿದ್ದಾರೆ. ವಚನಗಳ ಗುರಿ ಆತ್ಮಾನಂದ, ದಾರಿ ಭಕ್ತಿರಸ, ಮಟ್ಟು ಅನುಭವ, ವಚನಕಾವ್ಯ, ಕಾವ್ಯದ ಪ್ರತಿಭೆ, ತುಳುಕಾಡುವ ರಸ, ಎಡೆಯಾಡುವ ಭಾವ, ತುಂಬಿದ ಅಲಂಕಾರ, ರೂಪಿತಛಂದಸ್ಸು, ಇವು ಗಳಿಂದ ವಚನಗಳನ್ನು ಹೆಣೆದಿದ್ದಾರೆಂದು ಕವಿಯ ಭಾಷೆಯುಲ್ಲಿ ಹೇಳಿದ್ದಾರೆ. ವಚನಗಳು ಅತ್ಮಾನಂದವನ್ನು ಕೊಡುವ ಅಮೃತರಸದಿಂದ ತುಂಬಿದ ಅಮೃತ ವಾಣಿಯೆಂದು ಹೇಳಿದ್ದು ಬಹು ಸಮಂಜಸವಾಗಿದೆ. ಒಟ್ಟಿನಲ್ಲಿ ವಚನಗಳು

ಕನ್ನಡದ ಸಿರಿ ಕನ್ನಡದ ಸೊದೆ ಕನ್ನಡದ ತಿರುಳು ಕನ್ನಡದ ಬಾಳು ಬದುಕು ಕನ್ನಡದ ಸರ್ವಸ್ವವೆಂದು ಲೌಕಿಕರು ನುಡಿದುದು ಒಳ್ಳೇ ಸಾರ್ಥಕವೆಂದೇ ಹೇಳಬೇಕು. ಅವಶ್ಯ ಈ ನಿಬಂಧಗಳನ್ನು ಸಕಲರೂ ಓದಿ ನಲಿಯಬೇಕು.

ಕುಂಬಳಕಾಯಿ:— ಹಾಡುವವರಿಗೆ, ಬಾರಿಸುವವರಿಗೆ, ಕೈವಲ್ಯಗಾರರಿಗೆ, ದಾಸರಿಗೆ ಸರಸ್ವತಿಗೆ ಗಾನಗಾರರಿಗೆ ಬೇಡಿಕೊಳ್ಳುವವರಿಗೆ ಸಾಧು ಸನ್ಯಾಸಿಗಳಿಗೆ ಈಸುವವರಿಗೆ ಇನ್ನೂ ಅನೇಕರಿಗೆ ಕುಂಬಳಕಾಯಿಯ ಅವಶ್ಯಕತೆ ಇಂದ ಲೇಖಕರು ಅದರ ಸಮಗ್ರಕತೆಯನ್ನೇ ಹೇಳಿದ್ದಾರೆ. ಈ ಕಾಯಿಂದಾದ ಒಗಟವನ್ನು ಒಗಟಿನಲ್ಲಿಯೇ ಹೇಳಿದ್ದಾನೆ. ಕುಂಬಳಕಾಯಿಯು ಊಟಕ್ಕೆ, ಪಲ್ಲೆಗೆ ಔಷಧಕ್ಕೆ ಪುಷ್ಟಿಗೆ ಬೇಕಾಗುವದೆಂದು ಅದು ಬಹುದಿನ ಬಾಳುವದು. ಕಬ್ಬಿನದ ಕಟ್ಟು ಹಾಕಿದರೆ ಮಾತ್ರ ಕೊಳೆಯುವದು. ಕುಂಬಳ ಬಳ್ಳಿಗೆ ಮಾನವನ ಕರ್ಮಲತೆಗೆ ಹೋಲಿಕೆ ಕೊಟ್ಟದ್ದು ಸಮಂಜಸವಾಗಿದೆ. ಕುಂಬಳ ಬೀಜಗಳು ಅಸಂಖ್ಯ ಭವಬೀಜಗಳನ್ನತಕ್ಕೊಂಡೇ ಬಂದಿರುವನು. ಮನುಷ್ಯನ ಶರೀರವು ಕುಂಬಳ ಕಾಯಿಗಿಂತಲೂ ಕೀಳ. ಸತ್ತಮೊಲದ ಶರೀರಕಿಂತಲೂ ಕರಕಷ್ಟ ಎಂದು ಹೇಳಿದ್ದನ್ನು ಎತ್ತಿ ಹಿಡಿದಿದ್ದಾರೆ. ಕುಂಬಳಕಾಯಿಯಂಥ ಆಳಿಮನದ ಮಾನವನಿಗೆ ಶಿವದೀಕ್ಷೆ ಸಲುವದೇ ಇಲ್ಲೆಂದು ನಿಷ್ಠುರವಾಗಿ ಬೆಡಗಿನಿಂದ ವಚನಕಾರರಂತೆ ಸಿದ್ಧಮಾಡಿ ವೇದ್ಯವಾಗುವಂತೆ ಚಿತ್ರಿಸಿದ್ದಾರೆ. ಬೇರೆ ಬೇರೆ ವಚನಗಳ ಆಧಾರದಿಂದ ಬಗೆದುಂಬುವಂತೆ ಮನ ಮೆಚ್ಚುವಂತೆ ಬರೆದಿದ್ದಾರೆ.

ಒಟ್ಟಿನಲ್ಲಿ ಈ ನವರತ್ನ ಮಾಲೆಯು ಬಹು ಸೊಗಸಾಗಿದೆ. ಕನ್ನಡನುಡಿಗಳಿಗೆ ಹೊಸತನ ತಂದಿದ್ದಾರೆ. ಕಥೆಗಳ ಜೋಡಣೆಯೊಂದಿಗೆ ಕಾವ್ಯಮಯ ನಿಬಂಧಗಳನ್ನು ಹೆಣೆದಿದ್ದಾರೆ. ಭಾಷೆಯಲ್ಲಿ ಬೆಡಗು ತುಂಬಿದೆ ಭಾವನೆಗಳು ತೆರೆತೆರೆಯಾಗಿ ಎದ್ದುಬರುವವು. ದೃಷ್ಟಾಂತ ಹಿತೋಪದೇಶಗಳ ನವೀನತೆ ಎಲ್ಲ ಕಡೆಗೂ ಹೊರಸೂಸುತಿದೆ. ಭಾಷೆಯಲ್ಲಿ ಉದಾತ್ತಭಾವ ಉನ್ನತಕಲ್ಪನೆ ಉಲ್ಲಾಸಕರವಾದ ನುಡಿಯಲ್ಲಿ ಸಹಜವಾದ ರಮ್ಯಗಮ್ಯವಾದ ರೀತಿಯಲ್ಲಿ ಬರೆದಿದ್ದಾರೆ. ಉಚ್ಚಸಾಹಿತ್ಯವನ್ನು ಸರಿಗಟ್ಟಿ ಸೈಗುಟವಂತೆ ಹೇಳುವ ಸೊಗಸು ಇದೆ. ಸರಸದ ವಿಷಯವನ್ನು ವಿರಸಾಗದಂತೆ ಬಲುಸರಸಾಗಿ ಸೂರೆಗೊಳಿಸಿದ್ದಾರೆ. ವಿಷಯಗಳನ್ನು ಒಳ್ಳೇ ಸ್ಫೂರ್ತಿಯಿಂದ ಮೂರ್ತಗೊಳಿಸಿದ್ದಾರೆ. ಈ ಬರಹಗಳು ಕನ್ನಡದ ಕೆಚ್ಚನ್ನು ಕುದರಿಸುತ್ತವೆ. ವಚನಗಳಿಗೆ ಅರ್ಥ ಮಾಡಬೇಕು, ಬರೆಯಬೇಕು; ಹೇಳಬೇಕೆನ್ನುವರು ಸ್ವಾಮಿಗಳ ಈ ಕೃತಿಯನ್ನು ಮೊದಲು ಓದಬೇಕು. ಅಂದರೆ ಅದರ ಸ್ವಾರಸ್ಯ ಹೊಳೆಯುವದು.

ಈ ಹೊತ್ತಿಗೆಯನ್ನು ಎಸ್. ಎಸ್. ಸಿ. ಪರೀಕ್ಷೆಗೆ ಟೆಕ್ಸಬುಕ್ಕನ್ನಾಗಿ ಮಂಜೂರಮಾಡಿದರೆ ವಿದ್ಯಾರ್ಥಿಗಳಿಗೆ ಭಾಷೆಯ ಬೆಡಗು ಅಧ್ಯಾತ್ಮದ ತಿರಳು ಭಕ್ತಿಯರಸ ಕಾವ್ಯವಾಣಿ ವಿಚಾರಸರಣಿ ವಚನಗಳ ಅರ್ಥ ಶೈಲಿಯ ಮಾಧುರ್ಯ ಮೊದಲಾದವುಗಳು ಸಹಜ ತಿಳಿಯುವವೆಂಬುದರಲ್ಲಿ ಏನೂ ಸಂದೇಹವಿಲ್ಲ.

ಶ್ರೀ ಮಹಾಸ್ವಾಮಿಗಳು ಅನೇಕ ಕೃತಿಗಳನ್ನು ಹೊಸತನದಿಂದಲೇ ರಚಿಸಿದ್ದಾರೆ. ಅಲ್ಲದೆ ಅನೇಕ ವಚನಗಳನ್ನು ರಗಳೆಗಳನ್ನೂ ಕಾವ್ಯಗಳನ್ನೂ ನಾಟಕಗಳನ್ನೂ ರಚಿಸಿದ್ದಲ್ಲದೆ ಸಂಸ್ಕೃತ ಗ್ರಂಥಗಳನ್ನು ಒಳ್ಳೇ ಕನ್ನಡಕ್ಕೆ ರೂಪಿಸಿದ್ದಾರೆ. ಸ್ವಾಮಿಗಳಲ್ಲಿ ಸಾಹಿತಿಗಳಲ್ಲಿ ಕವಿಗಳು ಲೇಖಕರು ಗ್ರಂಥಕಾರರು ಇರುವದು ಅತಿವಿರಳ. ಅದರಲ್ಲಿ ಪಂಚ ಸಿಂಹಾಸನದ ಶಾಖೆಯವರು ವಚನಗಳು ಶರಣರು ಬಸವಣ್ಣ ಅಕ್ಕಮಹಾದೇವಿ ಕಲ್ಯಾಣ ಎಂದರೆ ಶಾಂತಂ ಪಾಪಂ ಎಂದು ಕಿವಿಬಾಯಿ ಮುಚ್ಚಿಕೊಂಡು ಇವುಗಳ ವಿರುದ್ಧ ದಂಗೆಗಳನ್ನೇ ಎಬ್ಬಿಸುವರು. ಆದರೆ ಈ ಮಹಾಸ್ವಾಮಿಗಳು ಸಮತಾ ದೃಷ್ಟಿಯಿಂದ ಸರಿಯಾದದ್ದನ್ನೇ ಬರೆಯುತ್ತಿರುವದು ಇವರಿಗೆ ಒಳ್ಳೇ ಭೂಷಣವಾಗಿದೆ. ಇದು ನಮಗೆ ಅತೀವ ಹೆಮ್ಮೆಯ ವಿಷಯವೂ ಆಗಿದೆ. ಅವರು ಅನೇಕ ವಚನಗಳಿಗೆ ಶರಣರಿಗೆ ಸಂಬಂಧಿಸಿದ ಗ್ರಂಥಗಳನ್ನೂ ರಚಿಸಿ ವೀರಶೈವರನ್ನು ಅದೇಕೆ ಕನ್ನಡಿಗಳನ್ನು ಅಲ್ಲದೆ ದೇಶವನ್ನೇ ಜಾಗ್ರತಗೊಳಿಸುವರೆಂದು ನಾವು ಹಾರೈಸುವೆವು. ಅಲ್ಲದೆ ಪಟ್ಟವಿರಕ್ತರೆಂಬ ಭೇದವನ್ನೂ ಜಗಳವನ್ನೂ ಸಮೂಲ ನಾಶಮಾಡಿ ಧರ್ಮದಲ್ಲಿ ಎಲ್ಲರಿಗೂ ಸರಿಸಮಾನ ಹಕ್ಕಿರುವದೆಂದು ನೆಲೆಗೊಳಿಸಿದರೆ ಸಾಕೆಂದು ಬೇಡಿಕೊಳ್ಳುವೆವು. ನಮ್ಮಲ್ಲಿ ಎಲ್ಲರೂ ಶಾಂತರಾಗಿ ನೀತಿಯಿಂದ ನಡೆದು ನಾಡನ್ನು ಬೆಳಗುವಂತಾಗಬೇಕೆಂದು ಬೇಡಿಕೊಂಡು ಈ ಲೇಖವನ್ನು ಮುಗಿಸುವೆನು.

---

# ಪಂಚ ಮಹಾ ಪಾಪಗಳು

(ಲೇಖಕರುಃ- ಶ್ರೀ ಅ. ಮ. ಪಾಟೀಲ ಬಿ. ಎ, ಎಲ್. ಎಸ್. ಜಿ. ಡಿ.
ಮಾಧ್ಯಮಿಕ ಶಾಲಾ ಶಿಕ್ಷಕ ಗದಗ.)



ಸಾಮಾನ್ಯವಾಗಿ ಮನುಷ್ಯನು ಫಲಾಪೇಕ್ಷೆಯಿಂದ ಕಾರ್ಯಗಳನ್ನು ಮಾಡುತ್ತಾನೆ. ಅದರಿಂದ ಉತ್ತಮ ಕಾರ್ಯದಿಂದ ಪುಣ್ಯವೂ, ದುಷ್ಟ ಕಾರ್ಯದಿಂದ ಪಾಪವೂ ಸಂಭವಿಸುವದೆಂದು ಆಸ್ತಿಕರು ನಂಬುವರು. "ಪರೋಪಕಾರಂ ಪುಣ್ಯಾಯ ಪಾಪಾಯ ಪರಪೀಡನಂ" ಎಂದು ಶ್ಲೋಕಾರ್ಧದಲ್ಲಿ ವ್ಯಾಸರು ಪುಣ್ಯ ಪಾಪಗಳ ಲಕ್ಷಣಗಳನ್ನು ಹೇಳಿರುವರು. ಅಂದರೆ ಪರರಿಗೆ ಸಂತೋಷವನ್ನುಂಟುಮಾಡುವದೇ ಪುಣ್ಯವು. ಪರರನ್ನು ಪೀಡಿಸುವದೇ ಪಾಪವು. ಈ ಪುಣ್ಯ ಪಾಪಗಳಿಂದ ಸ್ವರ್ಗ ನರಕಗಳುಂಟು ಸ್ವರ್ಗದಲ್ಲಿ ನಿತ್ಯ ಸುಖವೂ, ನರಕದಲ್ಲಿ ಸದಾ ದುಃಖವೂ ಎಂದು ನಂಬಲಾಗಿದೆ.

ವೀರಶೈವರು ಜಗತ್ತನ್ನೇ ಶಿವಮಯವೆಂದು ಭಾವಿಸುವದರಿಂದ ಇವರು ಶಿವನಾಗಿ ಕಾರ್ಯವನ್ನು ಮಾಡುವರು. ಇವರಿಗೆ ಪರರೆಂಬುವವರಿಲ್ಲ. ಆದ್ದರಿಂದ ಪುಣ್ಯ ಪಾಪಗಳೂ, ಸ್ವರ್ಗ ನರಕಗಳೂ ಇಲ್ಲ. "ಪರಾರ್ತನ್ನವರಾರ್ವೇಚಿಸೆ ನಿಜಸ್ತ್ರೀಪುತ್ರ ಮಿತ್ರರ್ ಸ್ವಕೀ। ಯರೆ ಮಿಕ್ಕಾದವನ್ಯರೇ ತನಗೆ ನಾವೇಂಬೆ ವಿತ್ತರ್ಪವಮೂ। ಖರನಯ್ಯೋ ಸ್ವಪಕಾದಿಕಂ ಗುರುಮತಂ ದೇಹಾದಿ ತಾನನ್ಯಮೆಂ। ದಿರೆ ಮತ್ತಿನ್ನುಳಿದರ್ಗೆ ಪೇಳ್ವ ಕಥೆಯಂ ನೋಡಾ ಶಿವಾವಲ್ಲಭ" ಎಂದು ಮೊಗ್ಗೆಯ ಮಾಯಿದೇವ ಶಿವಯೋಗಿಗಳು ಶತಕತ್ರಯದಲ್ಲಿ ಹೇಳಿರುವರು. ದೇಹವೇ ತಾನಲ್ಲವಾಗಿ ಅದಕ್ಕೆ ಸಂಬಂಧಿಸಿದ ಹೆಂಡರು ಮಕ್ಕಳು ಪರರಾದರು. ಅಂದ ಬಳಿಕ ರಕ್ತಬಂಧುಗಳಲ್ಲದವರಿಗೆ ಮಾತ್ರ ಪರರೆಂದು ಹೇಳುವದು ಸರಿಗಾಣದು. ಹೀಗಿರಲು ವೀರಶೈವರು ಸ್ವಧರ್ಮೀಯರಲ್ಲಿಯೇ ಕೆಲವರನ್ನು (ರಕ್ತಬಂಧುಗಳನ್ನು) ತಮ್ಮವರೆಂದು ತಿಳಿದು ಅವರಿಗೇ ಎಲ್ಲ ಅನುಕೂಲತೆಗಳನ್ನು ಧಾರ್ಮಿಕ ಅನುಕೂಲತೆಗಳನ್ನೂ ಸಹ ಒದಗಿಸಿ, ಇತರರಿಗೆ ಅವು ಸಲ್ಲವೆಂದು ಹೇಳುವದು ಎಂಥ ದೋಷಯುಕ್ತ ನಡತೆ

ಯೆಂಬುದನ್ನು ಊಹಿಸಲಸಾಧ್ಯ !! ಈ ದೋಷಕ್ಕೆ ಗುರುಜಂಗಮರೂ ಪಂಡಿತರೂ ತುತ್ತಾಗಿ ಶಿವಕೃಪೆಗೆ ದೂರಾಗಿ ಸಮಾಜದ ಶಾಪಕ್ಕೀಡಾಗು ವದು ಶೋಚನೀಯ.

"ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ" ಎಂದು ಶಾಸ್ತ್ರವಿರುವದ ರಿಂದ ಪುಣ್ಯದಿಂದ ಸ್ವರ್ಗಸುಖವನ್ನು ಬಹುಕಾಲ ಭೋಗಿಸಿ ತದನಂತರ ಈ ಸಾವು ಕೊಡುವ ಲೋಕಕ್ಕೆ ಬರಬೇಕಾದುದರಿಂದ ಆಗ ಜೀವಿಗೆ ಮಹಾ ದುಃಖವಾಗುವದು ಸಹಜವದೆ. ಒಬ್ಬ ಮಹಾ ಶ್ರೀಮಂತನು ದಿವಾಳಿಯಾಗಿ ದರಿದ್ರನಾದರೆ ಅವನಿಗಾಗುವ ಅಸಹನೀಯ ದುಃಖವೇ ಈ ಪುಣ್ಯವಂತನಿಗೂ ಆಗುವದು. ಆದ್ದರಿಂದಲೇ ಬಲ್ಲವರು ಪುಣ್ಯವನ್ನೂ ಕೂಡ ಪಾಪವೆಂದೇ ತಿಳಿಯುವರು. ಆದಕ್ಕಾಗಿ ಈ ಗೊಂದಲಕ್ಕೇ ಹೋಗದೆ "ಶಿವನೆ ಶಿವಾಚನ್ವಿ ಕರತನಾಗಿರಲೋಸುಗ ಮಾಟಲೋಗದಿಂದವತರಿಸಿದ'' ಶಿವಭಕ್ತನು ಲೀಲೆ ಯಿಂದ ಶಿವಕಾರ್ಯವನ್ನೆಸಗಿ ಎಂದೂ ತೊಲಗದ ನಿತ್ಯಾನಂದದಲ್ಲಿರುವನು. ಎಲ್ಲರನ್ನೂ ತನ್ನಂತೆ ಭಾವಿಸುವ ಧರ್ಮಜೀವಿಯಾದ ವೀರಶೈವನಿಗೆ ಪಾಪವು ಹತ್ತರ ಸುಳಿಯದು. "ತನ್ನಂತೆ ಪರರ ಬಗೆದೊಡೆ ಕೈಲಾಸ ಬಿನ್ನಣವಕ್ಕು ಸರ್ವಜ್ಞ.''

ಇದೆಲ್ಲ ಆದರ್ಶ ವೀರಶೈವನ ಮತಾಯಿತು. ಆದರೆ ವಸ್ತುಸ್ಥಿತಿಯು ವಿಪರೀತವಿದ್ದದ್ದು ಕಂಡು ವಿಫಲ ವ್ಯಸನಪಡುವಂತಿದೆ. ಸಮಾಜದ ಧುರೀ ಣರೆನಿಸುವವರೇ ಮಾರ್ಗದಪ್ಪಿದ ಬಳಿಕ ಉಳಿದವರ ಪಾಡೇನು ? ಕೇವಲ ಪಾಪಗಳಲ್ಲ, ಆದರೆ ಪಂಚ ಮಹಾ ಪಾಪಗಳೂ ಸಮಾಜದಲ್ಲಿ ಎದ್ದು ಕಾಣು ತ್ತವೆ. ಅವು ಯಾವವು ಅವುಗಳ ಲಕ್ಷಣಗಳೇನೆಂಬುದನ್ನು ಮಹಾ ಮೇಧಾ ವಿಗಳಾದ ಕಾಕಾ ಕಾಲೇಲಕರರು "ಸಮಾಜದ ಪ್ರಗತಿಗೆ ಅಡ್ಡಬರುವದೂ ಕೊಲೆಸುಲಿಗೆಗಳಷ್ಟೇ ದೊಡ್ಡ ಪಾಪ'' ಎಂಬ ವಿಷಯವನ್ನು ಚರ್ಚಿಸುತ ಹೀಗೆ ಬರೆದಿರುವರು—"೧. ಭಯಭೀತ ಸ್ಥಿತಿಯಲ್ಲಿರುವದು. ೨. ಅನ್ಯಾಯ ಸಹಿಸುವದು. ೩. ನೆರೆಯವನ ಮೇಲಾಗುವ ಅನ್ಯಾಯವನ್ನು ಸುಮ್ಮನೆ ನೋಡುತ್ತಿರುವದು. ೪. ಆಲಸ್ಯಮಯ ಜೀವನವನ್ನು ಕಳೆಯುವದು. ೫. ಅಜ್ಞಾನವನ್ನು ದೂರಗೊಳಿಸುವ ಪ್ರಯತ್ನ ಮಾಡದಿರುವದು ಇವು ಪಂಚ ಮಹಾ ಪಾಪಗಳು.'' ('ಪ್ರಪಂಚ' ೫-೧೦-೧೯೫೫) ಆಳವಾಗಿ ವಿಚಾರಿಸಿದಲ್ಲಿ ಈ ಐದೂ ದೋಷಗಳು ಹೆಚ್ಚುಕಡಿಮೆ ಪ್ರಮಾಣದಲ್ಲಿ ನಮ್ಮ ಸಮಾಜದಲ್ಲಿ ಕಂಡುಬರದಿರವು.

'ಗುರುಕರಜಾತರು ನಮ್ಮವರು' ಎಂದ ಘನಮಠೇಶರು ಬೋಧಿಸಿದ್ದರೂ ಅಂಗದ ಮೇಲೆ ಲಿಂಗವಿದ್ದವರನ್ನು ಸಂಗಯ್ಯನೆಂದು ಕಾಣುವ ಬದಲು ತಮ್ಮ ತಮ್ಮ ಕಾಲ್ಪನಿಕ ವರ್ಗದವರನ್ನುಳಿದು ಉಳಿದವರನ್ನು ತಿರಸ್ಕಾರದಿಂದ ಭಯ ಭೀತಿಯಿಂದ ಕಾಣುವ ಕಾಲ ಬಂದಿದೆ. ಸರ್ವರಿಗೂ ಸಮಾನವಾಗಿರುವ ಹಕ್ಕುಬಾಧ್ಯತೆಗಳು ಸ್ವಾರ್ಥಿಗಳಿಂದ ತುಳಿಯಲ್ಪಡುತ್ತಿದ್ದರೂ ಮುಗ್ಧ ಭಕ್ತರು ಸಹಿಸುತ್ತಿರುವರು. ಇಷ್ಟೇ ಅಲ್ಲ, ಆ ಸ್ವಾರ್ಥಿಗಳೇ ತಮ್ಮ ಹಿತಸಾಧಕರೆಂದು ನಂಬಿ ಹೆಚ್ಚಾಗಿ ಹಾಗು ಅನಧಿಕೃತವಾಗಿ ಅವರನ್ನು ಆರಾಧಿಸುತ್ತಿರುವರು. ತಮ್ಮ ಹಿತಕ್ಕೆ ಯತ್ನಿಸುವವರಾರು, ಅಹಿತಕ್ಕೆ ಯತ್ನಿಸುವವರಾರೆಂಬ ಸಾರಾ ಸಾರ ವಿಚಾರವನ್ನು ಕಳೆದುಕೊಂಡಿರುವರು. "ಹರಿಕೆಗೆಂದು ತಂದ ಕುರಿ ತಾ ನರಿಯದಕಟಾ ಕೊಲುವರೆಂಬುದ। ಹರುಷದಿಂದಲಿ ತಳಿರ ಮೆಲುವದು ತೋರಣಕೆ ತಂದ ॥ ನರಕುರಿಗಳದರಂತೆ ತನುಗಹ" ದುರಿತವನ್ನು ತಾವರಿಯು ಲೆಂದು ಅನುಭವಾಮೃತಕಾರರು ಹೇಳಿದ್ದು ಇಲ್ಲಿ ನೆನಪಾಗುವದು.

ಮೂರನೆಯ ದೋಷವೆಂದರೆ ನೆರೆಯವರ ಮೇಲಾಗುವ ಅನ್ಯಾಯ ವನ್ನು ಸುಮ್ಮನೆ ನೋಡುತ್ತಿರುವದು ಇದಂತೂ ನಮ್ಮ ಸಮಾಜದಲ್ಲಿ ಮೈ ಉಂಡುಬಿಟ್ಟದೆ. ಅದರಿಂದ ಇದಕ್ಕೆ ಸಮಾಜವೆಂದು ಏಕೆ ಕರೆಯಬೇಕೆಂಬ ಸಂದೇಹ ಬರುವಂತಿದೆ. ಭಕ್ತರಿಗೆ ಸಮಾನ ಧಾರ್ಮಿಕ ವಿದ್ಯೆ ಹಾಗು ಧರ್ಮ ಪೀಠಗಳು ಲಭಿಸಕೂಡದೆಂದು ಬಹುದಿನಗಳಿಂದ ವೈಯಕ್ತಿಕವಾಗಿ ಹಾಗು ಸಂಘ ಸಂಸ್ಥೆಗಳನ್ನು ಕಟ್ಟಿ ಸುಸಜ್ಜಿತವಾಗಿ ಅನ್ಯಾಯ ಪರಂಪರೆ ನಡೆಯುತ್ತಿದ್ದರೂ ಅಪವಾದಾತ್ಮಕವಾಗಿ ಒಬ್ಬಿಬ್ಬರನ್ನು ಬಿಟ್ಟು ಯಾರೂ ಪ್ರತಿಭಟನಾತ್ಮಕವಾಗಿ ಬರೆದದ್ದು ಹಾಗು ಮಾತಾಡಿದ್ದು ತಿಳಿದು ಬಂದಿಲ್ಲ. ಕಾರ್ಯ ಮಾಡುವದಂತೂ ದೂರವೇ. "ವೀರಶೈವರೆಲ್ಲರೂ ಸಮಾನರು; ಸಹೋದರರು. ಅವರು ತಮ್ಮಲ್ಲಿ ಮೇಲು ಕೀಳೆಂಬ ಹಟವನ್ನು ಚಟವನ್ನು ಬಿಡಬೇಕು." ಎಂದು ಒಮ್ಮೆ ಮಾತಾಡಿದವರು ಬೇರೊಂದು ಪ್ರಸಂಗದಲ್ಲಿ ಅವರೇ "ಭಕ್ತರದೊಂದು ಜಾತಿಯುಂಟು. ಅವರಿಗೆ ಎಲ್ಲ ಸಂಸ್ಕಾರಗಳಿದ್ದರೂ ಗುರು ಜಂಗಮರಾಗರು." ಎಂದು ತಾವು ಬಿಡಲು ಹೇಳಿದ್ದ ಹಟಚಟವನ್ನೇ ತಾಳಿರುವರು. ಇಂಥ ಪರೋಪದೇಶ ಪಾಂಡಿತ್ಯವುಳ್ಳವರೇ ಅಲ್ಲಲ್ಲಿ ಸಭೆಗಳ ಅಧ್ಯಕ್ಷರಾಗಿ ಕಾರ್ಯ ಮಾಡುವರು. ಇದು ನಾಟಕವೆನ್ನಿಸದೇ? ಇಂಥ ವರಿಗೇ ಅಲ್ಲಸಲ್ಲದ ಉಪಾಧಿಗಳಿಂದ ಬಹುಜನರ ವಿರೋಧವನ್ನು ಲೆಕ್ಕಿಸದೆ ಗೌರವಿಸುವವರೂ ಉಂಟು.

ಆಲಸ್ಯಮಯ ಜೀವನವೆಂಬ ನಾಲ್ಕನೆಯ ದೋಷವೂ ಸಾಕಷ್ಟಿದೆ. ಧರ್ಮ ಕಾರ್ಯವನ್ನು ತಮ್ಮ ಮುಖ್ಯ ಕಾರ್ಯಕ್ಷೇತ್ರವಾಗಿ ಆರಿಸಿಕೊಂಡ ವರು ಅದನ್ನು ಅಲಕ್ಷಿಸಿ ಗೌಣ ಕಾರ್ಯವನ್ನೇ ಜನಮೆಚ್ಚಿಕೆಗಾಗಿ ಅಲ್ಪ ಸ್ವಲ್ಪ ಮಾಡುವದುಂಟು. ಶಿವಾನುಭವವನ್ನು ಆಳವಾಗಿ ಅಭ್ಯಸಿಸಿ ಆಚರ ಣದಲ್ಲಿ ತಂದು ಶಿಷ್ಯರಿಗೆಲ್ಲ ಸಮವಾಗಿ ಬೋಧಿಸಿ ಅವರ ಸಂಶಯ ನಿವಾರಣ ಮಾಡುವದು ಪ್ರತಿಯೊಬ್ಬರ ಮುಖ್ಯ ಕಾರ್ಯವಾಗಿದ್ದರೂ ಈಗ ತಮ್ಮ ಕಾರ್ಯದಲ್ಲಿ ಪಾರಂಗತರಾದವರೇ ಕಾಣದಾಗಿರುವರು. ಆದ್ದ ರಿಂದ ಅನಾಯಕತ್ವವಾಗಿ ಹಲವರು ಹಲವು ತರದಿಂದ ಶಿವಾನುಭವದ ವಿರುದ್ಧ ಬರೆಯುವದೂ ಆಚರಿಸುವದೂ ಕಂಡುಬರುವದು. ಸಮನ್ವಯ ಗೊಳಿಸಿ ಸಮಾಧಾನ ಮಾಡುವ ಸಮರ್ಥರೇ ಇಲ್ಲ. "ಶಿವಾನುಭವ"ಮಾಸಿಕ ದಲ್ಲಿ ಪ್ರತಿ ಜಿಲ್ಲೆಗೆ ೪-೬ ಶಿವಾನುಭವ ಪಾಠಶಾಲೆಗಳಾಗಬೇಕು. ಆದರೆ ಅದರಲ್ಲಿ ಯಾರಿಗೂ ಆಸಕ್ತಿಯಿಲ್ಲವೆಂದು ಸಂಪಾದಕರು ಮಿಡುಕಿರುವರು. ಕೇಳುವವರಾರು ? ಮನಸ್ಸಿಗೆ ಹಚ್ಚಿಕೊಳ್ಳುವವರಾರು ? ಕಾಶಿಯಲ್ಲಿ ಕಲಿತ ವರು ಶೈವರೂಢಿಗಳನ್ನೇ ಅಲ್ಲಿ ಕಲಿತು ಇಲ್ಲಿ ಪಸರಿಸಿ ಸಮಾಜಕ್ಕೆ ಹಾನಿ ಮಾಡುತ್ತಿರುವರೆಂದೂ ಬರೆದಿರುವರು. ಇದೂ ಸತ್ಯ. ಈ ಪಂಡಿತರಿಂದಲೇ ಅನೇಕ ಕಡೆ ಮೂರ್ತಿ ಸ್ಥಾಪನೆಗೆ ಬೆಂಬಲ ಸಿಕ್ಕಿದೆ. ವೀರಶೈವರೆಂದರೆ ಮೂರ್ತಿಪೂಜಕರೆಂದು ಬೇರೊಬ್ಬರು ಲಕ್ಷ ಮಾಡುವಷ್ಟು ಮೂರ್ತಿಗಳೂ, ಗುಡಿ ಗುಂಡಾರಗಳೂ ಆಗಹತ್ತಿವೆ. ಮಾಡತಕ್ಕ ಕಾರ್ಯದಲ್ಲಿ ಆಲಸ್ಯವೂ, ಮಾಡಬಾರದ ಕಾರ್ಯದಲ್ಲಿ ಉತ್ಸಾಹವೂ ಯಾವ ನ್ಯಾಯ ?

ಅಜ್ಞಾನವನ್ನು ದೂರಗೊಳಿಸಲು ಯತ್ನಿಸದಿರುವದು ಐದನೆಯದೂ ಕೊನೆಯದೂ ಎಲ್ಲಕ್ಕೂ ಹೆಚ್ಚಿನದೂ ಆದ ಮಹಾಪಾಪವೇ ಸರಿ. ಅಜ್ಞಾನವನ್ನು ದೂರಮಾಡಿ ಸುಜ್ಞಾನವನ್ನುಂಟು ಮಾಡುವದರಿಂದಲೇ ಒಬ್ಬನು ಗುರುವೆಂದೆನಿ ಸುವನು. ದೃಷ್ಟಾಂತೋ ನೈವ ದೃಷ್ಟಸ್ತ್ರಿಭುವನ ಜನರೇ ಸದ್ಗುರೋರ್ಜ್ಞಾನ ದಾತು" ಎಂದು ಶಂಕರಾಚಾರ್ಯರು ಜ್ಞಾನವನ್ನು ಕೊಡುವ ಸದ್ಗುರುವಿಗೆ ಸಮಾನರರೂ ಇಲ್ಲವೆಂದು ಬೋಧಿಸಿರುವರು. ಆದರೆ ಜ್ಞಾನ ಪ್ರಚಾರ ಮಾಡುವದೊತ್ತಟ್ಟಿಗುಳಿದು ಜ್ಞಾನಕ್ಕೆ ಪ್ರತಿಬಂಧ ಒಡ್ಡುವ ಹಾಗು ಜ್ಞಾನದಲ್ಲಿ ಪಕ್ಷಪಾತ ಮಾಡುವವರೂ ಒಂದು ಸಮಾಜದಲ್ಲಿದ್ದು ಗುರುಗಳೆಂದು ಹೇಳಿಸಿ ಕೊಳ್ಳುತ್ತಿದ್ದರೆ ಇದಕ್ಕಿಂತ ಆಶ್ಚರ್ಯವಿನ್ನಾವುದು ? ಇಂಥ ಆಶ್ಚರ್ಯವು ನಮ್ಮ ಸಮಾಜದಲ್ಲಿ ಉಂಟು. ಹಿಂದಕ್ಕೆ ಆದ ಸಂಗತಿಗಳನ್ನು ಬಿಟ್ಟರೂ

ಈಗೀಗ ದಿ. ೨೩-೧-೫೬ರ ಪಂಚಾಚಾರ್ಯ ಪ್ರಭೆಯನ್ನು ಓದಿದರೆ ಇಂತಹ ಬಿಸಿಬಿಸಿ ಉದಾಹರಣೆ ಸಿಗುವದು. ಇಂಥ ಪವಿತ್ರ ಪ್ರಕಟನೆಯನ್ನು ಒಪ್ಪಿ ಪ್ರಸಾರಗೈದ ಆ ಪತ್ರಿಕೆಗೆ ಸಮಾಜ ಹಿತದಲ್ಲಿರುವ ಕಳಕಳಿಯನ್ನು ಕಂಡು ರೋಮಾಂಚಗಳೇಳದಿರವು. ಆ ಪ್ರಕಟನೆಯಲ್ಲಿ ಉಜ್ಜಯನಿ ಜಗದ್ಗುರುಗಳು ಕೇವಲ ೫೦ ಜಂಗಮವಟುಗಳಿಗೆ ಊಟಕೊಟ್ಟು ತಮ್ಮ ಪ್ರೌಢಪಾಠ ಶಾಲೆಯಲ್ಲಿ ವೇದ ಆಯುರ್ವೇದ ಜ್ಯೋತಿಷ ವೀರಶೈವಸಿದ್ಧಾಂತಗಳನ್ನು ಕಲಿಸುವದಾಗಿ ಸಾರಿರುವರು. ಧನ್ಯ ಧನ್ಯ ಜಗದ್ಗುರುವೇ!! ಏನು ಸಮಾಜ ಸುಧಾರಣೆಯ ಹಂಬಲವಿದು. ಈ ನೂತನ ಮಾರ್ಗವನ್ನು ತಾವೇ ಶೋಧಿಸಿದಿರೋ ಬೇರೊಬ್ಬರ ಕಿತ್ತಿ ತೀಡಿರುವಿರೋ ? ವಿದ್ಯೆಗೆ ಪ್ರತಿಬಂಧಗೊಳಿಸಿ ಗುರುವೆನಿಸುವ ಹಾಗು ಜಗದ್ಗುರುನೆನಿಸುವ ಉದಾಹರಣೆಗಳು ಈ ವರೆಗೆ ಇತಿಹಾಸದಲ್ಲಿ ದೊರೆತಿಲ್ಲ. ಇದು ನಿರುಪಮ ಸಾಹಸ!! ಸಮಾಜವನ್ನು ಅಜ್ಞಸ್ಥಿತಿಯಲ್ಲಿರಿಸಿ ಮೆರೆಯಬೇಕೆಂಬ ನಿಮ್ಮ ಸಹಾಸ್ಯ ದೊಡ್ಡದು!! ಸಮಾಜವು ಸುಜ್ಞಾನವಾದರೆ ತನ್ನ ಹಕ್ಕುಬಾಧ್ಯತೆಗಳ ಪರವಾಗಿ ತಮಗೆ ಗೌರವ ಸಿಗದೆಂದು ಮುಂದಾಲೋಚಿಸಿ ಕೇವಲ ನಿಮ್ಮ ವರ್ಗ ಹಾಗು ರಕ್ತಬಂಧುಗಳಿಗೆ ವಿದ್ಯೆಗಲಿಸಿದರೆ ಅವರು ಹೇಗಾದರೂ ನಿಮ್ಮನ್ನು ಎತ್ತಿಹಿಡಿಯುವರಲ್ಲವೇ ? ಆದ್ದರಿಂದಲೇ ಕೆಲವರನ್ನೇ ನಿಮ್ಮವರೆಂದು ಭಾವಿಸಿ ಇತರರನ್ನು ಪರರೆಂದು ಭಾವಿಸಿದ್ದು ನಿಮ್ಮ ಅರ್ಹತೆಯನ್ನು ತೋರುವದಾಗಿದೆ. ಇನ್ನು ನೀವು ೫೦ ಜನರಿಗೇ ಈ ಕಾರ್ಯದಿಂದ ಜಗದ್ಗುರುಗಳಾಗಬಹುದೆಂದು ನೆನೆಯಿರಿ.

ಈ ಅನ್ಯಾಯವನ್ನು ಈವರೆಗೆ ಯಾವ ಸಮಾಜಮುಂದಾಳುಗಳು ಹಾಗು ಪತ್ರಿಕೆಯೂ ಪ್ರತಿಭಟಿಸದೆ ಮೌನವಾಗಿರುವದರ ಅರ್ಥವೇನು? ಇದು ಅವರಿಗೆ ಸಮ್ಮತವೋ ? ಅಥವಾ ಉಜ್ಜನಿಯವರು ತಮ್ಮ ವರ್ಗದವರಿದ್ದು ಅವರ ಕಾರ್ಯವನ್ನಲ್ಲಗಳೆಯ ಬಾರದೆಂದು ಆ ವರ್ಗದ ಪತ್ರಿಕಾಕರ್ತರವಿಚಾರವೋ ?

ಪಂಚಪೀಠದವರು ತಮ್ಮಲ್ಲೊಬ್ಬರು ಮಾಡಿದ ಈ ಮಹಾಕಾರ್ಯವನ್ನು ಒಪ್ಪುವರೋ ? ಇಲ್ಲವೇ ಸತ್ಪಕ್ಷಮೋಹಿಗಳಾಗಿ ಮುಂದೆ ಬಂದು ಬಹಿರಂಗವಾಗಿ ಖಂಡಿಸಿ ತಮ್ಮ ಕಾರ್ಯಮಾಡುವದೋ ? ಈಗಿನ ಸಮಾಜದ ಪರಿಸ್ಥಿತಿಯಲ್ಲಿ ಇದನ್ನಪೇಕ್ಷಿಸುವದು ಸಾಹಸವೇ ಸರಿ. ಇದನ್ನು ಮುಚ್ಚಿಟ್ಟು ಮೌನತಾಳಿದರೆ ಐದೂ ಪೀಠದವರ ನಿಜರೂಪವು ಇನ್ನೊಮ್ಮೆ ಸ್ಪಷ್ಟವಾಗುವದು. ಎಲ್ಲರಗಿಂತ ಅವರ ಮೇಲೆ ಈ ಕಾರ್ಯದ ಹೊಣೆ ಹೆಚ್ಚಿಗಿಲ್ಲವೇ ?

# ಗದುಗಿನಲ್ಲಿ ಕಲ್ಯಾಣ ಶರಣರ ಉಗಮ

( ಲೇಖಕ:— ಶ್ರೀ ಶಿವಾನಂದ ಸ್ವಾಮಿಗಳು ಗವಿಮಠ ತೆಗ್ಗಿಹಳ್ಳಿ (ಇಂಡಿ)



ವಿಜಾಪೂರದಲ್ಲಿ ಪ್ರವಚನಮಾಡುತ್ತಿರುವ ಶ್ರೀ. ನಿ. ಪ್ರ. ಮಲ್ಲಿಕಾರ್ಜುನ ಮಹಾಸ್ವಾಮಿಗಳು ತಮ್ಮ ಗುರುಗಳಾದ ಶ್ರೀ ಶಿವಾನಂದ ಮಹಾಸ್ವಾಮಿಗಳು ಗದುಗಿನ ಮಠದಲ್ಲಿ ನಡೆಯುವ ಶಿವರಾತ್ರಿ ಮಹೋತ್ಸವಕ್ಕೆ ಬರಬೇಕೆಂದು ನನಗೂ ಆಮಂತ್ರಣವಿತ್ತ ಮೂಲಕ ಅಲ್ಲಿಗೆ ನಾನು ಹೋಗಿ ಬಂದೆ. ಅಲ್ಲದೆ ೪ ಭಾಷಣಗಳನ್ನೂ ಮಾಡಿದೆ. ಅಲ್ಲಿಯ ನನ್ನ ಅನುಭವಗಳು ಹೃದಯ ತುಂಬಿ ಹೊರಹೊಮ್ಮಿದ್ದರ ಪರಿಣಾಮವೇ ಈ ಲೇಖನಕ್ಕೆ ಕಾರಣವಾಗಿರುವದು.

ಈಗಿನ ಮಠಗಳಲ್ಲಿ ಬಹುತರ ಒಬ್ಬ ಗುರು, ಉಳಿದವರು ಸೇವಾಭಾವದವರೇ (ಆಳುಗಳು) ಇರುವರು. ಆದರೂ ಇವರಲ್ಲಿಯೂ ಸಹ ತಂಟೆ ವೈಮನಸ್ಸುಗಳು ಇರುವದುಂಟು. ಗುರುಗಳನ್ನು ಕಿತ್ತಿಹಾಕಿ ತಾವೇ ಗುರುಗಳಾಗಬೇಕೆಂದು ಸಹ ಹೊಂಚುಹಾಕುವರು. ಅಲ್ಲದೆ ಒಬ್ಬ ಗುರುವು ಒಬ್ಬ ಯೋಗ್ಯ ಶಿಷ್ಯನನ್ನು ಸಹ ತಯಾರ ಮಾಡಲಾರದಷ್ಟು ನಿರ್ಬಲರಾಗಿರುತ್ತಾರೆ. ಅಲ್ಲದೆ ಅನೇಕ ಮಠಗಳು ಒಂದೇ ತಲೆಯ ತರುವಾಯ ಹಾಳಾದ ಉದಾಹರಣೆಗಳುಂಟು. ಇಂಥ ಗುರುತ್ವವೇ ಎಲ್ಲ ಕಡೆಗೂ ತೋರುತ್ತಿರುವದು. ಅಯ್ಯಗಳ ಮಠಗಳಲ್ಲಿ ಇದು ವಿಶೇಷವಾಗಿ ಕಾಣುತ್ತಿರುವದು. ಇವರು ಪಟ್ಟ ವಿರಕ್ತಿಯನ್ನು ಬಿಟ್ಟು ಲಗ್ನವಾಗಿ ಸಂಸಾರಿ ಮಠಗಳನ್ನೂ ಸಹ ಮಾಡಿದ ಅನೇಕ ಉದಾಹರಣೆಗಳುಂಟು. ಮಠಗಳ ಹೀನಸ್ಥಿತಿಯನ್ನು ಇಲ್ಲಿ ವರ್ಣಿಸುವದು ಬೇಡ. ಆದರೆ ಗದುಗಿನ ಶ್ರೀ ಶಿವಾನಂದ ಮಠದ ಸ್ಥಿತಿಯನ್ನು ನೋಡಿದರೆ ನಮಗೆ ಬಹು ಹೆಮ್ಮೆ ಅನಿಸುವದು, ಇಲ್ಲಿ ಕಲ್ಯಾಣದ ಶರಣರ ತತ್ವಗಳೇ ವಿಶೇಷವಾಗಿ ರೂಢಿಯಲ್ಲಿರುವದು ಕಂಡುಬರುವದು. ಎಲ್ಲ ಜನರಿಗೂ ಕೂಡ ಗುರು, ಲಿಂಗ, ಜಂಗಮರಾಗಲಿಕ್ಕೆ ಬರುತ್ತದೆಂದು ಸಿದ್ಧಮಾಡಿ ತೋರಿಸಿದ್ದಾರೆ. ಇಲ್ಲಿ ಭಕ್ತರೆನಿಸಿಕೊಳ್ಳುವ ಅನೇಕ ಜನ ಬ್ರಹ್ಮಚಾರಿ ಶಿಷ್ಯರು ಗುರುಸ್ಥಲಕ್ಕೂ ಏರಿದ್ದಾರೆ. ಜಂಗಮ ಸ್ಥಲವನ್ನೂ ತಲುಪಿದ್ದಾರೆ. ಸರ್ವರೂ ಕಾಯಕ ಮಾಡುತ್ತಾರೆ. ಉಚ್ಚ ಶಿಕ್ಷಣವನ್ನೂ

ಆಶ್ರಮದ ಖರ್ಚಿನಿಂದಲೇ ಕೊಡಿಸುವರು. ಬಹುತರ ಎಲ್ಲರೂ ಸಂಸ್ಕೃತ ಪಂಡಿತರೇ ಇರುವರು. ನ್ಯಾಯ ವೇದಾಂತಾಚಾರ್ಯ ಪರೀಕ್ಷೆ ಪಾಸಾಗಿರುವದು ಕಂಡುಬರುವದು.

ಶ್ರೀ ಶಿವಾನಂದ ಮಹಾಸ್ವಾಮಿಗಳು ತಮ್ಮ ಪಟ್ಟವನ್ನು ಶ್ರೀ ಸದಾಶಿವಾನಂದ ಮಹಾಸ್ವಾಮಿಗಳಿಗೆ ಕೊಟ್ಟಿದ್ದಾರೆ. ಇವರಂತೂ ನ್ಯಾಯ ವೇದಾಂತಾದಿ ಪಂಚಾಚಾರ್ಯ ಪರೀಕ್ಷೆಗಳಲ್ಲಿ ಭರತಖಂಡದಲ್ಲಿಯೇ ೧ನೇ ನಂಬರು ಪಡೆದು ಪಾಸಾಗಿದ್ದಾರೆ. ಇವರು ಕೂಡ ಭಕ್ತವರ್ಗದಿಂದ ಈ ಮಹಾ ಜಂಗಮ ಪದವಿಗೇರಿದ್ದಾರೆ. ಕಾಶಿ ಕಾಶ್ಮೀರಗಳ ಕಡೆಯಿಂದ ಸಂಸ್ಕೃತ ಪೇಪರಗಳು ತಪಾಸಿಸಲಿಕ್ಕೆ ಬರುತ್ತವೆ. ಇವರ ತರುವಾಯ ಜಂಗಮಸಾಮ್ರಾಟ ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳು ನ್ಯಾಯ ವೇದಾಂತಾಚಾರ್ಯ ಪರೀಕ್ಷೆ ಪಾಸಾಗಿ ಪ್ರವಚನಧುರೀಣರು ಪ್ರವಚನಕೇಸರಿಗಳು ಪ್ರವಚನಕಂಠೀರವ ಎಂದೆನಿಸಿ ಸದಾ ಪ್ರವಚನಮಾಡಿ ಬೋಧಿಸುತ್ತ ಚರಜಂಗಮರಿದ್ದಾರೆ.

ಡಾ. ಬಿ.ಯು. ಮಡ್ಲೂರ B.Sc. M. B. S. ಇವರು ಮಠದ ಖರ್ಚಿನಿಂದ ಈ ಪರೀಕ್ಷೆ ಪಾಸಾಗಿ ಬ್ರಹ್ಮಚಾರಿಗಳಾಗಿ ಅವರು ವೈದ್ಯ ಸಂಗಣ್ಣನ ಕಾಯಕವನ್ನು ಕೈಕೊಂಡಿದ್ದಾರೆ. ಶ್ರೀರೇವಣಸಿದ್ಧೇಶ್ವರ ಶಾಸ್ತ್ರಿ ಬ್ರಹ್ಮಾನಂದ ಸ್ವಾಮಿಗಳು. ಬಸವಾನಂದ ಚನ್ನಬಸವಾನಂದ ಹೀಗೆ ಅನೇಕಾನೇಕ ಸ್ವಾಮಿಗಳು ಸರಿಯಾದ ಸಾಧನೆಮಾಡಿ ಉಚ್ಚಶಿಕ್ಷಣ ಪಡೆದು ಸದಾ ಪ್ರಚಾರ ಕಾಯಕಗಳನ್ನು ಮಾಡುತ್ತಲೇ ಇರುವರು. ಇವರೆಲ್ಲ ಭಕ್ತವರ್ಗದಿಂದ ಮೇಲೇರಿದ್ದಾರೆ.

ಕೆಲವರು ಕೀರ್ತನ ಮಾಡುವವರು, ಕೆಲವರು ಪುರಾಣ ಹೇಳುವವರು ಕೆಲವರು ಶಾಸ್ತ್ರಿಗಳು, ಕೆಲವರು ಪ್ರವಚನಕಾರರು, ಕೆಲವರು ವ್ಯಾಖ್ಯಾನಕಾರರು, ಕೆಲವರು ಗಾಯಕರು, ಕೆಲವರು ವಾದ್ಯಬಾರಿಸುವವರು, ಕೆಲವರು ಹಾಡುವವರು ಹೀಗೆ ಪ್ರಚಾರಕ್ಕೆ ಬೇಕಾಗುವ ಸಕಲ ವಿದ್ಯೆಗಳಲ್ಲಿ ಪ್ರವೀಣತೆ ಪಡೆದು ಸದಾ ಪ್ರಚಾರ ನಡಿಸಿರುವರು. ಧರ್ಮೋಪದೇಶವೇ ಅವರ ಕಾಯಕಗಳು. ಇನ್ನೂ ಯಾರೂ ಹೆಚ್ಚಾಗಿ ಮಠಗಳನ್ನು ಕಟ್ಟಿ ಅಧಿಕಾರಿಗಳಾಗಿ ಪೂಜಿಸಿಕೊಳ್ಳಲು ಕುಳಿತಂತೆ ತೋರುವದಿಲ್ಲ. ಆದರೆ ಅನೇಕ ಕಡೆಯಿಂದ ಮಠ ಕಟ್ಟುವೆವೆಂದು ಜನರಿಂದ ಆಶ್ವಾಸನಗಳು ಬರುತ್ತಿದ್ದರೂ ಯಾರೂ ಅದಕ್ಕೆ ಲಕ್ಷಹಾಕಿದಂತೆ ತೋರುವದಿಲ್ಲ. ಇದರ ಬಗ್ಗೆ ನಾನು ವಿರೋಧ ವ್ಯಕ್ತಮಾಡಿ ಮಠಗಳನ್ನು ಸ್ಥಾಪಿಸುವದು ಹೆಚ್ಚು ಲಾಭ ದಾಯಕವೆಂದು

ವಾದಿಸಿದೆನು ಆದರೂ ಯಾವ ನಿರ್ಧಾರಕ್ಕೂ ಬರಲಿಲ್ಲ. ಬರೇ ವಿದ್ಯಾರ್ಥಿಗಳನ್ನೇ ತಯಾರಮಾಡುವದೇ ಒಳ್ಳೇ ಮಹತ್ವವೆಂದು ಅವರು ಅಭಿಪ್ರಾಯಪಟ್ಟರು. ಕೆಲವರು ಇನ್ನೂ ಕಾಶಿಯಲ್ಲಿ ಕಲಿಯಲಿಕ್ಕೆ ಹತ್ತಿರುವದು ಕಂಡು ಬಂದಿದೆ. ಅಲ್ಲದೆ ಪ್ರಚಾರಕರಾದ ಪ್ರತಿಯೊಬ್ಬ ಸ್ವಾಮಿಗಳ ಸಂಗಡ ೩—೪ ಜನ ವಿದ್ಯಾರ್ಥಿಗಳು ವಿದ್ಯಾಭ್ಯಾಸಕ್ಕಾಗಿ ಇರುವರು. ಕೆಲವರು ಕಲಿತು ಉದ್ಯೋಗಮಾಡಲಿಕ್ಕೆ ಹೋಗಿದ್ದು ಸಹ ಕಂಡು ಬರುವದು. ಹೀಗಾಗಿ ಇದು ಕಲ್ಯಾಣದ ಶರಣರ ನೆನಪನ್ನು ನಿಚ್ಚಳವಾಗಿ ತಂದು ಕೊಡುವದು. ಇಷ್ಟಾದರೂ ಪತ್ರಿಕೆಗಳಲ್ಲಿ ಯಾರೂ ಇದರ ಬಗೆಗೆ ಬರೆಯುತ್ತಿರುವದಿಲ್ಲ. ಬರೆದರೆ ಇದರ ಪ್ರಚಾರವು ವಿಶೇಷ ಬೆಳೆಯುವದೆಂದು ತೋರುವದು.

೮೦೦ ವರ್ಷಗಳ ತರುವಾಯ ಕಲ್ಯಾಣದ ಶರಣರು ಪುನ್ಃ ನಮ್ಮ ನಾಡಿಗೆ ಬಂದು ಉದ್ಧರಿಸುವ ಕಾರ್ಯವನ್ನು ಮಾಡುತ್ತಾರೆಂದು ಕಾಲಜ್ಞಾನದಲ್ಲಿ ಹೇಳಿದ್ದು ನೆನಿಸಿಕೊಂಡರೆ ಗದುಗಿನಲ್ಲಿಯೇ ಅವರು ಈ ರೀತಿಯಲ್ಲಿ ಉದಯವಾಗುತ್ತಿರುವರೆಂದು ತೋರುವದು. ಉಳಿದ ಮಠದವರ ಕಾರ್ಯಗಳಿಗೂ ಇವರ ಕಾರ್ಯಗಳಿಗೂ ಮಹದಂತರವಿದೆ. ಎಂದು ತೋರುವದು. ಈ ಮಠದವರೆಲ್ಲರೂ ಶರಣರ ತತ್ವದವರೂ ವಿಚಾರದವರೂ ಇರುವರು. ಇವರಲ್ಲಿ ಯಾರೂ ಚೀಟಿ ತಾಯಿತು ಯಂತ್ರ ಕಟ್ಟುವದಿಲ್ಲ. ಬೂದಿ ಮಂತ್ರಿಸುವದಿಲ್ಲ ದೇವರ ಹೇಳುವದಿಲ್ಲ. ಇಂಥ ಯಾವ ಕೆಲಸಗಳನ್ನೂ ಇವರು ಮಾಡುವದು ಕಂಡುಬರುವದಿಲ್ಲ. ಬಹುತರ ಎಲ್ಲರೂ ನೂಲುವವರಿರುವರೆಂದು ತೋರುವದು. ಸಾವಾ ಅಲ್ಪ ಉಡುಪು ಕೆಲವರು ಕ್ಯಾವಿ ಧರಿಸುವರು. ಕೆಲವರು ಬಿಳೀ ಉಡುಪನ್ನೇ ಉಡುವರು. ಶಿವಭಕ್ತರನ್ನೆಲ್ಲ ಒಂದೇ ಎಂಬ, ಲಿಂಗಾಂಗಿಗಳನ್ನೆಲ್ಲಿ ಒಂದೇ ಎಂಬ ತತ್ವದಂತೆ ನಡೆಯುವರು.

ಶ್ರೀ ಸದಾಶಿವಾನಂದರು ಶೂನ್ಯಸಿಂಹಾಸನವನ್ನು ಅಲಂಕರಿಸಿದ ಪ್ರಭುದೇವರಂತೆ ಒಪ್ಪಿದರೆ ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳು ಶ್ರೀ ಬಸವಣ್ಣನವರಂತೆ ಶೋಭಿಸುತ್ತಿರುವರು. ಇದರಂತೆ ಉಳಿದವರು ಕೂಡ ಹಿಂದಿನ ಶರಣರನ್ನು ಹೋಲುವರೆಂದು ನೋಡಿದವರಿಗೆ ಅನಿಸುವದು. ಅಲ್ಲಿ ಎಲ್ಲರೂ ಸಭೆಗಳಲ್ಲಿ ಮಾತನಾಡುವವರೇ ಇದ್ದರು. ಆದರೆ ವೇಳೆಯ ಅಭಾವದ ಮೂಲಕ ಎಲ್ಲರಿಗೆ ಉಪನ್ಯಾಸಮಾಡಲಿಕ್ಕೆ ಆಗಲಿಲ್ಲ.

ಈಗ ಇಷ್ಟುಜನ ಸನ್ಯಾಸಿ ಶಿಷ್ಯವರ್ಗವನ್ನು ಶ್ರೀ ಶಿವಾನಂದ ಸ್ವಾಮಿಗಳು ಪಡೆದದ್ದನ್ನು ನೋಡಿದರೆ ಶ್ರೀ ರಾಮಕೃಷ್ಣಪರಮಹಂಸನ ನೆನಪಾಗುತ್ತದೆ. ಅದರಂತೆ ಇವರೂ ನಮ್ಮ ಕನ್ನಡನಾಡಿನಲ್ಲಿ ಧರ್ಮಜಾಗ್ರತಿಯ ಕಾರ್ಯವನ್ನು ಮಾಡುತ್ತಿರುವರೆಂದು ತೋರುವದು. ಇವರೆಲ್ಲರು ಶಿವಾನುಭವ ಪ್ರಚಾರವನ್ನೇ ಮಾಡುವರೆಂದು ಕಂಡುಬಂದಿದೆ. ಶ್ರೀ ಶಿವಾನಂದ ಸ್ವಾಮಿಗಳು ಯೋಗದವರು, ಶ್ರೇಷ್ಠ ಆದರ್ಶಶಿಕ್ಷಕರು, ಶ್ರೀ ದೇವಿಯುಪಾಸಕರು ಶ್ರೀ ದೇವಿಯನ್ನು ಸಾಕ್ಷಾತ್ಕರಿಸಿಕೊಂಡ ಪರಮಹಂಸರು. ಹೀಗಂತೆ ದೇವಿಯ ಕೃಪೆಯಿಂದ ಇಂಥ ದೊಡ್ಡಕಾರ್ಯವನ್ನು ನಡಿಸಿ ಮುಕ್ತರಾಗಿದ್ದಾರೆ.

ಗುರುವರ್ಗ ಭಕ್ತವರ್ಗವೆಂಬ ಬೇಧವನ್ನು ತೆಗೆದುಹಾಕಿ ಎಲ್ಲರೂ ಗುರುಜಂಗಮಸ್ಥಾನಕ್ಕೆ ಏರುವರೆಂದು ನಮ್ಮವರಿಗೆ ತೋರಿಸಿಕೊಡುತ್ತಿರುವರು. ಮೊದಲಿಗೆ ಎಲ್ಲರೂ ವೀರಶೈವರು ಲಿಂಗಾಯತರು ಮುಂದೆ ಸಾಧನ ತಪ ತ್ಯಾಗ ಮೊದಲಾದವುಗಳಿಂದ ಗುರುಜಂಗಮಸ್ಥಲಕ್ಕೆ ಏರುವರೆಂದು ಕಲ್ಯಾಣ ಶರಣರ ಸಿದ್ಧಾಂತವನ್ನೇ ಇವರು ನಿತ್ಯ ಮಥನಮಾಡುತ್ತಿರುವದು ಕಂಡುಬರುವದು. "ಜನ್ಮನಾ ಜಾಯತೆ ಶೂದ್ರಃ ಕ್ರಿಯಯಾ ಮುಚ್ಯತೆ ಜಂಗಮಃ" ಎಂಬ ಶ್ರೀ ಬಸವಣ್ಣನ ಉಕ್ತಿಗನುಗುಣವಾಗಿ ನುಡಿದು ನಡೆಯುತ್ತಿರುವರು. ಇಲ್ಲಿಂದಲೇ ಅವರು ಸರ್ವಕಡೆಗೂ ಪ್ರಚಾರನಡಿಸಿ ಗದುಗನ್ನೇ ಕ್ರಾಂತಿಯ ಕೇಂದ್ರವನ್ನಾಗಿ ಮಾಡಿದ್ದಾರೆ. ಇದೇ ಆಗಿನ ಕಲ್ಯಾಣದ ನೆನಪನ್ನು ಸಹಜ ಮಾಡಿಕೊಡುತ್ತದೆ. ಇದಕ್ಕೆಲ್ಲ ಅನೇಕ ಗದುಗಿನ ನಾಗರಿಕರು ಬೆಂಬಲ ಕೊಡುತ್ತಿರುವರು. ಅವರಲ್ಲಿ ಅಯ್ಯನಗೌಡ, ಭರಡಿ ಬಸಪ್ಪ, ಬ್ಯಾಹಟ್ಟಿ ಗುಗ್ಗರಿ ಮೊದಲಾದವರೇ ಮುಖ್ಯರು.

ಹೀಗಾಗಿ ನನಗೆ ಗದುಗು ಕಲ್ಯಾಣದ ನೆನಪನ್ನು ತಂದುಕೊಟ್ಟ ಆನಂದ ಹುರುಪು ಉತ್ಸಾಹಗಳನ್ನು ಹೆಚ್ಚಿಸಿ ಶರಣರು ಬಂದರಲ್ಲಾ! ಶರಣರು ಉದಿಸಿದರಲ್ಲಾ! ಶರಣರು ಉಗಮವಾದರಲ್ಲಾ! ನಮ್ಮ ಧರ್ಮಪತಾಕೆ ಪುನ: ಹಾರಾಡುವದಲ್ಲಾ! ಎಂದು ಸಭೆಯಲ್ಲಿ ಕೂಗಿಕೊಂಡೆನು.

ಗದುಗಿನ ಶ್ರೀ ಶಿವಾನಂದ ಸ್ವಾಮಿಗಳ ಸನ್ಯಾಸಿ ಪ್ರಚಾರಕ ಯಾವತ್ತೂ ಶಿಷ್ಯವೃಂದಕ್ಕೆ ಒಂದು ಸೂಚನೆಯನ್ನು ಮಾಡಲಾಯಿತು— "ಈಗಿನ ಕಾಲದಲ್ಲಿ ಸಂಸ್ಕೃತವೂ ಅವಶ್ಯ. ಅಲ್ಲದೆ ಇಂಗ್ಲೀಷದ ಅಭ್ಯಾಸವನ್ನೂ ಸಾಕಷ್ಟು ಮಾಡಬೇಕು. ವೇದ ಗೀತೆ ಉಪನಿಷತ್ತುಗಳ ಅಭ್ಯಾಸವೂ ಅವಶ್ಯ. ಅದ

ರಂತೆ ಸಕಲ ಶರಣರ ಸಕಲ ವಚನಗಳನ್ನು ಬಹು ಆಳವಾಗಿ ಅಭ್ಯಸಿಸ ಬಹುಮುಖವಾಗಿ ಪ್ರಚಾರವಾಡಬೇಕೆಂದು ಸೂಚಿಸದೆ ಇರಲಾರೆವು. ಅಲ್ಲದೆ ಶರಣರಚರಿತೆ, ವಚನಗಳು, ಪಂಚಾಚಾರ, ಅಷ್ಟಾವರಣ, ಷಟ್‌ಸ್ಥಲ ವೊದಲಾದವುಗಳನ್ನು ಭಕ್ತವೃಂದಕ್ಕೆ ಸರಿಯಾಗಿ ಎಲ್ಲದರ ಜೊತೆಗೆ ತಿಳಿಸಿ ಹೇಳುವದು ಅವಶ್ಯವೆಂದು ಸೂಚಿಸುವೆವು. ಅಕ್ಕನಬಳಗ ಅಂಣನಬಳಗ ಶಿವಾನುಭವ ವಾಸಪತ್ರಿಕೆಗಳನ್ನು ಪ್ರಚಾರವಾಡಬೇಕು. ನವ್ಮ, ನಾಡಿಗೆ ಹೊಂದಿಕೊಂಡ ಮರಾಠಿ ತೆಲಗು ತವಿುಳು ಹಿಂದೀಗಳನ್ನು ಸಹ ಅಭ್ಯಸಿಸಿ ಪ್ರಚಾರವಾಡಿದರೆ ಶರಣರ ಉದಾತ್ತ ವ್ಯಾಪಕತತ್ವಗಳು ದೇಶವಿದೇಶಗಳಲ್ಲಿ ಹಬ್ಬಲು ಅನುವಾಗುವದು. ನವ್ಮ ನಾಡಿನಲ್ಲೆ ಇದ್ದರೆ ಸಾಕೆಂದು ತೃಪ್ತಿ ಪಡುವದು ಈಗಿನ ಕಾಲದಲ್ಲಿ ಒಳಿತಲ್ಲ. ಪರನಾಡುಗಳಿಗೆ ಪರದೇಶಗಳಿಗೂ ಶರಣರ ದಿವ್ಯಸಂದೇಶಗಳು ಮುಟ್ಟುವಂತಾದರೆ ಪ್ರಚಾರಕಾರ್ಯವು ಸಾರ್ಥಕ ವಾಗುವದು. ಶರಣರ ಮಹಿಮೆ ಅವರಿಗೂ ಗೊತ್ತಾಗಿ ಅವರನ್ನು ಅನುಸ ರಿಸುವಂತಾದರೆ ಜಗತ್ತಿನಲ್ಲಿಯ ಭಕ್ತಮಹೇಶ ವಿರಕ್ತಪಟ್ಟ ಹಿರಿದು ಕಿರಿದು ಎಂಬ ಭೇದಭಾವವಳಿದು ಸುಖಶಾಂತಿಗಳು ನೆವ್ಮದಿಗೊಳ್ಳುವದು. ಅದಕ್ಕೆ ದಯವಾಡಿ ನವ್ಮ ಈ ಸೂಚನೆಗಳನ್ನು ಕಾರ್ಯರೂಪಕ್ಕೆ ತರುವಿರೆಂದು ಆಶಿಸುವೆನು.

ಇನ್ನೊಂದು ವಿಷಯ- ಇಲ್ಲಿ (ಗದುಗಿನಲ್ಲಿ) ಶರಣ ಸೇವಕಸಂಘವೆಂದು ಒಂದು ಇರುವದು. ಇದನ್ನು ಸುಶಿಕ್ಷಿತರಾದ ನಾಗರಿಕರಿಂದು ಸ್ಥಾಪಿತವಾಗಿರುವದು ಇದರ ಕಾರ್ಯವು ಸಂಘದ ಹೆಸರಿನಿಂದಲೇ ಸಹಜ ತಿಳಿಯುವಂತಿದೆ. ಈ ಸಂಘಕ್ಕೂ ಈ ಮಠಕ್ಕೂ ತಾಳಮೇಳವಿರುವದೆಂದು ಕಂಡು ಬರುವದು. ಅವರೂ ಕೂಡ ಶರಣರ ಉದಾತ್ತ ತತ್ವಗಳನ್ನೇ ಪ್ರಕಾಶಕ್ಕೆ ತರುವರಲ್ಲದೆ ಖಡಾ ಖಡಾಯಾಗಿ ಧರ್ಮದಲ್ಲಿಯ ಅನ್ಯಾಯಗಳನ್ನು ಒಳ್ಳೇಧೈರ್ಯದಿಂದಲೇ ಖಂಡಿಸುವರು. ಈ ಸಂಘದಿಂದ (೧) ಭಕ್ತಗುರುತ್ವ ( ಭಕ್ತರೇ ಗುರುಲಿಂಗ ಜಂಗಮರಾಗುವರೆಂದು) (೨) ಮಂತ್ರವಾದಿ (ಕೆಲವು ಆಧುನಿಕ ವೀರಶೈವ ಧರ್ಮದ ಗ್ರಂಥಕಾರರು) ಅಯ್ಯಗಳು ಬರೆದ ಗ್ರಂಥಗಳಲ್ಲಿ ಭಕ್ತರ ಬಗ್ಗೆ ಏನು ಕುತ್ಸಿತ ತನವನ್ನು ತೋರಿಸಿದ್ದಾರೆಂದು ಬರೆದಿರುವರು. ಹೀಗೆ ಪುಸ್ತಕಗಳನ್ನು ಅಲ್ಲದೆ ಕೆಲವು ಪ್ರಕಟನೆಗಳನ್ನು ಹೊರಡಿಸಿದ್ದಾರೆ. (೧) ವೀರ ಶೈವ ವಾತ್ರರೆಲ್ಲ ಗುರುಜಂಗವಾಧಿಕಾರಗಳಗೆ ಅರ್ಹರು. (೨) ಶರಣಸೇವಕ

ಸಂಘದ ಸದಸ್ಯರು ನಂಬತಕ್ಕ ವಿಚಾರಗಳು ಲಿಂಗಾಂಗಿಗಳೆಲ್ಲ ಬಂಧುಗಳು ವೀರಶೈವರಲ್ಲಿ ವರ್ಣಾಶ್ರಮಗಳಿಲ್ಲ ಭಕ್ತರೇ ಗುರುಲಿಂಗ ಜಂಗಮರಾಗುವರು ಎಂಬ ಮುಂತಾದ ಶರಣ ತತ್ವಗಳನ್ನೇ ಪ್ರಚಾರಮಾಡುತ್ತಿರುವದು ಕಂಡು ಬಂದಿತು. ಅಂದರೆ ಗದುಗಿನಲ್ಲಿ ಶಿವಶರಣರ ಬಗ್ಗೆ ಬಹು ಮುಖ್ಯವಾದ ಜಾಗ್ರತಿಯಾಗಿರುವದೆಂದು ಅನಿಸುವದು. ಇದರಂತೆ ಸಕಲ ಕಡೆಗೂ ಜಾಗ್ರತವಾಗಿ ವೀರಶೈವರಲ್ಲಿ ಈಗಿನ ವಿಷಮತೆ ಜಾತೀಯ ಅಹಂಕಾರ ಹೋಗಿ ಶರಣರ ತತ್ವಗಳು ಸರ್ವತೋ ಮುಖದಿಂದ ಪ್ರಸಾರವಾಗಿ ಕಲ್ಯಾಣ ಶರಣರ ಕಾಲವು ನಮ್ಮ ನಾಡಿನ ತುಂಬೆಲ್ಲ ಬರಲೆಂದು ಹಾರೈಸುವೆನು. ಮೇಲೆ ನಮೂದಿಸಿದ ಸಜ್ಜನರಾದ ಸಂಸಾರಿ ನಾಗರೀಕರೇ ಈ ಶರಣ ಸೇವಕ ಸಂಘದ ಮುಖಂಡರಿರುವರು. ಇವರು ಶ್ರೀ ಶಿವಾನಂದಮಠದ ಪ್ರಚಾರ ಕಾರ್ಯಕ್ಕೆ ಸರ್ವತೋ ಮುಖದಿಂದ ನೆರವಾಗಿ ಆ ಮಠವನ್ನು ಪೋಷಿಸಿಬೇಕೆಂದು ವಿನಂತಿಸಿ ಈ ಲೇಖನವನ್ನು ಮುಗಿಸುವೆನು.

# ಶ್ರೀ ಬಸವಸ್ತವನ

ಬರೆದವರು:— ಶ್ರೀ ಶಿವಾನಂದ ಸ್ವಾಮಿ ಗವಿಮಠ ತೆಗ್ಗಿಹಳ್ಳಿ (ಇಂಡಿ)

೧

ಬಸವನೆ ಬಾಬಾ ಕುಶಲವ ಬೀರುತ ।
ವಸುಧೆಗೆ ಬೇಗನೆ ನೀಬಾರೈ ॥
ವಸುಧಿಯ ಸೇವೆಯ ಹೊಸ ಬಗೆಯನು ನೀ ।
ಉಸುರಲು ಬಾರೈ ವರಬಸವ ॥

೨

ಶಾಟಿಯ ತಿರುವಿಸಿ ಮಾಟದ ಬಟ್ಟೆಯ ॥
ಕೋಟಿ ಕೋಟಿ ಜನಕೀಯಲು ಬಾ
ರಾಟೆಯ ಬಿಡೆ ಜನ ರಾಟವೆ ನಿಂತಿದೆ ।
ಸೂಟಿಯ ಕಲಿಸಲು ಬಾ ಬಸವ ॥

೩

ಪಶುಗಳ ಕೊಲ್ಲುವ ವ್ಯಸನದ ಕೆಲಸವ ।
ನಶಿಸಲು ಬಾರೈ ವರ ಬಸವಾ ॥
ವಸುಧಿಗೆ ಸಂತತು ಅಸಮುಪಕಾರಿಯ ।
ಪಶುಗಳ ಕಾಯಲು ಬಾ । ಬಸವ ॥

೪

ಸತ್ಯಅಹಿಂಸೆಯು ಸತ್ಯಾಗ್ರಹವನು ।
ನಿತ್ಯದಿ ಕಲಿಸಲು ಬಾ ಬಸವ ॥
ಸತ್ಯಾಗ್ರಹದಲೆ ಉತ್ತಮ ಶಿಬಿರವ
ಸುತ್ತಲು ಹಳ್ಳಿಗು ತೆರೆಯಲು ಬಾ ॥

೫

ಕನ್ನಡಿಯಂತಿಹ ಕನ್ನಡ ನಾಡಿನ ।
ಮನ್ನಣೆಯಳಿಯಿತು ನಿನ್ನಗಲಿ ॥

ಕನ್ನಡ ನಾಡಿನ ಉನ್ನತಿಯನು ಸಲೆ ।
ಮನ್ನಿಸಿ ಗೈಯಲು ಬಾ । ಬಸವ ॥

೭

ಹರಿಜನರೆಲ್ಲರು ವರ ಬಸವೆನ್ನುತ ।
ಕರೆ ಕರೆ ಯುತ್ತಿಹರೈ ಬಸವ ॥
ವರ ಬಸವನೇ ನೀ ಹರಿಜನರನು ಬಿಡೆ ।
ಹರಿಸುತ ಉದ್ಧರಿಸಲು ನೀ ಬಾ ॥

೭

" ಶಿವಭಕುತರು ಬಿಡೆ ಶಿವಜಾತರೆನುವ '
" ಶಿವಕುಲವನು ' ನೀ ಬೆಳಿಸಲು ಬಾ ।
" ಭವವನು ಜಯಿಸಲು ದಯವೇ ಧರ್ಮವು ॥ ''
ಋಷಿಯುಲಿ ಎನ್ನುತ ಉಸುರಲು ಬಾ ॥

೮

' ದೇಶದ ಭಕ್ತಿಯೆ ಈಶನ ಭಕ್ತಿಯು '
ದೇಶದ ಸೇವೆಯು ಬಿಗೆ ತಿಳಿಸೈ ॥
ದೇಶೋದ್ಧಾರದ ಮಾಸದ ಸೇವೆಯ ।
ದೇಶದಿ ಹರಡಲು ಬಾ ಬಸವ ॥

೯

ಹರಿಜನಕೇಲಸಕ್ಕರಿಯದೆ ಜನಗಳು ।
ಹಿರಿ ಕಾಂಗ್ರೆಸ್ಸಿಗೆ ಕಾಡುವರೈ ॥
ಪಿರಿದಾಗಿಹ ಈ ಹರಿಜನ ಸೇವೆಗೆ ।
ನೇವಾಗಲು ಬಾ ವರ ಬಸವ ॥

೧೦

ಬಸವನೆ ತಾಯಿಯು ಬಸವನೆ ತಂದೆಯು
ಬಸವನೆ ಬಳಗವು ಸಕಲರಿಗೆ ॥
ಬಸವನೆ ! ನಾಡನು ನುಡಿಯನು ಪೊರೆಯಲು
ವಸುಧಿಗೆ ಬೇಗನೆ ಬಾ ಬಸವ ॥

೧೧

ಮಾಟಾಗಿಹೆ ಈ ರಾಟೆಯು ಚಕ್ರವು
ಮೇಟಿಯು ಮೇಲಿದು ನಿಂತಿಹುದು
ಕಾಟವ ಹಿಂಸುವ ರಾಟೆಯ ಕೆಲಸಕೆ।
ಮೇಟಿಯು ಏಳ್ಗೆಯು ಗೈಯ್ಯಲು ಬಾ ॥

೧೨

ಕೂಳವ ತಿನ್ನುತ ಚಾಹನ ಕುಡಿಯುತ।
ಹಾಳಾದವರನು ಕರುಣಿಸಬಾ ॥
ಗೂಳಿಯ ತೆರದಲಿ ಪಾಲನು ಕುಡಿಸುತ
ತಾಳ್ಮೆಯ ಪಾಠವ ಕಲಿಸಲು ಬಾ ॥

೧೩

ಇಷ್ಟದ ಕೆಲಸಕೆ ಎಷ್ಟು ತಡವಿದ್ದೈ।
ಕಷ್ಟದ ಜನತೆಯ ಸಲಹುದಕ್ಕೈ ॥
ದುಷ್ಟರ ನಿಗ್ರಹ ಶಿಷ್ಟರ ಪಾಲನ।
ಇಷ್ಟಾದುದು ನಿನಗಲ್ಲೆನ್ನೈ ॥

೧೪

ಬಸವಣ್ಣನೆ ತಾ ಜಗದಣ್ಣೆನಿಸುತ।
ಜಸವನು ಬೀರುತ ಲೋಕದಲಿ ॥
ಹೊಸ ಹೊಸ ತತ್ವದ ಸಕಲರ ಕಾರ್ಯವ।
ನೆಸಗುತ ಒಬ್ಬನೆ ಮೆರೆದಿಹನು ॥

೧೫

ಕಾಯದ ಆತ್ಮದ ಕಾಯಕ ಸಮತೆಯ।
ನೋಯುವ ಆರ್ಥಿಕ ಸಮತೆಯನು ॥
ಭಾವದಿ ಧಾರ್ಮಿಕ ಭಕ್ತಿಯ ಸಮತೆಯು
ದೇವನ ರಾಜವ ಕಟ್ಟಿದನು ॥

೧೬

ಅನುಭವ ಮಂಟಪದನುಶಾಸನಗಳಿ।
ಗನುಸರಿಸಿದ ಕಾಂಗ್ರೆಸ್ಸವನು ॥

ತನು ಮನ ಧನಗಳ ಸವಿಸಿದಿ ಬಸವನೆ
ಅನುದಿನ ಧರ್ಮಕ್ರಾಂತಿಗೆ ನೀ ||

೧೭

ಶರಣರ ಸಂತತಿ ಸಕಲರ ಕುಲದಲಿ
ನಿರುತದಿ ಕರುಣಿಸಬಾ ಬಸವ ||
ಶರಣರೆ ಜಗಕತಿ ಹಿರಿಕಣ್ಮಣಿಗಳು ।
ಧರೆ ಸುಖಶಾಂತಿಯು ಪೊಂದುದಕೆ ||

೧೮

ಷಟ್‌ಸ್ಥಲದರಿಯುವೆಯು ನಷ್ಟಾಗಿದೆವರ
ಅಷ್ಟಾವರಣವು ಬಳಲುವದು ||
ಇಷ್ಟದ ಪಂಚಾಚಾರವು ಕೆಟ್ಟಿದೆ
ಶ್ರೇಷ್ಟನೆ ಇವುಗಳ ಬೆಳಸಲು ಬಾ ||

೧೯

ಬಸವನು ಜನಿಸಿದ ದಿನದಲಿ ಸಕಲರು ।
ವಿಶಯುವ ಹಬ್ಬವನಾಚರಿಸಿ ||
ಬಸವನ ಕಾರ್ಯವ ಬಸವನ ಬೋಧೆಯ ।
ಕುಶಲದಿ ಬೀರುತ ಹರಡುವದೈ ||

೨೦

ಬಸವನ ನಾಮವ ಜಪಿಸಲು ಸಕಲರು !
ಕುಶಲದಿ ದೇವನ ರಾಜ್ಯವನು ||
ವಸುಧಿಯ ಮೇಲೆಯೆ ಸೇರುವರೆನ್ನುವೆ ।
ಹೊಸ ಹೊಸ ಸೌಖ್ಯವ ಪಡೆಯುವರು ||

# ಏಕೀಕೃತ ಕರ್ನಾಟಕ

(ಸಂಪಾದಕರು.)

---

ಈ ವರ್ಷಾಂತ್ಯದಲ್ಲಿ ಒಂದುಸಾವಿರವರ್ಷಗಳವರೆಗೆ ತುಂಡು ತುಂಡಾಗಿದ್ದ ಕರ್ನಾಟಕ ಪ್ರಾಂತವು ಏಕೀಕೃತವಾಗುವದರಲ್ಲಿ ಯಾವಸಂದೇಹವೂ ಉಳಿದಿರುವದಿಲ್ಲ. ಕ್ರಿ. ಶ. ಆರಂಭದಿಂದ ಕರ್ನಾಟಕದ ಪ್ರತಿಯೊಂದು ಮೂಲೆಯಲ್ಲಿ ಕನ್ನಡ ಪಂಡಿತರು, ಕಲಾವಿದರು, ಕವಿಗಳು ಉದಯಿಸಿ ಕನ್ನಡ ನಾಡು ಒಂದೆಂಬುದನ್ನು ಜನತೆಯ ತಿಳುವಳಿಕೆಗೆ ತರುತ್ತ ಬಂದಿದ್ದಾರೆ. ಅವರು ರಚಿಸಿದ ಕೃತಿಗಳು ಕನ್ನಡಿಗರೆಲ್ಲ ಚಿರಪರಿಚಿತವಾಗಿವೆ. ಕೊಳ್ಳೆಗಾಲದಲ್ಲಿ ಷಡಕ್ಷರಿ ಕವಿಯು, ಹಂಪೆಯಲ್ಲಿ ಹರಿಹರದೇವನು, ಬಳ್ಳಾರಿಯಲ್ಲಿ ಬಳ್ಳೇಶ ಮಲ್ಲಯ್ಯ ಮುಂತಾದ ಶಿವಶರಣರು ನಾಂದೇಡ ಜಿಲ್ಲೆ (ಮಹಾರಾಷ್ಟ್ರ) ಯಲ್ಲಿ ಉರಿಲಿಂಗ ಮತ್ತು ಉರಲಿಂಗಪೆದ್ದಿಗಳು ಕುಂಬಾರ ಗುಂಡಯ್ಯ. ಮೊದಲಾದ ಶಿವಶರಣರು ಕನ್ನಡದ ಅಸ್ತಿತ್ವವನ್ನು ಕಾಯ್ದರು. ಕೊಡಗಿನಲ್ಲಿ ವೀರ ರಾಜೇಂದ್ರನು ಉಡುಪಿಯಲ್ಲಿ ಮಧ್ವಾಚಾರ್ಯರು, ಗೋವೆಯಲ್ಲಿ ಕದಂಬರಾಜರು ಕನ್ನಡಿಗರೆಲ್ಲರೂ ಒಂದೆಂಬಭಾವನೆಯನ್ನು ಹುಟ್ಟಿಸಿದರು. ಈ ಪ್ರಯತ್ನಗಳ ಪರಿಣಾಮವಾಗಿ ಕರ್ನಾಟಕವು ಒಂದಾಗಿ ಈಗಲೂ ಉಳಿದಿದೆ.

ಆದರೆ ರಾಜಕೀಯ ದೃಷ್ಟಿಯಿಂದ ವಿವೇಚನೆ ಮಾಡಿದಲ್ಲಿ ಕನ್ನಡನಾಡು ಒಂದಾಗಿರಲಿಲ್ಲ. ಕರ್ನಾಟಕ ರಾಜರು ಗ್ರಾಮಗಳಲ್ಲಿಯ ಅಂತರ್ವ್ಯವಸ್ಥೆಯಲ್ಲಿ ಕೈಹಾಕಿರುವದಿಲ್ಲಾದ್ದರಿಂದ ಅವುಗಳ ಪೂರ್ವಸ್ಥಿತಿಯು ಉಳಿದಿದೆ. ಇದರಿಂದ ಕರ್ನಾಟಕ ಸಂಸ್ಕೃತಿಯು ಈವರೆಗೂ ನಾಡಿನಲ್ಲಿ ಸ್ಥಾಯಿಕವಾಗಿ ಉಳಿದಿರುತ್ತದೆ.

ಆದರೆ ಈ ಸ್ಥಿತಿಯು ಬ್ರಿಟಿಷರ ಕಾಲದಲ್ಲಿ ಉಳಿಯಲಿಲ್ಲ. ಅವರುಹೊಸ ಹೊಸ ಕಾಯಿದೆಗಳನ್ನು ಮಾಡಿ ಅವುಗಳನ್ನು ಆಯಾ ಪ್ರಾಂತವಿಭಾಗಗಳಲ್ಲಿ ಪ್ರಸಾರ ಮಾಡಿದರು. ಅವರ ಕಾಯಿದೆಗಳಿಂದ ಕರ್ನಾಟಕದ ಭಾಗಗಳಲ್ಲಿ ಭಿನ್ನತೆಗಳು ತೋರಿಬರಹತ್ತಿದವು. ಇದರಿಂದ ಕರ್ನಾಟಕವು ಒಂದಾಗಿ ಉಳಿಯಲು ಶಕ್ಯವಾಗಲಿಲ್ಲ. ಮುಂದೆ ಕಾಂಗ್ರೆಸ ಆಡಳಿತೆಯು ಉತ್ಪನ್ನವಾಯಿತು. ಆಗ ಐದಾರು ತರದ ಆಡಳಿತೆಗಳು ನಮ್ಮ ನಾಡಿನಲ್ಲಿರೂಪಗೊಂಡವು. ಇದರಿಂದ

ಕರ್ನಾಟಕದಲ್ಲಿ ಒಂದು ಸಂಸ್ಕೃತಿಯು ಉಳಿಯಲಿಕ್ಕೆ ಶಕ್ಯವಾಗಲಿಲ್ಲ. ಜನರಾಡುವ ಭಾಷೆಯು ಬೇರೆ ಅನ್ನ ವ್ಯವಹಾರಗಳು ಬೇರೆ ಬೇರೆ ಆದವು. ಇಷ್ಟೇ ಅಲ್ಲ, ಉಡುಪುಗಳು ಸಹ ಬೇರೆ ಬೇರೆಯಾದವು. ಮನೆತನ ಪದ್ಧತಿಗಳು ಮತ್ತು ದೇಶಪದ್ಧತಿಗಳು ಬೇರೆ ಬೇರೆ ಆದವು. ಈ ಪ್ರಕಾರ ಕರ್ನಾಟಕದಲ್ಲಿ ಉಂಟಾದ ಭಿನ್ನತೆಗಳ ಮೂಲಕ ಕರ್ನಾಟಕವು ಒಂದೇ ಪ್ರಾಂತವೋ ಹೇಗೆ ಎಂಬುದರ ಬಗ್ಗೆ ಸಂದೇಹಗಳು ಎಲ್ಲರಲ್ಲಿ ಉಂಟಾಗುವಷ್ಟು ಅದರಲ್ಲಿ ವ್ಯತ್ಯಾಸಗಳುಂಟಾದವು.

ಕರ್ನಾಟಕವು ಒಂದೆರಡು ಶತಮಾನಗಳಿಂದ ಮುಂಬಯಿ, ಮದ್ರಾಸ ಹೈದ್ರಾಬಾದ, ಕೊಡಗು ಹೀಗೆ ಬೇರೆ ಬೇರೆ ಆಧಿಪತ್ಯಗಳಲ್ಲಿ ಸೇರಿಕೊಂಡಿದ್ದರಿಂದ ಅದರಲ್ಲಿ ಒಂದೇ ವಿಧದ ಕಾಯಿದೆಗಳು ಇರಲಿಕ್ಕೆ ಶಕ್ಯವಾಗಲಿಲ್ಲ. ಇಂಥ ಸ್ಥಿತಿಯಲ್ಲಿ ಭಾವೀಕರ್ನಾಟಕವು ಮೊದಲಿನಂತೆ ಭಿನ್ನ ಭಿನ್ನವಾಗಿ ಕಡೆತನಕ ಎಲ್ಲಿ ಉಳಿಯುವದೋ ಎಂಬದರ ಬಗ್ಗೆ ಸಂಶಯವು ಎಲ್ಲರಲ್ಲಿ ಉಂಟಾಗಹತ್ತಿದೆ.

ಒಂದುವೇಳೆ ಕರ್ನಾಟಕದಲ್ಲಿ ಈಬಗೆಯ ಭಿನ್ನತೆಗಳು ಆಡಳಿತೆಯಲ್ಲಿ ಉಳಿದದ್ದಾದರೆ ಅದರ ಪ್ರಗತಿಯು ಕುಂಠಿತವಾಗುವದರಲ್ಲಿ ಏನೂ ಸಂದೇಹವು ಇರಲಾರದು. ಆದರೆ ಇಂಥ ಪರಿಸ್ಥಿತಿಯು ತಮಿಳುದೇಶ, ಆಂಧ್ರದೇಶ, ಕೇರಳ ಇಲ್ಲಿ ಇರುವದಿಲ್ಲ. ಇವು ಮದ್ರಾಸ ಇಲಾಖೆಯಲ್ಲಿ ಇದ್ದದರಿಂದ ಅಲ್ಲಿಯವರು ಮದ್ರಾಸ ಇಲಾಖೆಯ ಕಟ್ಟಳೆಗಳನ್ನು ಪಾಲಿಸುತ್ತ ಬಂದಿದ್ದಾರೆ. ಹೈದ್ರಾಬಾದದಲ್ಲಿರುವ ರಾಯಚೂರ, ಬೀದರ ಮತ್ತು ಕಲಬುರ್ಗಿ ಈ ಪ್ರದೇಶಗಳಲ್ಲಿರುವ ಕಾನೂನುಗಳು ಧಾರವಾಡ ಬೆಳಗಾವ ವಿಜಾಪುರ ಕಾರವಾರ ಈ ಜಿಲ್ಲೆಗಳಲ್ಲಿರುವ ಕಾನೂನುಗಳಿಗೆ ಹೊಂದುವದಿಲ್ಲ. ಈ ಭಿನ್ನತೆಗಳ ಮೂಲಕ ಆಡಳಿತೆಯಲ್ಲಿ ಜನತೆಗೆ ತೊಂದರೆಗಳು ಉಂಟಾಗದೇ ಇರದು. ಆದರೆ ಈ ಸ್ಥಿತಿಯು ಮಹಾರಾಷ್ಟ್ರದಲ್ಲಿರುವದಿಲ್ಲ. ಅಲ್ಲಿಯ ಬಹುಸಂಖ್ಯಾಕರು ಮುಂದುವರಿದ ಮುಂಬಯಿ ಇಲಾಖೆಯಲ್ಲಿರುವದರಿಂದ ಅಲ್ಲಿಯ ಕಾಯದೆಗಳು ಎಲ್ಲ ಕಡೆಗೆ ಪ್ರಚಾರಲ್ಲಿವೆ.

ಈ ಕಾರಣಗಳಿಂದ ಕರ್ನಾಟಕವು ಏಕೀಕೃತ ಪ್ರದೇಶವಾಗಿ ಉಳಿದರೂ ಜನತೆಯಲ್ಲಿ ಏಕೀಕೃತ ಸ್ಥಿತಿಯು ಇಲ್ಲಿ ಉಳಿಯಲಿಕ್ಕಿಲ್ಲೆಂಬ ಸಂಶಯವು

ತಲೆದೋರುತ್ತದೆ. ಇದರಿಂದ ಇಲ್ಲಿ ಪರಸ್ಪರ ತಪ್ಪುತಿಳುವಳಿಕೆಗಳುಂಟಾಗುವ ಸಂಭವವಿದೆ. ಇವುಗಳನ್ನು ದೂರಮಾಡಲಿಕ್ಕೆ ಕರ್ನಾಟಕಸ್ತರೆಲ್ಲರೂ ಕೂಡಿ ಸಾಮೂಹಿಕವಾಗಿ ಪ್ರಯತ್ನಗಳನ್ನು ಮಾಡುವದು ಅವಶ್ಯವಿದೆ.

ಈ ಕಾಲದಲ್ಲಿ ಕರ್ನಾಟಕಸ್ತರಲ್ಲಿ ಪರಸ್ಪರ ವಿಶ್ವಾಸ ಮತ್ತು ಸೌಹಾರ್ದ್ರ ಭಾವಗಳನ್ನು ಉಂಟುಮಾಡಲಿಕ್ಕೆ ವಿಶೇಷ ಪ್ರಯತ್ನಗಳನ್ನು ಮಾಡುವದು ಅವಶ್ಯವಿದೆ. ಈ ದೃಷ್ಟಿಯಿಂದ ನಡಿಸಲ್ಪಡುವ ವೃತ್ತಪತ್ರಿಕೆಗಳೂ ಮಾಸಪತ್ರಿಕೆಗಳೂ ಹೆಚ್ಚಾಗಿ ಉದಯವಾಗಬೇಕು. ನಮ್ಮಲ್ಲಿ ಇದ್ದವುಗಳು ತಮ್ಮ ಧೋರಣೆಯನ್ನು ಬದಲಿಸಬೇಕು.

ಈಗ ಕರ್ನಾಟಕದ ಎದುರಿಗೆ ಅನೇಕ ಸಮಸ್ಯೆಗಳು ಇರುತ್ತವೆ. ಅವುಗಳ ಬಗ್ಗೆ ಕರ್ನಾಟಕದ ಪ್ರಮುಖರು ಒತ್ತಟ್ಟಿಗೆಸೇರಿ ವಿಚಾರ ವಿನಮಯ ಮಾಡಬೇಕು. ಈಗ ಭೂಮಿಯ ಕಂದಾಯ ಪದ್ಧತಿ, ಸಾಗುವಳಿ ಪದ್ಧತಿ, ರೈತರ ಹಕ್ಕುಬಾಧ್ಯತೆಗಳು ಇವುಗಳ ಬಗ್ಗೆ ಯಾವ ಧೋರಣೆ ಇರಬೇಕು ಇದನ್ನು ನಿರ್ಧರಿಸುವದು ಬಹು ಮಹತ್ವದ್ದಿದೆ. ಪಾನಪ್ರತಿಬಂಧ ವಿಷಯವಾದರೂ ಮಹತ್ವದ್ದದೆ. ಶಿಕ್ಷಣ ಪದ್ಧತಿ ಹೇಗಿರಬೇಕು ಪಠ್ಯಪುಸ್ತಕಗಳ ತಿದ್ದುಪಡೆ ಇವುಗಳ ಬಗ್ಗೆಯೂ ಯೋಗ್ಯ ನಿರ್ಧಾರಗಳಾಗಬೇಕು. ರೇಲ್ವೆಮಾರ್ಗಗಳು ಬಂದರಗಳ ರಚನೆ, ಸರಕಾರೀ ನೌಕರರ ವೇತನ, ನಾಡಿನ ಆರ್ಥಿಕ ಸುಧಾರಣೆಯ ಬಗ್ಗೆ ಮಾಡಬೇಕಾದ ಪ್ರಯತ್ನಗಳು, ಉದ್ಯೋಗಗಳ ಅಭಿವೃದ್ಧಿ ಈ ಮೊದಲಾದ ವಿಷಯಗಳ ಬಗ್ಗೆಯೂ ಯಾವ ಧೋರಣೆಯನ್ನು ಅನುಸರಿಸಬೇಕು ಎಂಬುದನ್ನು ನಿಶ್ಚಯಿಸಬೇಕು. ಇವುಗಳ ವಿಚಾರಣೆಯಲ್ಲಿ ಸರಕಾರದವರು ನಾಡಿನಲ್ಲಿರುವ ತಜ್ಞರ ಸಲಹೆಗಳನ್ನು ಸಹ ಪಡೆಯಬೇಕು. ಈ ಬಗ್ಗೆ ಅಕ್ಟೋಬರ ೨ನೇ ತಾರೀಖಿನ ಒಳಗಾಗಿ ನಿರ್ಧಾರಗಳನ್ನು ಕನ್ನಡಿಗರು ಮಾಡಿಕೊಂಡು ಎಲ್ಲರೂ ಒಂದು ಮನಸ್ಸಿನಿಂದಲೂ ಕಾರ್ಯಮಾಡಲು ಹತ್ತಬೇಕು.

ಎನ್ನ ಅಧರಕೆ ಬಾಹೆ ಬಪ್ಪ ರುಚಿಯನ್ನು ಎನ್ನ ಉದರಕೆ ಬಾಹಬಪ್ಪ ಸುಖವನ್ನು ಎನ್ನ ಚೈತನ್ಯಕ್ಕೆ ಬಾಹಬಪ್ಪ ಸುಖಾದಿ ಸುಖಂಗಳನ್ನು ॥ ಎನ್ನ ಮನದ ತಲೆವಾಗಿಲೊಳಗಿರಲು ಕರುಣಾದಿಗಳೆಲ್ಲವಕ್ಕೆ ನಿಮ್ಮ । ಸನ್ಮತ ಪ್ರಾಣ ದನನಿಕ್ಕೆ ಕರುಣದಿಂ ಸಲಹಯ್ಯ ಲಿಂಗತಂದೆ ॥೩॥

ಬೇಕು ಬೇಡೆನ್ನದ ಪ್ರಸಾದಿ ಸಾಕುಸವಿಯನ್ನದ ಪ್ರಾಣಾದಿರುಚಿಯ ರುಚಿ ಯನ್ನದ ಪ್ರಸಾದಿಯು ಕರುಣದ ಕಂದನಾಗಿ ಭೋಗಿಸಿ ಭೋಗಿಸದ ಪ್ರಸಾದಿ ॥ ಭಾವಿಸಿದಡೆ ಭಾವಿಸದ ಪ್ರಸಾದಿ ಪ್ರಸಾದದಲ್ಲಿಯ ಆರೂಢದ ನಿಜವು ತಾನೆ ತನ್ನಯ ನೆಲೆಯನು ತನ್ನೊಳು ಕಂಡ ಪ್ರಸಾದಿಯು ಅಯ್ಯಾ ॥೪॥

ದೀಕ್ಷಿತನೆಂದೆನಿಸಿಕೊಳ್ಳದ ಪ್ರಸಾದಿ ದೀಕ್ಷೆಗೆ ತಲೆಗೆಯ್ಯನಿಕ್ಕದ ಪ್ರಸಾದಿ ಆ ದೀಕ್ಷೆಯ ಮಕ್ಕಳಿಗೆ ತನ್ನ ಪ್ರಸಾದವನಿಕ್ಕದ ಪ್ರಸಾದಿ ॥ ಏಕಲಿಂಗ ಪತಿ। ಗ್ರಾಹಕನಚ್ಚಪ್ರಸಾದಿ ನಿಚ್ಚ ಪ್ರಸಾದಿ ಸನುಮತ ಶ್ರೀ ಕೂಡಲಚನ್ನಸಂಗಯ್ಯ ನಲ್ಲಿ ಆತನೇ ಪ್ರಸಾದಿಯೋ ಅಯ್ಯಾ ॥೫॥

---

## ೫೧. ಕರಣಾರ್ಪಿತ ಸ್ಥಲ.

**ಸೂತ್ರ:—** ಇಂತು ಕಾಯದಲ್ಲಿ ಅರ್ಪಿತ ಮುಖವನ್ನೈದಿದ ಲಿಂಗವು ಪ್ರಸಾದಿಯ ಅಂತರ್ಮುಖದಲ್ಲಿ ಸಮರ್ಪಿತ ಮುಖವಾದ ಭೇದವೆಂತಿರ್ದು ದೆಂದಡೆ ಮುಂದೆ ಕರಣಾರ್ಪಿತ ಸ್ಥಲವಾದುದು.

**॥ಪದ॥ ರಾಗ· ಧನ್ಯಾಸಿ.**

ಅರ್ಪಿತಾವಧಾನ ಮುಖದ ಸುಖವನ್ನು ತಪ್ಪದೆ ತಿಳಿದು ನೋಡಾ ॥ಪ॥

ಧರಣಿ ಎಂಬ ಭಕ್ತನ ಅಂಗಕ್ಕೆ ಕರಸ್ಥಲ ಸುಚಿತ್ತವಾದುದು ನೋಡಾ। ಆಚಾರ ಲಿಂಗಮಯವು ನಾಸಿಕ ಮುಖ ಗಂಧಾರ್ಪಿತವು ನೋಡಾ ॥೧॥

ಭಕ್ತ ಭೂಮ್ಯಾಂಗ ಹಸ್ತಂಚ ಸುಚಿತ್ತಾಚಾರ ಲಿಂಗಯೋಃ । ತನ್ಮುಖಂ ಘ್ರಾಣಗಂಧಂಚ ಅರ್ಪಿತಂತೃಪ್ತಿ ಭೋಕ್ತವಾನ್ ॥೧॥

ಅಪ್ಪು ಮಹೇಶ್ವರನ ಅಂಗಕ್ಕೆ ಒಪ್ಪುವ ಸುಬುದ್ಧಿ ಹಸ್ತವೆನಿಸಿ ॥ ಇಪ್ಪುದು ಗುರುಲಿಂಗವು ಮುಖ ಜಿಹ್ವೆ ಅರ್ಪಿತ ರಸವು ನೋಡಾ ॥೨॥

ಜಲಂ ಮಾಹೇಶ್ವರಾಂಗಂಚ ಸುಬುದ್ಧಿರ್ಹಸ್ತ ಸದ್ಗುರೋಃ ॥ ಮುಖಂ ಜಿಹ್ವಾ ರಸಂ ಭೇದಂ ಅರ್ಪಿತಂ ತೃಪ್ತಿ ಭೋಕ್ತ್ರವಾನ್ ॥೨॥

ನಿಹಿತಪ್ರಸಾದಿಯಂಗತೇಜಕ್ಕೆ ನಿರಹಂಕಾರ ಹಸ್ತವು ನೋಡಾ ॥ ಸಹಜದಲ್ಲಿ ಶಿವಲಿಂಗ ಮುಖನೇತ್ರ ಬಹಳ ರೂಪಾರ್ಪಿತವು ನೋಡಾ ॥೩॥

ಅಗ್ನಿಯಂಗಂ ಪ್ರಸಾದೀನಾಂ ನಿರಹಂಕಾರ ಹಸ್ತಯೋಃ ॥ ಶಿವಲಿಂಗಂ ನೇತ್ರರೂಪಂಚ ಅರ್ಪಿತಂ ತೃಪ್ತಿ ಭೋಕ್ತ್ರವಾನ್ ॥೩॥

ಅನಿಲ ಪ್ರಾಣಲಿಂಗಿಯ ಅಂಗಕ್ಕೆ ಮನವೆ ಸುಹಸ್ತವೆನಿಸಿತು ನೋಡಾ ॥ ಅನುಪಮದ ಚರಲಿಂಗವು ಮುಖ ತ್ವಕ್ಕುತನು ಸುಖಾರ್ಪಿತವು ನೋಡಾ ॥೪॥

ಅಂಗಂ ತತ್ಪ್ರಾಣಲಿಂಗೀನಾಂ ವಾಯುಸ್ಸಮನ ಜಂಗಮಂ ॥ ತನ್ಮುಖಂ ತ್ವಚಸ್ಪರ್ಶಂಚ ಅರ್ಪಿತಂ ತೃಪ್ತಿ ಭೋಕ್ತ್ರವಾನ್ ॥೪॥

ವ್ಯೋಮಶರಣನ ಅಂಗಕ್ಕೆ ಹಸ್ತವು ಆ ಮಹಾ ಸುಜ್ಞಾನವೆನಿಸಿ॥ ಸ್ವಾಮಿ ಪ್ರಸಾದಲಿಂಗ ಶ್ರೋತ್ರಮುಖ ವಾ ಮಹಾ ಶಬ್ದಾರ್ಪಿತ ನೋಡಾ ॥೫॥

ಶರಣಂ ವ್ಯೋಮಮಂಗಂಚ ಹಸ್ತಂ ಜ್ಞಾನಪ್ರಸಾದಿಕಂ ॥ ತನ್ಮುಖಂ ಶ್ರೋತ್ರಶಬ್ದಂಚ ಅರ್ಪಿತಂತೃಪ್ತಿ ಭೋಕ್ತ್ರವಾನ್ ॥೫॥

ಭಾವೈಕ್ಯಾತ್ಮಾಂಗ ಹಸ್ತವು ದೇವನೆ ಶ್ರೀಮನ್ಮಹಾಲಿಂಗವಿನಿಸಿತು ನೋಡಾ ॥ ಭಾವಿಪೊಡೆ ಹೃದಯ ಮುಖ ತೃಪ್ತ್ಯಾರ್ಪಿತತಾವಿದು ಷಟ್ಸ್ಥಲಕ್ಕೆ ನೋಡಾ ॥೬॥

ಐಕ್ಯ ಭಾವಾಂಗ ಹಸ್ತಂಚ ಮಹಾಲಿಂಗಾವ ಧಾನಿನಾಂ ॥ ನಿರ್ಭಾವಂ ತನ್ಮುಖಂ ತೃಪ್ತಿ ಅರ್ಪಿತಂ ತೃಪ್ತಿ ಭೋಕ್ತ್ರವಾನ್ ॥೬॥

ಅಂಗಹಸ್ತಲಿಂಗ ಮುಖದ ಅವರಲ್ಲಿ ಹಿಂಗದೆ ಅನುವರ್ಪಿತ ಇದ ॥ ರಂದವ ಬಲ್ಲಾತ ಕೂಡಲ ಚನ್ನಸಂಗಯ್ಯನಲ್ಲಿ ಲಿಂಗೈಕ್ಯ ನೋಡಾ ॥೬॥



## ೫೨. ಭಾವಾರ್ಪಿತಸ್ಥಲ.

**ಸೂತ್ರ:—** ಇಂತು ಅಂತಃಕರುಣದಲ್ಲಿ ಸಮರ್ಪಿತ ಮುಖವನ್ನೈದಿದ ಲಿಂಗವು ಪ್ರಸಾದಿಯ ಸರ್ವಾಂಗದಲ್ಲಿ ತಾನೆ ಸರ್ವಾರ್ಪಿತವಾಗಿರ್ದ ಭೇದ ವೆಂತಿರ್ದುದೆಂದಡೆ ಮುಂದೆ ಭಾವಾರ್ಪಿತಸ್ಥಲವಾದುದು.

**ಪದ ರಾಗ ರಾಮಕ್ರಿ**

ಕಾಯಭಾವದ ಕೈಗಳಿಂದ ಪಂಚೇಂದ್ರಿಯೆಂಬಾಯತದ ಕೈಗಳಿಂ ಲಿಂಗ ಕರ್ಪಿಸುವೆನೆಂ | ಬಾಯುಕ್ತಿ ಖಂಡಿತವು ತನುಲಿಂಗ ಲಿಂಗತನುವಾದಡರ್ಪಿತ ವೆಲ್ಲವೂ ||ಪ||

ರೂಪಿಸಿ ಪದಾರ್ಥ ಬಂದುದ ಲಿಂಗಕಿತ್ತು ತಾನಾ ಪ್ರಸಾದವನಲ್ಲ ದೊಲ್ಲೆಂಬ ಭಕ್ತನಿಂ | ದೇಪರಿಯನಾರ್ಪಿತವ ನೆನೆಯ ಬಹುದೇನೊಂದು ಸುಖ ದುಃಖ ತನುವತಾಗೆ || ತಾ ಪತಿಕರಿಸಿಕೊಳ್ಳುವ ಪರಿಯಂತು ಕೊಳ್ಳುದುದ ಪರಿಹರಿಸಿ ಕೊಂಬ ಪರಿಯಾವುದೆಂಬಾ | ಳಾಪದೊಳಗದೆವ ವರ್ಮಲಿಂಗ ಭಾವಾಂಗ ವಾದಂಗರ್ಪಿತವೆಲ್ಲ ಸಹಜವು ||೧||

ನೆನನೆನ ಗು ಮುರಮುರದು ಖಂಡಿತ ಜ್ಞಾನದಿಂದನುವಾದುದನುವಾಗ ದೆಂಬದುರ್ಭಾವದಿ | ತನು ಮುಟ್ಟಿ ಮನಮುಟ್ಟಿ ದೊಂದೊಂದು ಸೂತಕವ ಕಲ್ಪಿಸಿ ವಿಕಲ್ಪಿಸುತಲಿ || ಅನುವರಿಯದಾಯತವನರಿಯ ಅರ್ಪಿತ ಮುಖದ ಘನವರಿಯ ರುಚಿಯನರ್ಪಿಸಿ | ತನು ರೂಪವನು ಹೊರದು ಪ್ರಳಯಕೊಳ ಗಹನೆ ಪ್ರಸಾದಿ ಪರಿಪೂರ್ಣ ಭಾವಿತನಲ್ಲದೆ ||೨||

ಅಪ್ಪುಗೆಯ ಸೋಂಕು ಸುಖತನುವ ತಟ್ಟದ ಮುನ್ನ ಆಪ್ಯಾಯನಾದಿ ಗಳು ಮನವಂಟದ ಮುನ್ನ | ಅರ್ಪಿಸಲು ಬೇಕು ಕಾಮಿತ ಕಲ್ಪಿತಾದಿಗಳು ಭಾವಮುಟ್ಟದೆ ಮುನ್ನ ಮುನ್ನವೇ || ತಪ್ಪಿಸಲು ಬಾರದೇನುವ ಕಾಯ ಸೋಂಕಿಲ್ಲದಿಪ್ಪುದಿಲ್ಲಾಗಿ ತತ್ಸ್ಥಾನ ವರ್ಮ ಪ್ರಾ | ಣಾರ್ಪಣಂಗೈದು ಒಡ ವೊಡಲಗುಣವಳಿದು ಲಿಂಗಾಂಗ ದೊಡಲು ಗೊಂಡುದಾಗಿ ||೩||

ಅಂಗವೇ ಲಿಂಗ ಲಿಂಗವೇ ಪ್ರಾಣವಾದುಭಯಸಂಗದಿಂ ಪ್ರಾಣಮನ ವಾಗಿ ಮನಭಾವ ನಿಜ | ಲಿಂಗ ಸ್ವಾಯತವು ಮುಂತಾಗಿ ಮನಹಿಂತಾಗಿ ಸಕಲ ಪ್ರವರ್ತನೆಗಳ ನೊಂದಾಗಿ || ಅಂಗೀಕರಿಪಾಮನಕೆ ಶ್ರೋತ್ರಘ್ರಾಣಾದಿ

ನೇತ್ರಂಗಳಿಗೆ ಜಿಹ್ವೆ ಸ್ಪರ್ಶಂಗಳ ಭಾವ ಭಾವವಾ | ದಂಗಕ್ಕೆನಾರ್ಪಿತಗಳಿಲ್ಲ ಸರ್ವಾಂಗ ಪ್ರಸಾದ ತನುಮಯ ಶುದ್ಧವಾದಾತಂಗೆಯು ||೪||

ಭಾವರುಚಿತತ್ವವಿಡಿದಂಗ ರೂಪಾದಿಗಳನಾ ವಿಧಾನದಿ ಪಿಡಿದು ಸೋಂಕು ತೃಪ್ತಿಯಸೂತ್ರ | ವಾವುದೇನಾದಡಂ ಕೈವಿಡಿದು ತ್ರಿವಿಧದೊಳು ತೆರಹು ಮರಹುಗಳದೇನುವಿಲ್ಲದೆ || ಸಾವಧಾನದೊಳು ಸಲೆನೆಲೆಯಾಗಿ ಲಿಂಗಾನುಭಾವ ನೆಲೆಗೊಂಡು ರೂಪಾದಿರುಚಿತ್ರಪ್ತಿಗಳ | ನೀವಭಾವಜ ಬಸವಣ್ಣನೇ ಪ್ರಸಾದಿ ಶ್ರೀ ಕೂಡಲ ಚನ್ನಸಂಗಯ್ಯನಲ್ಲಿ ||೫||

---

## ೫೩. ಶಿಷ್ಯಸ್ಥಲ.

**ಸೂತ್ರ:—** ಇಂತು ಕಾರ್ಯಾರ್ಪಿತ ಕರುಣಾರ್ಪಿತ ಭಾವಾರ್ಪಿತ ವೆಂಬ ತ್ರಿವಿಧ ಸ್ಥಲವೇಕವಾದ ಲಿಂಗವು ಪ್ರಸಾದಿಯ ಅಂಗದಲ್ಲಿ ಉಪ ದೇಶಿತ ಸ್ವರೂಪದಿಂದ ಶಿಷ್ಯಭಾವವನೈದಿದ ಭೇದವೆಂತಿರ್ದುದೆಂದಡೆ ಮುಂದೆ ಶಿಷ್ಯಸ್ಥಲವಾದುದು.

||ಪದ|| ರಾಗ—ಬೌಳಿ

ಜ್ಯೋತಿ ಸೋಂಕಿನಿಂದಲಾಗ ಜ್ಯೋತಿಯಂತೆ ಗುರು ಕೃಪೆಯೊಳು | ಜಾತನಾದ ಶಿಷ್ಯ ಗುರುಮಹಾತ್ಮೆವಿಡಿದು ಗುರುವಹಾ ||ಪ||

ಪರುಷ ಸೋಂಕಿನಿಂದ ಲೋಹ ಪರುಷ ಸೋಂಕಿ ಪರುಷವಹುದು | ಗುರುಪದಾಬ್ಜ ಸೋಂಕಿ ಗುರುಪದಸ್ಥನಹ ಶಿಷ್ಯನೂ ||೧||

ಆವುದಾವ ಬೀಜದಿಂದಲಾದ ಫಲವು ಬೆಳೆದು ಮರಳಿ ತಾವೆ ಬೀಜ ವಹವು ವೃಕ್ಷಬೀಜನ್ಯಾಯವು | ಆವ ಪರಿಯದಾವ ಪರಿ ಗುರುಭಾವದಿಂದಲು ದಯವಾದ ಪಾವನೀಯ ಶಿಷ್ಯ ಗುರುವಹ ||೨||

ಗುರುವಿನಿಂದಲಾದ ಶಿಷ್ಯ ಗುರುವ ನೆರೆವೆನೆಂಬ ಬರದ ಉರವಣಿಯೊಳು ಕೂಡಿ ನಡೆಯಲಾಗದು | ಚರಿಸಲಾಗದವರ ಚರಿಯನಿರುತ ಗೇಳಲಾಗದವರ ಸರಿಯೊಳಾವ ಭಕ್ತ ಭೋಗ ಮಾಡಲಾಗದು ||೩||

ದೃಷ್ಟಗುರುವಿನಂಘ್ರಿವಿಡಿದು ದೃಷ್ಟಿಭಾವದ ಗೋಚರದ ಷಟ್ತ್ರಿಂಶತ್ತ್ವಭಾ ಪಟಲ ತತ್ವ ಘನತೆಯಾ | ಮುಟ್ಟಿಸಿ ಪರವಸ್ತು ವಿಷಯ ಕಾಷ್ಠವಾಗಿ ತನ್ನ ಮನದ ಭೀಷ್ಟಲಿಂಕ ಸೋಂಕಿ ಲಿಂಗವಾಗಿ ಗುರುವಹನೆಂದು ||೪||

ತಾನೆ ಶಿಷ್ಯ ತಾನೆ ಭಕ್ತ ತಾನೆ ಗುರುವು ತಾನೆ ಲಿಂಗ ತಾನೆ ಜಂಗಮ ತಾನೆ ಪ್ರಸಾದ ತಾನೆ ತೃಪ್ತಿಯೂ | ಸ್ಥಾನದಲ್ಲಿ ಸುಖದೊಳಿಹ ಮಹಾನುಭಾವಿಯಾಗಿ ಗುರುವಿನಾಣತಿಯಲ್ಲಿ ಕೂಡಲ ಚನ್ನಸಂಗ ನಿಮ್ಮ ಶರಣನಲ್ಲಿ ||೫||

---

## ೫೪. ಶಿಶ್ರೂಷಾಸ್ಥಲ.

**ಸೂತ್ರ:**— ಇಂತು ಶಿಷ್ಯಭಾವವನ್ನೈದಿದ ಲಿಂಗವು ಪ್ರಸಾದಿಯ ಅಂಗದಲ್ಲಿ ಶಿಶ್ರೂಷಾಭಾವವನ್ನೈದಿದ ಭೇದ ವೆಂತಿರ್ದುದೆಂದಡೆ, ಮುಂದೆ ಶಿಶ್ರೂಷಾಸ್ಥಲ ವಾದುದು.

||ಪದ|| ರಾಗ. ರಾಮಕ್ರಿ

ಗುರುಪಾದ ಸೇವಾತುರ ಭೃತ್ಯನು ಸಂ | ಸಾರ ಭವಬಂಧ ವಿರಹಿತನು ||ಪ||

ಗುರುಪರಿಚಯುವೆ ಸಕಲ ಜಪಂಗಳು ಗುರುಪರಿಚಯುವೆ ಸಕಲ ತಪಂಗಳು | ಗುರುಪರಿಚಯುವೆ ಸದ್ಯೋನ್ಮುಕ್ತಿಯು ಗುರುಸನ್ನಿಹಿತ ಪರಮ್ನ ಸುಖವೂ ||೧||

ಅರಸಲೇಕೆ ಚಾತುರ್ವಿಧ ಪದಗಳ ಗುರುಚರಣದೊಳಗೆ ಮನಮುಗನಾಗಿನಿ | ಶ್ಚರಿಯದೊಳಗೆ ಗುರುಭಕ್ತಿಯ ನಳವಡಿಸಿದಡಲ್ಲಿಯೆ ಮುಕ್ತಿ ನೋಡಾ ||೨||

ಗುರುವಿನೊಳಿದಿರುತ್ತರವನರಿಯದೆ ತನುಕರಗಿ ಕೊರಗಿ ಭೃತ್ಯಾಚಾರ ಸ್ಥಲ| ಕರಿಗೊಂಡು ಗುರು ನಿರೂಪವನು ಮಾಡಿದಡಲ್ಲಿಯೆ ಮುಕ್ತಿ ನೋಡಾ||೩||

ಗುರು ಮೂರ್ತಿಯೇ ಪರಬ್ರಹ್ಮೋತ್ತರ ಗುರು ಪೂಜೆಯೆ ಸರ್ವಾಚಾರ ಸ್ಥಲ | ನಿರುತವೆಂದು ಗುರುವನು ನೆರೆನಂಬಿದಡಾತನೆ ಪರಮ ಸುಖಿ ನೋಡಾ ||೪||

ಒಂದು ದಿನ ಗುರುಸೇವೆ ಮಾಡಲು ಹಿಂದಣ ಜನ್ಮಾಂತರ ಕೋಟಿಗಳು | ಒಂದೇ ನಿಮಿಷದಲ್ಲಳಿವವು. ನೆಲೆಗೆಟ್ಟು ಕೂಡಲ ಸಂಗಯ್ಯ ನಿಮ್ಮಾಣೆ ||೫||

---

## ೫೫. ಸೇವ್ಯಸ್ಥಲ.

**ಸೂತ್ರ:—** ಇಂತು ಶಿಶ್ರೂಷಾಭಾವದಲ್ಲಿ ಭರಿತವಾದ ಲಿಂಗವು, ಪ್ರಸಾದಿಯ ಅಂಗದಲ್ಲಿ ಇತರೇತರ ಭಾವವ ಮರೆದು ಶಿಷ್ಯನೇಗುರು, ಗುರುವೇ ಶಿಷ್ಯನಾಗಿರ್ದ ಭೇದವೆಂತಿರ್ದುದೆಂದಡೆ ಮುಂದೆ ಸೇವ್ಯಸ್ಥಲವಾದುದು.

॥ಪದ॥ ರಾಗ—ಭೌ ಳಿ

ಗುರುಮಹಾತ್ಮ್ಯೆಯೊಳಗೆ ಶಿಷ್ಯಬೆರಿಸಿ ಬೇರೆದೋರದೆ, । ಗುರುವೆ ಶಿಷ್ಯ ಶಿಷ್ಯನೇ ಗುರುವಾದ ನಿತ್ಯ ಸತ್ಯನು ॥ಪ॥

ಗುರುವಿನಂತರಂಗದೊಳಗೆ ಉದಯವಾದ ಶಿಷ್ಯನು । ಗುರುವಿನಂತುಟಲ್ಲದೆ ಬೇರೆ ಭಿನ್ನಭಾವವಿಲ್ಲ ನೋಡಾ ॥೧॥

ಬೇರೆ ಶಿಷ್ಯನೆಂಬ ಭಿನ್ನಭಾವ ದೋರದಿರ್ದಡಾತ ಗುರು । ಬೇರೆ ಗುರುವೆಂಬ ಭಿನ್ನಭಾವ ದೋರದಿರ್ದಡಾತ ಶಿಷ್ಯನು ॥೨॥

ಉಪಮೆ ನಿಲುಕದುಪದೇಶ ಕುರುಹಿನೊಳಗೆ ತನ್ನ ಮರದು । ಅಪರಮಿತದೊಳಿಪ್ಪ ನಿಲವನುಪಮಿಸಲ್ಕೆ ಬಪ್ಪುದೆ ॥೩॥

ಗುರುವ ಶಿಷ್ಯನವಗ್ರಹಿಸಿ ಶಿಷ್ಯನೆಂಬ ಭಾವಭೇದ । ಹರಿದು ಉಭಯಗೆಟ್ಟನಿಲವ ಕುರುಹು ಪರಿಯ ಬಪ್ಪುದೆ ॥೪॥

ಅಪಶಬ್ದ ಕಿಂಬು ಗೊಡದೆ ಸೇವ್ಯ ಗುರು ಮಹತ್ಮೆಯೊಳಗೆ ಕೇವಲಸ್ವರೂಪ ಕೂಡಲಸಂಗ ನಿಮ್ಮ ಶರಣನು ॥೫॥

---

## ೫೬. ಜೀವಾತ್ಮಸ್ಥಲ.

**ಸೂತ್ರ:—** ಇಂತು ನವಸ್ಥಲಂಗಳೇ ತ್ರಿವಿಧ ತ್ರಿವಿಧಂಗಳಾಗೇಕಮಾದ ಶಿವಲಿಂಗವು ಮಹಾನು ಭಾವಿಯಾದ ಪ್ರಾಣಲಿಂಗಿಯ ಜಂಗಮ ಲಿಂಗ ಸಂಬಂಧದಲ್ಲಿ ಜೀವಭಾವವಂ ನಿವೃತ್ತಿಯುಂ ಮಾಡಿ ಲಿಂಗ ಸಜ್ಜೀವ ಸಮ್ಯಕ್ಕಾದ ಭೇದವೆಂತಿರ್ದುದೆಂದಡೆ ಮುಂದೆ ಜೀವಾತ್ಮಸ್ಥಲವಾದುದು.

ಪದ ರಾಗ ವರಾಳಿ

ಜೀವ ಪರಮರ ಭೇದವರಿಯ ಬಲ್ಲಡೆ ಪ್ರಣಮ ಧ್ಯಾನಾರೂಢಮಾಗಿ ತನುಗುಣಗಳ ಸೂಸಲೀಯ್ಯದೆ ಶಿವಜ್ಞಾನಿಯ ಹೃದಯದೊಳು ತಾನಿಪ್ಪನು ಶಿವನು ಸಂದಿಲ್ಲದೆ ॥ಪ॥

ಅಷ್ಟದಳ ಕಮಲದೊಳಗಿಪ್ಪ ನಾತುಮ ತಾನು ಅಷ್ಟದಳಮಧ್ಯಚತು ರಾಶ್ರಮದೊಳು ಇಪ್ಪ । ಪರಮಾತುಮನ ಮುಟ್ಟೆಹೆನೆನುತ ಹಂಸ ಅಷ್ಟದಳ ವಳಯದೊಳು ತೊಳಲುತಿಹನು ॥೧॥

ಒಂದು ದಳದಲಿ ಪುಣ್ಯ ಒಂದು ದಳದಲಿ ಪಾಪ ಒಂದು ದಳದಲಿ ಗಮನ ನಿರ್ಗಮನವು । ಒಂದು ದಳದಲಿ ಅಶನ ವ್ಯಸನ ವಿಷಯಾ ನಿದ್ರೆ ಒಂದು ದಳದಲೊಂದೊಂದು ಛಂದ ॥೨॥

ಷಡುವರ್ಗವೆಂಬಿವನು ಸಮನಿಸದಿರಾ ನೀನು ಷಡುವಳಯದೈವತಕ್ಷರವ ತಿಳಿಯಾ । ಚವು ಪತ್ರ ಷಡುಪತ್ರ ದಶಪತ್ರ ದ್ವಾದಶಂ ಷೋಡಶಂ ಉರ್ಧ್ವ ದಲವು ಭಯಕಂಡಾ ॥೩॥

ಇಪ್ಪತ್ತೊಂದು ಸಾವಿರದ ಆರು ನೂರು ಹಂಸಾಹಂಸ ಎಂಬ ಜಪತಾನೆ ಹಂಸ ದಿವರಾತ್ರೆ ಎನ್ನದನವರತಜಪಿಸುವದು ಪ್ರಾಣೋಪಾನದೆಡೆಯಲ್ಲಿ ಉದಯ ಕಂಡಾ ॥೪॥

ದಶವಾಯುಗಳ ತನ್ನ ವಶಕೆ ಹರೀಯಲೀಯದೆ ಉರ್ಧ್ವವಶಕೆಬಪ್ಪ ಪ್ರಣವ ವಶನಾಗಿರು । ವಿಸಯಲೋಚನ ಘನಗುರು ಪ್ರಿಯ ಸೋಮನಾಥ ಎಸಳಿನ ದಳದೊಳಗೆ ಬೆಳಗುತಿಹನು ॥೫॥

---

## ೫೭ ಅಂತರಾತ್ಮಸ್ಥಲ

**ಸೂತ್ರ:**— ಇಂತು ಜೀವಭಾವಮುಂ ನಿವೃತ್ತಿಯಂಮಾಡಿದ ಲಿಂಗವು ಪ್ರಾಣಲಿಂಗಿಯೊಳಗೆ ಆತ್ಮವಿವೇಕಿಯಾಗಿರ್ದ ಭೇದವೆಂತಿರ್ದುದೆಂದಡೆ ಮುಂದೆ ಅಂತರಾತ್ಮ ಸ್ಥಲವಾದುದು.

॥ಪದ॥ ರಾಗ. ಮಾಳವಗೌಳ

ದೇಹದೊಳು ಚರಿಸು ಮಂತರ್ದೇಹಿ ಯಂತರಿಯಾಮಿ ಸ್ವಪ್ನದ । ಗ್ರಾಹಕತೆಯಂ ತಂಬು ಜದಪರಿಮುಟ್ಟಿ ಮುಟ್ಟದಿಹ ॥ಪ॥

ಹಂಸ ಪವನದಳ ದಳಂಗಳೊಳಂ ಸಿಕಗಳೊಡಗೂಡಿ ಆತ್ಮನೊಳಂ ಸಮಾಹಿತಮಾಗಿ ತೊಗುವ ಜ್ಯೋತಿರೂಪಕವು । ಸಂಶಯದ ಸಂಸಾರ

ಕಾಯದೊಳು ಸಿಲುಕಿ ಮಹಾಭೂತಗೂಡಿರ್ದು ಸಹಜ ಬೇರಾಗಿ ಸಚರಾಚರವ ಚರಿಸುತ್ತಿಹಾ ||೧||

ನೇತ್ರ ಸೂತ್ರಂಗಳಂತೆ ದೃಶ್ಯದ ಭ್ರಾಂತು ತನ್ನೊಳಡಗಿ ಶ್ರೋತ್ರ ಸೂತ್ರದಂತಿರೆ ಶಬ್ದಗ್ರಾಹಿಸಿ ಘ್ರಾಣವಾಸನೆಯ | ಸೂತ್ರದಂತಿರೆ ಜಿಹ್ವೆರುಚಿಗಳ ಸೂತ್ರವಿಡಿದಂತಂಗ ಸೋಂಕಿನ ಸೂತ್ರವೆಂತಂತರಾತ್ಮನು ಬೆರಸಿ ಬೆರಸದಿಹಾ ||೨||

ಪಶು ಪಶುವಿನಂತಿಹುದು ತಾನಾಪಶುವಿನೊಳಗಣ ಅಮೃತದಂತಿಹ ವಿಷಯ ವಿಷಯಗಳೊಳಗಿಹವುತಾನಾ || ವಿಷಯದೊಳಗೆಲ್ಲ ವಚಿಸಿ ಕೊಂಡಿಹ ಜ್ಞಾನದಂತಿಹ ವಸುಧೆ ಜಾತದಫಲ ಫಲಾಂತರದೆ ಸಕರುಚಿ ಯಂತಂತರಾತ್ಮನು ಬೆರಸಿ ಬೇರಿಹೆನು.

ಸ್ವಪ್ನ ಸೂತ್ರವದೆ ಹೇಗೆ ಗಗನದೊಳಿಪ್ಪ ರವಿಶಶಿ ಕಿರಣಸೂತ್ರಗಳಪ್ಪುಗೆಗಳಪ್ಪುಗೆಗಳಂತಂತೆ ವಾರಿಧಿ ಜಠರ ಕುಹರದೊಳಿಪ್ಪ ಸಿಖಿಯಂತಖಿಳವನುಗ್ರಹಿಸಿಪ್ಪ ದೃಷ್ಟಿಯ ಸೂತವೆಂತಂತಿಪ್ಪ ಜಗದಂತರಿಯಾತ್ಮಕವಪ್ಪ ರೂಪು ರೂಪಾಗಿ ||೪||

ತಾನೆ ಜಗ ತಾನೆ ಮಹಾಗಮ ತಾನೆ ವಿಧಿ ತಾನೆ ಮಹಾಕ್ರಿ ತಾನೆಯಾಗಿಯು ತಾನೆಯಲ್ಲದೆ ತಾನೆವರದೆಶೆಯ || ಜನನಸ್ಥಿತಿ ಮರಣದನುಸಂಧಾನಗಳನನುಕರಿಸ ಮನನ ಜ್ಞಾನದಂತ ಜ್ಯೋತಿರಾತ್ಮ ಗುಹೇಶ್ವರನ ಶರಣಾ ||೫||

---

## ೫೮. ಪರಮಾತ್ಮಸ್ಥಲ.

**ಸೂತ್ರ**— ಇಂತು ಅಂತರಾತ್ಮ ವಿವೇಕಾನುಭಾವಿಯಾಗಿರ್ದ ಲಿಂಗವು ಪ್ರಾಣಲಿಂಗಿಯು ಆತ್ಮವಿವೇಕದಿಂ ಪರಮಾತ್ಮನ ಪರಾಮರಿಸಿದ ಭೇದವೆಂತಿರ್ದುದೆಂದಡೆ ಮುಂದೆ ಪರಮಾತ್ಮಸ್ಥಲವಾದುದು.

||ಪದ|| ರಾಗ. ಭೂಪಾಳಿ

ಪರಮಮೂರುತಿ ಪರಮಜ್ಞಾನಿ ಲೋಕಪ್ರಪಂಚನಲ್ಲ | ನಿಷ್ಪ್ರಪಂಚ ನಾಮ ನಿರ್ನಾಮ ನಿಷ್ಕಾಮಿಯಾಗಿ ||ಪ||

೪೨೫. ಊನವಾಗಿಹ ದೇಹವ ಕೂಡಿಕೊಂಡು ಹೋಗಿ ತಾನದಾಗಿ ಜೀವನು ತಾನೆಯಾಗಿ, ಸಾಯದೆ ಸತ್ತು, ಮೌನವಾಗಿಹ ತೂರ್ಯಾತೀತವ ಮುಳುಗಿಕೊಂಬ ಜ್ಞಾನ ನಾಯಕನೆ ಈತನೆಂದು ಶ್ರುತಿಗಳು ಸಾರುತ್ತಿವೆ ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೪೨೬. ಜೀವ ಕರಣ ದೇಹ ಇತ್ಯಾದಿಗಳು ವಿಸ್ತೀರ್ಣವಾಗಿ ಅಡಗು ವದಕ್ಕಿಂಬಾಗಿ ವಿಷಯ ಭಾವವು ಕೆಟ್ಟು, ಭಾವಕ ಕಾರ್ಯ ಉಪಾಧಿ ಅಳಿದು, ಸುಷುಪ್ತಿಯ ಹಾಗೆ ಪರಮ ವಿಕೃತಿಭಾವಂಗಳ ವಿಸ್ತೀರ್ಣವಾಗಿ ಅಡಗಿ, ಏನು ಇಲ್ಲದ ಅವಾಚ್ಯ ಪರಮ ಭಾಗವಾಗಿಹ ತೂರ್ಯಾತೀತವಹ ಶ್ರುತಿಗಳು ಪರವ ತಿಂದುದು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೪೨೭. ಜಾಗ್ರತ್, ಸ್ವಪ್ನ, ಸುಷುಪ್ತಿ, ತೂರ್ಯ, ತೂರ್ಯಾತೀತ ಈ ಐದು ಅವಸ್ಥೆಗಳಾಗಿ ಕೆಡುಹದು ಪರವಲ್ಲ. ಶಿವನಿಗೆ ಅವಸ್ಥೆಗಳೊಂದು ಕಾಲವು ಇಲ್ಲವೆಂದು ಸಕಲಾಗಮ ಶಾಸ್ತ್ರಂಗಳಲ್ಲಿ ಪ್ರಸಿದ್ಧವಾಗಿ ಹೇಳುತ್ತಿಹುದು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೪೨೮. ತೂರ್ಯವಡಗಿ ಹೇಳಲಾರದ ಹಾಳವರಿದಾತ ಪರಾಪರವೆಂಬರು ನೋಡಾ. ಪರಾಪರವೆಂಬ ತುದಿಗು ಅಗೋಚರವೆಂಬುದನಾರು ಅರಿಯರು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೪೨೯ ವಾಗಾದಿಗಳೈದು, ಶ್ರೋತ್ರವಚನಾದಿಗಳೈದು ಶ್ರೋತ್ರಾದಿಗಳೈದು, ಶಬ್ದಾದಿಗಳೈದು, ಕರಣನಾಲ್ಕು, ಕರಣಂಗಳ ಮೇಲೆ ಪುರುಷನೊಬ್ಬನು. ಆ ಪುರುಷಗಳತ್ತತ್ತ ಪರವು, ಆ ಪರಕ್ಕತ್ತತ್ತ ವ್ಯೋಮ, ಆ ವ್ಯೋಮಕತ್ತತ್ತ ವ್ಯೋಮಾತೀತ, ಶಿವನೆಂದು, ಸಕಲ ವೇದಾಗಮ ಶಾಸ್ತ್ರಂಗಳು ಸಾರುತ್ತಿಹುದು ನೋಡಾ! ಅಪ್ರಮಾಣ ಕೂಡಲಸಂಗಮದೇವಾ.

೪೩೦. ಆ ವ್ಯೋಮಾತೀತವೆಂಬ ಮಹಾ ಘನದಲ್ಲಿ ಲಿಯ್ಯವಾದ ಶರಣನ ನಿಲವದೆಂತೆಂದಡೆ, ರವಿಯೊಳಗಣ ಬಿಂಬವಂತಿದ್ದುದು, ದರ್ಪಣದೊಳಗಣ ಪ್ರತಿಬಿಂಬದಂತಿದ್ದುಮ ಪುಷ್ಪದೊಳಗಣ ಪರಿಮಳದಂತಿದ್ದುದು, ಜ್ಯೋತಿಯೊಳಗಣ ಕರ್ಪುರದಂತಿದ್ದುದು ನೋಡಾ! ಮಹಾಘನಲಿಂಗದಲ್ಲಿ ಲಿಯ್ಯವಾದ ಶರಣನ ನಿಲವು ಅಪ್ರಮಾಣ ಕೂಡಲಸಂಗಮದೇವಾ.

೩೩೧. ಶ್ಲೋಕದೊಳಗಣ ಅರ್ಥದಂತಿದ್ದುದು ಫಲದೊಳಗಣ ರುಚಿಯಂತಿದ್ದುದು, ಕ್ಷೀರದೊಳಗಣ ಘೃತದಂತಿದ್ದುದು, ರತ್ನದೊಳಗಣ ದೀಪ್ತಿಯಂ

ತಿದ್ದುದು ನೋಡಾ ಮಹಾ ಘನ ಲಿಯ್ಯವಾದ ಶರಣನ ನಿಲವು ಅಪ್ರಮಾಣ ಕೂಡಲಸಂಗಮದೇವಾ.

೪೩೨. ತಿಲದೊಳಗಣ ತೈಲಡಂತಿದ್ದುದು, ಶಿಲೆಯೊಳಗಣ ಪಾವಕ ದಂತಿದ್ದುದು, ಬೀಜದೊಳಗಣ ವೃಕ್ಷದಂತಿದ್ದುದು, ಅರುವಿನೊಳಗಡಗಿದ ಅರು ವಿನಂತಿರ್ದುದು ನೋಡಾ ಮಹಾ ಘನ ಲಿಂಗದಲ್ಲಿ ಲಿಯ್ಯವಾದ ಶರಣನ ನಿಲವು ಅಪ್ರಮಾಣ ಕೂಡಲಸಂಗಮದೇವಾ.

೪೩೩. ತನ್ನನುಭೂತಿಯಲ್ಲಿ ತಾ ಕಂಡ ಶರಣನ ನಿಲವು ಕುರುಹಲ್ಲ ರೂಪಲ್ಲ ನಿರೂಪ ಅಲ್ಲ. ಹೊಸತಲ್ಲ, ಹಳೆದಲ್ಲ ಒಳಗಲ್ಲ ಹೊರಗಲ್ಲ ಹಿಂದಲ್ಲ ಮುಂದಲ್ಲ ಕೆಳಗಲ್ಲ ಮೇಲಲ್ಲವೆಂದುದು ನೋಡಾ ತತಿಗಳು ತನ್ನನುಭೂತಿಯಲ್ಲಿ ತಾ ಕಂಡ ಶರಣನ ನಿಲವು ದಶ ಚಕ್ರಂಗಳಲ್ಲ ಅವಸ್ಥೆಗಳೈದಲ್ಲ ಆರಕ್ಷರವಲ್ಲ ಆರು ವರ್ಣವಲ್ಲ ಐದು ಮಂಡಲವಲ್ಲವೆಂದುದು ನೋಡಾ ಶ್ರುತಿಗಳು ತನ್ನನು ಭೂತಿಯಲ್ಲಿ ತಾ ಕಂಡ ಶರಣನ ನಿಲವು ಚತುರ್ದಶ ನಾಡಿಗಳಲ್ಲ, ಚತು ರ್ದಶ ವಾಯುವಲ್ಲ ಪಂಚ ವಿಂಶತಿ ತತ್ವವಲ್ಲ, ಅಷ್ಟ ವಿಂಶತಿ ತತ್ವವಲ್ಲ, ತೆತ್ತೀಸ ತತ್ವವಲ್ಲವೆಂದುದು ನೋಡಾ ಶ್ರುತಿಗಳು ತನ್ನನುಭೂತಿಯಲ್ಲಿ ತಾ ಕಂಡ ಶರಣನ ನಿಲವು ಐವತ್ತೆರಡಕ್ಷರವಲ್ಲ, ಐದು ಭೂತವಲ್ಲ, ಆರು ಸಾದಾ ಖ್ಯವಲ್ಲ, ಆರು ಕಲೆಗಳಲ್ಲ ಆರು ಶಕ್ತಿಗಳಲ್ಲ ತುರ್ಯಾತೀತವಲ್ಲ, ಪುರುಷ ನಲ್ಲ, ಪರವಲ್ಲವೆಂದು ನೋಡಾ ಶ್ರುತಿಗಳು ತನ್ನನುಭೂತಿಯಲ್ಲ ತಾ ಕಂಡ ಶರಣನ ನಿಲವು ವ್ಯೋಮವ್ಯೋಮಾತೀತವಲ್ಲ ವಾಚಾಮಗೋಚರವಲ್ಲ, ನಿತ್ಯ ನಿರಂಜನ ನಿರಾಳ ನಿರಾಮಯನಲ್ಲ ನಿರಾಮಯಾತೀತಕತ್ತೆತ್ತ, ಅತ್ಯತಿಷ್ಠಾದ್ದ ಶಾಂಗುಲವೆಂದುದು ನೋಡಾ ಶ್ರುತಿಗಳು ಸಾರುತ್ತವೆ ನೋಡಾ ನಿಂದ ವಾಸ ನೆಯು ಕೆಟ್ಟದ್ದೆಂದು ನಿರ್ವಾವೆಂದು ಶ್ರುತಿಗಳು ಸಾರುತ್ತವೆ ನೋಡಾ ಈ ಮೂರು ನಿರ್ವಾಣವನೊಳಕೊಂಡು, ಇಹುದೊಂದು, ಮಹಾ ನಿರ್ವಾಣವೆಂದು ಶ್ರುತಿಗಳು ಸಾರುತ್ತಿವೆ ನೋಡಾ. ಆ ಮಹಾ ನಿರ್ವಾಣನನೊಳಕೊಂಡು ಅಖಂಡಿತ ಅಪ್ರಮಾಣ ಅಗೋಚರವಾಗಿಹುದೊಂದು, ನಿರ್ವಾಣ ನೋಡಾ ಆ ನಿರ್ವಾಣವ ಶ್ರುತಿಗಳು ಅತ್ಯತಿಷ್ಠಾದ್ದಶಾಂಗುಲವೆಂದುದು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

ಅಹಂಕಾರವೆಂಬೆನೆ ಉಕಾರವಾಗಿಹುದು. ಉಕಾರವೆಂಬೆನೆ ಮಕಾರವಾಗಿ ಹುದು. ನೋಡಾ. ಮಕಾರವೆಂಬೆನೆ ಓಂಕಾರವಾಗಿಹುದು ಅಹಂಕಾರವೆಂಬೆನೆ

ಅಚಲನಪ್ಪ ನಿರಾಳವಾಗಿಹುದು, ನೋಡಾ ನಿರಾಳವೆಂಬೆನೆವಾಗಿಹುದು ನಿರಂಜನವೆಂಬೆನೆ ನಿರಾಮಯವಾಗಿಹುದು ನೋಡಾ ನಿರಾಮಯವೆಂಬೆನೆ, ನಿರಾವಯಾತೀತವಾಗಿಹುದು, ನಿರಾಮಯಾತೀತವೆಂಬೆನೆ, ನಿರಾಮಯಾತೀತ ಕತ್ತತ್ತವಾಗಿಹುದು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೪೩೪. ಬಿಂದುವಾಗಿದ್ದು ಅಲ್ಲದೆ ನಾದವಾಗಿಹ, ಘನವ ಆರು ಅರಿಯರು, ನಾದವಾಗಿಹುದು ಅಲ್ಲದೆ ಕಳೆಯಾಗಿಹ ಘನವನಾರು ಅರಿಯರು. ನಾದಬಿಂದು ಕಳೆಯಾಗಿ ಅಲ್ಲದೆ ನಾದಬಿಂದುಕಳಾತೀತವಾಗಿಹ ಘನವ ಆರು ಅರಿಯರು. ನಾದ ಬಿಂದು ಕಳಾತೀತವಾಗಿಹ ಘನವ ಮೀರಿ ಅತ್ತಿತ್ತಲಾಗಿ ಮಹಾ ಘನವ ಆರು ಅರಿಯರು ಅಪ್ರಮಾಣಕೂಡಲಸಂಗಮದೇವಾ.

೪೩೫. ವೇದಾಗಮ ಪುರಾಣಂಗಳ ನೋಡಿ ಕಂಡೆಹೆನೆಂಬ ಭ್ರಾಂತರ ನೋಡಾ. ವೇದಂಗಳೋದಿ ಕಾಣದೆ ವೇದಾತೀತನೆಂದುದು ನೋಡಾ ಆಗಮಂಗಳ ನೋದಿ ಕಾಣದೆ, ಆಗಮಾತೀತನೆಂದುದು ನೋಡಾ. ಶಾಸ್ತ್ರಂಗಳೋದಿ ಕಾಣದೆ ಶಾಸ್ತ್ರತೀತನೆಂದುದು ನೋಡಾ. ಪುರಾಣಂಗಳೋದಿ ಪುರಾಣಾತೀತನೆಂದುದು ನೋಡಾ. ಉಪನಿಷತ್ತುಗಳೋದಿ ಕಾಣದೆ ಉಪಮಾತೀತನೆಂದುದು ನೋಡಾ ಆ ಉಪಮಾತೀತವೆಂಬ ಮಹಾ ಘನವ ನಮ್ಮ ಅಪ್ರಮಾಣ ಕೂಡಲಸಂಗಮ ದೇವಾ.

೪೩೬. ಗುರುಕಾರುಣ್ಯವಿಲ್ಲದೆ ವೇದಾಗಮಶಾಸ್ತ್ರಪುರಾಣಂಗಳೋದಿ, ಅಪ್ರಮಾಣ ಕೂಡಲಸಂಗಯ್ಯನ ಕಂಡೆನೆಂಬ ಭಂಡರ ನೋಡಾ. ವೇದಾಗಮ ಶಾಸ್ತ್ರ ಪುರಾಣಂಗಳೋದಿ ಕಾಣದೆ ಹೋದವು. ಅದು ಕಾರಣ ವೇದ ವಿಪ್ರರಚೋದ್ಯ ಶಾಸ್ತ್ರ ಸಂತೆಯ ಸುದ್ದಿ ಪುರಾಣ ಪುಂಡರ ಗೋಷ್ಠಿ ಎಂಬ ಶರಣರವಾಕ್ಯ ದಿಟ ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೪೩೭. ಅನೇಕ ವೇದಾಗಮ ಶಾಸ್ತ್ರ ಪುರಾಣವನೋದಿ ಕೇಳಿ ಹೇಳಿ ದರೇನು ? ಮನದ ಕತ್ತಲೆ ಹರಿಯದು ನೋಡಾ. ಓಂಕಾರವೆಂಬ ಕಂಭದ ಮೇಲೆ ಮನ, ಬುದ್ಧಿ, ಚಿತ್ತ, ಅಹಂಕಾರವೆಂಬ ಪಣತೆಯನಿರಿಸಿ, ಅಷ್ಟ ಮದವೆಂಬ ಬತ್ತಿಯ ತೀವಿ, ಜ್ಞಾನೇಂದ್ರಿಯ ಕರ್ಮೇಂದ್ರಿಯವೆಂಬ ತೈಲ ವನೆರೆದು, ಜ್ಞಾನಾಗ್ನಿಯ ಮುಟ್ಟಿಸಿ, ಸ್ವಯಂ ಪ್ರಕಾಶ ಬೆಳಗುವದು ನೋಡಾ. ಅನಂತ ಕೋಟಿ ಸೂರ್ಯ ಚಂದ್ರಾಗ್ನಿಮಯವಾಗಿ ಮಹಾ ಜ್ಯೋತಿ ಬೆಳಗು ತ್ತಿಹುದು. ಆ ಮಹಾ ಜ್ಯೋತಿ ಪ್ರಕಾಶದಲ್ಲಿ ಆಣವ, ಮಾಯೆ, ಕಾರ್ಮಿಕ

ವೆಂಬ ಹುಳಗಳು ಬಿದ್ದು ಸತ್ತವು. ಹೃದಯದ ಕತ್ತಲೆ ಹರಿಯಿತ್ತು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೪೩೮. ದೇಹವಳಿದು, ಜೀವವಳಿದು, ಮನವಳಿದು, ಅರುಹಳಿದು, ತಾನೆಂಬ ಪರವಳಿದು, ಪೃಥ್ವಿ, ಅಪ್ಪು, ತೇಜ, ವಾಯು, ಆಕಾಶವಳಿದು, ತೂರ್ಯ ತೂರ್ಯಾತೀತವಳಿದು, ವ್ಯೋಮಾತೀತವಳಿದು, ವ್ಯೋಮಾತೀತಕತ್ತತ್ತವಾಗಿಹ ಅಪ್ರಮಾಣ ಕೂಡಲಸಂಗಮನಲ್ಲಿ ಲಯವಾದ ಮಹಾ ಶರಣನ ನಿಲವಿಂಗೆ ನಮೋ ನಮೋ ಎನುತಿರ್ದೆನು.

೪೩೯. ನಿರಾಮಯಾತೀತದಲ್ಲಿ ಹುಟ್ಟಿದ ಶರಣನು ನಿರಾಮಯಾತೀತದಲ್ಲಿ ಬೆಳದರೆ, ನಿರಾಮಯಾತೀತವಾಗಿಹುದು ನೋಡಾ ಜನನವು ಅಪ್ರಮಾಣ ಕೂಡಲಸಂಗಮದೇವಾ.

೪೪೦. ಹೆಣ್ಣೆಂಬೆನೆ ಹೆಣ್ಣಲ್ಲ ಗಂಡೆಂಬೆನೆ ಗಂಡಲ್ಲ, ನಪುಸಂಕನೆಂಬೆನೆ ನಪುಸಂಕನಲ್ಲ ನೋಡಾ ಈ ಏನೂ ಅಲ್ಲದ ನಿರಾಮಯಾತೀತದಲ್ಲಿ ಲೀಯ್ಯವಾದ ಶರಣಂಗೆ, ನಿರಾಮಯಾತೀತವಾಗಿಹುದು ನೋಡಾ ಜನನವು ಅಪ್ರಮಾಣ ಕೂಡಲಸಂಗಮದೇವಾ.

೪೪೧. ನಿರಾಮಯಾತೀತದಲ್ಲಿ ಹುಟ್ಟಿದ ನೋಡಾ ಶರಣನು. ನಿರಾಮಯಾತೀತದಲ್ಲಿ ಬೆಳೆದನು ನೋಡಾ ಶರಣನು. ನಿರಾಮಯಾತೀತದಲ್ಲಿ ಲೀಯ್ಯವಾದ ನೋಡಾ ಶರಣನು. ನಿರಾಮಯಾತೀತದಲ್ಲಿ ಲೀಯ್ಯವಾದ ಶರಣನ ಜನನವು ನಿರಾಮಯಾತೀತವಾಗಿಹುದು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೪೪೨. ರೂಪಿಲ್ಲದವನ ಇದನೊಂದು, ನಿರೂಪಲ್ಲದ ಮಾಮರದ ತುದಿಗೆ ಮೆಲಿಲ್ಲದ ಹಣ್ಣು ಮೆದ್ದು ಪರಿಣಾಮಿಸಿ ಬಯಲಿಲ್ಲದ ನಿರ್ವಯಲಲ್ಲಿ ಒಯ್ಯಲಾದ ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೪೪೩. ಆತ್ಮ ತತ್ವ ಇಪ್ಪತ್ತೈದು, ವಿದ್ಯಾತತ್ವ ಹತ್ತು, ಶಿವತತ್ವ ಒಂದು, ಅದೆಂತೆಡೆ, ಭೂತಾದಿ ಪಂಚಕಂಗಳೈದು ಶ್ರೋತ್ರಾದಿ ಜ್ಞಾನೇಂದ್ರಿಯಂಗಳೈದು, ಶಬ್ದಾದಿ ವಿಷಯಂಗಳೈದು, ವಾಗಾದಿ ಕರ್ಮೇಂದ್ರಿಯಗಳೈದು, ಮನಸಾದಿ ಪಂಚಕಂಗಳೈದು, ಆತ್ಮತತ್ವ ಇಪ್ಪತ್ತೈದು, ಕರ್ಮ ಸಾದಾಖ್ಯ ಕರ್ತೃ ಸಾದಾಖ್ಯ, ಮೂರ್ತಿ ಸಾದಾಖ್ಯ, ಅಮೂರ್ತಿ ಸಾದಾಖ್ಯ, ಶಿವ ಸಾದಾಖ್ಯ ನಿವೃತ್ತಿಕಲೆ ಪ್ರತಿಷ್ಠಾ ಕಲೆ ವಿದ್ಯಾಕಲೆ ಶಾಂತಿಕಲೆ ಶಾಂತ್ಯತೀತ ಕಲೆ ಇಂತು ವಿದ್ಯಾತತ್ವ ಹತ್ತು, ಶಿವತತ್ವ ಒಂದು, ಇಂತು ಮೂವತ್ತಾರು

ತತ್ವಂಗಳೊಡನೆ, ಶಿವ ತತ್ವವೇ, ತತ್ಪದ, ಆತ್ಮ ತತ್ವವೆ ತ್ವಂ ಪದ ಅಪ್ಪಾ ತತ್ವವೆ ಅಸಿಪದ ಅಕಾರದಲ್ಲಿ ತತ್ಪದ ಐಕ್ಯವಾಯಿತ್ತು. ಉಕಾರದಲ್ಲಿ ತ್ವಂ ಪದ ಐಕ್ಯವಾಯಿತ್ತು. ಮಕಾರದಲ್ಲಿ ಅಸಿ ಪದ ಐಕ್ಯವಾಯಿತ್ತು. ಮಕಾರ ಅಕಾರ ಉಕಾರ ಯೇಕಾರ್ಥವಾಗಿ ಷಟ್‌ಸ್ಥಲಬ್ರಹ್ಮವೆಂಬ ಮಹಾಜ್ಯೋತಿರ್ಮಯ ಲಿಂಗವಾಯಿತ್ತು. ಆ ಷಟ್‌ಸ್ಥಲ ಬ್ರಹ್ಮವೆಂಬ ಮಹಾಜ್ಯೋತಿರ್ಮಯ ಲಿಂಗದಲ್ಲಿ ತತ್ಪದ ತ್ವಂ ಪದ ಅಸಿ ಪದವೇ ನಿಕ್ಷೇಪವಾಗಿಹುದು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೪೪೪. ಷಟ್‌ಸ್ಥಲಬ್ರಹ್ಮ ಷಟ್‌ಸ್ಥಲಬ್ರಹ್ಮವೆಂಬ ಷಟ್‌ಸ್ಥಲಬ್ರಹ್ಮದ ಭೇದವನಾರು ಬಲ್ಲರು ? ಷಟ್‌ಸ್ಥಲಬ್ರಹ್ಮದ ಭೇದವನಾರು ಅರಿಯರು. ಷಟ್‌ಸ್ಥಲಬ್ರಹ್ಮದ ಭೇದವನರಿದರೆ ಅರಿಯದಂತಿರಬೇಕು. ಷಟ್‌ಸ್ಥಲಬ್ರಹ್ಮದ ಭೇದವರಿದೆವೆಂಬವರು ಅರಿದ ಪರಿಯೆಂತೊ ? ಷಟ್‌ಸ್ಥಲವು ನಿಃಶಬ್ದಬ್ರಹ್ಮ ಮುಚ್ಯತೆ ಎಂದು ಶ್ರುತಿಗಳು ಸಾರುತ್ತಿಹವು. ಷಟ್‌ಸ್ಥಲಬ್ರಹ್ಮದ ಭೇದವು ನಿಃಶಬ್ದ ಬ್ರಹ್ಮಂಗಲ್ಲದೆ ಅರಿಯಬಾರದು. ಅರಿದರೆ ಅರಿಯದಂತಿರಬೇಕು. ಅರಿದರೆ ಶಿವು ಜಂಗಮವೇ ಲಿಂಗವೆಂದು ಅರಿವುದು. ಜಂಗಮವೇ ಪಾದೋದಕ ಪ್ರಸಾದವನು ಲಿಂಗಕ್ಕೆ ಕೊಟ್ಟು ಕೊಳಬಹುದು. ಆ ಲಿಂಗಪ್ರಸಾದವ ತಾ ಕೊಳಬಹುದು. ಆ ಲಿಂಗದೊಡನೆ ಸಹಭೋಜನವ ಮಾಡಬಹುದು. ಇಂತೀಭೇದವನರಿಯದೆ ಉದ್ದಂಡ ವೃತ್ತಿಯಲ್ಲಿ ಕೊಂಡನಾದರೆ ನಾಯಕ ನರಕ ತಪ್ಪದು ಅಪ್ರಮಾಣ ಕೂಡಲಸಂಗಮದೇವಾ.

೪೪೫. ಭ್ರಮರನು ಚತುರ್ದಳ ಪದ್ಮದ ಮೇಲೆ ಆಡಿತ್ತು ನೋಡಾ ಭ್ರಮರನು ಚತುರ್ದಳ ಪದ್ಮದ ಮೇಲೆ ಆಡಿ ನೋಡಿ ಷಟ್‌ದಳ ಪದ್ಮಕೆ ಬಂದಿತ್ತು ನೋಡಾ. ಭ್ರಮರನು ಷಟ್‌ದಳ ಪದ್ಮದ ಮೇಲೆ ಆಡಿ ನೋಡಿ ದಶದಳ ಪದ್ಮಕೆ ಬಂದಿತ್ತು ನೋಡಾ. ಭ್ರಮರನು ದಶದಳಪದ್ಮದ ಮೇಲೆ ಆಡಿ ನೋಡಿ ದ್ವಾದಶದಳ ಪದ್ಮಕೆ ಬಂದಿತ್ತು ನೋಡಾ ಭ್ರಮರನು ದ್ವಾದಶ ದಳ ಪದ್ಮದ ಮೇಲೆ ಆಡಿ ನೋಡಿ ಶೋಡಶದಳ ಪದ್ಮಕ್ಕೆ ಬಂದಿತ್ತು ನೋಡಾ ಭ್ರಮರನು ಷೋಡಶ ದಳ ಪದ್ಮದ ಮೇಲೆ ಆಡಿ ನೋಡಿ ದ್ವಿದಳ ಪದ್ಮಕ್ಕೆ ಬಂದಿತ್ತು ನೋಡಾ. ಭ್ರಮರನು ದ್ವಿದಳ ಪದ್ಮದ ಮೇಲೆ ಆಡಿ ನೋಡಿ ಸಹಸ್ರದಳ ಪದ್ಮಕ್ಕೆ ಬಂದಿತ್ತು ನೋಡಾ. ಭ್ರಮರನು ಸಹಸ್ರದಳ ಪದ್ಮದ ಮೇಲೆ ಆಡಿ ನೋಡಿ ತ್ರಿಬಳ ಪದ್ಮಕ್ಕೆ ಬಂದಿತ್ತು ನೋಡಾ. ಭ್ರಮರನು

ತ್ರಿದಳ ಪದ್ಮದ ಮೇಲೆ ಆಡಿ ನೋಡಿ ಏಕ ದಳ ಪದ್ಮಕ್ಕೆ ಬಂದಿತ್ತು ನೋಡಾ. ಭ್ರಮರನು ಏಕ ದಳ ಪದ್ಮದ ಮೇಲೆ ಆಡಿ ನೋಡಿ ಕಾಲಾಂಧರ ಪದ್ಮಕ್ಕೆ ಬಂದಿತ್ತು ನೋಡಾ. ಭ್ರಮರನು ಆ ಕಾಲಾಂಧರ ಪದ್ಮದ ಸದ್ವಾಸನೆಯ ಕೊಂಡು ಅಲ್ಲಿಯೇ ಲಿಯ್ಯವಾಯಿತ್ತು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೪೪೬. ಕುರುಹು ಕೆಟ್ಟ ಬೀಜದಲ್ಲಿ ಮೂರು ನಿರಾಳ ವೃಕ್ಷ ಹುಟ್ಟಿತ್ತು. ಒಂದು ವೃಕ್ಷ ಹನ್ನೆರಡು ಕೊಂಬಾದವು. ಒಂದು ವೃಕ್ಷ ಹದಿನಾರುಕೊಂಬಾದವು. ಒಂದು ವೃಕ್ಷ ಎಂಟು ಕೊಂಬಾದವು. ಸದ್ವಾಸನೆ ಎಂಬ ಹುವ್ವಾಯಿತ್ತು. ಸಚ್ಚಿದಾನಂದವೆಂಬ ಕಾಯಾಯಿತ್ತು. ನಿಶ್ಯಬ್ದವೆಂಬ ಹಣ್ಣಾಯಿತ್ತು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೪೪೭. ಕುಂಡಲಿಶಕ್ತಿಯು ಮೂರು ಮಾತ್ರೆ ಹುಟ್ಟಿತ್ತು ನೋಡಾ! ಒಂದು ಮಾತ್ರೆ ಆರು ಮಾತ್ರೆಯಾಯಿತ್ತು- ಒಂದು ಮಾತ್ರೆ ನಾಲ್ಕು ಮಾತ್ರೆಯಾಯಿತ್ತು. ಒಂದು ಮಾತ್ರೆ ಆರು ಮಾತ್ರೆಯಾಯಿತ್ತು. ಈ ಹನ್ನೆರಡು ನಾಲ್ಕು ಹದಿನಾರು ಮಾತ್ರೆ ಐವತ್ತೆರಡು ಮಾತ್ರೆಗಳಾದವು. ಮೂವತ್ತೆರಡು ಮೂವತ್ತೆರಡು ಅರವತ್ತು ನಾಲ್ಕು ಮಾತ್ರೆಗಳಾದವು. ಈ ಭೇದನ ಬಲ್ಲಾತನೆ ಶಿವಯೋಗಿ ಲಿಂಗಾನುಭಾವಿ ಎಂಬೆ ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೪೪೮. ನಿರಾಮಯದೊಳು ನಿರಾಮಯವಾಗಿ ಹುಟ್ಟಿತ್ತು ನೋಡಾ. ಒಂದು ಹೃತ್ಕಮಲ ಕರ್ಣಿಕೆ ಆ ಹೃತ್ಕಮಲ ಕರ್ಣಿಕೆ ಹನ್ನೆರೆಡಸಳಾಗಿಹುದು. ಎಂಟೆಸಳೆ ಅಧೋಮುಖವಾಗಿಹುದು. ನಾಲ್ಕೆಸಳ ಉರ್ಧ್ವ ಮುಖವಾಗಿಹುದು ಅಧೋಮುಖವಾಗಿಹ ಎಂಟೆಸಳ ಕರ್ಣಿಕೆಯೆ ಅಷ್ಟ ದಳ ಕಮಲ ಉರ್ಧ್ವ ಮುಖವಾಗಿಹ ನಾಲ್ಕೆಸಳ ಕರ್ಣಿಕೆಯೆ ತಾ ಮಧ್ಯ ಆ ಎಂಟೆಸಳ ಕರ್ಣಿಕೆಯ ಸದ್ವಾಸನೆಯ ಜೀವಾತ್ಮನು ಆ ನಾಲ್ಕೆಸಳ ಕರ್ಣಿಕೆಯ ಸದ್ವಾಸನೆಯ ಪರಮಾತ್ಮನು ಈ ಜೀವಪರಮರಿಬ್ಬರನು ಬೆರಸಿ ಒಂದಾಗದೆ ಬಿಚ್ಚಿ ಬೇರಾಗದೆ ನಿಲಬಲ್ಲಾತನು ಪರಮ ಯೋಗಿ ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೪೪೯. ನಿರಾಮಯದೊಳು ಪುಟ್ಟಿತ್ತು ನೋಡಾ. ಒಂದು ಪದ್ಮ ಸೂರ್ಯಚಂದ್ರಾಗ್ನಿ ಪ್ರಕಾಶವಾಗಿ ಆ ಪದ್ಮ ಹನ್ನೆರಡೆಸಳಾಗಿಹುದು ಎಂಟೆಸಳೆ ಅಧೋಮುಖವಾಗಿಹುದು. ಅದು ಅಷ್ಟ ದಳ ಕಮಲ, ನಾಲ್ಕೆಸಳೆ ಉರ್ಧ್ವ ಮುಖವಾಗಿಹುದು. ಎಂಟೆಸಳ ನಾಲ್ಕೆಸಳ ಸಂಯೋಗವೆ ನಿರಾಳ ಪ್ರಣವ ಪೀಠ ಆ ಪುಷ್ಪದ ಸದ್ವಾಸನೆ ತಾನೆ ಅಪ್ರಮಾಣ ಕೂಡಲಸಂಗಮ ದೇವಾ.

೪೫೦. ನಿರಾಳ ಅಷ್ಟದಳ ಕಮಲದೊಳು ನಿರಂಜನ ಚೌಕ ಮಧ್ಯ ನೋಡಾ. ಅದರ ಬೀಜಾಕ್ಷರದ ಭೇದವನಾರು ಬಲ್ಲರು ? ನಿರಂಜನ ಪ್ರಣವ ಅವಾಚ್ಯಪ್ರಣವ ಕಲಾಪ್ರಣವ ಅನಾದಿಪ್ರಣವ ಅಕಾರಪ್ರಣವ ಉಕಾರಪ್ರಣವ ಮಕಾರಪ್ರಣವ ಆದಿಪ್ರಣವ ಅಖಂಡ ಗೋಳಕಾಕಾರ ಪ್ರಣವ ಜ್ಯೋತಿಪ್ರಣವ ಮಹಾಜ್ಯೋತಿ ಪ್ರಣವ ಅಖಂಡ ಮಹಾ ಜ್ಯೋತಿ ಪ್ರಣವ ಈ ನಿರಾಳ ಅಷ್ಟದಳ ಕಮಲದೊಳಗೆ ನಿರಂಜನಚೌಕ ಮಧ್ಯ ನೋಡಾ. ಇದರ ಬೀಜಾಕ್ಷರದ ಭೇದವ ನಿಜಲಿಂಗೈಕ್ಯರು ಬಲ್ಲರಲ್ಲದೆ ಮಿಕ್ಕಿನ ವೇಷಧಾರಿಗಳೆತ್ತಬಲ್ಲರಯ್ಯ ಅಪ್ರಮಾಣ ಕೂಡಲಸಂಗಮದೇವಾ.

" ೪೫೧- ಊರ್ಧ್ವಮುಖ ಅಧೋಮುಖ ಸಮಾಧಿಷ್ಟೆ " ಎಂದು ಅಂತರಂಗದಲ್ಲಿ ತ್ರಿವಿಧ ಮುಖಂಗಳುಂಟು. ಅದೆಂತೆಂದಡೆ ಊರ್ಧ್ವ ಮುಖ ಹದಿನಾರು ಮುಖವಾಗಿಹುದು, ಅಧೋಮುಖ ಮೂವತ್ತೆರಡು ಮುಖವಾಗಿಹುದು. ಸಮಾಧಿಷ್ಠೆ ಅರುವತ್ತುನಾಲ್ಕು ಮುಖವಾಗಿಹುದು ಈ ತ್ರಿವಿಧ ಮುಖವನರಿದು, ಅರ್ಚಿಸಿ ಸಚ್ಚಿದಾನಂದವೆಂಬ ದ್ರವ್ಯದ ತ್ರಿವಿಧ ಮುಖದಲ್ಲಿ ಅರ್ಪಿಸಬಲ್ಲಾತನು. ತ್ರಿವಿಧ ಪ್ರಸಾದಿ, ತ್ರಿವಿಧ ಪರಿಣಾಮಿ, ತ್ರಿವಿಧ ಐಕ್ಯ ತಾನಾದ ಶರಣನು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೪೫೨. ನಿರಾಳವೆಂಬ ಬಾವಿಗೆ ನಿರಂಜನವೆಂಬ ಹುಲ್ಲೆ ತೃಷೆಯಾಗಿ ಬಂದು, ನಿರಾಳವೆಂಬ ಅಮೃತವನುಂಡು, ತೃಪ್ತಿಯಾಗಿ ಬಂದು ನಿರಾಳವೆಂಬ ಅಮೃತವನುಂಡು, ತೃಪ್ತಿಯಾಗಿ, ಬಂದು ನಿರಾಳವೆಂಬ ಅಮೃತವನುಂಡು, ತೃಪ್ತಿಯಡಗುಸಾಲದೆ ಕುಣಿಯಿತ್ತು ನೋಡಾ ಅಪ್ರಮಾಣ ಕೂಡಲಸಂಗಮ ದೇವಾ.

೪೫೩. ರೂಪಿಲ್ಲದೆ ಇಹುದು ನೋಡಾ ಜೀವಾತ್ಮನು, ನೆಲೆ ಇಲ್ಲದೆ ಇಹುದು ಅಂತರಾತ್ಮನು, ಜೀವಂತರಾದಿಗಳ ಶಿರೋಮಧ್ಯದಲ್ಲಿ ಯಂತ್ರವಾಹಕನಾಗಿ ಆಡಿಸುತ್ತಿಹನು ನೋಡಾ ಪರಮಾತ್ಮನು ಅಪ್ರಮಾಣ ಕೂಡಲ ಸಂಗಮದೇವಾ.

೪೫೪. ದೇಹ ಪ್ರಾಣ ಇಂದ್ರಿಯ ಕರಣಂಗಳ ಕೂಡಿ, ವರ್ತಿಸುತ್ತಿಹುದು ನೋಡಾ ಜೀವಾತ್ಮನು. ದೇಹ ಪ್ರಾಣ ಇಂದ್ರಿಯಂಗಳನತಿಗಳೆದು ಕರಣಂಗಳ ಕೂಡಿ ವರ್ತಿಸುತ್ತಿಹುದು ನೋಡಾ ಅಂತರಾತ್ಮನು ದೇಹ ಪ್ರಾಣ ಇಂದ್ರಿಯ ಕರಣಂಗಳನತಿಗಳೆದು, ಒಬ್ಬನೆ ನಿಶ್ಚಿಂತನಾಗಿಹುದು ನೋಡಾ ಪರಮಾತ್ಮನು ಅಪ್ರಮಾಣ ಕೂಡಲಸಂಗಮದೇವಾ.

೪೫೫. ಕಣ್ಣಿಲ್ಲದಂಧಕ ಕಾಲಿಲ್ಲದ ಪಶುವ ಮೇಯಿಸುವ ನೋಡಾ. ಕಣ್ಣಿಲ್ಲದಂಧಕ ತೆಗಳುವ. ಕಾಲಿಲ್ಲದ ಪಶು ಒಡದು ಗಗನದಲ್ಲಿ ತಲೆ ಇಲ್ಲದ ವ್ಯಾಘ್ರ ಹಿಡಿದು ನುಂಗಿದ್ದ ಕಂಡು ಬೆರಗಾದೆ ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೪೫೬. ಕೋಣನ ಬಸಿರಲ್ಲಿ ಒಂದು ಕಪ್ಪೆ ಹುಟ್ಟಿ ಕುಣಿವುದ ಕಂಡೆನು ಕುಂಡಲಿಯ ಮಧ್ಯದಲ್ಲಿ ಒಂದು ಮಂಡುಕ ಹುಟ್ಟಿ ಕುಣಿವ ಕಪ್ಪೆಯ ನುಂಗಿದ್ದ ಕಂಡು ಬೆರಗಾದೆ ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೪೫೭. ಆಣವ ಮಾಯೆ, ಕಾರ್ಮಿಕವೆಂಬ ಮೂರು ಕಲ್ಲನಿರಿಸಿ, ಜ್ಞಾನೇಂದ್ರಿಯ ಕರ್ಮೇಂದ್ರಿಯವೆಂಬ ಹೊಟ್ಟ ನೀಡಿ ಅಷ್ಟಮದವೆಂಬ ಕಟ್ಟಿಗೆಯ ತಂದು ಜ್ಞಾನಾಗ್ನಿಯೆಂಬ ಕಿಚ್ಚನೊಟ್ಟಿ ತನುವೆಂಬ ಭಾಜನವ ತೊಳೆದು ಸ್ವಯಂಪ್ರಕಾಶವೆಂಬ ಉದಕವ ತುಂಬಿ ಮನವೆಂಬ ಸಯಿಧಾನವ ನೀಡಿ ಜ್ಞಾನಾಗ್ನಿಯಲ್ಲಿ ಪಾಕವಾದ ಪ್ರಸಾದವನು ಮಹಾಲಿಂಗಕ್ಕೆ ಅರ್ಪಿಸುವಲ್ಲಿ ಮಹಿಮರ ತೋರಾ ಅಪ್ರಮಾಣ ಕೂಡಲಸಂಗಮದೇವಾ.

೪೫೮. ನಾದವೆಂಬ ಕಿವಿಯೊಳಗೆ ಬಿಂದುವೆಂಬ ಅಮೃತವ ತುಂಬಿ ಪಂಚೇಂದ್ರಿಯವೆಂಬ ಗದ್ದಿಗೆ ಕರಣಂಗಳೆಂಬ ಕಾಳ್ಮವ ತಿದ್ದಿ ಜಾತಿವಿಜಾತಿಯೆಂಬ ಕೆಸರನುತು ಪುಣ್ಯಪಾಪವೆಂಬ ಕಳೆಯ ಕಿತ್ತು ಓಂ ನಮಃ ಶಿವಾಯವೆಂಬ ಬೀಜವ ಬಿತ್ತಿ ಸ್ವಯಂಪ್ರಕಾಶವೆಂಬ ಅಗ್ಗವಣಿಯ ಕಟ್ಟಿ ಪರಮಾ

FROM —
Shivanubhawa
Office
BIJAPUR

R. N. B. 2554.

ಶ್ರೀ. ಚನ್ನಪ್ಪ ಸಿದ್ದಪ್ಪ ಬಡೇವಿ.
ಮು. ಬನ್ನಟ್ಟಿ
ತಾ, ಜಮಖಂಡಿ



ಈ ಪತ್ರಿಕೆಯನ್ನು ಇದರ ಸಂಪಾದಕರಾದ ರಾ॥ ಬ॥ ಪಿ. ಜಿ. ಹಳಕಟ್ಟಿ, ಬಿ. ಎ. ಎಲ್, ಎಲ್, ಬಿ. ಇವರು ವಿಜಾಪೂರ ವಾರ್ಡ ನಂ. ೨ ಮನೆ ನಂ. ೧೩೬೮ ರಲ್ಲಿರುವ ಹಿತಚಿಂತಕ ಪಾವರ ಪ್ರಿಂಟಿಂಗ್ ಪ್ರೆಸ್ಸಿನಲ್ಲಿ ಮುದ್ರಿಸಿ ಅಲ್ಲಿಯೇ ಪ್ರಸಿದ್ಧಿಸಿದರು

ಸಂಪುಟ ೩೦  ಸಂಚಿಕೆ ೧

# ಶಿವಾನುಭವ

: ಸಂಪಾದಕರು :

ಫ. ಗು. ಹಳಕಟ್ಟಿ,

ಬಿ. ಎ. ಎಲ್. ಎಲ್. ಬಿ.

ವಾ. ಚ. ೫-೧೨-೦] ವಿಜಾಪೂರ [ಜಾನೇವರಿ ೧೯೫೬

# ವಿಷಯಾನುಕ್ರಮಣಿಕೆ



# ಶಿವಾನುಭವ

ಸಂಪುಟ ೩೦ | ಜನವರಿ ೧೯೫೬ | ಸಂಚಿಕೆ ೮

## ಮಹಾಶಿವಶರಣೆ ಬೊಂತಾದೇವಿ.

(ಬರೆದವರು:— ಶ್ರೀ. ಶಿವಾನಂದ ಸ್ವಾಮಿಗಳು ಗವಿಮಠ, ತೆಗ್ಗಿಹಳ್ಳಿ)

ಅಕ್ಕಮಹಾದೇವಿಯ ಚರಿತೆಯು ನಮ್ಮ ನಾಡಜನಗಳಲ್ಲಿ ಹಾಸು ಹೊಕ್ಕಾಗಿದ್ದಂತೆ ಬೊಂತಾದೇವಿಯ ಚರಿತೆ ಪ್ರಸಿದ್ಧವಾಗಿಲ್ಲ. ಕೆಲವರಿಗಷ್ಟೇ ಈಕೆಯ ಚರಿತೆ ಗೊತ್ತಿರಬಹುದು. ಈಕೆಯ ಚರಿತೆಯೂ ಕೂಡ ಅಕ್ಕನನ್ನು ಮೀರಿಸಿದೆ. ಆದರೂ ಇವಳು ಬಹು ಗುಪ್ತವಾದ ಮಹಾಶರಣೆ ಎನಿಸಿರುವಳು. Some come silently; live silently; serve silently; and go silently. ಕೆಲವರು ಗುಪ್ತವಾಗಿ ಬರುವರು. ಗುಪ್ತವಾಗಿ ಜೀವಿಸುವರು, ಗುಪ್ತವಾಗಿ ಸೇವೆಗೈಯುವರು, ಗುಪ್ತವಾಗಿ ಹೋಗುವರು, ಎಂಬ ಉಕ್ತಿಯಂತೆ ಈ ಮಹಾಶರಣೆಯ ಚರಿತೆಯು ಗುಪ್ತವಾಗಿಯೇ ಇರುವದು. ಆದರೂ ಈಕೆಯ ಚರಿತೆಯೂ ಕೂಡ ಅದ್ಭುತವಾಗಿಯೇ ಇರುವದು. ಅಕ್ಕನು ಶಿವಾನುಭವ ಮಂಟಪದಲ್ಲಿ ಪ್ರಮುಖ ಪಾತ್ರ ವಹಿಸಿದ್ದಳು. ಅದರಿಂದ ಅವಳ ಚರಿತೆ ಹೆಚ್ಚಿಗೆ ಬೆಳಕಿಗೆ ಬಂದಿದೆ. ಬೊಂತಾದೇವಿಯು ಕಲ್ಯಾಣದಲ್ಲಿಯೇ ಇದ್ದಳು. ಅಲ್ಲದೆ ಶಿವಾನುಭವ ಮಂಟಪದಲ್ಲಿ ಸೇವಕಳಂತೆ ವಿಹರಿಸುತ್ತಿದ್ದಳು. ಅವಳಲ್ಲಿ ವಿಶೇಷ ಜ್ಞಾನವೂ ಕೂಡ ಇದ್ದರು, ಯಾರಿಗೂ ತಿಳಿಯದಂತೆಯೇ ಇದ್ದಳು. ಇದು ಅವಳ ಅತಿ ನಿರಭಿಮಾನ, ನಿರಹಂಕಾರವನ್ನೇ ವ್ಯಕ್ತಮಾಡುವದು. ಇಂಥ ಶಿವಶರಣೆಯ ಚರಿತೆಯನ್ನು ಅರಿಯುವದು ನಮಗೆ ಅವಶ್ಯವಿದ್ದ ಮೂಲಕ ಸಂಕ್ಷೇಪವಾಗಿ ವಿವರಿಸುವೆನು.

ಇವಳು ಕಾಶ್ಮೀರ ದೇಶದ ಮಾಂಡತ್ಯಪುರದ ಅರಸನ ಮಗಳು. ಈಕೆಯು ಹೆಸರು ನಿಜದೇವಿ. ಹೆಸರಿಗೆ ತಕ್ಕಂತೆ ಇವಳು ನಿಜವಾದ ದೇವಿಯೇ ಆಗಿದ್ದಳು. ಜನನದಲ್ಲಿಯೇ ಇವಳು ದೇವಿಯಾಗುವಳೆಂದು ಎಲ್ಲರಿಗೂ ಅನಿಸುತ್ತಿತ್ತು. ಬಾಲ್ಯದಲ್ಲಿಯೇ ಇವಳು ಒಳ್ಳೇ ಶಿವನ ಭಕ್ತಳಾಗಿದ್ದಳು. ಸದಾ ಶಿವಪೂಜೆ, ಶಿವಮಂತ್ರ, ಜಪ, ಶಿವಧ್ಯಾನಗಳಲ್ಲಿಯೇ ಆಸಕ್ತಳಾಗಿದ್ದಳು. ಅಶನ ವಸನ ವ್ಯಸನಗಳಲ್ಲಿ ಎಳ್ಳಷ್ಟೂ ಮನಸ್ಸಿರಲಿಲ್ಲ. ತ್ಯಾಗಭಾವವು ಬಹುವಾಗಿಯೇ ಇವಳಲ್ಲಿ ಕಂಡುಬರುತ್ತಿತ್ತು. ರಾಜ್ಯ ರೀತಿಯಲ್ಲಿ ಇವಳು ಇರದೆ ದೀನ ದಲಿತರಂತೆಯೇ ಸಾದಾ ಜೀವನವನ್ನು ಸಾಗಿಸುತ್ತಿದ್ದಳು. ಹೀಗಾಗಿ ಅವಳಲ್ಲಿ ವೈರಾಗ್ಯವು ಹೆಚ್ಚಿತು. ವಯಸ್ಸೂ ಆಯಿತು. ಲಗ್ನದ ವಿಚಾರವನ್ನು ತಾಯಿತಂದೆಗಳು ಮಾಡಹತ್ತಿದರು. ಇದನ್ನು ಕಂಡು ಅವಳು ಅತಿ ಹುಚ್ಚಿಯಂತೆ ಇರಹತ್ತಿದಳು. ಯಾರೂ ಆಕೆಯನ್ನು ವರಿಸದಂತೆ ನಡೆಯಹತ್ತಿದಳು. ಮೈಮೇಲಿನ ಉಡಿಗೆತೊಡಿಗೆಗಳನ್ನು ಸಹ ಬಿಟ್ಟುಕೊಟ್ಟಳು. ದಿಗಂಬರೆಯಾಗಿ ಶಿವಭ್ರಾಂತಿಯಿಂದ ತಿರುಗಹತ್ತಿದಳು. ಹೀಗಾಗಿ ಯಾರೂ ಇವಳನ್ನು ವರಿಸಲಿಲ್ಲ. ಅದಕ್ಕೆ ರಾಜನಿಗೆ ಬಹಳೇ ಚಿಂತೆಯಾಗಿ— "ಎಲ್ಯೆ ಮಗಳೇ ಈ ನಿನ್ನ ಹುಚ್ಚತನವನ್ನು ಬಿಡು. ರಾಜರಿಗುಚಿತವಾದ ರೀತಿನೀತಿಗಳಲ್ಲಿ ಇರು. ನಮಗೆ ನಿನ್ನ ಈ ದಿಗಂಬರ ವೃತ್ತಿಯನ್ನು ನೋಡಿ ನಿನ್ನ ಹುಚ್ಚ ಆಚಾರವಿಚಾರಗಳನ್ನು ನೋಡಿ ಬಹು ಕೆಡಕೆನಿಸುವದು. ಅಲ್ಲದೆ ರಾಜ್ಯದಲ್ಲಿ ನಮಗೆ ಬಹು ಅಪಮಾನವೆನಿಸುವದು. ಜನರು ಅಲ್ಲದ ಸಲ್ಲದ ಮಾತುಗಳನ್ನು ಆಡುವರು" ಎಂದು ಬಹುವಾಗಿ ಹೀಯಾಳಿಸಿ ಮಾತನಾಡಲು ಅವಳು— "ನಿಮಗೆ ನೀವು ಹೇಳುವದು ಸರಿಯದೆ. ಯಾಕಂದರೆ ನೀವು ಸಂಸಾರಿಕರು ಅದರಲ್ಲಿ ರಾಜರು. ಇವುಗಳ ಹುಚ್ಚು ನಿಮಗೆ ಬಡಿದಂತೆ ನನಗೆ ಶಿವನ ಹುಚ್ಚು ಹಿಡಿದಿದೆ ಯಾರಿಗೆ ಯಾವುದರ ಬಗ್ಗೆ ಹುಚ್ಚು ಹಿಡಿದಿರುವದೋ ಅದೇ ಅವರಿಗೆ ಪ್ರಿಯವಲ್ಲವೆ? ನಿಮಗೆ ರಾಜ್ಯ, ವೈಭವ, ಸಂಸಾರಗಳೇ ಪ್ರಿಯವಾಗಿದ್ದಂತೆ ನನಗೆ ಆ ಶಿವನೇ ಪ್ರಿಯನಾಗಿರುವನು. ಅವನ ಹೊರತು ಅನ್ಯವು ನನಗೆ ಬೇಕಾಗಿಲ್ಲ. ಈ ಪ್ರಕಾರ ನಾನು ಇಲ್ಲಿ ಇರುವದು ಬೇಡಾಗಿದ್ದರೆ ಇದೋ ಈಗಲೇ ಹೀಗೆ ನಿಮ್ಮನ್ನೂ ನಿಮ್ಮ ರಾಜ್ಯವನ್ನೂ ಬಿಟ್ಟು ಹೊರಟೆನು. ಚಿಂತೆ ಮಾಡಬೇಡಿರಿ. ನನ್ನ ಬಳಗದವರೆಲ್ಲ ಕಲ್ಯಾಣಪಟ್ಟಣದಲ್ಲಿ ಇರುವರು. ಅವರಲ್ಲಿಗೆ ಹೋಗಿ ನನ್ನ ಬಳಗವನ್ನು ಕೂಡಿಕೊಳ್ಳುವೆನು. ನೀವು ಶಾಂತರಾಗಿ ಇರಬೇಕೆಂದು"

ವಿನಂತಿಸಿಕೊಂಡು ತಂದೆತಾಯಿಗಳಿಗೆ ಪಾದಕ್ಕೆರಗಿ ನೆರೆದ ಜನವೃಂದವನ್ನು ಅಭಿವಂದಿಸಿ ಶಿವಧ್ಯಾನದಲ್ಲಿ ಹೊರಟುಬಿಟ್ಟಳು. ಎಲ್ಲರೂ ಗೋಳಾಡಿದರು. ಕರೆದರು. ಅವಳ ಮನಸ್ಸಿಗೆ ಬಂದಂತೆ ಇರಲಿಕ್ಕೂ ಹೇಳಿದರು. ಕೇಳದೆ ಹೊರಟೇಬಿಟ್ಟಳು, ಕಲ್ಯಾಣದ ದಾರಿಯನ್ನು ಹಿಡಿದಳು.

ಈ ಬೊಂತಾದೇವಿಯು ಲಗ್ನದ ವಿಚಾರ ನಡೆದಕೂಡಲೆ ಹುಚ್ಚಳಂತೆ ಉಡಿಗೆತೊಡಿಗೆಗಳನ್ನೂ ಬಿಸಾಡಿ ಲಗ್ನದ ವಿಚಾರವನ್ನೇ ಬುಡಮೇಲು ಮಾಡಿ ಬಿಟ್ಟಳು. ಅಕ್ಕನಂತೆ ಪರಧರ್ಮದ ಕೌಶಿಕನ ಕೈಯಲ್ಲಿ ಸಿಕ್ಕು ಗೋಳಾಡುವ ಪ್ರಸಂಗವನ್ನು ತಂದುಕೊಳ್ಳಲಿಲ್ಲ. ಇವಳ ಈ ವಿಚಾರವು ಬಹು ಪಟುತ್ವವನ್ನೇ ವ್ಯಕ್ತಗೊಳಿಸುವಂತಹದಿದೆ. ಸ್ತ್ರೀಯಳಿಗೆ ತಕ್ಕ ವಿಚಾರವನ್ನು ಮಾಡಿ ಅದಕ್ಕೆ ತಕ್ಕಂತೆ ಹುಚ್ಚಳ ಸೋಗನ್ನು ಹಾಕಿ ತಂದೆತಾಯಿಗಳ ವಿಚಾರವನ್ನು ಪಲ್ಲಟಿಸಿದಳಲ್ಲದೆ ವರಿಸುವ ರಾಜಕುಮಾರರಿಗೂ ಸಹ ಮಂಕು ಹಚ್ಚಿ ಸುರಕ್ಷಿತ ಪಾರಾಗಿದ್ದು ಅವಳ ಬುದ್ಧಿಕುಶಲತೆಯನ್ನೂ ಹೃದಯದ ಕೂಗಿನ ಕರೆಗೆ ಓಗೊಡುವ ಅವಳ ಯೋಗ್ಯತೆಯನ್ನೇ ಪ್ರಕಟಗೊಳಿಸುವವು. ಇವಳ ಎಂಥ ತ್ಯಾಗಶಿಖಾಮಣಿ ವಿಚಾರಿಸಿರಿ. ತ್ಯಾಗ ವೈರಾಗ್ಯಕ್ಕೆ ತಕ್ಕ ಪ್ರಸಂಗಾವಧಾನವೂ ಕೂಡ ಇವಳಲ್ಲಿದ್ದುದು, ಹೃದಯದ ಭಕ್ತಿಯನ್ನೂ ಮೊದಲಿನ ಜ್ಞಾನವನ್ನೂ ತೋರ್ಪಡಿಸಿದವು. ಇವಳು ಮಹಾಶಿವಶರಣೆ ಎಂದು ಹೇಳಲಿಕ್ಕೆ ಯಾವ ಅಡ್ಡಿ ಆತಂಕಗಳಿಲ್ಲ.

ಇವಳು ಪಾದಚಾರಿಯಾಗಿ ನಿಬಿಡವಾದ ಅರಣ್ಯಗಳನ್ನು ದಾಟುತ್ತ ನಡೆದಳು. ಇವಳು ಒಳ್ಳೇ ರೂಪವತಿ, ತಾರುಣ್ಯವತಿ, ಗುಲಾಬಿಯ ಇವಳ ಮೈಬಣ್ಣ, ಸುಂದರವಾದ ಇವಳ ಅಂಗೋಪಾಂಗ, ಅದರಲ್ಲಿ ಬ್ರಹ್ಮಚಾರಿಣಿ ಮತ್ತು ಮಹಾ ತಪಸ್ವಿನಿ ಇಷ್ಟೆಲ್ಲ ಕೂಡಿದ್ದರಿಂದ ಅವಳಿಗೆ ಮೋಹಗೊಳ್ಳದವರಾರು? ದೇವಾಧಿದೇವತೆಗಳೂ ಕೂಡ ಇವಳ ರೂಪಲಾವಣ್ಯಕ್ಕೆ ಮರುಳಾಗುವರೆಂದ ಮೇಲೆ ಸಾಮಾನ್ಯ ಮಾನವರ ಪಾಡೇನು? ಅವರು ಇವಳನ್ನು ಕಂಡು ಅತಿ ಹುಚ್ಚರೂ ಭ್ರಾಂತರೂ ಆಗಿ ಹೋಗುತ್ತಿದ್ದರು. ಇವರನ್ನೆಲ್ಲ ನಿರಾಕರಿಸಿ ಯೋಗ್ಯ ಉತ್ತರಗಳನ್ನು ಕೊಡುತ್ತ ದಾರಿ ಸಾಗಿಸುತ್ತಿರುವಳು. ಇದನ್ನು ಶಿವನು ಕಂಡು ಈಕೆಯನ್ನು ಪರೀಕ್ಷಿಸಬೇಕೆಂದು ಒಳ್ಳೇ ಸುಂದರ ರೂಪವನ್ನು ಧರಿಸಿ ಒಳ್ಳೇ ರಾಜಠೀವಿಯಲ್ಲಿ ಬಂದು ಆಕೆಗೆ ತನ್ನ ಸತಿಯಾಗಲಿಕ್ಕೆ ಕೇಳಿಕೊಂಡನು. ಇವನು ಸಾಕ್ಷಾತ್ ಪರಶಿವನೆಂದು ತಿಳಿದುಕೊಂಡು ಬಿಟ್ಟಳು. ಆಗ ಅವಳು ಅವನಿಗೆ— "ಎಲೈ ಕಾಮ

ವೈರಿಯೇ ನನಗೆ ಕಾಮವಿಲ್ಲ ಈಗ ಕಾಮವಾಗಿರುವ ನಿನ್ನನ್ನು ನಾನು ಎಂದೂ ಒರಿಸಲಾರೆನು ಹೋಗು." ಎಂದು ನಿಷ್ಠುರವಾಗಿ ಉತ್ತರ ಕೊಟ್ಟಳು. ಆಗ ಶಿವನು ತನ್ನನ್ನು ಗುರುತಿಸಿದಳೆಂದನು. ಇವಳು ಸಾಮಾನ್ಯಳಲ್ಲ, ಒಳ್ಳೇ ಜ್ಞಾನಿತ್ಯಾಗಿ ವೈರಾಗ್ಯಶಾಲಿನಿ ಇರುವಳೆಂದು ಮನದಲ್ಲಿಯೇ ಆನಂದಗೊಂಡು ಬಯಲಾಗಿ ಹೋದನು. ಶಿವನು ಮತ್ತೊಮ್ಮೆ ಈಕೆಯನ್ನು ಪರೀಕ್ಷಿಸಬೇಕೆಂದು ಒಬ್ಬ ಒಳ್ಳೇ ಶಿರಿವಂತ ವ್ಯಾಪಾರಸ್ಥನ ಸೋಗನ್ನು ಹಾಕಿಕೊಂಡು ಒಳ್ಳೆ ರೂಪ ತಾಳಿ ಅವಳ ಎದುರಿಗೆ ಬಂದು ತನಗೆ ಸತಿಯಾಗಲಿಕ್ಕೆ ಕೇಳಲು ಆಕೆ—"ನಿನಗೆ ಯಾರೂ ಇಲ್ಲೆಂದು ಸುಳ್ಳು ಹೇಳಬೇಡ. ಜಡೆಯಲ್ಲಿ ಗಂಗೆ ತೊಡೆಯಲ್ಲಿ ಪಾರ್ವತಿ ಎಂಬ ಸ್ತ್ರೀಯರಿದ್ದಾರೆ. ಗಣಪತಿ ಷಣ್ಮುಖ ವೀರಭದ್ರರೆಂದು ಮೂವರು ಮಕ್ಕಳಿದ್ದಾರೆ. ಭೂತಗಣಂಗಳೇ ನಿನ್ನ ಬಳಗವಾಗಿರಲು ನನ್ನನ್ನು ಮೋಸ ಮಾಡಲು ಸುಳ್ಳ ಹೇಳಬೇಡೆಂದು" ಅವಳು ಅಂಜದೆ ಉತ್ತರ ಕೊಟ್ಟಳು. ಇವಳ ದಿವ್ಯ ವೈರಾಗ್ಯವನ್ನು ಇಂದ್ರಿಯ ನಿಗ್ರಹವನ್ನು ನೋಡಿ ಶಿವನು ಮೆಚ್ಚಿ ಪ್ರತ್ಯಕ್ಷನಾಗಿ ನಿಜ ರೂಪದಿಂದ ನಿಂತು ಒಂದು ಬೊಂತೆ (ಕೌದಿ) ಯನ್ನು ಕೊಟ್ಟು ಅದನ್ನು ಸದಾ ಉಟ್ಟುಕೊಂಡು ಜೀವಿಸಲು ವಿನಂತಿ ಮಾಡಿಕೊಂಡನು. ಮತ್ತು "ಗುಪ್ತವಾದ ಶಿವಶರಣೆ ಇರುವದರಿಂದ ನೀನು ಇದನ್ನು ಹೊದ್ದುಕೊಂಡರು ಯಾರೂ ನಿನ್ನನ್ನು ಅರಿಯುವದಿಲ್ಲ. ಇದು ನಿನ್ನನ್ನು ರಕ್ಷಿಸುವದೆಂದು ಹೇಳಲು ಅದಕ್ಕೆ ಅವಳು ಒಪ್ಪಿಕೊಂಡು ಕೌದಿಯಿಂದ ತನ್ನ ಸುಂದರ ಶರೀರವನ್ನು ಮರೆಮಾಡಿಕೊಂಡು ಶಿವನಿಗೆ ನಮಿಸಿ ಕಲ್ಯಾಣದ ದಾರಿಹಿಡಿದು ನಡೆದಳು. ಅದರಿಂದ ಈ ಮಹಾಶಿವಶರಣೆಗೆ ಇದ್ದ ನಿಜದೇವಿ ಎಂಬ ನಾಮವು ಬದಲಾಗಿ ಬೊಂತಾದೇವಿ (ಕೌದೀದೇವಿ) ಎಂದು ಜನರು ಕರೆಯಹತ್ತಿದರು.

ಅಕ್ಕನಂತೆ ಇವಳೂ ದಿಗಂಬರೆಯಾಗಿ ಶಿವಾನುಭವ ಮಂಟಪಕ್ಕೆ ಹೋಗಿದ್ದರೆ, ಕಲ್ಯಾಣದಲ್ಲಿ ಇರುತ್ತಿದ್ದರೆ, ಇವಳ ಕೀರ್ತಿಯೂ ಕೂಡ ಹೆಚ್ಚಾಗಿ ಆಗುತ್ತಿದ್ದವು. ಇದು ಅವಳಿಗೆ ಬೇಡಾದುದರಿಂದ ಅವಳು ದೀನದರಿದ್ರೆಯಂತೆ ಒಂದು ಹರಕ ಕೌದಿಯನ್ನೇ ಉಟ್ಟುಕೊಳ್ಳಲಿಕ್ಕೆ ಒಪ್ಪಿಕೊಂಡಳೇ ಹೊರತು ಶರೀರದ ಮಾನ ಮನ್ನಣೆ ಅಭಿಮಾನಕ್ಕಾಗಿ ಕೌದಿಯನು ಹೊರಲಿಕ್ಕೆ ಒಪ್ಪಲಿಲ್ಲ. ಇಬ್ಬರೂ ಸ್ತ್ರೀಯರು ದಿಗಂಬರೆಯರಾಗಿ ಕಲ್ಯಾಣದಲ್ಲಿ ಇರಹತ್ತಿದ್ದರೆ ಅಕ್ಕನಿಗೆ ಆಗ ಈಗ ಬಂದ ಹೀತನವು ಬರುತ್ತಿರಲಿಲ್ಲ. ಅದಕ್ಕಾಗಿ ಶಿವನು ಈ ಪ್ರಕಾರ ಯುಕ್ತಿಯನ್ನು ಮಾಡಿದಂತೆ

ತೋರುವದು. ಕೌದಿಯೆಂದರೆ ಅದೇನು ಉಡಿಗೆತೊಡಿಗೆಯೂ ಅಲ್ಲ. ಸಿಂಗಾರವೂ ಅಲ್ಲ. ಏನೋ ಒಂದು ಹುಚ್ಚರು ಧರಿಸುವ ರೀತಿಯದೇ ಆದ ಕೌದಿಯೋ ಮಾತ್ರವಾಗಿತ್ತು. ಈಗಿನ ಕಾಲದಲ್ಲಿ ಸುಧಾರಿಸಿದವರು ಇದರ ಹೆಸರನ್ನು ಕೇಳಿ ಹೀಯಾಳಿಸುವರು. ಹಳ್ಳಿವಾಡದ ಅಜ್ಞ ದೀನ ದರಿದ್ರರಾದ ಬಡ ಮುದುಕಿಯರು ಧರಿಸುವ ಒಂದು ಒಡವೆಯು. ಇದು ಹರಿದ ಹಳೆ ಚಿಂದಿಗಳನ್ನು ಕೂಡಿಸಿ ಹೊಲಿದಂಥದು. ಅದನ್ನು ಈ ಭವದಲ್ಲೇ ಧರಿಸಲು ನಿಜದೇವಿಯು ಒಪ್ಪಿಕೊಂಡಳು ಹೊರತು ಬೇರೆ ಯಾವ ಉದ್ದೇಶದಿಂದಲ್ಲ. ಛಳಿ ಮಳೆ ಗಾಳಿಗಳಿಂದ ಸಂರಕ್ಷಿಸಿಕೊಳ್ಳಲಿಕ್ಕೂ ಸಹ ಅಲ್ಲ. ಇದರಿಂದ ಇವಳ ತ್ಯಾಗ ವೈರಾಗ್ಯಗಳೇ ಹೆಚ್ಚಾಗಿ ವ್ಯಕ್ತವಾಗುವದರಲ್ಲಿ ಸಂದೇಹವಿಲ್ಲ. ಅಲ್ಲದೆ ಕೂದಲಿನಲ್ಲಿ ತನ್ನ ಶೃಂಗಾರದ ರೂಪದ ಸುಂದರ ಶರೀರವನ್ನು ಜನರು ನೋಡಿ ಮೋಹಗೊಂಡು ದಾರಿ ಬಿಡಬಹುದೆಂದು ಅವಳು ವಿಚಾರಿಸಿ ಕೌದಿಯನ್ನು ಉಡಲಿಕ್ಕೆ ಒಪ್ಪಿಕೊಂಡಳು. ಹರಕ ಕೌದಿಯಾದರೆ ತನ್ನ ಶರೀರವನ್ನು ಯಾರೂ ನೋಡಿ ಮೋಹಗೊಳ್ಳುವದಿಲ್ಲ ಅದಕ್ಕೆ ಬದಲಾಗಿ ದೀನದರಿದ್ರಳೆಂದು ಬಗೆದು ತಿರಸ್ಕರಿಸಿ ಬಿಡುವರೆಂದು ತಿಳುವಳಿಕೆ ಯಾಗಿ ಆ ಕೌದಿಯನ್ನು ಉಡಲಿಕ್ಕೆ ಒಪ್ಪಿಕೊಂಡಳು ಹೊರತು ಮತ್ತಾವ ಉದ್ದೇಶದಿಂದ ಅವಳಾಕೌದಿಯನ್ನು ಉಡಲಿಲ್ಲ. ಇದೂ ಒಂದು ಅವಳ ವಿಚಾರ ಪಟುತ್ವವನ್ನೇ ಸಿದ್ಧಗೊಳಿಸುವದು. ಅಲ್ಲದೆ ಜನರ ಯೋಗಕ್ಷೇಮದ ಕಡೆಗೂ ಆಕೆ ನಿಜವಾಗಿ ಲಕ್ಷಹಾಕಿ ಈ ರೀತಿ ಮಾಡಿದಳು. ಇದು ಆಕೆಯ ಉದಾತ್ತ ವಿಚಾರ ಸರಣಿಯಾಗಿದೆ.

ನಾನಾ ಪ್ರಕಾರ ಅನೇಕ ಕಷ್ಟನಷ್ಟಗಳನೂ ಸಹಿಸಿ ಕಲ್ಯಾಣಕ್ಕೆ ಬಂದು ವಾಸಿಸಹತ್ತಿದಳು. ತನ್ನ ಗುರುತನ್ನು ಯಾರಿಗೂ ಮಾಡಿ ಕೊಡದೆ ಗುಪ್ತ ಭಕ್ತಿ ಮಾಡುತ್ತ ಹುಚ್ಚಿಯಂತೇ ಕೌದಿ ಉಟ್ಟುಕೊಂಡು ಇರಹತ್ತಿದಳು. ಅಲ್ಲದೆ ಶಿವಾನುಭವ ಮಂಟಪಕ್ಕೆ ಸಹ ನಿತ್ಯ ಹೋಗುತ್ತಿದ್ದಳು. ಕಲ್ಯಾಣದ ಪ್ರತಿಯೊಂದು ಅಣು, ರೇಣು, ತೃಣ, ಕಾಷ್ಟ, ತಿಪ್ಪಿ ಕೊಳಚಿ, ಹೊಲಸು ಕೂಡ ಅವಳಿಗೆ ಒಳ್ಳೇ ಪವಿತ್ರವಾಗಿಯೇ ಕಂಡಳು. ಆದರಿಂದ ಅವಳು ತಿಪ್ಪೆ ಮೊದಲಾದವುಗಳಲ್ಲೆ ವಾಸಮಾಡಿಕೊಂಡು ಇರುವಳು ಅವಳಿಗೇನು ಮಂದಿರವಿಲ್ಲ. ಹುಚ್ಚರಂತೆ ತಿಪ್ಪಿ ಕೊಳಚಿಯ ಸ್ಥಾನದಲ್ಲಿಯೇ ಇರುತ್ತಿದ್ದಳು. ಆದರೂ ಇವಳು ತನ್ನ ಚರಿತೆಯನ್ನು ಯಾರಿಗೂ ತಿಳಿಸಲೇ ಇಲ್ಲ. ಆಕೆಯನ್ನು ಯಾರೂ ಗುರುತಿಸಲೇ ಇಲ್ಲ. ಆದರೆ ಅಲ್ಲಮ

ಪ್ರಭುದೇವರು ಮಾತ್ರ ಸುಜ್ಞಾನದಿಂದ ಅವಳನ್ನೂ ಚನ್ನಾಗಿ ಅರಿತಿದ್ದರು ಈ ಪ್ರಕಾರ ಅನೇಕ ವರ್ಷಕಾಲ ಕಳೆದಳು. ಹರಳಯ್ಯ ಮಧುವರಸರ ಕೊಲೆಯ ತರುವಾಯ ಶಿವಶರಣರು ಬಿಜ್ಜಳನಕೊಲೆ ಮಾಡಿದರು ಆಗ ಎಲ್ಲ ಕಡೆಗೆ ಕೋಲಾಹಲವೇಳಲು ಶರಣರು ಕಲ್ಯಾಣ ಬಿಟ್ಟು ರಾಜ ಭಟರನ್ನು ಎದುರಿಸುತ್ತ ಹೊರಟರು. ಈ ಕಲ್ಯಾಣ ಕ್ರಾಂತಿಯ ಕಾಲಕ್ಕೆ ಅಕ್ಕಮಹಾದೇವಿಯೂ ಹೊರಟಳು ಆಗ ಶಿವಶರಣರು ಅವಳ ಬಗ್ಗೆ ಎಲ್ಲರೂ ದುಃಖಿಸಹತ್ತಿದರು. ಈಕೆಯಂಥ ಶಿವಶರಣಿ ತಮಗೆಲ್ಲಿ ಸಿಕ್ಕಾಳೆಂದು ಗೋಳಾಡಿದರು. ಪ್ರಭುದೇವರು ಈ ಬೊಂತಾದೇವಿಯನ್ನು ತೋರಿಸಿ ಆಕೆಯ ಪರಿಚಯವನ್ನು ಮಾಡಿಕೊಟ್ಟು ಆಕೆಯ ಪೂರ್ಣಚರಿತ್ರೆಯನ್ನು ಅವರಿಗೆ ಹೇಳಿ ಇವಳ ಚರಿತೆಯು ಅಕ್ಕಮಹದೇವಿಯ ಚರಿತೆಗಿಂತ ಬಹಳೇ ಮಿಗಿಲಾದುದೆಂದು ತಿಳಿಸಿಕೊಟ್ಟು ಇವಳು ವೀರವಿರತಿ ಭಾವದವಳು. ಈಕೆಯು ಈ ಸಮಯದಲ್ಲಿ ಕಲ್ಯಾಣವನ್ನು ಬಿಡತಕ್ಕವಳಲ್ಲೆಂದು ಆಕೆಯ ಮಹಿಮೆಯನ್ನು ವಿವರಿಸಿ ಹೇಳಲು ಎಲ್ಲ ಶಿವಶರಣರೂ ಆಕೆಯನ್ನು ನೋಡಿ ಸಂತೋಷಗೊಂಡರು. ಆಗ ಪ್ರಭುದೇವರು ಅಕ್ಕಮಹಾದೇವಿ ಮೊದಲಾದವರು ಶ್ರೀಶೈಲಕ್ಕೆ ಹೋಗಿಬಿಟ್ಟರು. ಆದರೆ ಬೊಂತಾದೇವಿಯು ಕಡೆಯತನಕ ಕಲ್ಯಾಣದಲ್ಲಿಯೇ ಸುರಕ್ಷಿತ ಸೇವೆಗೈಯುತ್ತ ನಿಂತುಬಿಟ್ಟಳು. ಕಲ್ಯಾಣ ಕ್ರಾಂತಿಯು ಶಾಂತವಾದ ಕೆಲವು ದಿನಗಳ ತರುವಾಯ ಬೊಂತಾದೇವಿಯು ತನ್ನ ಇಷ್ಟಲಿಂಗದಲ್ಲಿ ಅಡಗಿದಳು. ಆಗ ಅವಳು ಉಟ್ಟ ಕೌದಿಯನ್ನು ಆಕಾಶಕ್ಕೆ ಹಾರಿಸಲು ಅದು ಅಲ್ಲೇ ಬಯಲಾಗಿ ಮಾಯವಾಯಿತು. ಅದರೊಡನೆ ತಾನೂ ನಿರವಯವನ್ನು ಹೊಂದಿದಳು.

ಈಕೆಯೂ ಕೂಡ ಅನೇಕ ವಚನಗಳನ್ನು ಹಾಡಿರುವಳು. ಇವಳು ಕಾಮನನ್ನೂ ಯಮನನ್ನೂ ಜಯಿಸಿದ ಮಹಾ ವೀರಶಿವಶರಣೆ. ಈಕೆಯು ಶಿವನಿಗೂ ಕೂಡ ಒಳ್ಳೇ ನಿಷ್ಠುರವಾಗಿ ಉತ್ತರ ಕೊಟ್ಟಿದ್ದಾಳೆ ಶಿವನು ಬೇರೆ ರೂಪದಲ್ಲಿ ಬಂದರೂ ಆತನ ಗುರುತನ್ನು ಸಹಜ ಹಿಡಿದಳು. ಇದರ ಮೇಲಿಂದ ಈಕೆಯು ನಿಜವಾದ ಜ್ಞಾನಿಯಾಗಿದ್ದಳೆಂದು ಹೇಳಲಿಕ್ಕೆ ಬೇರೆ ಆಧಾರಗಳೇ ಬೇಡ. ಶಿವನು ಬೇಕಾದ ಪಶುಪಕ್ಷಿ ಮನುಷ್ಯ ಮೊದಲಾದವರ ರೂಪದಲ್ಲಿ ಬಂದರೂ ಇವನೇ ಶಿವನೆಂದು ಗುರುತಿಸಿದರೆ ಅವರೇ ಜ್ಞಾನಿಗಳೆಂದು ಒಂದು ತತ್ವವಿರುವದು. ಅದರಂತೆ ಇವಳು ಮಾಡಿದಳು ಕಲ್ಯಾಣಕ್ಕೆ ಬರುವ ಮೊದಲೇ ಆ ಸ್ಥಿತಿಯನ್ನು ಅವಳು ಪಡೆದಿದ್ದಳೆಂದು

ಹೇಳಬಹುದು ಇದೇನು ಸಾಮಾನ್ಯ ಸ್ಥಿತಿಯಲ್ಲಿ. ಇವಳು ತನ್ನ ವಚನಗಳಿಗೆ 'ಕರೆದರೆ ಓ ಎಂಬಾತನೇ ಬಿಡಾಡಿ' ಎಂದು ಅಂಕಿತವನ್ನು ಉಪಯೋಗಿಸಿದ್ದು ನೋಡಿದರೆ ಶಿವನಿಗೆ ಬಿಡಾಡಿ ಎಂದು ಸಂಬೋಧಿಸಿರುವಳೆಂದು ತೋರುವದು. ಯಾಕೆಂದರೆ ಕಲ್ಯಾಣದ ದಾರಿಯಲ್ಲಿ ಎರಡುಸಲ ಆತನನ್ನು ತಿರಸ್ಕರಿಸಿದ್ದಳು. ಆದಕ್ಕಾಗಿ ಕರೆದರೆ ಓ ಎಂಬಾತನೇ ಬಿಡಾಡಿ ಎಂದು ಅಂದಿರುವಳು. ಇದನ್ನು ಬಹುತರವಾಗಿ ಸಾಕಲಾರದ ನಾಯಿಗೆ ಉಪಯೋಗಿಸುವದುಂಟು. ಹಾಗೆ ಶಿವನೂ ಕೂಡ ಬಿಡಾಡಿ ಭಕ್ತರ ಮನೆಮನೆಗೆ ಭಕ್ತಿಯ ತಿರುಪೆಗಾಗಿ ತಿರುಗುವ ಬಿಡಾಡಿ ಎಂಬ ಭಾವದಲ್ಲಿ ಉಪಯೋಗಿಸಿರುವಳು. ಇವಳ ಭಕ್ತಿ. ಎಂಥ ನಿಷ್ಕಾಮ ಪರ ದಿವ್ಯ ಭಕ್ತಿ; ಅದನ್ನು ವರ್ಣಿಸಲಿಕ್ಕಾಗುವದಿಲ್ಲ. ಇವಳು ಶಿವನಿಂದ ಯಾವ ವರವನ್ನೂ ಬೇಡಲಿಲ್ಲ ಎಳ್ಳ ಕಾಳಿನಷ್ಟು ಸಹ ಅವನಿಂದ ಆಶಿಸಲಿಲ್ಲ, ಕಾಮಿಸಲಿಲ್ಲ ಬಯಸಲಿಲ್ಲ. ಅದಕ್ಕೆ ಇವಳ ಭಕ್ತಿ ಹೆಚ್ಚಿನದು. ಆದಕ್ಕಾಗಿಯೇ ಪ್ರಭುದೇವರು ಅಕ್ಕನಿಗಿಂತ ಹೆಚ್ಚಿನವಳು, ಅಕ್ಕನ ಅಕ್ಕನು, ಅಕ್ಕನಿಗಿಂತ ತ್ಯಾಗಿ ಯೋಗಿನಿ ಎಂದು ಕೊಂಡಾಡಿದುದು ಒಳ್ಳೇದೇ ಆಗಿದೆ.

ಶಿವಶರಣರ ಚರಿತೆಗಳನ್ನು ಸಾಮಾನ್ಯರಿಗೆ ಅರಿಯುವದು ಶಕ್ಯವಿಲ್ಲ. ಅವೆಲ್ಲ ಬಹು ಅದ್ಭುತವಾಗಿವೆ. ನಮ್ಮಂಥವರು ಸಮಾಜದಲ್ಲಿ ಜಗತ್ತಿಗೆ ಬೆಳಕನ್ನು ಕೊಡುವಂಥ ಶಿವಶರಣೆ ಶಿವಶರಣರು ಆಗಿ ಹೋದರೂ ನಾವು ಇನ್ನೂ ಕಣ್ಣುಮುಚ್ಚಿಕೊಂಡೇ ಕುಳಿತಿರುವೆವು. ಅನ್ಯ ಧರ್ಮಮತದವರಲ್ಲಿ ಅಲ್ಪಸ್ವಲ್ಪ ಇದ್ದುದನ್ನು ಎಷ್ಟು ಬಗೆಯಿಂದ ಪ್ರಕಟ ಮಾಡುವರು ವಿಚಾರಿಸಿರಿ. ಕಾವ್ಯ, ಪುರಾಣ ಲೇಖ. ಚರಿತೆ, ಕಾದಂಬರಿ ಗುಡಿ ಚಿತ್ರಕಲೆ ಸಿನೇಮಾ ರೇಡಿಯೋ ಭಾಷಣ ವರ್ತಮಾನ ಪತ್ರ ಹಸ್ತಪತ್ರಿಕೆ ಪೋನೋಪ್ಲೇಟ ನಿಬಂಧ ಸ್ಪರ್ಧೆ ಮೊದಲಾದವುಗಳ ಮುಖಾಂತರ ಅದನ್ನು ಪ್ರಸಿದ್ಧಗೊಳಿಸುವರು. ನಾವು ಹೇಡಿಗಳು. ಇನ್ನೂ ಹಳೇದನ್ನೇ ಕೆತ್ತಿ ತಿಂಡುತ್ತ ಕೂತಿರುವದು ಬಹು ಶೋಚನೀಯವೇ ಸರಿ. ಆದಕ್ಕೆ ಶಿವಶರಣೆ ಶಿವಶರಣರ ಚರಿತ್ರೆಗಳನ್ನೂ ಮೇಲೆ ಹೇಳಿದ ಬಗೆಯಿಂದ ಸರ್ವೆಕಡೆಗೂ ಪ್ರಸಾರವಾಗುವಂತೆ ಮಾಡಬೇಕು. ಈಗ ಮಾತ್ರ ಅಕ್ಕನ ಬಗ್ಗೆ ಪ್ರಚಾರ ನಡೆದುದ್ದು ಸ್ತುತ್ಯವಾಗಿದೆ. ಅದೂ ಕೂಡ ಆಗತಕ್ಕಷ್ಟು ಆಗಿಲ್ಲ ಇನ್ನೂ ಹೆಚ್ಚಾಗಬೇಕು. ಅದರಂತೆ ಸರ್ವರ ಚರಿತೆಗಳೂ ಹೆಚ್ಚೆಚ್ಚಾಗಿ ಪ್ರಕಾಶಕ್ಕೆ ಬರುವದು ಅವಶ್ಯವಾಗಿದೆ. ಯಾಕೆಂದರೆ ಅವರಿಂದ ನಾವು ಸ್ಫೂರ್ತಿಯನ್ನು ಪಡೆಯುವೆವು.

ಅವರ ಚರಿತೆಗಳಿಂದ ಭಕ್ತಿ, ಜ್ಞಾನ, ತ್ಯಾಗ, ಸೇವೆ ಮೊದಲಾದವುಗಳು ನಮ್ಮಲ್ಲಿ ಬೆಳೆದು ಬರಲಿಕ್ಕೆ ಬಹಳವಾಗಿ ನೆರವಾಗುವದರಲ್ಲಿ ಸಂದೇಹವಿಲ್ಲ. ಅವರ ಚರಿತೆಯನ್ನು ಯಾವ ದೃಷ್ಟಿಯಿಂದ ನೋಡಿ ವಿಮರ್ಶೆ ಮಾಡಿದರೂ ಹೆಚ್ಚಿನ ಮಹಿಮೆಯೇ ಕಂಡು ಬರುವದು. ವಾಚಕರು ಇದನ್ನು ಅವಲೋಕಿಸಬೇಕು. ಶರಣ ಶರಣೆಯರ ಚರಿತೆಗಳನ್ನು ಎಷ್ಟು ಸಲ ಓದಿದರೂ ಎಷ್ಟು ಸಲ ಕೇಳಿದರೂ ಹಳೇವು ಆಗುವದಿಲ್ಲ. ಬೇಸರವಾಗುವದಿಲ್ಲ. ಹೆಚ್ಚಿಗೆ ಪುಣ್ಯವೂ ಭಕ್ತಿಯೂ ಲಭಿಸುವದು. ಇನ್ನು ಅದಷ್ಟು ವಿಮರ್ಶಾತ್ಮಕ ದೃಷ್ಟಿಯಿಂದ ಬರೆಯುತ್ತ ಹೋಗಬೇಕು. ವಾಚಕರು ಅವಲೋಕಿಸಬೇಕು. ಮತ್ತು ಯೋಗ್ಯ ಸಲಹೆಗಳನ್ನು ಶಿವಾನುಭವದ ಮುಖಾಂತರವಾಗಲಿ, ಪತ್ರದ ಮುಖಾಂತರವಾಗಲಿ ತಿಳಿಸಿದಲ್ಲಿ ನಾನು ಉಪಕೃತನಾಗುವೆನು. ರಾ. ಬಾ ಹಳಕಟ್ಟಿಯವರ ಪುಣ್ಯ ಪ್ರಭಾವದಿಂದ ಸತ್ತು ಬಿದ್ದ ನಮ್ಮ ಶರಣ ಶರಣೆಯರೂ ವಚನ ಗ್ರಂಥಗಳೂ ಚರಿತ್ರೆಗಳೂ ಪುನಃ ಬದುಕಿದವು. ಅವರ ಉಪಕಾರವನ್ನು ನಾಡಿನವರು ಎಷ್ಟು ಸ್ಮರಿಸಿದರೂ ತೀರದು. ಆದರೂ ನಮ್ಮವರು ಇವುಗಳ ಕಡೆಗೆ ಲಕ್ಷ ಹಾಕಿಲ್ಲ. ಸರ್ವರೂ ಇವುಗಳ ಕಡೆಗೆ ಲಕ್ಷ ಹಾಕಬೇಕೆಂದು ಎಲ್ಲರಿಗೂ ವಿನಂತಿಸಿಕೊಂಡು ಈ ಲೇಖವನ್ನು ಮುಗಿಸುವೆನು.

---

ಟೀಪು:- ರಾ| ಬ| ಹಳಕಟ್ಟಿಯವರು ಬರೆದ ಶಿವಶರಣರ ಚರಿತ್ರೆಗಳು ಭಾಗ ೨, ೩, ನೋಡಿರಿ. ೧ನೇ ಭಾಗದ ಪ್ರತಿಗಳು ತೀರಿವೆ.

# ವೀರಶೈವರಲ್ಲಿ ಧಾರ್ಮಿಕ ಮೂಢ ನಂಬಿಗೆ

(ಬರೆದವರು:- ಶ್ರೀ ಶಿವಾನಂದ ಸ್ವಾಮಿಗಳು ಗವಿಮಠ, ತೆಗ್ಗಿಹಳ್ಳಿ.)



ವೀರಶೈವರಲ್ಲಿ ಧಾರ್ಮಿಕ ಮೂಢ ನಂಬಿಗೆಗಳು ಬಹುವಾಗಿ ಇರುವವು. ಹಿಂದಿನ ಇಂಥ ಲೇಖಗಳಲ್ಲಿ ಕೆಲವು ಧಾರ್ಮಿಕ ಮೂಢ ನಂಬಿಗೆಗಳನ್ನು ಹೇಳಲಾಗಿದೆ. ಇಲ್ಲಿ ಕೆಲವು ವೀರಶೈವರು ಲಿಂಗ ಹೋದರೆ ಪ್ರಾಣವನ್ನೇ ಕೊಟ್ಟ ಕೊಡುತ್ತಿರುವ ಮತ್ತು ಉಪವಾಸ ಕುಳಿತು ಮರುಗುವದು ಕಂಡುಬರುವದು. ಇದು ಎಷ್ಟು ಮಾತ್ರಕ್ಕೂ ಯಾವ ದೃಷ್ಟಿಯಿಂದಲೂ ಸಮಂಜಸವಾಗಲಾರದು. ಕುರುಡನ ಕೈಯೊಳಗಿನ ಕೋಲು ಕಳೆದರೆ ಸುಟ್ಟು ಹೋದರೆ, ಹುಳಹತ್ತಿ ಮುರಿದರೆ ಅವನು ಸಾಯುಬೇಕೇ ಹೇಗೆ? ಅದರಂಷ್ಟೆ ಹಾಸ್ಯಾಸ್ಪದವಾಗುವದು ಸಾಧಕನ ಕೈಯ್ಯಲ್ಲಿಯ ಲಿಂಗ ಹೋದರೆ ಪ್ರಾಣ ಕಳಕೊಳ್ಳುವದು ಕೂಡ. ಕಂಬಾರ, ಬಡಿಗ, ಕೂಲಿಕಾರ ಮೊದಲಾದವರ ಕೈಯೊಳಗಿನ ಕೆಲಸದ ಸಾಧನಗಳು ಮುರಿದರೆ, ಕಳೆದರೆ ಅವರೇನು ಸಾಯುವದಿಲ್ಲ. ಹೊಸ ಸಾಧನ ತಕ್ಕೊಂಡು ತಮ್ಮ ಕೆಲಸಗಳನ್ನು ಮಾಡಿಕೊಳ್ಳುವರು. ಯುದ್ಧ ಮಾಡುವವನು ತನ್ನ ಕೈಯೊಳಗಿನ ಆಯುಧ ಕಳೆದರೆ, ಮುರಿದರೆ ಅವನೇನು ರಣರಂಗದಲ್ಲಿ ಆತ್ಮಹತ್ಯ ಮಾಡಿಕೊಳ್ಳುವದಿಲ್ಲ. ಪುನಃ ಹೊಸ ಬಲಿಷ್ಠ ಆಯುಧ ತಕ್ಕೊಂಡು ರಣರಂಗ ಪ್ರವೇಶಿಸುವನು. ಅದರಂತೆ ಸಾಧಕನ ಕೈಯಲ್ಲಿಯ ಲಿಂಗ ಹೋದರೆ, ಕಳೆದರೆ ನೆಲಕ್ಕೆ ಬಿದ್ದರೆ ಪ್ರಾಣ ಬಿಡುವದು ಸರಿಯಲ್ಲ. ಹೊಸ ಲಿಂಗವನ್ನು ಗುರುಗಳ ಕಡೆಯಿಂದ ಪಡಕೊಂಡು ಸಾಧನ ಮಾಡಿ ಸಿದ್ಧಿ ಪಡಕೊಂಡು ಈ ನರಜನ್ಮವನ್ನು ಸಾರ್ಥಕಗೊಳಿಸಿಕೊಂಡರೆ ಬಹು ಉತ್ತಮವಾಗುವದು. ವೀರಶೈವರಿಗೆ ಸಲ್ಲದ ಈ ಆಚರಣೆಯು ಧರ್ಮದಲ್ಲಿ ಹೇಗೆ ತಲೆದೋರಿತು ತಿಳಿಯುವದೇ ಇಲ್ಲ. ಯಾವ ಗ್ರಂಥದಲ್ಲಿ ಹೀಗೆ ಆಧಾರಗಳಿಲ್ಲ. ಆದ್ಯರ ವಚನಗಳಲ್ಲಿ ಮಾತ್ರ ಒಳ್ಳೇ ಸ್ಪಷ್ಟ ಶಬ್ದಗಳಲ್ಲಿಯೇ ಇಂಥ ಹೊಲಸ ಕೃತಿಗಳನ್ನು ಸರ್ವರೂ ಖಂಡಿಸಿದ್ದು ಕಂಡುಬರುವದು. ಇವರೇನು ಹುಚ್ಚರಲ್ಲ. ಮಹಾ ಮಹಾ ದೊಡ್ಡ ಅನುಭಾವಿಗಳು, ಅವತಾರಿಕರು, ಸಿದ್ಧಿಪುರುಷರು.

ಇಂಥವರ ವಾಕ್ಯಗಳಾಗಲಿ ವಚನಗಳಾಗಲಿ, ದೇವವಾಣಿಯೇ ಸರಿ. ಅವರ ವಾಣಿಯಲ್ಲಿ ಯಾರೂ ಎಳ್ಳ ಕಾಳಷ್ಟು ಸಂಶಯ ತಕ್ಕೊಳ್ಳಲೇಕೂಡದು. ಅವರು ಏನು ಹೇಳಿರುವರೋ ಅದನ್ನು ವಿಚಾರಿಸುವ ಅವಶ್ಯಕತೆ ಇರುವದಿಲ್ಲ. "ಲಿಂಗ ಬಿದ್ದರೆ ಸಮಾಧಿಯ ಕೊಂಡೆನೆಂಬಿರಿ. ಗುರು ಸತ್ತರೇಕೆ ಸಮಾಧಿಯ ಕೊಳ್ಳರಣ್ಣಾ ? ಬಲ್ಲರೆ ಹೇಳಿ. ಅರಿಯದಿದ್ದರೆ ಕೇಳಿ. ಪೃಥ್ವಿಯಲ್ಲಿ ಹುಟ್ಟಿದ ಕಣಿಯನೇ ತಂದು ಅಷ್ಟ ತನುವಿನ ಕೈಯ್ಯಲ್ಲಿ ಕೊಡಲು ಇದು ಮುಟ್ಟಿ ಪೂಜಿಸಲಿಕ್ಕೆ ನಾ ಹೇಗೆ ಪೂಜಿಸಲಯ್ಯಾ ? ಲಿಂಗ ಮೂವರಿಗೆ ಹುಟ್ಟಿತು. ಪೃಥ್ವಿಯಲ್ಲಿ ಶಿಲೆಯಾಯಿತ್ತು. ಬಿನ್ನಾಣಿಯ ಕೈಯಲ್ಲಿ ರೂಪಾಯಿತ್ತು. ಗುರುವಿನ ಕೈಯಲ್ಲಿ ಮೋಕ್ಷವಾಯಿತ್ತು. ಈ ಲಿಂಗ ಬೀಳಬಲ್ಲುದೇ ? ಪೃಥ್ವಿ ತಾಳಬಲ್ಲುದೇ ? ಲಿಂಗ ಬಿದ್ದಿತೆಂದು ಶೋಡ ಶೋಪಚಾರವ ಮಾಡಲಾಗದು. ಲಿಂಗದ ಕೂಡ ಸಮಾಧಿಯ ಕೊಂಡೆನೆಂತೆಂಬ ಭಕ್ತರಿಗೆ ನಾಯಕ ನರಕ ತಪ್ಪದೆಂದಾತ ನಿಷ್ಕಳಂಕ ಮಲ್ಲಿಕಾರ್ಜುನ ಪ್ರಭುವೇ "

ಲಿಂಗಕ್ಕಿಂತ ಅದನ್ನು ಹಸ್ತದಲ್ಲಿ ಇರಿಸಿದ ಗುರು ಜಂಗಮರು ಸತ್ತರೆ ಅವನು ಸಾಯುವದಿಲ್ಲೇಕೆ ? ಈ ಲಿಂಗವು ಮೂವರಲ್ಲಿ ರೂಪುಗೊಂಡಿತ್ತು. ಪೃಥ್ವಿಯ ಹೊಟ್ಟೆಯಲ್ಲಿ ಹುಟ್ಟಲು ಅದು ತಾಯಿಯಾಯಿತು. ಕಲ್ಲುಕುಟಕನ ಕೈಯಲ್ಲಿ ರೂಪ ತಾಳಿ ಬಂದುದಕ್ಕೆ ಅವನು ತಂದೆಯಾದನು. ಗುರುವಿನ ಕೈಯಲ್ಲಿ ದೇವತ್ವ ಪಡೆದುದಕ್ಕೆ ಅವನು ಅದಕ್ಕೆ ಗುರುವಾದನು. ಈ ಮೂವರಲ್ಲಿ ಯಾರು ಹೆಚ್ಚುಕಡಿಮೆ ಎಂಬುದನ್ನು ವಿಚಾರಿಸಿ ನೋಡಿರಿ. ಲಿಂಗವು ಎಂದಾದರೂ ಬೀಳುವದುಂಟೆ ? ಒಂದು ವೇಳೆ ಈ ಲಿಂಗ ಬಿದ್ದರೆ ಈ ಪೃಥ್ವಿ ತಾಳುವದು ಎಂದಾದರೂ ಶಕ್ಯವಿದೇ ಹೇಗೆ ? ಎಂದೂ ಶಕ್ಯವಿಲ್ಲ. ಇಂಥ ಲಿಂಗ ಹೋದರೆ ಸಮಾಧಿಯನ್ನು ಕೈಕೊಳ್ಳುವದು ಅತಿ ಮೂರ್ಖತನ. ಅವರಿಗೆ ನಿಜವಾಗಿ ಆತ್ಮಲಿಂಗದ ದ್ರೋಹ ಮಾಡಿದ ಅಪರಾಧ ಬಂದು ನಾಯಕ ನರಕವಾಗುವದರಲ್ಲಿ ಏನೂ ಸಂದೇಹವೇ ಇಲ್ಲ.

ಗಾರುಡ ಪುರಾಣದಲ್ಲಿ ಹೀಗೆ ಹೇಳಿದೆ—" ಲಿಂಗಮಧ್ಯೆ ಜಗತ್ಸರ್ವಂ, ತ್ರೈಲೋಕ್ಯ ಸಚರಾಚರಂ । ಲಿಂಗ ಬಾಹ್ಯ ಪರಂನಾಸ್ತಿ । ತಸ್ಮೈ ಶ್ರೀ ಗುರವೇ ನಮಃ । ಲಿಂಗಂ ಪ್ರಪೂಜಯೇತ್ ॥ " ಲಿಂಗದಲ್ಲಿ ಸರ್ವ ಜಗತ್ತೇ ಅಡಗಿರುವದು. ಮೂರು ಲೋಕಗಳೂ (ಸ್ವರ್ಗ ಮೃತ್ಯು ಪಾತಾಳ) ಅಲ್ಲದೆ

ಹದಿನಾಲ್ಕು ಲೋಕಗಳು ಈ ಬಯಲೇ ಬಯಲು ನಿರ್ಬಯಲೂ ಕೂಡ ಮತ್ತು ಯಾವತ್ತೂ ಚರಾಚರ ವಸ್ತು ಪ್ರಾಣಿ ಮೊದಲಾದವುಗಳೂ ಸಹ ಲಿಂಗದೊಳಗೇ ಅಡಗಿರುವವು. ಲಿಂಗ ಬಿಟ್ಟು ಏನೂ ಹೊರಗೆ ಇರುವದು ಶಕ್ಯವಿಲ್ಲ. ಅದಕ್ಕೆ ಲಿಂಗವು ಎಲ್ಲಿ ಬೀಳಬೇಕು ಎಲ್ಲಿ ಕಳೆಯಬೇಕು ಅದಕ್ಕೆ ಏನು ವಿಕಾರ ಆಗುವದು ಶಕ್ಯವಿದೇ ಹೇಳಿ ನೋಡುವಾ. ಲಿಂಗ ಶಬ್ದವು ಅಷ್ಟು ವ್ಯಾಪಕವಿರುವದು. ಅದಕ್ಕೆ ಚ್ಯುತಿ, ನಾಶ, ವ್ಯಯ ಮೊದಲಾದವುಗಳು ಎಂದೂ ಆಗುವಂತಿಲ್ಲ. ಅದಕ್ಕೆ ಇಷ್ಟಲಿಂಗ ಬಿದ್ದರೆ ಪ್ರಾಣವನ್ನು ಕೊಡಬಾರದು. ಈ ಇಷ್ಟಲಿಂಗವು ಆತ್ಮಲಿಂಗದ, ಮಹಾಲಿಂಗದ ಕುರುಹು ಮಾತ್ರವಾಗಿದೆ. ಇದೇ ಲಿಂಗವಲ್ಲ. ಅದಕ್ಕೆ ಅದು ಕಳೆದರೆ, ನಾಶವಾದರೆ ಸಾಯಬಾರದ. ಇದು ಮೂರ್ತಿಯು ಅಲ್ಲ. ಮೂರ್ತಿಪೂಜೆಯಲ್ಲ. ಯಾಕಂದರೆ ಅದು ಮಹಾಲಿಂಗದ ಗುರುತನ್ನು ಕುರುಹನ್ನು ಮಾತ್ರ ಸೂಚಿಸುವ ಚಿನ್ಹೆಯಾಗಿದೆ. ಸಾಧಕನಿಗೆ ಅದೊಂದು ಸಾಧನೆಯಾಗಿದೆ ಹೊರತು ಸಾಧ್ಯವಾಗಿಲ್ಲ. ಅದಕ್ಕೆ ಅದು ಮೂರ್ತಿಯಲ್ಲ. ಮೂರ್ತಿ ಪೂಜೆಯೂ ಅಲ್ಲ. ವೀರಶೈವರು ಮೂರ್ತಿಪೂಜಕರೂ ಅಲ್ಲ. ಸತ್+ಚಿತ್ ಆನಂದದ ಕುರುಹು ಇದಾಗಿದೆ. ಇದು ಕಳೆದರೆ ಯಾರೂ ಸಾಯಬಾರದು. ಒಂದು ಕುರುಹು ಕಳೆದರೆ ಹೊಸ ಕುರುಹನ್ನು ದೊರಕಿಸಿ ಸಾಧನೆಯನ್ನು ಮುಂದುವರಿಸಬೇಕೇ ಹೊರತು ಸಾಯಬಾರದು.

ಇಷ್ಟಲಿಂಗ ಬಿದ್ದರೆ ಆಚಾರಲಿಂಗ ಬಿದ್ದಿತೆ! ಆಚಾರಲಿಂಗ ಬಿದ್ದರೆ ಗುರುಲಿಂಗ ಬಿದ್ದಿತೆ! ಗುರುಲಿಂಗ ಬಿದ್ದರೆ ಶಿವಲಿಂಗ ಬಿದ್ದಿತೆ! ಶಿವಲಿಂಗ ಬಿದ್ದರೆ ಜಂಗಮ-ಲಿಂಗ ಬಿದ್ದಿತೇ? ಜಂಗಮಲಿಂಗ ಬಿದ್ದರೆ ಪ್ರಸಾದ ಲಿಂಗ ಬಿದ್ದಿತೇ? ಪ್ರಸಾದಲಿಂಗ ಬಿದ್ದರೆ ಮಹಾಲಿಂಗ ಬಿದ್ದಿತೆ? ಅಕಟಕಟ ಷಡ್ವಿಧಲಿಂಗದ ಭೇದವನರಿಯದೆ ಕೆಟ್ಟ ಕೇಡ ನೋಡಾ! ಅಭ್ಯಾಸವ ಮಾಡುವಲ್ಲಿ ಕೋಲು ಬಿದ್ದರೆ ತನ್ನ ತಾನೆ ಇರಿದುಕೊಂಡು ಸಾಯಬಹುದೇ? ಜಲ, ಅಗ್ನಿ, ನೇಣು, ವಿಷ, ಅಸಿಪತ್ರ, ಸಮಾಧಿ ಇಂತಿದರಿಂದ ಪ್ರಾಣ ಹಿಂಸೆಯ ಮಾಡುವದು ಅವರಿಗೆ ಅಘೋರ ನರಕದಲ್ಲಿ ಎದ್ದೆದ್ದಿಕ್ಕುವ ನಮ್ಮ ಕೂಡಲ ಚನ್ನ ಸಂಗಮದೇವ." ಲಿಂಗಗಳೆಂದರೆ ಮುಖ್ಯವಾಗಿ ಆರು ಪ್ರಕಾರದವಿರುವವು. ಇಷ್ಟಲಿಂಗ ಹೋದರೆ ಆಚಾರಲಿಂಗವಿರುವದಿಲ್ಲವೇನು? ಎಲ್ಲ ಲಿಂಗಗಳೂ ಹೋದವೆಂದು ತಿಳಿದರೂ ಮಹಾಲಿಂಗವಂತೂ ಇದ್ದೇ ಇರುವದಲ್ಲವೇ? ಅದಕ್ಕೆ ಯಾವ ಚ್ಯುತಿ ಇರುವದು ಶಕ್ಯವಿಲ್ಲ. ಅದಕ್ಕೆ

ಇಷ್ಟಲಿಂಗ ಹೋದರೆ ಪ್ರಾಣ ಕೊಡಬಾರದು. ಉಳಿದ ಲಿಂಗಗಳು ಇದ್ದೇ ಇರುವವಲ್ಲವೆ? ಉಳಿದ ಲಿಂಗ ಹೋದರೆ ಏನೂ ಮಾಡಿಕೊಳ್ಳುವದಿಲ್ಲ. ಆದರೆ ಇಷ್ಟಲಿಂಗ ಹೋದರೆ ಪ್ರಾಣ ಕೊಡುವದು ಬಲು ಹೆಡ್ಡತನವೇ ಸರಿ. ಅದು ಎಲ್ಲಕ್ಕೂ ಕೀಳು. ಬೇಕಾದಷ್ಟು ಇಷ್ಟಲಿಂಗಗಳನ್ನು ನಾವು ದೊರೆಕಿಸಬಹುದು. ಬಹಳ ಶ್ರಮವಾಗಲಿ, ಹಣವಾಗಲಿ, ಖರ್ಚಾಗುವದಿಲ್ಲ. ಅಂಥ ಒಂದು ಒಡವೆ ಕಳೆದರೆ ದಿವ್ಯವಾದ (ಪ್ರಾಣಲಿಂಗ) ಪ್ರಾಣವನ್ನೇ ಕಳಕೊಳ್ಳುವದು ಬಹು ದೋಷವಾಗಿದೆ. ಇದರ ಬೆಲೆ ಎಷ್ಟು ಹೇಳಿ ನೋಡುವಾ? ಇದೆಲ್ಲ ಸಾಧಕನ ಹೆಡ್ಡತನ. ವಿಚಾರಿಸಿ ಹೊಸದನ್ನು ದೊರಕಿಸಿ ಸಾಧನೆ ಮಾಡಿದರೆ ಒಳಿತಾಗುವದು. ಪ್ರಾಣ ಕಳಕೊಂಡರೆ ಬಹು ದೊಡ್ಡ ಪ್ರಮಾಣದ ಧಾರ್ಮಿಕ ಮೂಢ ನಂಬಿಗೆಯಾಗುವದು. ಅನ್ಯ ಧರ್ಮೀಯರು ನಗುವರು. ಹಾಸ್ಯ ಮಾಡುವರು. ಅಲ್ಲದೆ ಈ ಭಯಂಕರ ಸ್ವರೂಪದ ಈ ಧರ್ಮವನ್ನು ನೋಡಿ ಅನ್ಯ ಧರ್ಮದವರು ನಮ್ಮ ಧರ್ಮಕ್ಕೆ ಬಂದು ಸೇರುವದೂ ಕಷ್ಟಾಗುವದು. ಇದ್ದವರೂ ಕೂಡ ಇದಕ್ಕಂಜಿ ಪರಧರ್ಮಕ್ಕೆ ಹೋಗುವ ಭೀತಿ ಇರುವದು. ಈ ಎಲ್ಲ ಕಾರಣಗಳಿಂದ ವಿಚಾರಿಸಿದರೂ ಇಷ್ಟಲಿಂಗ ಹೋದರೆ ಪ್ರಾಣ ಕಳಕೊಳ್ಳುವದು ಎಳ್ಳಷ್ಟು ಸರಿಯಲ್ಲ.

"ಪ್ರತಿ ಇಲ್ಲದ ಲಿಂಗವು ಭಿನ್ನವಾಯಿತ್ತೆಂದು ತನುವಿನ ಮೇಲೆ ಶಸ್ತ್ರವನಿಕ್ಕಿಕೊಂಡು ಆತ್ಮಘಾತವ ಮಾಡಿಕೊಂಬ ದ್ರೋಹಿಗಳ ಮುಖವ ನೋಡಲಾಗದು. ಮಂತ್ರ ಭಿನ್ನವಾಯಿತ್ತೆಂದು ಕಂಥೆಯ ಬಿಡುವರೇ ಅರಿವುಳ್ಳವರು? ಅದು ದ್ವೇಷವಲ್ಲದೆ ಅರಿವಿಂಗೆ ಸಂಬಂಧವಲ್ಲ."

"ಮಂತ್ರಮಧ್ಯೆ ಭವೇ ಲ್ಲಿಂಗಂ। ಲಿಂಗ ಮಧ್ಯೆ ಭವೇನ್ಮಂತ್ರಂ॥

ಮಂತ್ರ ಲಿಂಗದ್ವಯೋರೈಕ್ಯಂ ಇಷ್ಟಲಿಂಗಂತು ಶಾಂಕರಿ॥ ಆ ಮಂತ್ರ ಸರ್ವಾಧಾರ ಸರ್ವಾತ್ಮ ಬೀಜವೆಂದರಿಯದ ಈ ಭಾಷೆ ಹೀನರಿಗೇಕೆ ಶಂಭು ಜಕ್ಕೇಶ್ವರಾ?' ಲಿಂಗ ಮತ್ತು ಮಂತ್ರಗಳಲ್ಲಿ ಭೇದವಿಲ್ಲ. ಇವು ಎಂದೂ ಭಿನ್ನವಾಗುವದೇ ಇಲ್ಲ. ಅಲ್ಲಿ ಯಾರಿಂದಲೂ ಯಾತರಿಂದಲೂ ಇವುಗಳಿಗೆ ಕೇಡಾಗುವದಿಲ್ಲ. ಆದಕ್ಕೆ ಇಷ್ಟಲಿಂಗಕ್ಕೆ ಕೇಡಾದರೂ ಇವು ಯಾವಾಗಲೂ ಚ್ಯುತಿ ಇಲ್ಲದೆ ಇರತಕ್ಕವುಗಳು ಕಾರಣ ಇಷ್ಟಲಿಂಗ

ಹೋದರೆ ಹೊಸದೊಂದು ತಕ್ಕೊಂಡು ಸಾಧನ ಮಾಡಿ ಲಿಂಗ ಮಂತ್ರಗ ಳೊಂದೇ ಎಂಬುದನ್ನು ಕಂಡುಕೊಳ್ಳಬೇಕೇ ಹೊರತು ಪ್ರಾಣಘಾತ ಮಾಡಿ ಕೊಳ್ಳುವದು ಮಹಾ ದೋಷ.

"ಕಾಯವೇ ಭಕ್ತ, ಪ್ರಾಣವೇ ಲಿಂಗವಾಗಿರ್ಪ ಭೇದವನರಿಯದೆ ಬೇರೆ ಮತ್ತೆ ಲಿಂಗ ಬಿದ್ದಿತ್ತೆಂದು ನುಡಿವ ಮಾತು ಅಜ್ಞಾನವೈ ಕಾಣಾ ಗುಹೇಶ್ವರಾ."

ಅಂಗದ ಮೇಲೆ ಲಿಂಗವಿದ್ದು ಅಂಗ ವಿಕಾರಗಳು ಹಿಂಗದಿಪ್ಪವರು ಮನ ಮುನ್ನವೇ ತಾವು ಆ ಲಿಂಗಕ್ಕೆ ಭಿನ್ನವಾಗಿಹರು. ಆ ಸ್ಥಿತಿಯನರಿಯದೆ ಕೈಯೊಳಗಿನ ಕುರುಹು ನೆಲಕ್ಕೆ ಬಿದ್ದಿತ್ತು ಎಂದು ಸಾಯುವವರು ಉಭಯ ಭ್ರಷ್ಟರು ಗುಹೇಶ್ವರ."

ಲಿಂಗದೊಳಗೆ ಮಹಾಲಿಂಗವಿರಲು, ಕೈಯಲಿಂಗವು ಬಿದ್ದಿತೆಂದು ನೆಲ ದೊಳಗಂಗವನು ಹೂಣುವರು ಭಂಗ ಬಡುವರಲ್ಲಾ ಗುಹೇಶ್ವರ ಲಿಂಗವನ ರಿಯದ ಜಡರುಗಳು.

ಪೃಥ್ವಿಯ ಪಾಷಾಣ ಪೃಥ್ವಿಯ ಮೇಲೆ ಬಿದ್ದುಹೋದರೆ ಪ್ರಾಣ ಲಿಂಗ ಹೋಯಿತ್ತು, ಪ್ರಾಣಲಿಂಗ ಹೋಯಿತ್ತೆಂದಿರಿ. ಪ್ರಾಣಲಿಂಗವು ಹೋದರೆ ನೀವು ನುಡಿವಪರಿ ಎಂತೋ? ಅಂತರಂಗದ ಪ್ರಾಣಲಿಂಗದ ಸಂಬಂಧದ ಹೊಲಬನರಿಯದಾಗಿ ಗುಹೇಶ್ವರ ನೀಮಾಡಿದ ಬೆಡಗು ಬಿನ್ನಾಣಕ್ಕೆ ನಾನು ಬೆರಗಾದೆನು.

ಲಿಂಗಹೋಯಿತ್ತೆಂದು ಲಿಂಗವ ಬಿಡುವವನ ನೋಡಿ ಎನ್ನಂಗ ನಡು ಗಿತ್ತಯ್ಯ. ಲಿಂಗ ಹೋದರೆ ನಿನ್ನ ಪ್ರಾಣಂಗಳುಳಿಯುವವೇ? ಲಿಂಗಪ್ರಾಣಿ ಪ್ರಾಣಲಿಂಗಿ ಎಂದುದು ಹುಸಿಯೋ ಅಯ್ಯಾ ಕಪಿಲಸಿದ್ಧಮಲ್ಲಿಕಾರ್ಜುನ? ಇಷ್ಟಲಿಂಗವನೆ ಪ್ರಾಣಲಿಂಗವೆಂಬ ಬಿಟ್ಟಿಯ ಭಂಡರು ನೀವು ಕೇಳಿರೇ. ಇಷ್ಟಲಿಂಗವನು ಕಾಯವನು ಮೆಟ್ಟಿ ಹೂಳುವಲ್ಲಿ ಬಿಟ್ಟುಹೋಹ ಪ್ರಾಣಕ್ಕೆ ಲಿಂಗ ವೆಲ್ಲಿಯದೋ ಹೇಳು. ಮಹೇಶ್ವರಾ ಅಂಗದ ಮೇಲಣಲಿಂಗ ಹಿಂ ಗಲಾರದೆಂಬರು. ಅಂಗ ಲಿಂಗ ಸಂಬಂಧವಾದಲ್ಲಿ ಫಲವೇನು? ಮನಲಿಂಗ ಸಂಬಂಧಿಯಾಗದನ್ನಕ್ಕ ಕೂಡಲ ಚನ್ನಸಂಗಯ್ಯ ಮನದಿಂದಲೇನೂ ಫಳ ವಿಲ್ಲಯ್ಯ.

ಅಂಗದೊಳಗಿಪ್ಪುದು ಲಿಂಗವಲ್ಲ. ಅಂಗದ ಹೊರಗಿಪ್ಪುದು ಲಿಂಗವಲ್ಲ. ಎಲ್ಲಿ ಲಿಂಗವನೊಳಕೊಂಡಿಪ್ಪ ಲಿಂಗ ಹೋಗುತ್ತ ಬರುತ್ತ ಇಪ್ಪುದಲ್ಲಿ ಚಲನೆಯಿಲ್ಲದ ಅಚಲವಪ್ಪ ಲಿಂಗಕ್ಕೆ ಹೋಯಿತ್ತು ಸಾಯಿತ್ತೆಂಬ ಸಂದೇಹವಿಲ್ಲವೆಂದನಂಬಿಗರಚೌಡಯ್ಯ '' ಈ ಮೇಲಿನ ವಚನಗಳು ಸಹ ಮೇಲಿನ ಅಭಿಪ್ರಾಯಗಳನ್ನೇ ಸೂಚಿಸುವವು. ಲಿಂಗದ ನೆಲೆಕಲೆಗಳೆಂದರೆ ಸಾಮಾನ್ಯ ವಿಷಯವಿಲ್ಲ. ಸರ್ವವನ್ನೂ ಒಳಗೊಂಡ ಲಿಂಗವು ಎಲ್ಲಿಗೆ ಹೋಗಬೇಕು? ಎಲ್ಲಿ ಬೀಳಬೇಕು? ಹೇಗೆ ಕಳೆಯಬೇಕು? ಹೇಗೆ ನಾಶವಾಗಬೇಕು? ಇದಾವುದೂ ಶಕ್ಯವಿಲ್ಲ. ಆದರೆ ಅಂಥ ಲಿಂಗದ ಗುರುತು ಕುರುಹು ಚಿನ್ಹೆಯಾದ ಇಷ್ಟಲಿಂಗವು ಶಿಲೆಯಿಂದ ರಚಿತವಾದದ್ದು ಹೋದರೆ ಕಳೆದರೆ ನಾಶವಾದರೆ ಸಾಯುವದು ಎಂಥ ಹುಚ್ಚತನ ವಿಚಾರಿಸಿರಿ. ಅದರ ಸಹಾಯದಿಂದ ಮಹಾಲಿಂಗವನ್ನು ಅರಿಯುವದಕ್ಕೆ ಮಾತ್ರ ಬರುವರು ಅದು ಕಳೆದರೆ ಹೊಸದೊಂದು ಲಿಂಗವನ್ನು ತಕ್ಕೊಂಡು ಸಾಧನ ಮಾಡಬೇಕೇ ಹೊರತು ಸಾಯಬಾರದು- ಸತ್ತರೆ ಇದೊಂದು ಹಿರಿದಾದ ಮೂಢ ನಂಬಿಗೆ ಹೊರತು ಮತ್ತೇನು? ವಿಚಾರಿಸಿರಿ.

ಪ್ರೀತಿಯ ವಸ್ತು ಹೋದರೆ ಮನುಷ್ಯನಿಗೆ ದುಃಖವಾಗುವದು ಸಹಜವದೆ. ಆದರೆ ಅದಕ್ಕೂ ಹೆಚ್ಚಿನ ವಸ್ತು ಸಿಕ್ಕರೆ ದುಃಖಕ್ಕೆ ಆಸ್ಪದವಿಲ್ಲ. ವಸ್ತುಗಳಲ್ಲಿ ಇಟ್ಟ ಪ್ರೀತಿಯಾದರೂ ಶಾಶ್ವತವಲ್ಲ. ಯಾಕಂದರೆ ಇಂದು ಇರುತ್ತವೆ. ನಾಳೆ ಹೋಗುತ್ತವೆ. ಹಳೆವು ಆಗುತ್ತವೆ. ಅಗ್ನಿಗೆ ಆಹುತಿಯಾಗುತ್ತವೆ. ಇಂಥ ನಾಶವಾಗುವ ವಸ್ತುವಿನ ಸಲುವಾಗಿ ಚಿಂತಿಸುವ ಕಾರಣವಿಲ್ಲ. ಅದರಂತೆ ಶಿಲೆಯಿಂದ ಮಾಡಿದ ಇಷ್ಟಲಿಂಗವು ಕೂಡ ನಾಶವಾಗತಕ್ಕದ್ದೇ ಇರುವದು. ಈ ಲಿಂಗದ ಮೇಲಿನ ಪ್ರೀತಿಯು ಭಕ್ತಿ ಎನಿಸುವದಿಲ್ಲ. ಯಾಕಂದರೆ ಅದು ನಾಶವಾಗತಕ್ಕದ್ದೇ ಇರುವದು. ನಾಶರಹಿತ ವಸ್ತುವಿನ ಮೇಲಿನ ಪ್ರೀತಿಯೇ ನಿಜವಾದ ಪ್ರೀತಿ ಹಾಗೂ ಭಕ್ತಿಗಳೆನಿಸುವವು. ಅಂಥ ಪ್ರೀತಿ ಭಕ್ತಿಗಳನ್ನು ಗಳಿಸುವದಕ್ಕೆ ಇಷ್ಟಲಿಂಗ ಮಾತ್ರ ಒಂದು ಸಾಧನವಾಗಿದೆ. ಆದರೆ ಅದೇ ಸಾಧ್ಯವಲ್ಲ. ಅದಕ್ಕೆ ಅದು ನಾಶವಾದರೆ ಸಾಯುವ ಕಾರಣವೂ ಇಲ್ಲ. ಹೊರಗಿನ ಇಷ್ಟಲಿಂಗವೇ ಒಳಗಿನ ಪ್ರಾಣಲಿಂಗವಲ್ಲ. ಅದಕ್ಕೂ ಇದಕ್ಕೂ ನಿಜನಾದ ಸಂಬಂಧವಿದ್ದರೆ ಹಾಗೇ ಪ್ರೀತಿಯ ಬಂಧನವಿದ್ದರೆ ಇಷ್ಟಲಿಂಗ ನಾಶವಾದರೆ ಪ್ರಾಣವು

ತನ್ನಿಂದ ತಾನೇ ಹೋದರೆ ಅಡ್ಡಿ ಇಲ್ಲ. ಆದರೆ ಅಗ್ನಿ ಜಲ ಸಮಾಧಿ ಹಗ್ಗ ವಿಷ ಮೊದಲಾದವುಗಳ ಸಹಾಯದಿಂದ ಪ್ರಾಣವನ್ನು ಕಳೆಕೊಂಡರೆ ಇಷ್ಟಲಿಂಗದ ಮೇಲಿನ ಪ್ರೀತಿಯು ನಿಜವಾದುದಲ್ಲ. ಯಾವ ಬಾಹ್ಯ ಉಪಾಯವಿಲ್ಲದೆ ರೋಗರುಜೆಗಳಿಲ್ಲದೆ, ಸಹಜ ಹೇಳಿಕೇಳಿ ಪ್ರಾಣಬಿಟ್ಟರೆ ಅವನು ಜೀವನ್ಮುಕ್ತಿಯ ಸ್ಥಿತಿಗೆ ಬಂದಿರುವನು. ಆಗ ಈ ಪ್ರಕಾರ ಜೀವಹೋದರೆ ಬಹು ಉತ್ತಮ ಸ್ಥಿತಿ ಎನಿಸುವದು. ಇದನ್ನು ಬಿಟ್ಟು ಬಾಹ್ಯ ಉಪಾಯಗಳಿಂದ ಪ್ರಾಣವನ್ನು ಕಳೆಕೊಳ್ಳಲಿಕ್ಕೆ ಎಲ್ಲರಿಗೂ ಬರುವದು. ಇದೇನು ಪರಭಕ್ತಿಯೂ ಅಲ್ಲ ದಿವ್ಯ ಪ್ರೀತಿಯೂ ಅಲ್ಲ. ಹುಚ್ಚರಂತೆ ಸ್ಥಿತಿಯು ಬದಲಾದ ಇಷ್ಟಲಿಂಗ ಹೋದ ನೆವದಿಂದ ವ್ಯರ್ಥ ಜೀವಕೊಡುವದು ಎಷ್ಟು ಮಾತ್ರಕ್ಕೂ ಸರಿಯಾದುದಲ್ಲ. ಇದರಿಂದ ಮುಕ್ತಿ ಸಿಗುವದಿಲ್ಲ. ಇಂಥ ಭ್ರಮೆಯಿಂದ ಧರ್ಮವು ಹೀನಾವಸ್ಥೆಗೆ ಇಳಿಯುವದರಲ್ಲಿ ಸಂದೇಹವಿಲ್ಲ. ಆದಕ್ಕಾಗಿಯೇ ವಿಚಾರವಿಲ್ಲದ ಭಕ್ತಿ ವಿನಾಶಕ್ಕೆ ಕಾರಣವಾಗುವದೆಂದು ಆದ್ಯರು ಹೇಳಿದ್ದು ಒಳಿತಾಗಿರುವದು. ಹುಚ್ಚ ಪ್ರೀತಿ ಹುಚ್ಚ ಭಕ್ತಿ ಹುಚ್ಚ ನಂಬಿಗೆಗಳೆಲ್ಲ ನಿರುಪಯೋಗಿ ಇಂಥ ಮೂಢನಂಬಿಗೆಗಳನ್ನು ಖಡಾಖಡಿ ಖಂಡಿಸಲೇಬೇಕು. ಅಂದರೆ ಜನರಲ್ಲಿ ನಿಜವಾದ ಧರ್ಮಜ್ಞಾನ ಬರುವದು.

ದೇವರಿಗಾಗಿ ಸಿದ್ಧರಾಮನು ಭೀಮೆಯ ಕೊಳ್ಳದಲ್ಲಿ ಹಾರಿ ಮಲ್ಲಿಕಾರ್ಜುನನ್ನು ಪ್ರತ್ಯಕ್ಷ ಕಂಡನೆಂದು ಬಗೆದು ಎಷ್ಟೋ ಮೂಢ ನಂಬಿಗೆಯ ಮೂಢಭಕ್ತರು ಸತ್ತು ಪ್ರಾಣವನ್ನು ಕೊಟ್ಟಿದ್ದಾರೆ. ಅವರ ಎಲುಬಿನ ಒಂದು ಚೂರು ಸಹ ಅವರ ಮನೆಯವರಿಗೆ ಸಿಕ್ಕಿಲ್ಲ. ಹೀಗಾದರೆ ದೇವರು ಬೆಟ್ಟಿಯಾಗುವದಿಲ್ಲ. ಇಂಥ ಮೂಢನಂಬಿಗೆಗಳನ್ನು ಮಾಡಿದರೆ ಸುಖವಾಗುವದಿಲ್ಲ. ಪ್ರಾಣಕೊಡಬೇಕೆಂಬ ವಿಚಾರವು ತನ್ನಲ್ಲಿ ನಿಜವಾದ ಭಕ್ತಿ ಪ್ರೀತಿಗಳ ಶಕ್ತಿ ಪರಿಪೂರ್ಣ ಪಕ್ವವಾದರೂ ಯಾವ ಮುಂದಿನ ಆಗುಹೋಗು (ಮುಕ್ತಿ ಸಿದ್ಧಿ ದರ್ಶನ) ಗಳ ವಿಚಾರವೂ ಕೂಡ ಇಲ್ಲದೆ ಶಿರೆಕುಡುಕನು ಕೂಡಿದಾಗ ವ್ಯವಹರಿಸುವಂತೆ ವ್ಯವಹರಿಸಿ ಪ್ರಾಣಕಳೆಕೊಳ್ಳಲಿಕ್ಕೆ ಸಿದ್ಧನಾಗುವನು. ಈ ಪ್ರಕಾರ ಅವನು ಸಿದ್ಧನಾದದ್ದು ಕೂಡ ಅವನಿಗೆ ಸಹ ಗೊತ್ತಾಗುವದೇ ಇಲ್ಲ. ಏನು ಮಾಡುವೆನೆಂಬ ಕಲ್ಪನೆಯೂ ಕೂಡ ಇದ್ದರೆ ಆದೇ ಪ್ರಾಣಹಿಂಸೆಯಾಗುವದು. ಆದಕ್ಕೆ ನಿಜಭಕ್ತನ ಕಲ್ಪನೆಯೂ ಅತೀತನಾಗಿ ಪ್ರಾಣ ಕೊಡಲಿಕ್ಕೆ ಪ್ರವೃತ್ತನಾಗುವನು. ಇದರಿಂದಲೇ ಸಿದ್ಧಿಗಳಾ

ಗಲಿ ದರ್ಶನವಾಗಲಿ ಆಗುವದು ಶಕ್ಯವಿರುವದು. ಇಂಥ ಸ್ಥಿತಿ ಬರುವತನಕ ಹುಚ್ಚನಂತೆ ಮಾಡದೆ ಸಾವಧಾನದಿಂದ ಸಾಧನ ಮಾಡುತ್ತ ಸಾಗಬೇಕು. ಯಾವದಕ್ಕೂ ಹಡಬಡಿ ಮಾಡಬಾರದು. ಜನರು ಇಂಥ ಮೂಢ ವಿಚಾರಗಳನ್ನೂ ಮೂಢಾಚಾರಗಳನ್ನೂ ಅವಶ್ಯಬಿಡಬೇಕು. ಧರ್ಮ ದೇವರು ಇವರ ಹೆಸರಿನಿಂದ ಮೂಢಕೃತಿಗಳಾಗುವದು. ಈಗಿನ ಸುಧಾರಿಸಿದ ಇಪ್ಪತ್ತನೇ ಶತಮಾನದಲ್ಲಿ ಬಲು ಹೇಯವಾದುದಾಗದೆ ಭಕ್ತಿ ಪ್ರೀತಿಗಳಲ್ಲಿ ಒಬ್ಬರನ್ನು ನೋಡಿ ಮತ್ತೊಬ್ಬರು ಅನುಕರಣ ಮಾಡಿದರೆ ನಡೆಯುವದಿಲ್ಲ. ಅಂತರಂಗದಲ್ಲಿ ಆ ಪ್ರಕಾರ ತಾನಾಗಿಯೇ ಭಕ್ತಿ ಪ್ರೀತಿಗಳು ಜನಿಸಬೇಕು. ಅನ್ಯರನ್ನು ನೋಡಿ ಮಾಡಲಿಕ್ಕೆ ಹೋದರೆ ಸರ್ವ ಸತ್ಯಾನಾಶವಾಗಿ ಹೋಗುವದು. ಮನಸ್ಸಿನಲ್ಲಿ ಆ ಶಕ್ತಿ ತಾನಾಗಿಯೇ ಹುಟ್ಟಬೇಕು. ಅಂದರೆ ಒಳ್ಳೇ ಫಲದಾಯಕವಾಗುವದರಲ್ಲಿ ಸಂದೇಹವಿಲ್ಲ.

# ಎನ್ನ ಬಯಕೆ

(ಬರೆದವರು:— ಶ್ರೀ ಶಿವಾನಂದ ಸ್ವಾಮಿಗಳು ಗವಿಮಠ, ತೆಗ್ಗಿಹಳ್ಳಿ.)

ನನ್ನ ನಾಡಿನ ಕಾಡ ವನದಲಿ ।
ಘನ್ನ ಹೊಳೆಯಾ ಧಡದಲಿ ॥
ಚನ್ನ ಮಾಮರ ತಂಪು ನೆಳಲಲಿ ।
ನನ್ನ ಗುಡಿಸಲು ಮೆರೆಯಲಿ ॥೧॥

ಮೆರೆವ ಬಸವನ ಚಿತ್ರವಿದು ।
ಸರಸ ಕಾವಿಯ ನಿಶಾನೆಯು ।
ಮರದ ಗುಂಪಿನೊಳಿದ್ದು ಕಾಣುತ ।
ಇರದೆ ಹಾರುತ ಮರೆಯಲಿ ॥ ೨ ॥

ಹಾಲು ಕರೆಯುವ ಆಡು ವೆರಡನು ।
ಲೀಲೆಯಿಂದಲಿ ಬರಿಸಲಿ ॥
ಸಾಲು ಮಲ್ಲಿಗೆ ಇತರ ಹೂವಿನ ।
ಮೇಲು ಗಿಡಗಳು ಬೆಳೆಯಲಿ ॥ ೩ ॥

ವೇದ ವೇದಾಂತವನು ಬೆರತಾ ।
ಓದು ಬುಕ್ಕುಗಳಾಗಲಿ ॥
ಬೋಧ ಕೊಡುತ ಕವನ ಲೇಖನ ।
ಮೋದದಿಂ ನಾ ಬರೆಯಲಿ ॥ ೪ ॥

ದಣಿದ ಕಾಲದಿ ಹಕ್ಕಿಗಾನವು ।
ತಣಿಸಲೆನ್ನನು ಮುದದಲಿ ॥
ಕುಣಿವ ನವಲಿನ ನೃತ್ಯವದು ।
ಉಣಿಸಲೆನ್ನಯ ನೋಟವ ॥೫॥

ತಂಪು ಗಾಳಿಯು ಚಿಂತೆ ಕಳೆಯುತ |
ಪೆಂಪು ಮನಸ್ಸಿಗೆ ಬೀರಲಿ |
ಕೊಂಪಿ ವಾಧ್ಯದಿ ಗಾನವು ||
ಝುಂಪು ಸವಿಯಲು ಹಚ್ಚಲಿ || ೬ ||

ಇಚ್ಛೆ ಅರಿಯುತ ಮುದದಿ ನಡೆಯುವ |
ಉಚ್ಚ ಭಾವನೆ ಇರಿಸಿದ |
ಮೆಚ್ಚು ತೋರುವ ದೇಶ ಸೇವೆಗೆ |
ಕೆಚ್ಚೆದೆಯ ಶಿಷ್ಯರಾಗಲಿ || ೭ ||

ಅಕ್ಕ ಬಸವ ಗಾಂಧಿಯಂಥ |
ಜಾತ ಶಿಷ್ಯರು ಆಗಲಿ ||
ರೀತಿ ನೀತಿಯ ನರಿತು ದೇಶ |
ಸೇವೆಮಾಡುತ ಮೆರೆಯಲಿ || ೮ ||

ಮುದ್ದು ಶಿಷ್ಯರು ಅರಳಿ ಹಿಂಜುತ |
ಶುದ್ಧಿ ಹಂಜಿಯು ಮಾಡಲಿ ||
ಉದ್ಧರಿಸುವೀ ರಾಟಿಯನಾ !
ಶುದ್ಧ ಮನದಿಂ ತಿರುವಲಿ || ೯ ||

ಭಾರತಾಂಬೆಯ ಸೇವೆಮಾಡಲು |
ಊರು ತೀರ್ಥ ಕ್ಷೇತ್ರಕೆ ||
ಕೋರಿ ಹೋಗಲು ಕಾಲು ಬಂಡಿಯ !
ಮೇಲು ಮೋಟಾರಾಗಲಿ || ೧೦ ||

ಮಾಸ ಪತ್ರಿಕೆ ವೃತ್ತ ಪತ್ರಿಕೆ |
ಆಶೆಯಿಂದಲಿ ಛಾಪಿಸ ||
ದೇಶಿಯಂತ್ರದಿ ನನ್ನ ಗುಡಿಸಲು |
ತೋಷದಿಂದಲಿ ಮೆರೆಯಲಿ || ೧೧ ||

ಧರ್ಮಕಾರಣ ರಾಜ್ಯಕಾರಣ ।
ಮರ್ಮ ತಿಳಿಸುತ ದೇಶದ ॥
ಕರ್ಮ ಮಾಡುವ ತಾಣವೆನ್ನುತ ।
ಸರ್ವರಿದನತಿ ಹರಿಸಲಿ ॥ ೧೨ ॥

ಖಾದಿ ಖಾದಿಯೆ ಶುದ್ಧ ಖಾದಿಯೆ ।
ಪಾದ ತಲೆಗಳು ಮುಚ್ಚಲಿ ॥
ಸಾಧು ಗುಣದಿಂ ಕರ್ಮ ಯೋಗಿಯು ।
ಆದನೆನ್ನುತ ಹರಿಸಲಿ ॥ ೧೩ ॥

ಸತ್ಯ ಅಹಿಂಸೆ ಇಂದೆ ನಾನಡೆ ।
ದಿತ್ತ ಕಡೆಗೂ ಬೀರಲಿ ॥
ಮತ್ತೆ ಮೃಗಖಗ ವೈರನಳಿದಿರ ।
ಲಿತ್ತ ಆಶ್ರಮದೆಡೆಯಲಿ ॥ ೧೪ ॥

ಭೀತಿ ಇಲ್ಲದೆ ಸೇವೆ ಮಾಡುವ ।
ಜಾತ ಸತ್ಯಾಗ್ರಹಿಗಳು ॥
ನೀತಿ ಅರಿಯುವ ಜಾತ ಇರದ ।
ಶಾಂತ ಆಶ್ರಮವಾಗಲಿ ॥ ೧೫ ॥

# ಶಿವಶರಣರ ಯುದ್ಧಭೂಮಿ !

## ಅಥವಾ

## ಉಳಿವಿಯ ಸೆರಗು !!

(ಲೇಖಕ:- ವ್ಹಿ. ಜಿ. ಪಾಟೀಲ. ರಿ. ಅ. ಡೆ. ಎ. ಇನ್ಸಪೆಕ್ಟರ ಬೆಳಗಾಂವ)



ಮಹಾಶಿವಶರಣರಾದ ಹರಳಯ್ಯ (ಮಾದಿಗ) ಮಧುವಯ್ಯ (ಬ್ರಾಹ್ಮಣ) ಇವರು ತಮ್ಮ ತಮ್ಮೊಳಗೆ ನಂಟುತನ ಬಳಸಿದರು. ಅದರಿಂದ ಇವರೀರ್ವರೂ ಅಪರಾಧಿಗಳೆಂದು ಬಿಜ್ಜಳ ಭೂಪಾಲಕನು ಆಕ್ಷೇಪವನ್ನೆತ್ತಿದನು. "ಇದು ಅಪರಾಧವಲ್ಲ. ಆದರಿಂದ ಅವರು ಅಪರಾಧಿಗಳಲ್ಲ." ಎಂದು ಬಸವೇಶ್ವರನು ಬಿಜ್ಜಳನಿಗೆ ಸಪ್ರಮಾಣವಾಗಿ ತೋರಿಸಿಕೊಟ್ಟನು. ಇವನ ಉಪದೇಶವು ಬಿಜ್ಜಳನಿಗೆ ಡಬ್ಬುಗೊಡದ ಮೇಲೆ ನೀರು ಸುರುವಿದಂತಾಯಿತು. ಸನಾತನಾಭಿಮಾನಿಯಾದ ಬಿಜ್ಜಳನು ಇದು ಅಕ್ಷಮ್ಯ ಅಪರಾಧವೆಂದೂ ಅಪರಾಧಿಗಳಿಗೆ ಉಗ್ರಶಾಸನವಾಗಲೇಬೇಕೆಂದೂ ಹಾಗೆ ಮಾಡುವದು ನನ್ನ ಕರ್ತವ್ಯವೆಂದೂ ಘೋಷಿಸಿದನು. ಇದರಿಂದ ಬಸವೇಶ್ವರ ವ್ಯಕ್ತಿತ್ವಕ್ಕೂ, ಮಂತ್ರಿ ಪದಕ್ಕೂ ಕುಂದಕ ಉಂಟಾಯಿತು ಮತ್ತು ಮಹಾಶಿವಶರಣರ ಅಮಾನುಷ ಕೊಲೆಯ ಹೃದಯದ್ರಾವಕ ದೃಶ್ಯವನ್ನು ತಾನು ನೋಡಬೇಕಾಗುವ, ಭವಿಷ್ಯತ್ಕಾಲದ ಅಶುಭ ಚಿನ್ಹಗಳು ಅಂದೇ ಅವನ ಕಂಣು ಮುಂದೆ ಕಟ್ಟಿದಂತಾದವು. ಆದಕಾರಣ ಆ ಸ್ವಾಭಿಮಾನಿಯು. ಅರ್ಥವಿಲ್ಲದ ಮಂತ್ರಿಪದವನ್ನು ಬಿಸಾಟ, ಅಜ್ಞಾನಿಯಾದ ಅರಸನೊಡನೆ "ಅಸಹಕಾರವನ್ನು ಪ್ರಕಟಿಸಿ, ಏಕಾಂಗಿಯಾಗಿ ಸಂಗಮಕ್ಷೇತ್ರಕ್ಕೆ ಹೋಗಿ ಆತ್ಮಾರ್ಪಣ ಮಾಡಿದನು. ಇದರಿಂದ ವಿಚಾರಿಸಿದರೆ ಮಹಾತ್ಮಾ ಗಾಂಧೀಜಿಯವರ (೧) ಅಸಹಕಾರ (೨) ಸತ್ಯಾಗ್ರಹ (೩) ಆತ್ಮಾರ್ಪಣೆಗಳಿಗೆ ಬಸವೇಶ್ವರನೇ ಉಗಮಸ್ಥಾನನಾಗಿದ್ದನೆಂದು ಹೇಳಬಹುದಾಗಿದೆ.

ಮುಂದೆ ತುಸು ದಿವಸಗಳಲ್ಲಿಯೇ ಬಿಜ್ಜಳನು ತನ್ನ ಆಜ್ಞೆಯಂತೆ ಈ ಈರ್ವ ಶಿವಶರಣರನ್ನು ಆನೆಯ ಕಾಲಿಗೆ ಕಟ್ಟಿ ಎಳೆಯಿಸಿ ಅಮಾನುಷ ರೀತಿಯಿಂದ ಕೊಲ್ಲಿಸಿದನು. ಬಸವೇಶ್ವರನ ಅಧಿಕಾರತ್ಯಾಗ ಆತ್ಮಾರ್ಪಣೆಗಳಿಂದಲೂ ಈ ಈರ್ವರ ಅಲೌಕಿಕ ಕೊಲೆಯಿಂದಲೂ ಕಲ್ಯಾಣದ ಬಹು

ಜನ ಸಮಾಜವಾದ ವೀರಶೈವರ ಹೃದಯಕ್ಕೆ ಬರೆ ಕೊಟ್ಟಂತಾಯಿತು. ಇವು ಗಳಿಂದಲೇ ಕಲ್ಯಾಣದ ಧರ್ಮಕ್ರಾಂತಿಯು ರಾಜ್ಯಕ್ರಾಂತಿಯ ಕರಾಳ ಸ್ವರೂಪವನ್ನು ಧಾರಣಮಾಡಿ ಇದರಿಂದ ಕಲಚೂರ್ಯ (ಬಿಜ್ಜಳನ) ರಾಜಶಕ್ತಿಯು ನಾಶವಾಯಿತಲ್ಲದೆ, ವೀರಶೈವ ಸಂಸ್ಕೃತಿಯು ಹಂವಿ ಒಡೆದು ಹಂಚಾದಂತಾಯಿತು. ಕಾಲಗತಿಯು ವಿಚಿತ್ರವಾದದ್ದು!

ಇನ್ನು ಈ ಧರ್ಮಕ್ರಾಂತಿಯು ರಾಜಕ್ರಾಂತಿಯಾಗಿ ಹೇಗೆ ರೂಪಾಂತರ ಹೊಂದಿತೆಂಬುದನ್ನು ವಿಚಾರಿಸುವಾ —

ಕಲ್ಯಾಣದಲ್ಲಿ ಸೋಮವ್ವೆ ಎಂಬ ವೀರಶಿವಶರಣೆ ಇದ್ದಳು. ಆಕೆಗೆ ಜಗದೇವ-ಮಲ್ಲಿಬೊಮ್ಮ ಎಂಬ ಇಬ್ಬರು ಗಂಡುಮಕ್ಕಳಿದ್ದು ಅವರು ಬಿಜ್ಜಳನ ಊಳಿಗದಲ್ಲಿದ್ದರು. ಈ ಈರ್ವ ಸಹೋದರರು ಹರಳಯ್ಯ ಮಧುವಯ್ಯಗಳ ಅಮಾನುಷ ಕೊಲೆಯನ್ನು ಕಣ್ಣುಟ್ಟಿ ನೋಡಿ ಬಂದು ಆ ಹೃದಯ ವಿದಾರಣ ಸಂಗತಿಯನ್ನು ತಾಯಿಗೆ ಅರುಹಿದರು. ಇದನ್ನು ಕೇಳಿ ತಾಯಿಯು ಮಕ್ಕಳಿಗೆ ಹೀಗೆ ಅಂದಳು.—

"ಮಕ್ಕಳೇ ನೀವು ವೀರಶೈವರಾಗಿದ್ದೀರಿ. ವೀರಶೈವ ಗಣಾಚಾರದಂತೆ ಶಿವಶರಣರ ಕೊಲೆ ಮಾಡಿದವನಿಗೆ ಯೋಗ್ಯ ಶಾಸನ ಮಾಡಬೇಕಾಗಿತ್ತು. ನೀವು ಹಾಗೇ ಬಂದದ್ದು ನೋಡಿ ನನಗೆ ಬಹಳ ಕೆಡಕೆನಿಸುತ್ತದೆ". ಅಂದಳು. ಇದನ್ನು ಕೇಳಿ ಅವರೀರ್ವರು ತಮ್ಮಿಂದಾದ ತಪ್ಪಿಗೆ ತಾಯಿಯ ಕ್ಷಮೆಯನ್ನು ಬೇಡಿಕೊಂಡರು. ಹಾಗು ಬಿಜ್ಜಳನಿಗೆ ಯೋಗ್ಯ ಶಾಸನ ಮಾಡುವೆವೆಂದು ಪ್ರತಿಜ್ಞೆ ಮಾಡಿ ಆಕೆಯ ಆಶೀರ್ವಾದವನ್ನು ಪಡಕೊಂಡರು ಮತ್ತು ಹಾಗೆಯೇ ಅವರು ಚೆನ್ನಬಸವಣ್ಣನವರನ್ನು ಸಂದರ್ಶಿಸಿ ಈ ಸಂಗತಿಯನ್ನು ನಿವೇದಿಸಿದರು. ತಮ್ಮ ಇಚ್ಛೆಯ ಪ್ರಕಾರ ಎಲ್ಲ ಶಿವಶರಣರಿಗೂ ಆತ್ಮರಕ್ಷಣೆ ಮಾರ್ಗವನ್ನು ಕಲ್ಪಿಸಿ ಕೊಡಬೇಕೆಂದು ಪ್ರಾರ್ಥಿಸಿಕೊಂಡರು. ವೀರಭದ್ರನ ಅವತಾರಿಯಾದ ಮಡಿವಾಳ ಮಾಚಿದೇವರಿಗೆ ವಂದಿಸಿ, ಅವರ ಕೈಯೊಳಗಿನ ವಿಜಯ ಖಡ್ಗವಾದ ಜವುದಂಡಿಯನ್ನೂ ವಿಭೂತಿಯನ್ನೂ ಪಡಕೊಂಡು ಹೊರಟುಹೋದರು.

ಮುಂದೆ ಚೆನ್ನಬಸವಣ್ಣನವರು ಕೆಲವು ಶಿವಶರಣರಲ್ಲಿಗೆ ತಾವೇ ಹೋಗಿ ಈ ಸಂಗತಿಯನ್ನ ತಿಳಿಸಿದರು. ಉಳಿದವರಿಗೆ ಪಡಿಹಾರಿ ಉತ್ತಣ್ಣನಿಂದ ತಿಳಿಸಹಚ್ಚಿದರು. ಈ ಸುದ್ದಿ ಬೀರುವಿಕೆಯಿಂದ ಕೆಲವು ಶಿವಶರಣರು ತಮ್ಮ ಆತ್ಮರಕ್ಷಣೆಗಾಗಿ ತಮ ತಮಗೆ ಸರಿದೋರಿದತ್ತ ತೆರಳಿದರು.

ಕೆಲವು ಘಟ್ಟಿಗರು ಅಲ್ಲಿಯೇ ಉಳಿಯಲು ನಿಶ್ಚಯಿಸಿದರು. ಶ್ರೀ ಅಲ್ಲಮ ಪ್ರಭುಗಳೂ ಸಿದ್ಧರಾಮಯ್ಯನವರೂ ಇನ್ನೂ ಕೆಲವು ಶಿವಶರಣರೊಂದಿಗೆ ಶ್ರೀಶೈಲದ ಕಡೆಗೆ ತೆರಳಿದರು. ೧೨೦೦ ಷಟ್ಸ್ಥಲ ಬ್ರಹ್ಮಿಗಳೂ ೭೭೦ ಅಮರಗಣಂಗಳೂ ಚೆನ್ನಬಸವ ಕಕ್ಕಯ್ಯ ಬಂಕಯ್ಯ, ಕಲಿದೇವರು ರೇಚಯ್ಯ ಶೂಲದಬ್ರಹ್ಮಯ್ಯ ಕಿನ್ನರಿಬ್ರಹ್ಮಯ್ಯ ನುಲಿಯ ಚಂದಯ್ಯ ಅಕ್ಕನಾಗಮ್ಮ ಗಂಗಾಂಬಿಕಾ ಕಲ್ಯಾಣಮ್ಮ (ಹರಳಯ್ಯನ ಹೆಂಡತಿ) ರುದ್ರಮುನಿ ಅವರ ಶಿಷ್ಯ ದಿಗಂಬರ ಮುನಿ ಕೂಗಿನ ಮಾರಯ್ಯ ಮೊದಲಾದವರು ಮಡಿವಾಳ ಮಾಚಿದೇವರ ನೇತ್ರತ್ವದ ಕೆಳಗೆ ಉಳವಿಗೆ ಹೋಗಲು ಹೊರಟರು. ಇವರು ಕಲ್ಯಾಣದಿಂದ ಕಲಬುರ್ಗೆಗೂ ಕಲಬುರ್ಗೆಯಿಂದ ತೊರಗಲ್ಲಿಗೂ (ಬೆಳಗಾಂವ ಜಿಲ್ಹೆ ರಾಮದುರ್ಗ ತಾಲೂಕ) ಬಂದರು. ಅತ್ತ ಕಲ್ಯಾಣದಲ್ಲಿ ಜಗದ್ದೇವ-ಮಲ್ಲಿಬೊಮ್ಮಣ್ಣರು ತಾವು ಗೊತ್ತು ಮಾಡಿದಂತೆ ಶಾ. ಶ. ೧೦೯೦ ನೆಯ ರಾಕ್ಷಸನಾಮ ಸಂವತ್ಸರ ಕಾರ್ತಿಕ ಶುದ್ಧ ೧೫ ಮಂಗಳವಾರ ಸೂರ್ಯಾಸ್ತದ ನಂತರ ೧೮ ಘಳಿಗೆಗೆ ಬಿಜ್ಜಳನನ್ನು ವಧಿಸಿದರು. ಇದರಿಂದ ಕಲ್ಯಾಣದಲ್ಲಿ ಹಾ! ಹಾ!! ಕಾರ ಉಂಟಾಯಿತು. ಆಗ ಬಿಜ್ಜಳನ ಸೈನ್ಯವು ಒಂದೂಕಾಲು ಲಕ್ಷವಿದ್ದಂತೆ ತಿಳಿಯುತ್ತದೆ. ಮುಂದೆ ಅಳಿಯ ಬಿಜ್ಜಳನು ಸೈನ್ಯಸಹಿತ ಹೊಂಟನು. ಹಾಗು ಶಿವಶರಣರು ತೊರಗಲ್ಲಿಗೆ ಮುಟ್ಟಿದಾಗ ಇವನು ಅವರ ಮೇಲೆ ಬಿದ್ದನು. ಆಮೇಲೆ ತೊರೆಗಲ್ಲನಿಂದ ಉಳವಿಯ ವರೆಗೆ ಶಿವಶರಣರಿಗೂ, ಅಳಿಯ ಬಿಜ್ಜಳನಿಗೂ ಅನೇಕ ಸ್ಥಳಗಳಲ್ಲಿ ಯುದ್ಧಗಳಾದವು. ಇವುಗಳಲ್ಲಿ ಶಿವಶರಣರು ಸರಂಕ್ಷಣಾವ್ಯೂಹವನ್ನು ರಚಿಸಿಕೊಂಡು ತಮ್ಮ ಮೇಲೆ ಏರಿಬರುವ ವೈರಿಯನ್ನು ಹಿಂದಕ್ಕೆ ಅಟ್ಟುತ್ತ ಮುಂದಕ್ಕೆ ಮಾರ್ಗಕ್ರಮಣ ಮಾಡಿದ್ದಾರೆ. ಇದು ಸುಮಾರು ೧೨೫ ಮೈಲು ಉದ್ದ ೨೦-೨೪ ಮೈಲು ಅಗಲು ಆಗುವದು. ಇದು ಶಿವಶರಣರ ಪವಿತ್ರ ಪಾದ ಸ್ಪರ್ಶದಿಂದಲೂ ಅವರ ರಕ್ತಸಿಂಚನೆಯಿಂದಲೂ ಪವಿತ್ರಕ್ಷೇತ್ರವಾಗಿ ಪರಿಣಮಿಸಿದೆ. ಅಂತೆಯೇ ಈ ಪ್ರದೇಶದ ಜನರು ಇದನ್ನು "ಉಳವಿಯಸೆರಗು" ಎಂದು ಕರೆಯುತ್ತಾರೆ, ಅದರಿಂದ ನಾವೂ ಇದನ್ನು ಇದೇ ಹೆಸರಿನಿಂದ ಕರೆದಿದ್ದೇವೆ.

ಈ ಕ್ಷೇತ್ರದಲ್ಲಿ ಶಿವಶರಣರು ಯುದ್ಧ ಮಾಡಿದ ಅಥವಾ ವಸತಿ ಮಾಡಿದ ಅಥವಾ ಇತರ ಕಾರಣಗಳಿಗಾಗಿ ಸಂಚರಿಸಿದ ಊರುಗಳು ಜಿಲ್ಹೆ ಹಾಗು ತಾಲೂಕವಾರ ಕೆಳಗಿನಂತೆ ಇವೆ.

## ಬೆಳಗಾವ ಜಿಲ್ಹೆಯ ಗ್ರಾಮುಗಳು.

(೧) **ಗೊಡಚಿ** (ತಾಲೂಕ ರಾಮದುರ್ಗ):— ಇಲ್ಲಿ ಈಗ ಶ್ರೀ ವೀರಭದ್ರದೇವರ ಗುಡಿಯೂ ಅದರ ಎದುರಿಗೆ (ಹಳ್ಳದಾಚೆಯ ದಂಡೆಯಲ್ಲಿ) ದಿಗಂಬರ ಮುಕ್ತಿಮುನಿಯ ಗದ್ದುಗೆಯೂ (ಸಮಾಧಿ?) ಉಂಟು. ಇಲ್ಲಿ ಪ್ರತಿವರ್ಷ ಮಾರ್ಗಶೀರ್ಷ ಶುದ್ಧ ೧೫ ಕ್ಕೆ ದೊಡ್ಡ ಜಾತ್ರೆಯಾಗುತ್ತದೆ. ಇಲ್ಲಿ ಶಿವಶರಣರು ವಸತಿ ಮಾಡಿದ್ದರು. ಶಿವಶರಣರ ಸೇನಾಪತಿಯಾದ "ಮಡಿವಾಳಮಾಚಿದೇವರು, ಶಿವಪೂಜೆ ಮಾಡಿಕೊಂಡ ಪವಿತ್ರ ಸ್ಥಳದಲ್ಲಿಯೇ ಈಗಿನ ವೀರಭದ್ರದೇವರ ಸ್ಥಾಪನೆ ಆಗಿದೆ. ದಿಗಂಬರ ಮುಕ್ತಿಮುನಿಗಳು ಇವರ ಗುರುಗಳಾಗಿದ್ದರು.

(೨) **ತೊರಗಲ್ಲು** (ತಾಲೂಕ ರಾಮದುರ್ಗ):— ಇದು ಮಲಪ್ರಭಾ ನದಿಯ ಉತ್ತರ ದಂಡೆಯಲ್ಲಿ ಅದೆ. ಇಲ್ಲಿ ಶಿವಶರಣರು ಬೀಡುಬಿಟ್ಟಾಗ ಅಳಿಯ ಬಿಜ್ಜಳನ ದಂಡು ಬಂದು ಇವರಿಗೆ ಮುತ್ತಿಗೆ ಹಾಕಿತಂತೆ.

(೩) **ಮೊದಲೂರು** (ತಾ॥ ಸವದತ್ತಿ): ಶಿವಶರಣರಿಗೂ, ಅಳಿಯ ಬಿಜ್ಜಳನಿಗೂ ಎಲ್ಲಕ್ಕೂ ಮೊದಲು ಯುದ್ಧವಾದ ಊರು ಇದಾಗಿದೆ ಅದರಿಂದ ಇದಕ್ಕೆ ಈ ಹೆಸರು ಬಂದಂತೆ ತಿಳಿಯುತ್ತದೆ.

(೪) **ಜೀವಾಪುರ** (ತಾ॥ ಸವದತ್ತಿ):— ಇಲ್ಲಿಯೂ ಎರಡೂ ಬಣಗಳ ನಡುವೆ ಯುದ್ಧವಾಗಿದೆ.

(೫) ತಲ್ಲೂರ (ತಾ॥ ಸವದತ್ತಿ):— ಇಲ್ಲಿ ಶಿವಶರಣರು ಜೈನರ ತಲೆಗಳನ್ನು ಆಕಾಶಕ್ಕೆ ಹಾರಿಸಿದರೆಂಬ ಬಗ್ಗೆ ಶಾಸನಗಳಲ್ಲಿ ಉಲ್ಲೇಖವದೆ.

(೬) **ಸತ್ತಿಗೇರಿ** (ತಾ॥ ಸವದತ್ತಿ):— ಈ ಊರಿಗೆ ಶಿವಶರಣರು ಹೋಗಿದ್ದರು.

(೭) ಮುರಗೋಡ (ತಾ॥ ಸವದತ್ತಿ):— ಇಲ್ಲಿ ಶಿವಶರಣರು ವೈರಿಯ ಸೈನ್ಯವು ಮುರಿದು ದಿಕ್ಕೆಟ್ಟು ಓಡುವಂತೆ ಹೊಡೆದಟ್ಟಿದರು. ಹೀಗೆ ವೈರಿಯ ಸೈನ್ಯವು ಮುರಿಗಡೆ ಆದದ್ದರಿಂದ ಇದಕ್ಕೆ ಮುರಿಗೋಡ ಎಂಬ ಹೆಸರು ಬಂದಿತೆಂದು ಕೆಲವರು ಹೇಳುತ್ತಾರೆ. ಮುರಗೋಡದಿಂದ ಸಿದ್ಧನ ಗವಿಗೆ ಹೋಗುವ ಪೂರ್ವದಲ್ಲಿ ಕೂಗಿನ ಮಾರಯ್ಯನವರ ಸಮಾಧಿಯುಂಟು. ಇವರು ಇದೇ ಯುದ್ಧದಲ್ಲಿ ಲಿಂಗೈಕ್ಯರಾದರೋ ಹೇಗೆ? ಎಂಬುದು ವಿಚಾರಿಸತಕ್ಕ ಸಂಗತಿಯಾಗಿದೆ.

(೮) ಕೆಂಗೇರಿ (ತಾ॥ ಸವದತ್ತಿ):— ಮುರಗೋಡದ ಯುದ್ಧದಲ್ಲಿ ವಿಜಯಿಗಳಾದ ಶಿವಶರಣರು ಈ ಊರ ಸಮೀಪವಿರುವ ಕೆರೆಯಲ್ಲಿಗೆ ಬಂದು ತಮ್ಮ ರಕ್ತಮಯ ಶಸ್ತ್ರಗಳ ತೊಳೆದರು. ಅದರಿಂದ ಆ ಕೆರೆಯ ನೀರು ಕೆಂಪಾದವಂತೆ. ಅದರಿಂದ ಆ ಕೆರೆಗೆ (ಕೆಂಪಾದ+ಕೆರೆ) ಕೆಂಗೆರೆ ಎಂಬ ಹೆಸರು ಬಂದಿತೆಂದು ಹೇಳುತ್ತಾರೆ.

(೯) ಇಂಚಲ (ತಾ॥ ಸವದತ್ತಿ):— ಇಲ್ಲಿ ಬಂಕಯ್ಯ ಶರಣರ ಸಮಾಧಿಯುಂಟು.

(೧೦) ಕಾರೀಮನಿ (ತಾ॥ ಸವದತ್ತಿ):—ಇಲ್ಲಿ ಕಲಿದೇವರ ಸಮಾಧಿಯುಂಟು.

(೧೧) ಸೊಗಲ (ತಾ॥ ಸವದತ್ತಿ):—ಇಲ್ಲಿ ಮಡಿವಾಳಮಾಚಿದೇವರ ಸಮಾಧಿಯುಂಟು. ಕಾದರೊಳ್ಳಿಯಿಂದ ತಮ್ಮೂರಿಗೆ (ದೇವರಹಿಪ್ಪರಗಿಗೆ) ಹೋಗುವಾಗ ಇವರು ಲಿಂಗೈಕ್ಯರಾಗಿರಬೇಕೆಂದು ತೋರುತ್ತದೆ.

(೧೨) ಮೂಗಬಸವ (ತಾ॥ ಬೈಲಹೊಂಗಲ):— ಮುರಗೋಡದಲ್ಲಿ ವೈರಿಗಳನ್ನು ಬೆನ್ನಟ್ಟುವದರಲ್ಲಿ ಮುಂಗಡೆಯಾದ ಶಿವಶರಣರು ಇಲ್ಲಿ ಒಟ್ಟುಗೂಡಿದರೆಂದು ಹೇಳುತ್ತಾರೆ. ಇದೇ ತಾಲೂಕ ಬೆಳವಡಿ, ನೇಸರಗಿ ಲಕ್ಕುಂಡಿ ಕಾದರೊಳ್ಳಿಗಳಲ್ಲಿ ವೀರಭದ್ರನ ದೇವಾಲಯಗಳುಂಟು. ಈ ದೇವಾಲಯವಿದ್ದಲ್ಲಿ ಶಿವಶರಣರು ಸಂಚರಿಸಿದರೆಂದು ತಿಳಿಯಬಹುದೆಂದು ರಾ. ಬ. ಹಳಕಟ್ಟಿಯವರು ಹೇಳಿದ್ದಾರೆ. ಆದಕಾರಣ ಈ ಗ್ರಾಮಗಳಿಗೂ ಶಿವಶರಣರ ಪಾದಸ್ಪರ್ಶವಾಗಿದೆ ಎಂದು ಹೇಳಲು ಅಭ್ಯಂತರವಿಲ್ಲ.

(೧೩) ತಿಗಡಿ (ತಾ॥ ಬೈಲಹೊಂಗಲ):— ಇಲ್ಲಿಯ ಹಿರಿಯಮಠದ ಹೊರಬದಿಗೆ ಪೂರ್ವದಿಕ್ಕಿನಲ್ಲಿ ಹರಳಯ್ಯನವರ ಪತ್ನಿಯಾದ "ಕಲ್ಯಾಣಮ್ಮನ" ಸಮಾಧಿಯುಂಟು. ಇಂದಿಗೂ ಇದರ ಪೂಜೆಯನ್ನು ಚಲವಾದಿಗಳು ಮಾಡುತ್ತಾರೆಂದು ತಿಳಿಯುತ್ತದೆ. ಶಿವಶರಣರು ಹೋಗುವಾಗ ಇಲ್ಲಿಯ ಸ್ವಾಮಿಗಳ ಸೇವೆ ಮಾಡಿಕೊಂಡಿರಲು ಈಕೆಯನ್ನು ಇಲ್ಲಿ ಬಿಟ್ಟುಹೋದರೆಂದು ಆಖ್ಯಾಯಿಕೆ ಉಂಟು.

(೧೪) ಮುರಕೀಭಾವಿ (ತಾ॥ ಬೈಲಹೊಂಗಲ):— ಶಿವಶರಣರು ಪ್ರವಾಸಮಾಡುತ್ತ ಇಲ್ಲಿಗೆ ಬಂದಾಗ ಗಂಗಾಂಬಿಕೆಯ ಪಾಲಕೆಯ ದಂಡಿಗೆಯು ಇಲ್ಲಿ ಮುರಿಯಿತಂತೆ. ಅದರಿಂದ ಅವರು ಅದರ ಸುಧಾರಣೆಗಾಗಿ

ಇಲ್ಲಿಯ ಪಶ್ಚಿಮ ದಿಕ್ಕಿನ ಮರಡಿಯಲ್ಲಿ ತಂಗಿದರು. ಇಲ್ಲಿ ಈಗ ಗಂಗಾಂಬಿಕೆ ನಾಗಲಾಂಬಿಕೆಯರ ಎರಡು ( ಶಿಲಾ ಕೊರೆದ ) ಚಿತ್ರಗಳುಂಟು. ಈ ಮರಡಿಗೆ ಕಲ್ಯಾಣಮರಡಿ ಎಂದು ಹೆಸರು ಅದೆ. ಇದರ ಸಮೀಪದಲ್ಲಿ ಹಳ್ಳದ ದಂಡೆಗೆ ಝರಿಯಿಂದ ಕೂಡಿದ ಭಾವಿಯುಂಟು. ಅವರು ಇದರಲ್ಲಿ ಸ್ನಾನಮಾಡಿದರೆಂದು ಪ್ರತೀತಿಯಿದೆ. ಅದರಿಂದ ಇದಕ್ಕೆ ತೀರ್ಥವೆಂದು ಎಣಿಸಲ್ಪಡುತ್ತಿದೆ. ಪಾಲಕಿ ದಂಡಿಗೆ ಮುರಿದದ್ದರಿಂದಲೂ ಭಾವಿಯ ಸಮೀಪ ಬೀಡು ಬಿಟ್ಟದ್ದರಿಂದಲೂ ಈ ಊರಿಗೆ "ಮುರಕೀಭಾವಿ" ಎಂದು ಹೆಸರು ಬಿದ್ದಿದೆ ಎಂದು ವೃದ್ಧರು ಹೇಳುತ್ತಾರೆ.

(೧೫) **ಮರಡಿನಾಗಲಾಪೂರ** ( ತಾ॥ ಬೈಲಹೊಂಗಲ ):— ಈ ಊರಿಂದ ತುಸು ಅಂತರದಲ್ಲಿ ೨ ಫೂಟು ಎತ್ತರವಾದ ಅಕ್ಕನಾಗಮ್ಮನ ಶಿಲಾಮೂರ್ತಿಯುಂಟು. ಈ ಕಾರಣದಿಂದಲೇ ಈ ಊರಿಗೆ "ನಾಗಲಾಪುರ" ಎಂಬ ಹೆಸರು ಬಂದಿರಬಹುದೆಂದು ಊಹಿಸ ಬಹುದಾಗಿದೆ.

(೧೬) **ಹುಣಶೀಕಟ್ಟಿ**:— ಇಲ್ಲಿ ರುದ್ರಸ್ವಾಮಿಗಳ ಮಠ ಉಂಟು. ಈ ರುದ್ರಮುನಿಗಳು ಶಿವಶರಣರು ಕಲಾದಗಿಯ ಸಮೀಪ ಘಟಪ್ರಭಾ ನದಿಯ ಉತ್ತರದಲ್ಲಿದ್ದಾಗ ಹಿಂದಿನಿಂದ ಬಂದು ಕೂಡಿದರೆಂದು ಗೊತ್ತಾಗುತ್ತದೆ. ಪ್ರತಿವರ್ಷ ಶಿವರಾತ್ರಿಗೆ ಇಲ್ಲಿ ಜಾತ್ರೆಯಾಗುತ್ತದೆ. ಇದರ ಪೂಜಾರಿಗಳೇ ಬಹುಕಾಲದಿಂದಲೂ ಉಳಿವಿ ಚೆನ್ನ ಬಸವೇಶ್ವರರ ಪೂಜಾರಿಗಳಾಗಿದ್ದಾರೆಂಬದನ್ನು ಲಕ್ಷಿಸತಕ್ಕ ಸಂಗತಿಯಾಗಿದೆ.

(೧೭) **ಕಾದರೊಳ್ಳಿ** (ಕಾತರವಳ್ಳಿ ತಾ॥ ಬೈಲಹೊಂಗಲ):— ಇಲ್ಲಿ ಶಿವಶರಣರಿಗೂ. ಅಳಿಯ ಬಿಜ್ಜಳನಿಗೂ ಘನಘೋರ ಕಾಳಗವಾಯಿತು. ಇದರಲ್ಲಿ ಅಳಿಯ ಬಿಜ್ಜಳನು ಸೋತು ಶಿವಶರಣರ ಕೈಸೆರೆಯಾದನು. ಇವನನ್ನು ಕೊಂದುಹಾಕುವ ವಿಚಾರದಲ್ಲಿರುವಾಗ ಅಕ್ಕನಾಗಮ್ಮನು ಬಂದು, ಅದನ್ನು ಬಿಡಿಸಿ, ಅವನಿಗೆ ಪ್ರಾಣದಾನ ಮಾಡಿದಳು. ಇದರಿಂದ ಈಕೆಯ ಶೌರ್ಯ-ಹಾಗೂ ಔದಾರ್ಯಗಳು ಚೆನ್ನಾಗಿ ಪ್ರಕಟವಾದವು. ಇಲ್ಲಿ ವೀರಭದ್ರದೇವರ ಗುಡಿಯುಂಟು.

(೧೮) **ಮುಗಟಖಾನ ಹುಬ್ಬಳ್ಳಿ** ( ತಾ॥ ಬೈಲಹೊಂಗಲ ):— ಹುಣಶೀಕಟ್ಟಿ-ಕಾದರೊಳ್ಳಿಗಳಂತೆ ಈ ಗ್ರಾಮವೂ ಮಲಪ್ರಭಾನದಿಯ

ಮೇಲಿದೆ. ಈ ನದಿಯಲ್ಲಿ ಬಸವೇಶ್ವರನ ಪತ್ನಿಯಾದ "ನಂಗಾಂಬಿಕೆಯು" ಲಿಂಗೈಕ್ಯಳಾದಳು. ( ಜಲಸಮಾಧಿಯನ್ನು ತಕ್ಕೊಂಡಳೆಂದು ಕೆಲವರು ಹೇಳುತ್ತಾರೆ. ) ಆ ಸ್ಥಳದಲ್ಲಿ (ನಡುನದಿಯಲ್ಲಿ) ಈಗ ಒಂದು ಗುಡಿ ಇದ್ದು ಅದನ್ನು ಜನರು ಗಂಗವ್ವನ ಗುಡಿ ಎಂದು ಕರೆಯುತ್ತಾರೆ. ಪ್ರತಿವರ್ಷ ಸಂಕ್ರಮಣಕ್ಕೆ ಇಲ್ಲಿ ಬಹು ದೊಡ್ಡ ಜಾತ್ರೆಯು ಕೂಡುತ್ತದೆ.

ಕಾದರೊಳ್ಳಿ ಯುದ್ಧವಾದ ಮೇಲೆ ಶಿವಶರಣರು ಅಲ್ಲಿಯೇ ಮಲಪ್ರಭಾ ನದಿಯನ್ನು ದಾಟಿ ದಕ್ಷಿಣಾಭಿಮುಖವಾಗಿ ಹೊರಟರು. ಅಳಿಯ ಬಿಜ್ಜಳನನ್ನು ಸೋಲಿಸಿ, ಸೆರೆ ಹಿಡಿದ ಶಿವರರಣರ ಸೇನಾಪತಿ ಮಡಿವಾಳಮಾಚಿದೇವರು ಇಲ್ಲಿಂದಲೇ ತಮ್ಮ ಊರಿಗೆ ಹೋಗಲು ಹಿಂದಿರುಗಿದರು. ಅವರ ಸ್ಥಳಕ್ಕೆ ಕೊಲದ ಬ್ರಹ್ಮಯ್ಯನವರನ್ನು ನಿಯಮಿಸಿದರು. ಹಾಗು ಈ ಶಿವ ಶರಣರಲ್ಲಿ ಎರಡು ಭಾಗಗಳಾದವು. ೧ನೆಯ ಭಾಗವು ಹಿರೇನಂದೀಹಳ್ಳಿ-ಕಿತ್ತೂರ ತಡಕೋಡ, ಗರಗ-ಎತ್ತಿನಗುಡ್ಡ, ಧಾರವಾಡ, ಬೂದನಗುಡ್ಡ, ಭೋಗೇನಾಗರಕೊಪ್ಪ, ತಂಬೂರಗಳ ಮೇಲಿಂದ ಯಲ್ಲಾಪುರಕ್ಕೆ ಸಾಗಿತು. ೨ನೆಯ ಭಾಗವು ಬೀಡಿ, ಜಗಳಬೆಟ್ಟ, ಕಕ್ಕೇರಿ, ಜಂಗಮನಟ್ಟಿ, ಸಾಂಬ್ರಾಣಿಗಳ ಮೇಲಿಂದ ಯಲ್ಲಾಪುರಕ್ಕೆ ಬಂದಿತು. ಆ ವೇಲೆ ಎರಡೂ ಭಾಗಗಳು ಒಂದಾಗಿ ಎಲ್ಲಾಪುರದಿಂದ ಉಳಿವಿಗೆ (ಮಹಾಮನೆ) ಹೋದವು. ಉಳಿವಿಯಲ್ಲಿ ಚೆನ್ನಬಸವಣ್ಣ, ಹಾಗು ಇತರ ಶಿವಶರಣರ ಸಮಾಧಿಗಳುಂಟು. ಇಲ್ಲಿಯೂ ಕೂಡ ವೈರಿಗಳ ಕೂಡ ಮಹಾಮನೆಯಲ್ಲಿ ತುಮುಲ ಯುದ್ಧವಾಯಿತು. ಆಗ ಶಿವಶರಣರ ಕಡೆಗೆ ಕಿನ್ನರಿಬ್ರಹ್ಮಯ್ಯನವರು ಸೇನಾಪತಿಯಾಗಿದ್ದಂತೆ ಕಂಡುಬರುತ್ತದೆ. ಮಹಾಮನೆಯ ಹತ್ತಿರಿರುವ ಹೊಳೆಗೆ ಕಿನ್ನರಿಬ್ರಹ್ಮಯ್ಯನವರ ನದಿ ಎಂದು ಇಂದಿಗೂ ಕರೆಯುತ್ತಾರೆ. ಉಳಿವಿಯ ಜಾತ್ರೆಯು ಪ್ರತಿವರ್ಷ ಮಾಘ ಶುದ್ಧ ೧೫ ಗೆ ಆಗುತ್ತದೆ. ಬಹುತರ ಚನ್ನಬಸವಣ್ಣನವರು ಲಿಂಗೈಕ್ಯರಾದ ಪುಣ್ಯತಿಥಿಯು ಅದೇ ಆಗಿರಬೇಕೆಂದು ಹೇಳಬಹುದು. ಮತ್ತು ಕಾರ್ತಿಕ ಶುದ್ಧ ೧೫ ದಿವಸ ಬಿಜ್ಜಳನ ಮರಣವಾಗಿದೆ. ಶಿವಶರಣರು ಅದೇ ದಿವಸ ಕಲ್ಯಾಣ ಬಿಟ್ಟರೆಂದು ಕಲ್ಪಿಸಿದರೆ, ಅವರು ಉಳಿವಿಗೆ ಮಾಘ ಶುದ್ಧ ೧೫ ಗೆ ಅಂದರೆ ಕಲ್ಯಾಣ ಬಿಟ್ಟು ೩ ತಿಂಗಳಿಗೆ ಮುಟ್ಟಿರಬೇಕೆಂದು ಊಹಿಸಬಹುದು. ಆಗ ಈ ಪ್ರದೇಶವೆಲ್ಲ ಹಿಂಸ್ರಪಶುಗಳಿಂದ ಯುಕ್ತವಾದ ಘೋರ ಕಾನನವಾಗಿತ್ತು. ಇವರು ತಿರ

ಗಲ್ಲಿನಿಂದ ಕಾದರೊಳ್ಳಿಯ ವರೆಗೆ ಮಲಪ್ರಭಾನದಿಯ ಉತ್ತರ ದಂಡೆಗೆ ಸಮಾಂತರವಾಗಿ ಪಶ್ಚಿಮಕ್ಕೆ ಸಾಗಿದ್ದಾರೆ. ಕಾದರೊಳ್ಳಿಯಿಂದ (ನದಿ ದಾಟಿ) ದಕ್ಷಿಣಾಭಿಮುಖವಾಗಿ ಹೊರಟು ಅಲ್ಲಿಂದ ಎರಡು ಶಾಖೆಗಳಾಗಿ ನೈಋತ್ಯ ಕ್ಕಿರುವ ಉಳವಿಗೆ ಮುಟ್ಟಿದ್ದಾರೆ. ಇನ್ನು ಕಾದರೊಳ್ಳಿಯಿಂದ ಉಳವಿಯ ವರೆಗೆ ನಡೆದ ಸಂಗತಿಗಳನ್ನು ವಿಚಾರಿಸುವಾ.

(೧೯) ಹಿರೆನಂದೀಹಳ್ಳಿ (ತಾ॥ ಬೈಲಹೊಂಗಲ):— ಇಲ್ಲಿ ಶಿವಶರಣರು ಇಳಕೊಂಡು ಶಿವಪೂಜೆ ಮಾಡಿಕೊಂಡ ಮೇಲೆ ವೈರಿಗಳು ಬಂದ ಸುಳಿವು ಗೊತ್ತಾಯಿತಂತೆ. ಅದರಿಂದ ಪ್ರಸಾದತಕ್ಕೊಳ್ಳದೆ ಇಲ್ಲಿಂದ ಅವರು ಕಿತ್ತೂರಿಗೆ ಹೋದರು. ಇಲ್ಲಿ ಈಗ ಬೃಹದಾಕಾರದ ಅಖಂಡ ಬಸವೇಶ್ವರನ ಮೂರ್ತಿಯುಂಟು. ಶ್ರಾವಣ ಮಾಸದಲ್ಲಿ ಜಾತ್ರೆಯಾಗುವದು. ಶಿವಶರಣರು ಇಲ್ಲಿ ಪ್ರಸಾದ ತಕ್ಕೊಳ್ಳದೆ ಹಾಗೇ ಹೋದದ್ದರಿಂದ ಇಲ್ಲಿ ಈಗ ತಯಾರಿಸಿದ ಪ್ರಸಾದಕ್ಕೆ ಕೊರತೆ ಇಲ್ಲೆಂದು ಜನರು ಹೇಳುತ್ತಾರೆ. ಚೆನ್ನಬಸವಣ್ಣನವರು ಇದೇ ಮಾರ್ಗವಾಗಿ ಹೋದಂತೆ ತಿಳಿಯುತ್ತದೆ.

(೨೦) ಕಿತ್ತೂರ (ತಾ॥ ಬೈಲಹೊಂಗಲ) :— ಈ ಮಧ್ಯದಲ್ಲಿರುವ ರಣಗಟ್ಟಿ ಕೆರೆಯ ಮೇಲಿನ ಬೈಲಲ್ಲಿ ಅಳಿಯ ಬಿಜ್ಜಳನಿಗೂ, ಶಿವಶರಣರಿಗೂ ಯುದ್ಧವಾಯಿತು. ಶಿವಶರಣರು ವೈರಿಗಳನ್ನು ಹೊಡೆದೋಡಿಸಿದರು.

## ಧಾರವಾಡ ಜಿಲ್ಲೆಯ ಗ್ರಾಮಗಳು

(೨೧) ತಡಕೋಡ (ತಾ॥ ಧಾರವಾಡ) (೨೨) ಗರಗ (ತಾ॥ ಧಾರವಾಡ) (೨೩) ಎತ್ತಿನಗುಡ್ಡ (ತಾ॥ ಧಾರವಾಡ) :— ಇವುಗಳ ಮೇಲಿಂದ ಶಿವಶರಣರು ಧಾರವಾಡಕ್ಕೆ ಹೋದರು. ಈಗಿನ ಉಳವೀ ಬಸವೇಶ್ವರ ದೇವಸ್ಥಾನವೇ ಅಂದು ಶಿವಶರಣರು ಬೀಡುಬಿಟ್ಟ ಸ್ಥಳವಾಗಿದೆ. ತಡಕೋಡ ಗರಗ ಎತ್ತಿನಗುಡ್ಡಗಳಲ್ಲಿ ವೀರಭದ್ರ ದೇವಾಲಯಗಳು ಇದ್ದಂತೆ ತಿಳಿದುಬರುತ್ತದೆ.

(೨೪) ಬೂಮನಗುಡ್ಡ (ತಾ॥ ಕಲಘಟಗಿ):— ಇಲ್ಲಿ ಬಸವೇಶ್ವರ ದೇವಸ್ಥಾನವುಂಟು. ಶ್ರಾವಣ ಮಾಸದಲ್ಲಿ ಜಾತ್ರೆಯಾಗುತ್ತದೆ. ಇಲ್ಲಿ ಶರಣರು ವಸತಿಮಾಡಿದ್ದರು.

(೨೫) ಭೋಗೇನಾಗರಕೊಪ್ಪ (ತಾ॥ ಕಲಘಟಗಿ) :— ಇಲ್ಲಿಯ ಬಸವಣ್ಣನ ದೇವಸ್ಥಾನವು ಜಾಗ್ರತವೆಂದು ಪ್ರಸಿದ್ಧಿಯುಂಟು. ಇಲ್ಲಿ ಶರಣರು ಇದ್ದರಂತೆ.

(೨೬) ತಂಬೂರ (ತಾ॥ ಕಲಘಟಗಿ) ಇಲ್ಲಿ ಬಸವಣ್ಣನ ದೇವಾಲಯವದೆ. ಇದು ಶರಣರ ಮಾರ್ಗದ ಕುರುಹು ಆಗಿವೆ.

(೨೭) ಯಲ್ಲಾಪುರ (ಜಿ॥ ಕಾರವಾರ) :— ತಂಬೂರಿಂದ ೧ನೆಯ ತಂಡವು ಇಲ್ಲಿಗೆ ಬಂದಿತು.

**ಕಾದರೊಳ್ಳಿಯಿಂದ ಹೊರಟ ಎರಡನೆಯ ತಂಡದ ಮಾರ್ಗವನ್ನು ವಿಚಾರಿಸುವಾ:—**

(೨೮) ಚಿಕ್ಕಹಟ್ಟಿಹೊಳಿ (ತಾ॥ ಖಾನಾಪುರ) (೨೯) ಬೀಡಿ (ತಾ॥ ಖಾನಾಪೂರ) :— ಇಲ್ಲಿ ವೀರಭದ್ರನ ದೇವಾಲಯುಗಳುಂಟು.

(೩೦) ಅವರೊಳ್ಳಿ (ತಾ॥ ಖಾನಾಪುರ) :— ಇಲ್ಲಿ ರುದ್ರಸ್ವಾಮಿಯ ಗುಡಿಯುಂಟು. ಅದರಿಂದ ಶಿವಶರಣರು ಈ ಮಾರ್ಗದಿಂದ ಹೋಗಿರಬೇಕೆಂದು ತರ್ಕಿಸಬಹುದಾಗಿದೆ.

(೩೧) ಕಕ್ಕೇರಿ (ತಾ॥ ಖಾನಾಪುರ) :— ಇಲ್ಲಿ ಮಹಾಶರಣ ಕಕ್ಕಯ್ಯನವರು ಲಿಂಗೈಕ್ಯರಾದರು. ಅವರದೊಂದು ಶಿಲಾಮೂರ್ತಿಯೂ, ಒಂದು ಭಾವಿಯೂ ಇಲ್ಲಿ ಉಂಟು. ನಮ್ಮ ಹರಿಜನ ಬಂಧುಗಳು (ಢೋರ ಸಮಾಜದವರು) ಇಲ್ಲಿ ಮಂದಿರ ಕಟ್ಟಿಸುವ ಯೋಜನೆ ನಡಿಯಿಸಿದ್ದಾರೆ. ಇದು ಸಂತೋಷದ ಸಂಗತಿಯಾಗಿದೆ.

(೩೨) ಜಗಳಬೆಟ್ಟ (ತಾ॥ ಹಲ್ಯಾಳ) ಇಲ್ಲಿ ಯುದ್ಧವಾಗಿದೆ. ಅದರಿಂದಲೆ ಇದಕ್ಕೆ ಈ ಹೆಸರು ಬಂದಿದೆ.

(೩೩) ಜಂಗಮನಟ್ಟಿ (ತಾ॥ ಹಲ್ಯಾಳ) :— ಇಲ್ಲಿ ಶಿವಶರಣರು ಶಿವಪೂಜೆಯನ್ನು ಮಾಡಿಕೊಂಡರು.

(೩೪) ಸಾಂಬ್ರಾಣಿ (ತಾ॥ ಹಲ್ಯಾಳ):— ಇಲ್ಲಿ ಘೋರವಾದ ಕಾಳಗವಾಯಿತು. ಇದರಲ್ಲಿ ಶಿವಶರಣರು ಜಯಹೊಂದಿದರು. ಇಲ್ಲಿಂದ ಇವರು ಯಲ್ಲಾಪುರಕ್ಕೆ ಬಂದು ೧ ನೆಯ ತಂಡನ್ನು ಕೂಡಿಕೊಂಡರು.

(೩೫) ಉಳಿವಿ (ತಾ॥ ಹಲ್ಯಾಳ) :— ಎರಡೂ ಶಾಖೆಗಳು ಕೂಡಿ ಒಂದಾದ ಶಿವಶರಣರ ಸಂಯುಕ್ತ ಸಂಘವು ಯಲ್ಲಾಪುರದಿಂದ ಉಳಿವಿಗೆ ಮುಟ್ಟಿತು. ಇಲ್ಲಿಯ ಮಹಾಮನೆಯ ಗವಿಯ ಮುಂದೆ ಅಳಿಯ ಬಿಜ್ಜಳ ಶಿವಶರಣರ ನಡುವೆ ಕೊನೆಯ ನಿಕರದ ಕಾಳಗವಾಯಿತು. ಇದರಲ್ಲಿ ಶಿವ

ಶರಣರು ವಿಜಯಿಗಳಾದರೂ ಅಕ್ಕ ನಾಗಮ್ಮ, ನುಲಿಯ ಚಂದಯ್ಯ ಇವರಿಬ್ಬರ ಹೊರತು ಉಳಿದ ಎಲ್ಲ ಶಿವಶರಣರು ಲಿಂಗೈಕ್ಯರಾದರು. ಆಮೇಲೆ ಅಕ್ಕನಾಗಮ್ಮನೂ ನುಲಿಯ ಚಂದಯ್ಯನೂ ಅಲ್ಲಿಂದ ಬೇರೆ ಕಡೆಗೆ ಹೊರಟು ಹೋದರು.

ಇದು ಬೆಳಗಾಂವ ಜಿಲ್ಹೆಯ (೧) ರಾಮದುರ್ಗ (೨) ಸವದತ್ತಿ (೩) ಬೈಲಹೊಂಗಲ (೪) ಖಾನಾಪುರ ತಾಲೂಕುಗಳನ್ನೂ ಧಾರವಾಡ ಜಿಲ್ಹೆಯ (೧) ಧಾರವಾಡ (೨) ಕಲಘಟಗಿ ತಾಲೂಕುಗಳನ್ನೂ ಕಾರವಾರ ಜಿಲ್ಹೆಯ (೧) ಹಳ್ಯಾಳ (೨) ಯಲ್ಲಾಪುರ ತಾಲುಕುಗಳನ್ನು ಒಳಗೊಂಡಿದೆ. ಇದರ ಉದ್ದಳತೆಯು ಸುಮಾರು ೧೨೫ ಮೈಲು ಇದ್ದು, ಅಗಲಳತೆಯು ೨೦-೨೫ ಮೈಲು ಆಗುವದು.

ಶಾ. ಶ. ೧೦೯೦ (ಕ್ರಿ. ಶ. ೧೧೬೮) ನೆಯ ಕಾರ್ತಿಕ ಶುದ್ಧ ೧೫ರಿಂದ ಮಾಘಶುದ್ಧ ೧೫ವರೆಗೆ ಅಂದರೆ ೩ ತಿಂಗಳು ಈ ಯುದ್ಧ ಸಾಗಿರಬೇಕೆಂದು ನಾವು ಊಹಿಸುತ್ತೇವೆ.

ಗೊಡಚಿಜಾತ್ರೆಯು ಮಾರ್ಗಶಿರ್ಷ ಶುದ್ಧ ೧೫ ಗೂ. ಮುಗುಟಖಾನ ಹುಬ್ಬಳ್ಳಿಯ ಗಂಗವ್ವನ ಜಾತ್ರೆಯು ಪೌಷ್ಯ ಮಾಸದ ಸಂಕ್ರಮಣಕ್ಕೂ ಉಳವಿಯ ಜಾತ್ರೆಯು ಮಾಘ ೧೫ ಗೂ ಆಗುವ ಬಹು ಪುರಾತನ ರೂಢಿಯನ್ನು ಅವಲೋಕಿಸಿ, ವಿಚಾರಿಸಿದರೆ ಶಿವಶರಣರು ಅಲ್ಲಿಗೆ ಬಂದ ಮಿತಿಯನ್ನು ತೋರಿಸುತ್ತಿರಬೇಕೆಂದು ಅನುಮಾನ ಮಾಡಲು ಅವಕಾಶ ಉಂಟಾಗುತ್ತದೆ. ಇವುಗಳಬಗ್ಗೆ ಸಂಶೋಧಕರು ಲಕ್ಷ ಪೂರೈಸಬೇಕೆಂದು ನಾವು ಹಾರೈಸುತ್ತೇವೆ.

ಶಿವಶರಣರು ಯುದ್ಧಕಲೆಯನ್ನರಿಯದ ಶಿವಯೋಗಿಗಳಾದರೂ, ಆತ್ಮರಕ್ಷಣೆಯಲ್ಲಿ ಸಮರ್ಥರಾಗಿದ್ದರೆಂಬುದು ಈ ಯುದ್ಧರಿಂದ ಸಿದ್ಧವಾಗುತ್ತದೆ. ಅಳಿಯ ಬಿಜ್ಜಳನ ಒಂದೂಕಾಲ ಲಕ್ಷನುರಿತ ಸೈನಿಕರೊಡನೆ ಎಡೆಬಿಡದೆ ಸುಮಾರು ೩ ತಿಂಗಳುಗಳ ವರೆಗೆ ಕೇವಲ ಹದಿಮೂರುಸಾವಿರ (೧೨೦೦೦ ಷಟ್ಸ್ಥಲ ಬ್ರಹ್ಮಿಗಳೂ ೭೭೦ ಅಮರಗಣಂಗಳೂ) ಶಿವಯೋಗಿಗಳು ಸಮಬಲದಿಂದ ಕಾದಿ ಕಡೆಗೆ ಅವರನ್ನು ಓಡಿಸಿ ವಿಜಯಿಗಳಾದದ್ದು, ಅವರ ಅದ್ಭುತ ಪರಾಕ್ರಮದ ದ್ಯೋತಕವಾಗಿದೆ ಎಂದು ಘಂಟಾಘೋಷವಾಗಿ ಹೇಳಬಹುದು.

# ಕಾವ್ಯವಾಹಿನಿ !

(೧)

ಧೈರ್ಯ-ಸಾಹಸದಂಥ ಬಲಗಳು
ಎನ್ನ ಎದೆಯನು ಸೇರಲಿ ;
ಹಳ್ಳ-ಹೊಳೆಗಳು ಹರಿವ ತೆರದೊಳು
ಕಾವ್ಯವಾಹಿನಿ ಹರಿಯಲಿ !

(೨)

ಶಿವನ ತೇಜೋನಯನ ಶಕ್ತಿಯು
ಎನ್ನ ಕಂಗಳ ಸೇರಲಿ ;
ನಾಶವಾಗಲಿ ಮಿಥ್ಯವೆಲ್ಲವು
ಸತ್ಯ-ಸೌಂದರ್ಯ ಹೊಮ್ಮಲಿ !

(೩)

ಪುಣ್ಯವಂತರ ತತ್ವ ಬಣ್ಣಿಸಿ
ಸತ್ವ ಬೆಳಕವು ಚಿಮ್ಮಲಿ ;
ಭಕ್ತಿಯಾಮೃತರಸ ಉಕ್ಕಿ ಹರಿಯಲಿ
ಅಂತರಾಳವು ಹೊಳಗಲಿ !

(೪)

ಪ್ರಕೃತಿ ಸೌಂದರ ಒಲಿದು ಎನ್ನಯ
ಬಾಳು ಸುಂದರವಾಗಲಿ;
ನಿತ್ಯ ನೂತನ ದಿವ್ಯವಾಗಲಿ
ನವ್ಯರೂಪವ ತಳೆಯಲಿ !

(೫)

ಹಳ್ಳ-ಹೊಳೆಗಳು ಹರಿವ ತೆರದೊಳು
ಕಾವ್ಯವಾಹಿನಿ ಹರಿಯಲಿ ;
ಸಪ್ತ ಸಾಗರದಾಚೆ ಹೋಗಲಿ
ದಿಗ್-ದಿಗಂತವ ದಾಟಲಿ !

— ಹಿಂಗಮಿರೆ ಬಿ. ಬಿ.

ರಾಜಾಪೂರ (ಕೃಷ್ಣಾತೀರ)

# ತಮಿಳು ಸಾಹಿತ್ಯ

## ಆಧುನಿಕ ಕಾಲ

(ಶ್ರೀ. ಟಿ. ಎಸ್. ಅವನಾಶಿಲಿಂಗಂ ಚೆಟ್ಟಿಯಾರ್, ಎಂ. ಸಿ.)



ತಮಿಳು ಭಾಷೆಯು ಬಹುಶಃ ಜಗತ್ತಿನಲ್ಲಿ ಅತಿ ಪ್ರಾಚೀನ ಭಾಷೆಗಳಲ್ಲಿ ಒಂದಾಗಿದೆ. ತಮಿಳು ಅತ್ಯಂತ ಪ್ರಾಚೀನವಾದ ಸಾಹಿತ್ಯ ಹಾಗೂ ಸಂಸ್ಕೃತಿಯನ್ನು ಪಡೆದಿದೆ. ಈ ವಿಷಯದಲ್ಲಿ ಯಾರೇ ಆಗಲಿ, ಹೆಮ್ಮೆ ಪಡಬಹುದಾಗಿದೆ. ಈಗ ದೊರೆಕಿರುವ ಕೃತಿಗಳಲ್ಲಿ '**ತೋಳ ಕಪ್ಪಿಯನ್**' ಕ್ರಿ. ಪೂ. ೫೦೦ರ ವೇಳೆಗೆ ರಚಿತವಾಗಿರಬಹುದು. ಅದಕ್ಕೂ ಹಿಂದಿನ ಕೃತಿಗಳು ನಾಶವಾಗಿ ಹೋಗಿವೆ. ೨೫೦೦ ವರ್ಷಗಳಲ್ಲಿ ತಮಿಳು ಭಾಷೆಯಲ್ಲಿ ಅತ್ಯುತ್ತಮ ಸಾಹಿತ್ಯಾತ್ಮಕ ಕೃತಿಗಳು ರಚಿತಗೊಂಡಿವೆ. ಇವುಗಳಲ್ಲಿ ಪ್ರಸಿದ್ಧವಾದದ್ದು '**ಕುರಳ್**'

ಕುರಳ್ ಗ್ರಂಥವನ್ನು ಕ್ರಿ. ಪೂ. ಎರಡನೆಯ ಶತಮಾನದಲ್ಲಿ ರಚಿಸಲಾಯಿತು. ಇದು ಸರ್ವಕಾಲದ ನೀತಿ ತತ್ವಗಳ ಸಂಗ್ರಹವನ್ನೊಳಗೊಂಡಿದ್ದು ಜಗತ್ತಿನ ನಾನಾ ಭಾಷೆಗಳಿಗೆ ಭಾಷಾಂತರವಾಗಿದೆ. ಇದೇ ರೀತಿ **ಕಂಬರಾಮಾಯಣವು** ಕೂಡ ಮಹಾ ವೈಭವಯುಕ್ತವಾದ ಮನೋಹರ ಕೃತಿಯಾಗಿದೆ. ಅವಲ್ಲದೆ ಆಧುನಿಕ ಪುನರುಜ್ಜೀವನದ ಕವಿಗಳಾದ ಸುಬ್ರಹ್ಮಣ್ಯ ಭಾರತಿಯ ವರೆಗೂ ಅನೇಕ ಭಕ್ತಿಪ್ರಧಾನವಾದ ಕೃತಿಗಳು ರಚಿತಗೊಂಡಿವೆ. ಆಧುನಿಕ ಕಾಲಧಲ್ಲಿ ಪ್ರಾಚೀನ ಹಾಗೂ ಮಧ್ಯಮ ಕಾಲದ ಸಾಹಿತ್ಯ ಸಂಪತ್ತನ್ನು ಮಾತ್ರ ಹೊಂದಿರುವುದು ಸಾಲದು. ಭಾಷೆಯೊಂದು ಜನತೆಯ ಜನಜೀವನ ಹಾಗೂ ವಿಚಾರ ಶಕ್ತಿಯ ಪ್ರಗತಿಯ ಜೀವಂತ ಭಾವನಾರೂಪವಾಗಿದೆ. ಕಾಲದ ಆಗತ್ಯತೆಗಳಿಗೆ ಅನುಸಾರವಾಗಿ ತಮಿಳು ವೈವಿಧ್ಯ ಪೂರ್ಣತೆಯಿಂದ ಕೂಡಿ ಬೆಳವಣಿಗೆಯನ್ನು ಪಡೆಯಿತು.

ಭಾಷೆಯ ಬೆಳವಣಿಗೆಯನ್ನಾಗಲಿ ಅಥವಾ ಭಾಷಾ ಸಂಪತ್ತನ್ನಾಗಲಿ ಅನೇಕ ವಿಧಗಳಲ್ಲಿ ಅಳೆಯಬಹುದು. ಭಾಷೆಯೊಂದರಲ್ಲಿರುವ ವೃತ್ತಪತ್ರಿಕೆಗಳ ಸಂಖ್ಯೆ ಇವುಗಳು ಒಳಗೊಳ್ಳುವ ವಿಷಯಗಳ ವೈವಿಧ್ಯತೆ ಹಾಗೂ

ಇವುಗಳ ಪ್ರಚಾರವು ಭಾಷೆಯು ಬೆಳವಣಿಗೆಯನ್ನು ಅಳೆಯುಲು ಅಡಿಕೋಲಾಗಿರುವುದು. ಭಾಷೆಯನ್ನು ಬೆಳಕಿಗೆ ತಂದಿರುವ ಉತ್ತಮ ಲೇಖಕರು, ಕವಿಗಳು, ಸಣ್ಣಕತೆಗಳ ಬರಹಗಾರರು, ಪ್ರಬಂಧಕಾರರು ಮತ್ತು ವಿಜ್ಞಾನಿಗಳು, ಭಾಷೆಯು ಜನರಲ್ಲಿ ವಿಕಸಗೊಳಿಸುವ ಪಾರಮಾರ್ಥಿಕ ಪರಿಜ್ಞಾನವು, ಅಂಕಿ ಸಂಖ್ಯೆಗಳ ವಿಷಯದಲ್ಲಿ ಬೆಲೆಕಟ್ಟುವುದಕ್ಕೆ ಸಾಧ್ಯವಿಲ್ಲದಿದ್ದಾಗ್ಯೂ ಹೆಚ್ಚು ಸತ್ವ ಪೂರ್ಣವುಳ್ಳದ್ದಾಗಿರುವುದು ಯಾವ ಅಡಿಗೋಲಿನಿಂದ ಅಳೆದಿದ್ದಾಗ್ಯೂ ತಮಿಳು ಭಾಷೆಯು ಎಲ್ಲ ಕ್ಷೇತ್ರಗಳಲ್ಲಿಯೂ ಸತ್ವವನ್ನೂ ಬೆಳವಣಿಗೆಯನ್ನೂ ವ್ಯಕ್ತಪಡಿಸಿದೆ. ಇಂದಿನ ಬದಲಾಯಿಸಿದ ಸನ್ನಿವೇಷಗಳಲ್ಲಿ, ಭಾರತದಲ್ಲಿನ ಅತ್ಯಂತ ಹಿರಿಯದಾದ ಭಾಷೆಗಳಲ್ಲಿ ಒಂದೆನಿಸಿಕೊಳ್ಳಲು ಯತ್ನಿಸಿದೆ. ಭಾರತ ಸರಕಾರದವರು ಇತ್ತೀಚೆಗೆ ನೇಮಿಸಿದ ಪತ್ರಿಕಾ ಸಂಬಂಧದ ಕಮೀಷನ್ ಸಂಗ್ರಹಿಸಿರುವ ಅಂಕಿಸಂಖ್ಯೆಗಳನ್ನು ಇಲ್ಲಿ ಉಲ್ಲೇಖಿಸುವುದಾದರೆ, ತಮಿಳು ಭಾಷೆಯಲ್ಲಿ ೧೦ ದಿನ ಪತ್ರಿಕೆಗಳಿವೆ. ಒಂದು ದಿನ ಪತ್ರಿಕೆಯ ಪ್ರಚಾರವು ೬೪ ಸಹಸ್ರದಷ್ಟಿದೆ. ಉಳಿದವು ಸ್ವಲ್ಪ ಕಡಿಮೆ ಪ್ರಮಾಣದಲ್ಲಿವೆ. ೭೯ ವಾರ ಪತ್ರಿಕೆಗಳೂ, ೪೨ ಪಾಕ್ಷಿಕ ಪತ್ರಿಕೆಗಳೂ, ೧೪೮ ಮಾಸಪತ್ರಿಕೆಗಳೂ ಇವೆ. ಇವು ಧರ್ಮ, ಸಾಹಿತ್ಯ, ಸಮಾಜೋದ್ಧಾರ, ಮಾರುಕಟ್ಟೆಯ ವರದಿಗಳು, ಚಲಚಿತ್ರ, ಶಿಕ್ಷಣ, ವೈದ್ಯಕೀಯ ಸಮಾಜಕಲ್ಯಾಣ, ಕಾರ್ಮಿಕ, ವ್ಯವಸಾಯ ಕ್ಷೇತ್ರಗಳಿಗೆ ವ್ಯಾಪಿಸಿವೆ. ದಿನಮಣಿಕದಿರ್ ಎಂಬ ವಾರಪತ್ರಿಕೆಯಂತೂ ಒಂದು ಲಕ್ಷ ಪ್ರತಿಗಳ ವರೆವಿಗೂ ಪ್ರಚಾರವನ್ನು ಹೊಂದಿದೆ. ಕಲ್ಕಿ ಮತ್ತು ಅನಂದವಿಕಟನ್ ವಾರಪತ್ರಿಕೆಗಳು ೬೦ ಮತ್ತು ೫೦ ಸಹಸ್ರ ಪ್ರತಿಗಳ ಪ್ರಚಾರವನ್ನು ಪಡೆದಿರುತ್ತವೆ. ಮಾಸಪತ್ರಿಕೆಗಳಲ್ಲಿ ಕಲೈಮಗಳ್, ಕುಮುದಂ ಪತ್ರಿಕೆಗಳು ೨೦ ಸಹಸ್ರಕ್ಕೂ ಮೀರಿದ ಪ್ರತಿಗಳ ಪ್ರಚಾರವನ್ನು ಪಡೆದಿರುತ್ತವೆ.

## ಸಾಂಸ್ಕೃತಿಕ ಜಾಗ್ರತಿ.

ಈ ಎಲ್ಲ ಪತ್ರಿಕೆಗಳೂ. ಮಾಸಪತ್ರಿಕೆಗಳೂ, ವಾರಪತ್ರಿಕೆಗಳೂ, ದ್ವೈವಾರ ಪತ್ರಿಕೆಗಳೂ ಮತ್ತು ಪಾಕ್ಷಿಕ ಪತ್ರಿಕೆಗಳೂ ಜನಗಳಲ್ಲಿರುವ ನಿರ್ದಿಷ್ಟ ಮನೋಪ್ರವೃತ್ತಿಯನ್ನು ಪ್ರತಿನಿಧಿಸುವುವು. ರಾಜಕೀಯ ಜಾಗೃತದೊಂದಿಗೆ ಸ್ವಾಭಾವಿಕವಾಗಿಯೇ ಸಾಂಸ್ಕೃತಿಕ ಜಾಗೃತಿಯೂ ಬಂದಿದೆ. ನಮ್ಮ ಪ್ರಾಚೀನ ಹಿರಿಮೆಯ ಬಗ್ಗೆ ಹೆಮ್ಮೆಯುಂಟಾಗಿ ನಮ್ಮ ಧರ್ಮದ

ಪುನರುತ್ಥಾಪನೆಗಾಗಿ ಪ್ರಯತ್ನಿಸುವ ಪ್ರವೃತ್ತಿ ಕಂಡುಬಂದಿದೆ. ನಮ್ಮ ಸಾಹಿತ್ಯ ಕೃತಿಗಳು ಈ ಪುನರುತ್ಥಾಪನ ಕಾರ್ಯಕ್ಕೆ ಸಾಧಕಗಳಾಗಿವೆ. ಇದರೊಂದಿಗೆ ನಮ್ಮ ಪ್ರಾಚೀನ ಸಾಹಿತ್ಯವು ಆಧುನಿಕ ಕಾಲಗಳಿಗೆ ಸಾಲದೆಂಬ ಹಾಗೂ ನಾವು ಆಧುನಿಕ ವಿಜ್ಞಾನ, ಔದ್ಯೋಗಿಕ ವಿಜ್ಞಾನ ಇತ್ಯಾದಿಗಳ ಜ್ಞಾನವನ್ನು ವೃದ್ಧಿಸಿಕೊಳ್ಳಬೇಕೆಂಬ ಹೊಸ ಮನೋಭಾವವೊಂದು ಕಾಣಿಸಿದೆ. ಶ್ರೀರಾಮಕೃಷ್ಣ ವಿಜಯಂ, ಸಿದ್ಧಾಂತಂ ಮುಂತಾದ ಪತ್ರಿಕೆಗಳು ನಮ್ಮ ಪ್ರಾಚೀನ ಸಾಹಿತ್ಯವು ಆಧುನಿಕ ಕಾಲಗಳಿಗೆ ಸಾಲದೆಂದು ಪ್ರತಿಪಾದಿಸುತ್ತಿವೆ. ತಮಿಳ್ ವಳರ್ಚಿ ಕಳಗಂ ಅಥವಾ ತಮಿಳು ಅಕಾಡೆಮಿಯು ನಾವು ಆಧುನಿಕ ವಿಜ್ಞಾನ, ಔದ್ಯೋಗಿಕ ವಿಜ್ಞಾನ ಮುಂತಾದವನ್ನು ಅಭಿವೃದ್ಧಿಪಡಿಸಬೇಕೆಂದು ಪ್ರತಿಪಾದಿಸುತ್ತದೆ. ತಮಿಳ್ ವಳರ್ಚಿ ಕಳಗಂ ೧೯೪೭ ರಲ್ಲಿ ಸ್ವಾತಂತ್ರ್ಯೋದಯದ ನಂತರ ಬೆಳಕು ಕಂಡಿತು. 'ಎನ್ ಸೈಕ್ಲೋಪೀಡಿಯಾ ಬ್ರಿಟಾನಿಕಾ'ದ ಮಾದರಿಯ ಮೇಲೆ ಹತ್ತು ಸಂಪುಟಗಳಲ್ಲಿ ತಮಿಳಿನಲ್ಲಿ ಗ್ರಾಹಕದ ವಿಶ್ವಕೋಶವೊಂದನ್ನು ಹೊರತರುವ ಉದ್ದೇಶವನ್ನು ಹೊಂದಿದೆ. ಈ ವಿಶ್ವಕೋಶದಲ್ಲಿ ಪ್ರಾಚೀನ ಹಾಗೂ ಆಧುನಿಕ ವಿಷಯಗಳಿರುತ್ತವೆ. ಈ ವಿಶ್ವಕೋಶವು, ವ್ಯವಸಾಯ, ಮಾನವಶಾಸ್ತ್ರ, ಸಸ್ಯಶಾಸ್ತ್ರ, ಭೂಗೋಳಶಾಸ್ತ್ರ, ಭೌತಶಾಸ್ತ್ರ, ಮನಶ್ಶಾಸ್ತ್ರ, ಸಂಖ್ಯಾಸಂಗ್ರಹಣಶಾಸ್ತ್ರ, ಶಸ್ತ್ರಚಿಕಿತ್ಸೆ ಮುಂತಾದ ವಿಷಯಗಳನ್ನೊಳಗೊಂಡಿರುವುದು. ತಮ್ಮ ತಮ್ಮ ಕ್ಷೇತ್ರಗಳಲ್ಲಿ ನುರಿತವರಾದ ಸುಮಾರು ಎರಡು ಸಹಸ್ರ ಮಂದಿ ನಾನಾ ವಿಷಯಗಳ ಬಗ್ಗೆ ಲೇಖನಗಳನ್ನು ಬರೆಯುವರು. ಈ ಮಹತ್ಕಾರ್ಯಕ್ಕೆ ಸುಮಾರು ೯ ಲಕ್ಷ ರೂ. ಗಳು ವೆಚ್ಚವಾಗುವುವು. ಹೆಚ್ಚಿನ ಸಂಖ್ಯೆಯ ಸಂಸ್ಥೆಗಳಿಗೂ ಹಾಗೂ ವ್ಯಕ್ತಿಗಳಿಗೂ ಈ ಚಿರಸ್ಥಾಯಿಯಾದ ಕೃತಿಯು ದೊರಕುವಂತೆ ಪ್ರತಿ ಕೃತಿಗೂ (೧೦ ಸಂಪುಟಗಳು ಸೇರಿ) ೩೫೦ ರೂ. ಗಳ ದರವನ್ನು ನಿಷ್ಕರ್ಷಿಸಲಾಗಿದೆ. ಈ ಕ್ರಮದಿಂದ ಒಟ್ಟು ೬ ಲಕ್ಷ ರೂ. ಗಳ ನಿವ್ವಳ ನಷ್ಟ ಸಂಭವಿಸಲಿದೆ. ಸುಲಭವಾಗಿ ಓದಲು ಸಾಧ್ಯವಾಗುವಂತೆ ಚಿತ್ರಗಳನ್ನು ಕೂಡ ಒಳಗೊಂಡಿರುವುದು. ಮೊದಲನೆಯ ಸಂಪುಟವು ಈಗಾಗಲೆ ಪ್ರಕಟವಾಗಿದ್ದು ಅದ್ಭುತ ಸ್ವಾಗತವನ್ನು ಗಳಿಸಿದೆ. ಉಳಿದ ಸಂಪುಟಗಳು ಕ್ಷಿಪ್ರದಲ್ಲಿಯೇ ಹೊರಬರುವ ನಿರೀಕ್ಷಣೆಯಿದೆ. ನಮ್ಮ ಭಾರತೀಯ ಭಾಷೆಗಳ ಅಭಿವೃದ್ಧಿ ಕಾರ್ಯದಲ್ಲಿ ಬಹುಶಃ ಇದೊಂದು ಅತ್ಯಂತ ಹಿರಿಯ ಪ್ರಯತ್ನಗಳಲ್ಲಿ ಒಂದಾಗಿದೆ.

ನಮ್ಮ ಸಾಹಿತ್ಯ ಕ್ಷೇತ್ರದಲ್ಲಿ ಇನ್ನೂ ಒಂದು ಪ್ರವೃತ್ತಿಯಿದೆ. ಇದನ್ನು ನೇತ್ಯರ್ಥಕ ಪ್ರವೃತ್ತಿ ಅಥವಾ 'ನೆಗೆಟಿವ" ಕರೆಂಟ್' ಎಂದು ಪರಿಗಣಿಸ ಬಹುದು. ಯಥಾ ಮೂಲವಾಗಿ ಆತ್ಮಗೌರವ ಸಾಹಿತ್ಯವೆಂದು ಕರೆಯಲಾ ಗುವ ಸಾಹಿತ್ಯದ ಮಾದರಿಯನ್ನು ಕುರಿತು ಪ್ರಸ್ತಾಪಿಸುತ್ತೇನೆ. ಈ ಮಾದ ರಿಯ ಸಾಹಿತ್ಯದಲ್ಲಿ ನೇತ್ಯರ್ಥಕ ಉದ್ದೇಶಗಳಿವೆ. ಉತ್ತಮ ಹಾಗೂ ಕೀಳು ಜಾತಿಗಳಲ್ಲಿ ವೈಮನಸ್ಯವನ್ನು ತಂದೊಡ್ಡುವುದು, ಉತ್ತರ ಹಾಗೂ ದಕ್ಷಿಣ ಭಾರತೀಯರಲ್ಲಿ ವೈಮನಸ್ಯ ತಂದೊಡ್ಡುವುದು, ಧರ್ಮದ ಬಗ್ಗೆ ತಾತ್ಸಾರವನ್ನುಂಟು ಮಾಡುವುದು. ಇವೇ ಈ ಉದ್ದೇಶಗಳಾಗಿವೆ. ಇಂತಹ ಸಾಹಿತ್ಯವನ್ನು ಹಿಡುವವರು ಕೆಚ್ಚಿಲ್ಲದಿರಬಹುದು. ಆದಾಗ್ಯೂ ಅಬ್ಬರ ಮಾಡುವಷ್ಟು ಅಲ್ಪ ಸಂಖ್ಯಾಕರಿದ್ದಾರೆ. ಇನ್ನೊಂದು ರೀತಿಯ ನೇತ್ಯರ್ಥಕ ಪ್ರವೃತ್ತಿಯಿದೆ. ಇದನ್ನು ಅದಷ್ಟು ಜಾಗ್ರತೆಯಾಗಿ ಸರ್ಕಾರವು ತಡೆಗಟ್ಟ ಬೇಕು. ಇದು ಮಾಸಪತ್ರಿಕೆಗಳು, ಚಿತ್ರಗಳು ಮುಂತಾದವುಗಳಲ್ಲಿ ಕಾಣ ಬರುವ ಅಶ್ಲೀಲ ಸಾಹಿತ್ಯವಾಗಿದೆ. ಇನ್ನೊಂದು ರೀತಿಯ ಸಾಹಿತ್ಯವಿದೆ. ಮಕ್ಕಳು ಹಾಗೂ ಕಿರಿಯರ ಮನಸ್ಸುಗಳಲ್ಲಿ ಭಯೋತ್ಪಾದನೆ, ಹಿಂಸೆ ಹಾಗೂ ಕಾಮಪ್ರಚೋದನೆಯನ್ನುಂಟು ಮಾಡುವ ಸಾಹಿತ್ಯ. ಇವನ್ನು ಆದಷ್ಟು ಜಾಗ್ರತೆಯಾಗಿ ತಡೆಗಟ್ಟದೇ ಹೋದಲ್ಲಿ ನಮ್ಮ ಮಕ್ಕಳ ಬೆಳವ ಣಿಗೆಯನ್ನು ತಪ್ಪುಹಾದಿಗೆ ಒಯ್ಯುವ ಪರಿಣಾಮವನ್ನುಂಟು ಮಾಡಬಹುದು. ಈ ಅಪಾಯಕಾರಿಯಾದ ಪ್ರಭಾವವು ನಮ್ಮ ಮಕ್ಕಳ ಮೇಲೆ ಬೀರದಂತೆ ತಡೆಯುವ ಸಾಧನೋಪಾಯಗಳನ್ನು ಬುದ್ಧಿವಂತರಾದ ಮಹಾಜನರೂ ಹಾಗೂ ಸರ್ಕಾರವೂ ಕಂಡುಹಿಡಿಯಬೇಕಾಗಿದೆ.

ತಮಿಳು ಅಕಾಡೆಮಿಯವರು ನಾನಾ ವಿಷಯಗಳ ಪುಸ್ತಕಗಳನ್ನು ಪ್ರಕಟಿಸುವ ಬಗ್ಗೆ ಉತ್ತೇಜನವೀಯುವುದಕ್ಕಾಗಿ ಪ್ರತಿ ವಿಷಯದಲ್ಲಿಯೂ ಅತ್ಯುತ್ತಮ ಕೃತಿಗೆ ೫೦೦ ರೂ. ಗಳನ್ನು ಮತ್ತು ಅರ್ಹತಾಪತ್ರಗಳನ್ನೂ ಕೊಡುವರು. ಈ ಉದ್ದೇಶಕ್ಕಾಗಿ ವಿಷಯಗಳನ್ನು ೧೨ ಭಾಗಗಳನ್ನಾಗಿ ವಿಂಗಡಿಸಲಾಗಿದೆ. ಸಣ್ಣಕಥೆಗಳು ಕಾದಂಬರಿಗಳು ಮತ್ತು ನಾಟಕಗಳು, ಪ್ರಬಂಧಗಳು ಕಾವ್ಯ ಮತ್ತು ಗೀತರಚನೆ ಭೌತಶಾಸ್ತ್ರ ಮತ್ತು ರಸಾಯನ ಶಾಸ್ತ್ರ ಅರ್ಥಶಾಸ್ತ್ರ ಮತ್ತು ಇತಿಹಾಸಗಳಂತಹ ಸಮಾಜ ವಿಜ್ಞಾನ, ಗಣಿ ತಶಾಸ್ತ್ರ, ಖಗೋಳಶಾಸ್ತ್ರ ಮತ್ತು ಎಂಜಿನಿಯರಿಂಗ್ ಶಿಶುಸಾಹಿತ್ಯ ವೈದ್ಯ ಕೀಯ ಮತ್ತು ಆರೋಗ್ಯ ಶಿಕ್ಷಣ, ದರ್ಶನಶಾಸ್ತ್ರ ಮತ್ತು ಮನಶ್ಶಾಸ್ತ್ರ

ಮತ್ತು ಸಸ್ಯಶಾಸ್ತ್ರ, ಭೂಗರ್ಭಶಾಸ್ತ್ರ ಮತ್ತು ವ್ಯವಸಾಯ ಪ್ರತಿವರ್ಷವೂ ಆರು ವರ್ಗಗಳಿಗೆ ಬಹುಮಾನಗಳನ್ನು ಏಕಕಾಂತದ ಕ್ರಮದಲ್ಲಿ ಕೊಡಲಾಗುವುದು. ಈ ಎಂಟುವರ್ಷಗಳಲ್ಲಿ ಇಷ್ಟೇ ಪುಸ್ತಕಗಳು ಮಾತ್ರ ಪ್ರಕಟವಾದವೆಂದು ಭಾವಿಸಬಾರದು. ತಮ್ಮ ಪುಸ್ತಕಗಳು ಸ್ಪರ್ಧೆಗೆ ಅರ್ಹವಲ್ಲವೆಂದು ನೂರಾರು ಪುಸ್ತಕಗಳನ್ನು ಲೇಖಕರು ಅಕಾಡಮಿಯವರ ಅವಗಾಹನೆಗಾಗಿ ಕಳುಹಿಸದಿರಬಹುದು. ಈ ಪುಸ್ತಕಗಳ ವಿಂಗಡಿಕೆ ಅಥವಾ ವರ್ಗೀಕರಣವು ತಮಿಳಿನಲ್ಲಿ ಪ್ರಕಟವಾಗಿರುವ ಪುಸ್ತಕಗಳ ಬಗ್ಗೆ ಒಂದು ಸ್ಥೂಲ ಅಭಿಪ್ರಾಯವನ್ನು ಕೊಡುವುದು. ಮೇಲೆ ಸೂಚಿಸಿರುವ ವರ್ಗೀಕರಣದಲ್ಲಿ ಮೊದಲನೆಯ ಐದು ಸಾಹಿತ್ಯಕ್ಕೆ ಸಂಬಂಧಿಸಿದವು. ಉಳಿದವು ವಿಜ್ಞಾನ ಹಾಗೂ ಕಲೆ ವಸ್ತು ವಿಷಯಗಳಿಗೆ ಸಂಬಂಧಿಸಿದವು. ಸ್ವೀಕರಿಸಿದ ಒಟ್ಟು ೭೬೮ ಪುಸ್ತಕಗಳಲ್ಲಿ ೫೭೦ ಸಾಹಿತ್ಯಕ್ಕೆ ಸಂಬಂಧಿಸಿದವು. ೮೬ ಪುಸ್ತಕಗಳು ವಿಜ್ಞಾನಕ್ಕೆ ಸಂಬಂಧಿಸಿದವು. ೬೭ ಅರ್ಥಶಾಸ್ತ್ರ ಮತ್ತಿತರ ವಿಷಯಗಳಿಗೆ ಸಂಬಂಧಿಸಿದವು ೪೫ ಪುಸ್ತಕಗಳು ಶಿಸುಸಾಹಿತ್ಯಕ್ಕೆ ಸಂಬಂಧಿಸಿದವು.

ಆಧುನಿಕ ತಮಿಳು ಸಾಹಿತ್ಯದ ಇತಿಹಾಸವು ಆಸಕ್ತಿಯುತವಾಗಿದೆ. ನಮ್ಮ ಪ್ರಾಚೀನ ಸಾಹಿತ್ಯದಲ್ಲಿ ಅನೇಕವು ಅಂತರ್ಧಾನವಾಗಿದ್ದವು. ಇವನ್ನು ಬೆಳಕಿಗೆ ತಂದ ಕೀರ್ತಿಯು ದಿವಂಗತ ಶ್ರೀ ಉ. ವೆ. ಸ್ವಾಮಿನಾಥ ಅಯ್ಯರ್‌ರವರಿಗೆ ಸಲ್ಲಬೇಕು. ಈ ಶತಮಾನದ ಆದಿ ಭಾಗದಲ್ಲಿ ಇವರು ತಮಿಳು ಪಂಡಿತರಾಗಿದ್ದರು. ಅಪೂರ್ವ ಪಾಂಡಿತ್ಯವನ್ನೂ ಪಟ್ಟು ಹಿಡಿದು ಕೆಲಸ ಮಾಡುವ ಶಕ್ತಿಯನ್ನು ಪಡೆದಿದ್ದ ಶ್ರೀ ಅಯ್ಯರ್‌ರವರು ಹಳ್ಳಿಯಿಂದ ಹಳ್ಳಿಗೆ ಸುತ್ತುತ್ತಾ ಓಲೆಗರಿಗಳಲ್ಲಿ ಬರೆದಿದ್ದ ಸಾಹಿತ್ಯ ಕೃತಿಗಳನ್ನು ಹೇರಳ ಪ್ರಮಾಣದಲ್ಲಿ ಸಂಗ್ರಹಿಸಿದರು. ಈ ಓಲೆಗರಿಗಳಲ್ಲಿ ಅನೇಕವು ಗೆದ್ದಲು ಹುಳುಗಳಿಗೆ ಆಹಾರವಾಗಿದ್ದವು. ಇಂತಹವನ್ನು ತಾಳ್ಮೆಯಿಂದ ಅರ್ಥ ಮಾಡಿಕೊಂಡು ಪ್ರಕಟಿಸಿದರು. ಇವರು ಪ್ರಕಟಿಸಿದ ಕಾಲದಲ್ಲಿ ಇಂತಹ ಕಾರ್ಯಗಳಿಗೆ ಪ್ರೋತ್ಸಾಹವಿರಲಿಲ್ಲ. ಇವರು ಈ ಮಹತ್‌ಕಾರ್ಯವನ್ನು ನೆರವೇರಿಸದಿದ್ದರೆ ನಾವು ಶಾಶ್ವತವಾಗಿ ನಮ್ಮ ಪ್ರಾಚೀನ ಉದ್‌ಗ್ರಂಥಗಳನ್ನು ಕಳೆದುಕೊಳ್ಳುತ್ತಿದ್ದೆವು. ವೈಸ್‌ರಾಯುಗಳು, ಗೌರ್ನರ್‌ಗಳು ಮತ್ತು ಇತರರಿಗ ಗಿ ಪ್ರತಿಮೆಗಳನ್ನು ನಿರ್ಮಿಸುತ್ತಿದ್ದಂತಹ ಕಾಲದಲ್ಲಿ ತಮಿಳು ಜನರು ಬರೀ ಪಂಡಿತರಾಗಿದ್ದ ಶ್ರೀ ಉ. ವೆ. ಸುಬ್ರಹ್ಮಣ್ಯ ಅಯ್ಯರರಿಗೆ ತಮ್ಮ ಕೃತಜ್ಞತೆಯನ್ನು

ಸೂಚಿಸುವುದಕ್ಕಾಗಿ ಮದ್ರಾಸಿನ ಮರೀನಾ ಪ್ರದೇಶದಲ್ಲಿ ಸಮುದ್ರದೆದುರಿಗೆ ಇರುವ ಪ್ರೆಸಿಡೆನ್ಸಿ ಕಾಲೇಜಿನ ಆವರಣದಲ್ಲಿ ಶ್ರೀ. ಅಯ್ಯರರ ಭವ್ಯ ಪ್ರತಿಮೆಯೊಂದನ್ನು ನಿರ್ಮಿಸಿದ್ದಾರೆ.

ಆಧುನಿಕ ತಮಿಳು ಸಾಹಿತ್ಯದಲ್ಲಿ ಅತ್ಯುತ್ತಮ ಕವಿಯೆಂದರೆ ಸುಬ್ರಹ್ಮಣ್ಯ ಭಾರತಿಯವರು. ತಮಿಳು ಗೀತೆಗಳು ಸಾಧಾರಣವಾಗಿ ಧರ್ಮಕ್ಕೆ ಸಂಬಂಧಿಸಿವೆ. ಭಾರತಿಯವರಿಗೆ ಸ್ವದೇಶಾಭಿಮಾನವೇ ಧರ್ಮವಾಯಿತು. ದೇಶಕ್ಕಾಗಿ ತ್ಯಾಗ, ಅಚಲ ಶ್ರದ್ಧೆಗಳನ್ನು ಭಾರತಿಯವರು ತಮ್ಮ ಗೀತೆಗಳಲ್ಲಿ ತುಂಬಿದರು. ಇತ್ತೀಚೆಗೆ ದಿವಂಗತರಾದ ಕವಿಮಣಿ ದೇಶಿಕ ವಿನಾಯಕಂ ಪಿಳ್ಳೆಯವರು ನಿಸ್ಸಂಶಯವಾಗಿಯೂ ಸರ್ವೋತ್ತಮರಾದ ಕವಿಗಳು ಗಾಂಧೀಜಿಯವರ ತತ್ತ್ವೋಪದೇಶಗಳನ್ನು ಕವನಗಳಲ್ಲಿ ಹೆಚ್ಚು ಪ್ರಚಾರದಲ್ಲಿ ತಂದವರು ಶ್ರೀ ನಾಮಕ್ಕಲ್ ರಾಮಲಿಂಗಂ ಪಿಳ್ಳೆಯವರು. ಇವರನ್ನು ತಮಿಳು ಶ್ರೇಷ್ಠ ಕವಿಗಳನ್ನಾಗಿ ಆರಿಸಲಾಗಿದೆ. ಇತ್ತೀಚೆಗೆ ಅನೇಕ ಗೀತರಚನಕಾರರು ಬೆಳಕಿಗೆ ಬಂದಿದ್ದಾರೆ. ಕಳೆದ ಶತಮಾನದಲ್ಲಿ ಗೋಪಾಲಕೃಷ್ಣ ಭಾರತಿಯವರು ನಿಸ್ಸಂಶಯವಾಗಿಯೂ ಅತ್ಯುತ್ತಮ ರಚನಕಾರರಾಗಿದ್ದಾರೆ. ಇಂದು ಪ್ರಸಿದ್ಧರಾಗಿರುವ ರಚನಕಾರರಲ್ಲಿ ಶ್ರೀ ಶುದ್ಧಾನಂದ ಭಾರತಿ, ಶ್ರೀ ಎಂ. ಪಿ ಪೆರಿಯಸ್ವಾಮಿ ಕೂರನ್ ಮತ್ತು ಕಂಬ ದಾಸರವರ ಹೆಸರುಗಳನ್ನು ಉಲ್ಲೇಖಿಸಬಹುದು. ಭಾರತಿ ದಾಸನ್‌ರವರ ಅಭಿಪ್ರಾಯಗಳನ್ನು ಅನೇಕರು ಒಪ್ಪದಿದ್ದಾಗ್ಯೂ ಅವರ ಹೆಸರನ್ನು ಉಲ್ಲೇಖಿಸದೇ ಇರಲು ಸಾಧ್ಯವಿಲ್ಲ.

ಜನಪ್ರಿಯ ಸಾಹಿತ್ಯ ಸಂಬಂಧದ ಪತ್ರಿಕೆಗಳಲ್ಲಿ ಸಣ್ಣ ಕತೆಗಳು ಹೆಚ್ಚು ಸ್ಥಳವನ್ನು ಆಕ್ರಮಿಸುವವು. ಅಸಂಖ್ಯಾತ ಸಣ್ಣ ಕತೆಗಾರರಿದ್ದಾರೆ. ಇವರೆಲ್ಲರ ಹೆಸರುಗಳನ್ನು ಇಲ್ಲಿ ಉಲ್ಲೇಖಿಸುವುದಕ್ಕೆ ಸಾಧ್ಯವಿಲ್ಲ. ಆದರೆ ಇವರಲ್ಲಿ ಒಬ್ಬರು ಮಾತ್ರ ಸಣ್ಣ ಕತೆಗಳು ಮತ್ತು ಐತಿಹಾಸಿಕ ಕಾದಂಬರಿಗಳನ್ನು ರಚಿಸಿ ಪ್ರಸಿದ್ಧರಾದರು. ಇವರೇ "ಕಲ್ಕಿ" ಯೆಂದು ಪ್ರಸಿದ್ಧಿ ಹೊಂದಿರುವ ಪ್ರಸಿದ್ಧಿ ಹೊಂದಿರುವ ಶ್ರೀ ಆರ್. ಕೃಷ್ಣಮೂರ್ತಿಯವರು. ಇವರ ಭಾಷಾಭಿಮಾನವು ಅಕುಲವಾದದ್ದು. ಇವರು 'ವಿಡುದಲೈ' ಪತ್ರಿಕೆಯ ಸಂಪಾದಕರಾಗಿ ತಮ್ಮ ಕಾರ್ಯ ಚಟುವಟಿಕೆಯನ್ನು ಪ್ರಾರಂಭಿಸಿದರು. ಗಾಂಧೀಜಿಯವರ ನಾಯಕತ್ವದಲ್ಲಿ ಇವರು ಸ್ವಾತಂತ್ರ್ಯ ಸಂಗ್ರಾಮದಲ್ಲಿ

ತುರಂಗ ವಾಸವನ್ನು ಅನುಭವಿಸಿದರು. ಇವರ ನಾಯಕತ್ವದಲ್ಲಿ ಆನಂದ ವಿಕಟನ ಪ್ರಸಿದ್ಧಿ ಹೊಂದಿತು. ಇವರು ತಮ್ಮ ಕಾವ್ಯನಾಮದ 'ಕಲ್ಕಿ' ಎಂಬ ಹೆಸರಿನಲ್ಲಿಯೇ 'ಕಲ್ಕಿ' ಎಂಬ ವಾರಪತ್ರಿಕೆಯನ್ನು ಹೊರಡಿಸಿದರು. ಇದು ಬಹಳವಾಗಿ ಜನಪ್ರಿಯವಾಗಿದ್ದು ಸುಮಾರು ೬೦ ಸಹಸ್ರ ಪ್ರತಿಗಳ ಪ್ರಚಾರದಲ್ಲಿತ್ತು. ತಮಿಳು ನಾಡಿನ ಜನರು ಕಾತುರದಿಂದ ಈ ಪತ್ರಿಕೆಯ ಆಗಮನವನ್ನು ವೀಕ್ಷಿಸುತ್ತಿದ್ದರು. ಇವರು ಅತ್ಯುತ್ತಮ ಐತಿಹಾಸಿಕ ಕಾದಂಬರಿಗಳನ್ನು ರಚಿಸಿದರು. ಇವರ ಕೃತಿಗಳಲ್ಲಿ "ಶಿವಕಾಮಿಯಿನ್ ಶಪಥಂ" ಮತ್ತು "ಪಾರ್ಥಿವನ್ ಕನವು" ಪ್ರಖ್ಯಾತವಾದವು. ಇತ್ತೀಚೆಗೆ ಇವರು ನಿಧನರಾಗಿದ್ದು ತಮಿಳು ಸಾಹಿತ್ಯಕ್ಕೆ ಅಪಾರ ನಷ್ಟ ಸಂಭವಿಸಿದೆ.

ಪ್ರಬಂಧಕಾರರಲ್ಲಿ ಶ್ರೀ ಎಂ. ವರದರಾಜನ್, ಶ್ರೀ ಕಿ.ಪ. ಜಗನ್ನಾಥನ್ ಮುತ್ತಿತರ ಹೆಸರುಗಳನ್ನು ಸೂಚಿಸಬಹುದು. ಆಧುನಿಕ ವೈಜ್ಞಾನಿಕ ವಿಷಯಗಳ ಲೇಖಕರಲ್ಲಿ ಸರ್ವ ಶ್ರೀ ಆರ್. ಕೆ. ವಿಶ್ವನಾಥನ್ ಮತ್ತು ಪಿ. ಎನ್. ಅಪ್ಪಾಸ್ವಾಮಿಯವರ ಹೆಸರುಗಳನ್ನು ಉಲ್ಲೇಖಿಸಬಹುದು. ಕುಮಾರಿ ಇ. ಟಿ. ರಾಜೇಶ್ವರಿಯವರು ವಿಜ್ಞಾನ ಹಾಗೂ ಮನಶ್ಶಾಸ್ತ್ರಗಳ ಬಗ್ಗೆ ಸೊಗಸಾದ ಪುಸ್ತಕಗಳನ್ನು ರಚಿಸಿದ್ದಾರೆ. ಇವರು ಇತ್ತೀಚಿಗೆ ಇಹಲೋಕವನ್ನು ತ್ಯಜಿಸಿದ್ದು ತಮಿಳುಸಾಹಿತ್ಯಕ್ಕೊಂದು ಆಘಾತವೆನ್ನಬಹುದು.

ಆಧುನಿಕ ವೈಜ್ಞಾನಿಕ ವಿಷಯಗಳ ಬಗ್ಗೆ ಅಪೇಕ್ಷಿಸುವಷ್ಟು ಕೃತಿಗಳಿಲ್ಲ. ಈ ವಿಷಯಗಳ ಬಗ್ಗೆ ಜನರು ಆಸಕ್ತಿವಹಿಸುತ್ತಿದ್ದಾರೆ. ಲೇಖಕರೂ ಮತ್ತು ಪ್ರಕಟಣಕಾರರೂ ಜನರ ಆಕಾಂಕ್ಷೆಗಳನ್ನು ಈಡೇರಿಸಲು ಮುಂದೆ ಬರುತ್ತಿದ್ದಾರೆ ವೈಜ್ಞಾನಿಕ ವಿಷಯಗಳನ್ನು ಕುರಿತು ಬರೆದ ಲೇಖನಗಳನ್ನೊಳಗೊಂಡ 'ಕಲೈಕದಿರ್' ನಂತಹ ಪತ್ರಿಕೆಗಳು ಅಲ್ಪ ಸಂಖ್ಯೆಯಲ್ಲಿವೆ. ಆದರೆ ಇವು ಪ್ರಚಾರ ದೃಷ್ಟಿಯಿಂದ ಲಾಭಕರವಾಗಿಲ್ಲ. ನಮ್ಮ ಸಾಹಿತ್ಯಗಳಲ್ಲಿ ಇವು ಸ್ಥಿರ ಸ್ಥಾನ ಪಡೆಯುವವೆಂದು ನಾನು ಆಶಿಸುತ್ತೇನೆ. ಅರ್ಥಶಾಸ್ತ್ರ ಮತ್ತು ರಾಜನೀತಿ ಶಾಸ್ತ್ರಗಳಲ್ಲಿ ಅನೇಕ ಪುಸ್ತಕಗಳನ್ನು ಪ್ರಕಟಿಸಲಾಗಿದೆ.

ಮಹಾತ್ಮ ಗಾಂಧಿಯವರ ಕೃತಿಗಳೆಲ್ಲವನ್ನೂ ತಮಿಳು ಭಾಷೆಯಲ್ಲಿ ಹತ್ತು ಸಂಪುಟಗಳಲ್ಲಿ ತಿರುಪ್ಪೂರು ಗಾಂಧೀ ಸ್ಮಾರಕ ನಿಧಿಯವರು ಅಚ್ಚುಹಾಕಿಸಿದ್ದಾರೆ. ರಾಷ್ಟ್ರಪಿತನ ಕೃತಿಗಳೆಲ್ಲವನ್ನು ಒಟ್ಟಿಗೆ ಪ್ರಕಟಿಸುವ ಕಾರ್ಯ

ವನ್ನು ಇಂಗ್ಲೀಷ್ ಭಾಷೆಯಲ್ಲಿ ಕೂಡ ನಡೆಸಿಲ್ಲ. ನವಜೀವನ ಪ್ರಕಟಣಾ ಟ್ರಸ್ಟಿನವರು ಗಾಂಧೀಜೀಯವರ ಅನೇಕ ಕೃತಿಗಳನ್ನು ಪ್ರತ್ಯೇಕವಾಗಿ ಪ್ರಕಟಿಸಿದ್ದಾರೆ. ಗಾಂಧೀಜೀಯವರ ಕೃತಿಗಳೆಲ್ಲವೂ ತಮಿಳಿನಲ್ಲಿ ಇನ್ನು ಕೆಲವು ವರ್ಷಗಳಲ್ಲಿಯೇ ಪ್ರಕಟವಾಗುವುವೆಂದು ನಾನು ಭಾವಿಸುತ್ತೇನೆ.

ಸಂಶೋಧನಾ ಕ್ಷೇತ್ರವು ಜನಪ್ರಿಯ ಕ್ಷೇತ್ರವಲ್ಲ. ಸಂಶೋಧನಾ ಕಾರ್ಯಕ್ಕೆ ಸಂಬಂಧಿಸಿದ ಪ್ರಕಟಣೆಯನ್ನು ಅಪರೂಪವಾಗಿ ಲಾಭದಾಯಕ ವಾಗಿ ವಿಕ್ರಯಿಸಬಹುದು. ಭಾಷಾ ಪ್ರೇಮದಿಂದ ವ್ಯಕ್ತಿಗಳೂ ಮತ್ತು ಸಂಸ್ಥೆಗಳೂ ಸಂಶೋಧನೆಗೆ ಸಂಬಂಧಪಟ್ಟ ಕೃತಿಗಳನ್ನು ಪ್ರಕಟಿಸಲು ಮುಂದೆ ಬರುತ್ತಿರುವುದೊಂದು ಶುಭ ಸಮಾಚಾರವೆನ್ನಬಹುದು. ಶೈವಮತದ ಸಾಧು ಸಂತರ ಜೀವನ ಚರಿತ್ರೆಗಳನ್ನು ಕುರಿತು ೧೧ನೆಯ ಶತಮಾನದಲ್ಲಿ ರಚಿತ ವಾದ "ಪೆರಿಯ ಪುರಾಣಂ" ಮಹಗ್ರಂಥವಾಗಿ ಪರಿಣಮಿಸಿದೆ. ೧೨ ವರ್ಷ ಗಳ ಸತತ ಶ್ರಮದ ಫಲವಾಗಿ ಶ್ರೀ. ಕೆ. ಸಿ. ಸುಬ್ರಹ್ಮಣ್ಯ ಮುದಲಿಯಾ ರರು ಈ ಮಹದ್ಗ್ರಂಥದ ಬಗ್ಗೆ ವ್ಯಾಖ್ಯಾನ ಬರೆದಿದ್ದಾರೆ. ಶ್ರೀ. ಮ.ಹಾ ಮಹೋಪಾಧ್ಯಾಯ ಕದಿರೇಶನ್ ಚೆಟ್ಟಿಯಾರ್‌ರವರು 'ತಿರುವಾಚಕಂ' ಬಗ್ಗೆ ಬರೆದಿರುವ ಸಂಶೋಧನಾತ್ಮಕ ವ್ಯಾಖ್ಯಾನ ಕೂಡ ಹಿರಿಯ ಗ್ರಂಥವಾಗಿ ಪರಿಣಮಿಸಿದೆ. ಆದರೆ "ಪೆರಿಯ ಪುರಾಣಂ" ಗ್ರಂಥದಷ್ಟು ಪ್ರಮಾಣದಲ್ಲಿ ಹಿರಿಯದ್ದೇನಲ್ಲ. ತಿರುಕ್ಕುರಳ್ ಬಗ್ಗೆ ದೊರೆತ ಎಲ್ಲ ಪ್ರಾಚೀನ ಭಾಷ್ಯ ಗಳೆಲ್ಲವನ್ನೂ ಧರ್ಮಪುರಿ ಅಧೀನಂ ಸಂಗ್ರಹಿಸಿದೆ. ಇವೆಲ್ಲವನ್ನು ಮೂರು ಸಂಪುಟಗಳಲ್ಲಿ ಪ್ರಕಟಿಸಲಿದೆ. ಶ್ರೀರಾಮಕೃಷ್ಣ ಮಿಷನ್ ವಿದ್ಯಾಲಯದ ವರು 'ತಿರುಕ್ಕುರಳ್' ಬಗ್ಗೆ ಅನುಕ್ರಮಣಿಕೆಗಳನ್ನು ಶೋಧಿಸುವ ಮಹತ್ಕಾ ರ್ಯದಲ್ಲಿ ತೊಡಗಿದ್ದಾರೆ. 'ತಿರುಕ್ಕುರಳ್' ಸುಮಾರು ಕ್ರಿ॥ ಪೂ. ೨ನೆಯ ಶತಮಾನಕ್ಕೆ ಸೇರಿದ್ದು.

ಅನುಕ್ರಮಣಿಕೆಗಳ ಅನ್ವೇಷಣ ಕಾರ್ಯವು ಶ್ರೀ. ಕಿ. ವ. ಜಗನ್ನಾಥನ್ ರವರ ವಶದಲ್ಲಿದೆ. ಈ ಮಹತ್ಕಾರ್ಯದ ಉದ್ಘಾಟನೆಯನ್ನು ಒಂದೆರಡು ವರ್ಷಗಳ ಹಿಂದೆ ನಮ್ಮ ರಾಷ್ಟ್ರಾಧ್ಯಕ್ಷ ಡಾ. ರಾಜೇಂದ್ರಪ್ರಸಾದರು ನೆರ ವೇರಿಸಿದರು. ಅನುಕ್ರಮಣಿಕೆಗಳನ್ನು ಅನತಿಕಾಲದಲ್ಲಿಯೇ ಪ್ರಕಟಿಸುವ ನಿರೀಕ್ಷಣೆಯಿದೆ.

ಭಾರತದಾದ್ಯಂತವೂ ಹೊಸ ಕ್ಷೋಭೆ, ಹೊಸ ಭಾವನೆಗಳನ್ನು ನಾವು ಕಾಣಬಹುದು. ಈ ಚಲನಾತ್ಮಕ ಮನಃ ಪ್ರವೃತ್ತಿಗೆ ನಮ್ಮ ಭಾಷೆಗಳು ಇನ್ನೂ ಚೇತರಿಸಿಕೊಳ್ಳಬೇಕಾಗಿವೆ. ಇಲ್ಲಿಯ ವರೆವಿಗೆ ಅವು ತಕ್ಕ ಸ್ಥಾನಮಾನಗಳನ್ನು ಪಡೆಯದಿರುವುದಕ್ಕೆ ಪರಭಾಷೆಯೊಂದು ಕಾಲೇಜುಗಳಲ್ಲಿಯೂ ಮತ್ತು ಆಡಳಿತಗಳಲ್ಲಿಯೂ ಬೋಧನೆಯ ಮಾಧ್ಯಮವಾಗಿರುವುದು ಒಂದು ಕಾರಣವಾಗಿದೆ. ಈ ವಿಷಯದಲ್ಲಿ ವಿಶ್ವವಿದ್ಯಾನಿಲಯಗಳಿಗೂ ಮತ್ತು ಸರಕಾರಕ್ಕೂ ಹೆಚ್ಚಿನ ಜವಾಬ್ದಾರಿಯಿದೆ. ದಕ್ಷತೆಯನ್ನು ಬಲಿಗೊಡಬಾರದಾಗ್ಯೂ, ನಮ್ಮ ದೇಶಬಾಂಧವರಲ್ಲಿ ಇಂಗ್ಲೀಷ್ ಶಿಕ್ಷಣ ಸೌಲಭ್ಯ ಪಡೆದಿರುವ ಲಕ್ಷಾಂತರ ಸಂದಿ ಮಹಿಳೆಯರೂ ಪುರುಷರೂ ದೇಶದ ಸಾಂಸ್ಕೃತಿಕ ಹಾಗೂ ಬುದ್ಧಿಗ್ರಹಣದ ಜೀವನದಲ್ಲಿ ತಕ್ಕ ಸ್ಥಾನಮಾನಗಳನ್ನು ಗಳಿಸುವ ಬಗ್ಗೆ ಬದಲಾವಣೆಗಳುಂಟಾಗುವುದು ಅವಶ್ಯಕ.

---

## ಆದರ್ಶ ಸ್ವಾಮಿಗಳು

( ಬರೆದವರು:— ಶ್ರೀ ಶಿವಾನಂದ ಸ್ವಾಮಿಗಳು ಗವಿಮಠ, ತೆಗ್ಗಿಹಳ್ಳಿ. )

ವಿಜಾಪುರ ನಾಗರಿಕರ ಭಾಗ್ಯ ತೆರೆದಿದೆ ಎನ್ನುವಂತೆ ಗದುಗಿನ ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳು ಒಂದು ಈಗ ೩ ತಿಂಗಳುಗಳಿಂದ ವಚನ ಪ್ರವಚನ, ಗೀತಾ ಪ್ರವಚನ, ಸಿದ್ಧಾಂತ ಶಿಖಾಮಣಿ ಪ್ರವಚನ, ಶೂನ್ಯ ಸಂಪಾದನೆಯ ಪ್ರವಚನ ಮೊದಲಾದ ಪ್ರವಚನಗಳನ್ನು ಒಳ್ಳೇ ಸುಶ್ರಾವ್ಯವಾಗುವಂತೆ ಹೇಳುತ್ತಿರುವರು. ಹೀಗಂತೆ ಸರ್ವ ಜಾತಿಯ ಸ್ತ್ರೀಪುರುಷರು ಕಿಕ್ಕಿರಿದು ಕಾಲಕ್ಕೆ ಸರಿಯಾಗಿ ಮೊದಲೇ ಬಂದು ಕುಳಿತಿರುವದೇ ಸಾಕ್ಷಿ. ಮುಂಜಾನೆ ಒಳ್ಳೇ ಥಂಡಿ. ೭ ಘಂಟೆಯ ಪೂರ್ವದಲ್ಲಿಯೇ ಜನರು ನೆರೆತಿರುವದನ್ನು ಲಕ್ಷಿಸಿದರೆ ಎಲ್ಲರಿಗೂ ಈ ಮಾತು ಹೊಳೆಯದಿರಲಾರದು. ಹಳೇದಕ್ಕೆ ಬದ್ಧವಾದ ಜನರಲ್ಲಿ ಕ್ರಾಂತಿಯನ್ನೇ ಎಬ್ಬಿಸಿದ್ದಾರೆ. ಮೂಢಾಚಾರ, ಮೂಢ ನಂಬಿಗೆಗಳನ್ನು ಚನ್ನಾಗಿ ನ್ಯಾಯನಿಷ್ಠುರವಾಗಿ ಬಯಲಿಗೆ

ಳಿಯುವದರಲ್ಲಿ ಒಳ್ಳೇ ಕುಶಲರು. ಜನರಿಗೆ ಹೊಸ ನೇತ್ರಗಳು ಬಂದಂತೆ ಆಗಿವೆ. ಅವರು ಹೇಳುವ ಶೈಲಿಯು ಬಹು ಸರಳ. ಒಳ್ಳೇ ಕಠಿಣವಾದ ತತ್ವಗಳನ್ನು ಸಾಮಾನ್ಯರಿಗೂ ಕೂಡ ತಿಳಿಯುವಂತೆ, ಬಹು ಮನರಂಜನೆಯಾಗುವಂತೆ ಹೇಳುವದನ್ನು ನೋಡಿದರೆ ಯಾರಿಗೆ ಆನಂದವಾಗಲಿಕ್ಕಿಲ್ಲ? ಹಿಂದಿನ ಅನೇಕ ಪುರಾಣಿಕರನ್ನು, ಶಾಸ್ತ್ರಿಗಳನ್ನು, ಕೀರ್ತನಕಾರರನ್ನು ಸಹಜವಾಗಿಯೇ ಮರೆಸಿರುವರು. ವಿಜಾಪುರದಂಥ ಪಟ್ಟಣದಲ್ಲಿ ತಿಂಗಳೊಪ್ಪತ್ತಿನಲ್ಲಿ ಜ್ಞಾನದ ಕಡಗಂಟನ್ನೇ ದಿವಾಳಿ ಮಾಡಿಕೊಳ್ಳತಕ್ಕವರೇ ಹೆಚ್ಚು. ಆದರೂ ಇವರು ೩ ೪ ತಿಂಗಳಾದರೂ ಜ್ಞಾನಪ್ರವಾಹವು ಒಂದೇ ಸಮನೆ ಮೊದಲಿನ ಉತ್ಸಾಹಕ್ಕಿಂತ ಹೆಚ್ಚಿನ ಉತ್ಸಾಹದಿಂದ ಮೊದಲಿನ ಪ್ರವಾಹಕ್ಕಿಂತ ಹೆಚ್ಚಿನ ಪ್ರವಾಹದಿಂದ ಬಿಟ್ಟುಬಿಡದೆ ನಿತ್ಯ ಎರಡು ಸಲ ಸದಾ ಹರಿಯುತ್ತಿರುವದನ್ನು ನೋಡಿದರೆ ಯಾರಿಗೆ ಇವರ ಬಗ್ಗೆ ಅಭಿಮಾನ ಆನಂದಗಳೆನಿಸವು?

ಇವರು ಒಳ್ಳೇ ಶಾಂತ ಸ್ವಭಾವದವರು. ಇವರ ಹಾಸ್ಯವು ಬಹು ಮಧುರವಾಗಿದೆ. ಅದರಲ್ಲಿ ಅಂತಃಕರಣಕ್ಕೆ ಒಳ್ಳೇ ಬಲವಾದ ಉಪದೇಶಯುಕ್ತವಾದ ಪೆಟ್ಟುಗಳು ತಾಕುವದು ಅನುಭವಕ್ಕೆ ಬರುವದು. ಶೃಂಗಾರ ಅಶ್ಲೀಲದ ಲವಲೇಶವಿಲ್ಲ. ಆದರೂ ವ್ಯಂಗ್ಯೋಕ್ತಿಗಳಿಂದಲೇ ನುಡಿದು ಜನರ ಮನಸ್ಸು ನೋಯದಂತೆ ಸಹಜ ಆಡಿ ತೋರಿಸುವರು. ಇವರು ತಮ್ಮ ಪ್ರವಚನದಲ್ಲಿ ಹಿಂದಿನ ಪ್ರವಚನಕಾರರಂತೆ ಗಾಯನದ ಅವಶ್ಯಕತೆ ಎಳ್ಳಷ್ಟು ಇಲ್ಲೆಂದು ತೋರಿಸಿಕೊಡುತ್ತಿರುವರು. ಪುರಾಣದಲ್ಲಿ ಮನರಂಜನೆಗೆ ಏನಾದರೂ ಬೇಕೆನ್ನುವವರ ಸಂಖ್ಯೆ ಬಹಳೇ ಇತ್ತು. ಈಗ ಅದರ ಹುಚ್ಚುತನವು ಪ್ರವಚನದಲ್ಲಿ ಅವಶ್ಯಕತೆ ಇಲ್ಲೆಂದೆ ಎಲ್ಲರಿಗೂ ಅನಿಸಿದೆ. ಇನ್ನೂ ಹೆಚ್ಚು ವೇಳೆ ಹೇಳಿದರೆ ಬಹು ಒಳ್ಳೇದೆಂದು ಸರ್ವರ ಅಭಿಪ್ರಾಯವಿದ್ದಂತೆ ತೋರುವದು. ಪುರುಷರಿಗಿಂತ ಸ್ತ್ರೀಯರೇ ಪಟ್ಟು ಹೆಚ್ಚಿಗೆ ಬರುತ್ತಿರುವದನ್ನು ನೋಡಿದರೆ ವಿಜಾಪುರವು ಸುಧಾರಿಸಿ ಹಿಂದೆ ಉಳಿದವರೆಂಬ ಹೆಸರನ್ನು ಅಳಿಸುವದೆಂದು ಅನಿಸುವದು.

ಇವರ ಹೇಳಿಕೆಯಲ್ಲಿ ಅಹಂಕಾರವಾಗಲಿ ಮಮಕಾರವಾಗಲಿ ವ್ಯಕ್ತವಾಗುವದಿಲ್ಲ. ಇಲ್ಲವೆ ಯಾವ ಆಶೆಗಾಗಿಯೂ ಹೇಳುವದಿಲ್ಲೆಂದು ಅನಿಸುವದು. ಭಕ್ತ ವರ್ಗದವರು ಈ ಪ್ರಕಾರ ಗುರುಸ್ಥಲಕ್ಕೆ ಏರಿದ್ದು ನೋಡಿದರೆ

ವಿಚಾರವಂತರಿಗೆ ಬಹು ಆನಂದವೆನಿಸಿದೆ. ಆದರೆ ಸನಾತನಿಗಳಿಗೆ ಇದು ಬಹು ಒಡೆಯದ ಒಗಟಾಗಿಬಿಟ್ಟಿದೆ. ತಮ್ಮ ಪ್ರತಿಷ್ಠೆಯು ಕಡಿಮೆಯಾಗುವದೆಂದು ಕೆಲವು ಜನಗಳು ಗುಣಗುಟ್ಟುವದನ್ನೂ ಕೂಡ ಕೇಳಲಾಗಿದೆ ಆದರೂ ಅವರ ಆಟ ನಡೆಯಲಾರದಕ್ಕೆ ಅವರು ಮೌನ ತಾಳಿದ್ದಾರೆ. ಆದರೆ ಇವರು ಈ ಪ್ರಕಾರ ಈ ಸ್ವಾಮಿಗಳನ್ನು ಕಾಣದೆ ಪೂಜ್ಯ ಭಾವನೆಯಿಂದ ನೋಡಿದರೆ ಅವರಿಗೂ ಕೂಡ ಶ್ರೇಯಸ್ಸಾಗುವದರಲ್ಲಿ ಸಂದೇಹವಿಲ್ಲ. ಸದ್ಗುರುಗಳಿಗೆ ನಾವು ಯಾವ ಪ್ರಕಾರ ಮಾನ ಮನ್ನಣೆ ಕೊಟ್ಟು ಪ್ರೋತ್ಸಾಹಿಸುವೆವೋ ಅದರಂತೆ ಇವರಿಗೂ ಕೂಡ ಅವಶ್ಯ ಕೊಡುವದು ಉತ್ತಮ. ಬಸವನ ತತ್ವಗಳನ್ನು ಉಪದೇಶಿಸುವವರು ಎಲ್ಲರೂ ಆದರೂ ನಡೆಯುವವರು ಬಹು ಕಡಿಮೆ. ಆದರೂ ಈ ಸ್ವಾಮಿಗಳು ಬರೇ ಅವುಗಳನ್ನು ನುಡಿಯುವವರಲ್ಲ. ಅದರಂತೆ ನಡೆಯುವವರು. ನಮಗೆ ಕಲ್ಯಾಣದ ಶರಣರು ಪುನಃ ನಮ್ಮ ನಾಡಿನಲ್ಲಿ ಉದಯವಾಗಿರುವರೆಂದು ತೋರುವದು. ಇವೆಲ್ಲ ಶ್ರೇಯಸ್ಸು ಅವರ ಗುರುಗಳಾದ ಶ್ರೀ ಶಿವಾನಂದಸ್ವಾಮಿಗಳಿಗೆ ಸಲ್ಲತಕ್ಕಂಥಾದ್ದಾಗಿದೆ. ಇದೇ ಪ್ರಕಾರ ಅವರ ಶಾಖೆಯವರು ಇನ್ನೂ ಹಲವರಿರುವರೆಂದು ಕೇಳಿದ್ದೇವೆ. ದೇವರು ಇವರಿಗೆ ಹೆಚ್ಚಾಗಿ ಆಯುರಾರೋಗ್ಯವನ್ನು ಕೊಟ್ಟು ನಮ್ಮಲ್ಲಿಯವರ ಅಜ್ಞಾತನವನ್ನು ಹೊಡೆದೋಡಿಸಿ ಜ್ಞಾನವನ್ನು ಬೆಳಗಿಸಿ ನಮ್ಮ ನಾಡನ್ನು ಪುನಃ ಶರಣರ ನಾಡನ್ನಾಗಿ ಮಾಡಲೆಂದು ದೇವರಲ್ಲಿ ಬೇಡಿಕೊಳ್ಳುವೆನು. ಸರ್ವರೂ ಈ ಸ್ವಾಮಿಗಳ ಪ್ರವಚನದ ಲಾಭವನ್ನು ಪಡೆಯಬೇಕೆಂದು ಆಶಿಸುವೆವು.

---



# ವಿಶ್ವನೀತಿ

[ಲೇಖಕರುಃ— ಶ್ರೀಯುತ ಭೀ. ಶ್ರೀ. ಕುಲಕರ್ಣಿ, ವಿಜಾಪುರ.]

ವಿಶ್ವದಲ್ಲಿ ಮಾನವನು ಮಾನವನೆಂದೆನಿಸಿ ಬಾಳಲು ವಿಶ್ವನೀತಿಯೇ ಆತನ ಜೀವನಮಾರ್ಗವಾಗಬೇಕು. ಆವಾಗ್ಗೆ ಮಾತ್ರ ಆತನು ನಾಗರಿಕ ನೆನಿಸುವನು.

ವಿಶ್ವದಲ್ಲಿ ಪ್ರತಿಯೊಂದು ದೇಶಕ್ಕಾಗಲಿ, ಪ್ರತಿಯೊಂದು ರಾಜ್ಯಕ್ಕಾಗಲಿ ಇಲ್ಲವೆ ಪ್ರತಿಯೊಂದು ಉದ್ಯೋಗ ವ್ಯವಸಾಯಕ್ಕಾಗಲಿ, ನೀತಿಯುಂಟು. ಆ ನೀತಿಯನ್ನನುಸರಿಸಿ ನಡೆದರೆ ಮಾತ್ರ ವಿಶ್ವಜನರಿಂದ ಮಾನ್ಯತೆ ದೊರೆಯುವದು. ಆವಾಗ್ಗೆ ಮಾತ್ರ ಮಾನವನಲ್ಲಿ ಅಡಗಿದ ಜ್ಯೋತಿಯು ಪ್ರಕಾಶಮಯವಾಗಿ ಜಗತ್ತಿಗೆ ಕಾಣುವದು. ಇಷ್ಟೇ ಅಲ್ಲ, ಜನತೆಯ ಹೊಗಳಿಕೆಗೆ ಕಾರಣವಾಗುವದು. ಜಗತ್ತಿನಿಂದ ತೆರಳುವಾಗ್ಗೆ ಏನನ್ನೂ ಒಯ್ಯಲು ಬರಲಾರದು. ಆದರೆ ಒಂದೇ ಒಂದಾದ ಹೊಗಳಿಕೆ ಹಾಗು ತೆಗಳಿಕೆ ಇವೆರಡರಲ್ಲಿ ಒಂದೇ ಒಂದು ಮಾನವನ ಜೊತೆಗೆ ಒಯ್ಯಲು ಕಟ್ಟಿಟ್ಟ ಮೂಟೆಯು. ಜನ್ಮಿಸಿ ವ್ಯರ್ಥ ಮರಣಹೊಂದುವದರಿಂದ ಯಾವ ಪ್ರಯೋಜನವೂ ಇಲ್ಲ. ಮಾನವನಾಗಿ ಜನ್ಮಿಸಿ ಸಾಫಲ್ಯವೇನು ? ಹಾಗೆ ವ್ಯರ್ಥ ಜನ್ಮಿಸಿ ಮರಣಹೊಂದುವ ಮಾನವನು ಮರಣಹೊಂದಿದ ನಂತರ ಮರಣ ಹೊಂದಿದಂತೆಯೇ. ಆದರೆ ಜನತೆಯ ಹೊಗಳಿಕೆಗೆ ಪಾತ್ರನಾದ ಮಾನವನು ಮರಣಹೊಂದಿದರೂ ಆತನು ಅಮರನು. ಆ ಅಮರತ್ವವನ್ನು ಪಡೆಯಲು ಮಾನವನು ಪ್ರಯತ್ನ ಪಡಬಹುದು. ಆದರೆ ಜ್ಞಾನಪ್ರವಾಹದ ಸೆಳೆತವು ಎತ್ತ ಸಾಗುವದೋ ಯಾರಿಗೂ ತಿಳಿಯದು. ಆ ಸೆಳೆತಕ್ಕೆ ಸಿಲುಕಿ ಇಹಲೋಕದಿಂದ ಹರಿದುಹೋದ ಜನವೆಷ್ಟೋ ಇದ್ದಾರೆ. ಆದರೆ ಆ ಸೆಳವಿನ ವಿರುದ್ಧ ದಿಶೆಯನ್ನು ಬಹು ಪರಿಶ್ರಮದಿಂದ ಧುಮುಕಿ ಸಾಗಿ ಅಮರತ್ವವನ್ನು ಪಡೆದವರು ಎಷ್ಟೋ ಜನರಿದ್ದಾರೆ. ಅವರೆಲ್ಲರ ನೀತಿಯು ಕೇವಲ ಒಂದೇ ಇರದುದೇ ಇದಕ್ಕೆ ಕಾರಣ. ಆದುದರಿಂದಲೇ ಕೆಲವರು ಅಮರತ್ವವನ್ನು ಪಡೆದಿದ್ದಾರೆ. ಮಾನವನು ಅಮರತ್ವವನ್ನು ಪಡೆಯಬೇಕಾದರೆ ಜನಸೇವೆಯೇ ಜನಾರ್ಧನ ಸೇವೆಯೆಂದನುಸರಿಸಿ ನಡೆಯಬೇಕು. ಬಹು ಜನರ ನೀತಿಯು ಕೇವಲ ಒಂದೇ ಇರದ ಕಾರಣ ಇತರ ಜನರಿಂದ

ತಮ್ಮ ನೀತಿಯನು ಬದಲಿಸಿಕೊಳ್ಳುವರೇ ಹೊರತು ಪ್ರತಿಯೊಬ್ಬರಿಗೆ ಒಂದೇ ಒಂದು ನೀತಿಯುಂಟು. ಈ ನೀತಿಯನ್ನು ಅನೀತಿಯನ್ನಾಗಿ ಮಾಡಿಕೊಳ್ಳಲು ಮನವೇ ಕಾರಣ. ಈ ಜ್ಞಾನದ ವಿಷಯವಾಗಿ ಹಾಗು ಇನ್ನಿತರ ನೀತಿಯ ವಿಷಯವಾಗಿ ಆಳವಾಗಿ ವಿಚಾರಪಡಿಸಿದ ಲೇಖವೇ ಇದಾಗಿದೆ.

## ಮನಸ್ಸು (ಜ್ಞಾನ)

ಜ್ಞಾನವು ನೀರಿನ ಪ್ರವಾಹದಂತಿದೆ. ಇದು ನೀರಿನಂತೆ ಇಳುಕಲಿನತ್ತ ಸಾಗುವದಲ್ಲ. ಹಾಗೆ ಸಾಗಿದರೆ ಅದರ ಮಹತ್ವ ಉಳಿಯದು. ಜ್ಞಾನ ಪ್ರವಾಹವು ಏರಿನತ್ತ ಸಾಗಿದರೆ ಮಾತ್ರ ಅದಕ್ಕೆ ಮಾನ್ಯತೆ ದೊರೆಯುವದು. ಕೀರ್ತಿಪಡೆಯುವದು.

ನೀರಿನಲ್ಲಿ ಒಂದು ಬಂಡೆಯನ್ನೆಸೆದರೆ ಹೇಗೆ ತರಂಗಳೇಳುವವೋ ಹಾಗೆ ಮನಸ್ಸು ಪ್ರಶಾಂತದಿಂದಿರುವಾಗ್ಗೆ ಯಾವದೊಂದು ವಿಚಾರವು ಬಂದಾಗ್ಗೆ ವಿಚಾರಪ್ರವಾಹವು ಸ್ಥಿರವಾಗಿರದೆ ಅಸ್ಥಿರತೆಯಲ್ಲಿ ತರಂಗ ತರಂಗವಾಗಿ ಆ ವಿಚಾರ ಪರಿಪೂರ್ಣತೆಯ ದಂಡೆಗೆ ಬಂದು ನಿಲ್ಲುವದು. ಆ ವಿಚಾರವು ಗಹನ ವಿಚಾರವಾಗಿದ್ದರೆ ಬಹು ವೇಳೆ ಆ ವಿಚಾರದ ಅಂಚೆಯು ಸಿಗದು. ಕೊನೆಗೆ ಮಾತ್ರ ಆ ಅಂಚೆಯು ದೊರೆಯದೇ ಇರದು.

ನೀರು ಯಾವ ಪ್ರಕಾರವಾಗಿ ನಾವು ಇರಿಸಲ್ಪಡುವೆವೋ ಹಾಗೆ ಇರುತ್ತದೆ. ಇಂದು ಹರಿಯುತ್ತಿರುವ ಪ್ರವಾಹವನ್ನು ನಾವು ತಡೆಗಟ್ಟಿ ಒಂದು ಕೆರೆಯನ್ನು ನಿರ್ಮಿಸಬಹುದು. ಹಾಗೆ ವಿಚಾರ ಪ್ರವಾಹವನ್ನು ಸಹ ನಾವು ಮುಂದೆ ಚಲಿಸದಂತೆ ಒಂದೆಡೆ ಇಡಬಹುದು. ಆದರೆ ಆ ಒಂದೇ ಸ್ಥಳದಲ್ಲಿ ನಿಂತ ನೀರು ವಾಸನೆಗೊಂಡು ಜನತೆಯ ಉಪಯೋಗಕ್ಕೆ ಬಾರದೇ ನಿರುಪಯುಕ್ತ ಹೇಗಾಗುವವೋ ಹಾಗೆ ಮಾನವನು ತನ್ನ ಜ್ಞಾನ ಪ್ರವಾಹವನ್ನು ಚಲಿಸಗೊಡದೆ ಹಾಗೇ ಬಿಟ್ಟಲ್ಲಿ ಅವನ ಸಮೀಪ ಸಹ ಯಾವ ಇತರ ಮಾನವನು ಬಾರನು.

ನೀರಿನಲ್ಲಿ ಯಾವ ಪ್ರಕಾರವಾಗಿ ಅನೇಕ ತರದ ರುಚಿ ಹಾಗು ವಾಸನೆ ಮುಂತಾದ ಗುಣಗಳಿರುವವೋ ಹಾಗೆ ಮಾನವನ ಜ್ಞಾನದಲ್ಲಿಯೂ ಅನೇಕ ಪ್ರಕಾರಗಳಿವೆ. ರುಚಿಕರವಾದ ನೀರು ಸಹ ಇತರ ಪ್ರದೇಶಗಳಲ್ಲಿ ಹರಿಯುತ್ತಾ ಹೋಗಿ ಆಯಾ ದೇಶಗಳ ಭೂಮಿಯ ಗುಣದ ಮೇರೆಗೆ ಆ

ಭೂಮಿಯ ಗುಣವನ್ನು ತಾಳುತ್ತದೆಯೋ ಹಾಗೆ ಮಾನವನ ಮನಸ್ಸು ಒಳ್ಳೆಯದಿದ್ದರೂ ಸಹ ಹಲವು ಜನರ ಸಹವಾಸದಿಂದ ಮಾತ್ರ ಮಾನವನು ಆ ರೂಪವನ್ನು (ಗುಣವನ್ನು) ತಾಳಬೇಕಾಗುತ್ತದೆ.

ನೀರಿನಲ್ಲಿ ಯಾವ ಪ್ರಕಾರದ ಬಣ್ಣವನ್ನು ನಾವು ಹಾಕುವೆವೋ ಆ ಪ್ರಕಾರವಾಗಿಯೇ ಕಾಣುತ್ತದೆ ಹಾಗೆ ನಮ್ಮ ಮನಸ್ಸು ಸಹ ಯಾವ ವಿಷಯವನ್ನು ನಾವು ಹೆಚ್ಚಾಗಿ ಸ್ವೀಕರಿಸುವೆವೋ ಆ ವಿಷಯದಲ್ಲಿ ಹೆಚ್ಚಾಗಿ ಶೋಭಿಸಿ ಜನತೆಗೆ ಕಂಡುಬರುವವು.

ನೀರು ಬಿಸಿಲಿನ ಕಾವಿನಿಂದ ಹೇಗೆ ಉಗಿಯಾಗಿ ಆಕಾಶಕ್ಕೆ ಸಾಗಿ ಮೋಡರೂಪವನ್ನು ತಾಳುವದೋ ಹಾಗೆ ಮನಸ್ಸು ಇನ್ನಿತರರ ಬೇರೆ ರೀತಿಯ ವಿಚಾರವನ್ನು ಕೇಳಿ ಮನಸ್ಸು ತನ್ನಲ್ಲಿಯೇ ತಾನು ಕುದಿದು ಮಸ್ತಕದ ಮೇಲ್ಭಾಗಕ್ಕೇರುವದು.

ನೀರು ಮೋಡರೂಪವನ್ನು ತಾಳಿ ತಂಗಾಳಿಗೆ ಸಿಲುಕಿ ಮರಳಿ ಮೊದಲಿನ ರೂಪತಾಳಲು ನೀರಿನ ಹನಿಯಾಗಿ ಮರಳಿ ತನ್ನ ಸ್ಥಾನಕ್ಕೆ ಬರುವದೋ ಹಾಗೆ ಮನಸ್ಸು ತಮ್ಮ ನುಡಿಗೆ ಇನ್ನಿತರರ ನುಡಿಯ ಜೋಡಣೆಯಾದಾಗ್ಗೆಯೇ ಶಾಂತತೆ ತಾಳಿ ತನ್ನ ಸ್ಥಿರರೂಪವನ್ನು ತಾಳುವದು.

ಮೋಡಗಳು ಘರ್ಷಣೆಯನ್ನು ತಾಳಿ ಮಿಂಚು ಗುಡುಗುಗಳನ್ನು ತೋರಿ ಹೇಗೆ ಮಳೆಗರೆಯುವದೋ ಹಾಗೆ ಮನಸ್ಸು ಸಹ ಇನ್ನಿತರು ಅವರ ವಿಚಾರಕ್ಕೆ ಅಡ್ಡಬಂದಲ್ಲಿ ಬಾಯಿಯಿಂದ ಗುಡುಗನ್ನುತ್ಪತ್ತಿಸುವದು. ಆ ಗುಡುಗು ಪ್ರಯೋಜನವಾಗದಿದ್ದಲ್ಲಿ ಹಸ್ತಗಳಿಂದ ಘರ್ಷಣೆಯನ್ನು ಉತ್ಪತ್ತಿಸುವದು. ಆ ಘರ್ಷಣೆಯಲ್ಲಿ ಅಶ್ರುಗಳಿಂದ ಮಳೆಗರೆಸುವದು.

ನೀರು ನೀರಲ್ಲಿ ಬೆರಸಿದರೆ ಯಾವ ಪ್ರತ್ಯೇಕ ವಿಭಾಗವಾಗಿ ಕಾಣದು. ಹಾಗೆ ಸುವಿಚಾರಿಗಳೊಡಗೂಡಿ ಸುವಿಚಾರಿಗಳಿದ್ದರೆ ವಿಚಾರಭಿನ್ನತೆಯಾಗದು.

ನೀರು ಬಹು ಆಳವಾದದ್ದು ಹಾಗೆಯೇ ಕಂಡುಬರದು. ಆ ಆಳವನ್ನು ನೋಡಲು ಹಗ್ಗದ ಸಹಾಯದಿಂದಾಗಲಿ ಕೋಲಿನಿಂದಾಗಲಿ ಅದರ ಆಳವನ್ನು ನೋಡಬೇಕಾಗುವದು. ಇಲ್ಲದಿದ್ದರೆ ಮೋಸಿಸುವದು. ಇದರಂತೆ ಮಾನವರ ಮನಸ್ಸನ್ನು ಮೊದಲು ಪರೀಕ್ಷಿಸಿ ಆಮೇಲೆ ಅವರ ಜೊತೆಗಾರರಾಗಬೇಕು. ಇಲ್ಲದಿರೆ ಮೋಸಕ್ಕೊಳಗಾಗುವದು.

ಮನಸ್ಸು ಅಸ್ಥಿರವಾದದ್ದೆಂಬುದು ತಿಳಿದಂತಾಯಿತು. ಈ ಅಸ್ಥಿರತ್ವದಿಂದಲೇ ಅನೇಕ ಹಾನಿಗಳುಂಟಾಗುವವು. ಮನಸ್ಸಿನ ಅಸ್ಥಿರತ್ವದಿಂದಲೇ ಇಂದು ಪ್ರಪಂಚದಲ್ಲಿ ಮಾನವನು ತೊಳಲಾಡಬೇಕಾಗಿದೆ, ದುಃಖಪಡಬೇಕಾಗಿದೆ. ರಾಜಕಾರಣವಾದರೂ ನಡೆಯುತ್ತಿರುವದು ಈ ಮನಸ್ಸಿನ ಅಸ್ಥಿರತ್ವಕ್ಕಾಗಿಯೇ ಆ ಅಸ್ಥಿರತ್ವವನ್ನು ಬಿಟ್ಟು ಸ್ಥಿರತ್ವದಲ್ಲಿರುವದೇ ಒಕ್ಕಟ್ಟು. ಆ ಒಕ್ಕಟ್ಟಿನ ಮಹತ್ವವೆಷ್ಟಿದೆ ಎಂಬುದು ಈ ಕೆಳಗಿನ ವಿಷಯವನ್ನು ಓದಿ.

## ಒಕ್ಕಟ್ಟು

ಒಕ್ಕಟ್ಟು ರಾಷ್ಟ್ರದ ಶ್ರೇಯಸ್ಸು ಒಕ್ಕಟ್ಟು ವಿಶ್ವವನ್ನು ಜಯಿಸುವದು. ಒಕ್ಕಟ್ಟೇ ಸರ್ವ ಕೆಲಸಕ್ಕಾಧಾರ. ಒಕ್ಕಟ್ಟಿಲ್ಲದ ರಾಷ್ಟ್ರ ಪಾಳ್ದೇಗುಲ ಸಮಾನ.

ನೂಲು ಕೇವಲ ಒಟ್ಟೆಬರೆಗಳಿಗೆ ಉಪಯೋಗವಾಗುವದಲ್ಲದೆ, ಒಂದು ಶಕ್ತಿಯುತವಾದ ಆನೆಯನ್ನು ಸಹ ಸ್ಥಿರವಾಗಿ ನಿಲ್ಲಿಸಲು, ಹಿಡಿದು ತರಲು ಉಪಯೋಗವಾಗುವದು. ಆದರೆ ಅದು ಒಕ್ಕಟ್ಟಿನಿಂದಲೇ ಮಾತ್ರ. ಆ ಒಕ್ಕಟ್ಟೆಂದರೆ, ಅನೇಕ ನೂಲಿನಿಂದೊಡಗೂಡಿದ ಹಗ್ಗದಿಂದ.

ಒಂದು ಕಟ್ಟಿಗೆಯನ್ನು ನಾವು ಸಹಜವಾಗಿ ಮುರಿದೊಗೆಯಬಹದು ಆದರೆ ಅನೇಕ ಕಟ್ಟಿಗಳಿಂದೊಡಗೂಡಿದ ಹೊರೆಯನ್ನು ನಾವು ಮುರಿಯಲು ಸಮರ್ಥರಲ್ಲ.

ಅನೇಕ ಜನರಿಂದಲೇ ಇಂದು ಅನೇಕ ಕೆಲಸಗಳಾವವು. ಆದರೆ ಒಬ್ಬನಿಂದಲೇ ಯಾವ ಪೂರ್ಣತೆಯ ಕೆಲಸವಾಗದು.

ಇಂದು ನಾವು ಒಂದು ಕಟ್ಟಡವನ್ನು ಕಟ್ಟಿಸಬಹುದು. ಆದರೆ ಕೇವಲ ಒಬ್ಬನಿಂದಾಗದೇ ಅದಕ್ಕೆ ಅನೇಕ ಜನರ ಸಹಾಯತೆ ಬೇಕಾಗುವದು.

ಒಕ್ಕಟ್ಟೆಂದರೆ ಪ್ರೀತಿ, ವಿಶ್ವಾಸ. ಆ ಒಕ್ಕಟ್ಟು ಇಲ್ಲದಿರೆ ಗೃಹವು ಸಹ ಸ್ಮಶಾನ ಸಮಾನ.

## ಜೀವನ

ಪ್ರಪಂಚವೆಂಬುದು ಮುಳ್ಳಿನ ಹಾಸುಗೆ. ಆದರೆ ಅದರ ನೀತಿಯನ್ನು ತಿಳಿದು ನಡೆದರೆ ಮಾತ್ರ ಹೂವಿನ ಹಾಸುಗೆ.

ಪ್ರಪಂಚದಲ್ಲಿ ಬಳಲಾಡುವದೇ ಜೀವನ. ಆದರೆ ಸುಖಸಂತೋಷದಿಂದ ಬಹುಜನ ಜೀವನವನ್ನು ಸಾಗಿಸಬಹುದು ಆದರೆ ಅದು ಜೀವನವಲ್ಲ.

ದುಃಖಸಾಗರದಲ್ಲಿ ಸಿಲುಕಿ ತೆರೆಗಳಿಗಂಜಿದರೆಂತು? ಆ ತೆರೆಗಳನ್ನು ದಾಟಲು ಪ್ರಯತ್ನಿಸುವದೇ ಜೀವನ.

ದಾರಿಯುದ್ದಕ್ಕೂ ನಾವು ನಡೆಯುತ್ತಿರುವಾಗ್ಗೆ ಇದಿರಿನಲ್ಲಿ ಒಂದು ಪರ್ವತವು ಬರಬಹದು. ಆದರೆ ಅದನ್ನು ಹೇಗೆ ದಾಟಲಿ ಎಂದು ಯೋಚಿಸುವದು ಮಾನವನಿಗೊಳಿತಲ್ಲ. ಅದನ್ನು ದಾಟಲು ಪ್ರಯತ್ನಿಸಿ ದಾಟಿ, ಮುಂದೆ ಸುಗಮವಾದ ಮಾರ್ಗವನ್ನು ಹಿಡಿಯುವದೇ ಜೀವನ.

ಸಮುದ್ರ ಮುಂತಾದ ಪ್ರವಾಹದಲ್ಲಿ ಮಚ್ಛವು ಸಹ ತೆರೆಗಳೆದುರು ಧೈರ್ಯದಿಂದ ಸಾಗಿ ಮುನ್ನುಗ್ಗುವದು. ಅಂಥ ಧೈರ್ಯವನ್ನು ಮಾನವನು ಜ್ಞಾನಪ್ರವಾಹದಿ ತಾಳಿದರೆ ಅದುವೇ ಸುಖಮಯ ಜೀವನ.

ಕೇವಲ ತನ್ನದೊಂದು ಹೊಟ್ಟೆಹೊರೆದುಕೊಳ್ಳುವದು ಒಂದು ಶ್ವಾನಕ್ಕಾದರೂ ಆಗುವದು. ಆದರೆ ಅಂಥ ಜೀವನವು ಜೀವನವೆನಿಸುವದಿಲ್ಲ.

## ಮಾನವತ್ವ

ಮಾನವತ್ವವನರಿಯದವ ಮಾನವನಲ್ಲ. ರೂಪಿನಿಂದ ನಾವು ಆತನನ್ನು ಮಾನವನೆನ್ನಬಹುದು. ಆದರೆ ಆತನು ಮಾನವ ರೂಪಿನ ಪಶುವೇ ಸರಿ.

ಸೃಷ್ಟಿಯಲ್ಲಿ ಮಾನವನಿಗೆ ಅನೇಕ ತೊಂದರೆಗಳುಂಟಾಗುವದು ಸ್ವಾಭಾವಿಕ. ಆದರೆ ಅಂಥ ತೊಂದರೆಗಳಿಂದ ತನ್ನ ಮನುಷ್ಯತ್ವದ ಗುಣವನ್ನು ಕಳೆದುಕೊಳ್ಳುವದು ಮಾನವತ್ವವಲ್ಲ.

ಸೃಷ್ಟಿಯು ಮಾನವನಿಗೆ ನೀತಿಗಲಿಸಲು ಗುರುವಾಗಿದೆ. ಆದರೆ ಆ ನೀತಿಯನ್ನು ಕಲಿಯದಿರಲು ಮಾತ್ರ ತೊಂದರೆಯನ್ನುಂಟುಮಾಡುವದು. ಆಗ್ಗೆ ತೊಂದರೆಯೇ ಗುರುವಾಗಿ ಪರಿಣಮಿಸುವದು. ಆ ತೊಂದರೆಗಂಜಿದರೆ ತೊಂದರೆಯು ಅದ್ಭುತವಾಗಿ ಪರಿಣಮಿಸಿ ಮೃತ್ಯುಗ್ರಹಕ್ಕೊಯ್ಯುವದು.

## ವಿವಿಧ ನೀತಿಗಳು

ಮಾನವನು ಪ್ರತಿನಿತ್ಯ ತಾನು ಕೈಕೊಳ್ಳಬೇಕಾದ ಕಾರ್ಯಗಳನ್ನು ತನ್ನ ಸ್ಮೃತಿಪಟದ ಮೇಲೆ ಬರೆದಿಡಬೇಕು. ಹಾಗು ಆ ಕಾರ್ಯಗಳನ್ನು ಯಶಸ್ವಿಗೊಳಿಸಲು ಪ್ರಯತ್ನಿಸಬೇಕು. ಪ್ರಯತ್ನಕ್ಕೆ ಫಲವು ವಿಶ್ವದಲ್ಲಿ ಯಾವಾಗಲೂ ಇದೆ.

ಮಾನವನು ತನ್ನ ಜೀವನವನ್ನು ಶ್ರೇಯಸ್ಸಿಗರ್ಪಣಮಾಡಬೇಕಾದರೆ ಜನತಾಸೇವೆಯನ್ನೇ ಜನಾರ್ಧನ ಸೇವೆಯೆಂದು ತಿಳಿದು ಜನತಾಸೇವೆಯನ್ನೇ ಮುಖ್ಯ ಧ್ಯೇಯವನ್ನಾಗಿಟ್ಟುಕೊಳ್ಳಬೇಕು.

ಸಿರಿವರು ಬಡವರನ್ನು ನಂಬುವದಿಲ್ಲ. ಇಷ್ಟೇ ಅಲ್ಲ, ಅವರನ್ನು ಕಣ್ಣೆತ್ತಿ ಸಹ ನೋಡರು. ಏಕೆಂದರೆ, ಜನತೆಯು ತಮಗೆ ಕೊರತೆಯಾದ ವಸ್ತುವನ್ನು ಇನ್ನಿತರ ಜನರಲ್ಲಿ ಆ ವಸ್ತುವಿದ್ದಲ್ಲಿ ಬೇಡುವ ಸ್ವಭಾವವಿರುತ್ತದೆ. ಬಡವನಲ್ಲಿ ಇರದ ವಸ್ತುವೇ ಹಣ. ಸಿರಿವರಲ್ಲಿ ಇರುವ ವಸ್ತುವೇ ಧನ. ಆದುದರಿಂದಲೇ ಸಿರಿವರು ಬಡವರನ್ನು ಕಣ್ಣೆತ್ತಿ ನೋಡರು.

ಸಿರಿವರೆಂದರೆ ಹೆಚ್ಚಾಗಿ ಲೋಭಿಗಳೇ. ಏಕೆಂದರೆ, ಲೋಭದಿಂದಲೆ ಹಣ ಒಟ್ಟುಗೂಡುತ್ತದೆ. ಲೋಭವಿಲ್ಲದಾತನು ಸಿರಿತನ ಭೋಗಿಸನು.

ದೂರಿನ ಬೆಟ್ಟ ಕಣ್ಣಿಗೆ ನುಣುಪಾಗಿ ಕಾಣುವಂತೆ ಸಿರಿತನವು ದೂರಿನಿಂದ ನೋಡುವವರಿಗೆ ಬಲು ಚಲುವಾಗಿ ತೋರುತ್ತದೆ. ಆದರೆ ಅದರಲ್ಲಿ ಹುರುಳಿಲ್ಲವೆಂಬುದು ಆ ಸಿರಿಸಾಗರದಿ ಈಜಿದನಂತರವೇ ಗೊತ್ತಾಗುತ್ತದೆ.

ಮಾನವನು ವಿಶ್ವದಲ್ಲಿ ಅರಿಯಬೇಕಾದುದಕ್ಕೆ ಮಿತಿಯೇ ಇಲ್ಲ. ಆದರೆ ನಾನು ಎಲ್ಲವನ್ನು ಅರಿತಿರುವೆನೆಂಬುವವನು ಅರಿವಿಲ್ಲದವನೇ ಸರಿ.

ಮೋಡವಾಗಬೇಕಾದರೆ ನೀರಿನಿಂದಲೇ ಹೇಗೋ ಹಾಗೆ ಸಿರಿವನಾಗಬೇಕಾದರೂ ಬಡವನಿಂದಲೇ. ಮೋಡವು ತಾನು ವಿಶ್ವದಿಂದೊಯ್ದ ನೀರನ್ನು ತನ್ನಲ್ಲಿಟ್ಟುಕೊಳ್ಳದೇ ಮರಳಿ ಹೇಗೆ ಕೊಡುತ್ತದೋ ಹಾಗೆ ಮಾನವನಾದರೂ ತಾನೊಯ್ದುದನ್ನು ಮರಳಿ ಕೊಟ್ಟಲ್ಲಿಯೇ ನಂಬಿಗಸ್ಥನೆನಿಸುತ್ತಾನೆ.

ಮೇಘಗಳು ಸಮುದ್ರ ಮುಂತಾದ ಪ್ರವಾಹದಿಂದ ನೀರನ್ನು ಒಯ್ಯಬೇಕಾದಲ್ಲಿ ಕಪ್ಪದಿಂದ ಕಪ್ಪಾದಂತೆ ಭಾಸವಾಗುತ್ತವೆ. ಮರಳಿ ಕೊಡುವಾಗ್ಗೆ ಶುಭ್ರ ಹಾಗು ಪ್ರಶಾಂತ ವರ್ಣದಿಂದ ಶೋಭಿಸುತ್ತದೆ. ಅದು ನಮ್ರತೆಯಿಂದಲೇ ಶುಭ್ರವರ್ಣವಾಗಿದೆಂದು ಭಾಸವಾಗುತ್ತದೆ. ಅದರಂತೆ ಮಾನವನು ವಠೀಸಿದಲ್ಲಿ ಅತನ ಬಾಳು ಬಳ್ಳಿಯಂತೆ ಚಿಗಿತು ಹೊರ ಹೊಮ್ಮುತ್ತದೆ.

ವಿಶ್ವದಲ್ಲಿ ಮನೋಮಂದಿರವನ್ನು ಕಟ್ಟಿದವರಿಲ್ಲ. ಆದರೆ ಆ ಮಂದಿರದಲ್ಲಿ ಬಾಳಿ ಬೆಳದವರಿಲ್ಲ.

ಸಿಹಿ ಪದಾರ್ಥಗಳಿದ್ದಲ್ಲಿ ಇರುವೆಗಳು ಮುತ್ತಿಗೆ ಹಾಕುವಂತೆ ದೀನರು ಯಾವಾಗಲೂ ಶಿರಿವರಿದ್ದಲ್ಲಿ, ಸದ್ಗುಣಗಳಿದ್ದಲ್ಲಿ, ಪಂಡಿತರಿದ್ದಲ್ಲಿ ಮೇಲಿಂದ ಮೇಲೆ ಬರುವದುಂಟು.

ವಿಶ್ವದಲ್ಲಿ ಸುಖಗಳು ಎರಡು ತೆರನಾಗಿವೆ- (೧) ನಿಜಸುಖ. (೨) ತೋರಿಕೆಯ ಸುಖ. ನಿಜಸುಖವೇ ಬಡತನ. ತೋರಿಕೆಯ ಸುಖವೇ ಸಿರಿತನ.

ಯೋಗ್ಯ ಸ್ಥಾನದಲ್ಲಿಯೇ ಗುಣದ ವಿಕಾಸವಾಗುತ್ತದೆ. ಆದರೆ ಆ ಸ್ಥಾನವನ್ನು ಬಿಟ್ಟು ಇನ್ನಿತರ ಸ್ಥಾನದಲ್ಲಿ ಗುಣಕ್ಕೆ ಕಾಸೂ ಕೂಡ ಬೆಲೆ ಯಾಗದು.

ಕಾಲವು ಅಕಲಂಕವಿದ್ದರೂ ಗುಣದಲ್ಲಿ ಕಲಂಕವಿದ್ದರೆ ಅದು ದೊಡ್ಡ ಕಲಂಕವೇ ಸರಿ.

ಗುಣಹೀನನು ಗುಣವಂತನ ಹತ್ತಿರವಿದ್ದರೂ ಏನು ಪ್ರಯೋಜನ? ಹುಟ್ಟುಗುರುಡನ ಕೈಯ್ಯಲ್ಲಿ ದೀಪವಿದ್ದಂತೆಯೇ ಸರಿ.

ಒಂದೇ ಕುಲದಲ್ಲಿ, ಒಂದೇ ಉದರದಲ್ಲಿ ಹುಟ್ಟಿದ ಒಬ್ಬನು ನೂರಾರು ಜನರ ಒಡೆಯನಾಗಬಲ್ಲನು. ಆದರೆ ಇನ್ನೊಬ್ಬನು ಒಬ್ಬನೊಡೆಯನೂ ಸಹ ಆಗಲಾರನು. ಇದಕ್ಕೆ ಕಾರಣವೆಂದರೆ ಜ್ಞಾನವಿಕಾಸತೆಯಲ್ಲಿ ಹೆಚ್ಚು ಕಡಿಮೆಯು ಅಂದೋಲನವೇ ಕಾರಣ.

ಬಹಳ ಕಾಲದ ಹಿಂದೆ ಅನುಭವಿಸಿದ ಸುಖವನ್ನು ನೆನೆಸುವದರಿಂದ ಯಾವ ಪ್ರಯೋಜನವೂ ಇಲ್ಲ. ಆದರಿಂದ ಸದ್ಯಕ್ಕಿದ್ದ ಅಲ್ಪ ಸುಖವೂ ದುಃಖಮಯವಾಗುತ್ತದೆ

ಎಣ್ಣೆಯ ಕಾಳಾದ ಕುಸುಬೆಯನ್ನು ನಾವು ನೋಡಿದಲ್ಲಿ ಇದು ಎಣ್ಣೆಯ ಕಾಳೆಂಬುದನ್ನು ಅರಿಯದಿದ್ದಲ್ಲಿ ಇನ್ನಿತರರಿಂದ ಕೇಳಿ ನಗಬಹುದು. ಅದು ಎಣ್ಣೆಯಾಗುವ ಬಗೆಯನ್ನು ನೋಡಿದಾಗಲೆ ನಮಗೆ ಇದು ಎಣ್ಣೆಯ ಕಾಳೆಂದು ಅರಿವಾಗುವಂತೆ ಸದ್ಗುಣಿಗಳ ರೂಪವಿದೆ. ಕೇವಲ ರೂಪಿನಿಂದ ಆಯಾ ಜನರ ಗುಣಹೀನೆ ಗೊತ್ತಾಗದು. ಅವರ ಮುಖದಿಂದ ಹೊರಟ ನುಡಿಗಳನ್ನು ಕೇಳಿದಾಗಲೇ ಸದ್ಗುಣಿ ಎಂಬುದು ಅರಿವಾಗುತ್ತದೆ.

ಮನುಷ್ಯಪ್ರಾಣಿಗಿಂತಲೂ ಅತೀ ಹೀನ ಪ್ರಾಣಿಯೆಂದು ತಿಳಿದಿರುವ ಮೊಲದ ಕಿಮ್ಮತ್ತು ಮನುಷ್ಯನಿಗಿಲ್ಲ. ಮೊಲವು ಮರಣಹೊಂದಿದ ನಂತರ ಪೇಟೆಯಲ್ಲಿಟ್ಟರೆ ಬೆಲೆ ಬರುತ್ತದೆ. ಆದರೆ ಮೃತನಾದ ಮಾನವನನ್ನು ಪೇಟೆ ಯಲ್ಲಿಟ್ಟರೆ ಒಂದು ಕಾಸಿಗೂ ಕೂಡ ಯಾರೂ ತೆಗೆದುಕೊಳ್ಳರು.

ವಿಶ್ವದಲ್ಲಿ ಮಾನವನು ಒಂದೇ ಒಂದು ಮಾರ್ಗವಿಡಿದು ನಡೆದಿದ್ದಾನೆ. ಅದುವೇ ಜೀವನ. ಆ ಜೀವನವೆಂಬ ಮಾರ್ಗದಲ್ಲಿ ಮರಣವೆಂಬ ಮೈಲು ಗಲ್ಲನ್ನು ಮುಟ್ಟಬೇಕಾಗಿದೆ. ಆ ಮೈಲುಗಲ್ಲನ್ನು ಮುಟ್ಟಲು ದಿನವೆಂಬ ಹೆಜ್ಜೆಯನ್ನೂ ಆಸೆಯೆಂಬ ಕೈಗೋಲನ್ನೂ ಊರುತ್ತಲಿದ್ದಾನೆ.

---

ಪದ ರಾಗ ಭೈರವಿ.

ಅಂಗಸಂಗಿಯು ಸಂಬಂಧಿಯಲ್ಲ । ಲಿಂಗದಲಾಪ್ಯಾಯನವಾಗಿತರಸು । ಖಂಗಳಬಿಟ್ಟು ಕಳದು ಸುವ್ಯಾನ ಸಾರಾಯಕಾದ ಶರಣನೂ ॥ಪ॥

ಗುರುಕರುಣ ಸಂಯೋಗದಿಂದ ಶಿಷ್ಯನಿಂತು ಕರದಲ್ಲಿ ಹುಟ್ಟಿದನು । ಕರುಣ ಸನ್ನಿಹಿತವಾ ಗ್ರಾಹಿಯಾಗಿ ಗಾಳಿಯ ಸುಳುಹಡಗಿದ ಶರಣನೂ ॥೧॥

ಆಶೆಯೆಂಬುದ ಸುಳುಹಾಗಿ ಹಿಡಿದ ಛಲವ ಬಿಡೆನೆಂದೆಂಬ ಬೇರೂರಿ । ಸಂಕಲ್ಪ ವಿಕಲ್ಪವೆಂಬೆರಡಿಲ್ಲದೆ ನಿಷ್ಕಳನಾಗಿಪ್ಪ ನಿಜ ಶರಣನೂ ॥೨॥

ಮಾಡುವರ ಕಂಡು ಮಾಡುವನಲ್ಲ ಮಾಡದವರ ಕಂಡು ಮಾಡದವನಲ್ಲ । ತಾ ಮಾಡುವ ಮಾಟಕ್ಕೆ ತವಕಿಗನಾಗಿ ಹಿಂದು ಮುಂದರಿಯದ ಶರಣನೂ ॥೩॥

ಎಲ್ಲವು ತಾನೆಂಬ ಕರುಣಾಕರನಲ್ಲ ನಿಷ್ಕರುಣಿಯಾಗಿ ಜಡದೇಹಿಯಲ್ಲ ॥ ಭೋಗಿಸ ಭೋಗಂಗಳ ಯಾಶೆಯಾವಿಷ ತಾಮಸ ವಿಷಯವಿರಹಿತ ಶರಣನೂ ॥೪॥

ಘನವನಿಂಬುಗೊಂಡು ಮನದ ಬೆಂಬಳಿವಿಡಿದುಳಿದಲ್ಲಿ ನಿಜವಾಗಿ ನಿಂದನು । ತಾನೆಂಬುದಿಲ್ಲ ನಿರಂತರ ಸುಖಿ ಗುರುಚನ್ನಮಲ್ಲಿಕಾರ್ಜುನಯ್ಯ ನಿಮ್ಮ ಶರಣನು ॥೫॥

---

## ೪೩. ಅಕಾಯಸ್ಥಲ.

**ಸೂತ್ರ:—** ಇಂತು ಲಿಂಗಕಾಯ ಮಥನದಿಂ ವೀರಮಾಹೇಶ್ವರನ ದೇಹ ನಿರ್ದೇಹವಾದ ಭೇದವೆಂತಿರ್ದುದೆಂದಡೆ ಮುಂದೆ ಅಕಾಯಸ್ಥಲ ವಾದುದು.

ಪದ ರಾಗ ದೇಶಿ

ಮಂಗಳ ಮಂಗಳ ಶ್ರೀಗುಹೇಶ್ವರನ ಶರಣ ಲಿಂಗೈಕ್ಯಂಗೆ ಮಂಗಳಾ ॥ಪ॥

ಜಗವನೆಲ್ಲನೂರ ಮಾಡಿ ಊರನೆಲ್ಲವ ಮನೆಯ ಮಾಡಿ ಹೊಗದೆಶೆಯಿಲ್ಲದ ಸುಳುಹು ನೋಡಾ । ಸುಳುಹಿನ ಭೇದವನರಿಯದ ಕಾರಣ ದೇವಲೋಕ ಮರ್ತ್ಯಲೋಕವೆಲ್ಲ ಭ್ರಮೆಗೊಂಡಿತ್ತಲ್ಲ ॥೧॥

ಎಂಭತ್ತು ನಾಲ್ಕುಲಕ್ಷ ಯೋನಿಮುಖ ಜೀವಿಗಳಿಗೆ ಎಂಭತ್ತು ನಾಲ್ಕು ಲಕ್ಷಾರಾಧನೆಯ । ನೊಂದೊಂದರಿಯದೆ ಗೊಂದಣಗೊಂಡು ನಿಂದಲ್ಲಿ ನಿಲ ಲೀಯದೆ ಬರಿದೆ ಲಯವಾದುದೆಲ್ಲ ॥೨॥

ಭಕುತಿ ಯುಕುತಿಯನರಿಯ ಷೋಡಶೋಪಚಾರವನರಿಯ ಭಾವ ಸಂಕಲ್ಪ ವಿಕಲ್ಪವ । ನರಿಯ ನಾಮ ಸೀಮೆಗಳೆಲ್ಲವ ನೇಮಿಸಿ ಕಳೆದಂಗೆ ಆವ ಲೋಕ ಕಂಪಿತವಾದುದಾತಂಗೆ ॥೩॥

ಕುಲವಳಿದು ಛಲವಳಿದು ಬಲುಹಳಿದು ನಿಲಲು ಸೂತ್ರದ ಜಂತ್ರವ ವಳಿಯೊಲು ಫಲಸಿದ್ಧಿ । ಎನಿಸಿ ನಿಷ್ಫಲಸಿದ್ಧಿಯನೆ ಬಿಟ್ಟು ಭಕ್ತ್ಯಾಂಗನೆಯ ಮರ್ತ್ಯಕ್ಕೆ ತಂದಿತ್ತವಂಗೆ ॥೪॥

ಮರ್ತ್ಯಸ್ಥಾನದ ಲೋಕಕೆ ಹೋಗಿ ಮರುಮಾಳವನರಿಯದ ಪರಿಯನು ನೋಡಿರೇ । ತನುರುಚಿಯನೆ ಮರೆದು ಘನರುಚಿಯ ನರಿದೆನ್ನ ತನ್ನಂತೆ ಮಾಡಿದ ಗುಹೇಶ್ವರಲಿಂಗಾ ॥೫॥

---

## ೪೪. ಪರಕಾಯಸ್ಥಲ.

**ಸೂತ್ರ:—** ಇಂತು ಅಕಾಯ ಸ್ವರೂಪವನೈದಿದ ಲಿಂಗವು ವೀರ ಮಾಹೇಶ್ವರನಲ್ಲಿ ಸಕಳ ನಿಷ್ಕಳಾತೀತ ಕಾಯವೆಂತಿರ್ದುದೆಂದಡೆ ಮುಂದೆ ಪರಕಾಯಸ್ಥಲವಾದುದು.

ಪದ ರಾಗ ವರಾಳಿ

ಮುನ್ನವೇ ಕೀರ್ತಿವಡೆದರು ಪ್ರಮಥರು ಅನುಸರಣೆಯನಿನಿತು ನೋಡದೆ ಮನ ಶಿವಲಿಂಗದಲ್ಲಿ ॥ಪ॥

ತೊಟ್ಟ ಸರಳಿನಂತೆ ನಿಷ್ಠೆ ನಿರ್ವಾಣದ ದೃಷ್ಟಿಮುಟ್ಟೆ ಶರಸಂಧಾನದ ತಿಟ್ಟವಿಟ್ಟಂತೆ । ಶಿವನ ನಂಬುಗೆಯಲ್ಲಿ ತೆರಹುಗೊಡದೆ ಒಟ್ಟೈಸಿದರು ತನುಮನಧನವ ಹಿಂದಿಕ್ಕಿ ॥೧॥

ಊರಿತೋಯದಲ್ಲಿ ಹುಟ್ಟಿ ಶರೀರಶೈತ್ಯವ ಸೋಂಕಿ ಅಂಪವರ್ಗವಲ್ಲ ವಿದು ನಿಜಪದ ಹಿರಿ। ಯರು ಸಮಧಾತು ಭಕ್ತಿಯನೆರೆವರು ಬರವಸಕ್ಕೆ ಬಿಂದುಭರಿತ ಘಟಸ್ಥಕನ ಧರಿಸದಂತೆ ॥೨॥

ಆದಿಯಾಧಾರದಲ್ಲಿ ಪಿಂಡವಾದ ಪರಿಯ ಮರಳಿ ಹೋದ ಪರಿಯ ಮರಳಿ ವಿಚಾರದಿಂದ । ಸ್ವಾಧಿಷ್ಠಾನ ಮಣಿಪೂರಕದಿಂದ ಪರಮ । ಗುಣ ಪ್ರಾಜ್ಞರಾಗಿ ಪ್ರಥಮ ಲಿಂಗಾಶ್ರಮ ಘನವೇದ್ಯರು. ||೩||

ನುಡಿದಂತೆ ನಡೆಯ ಪೂರವಿಸಲು ನಡೆದಂತೆ ನುಡಿಯ ಪೂರವಿಸಲು-ಮೊದಲಾದಿವಿಡಿದು ಗಡಣ । ದಲ್ಲಿ ಬಳಸಿ ಬ್ರಹ್ಮಚಾರಿಗಳು ಉಂಡು ಉಪವಾಸಿಗಳು ಎಡೆಕಟ್ಟಿ ಕಡೆಕಂಟಣಿಸದ ಸಾಧ್ಯರು ||೪||

ಭೃಂಗ ಸಂಪಗೆಯಲ್ಲಿ ಸಂಗಕ್ಕೆ ಬಂದು ಸಂಗವನೊಲ್ಲದೆ ಮರಳಿ ಘನರೂಪವೆಂದು ಅಂಗದ । ಶಂಕೆಯೆಂಬ ಭಂಗದೋರದೆ ಮುಚ್ಚಿನಚ್ಚಿ ಲಿಂಗದಲ್ಲಿ ನಿರುತ ಭರಿತರಾದರೂ ||೫||

ಪಥಲಿಂಗಾಧೀನದಿಂದ ಮಥಲಿಂಗ ವಶನಾಗಿ ಆಯುತ ಲಿಂಗಾಧೀನದಿಂದ ಬೆಸನೆನುತ । ಕಥೆಕಾರಣ ರಹಿತಹಂಕಾರ ಗುಣವಳಿದು ನಿರಾಧಾರಿಗಳಾಗಿ ಕಲ್ಪಿತ ಸೇರದ ಸುಸಂವೇದ್ಯರು. ||೬||

ಸಕಲಗುಣ ನಿಳಯಾನಂದದ ಸುಖಚರಿತ್ರವೆಡೆಗೊಂಡು ಮಾಣಿಕ ಸ್ವಯಂಜ್ಯೋತಿ ತಾನು ತಾನಾಗಿ । ಅಕಳಂಕ ಕೂಡಲಚನ್ನ ಸಂಗಯ್ಯನಲ್ಲಿ ಮಹಾನುಭಾವರೇಕಮುಖ ಸಜ್ಜನರನಂತ ಶಿಲೆಯ ಮಂಗಳಾರತಿಯನೂ ||೭||

---

## ೪೪. ಧರ್ಮಾಚಾರ ಸ್ಥಲ.

**ಸೂತ್ರ:—** ಇಂತು ಸಕಾಯ ಅಕಾಯ ಪರಕಾಯವೆಂಬ ತ್ರಿವಿಧ ಸ್ಥಲಂಗಳೇಕವಾದ ಲಿಂಗವು ವೀರಮಹೇಶ್ವರನ ಸದ್ಧರ್ಮಚರಿತ್ರ ನಿಮಿತ್ಯವೇಕವಾದ ಭೇದವೆಂತಿರ್ದುದೆಂದಡೆ ಮುಂದೆ ಧರ್ಮಾಚಾರ ಸ್ಥಲವಾದುದು.

**ಪದ—ರಾಗ—ಮಾಳವಗೌಳ.**

ಸತ್ಯ ಸದಾಚಾರದಲ್ಲಿ ನಡೆವುದು ಮಿಥ್ಯ ವಂಚನೆಯನರಿಯದೆ. ಚಿತ್ತದಲ್ಲಿ ನಿರ್ಮಲನಾಗಿರ್ದಡೆ ಮುಕ್ತಿ ಬೇರುಂಟೆ ಹೇಳಾ || ಪಲ್ಲವ

ಸರ್ವ ಜೀವಂಗಳ ಹಿಂಸೆಯ ಮಾಣ್ಬುದು ಓರ್ವರನು ಕೆಡೆ ನುಡಿಯದೆ ವ್ಯರ್ಥ । ಸಂಸಾರದ ನಿತ್ಯವನರಿದು ತತ್ವ ವಿವೇಕದಿ ನಡೆವುದು ನೋಡಾ ॥೧॥

ಅನ್ಯರ ಕೆಡೆ ನುಡಿಯದೆ ತನ್ನ ತಾ ನಿರ್ಬಂಧಿಸದೆ ತನು ಮನ ಧನದಲ್ಲಿ । ಕಪಟ ಕುತಂತ್ರ ಕುಹಕಂಗಳಿಲ್ಲದಿರಬಲ್ಲಾತನೆ ಹಿರಿಯನು ॥೨॥

ನಿಂದಿಸಬೇಡ ಸ್ತುತಿಸಬೇಡ ಬಂಧಿಸಬೇಡ ಮನದಲ್ಲಿ । ಒಂದಲ್ಲದೆರಡರಿಯದಿರ್ದಡೆ ಮುಂದಣ ಮುಕ್ತಿ ತನ್ನಲಿ ॥೩॥

ಸಮತೆ ಶಾಂತಿ ಸದುಗುಣಿಯಾಗಿ ಕ್ರಮವರಿದು ತನಗೆ ತಾನಕ್ಕೆ । ಮನ ಮೆಚ್ಚಿ ನಡೆದರೆ ಶಿವನು ತನ್ನಲ್ಲಿಯೆ ನೆಲಸಿರ್ಪನು ॥೪॥

ತಾನಾರಿಗು ಮುನಿಯದೆ ತನ್ನನೊಬ್ಬರು ನಿಂದಿಸಿದರಿನ್ನದೆ । ಸಮಾಧಾನಿಯಾಗಿರ್ಪ ಶರಣನ ವೀರ ಸೊಡ್ಡಳನಗಲದಿರ್ಪನು ॥೫॥

---

## ೪೫. ಭಾವಾಚಾರಸ್ಥಲ.

**ಸೂತ್ರ**:— ಇಂತು ಧರ್ಮಾಚಾರಸ್ವರೂಪವನೈದಿದ ಲಿಂಗವು ವೀರಮಾಹೇಶ್ವರನ ಮನಸ್ಥಲದಲ್ಲೆಡೆಗೊಂಡ ಸದ್ಭಾವ ಚರಿತ್ರವೆಂತಿರ್ದುದೆಂದಡೆ ಮುಂದೆ ಭಾವಾಚಾರಸ್ಥಲವಾದುದು.

**ಪದ ರಾಗ ದೇಶಿ**

ಭಾವಿಸಿ ನಡೆದಿಹೆನೆಂದಡೆ ತಾನಾ ಭಾವದೊಳಗೆ ತನ್ನೊಳು ಸದ್ಭಾವವು ಭಾವಭೇದವಿಲ್ಲದಿಪ್ಪ ಶರಣನ ಸತುಪಥವನೇನೆಂಬೆನೊ ॥ಪ॥

ಮಾರುಗ ಕ್ರೀಗಳೊಳಗೆ ನಿಷ್ಪತಿಯಾಗಿ ದೇವಕ್ರೀವಿಡಿದ ಕಾರಣ ಭಿನ್ನಭಾವವಳಿದು । ಶಿವಾಚಾರವೇ ಜೀವವಾಗಿ ಲಿಂಗದೊಳು ಬೆರಸಬಲ್ಲಡಾತಯೋಗಿ ॥೧॥

ತದುಗತವಾಗಿ ನಿರಂತರ ನಿಜ ಲಿಂಗದಿ ಪರಮಾನಂದವನೈದಿ ಸದಮಲ । ನಿರುಪಾಧಿಕನಾಗಿಪ್ಪ ಚರಿತದಾಚಾರವನೇನೆಂಬೆನು ॥೨॥

ಧ್ಯಾನವೆ ನಿಶ್ಚಲವಾಗಿಪ್ಪ ಶರಣನ ಕಾಮಿತ ಭಾವಿತ ಕ್ರೀಗಳು ತಾ ಮುನ್ನವೆ ಲಿಂಗದೊಳವಿರಳವಾಗಿ ಸೀಮೆಯ ನೀಕರಿಸಿರ್ಪನು ॥೩॥

ಪ್ರಾಣನ ಹಸ್ತದೊಳಗೆ ಅಂಗಲಿಂಗಭಾವ ಹಸ್ತದೊಳಗಣ ಪ್ರಾಣ। ಪ್ರಾಣಭಾವವೆನ್ನದಿರ್ದ ಶರಣನಾಚಾರ ವಿಚಾರವನೇನೆಂಬೆನು ।೩॥

ಒಡಲಳಿದು ಒಡಲುವಿಡಿದ ಕ್ರೀಗಳ ಗಡಣವಡಗಿ ನಿರ್ದೇಹದೊಳೆಂಬ ಭಾವ। ವೆಡೆಗೊಂಡ ನಿಶ್ಶ್ರೆಯಾಚರಣೆಯು ಕೂಡಲ ಚನ್ನಸಂಗನೊಳು ಸತ್ಪಥವು ||೫||

---

## ೪೬. ಜ್ಞಾನಾಚಾರಸ್ಥಲ.

ಸೂತ್ರ:— ಇಂತು ಮನೋಮಧ್ಯದಲ್ಲಿ ಸದ್ಭಾವ ಚರಿತ್ರ ಸಂಬಂಧವಾದ ಲಿಂಗವು ವೀರಮಾಹೇಶ್ವರನ ಮಹಾಜ್ಞಾನಾಚರಣೆಯನ್ನೈದಿದ ಭೇದವೆಂತಿರ್ದುದೆಂದಡೆ ಮುಂದೆ ಜ್ಞಾನಾಚಾರಸ್ಥಲವಾದುದು.

ಪದ ರಾಗ ಆರಬಿ

ಮೊದಲುಗೂಡದಹರದು ಎನಗಾದುದಯ್ಯಾ ಮೊದಲುಗಡದ ಹರದು ||ಪಲ್ಲ||

ಬೆವಹಾರವ ಮುಂದುಗೊಂಡಿರ್ದೆನಯ್ಯಾ ಬೆವಹಾರದ ಪರಿಯ ನಾನರಿಯೆನಯ್ಯಾ ||೧||

ಆತ್ಮಜ್ಞಾತವ್ಯನ। ಚ ಪುನರೇವ ಕಥನ। ಚ ಪುನರಥ ಅತ ಎಂದುದಾಗಿ ||೨||

ಜ್ಞಾನಾಗ್ನಿ ಸರ್ವ ಕರ್ಮಾಣಿ ಭಸ್ಮಸಾತ್ಕುರತೆ ಎಂದುದಾಗಿ ||೩||

ಭವಗೇಡಿ ಲಿಂಗೈಕ್ಯರೊಡನಾಡಿ ಅವರ ಪರಿ ಎನ್ನ ಹತ್ತಿತಲ್ಲಯ್ಯ ||೪||

ಕೂಡಲ ಚನ್ನಸಂಗಯ್ಯನೆಂದರಿದು ಮರುಳ ಮಾಡಿದ ಬಕುತರನೇನೆಂಬೆ ||೫||

## ೪೭. ಕಾಯಾನುಗ್ರಹಸ್ಥಲ.

ಸೂತ್ರ: - ಇಂತು ನವ ಸ್ಥಲಂಗಳೇ ಶಿವಿಧ ತ್ರಿವಿಧಂ ಆಗೇಕನಾದ ಗುರುಲಿಂಗವು ಅವಿರಳ ಲಿಂಗಸಂಗಸುಖಿಯಾದ ಪ್ರಸಾದಿಯು ಶಿವಲಿಂಗವೇ ಕಾಯದಲ್ಲಿ ಅನುಗ್ರಾಹಕವಾದ ಭೇದವೆಂತಿರ್ದುದೆಂದಡೆ ಮುಂದೆ ಕಾಯಾನುಗ್ರಹಸ್ಥಲವಾದುದು.

ಪದ ರಾಗ ಭೂಪಾಳಿ

ಗುರು ಸಂದರುಶನ ಅಂಗವ ಸೋಂಕೆ ಎರಡರಿಯೆನು ಅಂಗಶಂಕೆಯನೂ ॥ ಪಲ್ಲ॥

ಕಾಯವಳಿದು ಭಕ್ತಿಕಾಯವಾಗೆ ಆ ಕಾಯವನಾ ಲಿಂಗವ ಗ್ರಹಿಸಿ ಕಾಯವೆನ್ನದೆಂಬ ಭಾವವನರಿಯದೆ ಮಾಯವಳಿದು ನಿಶ್ಚಿಂತನಾದನಯ್ಯಾ ॥೧॥

ತನುವೆಂಬ ಶಿಷ್ಯನ ಶಿವಲಿಂಗವೆಂದೆಂಬ ಘನ ಮಹಾ ಗುರುಕರುಣ ಹಸ್ತದ ಮನ ಮನಬೆರಸಿ ಚಿತ್ತದ ಮಸ್ತಕ ಮುಟ್ಟಿ ಉರಿತೃಣ ಉಂಡಂತಾಹುದು ॥೨॥

ಅಂಗದೊಳಗೆ ಲಿಂಗಾಂಗ ವಿವೇಕ ಸುಸಂಗ ಸಮನಿಸಲು ಸರ್ವಾಂಗಲಿಂಗದೊಳಗೆ ಪೆರತರಿಯದೆ ಉಭಯದ ಸಂಗವೆಂಬ ನಾಮ ಹಿಂಗಿದುದು. ॥೩॥

ಪರತತ್ವವೆಡೆಗೊಳಲಂಗವೆಂಬ ಮಿಥ್ಯ ಹರಿಯಲು ನಿಮಿಷಕ್ಕೆ ಮುಗಿಲೋಡಿನಂತೆ ಗುರುಮೂರ್ತಿ ನೆಲೆಗೊಂಡಿಪ್ಪುದರಿಂದ ಶರಿರವ ನಾನು ಪಮಿಸಲಮ್ಮೆ ॥೪॥

ಉರಿಕರ್ಪೂರವ ಸೋಂಕಿದಡಾ ಕರ್ಪೂರವೆಂತುರಿಯಾಗಿರ್ದುದು ಐಸರಿ ಕೂಡಲ ಚನ್ನಸಂಗನ ಸೋಂಕಿನ ಸುಖವ ನಾನೇನೆಂಬೆನು ॥೫॥

---

## ೪೮. ಇಂದ್ರಿಯಾನುಗ್ರಹಸ್ಥಲ.

ಸೂತ್ರ:— ಇಂತು ಕಾಯದಲ್ಲಿ ಸಂಬಂಧವಾಗಿ ಅನುಗ್ರಹ ಸ್ವರೂಪವನೈದಿದ ಲಿಂಗವು ಪ್ರಸಾದಿಯು ಸರ್ವೇಂದ್ರಿಯ ಮುಖದಲ್ಲಿ ಸಂಗವಾದ ಭೇದವೆಂತಿರ್ದುದೆಂದಡೆ ಮುಂದೆ ಇಂದ್ರಿಯಾನುಗ್ರಹಸ್ಥಲವಾದುದು.

ಪದ

ಕಾಯದೊಳಗಣ ವಿಕಾರಂಗಳು ಮಾಯದ ಪ್ರಪಂಚನಳಿದು। ಸ್ವಾಯತ ಸಂಬಂಧ ಸರ್ವೇಂದ್ರಿಯದಲ್ಲಿ ಸನುಮತವಾಗಿರ್ದೆನಯ್ಯಾ ॥ಪ॥

ಪೃಥ್ವಿ ಎಂಬ ಭೂತದಂಗ ವಿಕಾರದ ಗತಿಯಳಿದು ಭಿನ್ನಗಂಧದ ವಿಪರೀತ ಭಾವವಳಿದು। ನಾಸಿಕೇಂದ್ರಿಯ ವಶವಾಯಿತ್ತು ಲಿಂಗ ನಿಮ್ಮಲ್ಲಿ ॥೧॥

ಅಪ್ಪುವೆಂಬ ಭೂತದಂಗ ವಿಕಾರದ ಹಂಗು ಹರಿದು ಭಿನ್ನ ರುಚಿಗಳ ಪ್ರಕೃತಿಯಡಗಿ। ಜಿಹ್ವೇಂದ್ರಿಯ ಲಿಂಗದ ವಶದೊಳು ತದುಗತವಾಯಿತ್ತು ॥೨॥

ಅಗ್ನಿಯೆಂಬ ಭೂತದಂಗವಿಕಾರದ ಪ್ರಭೆಯಳಿದು ಭಿನ್ನರೂಪುಗಳ ವಿಕೃತಿಯಡಗಿ। ನೇತ್ರೇಂದ್ರಿಯ ಲಿಂಗದೊಳವಿರಳವಾದುದು ॥೩॥

ವಾಯುವೆಂಬ ಭೂತದಂಗ ವಿಕಾರದ ಭಾವವಳಿದು ಭಿನ್ನ ಸೋಂಕಿನ ಮಾಯದ ಮಿಥ್ಯ ಹರಿದು। ಸ್ಪರ್ಶನೇಂದ್ರಿಯ ಲಿಂಗನೊಳವಿರಳವಾದುದು ॥೪॥

ಆಕಾಶವೆಂಬ ಭೂತದಂಗ ವಿಕಾರದ ಚಿನ್ಹವಳಿದು ಅನ್ಯ ಶಬ್ದದ ಸೂತಕವಡಗಿ। ಶ್ರೋತ್ರೇಂದ್ರಿಯವೇಕೀಕರಿಸಿ ಕೂಡಲಸಂಗ ಸಾಕಾರ ಸಂಬಂಧವು ॥೫॥

---

## ೪೯. ಪ್ರಾಣಾನುಗ್ರಹಸ್ಥಲ.

**ಸೂತ್ರ:—** ಇಂತು ಸರ್ವೇಂದ್ರಿಯ ಮುಖದಲ್ಲಿ ಸಂಗವಾದ ಲಿಂಗವು ಪ್ರಸಾದಿಯ ಪ್ರಾಣಸ್ಥಲದಲ್ಲಿ ಸಂಗವಾದ ಭೇದವೆಂತಿರ್ದುದೆಂದಡೆ ಮುಂದೆ ಪ್ರಾಣಾನುಗ್ರಹಸ್ಥಲವಾದುದು.

ಪದ ರಾಗ ದೇಶಾಕ್ಷಿ

ನಿಮ್ಮ ಕಾರುಣ್ಯವೆನ್ನ ಮನದೊಳಗೆ ಸಂಬಂಧಿಸಿ ಭಿನ್ನಭಾವ। ಮರಿಯದೆ ನಿಮ್ಮೊಳಡಗಿದುದಾನೇನೆಂದರಿಯೆನಯ್ಯಾ ।ಪ॥

ದಶವಾಯುಗಳ ಸಂಚುವನರಿದು ದಶನಾಳಂಗಳ ಪಥವಡಗಿ ದಶೇಂದ್ರಿಯಂಗಳ ಸಂಚಲುವಳಿದು । ಪ್ರಾಣರತಿಯೊಳು ನಿಮ್ಮ ಸಂಗವ ಕಂಡೆನಯ್ಯಾ ॥೧॥

ಚಿತ್ತದ ಕಳೆ ಬುದ್ಧಿಯೊಳಡಗಿ ಬುದ್ಧಿ ಅಹಂಕಾರದೊಳಳಿದು ಅಹಂಕಾರ ಮನದೊಳು। ಮನ ನಿಮ್ಮ ಕರುಣದ ಸಂಗವಾಗಿ ಕಣ್ದೆರೆದೆನಯ್ಯಾ ॥೨॥

ಷಡುಚಕ್ರಕಮಲದಲ್ಲಿ ಸುಳಿದಾಡುವ ಪ್ರಾಣಹಂಸನ ತಿಳುಹಿ ಮಹಾನುಭಾವದೊಳು । ನೆಲಸಿ ನಿರ್ಮಳ ಲಿಂಗಪ್ರಾಣಿಯಾದೆನಯ್ಯಾ ॥೩॥

ಚೈತನ್ಯವೆ ನೀನೆಂದರಿದು ಸಾತ್ವಿಕಭಾವವೆಂಪರಿಯದೆ ಸೂಕ್ಷ್ಮತನುವಿನೊಳಗೆ । ನಿಮ್ಮ ಜ್ಞಾನಜ್ಯೋತಿಯ ಬೆಳಗನುಂಡೆನಯ್ಯಾ ॥೪॥

ನೀನೆನ್ನ ಪ್ರಾಣದೊಳಗೆ ಪ್ರಾಣವಾಗಿ ನಾ ನಿನ್ನ ಪ್ರಾಣದೊಳಗೆ ಪ್ರಾಣವಾಗಿ । ನಾ ನೀನೆಂಬುಭಯವನರಿಯದೆ ನಿಮ್ಮ ಕೃಪಾನಂದದೊಳಡಗಿರ್ದೆನು ಕೂಡಲಸಂಗಯ್ಯ ॥೫॥

---

## ೫೦. ಕಾಯಾರ್ಪಿತಸ್ಥಲ.

**ಸೂತ್ರ:—** ಇಂತು ಕಾಯಾನುಗ್ರಹ ಇಂದ್ರಿಯಾನುಗ್ರಹ ಪ್ರಾಣಾನುಗ್ರಹವೆಂಬ ತ್ರಿವಿಧಸ್ಥಲವೇಕವಾದ ಲಿಂಗವು ಅವಿರಳಲಿಂಗ ಸಂಗಸುಖಿಯಾದ ಲಿಂಗಪ್ರಸಾದಿಯ ಕಾಯದಲ್ಲಿ ಅರ್ಪಿತಲಿಂಗಮುಖವಾದ ಭೇದವೆಂತಿರ್ದುದೆಂದಡೆ ಮುಂದೆ ಕಾಯಾರ್ಪಿತಸ್ಥಲವಾದುದು.

ಪದ ರಾಗ ನಾಟ

ರೋಮಾದಿಗಳೆಲ್ಲ ಕೈಯ್ಯಾಗಿ ಅವಿಷವಿಷಯಂಗಳ ಮರೆದು । ಕಾಮಿಸಿ ಬಂದ ಪದಾರ್ಥಂಗಳ ನಿಮಗರ್ಪಿಸುವೆನಯ್ಯಾ ॥ಪ॥

ಎನ್ನ ಕಂಗಳು ಭಕ್ತ ಎನ್ನ ಕಿವಿಗಳು ಭಕ್ತ ಎನ್ನ ನಾಸಿಕ ಭಕ್ತ ಎನ್ನ ನಾಲಿಗೆ ಭಕ್ತ ಎನ್ನ ಕರಚರಣಾದಿಗಳೆಲ್ಲವ ಶ್ರೀಗುರು ಭಕ್ತನ ಮಾಡಿದನಾಗಿ॥ ಎನ್ನ ತನುವು ಭಕ್ತ ಎನ್ನ ಮನವು ಭಕ್ತ ಎನ್ನ ನೆನಹು ಭಕ್ತನೆಂಬೀ ಕಾರಣವೆಲ್ಲವು। ಸನ್ಮುತಲಿಂಗಕರ್ಪಿತವಲ್ಲದೆ ಎನ್ನಂಗಕ್ಕೆ ಸೊಗಸದು ಅಯ್ಯಾ ॥೧॥

ತಟ್ಟಿತ್ತು ಮುಟ್ಟಿತ್ತು ಆಸನ ಶಯನ ಹಲ್ಲುಕಡ್ಡಿ ದರ್ಪಣ ನಡೆನುಡಿ ಚೈತನ್ಯ । ನೋಡುವ ಸ್ವರೂಪವು ಕೇಳುವ ಸಂಗೀತಸುಭಾಷೆಗಳೆಲ್ಲವನು। ಸುಗಂಧ ಪುಷ್ಪಪರಿಮಳ ಬೀರಲು ವಾಯುವಾಕಾಶರೂಪು ನಿರೂಪೆಲ್ಲವು। ಚರಸಲಿಂಗಕರ್ಪಿತವಲ್ಲದೆ ಎನ್ನಂಗಕ್ಕೆ ಸೊಗಸದು ಅಯ್ಯಾ ॥೨॥

ಜ್ಯೋತಿ ಜ್ಯೋತಿ ಈ ಆರು ಪದ ಅನಿಲಿನ, ಅಧೂಮವೆಂಬ ಹನ್ನೆರಡು ಪದ ಅಲ್ಲಿಹ ವರ್ಣ ಕಖಗಘಙಚಂ ಚಛಜಝಞ ಟಠ ಎಂಬ ಹನ್ನೆರಡು ವರ್ಣ ಅಲ್ಲಿಹ ಭುವನ ಸ್ವಸ್ಥರೇಶ್ವರ ಸ್ಥೂಲೇಶ್ವರ ಶಂಕುಕರ್ಣ ಕಾಳಾಂಜನ ಮಂಡಲೇಶ್ವರ ಮಾಕೋ ಟದ್ದಿರಂಡ ಛಗಬಂಧ ಸ್ಥಾಣು ಸ್ವರ್ಣಾಕ್ಷ ಭದ್ರ ಕರ್ಣ ಮಹಾಲಯ ಅವಿಮುಕ್ತ ರುದ್ರಕೋಟಿ ವಸ್ತ್ರ ಪಾದ ಭೀಮೇಶ್ವರ ಮಹೇಂದ್ರ ಅಟ್ಟಹಾಸ ಚಿಮ್ಮಳೇಶ್ವರ, ನಖುಲ ನಾಖುಲ ಕುರುಕ್ಷೇತ್ರ ಭೈರವರ ಕೈದಾರ ಮಹಾಬಲ ಮಧ್ಯಮೇಶ್ವರ ಮಹೇಂದ್ರಕೇಶ್ವರ ಬಲಭೇಶ್ವರ ಶ್ರೀಶೈಲ ಹರಿಶ್ಚಂದ್ರ ಅಕುಲಶ ಮುಡಿ ಚಾರ ಭೂತಿ ಣಷಾಢಿ ಪೌಷ್ಕರ ನೈಮಿಷ ಪ್ರಭಾಸ ಅಮರೇಶ್ವರ ಬದ್ರಕಾಳ ವೀರಭದ್ರ ತ್ರಿಲೋಚನ ವಿಷ್ಣು ಭವ ವಿವಾಹಿ ತ್ರಿದಕೇಶ್ವರ ತ್ರ್ಯಯುಸ್ತ ಗಣಾ ಎಂಬ ನಾಲ್ವತ್ತೆಂಟು ಭುವನ ಅಲ್ಲಿಹ ತತ್ವ ಶ್ರೋತ್ರ ತ್ವಕ್ಕು ಚಕ್ಷು ಜಿಹ್ವೆ ಘ್ರಾಣವೆಂಬ ಪಂಚ ತತ್ವ ಅಲ್ಲಿಹ ಕಲೆ ಶಾಂತಿಕಲೆ ನೋಡಾ ಅಪ್ರಮಾಣ ಕೂಡಲಸಂಗವದೇವಾ.

೩೯೪. ಅಲ್ಲಿಂದ ಮೇಲೆ ವಿಶುದ್ಧಿಚಕ್ರ ಷೋಡಶ ದಳಪದ್ಮ ಆ ಪದ್ಮದ ಮಧ್ಯದಲ್ಲಹ ಮಂತ್ರ ಈಶಾನ್ಯ ಮಂತ್ರ ಅಲ್ಲಿಹ ಪದ ಅಭಸ್ಥಾ ಅನಾದೆ ಧನಾದೆ ನಾ ನಾ ನಾ ಧೂ ಧೂ ಧೂ ಓಂ ಭೂಃ ಓಂ ಭವಃ ಓಂ ಸ್ವಾಹಾ ಅನಿಧನ ನಿಧನೋದ್ಭವ ಶಿವ ಶರ್ವ ಎಂಬ ಹದಿನಾರುಪದ ಅಲ್ಲಿಹ ವರ್ಣ ಅಆ ಇಈ ಉಊ ಋೠ ಌೡ ಏಐ ಓಔ ಅಂಅಃ ಎಂಬ ಹದಿನಾರು ವರ್ಣ ಅಲ್ಲಿಹ ಭುವನ ದೃಕ್ಷ, ವಿಭು, ರಿಂಭು, ದೌಷ್ಟಿ, ವಜ್ರಿ, ಫಣೀಶ, ವುಲದುಂಬರೀಶ, ಹ್ರಸನ, ಮಾರು ತಾಶನ ಕೃತ ಮರ್ದನ, ಆನಂದ, ವೃಷಧರ, ಬಲಿಪ್ರಿಯ, ಭೂತಪಾಲ ಜ್ಯೇಷ್ಠ ಸರ್ವ, ಸುರೇಶಾನ, ವೇದಪಾರಗ, ಜ್ಞಾನಭೂತ, ಸರ್ವಜ್ಞ, ಈಶಾನ, ಸರ್ವ ವಿದ್ಯಾಧಿಪ, ಪ್ರಕಾಮದ, ಪ್ರಶಿದಡನ, ಶ್ರೀಧರ ಲಕ್ಷ್ಮೀಧರ, ಜಟಾಧರ, ಸೌಮ್ಯ ದೇವ, ಧನ್ಯರೂಪ, ಏಡಿಶ, ಮೇಘ ವಾಹನಕದರ್ಪ, ಪಂಚಶಿಖಿ, ಪ್ರಪಂಚಾಂತಕ, ಕ್ಷಯಾಂತಕ, ತೀಕ್ಷ್ಣ, ಸುಸೂಕ್ಷ್ಮ ವಾಯುವೇಗ, ಲಘು, ಶೀಘ್ರ, ಸುನಾದ, ಮೇಘನಾದ, ಜ್ವಲಾಂತಕ, ದೀರ್ಘಬಾಹು, ಜಯ, ಭದ್ರ, ಶ್ವೇತ. ಮಹಾಬಲ, ಪಾಶಹಸ್ತ, ಅತಿಬಲ, ವಾರುಣೇಶ, ದೌಹಿ, ಹಂತ, ಮಾರಣ ನಿಸುತಿ, ಧನುರ್ಧಮು ಫಣತಾನಿ, ಯೊಕ್ತ್ರ ಯೆಂಬ ಅರುವತ್ತು

ನಾಲ್ಕು ಭುವನ ಅಲ್ಲಿಹ ತತ್ವ ಗುಣತ್ರಯ ಬುದ್ಧಿ, ಅಹಂಕಾರ, ಚೇತನ, ಸಕಲವೆಂಬ ಪಂಚತತ್ವ ಅಲ್ಲಿ ಕಲೆ ಶಾಂತ್ಯತೀತ ಕಲೆ ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೩೯೫. ಅಲ್ಲಿಂದ ಮೇಲೆ ಆಜ್ಞಾಚಕ್ರದ ದ್ವಿದಳ ಪದ್ಮ, ಆ ಪದ್ಮದ ಮಧ್ಯದಲ್ಲಿಹ ಮಂತ್ರ, ಹೃದಯ, ಶಿರ, ಶಿಖಾ, ಕವಚ, ನೇತ್ರ, ಅಸ್ತ್ರವೆಂಬ ಆರು ಮಂತ್ರ. ಅಲ್ಲಿಹ ಪದ ಪರಮಾತ್ಮನ್, ಮಹೇಶ್ವರ, ಮಹ ತೇಜ ಯೋಗಾಧಿಪತೆ, ಮುಂಚ ಮುಂಚ, ಪ್ರಥಮ ಪ್ರಥಮ, ಶರ್ವ ಶರ್ವಭವ ಭವ, ಭವೋದ್ಭವ, ಸರ್ವ ಭೂತ, ಸುಖಪ್ರದ ಸರ್ವ ಸಾನ್ನಿಧ್ಯಕರ, ಬ್ರಹ್ಮ ವಿಷ್ಣು, ರುದ್ರ, ಪರ, ಅರ್ಚಿತಾಸ್ತುತ, ಪೂರ್ವಸ್ಥಿತ, ಸಾಕ್ಷಿ, ಸಾಕ್ಷಿ, ತರು ತರು, ಪತಂಗ ಪತಂಗ, ಪಿಂಗ ಪಿಂಗ, ಜ್ಞಾನ ಜ್ಞಾನ, ಶಬ್ದ ಶಬ್ದ, ಸೂಕ್ಷ್ಮ ಸೂಕ್ಷ್ಮ, ಶಿವ, ಶರ್ವ ಶರ್ವ, ಓಂ ನಮಃಶಿವಾಯ, ನಮೋ ನಮಃ. ಓಂ ಎಂಬ ನಾಲ್ವತ್ತಾರು ಪದ, ಅಲ್ಲಿಹ ವರ್ಣ ಹಂ ಳಂ, ಹಂ ಕ್ಷಂ ಎಂಬ ನಾಲ್ಕು ವರ್ಣ, ಅಲ್ಲಿಹ ಭುವನ ಕೃತ, ಹರ, ಮೃತ್ಯು, ಕ್ಷಯಾಂತಕ, ಭಸ್ಮಾಂತಕ, ಬಭ್ರು, ದಹನ, ಜ್ವಲನ, ಹರಿಹರ, ಖಾಧರ, ಪಿಂಗ, ಹುತಾಶನ, ಜಯರುದ್ರ, ತ್ರಿದಶಾಧಿಪ, ಪಿನಾಕಿ, ಶಾಸ್ತ್ರ, ಅವ್ಯ, ವಿಭೂತಿ, ಪ್ರಮರ್ಧನ, ವಜ್ರದೇಹ, ಬಂಧ, ಅಜ, ಕಪಾಲ, ಈಶ್ವರ, ರುದ್ರ, ವಿಷ್ಣು, ಬ್ರಹ್ಮ. ಹಾಟಕ, ಕೂಷ್ಮಾಂಡ, ಕಾಲಾಗ್ನಿ, ರುದ್ರ, ಪ್ರಳಯಕಾಲ ಮಹಾರುದ್ರನೆಂಬ, ಮುವತ್ತೆರಡು ಭುವನ ಅಲ್ಲಿಹ ತತ್ವ, ಪರಶಿವ, ಪರಶಕ್ತಿ, ಸದಾಶಿವ, ಈಶ್ವರ, ಶುದ್ಧವಿದ್ಯ, ಮಾಯೆ ಕಾಲ ನಿಯತಿ, ಕಲೆ ವಿದ್ಯ, ರಾಗವೆಂಬ ಹನ್ನೊಂದು ತತ್ವ, ಅಲ್ಲಿಹ, ಕಲೆ, ಶಾಂತ್ಯತೀತೋತ್ತರ ಕಲೆ ನೋಡಾ! ಅಪ್ರಮಾಣ ಕೂಡಲಸಂಗಮದೇವಾ.

೩೯೬ ಈ ಷಡ್ವಿಧದಿಂದವೆ ಅನೇಕ ವೇದಂಗಳೆಸಗಿತ್ತು. ಈ ಷಡ್ವಿಧದಿಂದವೆ ಅನೇಕ ಶಾಸ್ತ್ರಂಗಳೆಸಗಿತ್ತು. ಈ ಷಡ್ವಿಧದಿಂದವೆ ಅನೇಕ ಪುರಾಣಂಗಳೆಸಗಿತ್ತು. ಈ ದ್ವಿಧದಿಂದವೆ ಅನೇಕಾಗಮಂಗಳೆಸಗಿತ್ತು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೩೯೭. ಮಂತ್ರಾಧ್ವ ಪದಾಧ್ವವ ತನ್ನಲ್ಲಿ ತಿಳಿದು ಅನುಭವಿಸಬಲ್ಲಾತನೆ ಆಚಾರ್ಯನೆಂಬೆ. ವರ್ಣಾಧ್ವ ಭುವನಾಧ್ವವ ತನ್ನಲ್ಲಿ ತಿಳಿದು ಅನುಭವಿಸಬಲ್ಲಾತನೆ ಆಚಾರ್ಯನೆಂಬೆ. ತತ್ವಾಧ್ವ ಕಲಾಧ್ವವ ತನ್ನಲ್ಲಿ

ತಿಳಿದು ಅನುಭವಿಸಬಲ್ಲಾತನೆ ಆಚಾರ್ಯನೆಂಬೆ. ಈ ಷಡ್ವಿಧವ ತನ್ನಲ್ಲಿ ತಿಳಿದು ಅನುಭವಿಸಲರಿಯದೆ ಆಚಾರ್ಯರೆಂಬ ಅನಾಚಾರ್ಯರ ಮೆಚ್ಚುವನೆ ನಮ್ಮ ಅಪ್ರಮಾಣ ಕೂಡಲಸಂಗಮದೇವಾ.

ಷಡಧ್ವದುತ್ಪತ್ಯದ ವರ್ತನೆಯ ವಚನಸಮಾಪ್ತ ಶ್ರೀ ॥

೩೯೮. ಇನ್ನು ಗುರುಲಿಂಗ ಜಂಗಮವೆಂದು ಸುಳಿವ ಮಹಾತ್ಮರ ತಾಮಸ ನಿರಸನವ ಮಾಡುವ ವಚನವೆಂತೆಂದಡೆ, ಗುರುಲಿಂಗ ಜಂಗಮವೆಂದು ಸುಳಿವ ಅಣ್ಣಗಳು ನೀವು ಕೇಳಿರೆ ದಾಸಿಯ ಸಂಗವುಳ್ಳನ್ನಕ್ಕರ ಗುರುವೆನ್ನಲಾಗದು. ವೇಶಿಯ ಸಂಗವುಳ್ಳನ್ನಕ್ಕರ ಲಿಂಗವೆನ್ನಬಾರದು. ಪರಸ್ತ್ರೀಯರ ಸಂಗವುಳ್ಳನ್ನಕ್ಕರ ಜಂಗಮವೆನ್ನಬಾರದು. ಈ ತ್ರಿವಿಧ ಸಂಗವುಳ್ಳನ್ನಕ್ಕರ ಗುರು ಲಿಂಗ ಜಂಗಮವೆನ್ನಬಾರದು. ಅವರ ಪಂಚ ಮಹಾ ಪಾತಕರೆಂಬೆ ಅಪ್ರಮಾಣ ಕೂಡಲಸಂಗಮದೇವಾ.

೩೯೯. ದಾಸಿಯ ಸಂಗವುಳ್ಳನ್ನಬರ ಗುರುವಿಲ್ಲವೆಂಬ ಶ್ರುತಿ ದಿಟ ನೋಡಾ. ವೇಶಿಯ ಸಂಗವುಳ್ಳನ್ನಬರ ಲಿಂಗವಿಲ್ಲವೆಂಬ ಶ್ರುತಿ ಇದು ನೋಡಾ. ಪರಸ್ತ್ರೀ ಸಂಗವುಳ್ಳನ್ನಬರ ಜಂಗಮವಿಲ್ಲವೆಂಬ ಶ್ರುತಿ ಇದು ನೋಡಾ. ಈ ತ್ರಿವಿಧ ಸಂಗವುಳ್ಳನ್ನಬರ ತ್ರಿವಿಧ ಪ್ರಸಾದವಿಲ್ಲವೆಂಬ ಶ್ರುತಿ ಇದು ನೋಡಾ. ಈ ತ್ರಿವಿಧ ಪ್ರಸಾದವಿಲ್ಲದವ ಅನಾಚಾರಿ ಎಂಬ ಶ್ರುತಿ ದಿಟ ನೋಡಾ. ಆ ಅನಾಚಾರಿಯೇ ಪಂಚ ಮಹಾ ಪಾತಕನೆಂಬ ಶ್ರುತಿ ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೪೦೦. ಹೊನ್ನ ಬಿಡದೆ ಹಿರಿಯರೆಂಬರು ಅಲ್ಲಿಲ್ಲ ನೋಡಾ! ಹೆಣ್ಣ ಬಿಡದೆ ಹಿರಿಯರೆಂಬರು ಅಲ್ಲಿಲ್ಲ ನೋಡಾ! ಮಣ್ಣ ಬಿಡದೆ ಹಿರಿಯರೆಂಬರು ಅಲ್ಲಿಲ್ಲ ನೋಡಾ! ಈ ತ್ರಿವಿಧವನತಿಗಳೆಯದೆ ಹಿರಿಯರೆಂಬ ನುಡಿಗೆ ನಾಚರು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೪೦೧. ಹೊನ್ನ ಬಿಟ್ಟರೆ ಹಿರಿಯನೆಂಬೆ ? ಅಲ್ಲಲ್ಲ ನೋಡಾ! ಹೆಣ್ಣ ಬಿಟ್ಟರೆ ಹಿರಿಯನೆಂಬೆನೆ ? ಅಲ್ಲಲ್ಲ ನೋಡಾ ! ಮಣ್ಣ ಬಿಟ್ಟರೆ ಹಿರಿಯನೆಂಬೆನೆ ? ಅಲ್ಲಲ್ಲ ನೋಡಾ ! ಈ ತ್ರಿವಿಧವು ಒಂದು ಬಿಟ್ಟೊಂದಿರದಾಗಿ ಈ ತ್ರಿವಿಧವನತಿಗಳೆದು ಮಹಾ ಘನದಲ್ಲಿ ಮನ ಲೀಯ್ಯವಾಗಿ ಸುಳಿವ ನಿಜ ಗುರುವಿಂಗೆ ನಮೋ ನಮೋ ಎಂಬೆ ನೋಡಾ ಅಪ್ರಮಾಣ ಕೂಡಲ ಸಂಗಮದೇವಾ.

೪೦೨. ಹೆಣ್ಣೆಂಬ ಭೂತವ ಸೋಂಕಿ ಹೆಣನಾಗಿಹ ಗುರುಗಳ ಗುರುವಲ್ಲವೆಂದುದು ನೋಡಾ ಶ್ರುತಿಗಳು. ಹೆಣ್ಣೆಂಬ ಭೂತವ ಸೋಂಕಿ ಹೊಲೆಯನಾಗಿಹ ಗುರುಗಳ ಗುರುವಲ್ಲವೆಂದುದು ನೋಡಾ ಶ್ರುತಿಗಳು. ಕಾಮನೆಂಬ ಭೂತವ ಸೋಂಕಿ ಕರ್ಮಿಯಾಗಿಹ ಗುರುಗಳ ಗುರುವಲ್ಲವೆಂದುದು ನೋಡಾ ಶ್ರುತಿಗಳು ಪಾಪವೆಂಬ ಭೂತವು ಸೋಂಕಿ, ಪಾಪಿಯಾಗಿಹ ಗುರುಗಳ ಗುರುವಲ್ಲವೆಂದುದು ನೋಡಾ ಶ್ರುತಿಗಳು. ಈ ಪಂಚ ಭೂತಂಗಳನತಿಗಳೆದು ಮನವು ಮಹಾಘನದಲ್ಲಿ ನಿಂದ ನಿಜಗುರುವಿಂಗೆ ನಮೋ ನಮೋ ಎನುತಿರ್ದೆನು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೪೦೩. ಪಸರ ಪಸರ ತಪ್ಪದಿಹ ಗಾಜುಗಳೆಲ್ಲ ರತ್ನವಾಗಬಲ್ಲುದೆ ಅಯ್ಯ? ಕೇರಿಕಂತಪ್ಪದಿಹ ಶ್ವಾನಗಳೆಲ್ಲ ಸಿಂಹನಾಗಬಲ್ಲದೆ, ಅಯ್ಯ? ಇದು ಕಾರಣ ಮನ ಮಹದಲ್ಲಿ ನಿಂದು, ಪರಿಣಾಮವ ನೆಲೆಗೊಂಡ, ಮಹಾನುಭಾವ ಸದ್ಗುರು ಕೋಟಿಗೊಬ್ಬನು ಇಲ್ಲವೆಂಬೆನು ನೋಡಾ ಅಪ್ರಮಾಣ ಕೂಡಲಸಂಗಮದೇವಾ,

೪೦೪. ಹೊನ್ನು, ಹೆಣ್ಣು, ಮಣ್ಣು ಹಿಡಿದನ್ನಕ್ಕ ಗುರುವಲ್ಲ. ಆ ಗುರುವಿನ ಬೆಂಬಳಿ ಲಿಂಗವಲ್ಲ. ಆ ಲಿಂಗವ ಪೂಜೆಯ ಮಾಡುವಾತ ಶಿಷ್ಯನಲ್ಲ. ಆ ಗುರುಶಿಷ್ಯರಿಬ್ಬರಿಗು ಕುಂಭನೀಪಾತಕ, ತಪ್ಪದೆಂದು ಶ್ರುತಿಗಳು ಸಾರುತ್ತಿವೆ ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೪೦೫. ಹೊನ್ನ ಬಟ್ಟರೇನು ಹೆಣ್ಣಿನಾಸೆ ಬಿಡದನ್ನಕ್ಕರ? ಅಲ್ಲಿಗೆ ಹಿರಿಯತನ ಸಾಲದು. ಹೆಣ್ಣ ಬಟ್ಟರೇನು ಮಣ್ಣಿನಾಸೆಯ ಬಿಡದನ್ನಕ್ಕರ? ಅಲ್ಲಿಗೆ ಹಿರಿಯತನ ಸಾಲದು. ಅದೆಂತೆಂದಡೆ, ಈ ತ್ರಿಪಥವು ಒಂದು ಬಿಟ್ಟೊಂದಿರದಾಗಿ, ಈ ತ್ರಿವಿಧಘನತಿಗಳೆದು, ಮಹಾಘನದಲ್ಲಿ ಲಿಯ್ಯವಾಗಿ ದಗ್ಧಪಟನ್ಯಾಯದಂತೆ ಸುಳಿವ ನಿಜ ಶುಭಲಿಂಗ ನಮೋ ನಮೋ ಎನುತಿರ್ದೆನು ಕಾಣಾ ಅಪ್ರಮಾಣ ಕೂಡಲಸಂಗಮದೇವಾ.

೪೦೬. ಪಂಚಾಕ್ಷರಿ ಪಂಚ ವಕ್ತ್ರಂಗಳ ನೆಲೆಯನರಿಯದೆ ಅಕಾರ ಉಕಾರ ಮಕಾರ ನಾದ ಬಿಂದು ಕಳೆಯನರಿಯದೆ ಪ್ರಣವ ಸ್ವರೂಪನರಿಯದು ನಿರಾಳ ನಿರಂಜನ ನಿರಾಮಯ ನಿರಾಮಯಾತೀತ ವನರಿಯದೆ ಗುರುಲಿಂಗ ಜಂಗಮವೆಂದು ಸುಳಿದರೆ ಪಂಚ ಮಹಾ ಪಾತಕ ನೋಡಾ! ಅಪ್ರಮಾಣ ಕೂಡಲಸಂಗಮದೇವಾ.

೪೦೭. ಅಕಾರ, ಉಕಾರ, ಮಕಾರವನರಿಯರು. ಅಕಾರದೊಳಗೆ ಅಕಾರವನರಿಯರು. ಅಕಾರದೊಳಗೆ ಉಕಾರವನರಿಯರು. ಅಕಾರದೊಳಗೆ ಮಕಾರವನು ಅರಿಯರು. ಅಕಾರದೊಳಗೆ ಓಂಕಾರವನರಿಯರು. ಅಕಾರದೊಳಗೆ ನಿರಾಳ ನಿರಂಜನ ನಿರಾಮಯ ನಿರಾಮಯಾತೀತವನರಿಯದೆ ಗುರು ಲಿಂಗ ಜಂಗಮವೆಂದು ನುಡಿದರೆ ಅಘೋರ ನರಕವೆಂದು ಆಗಮಂಗಳು ಹೇಳುತ್ತಿಹುದು ಅಪ್ರಮಾಣ ಕೂಡಲಸಂಗಮದೇವಾ.

೪೦೮. ಉಕಾರದೊಳಗೆ ಉಕಾರವ ನರಿಯರು. ಉಕಾರದೊಳಗೆ ಅಕಾರವನರಿಯರು. ಉಕಾರದೊಳಗೆ ಮಕಾರವನರಿಯರು. ಮಕಾರದೊಳಗೆ ಓಂಕಾರವನರಿಯರು. ಉಕಾರದೊಳಗೆ ನಿರಾಳ ನಿರಂಜನ ನಿರಾಮಯ ನಿರಾಮಯಾತೀತವನರಿಯದೆ ಗುರು ಲಿಂಗ ಜಂಗಮವೆಂದು ನುಡಿದರೆ ಅವ ಅನಾಚಾರ್ಯ ಪಂಚ ಮಹಾಪಾತಕವೆಂದು ನೋಡಾ ಅಥರ್ವಣವೇದ ಅಪ್ರಮಾಣ ಕೂಡಲಸಂಗಮದೇವಾ.

೪೦೯. ಮಕಾರದೊಳಗೆ ಮಕಾರವನರಿಯರು. ಮಕಾರದೊಳಗೆ ಅಕಾರವನರಿಯರು. ಮಕಾರದೊಳಗೆ ಉಕಾರವನರಿಯರು. ಮಕಾರದೊಳಗೆ ಓಂಕಾರವನರಿಯರು. ಮಕಾರದೊಳಗೆ ನಿರಾಳ ನಿರಂಜನ ನಿರಾಮಯ ನಿರಾಮಯಾತೀತವನರಿಯದೆ ಗುರು ಲಿಂಗ ಜಂಗಮವೆಂದು ನುಡಿದರೆ ಕುಂಭಿಯ ಪಾತಕವೆಂದು ಇತಿಹಾಸ ಪುರಾಣದಲ್ಲಿ ಹೇಳುವದು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೪೧೦. ಮಂತ್ರ ಹನ್ನೊಂದನರಿಯರು. ಆಚಾರ್ಯರೆಂಬರು ಪದ ತೊಂಭತ್ತುನಾಲ್ಕು ಅರಿಯರು. ಆಚಾಯರೆಂಬರು. ವರ್ಣ ಐವತ್ತೆರಡನರಿಯರು. ಆಚಾರ್ಯರೆಂಬರು. ಭುವನ ಇನ್ನೂರು ಇಪ್ಪತ್ತುನಾಲ್ಕು ಅರಿಯರು. ಆಚಾರ್ಯರೆಂಬರು. ತತ್ವ ಮೂವತ್ತಾರನರಯರು. ಆಚಾರ್ಯರೆಂಬರು. ಮೂವತ್ತೆಂಟು ಕಲೆಗಳನರಿಯರು. ಆಚಾರ್ಯರೆಂಬರು. ಅರವತ್ತುನಾಲ್ಕು ಕಲೆಜ್ಞಾನವನರಿಯರು ಆಚಾರ್ಯರೆಂಬರು. ಅಲ್ಲಲ್ಲ ಅವ ಅನಾಚಾರ್ಯನೆಂದು ಆದಿ ವೇದಂಗಳು ಹೇಳುತ್ತಿಹುದು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೪೧೧. ಆಣವ ಮಾಯೆ, ಕಾರ್ಮಿಕವೆಂಬ ಮಲತ್ರಯಂಗಳಲ್ಲಿ ಬಿದ್ದು ಹೊರಳಾಡುತ್ತಿಪರು ಗುರುವೆಂಬ ನುಡಿಗೆ ನಾಚರು. ಪರಧನ ಪರಸ್ತ್ರೀಗಳುಳುತ್ತಿಪರು. ಗುರುವೆಂಬ ನುಡಿಗೆ ನಾಚರು ಜಾಗ್ರತ್ ಸ್ವಪ್ನ ಸುಷುಪ್ತಿಯುಡಿಸಿ, ತೂರ್ಯ ತೂರ್ಯಾತೀತವನಾಗಿಹ ಮಹಾ ಘನದಲ್ಲಿ ಬೆರಸಿ

ಬೆರಾಗಲರಿಯರು ಗುರು ಲಿಂಗ ಜಂಗಮವೆಂಬ ಪಂಚ ಪಾತಕರ ನೋಡಿ ನಾಚಿತ್ತು ನಾಚಿತ್ತು ನೋಡಾ ಎನ್ನ ಮನ ಅಪ್ರಮಾಣ ಕೂಡಲಸಂಗಮ ದೇವಾ.

೪೧೨. ಪಂಚಾಕ್ಷರ ಪಂಚವಕ್ತ್ರವನರಿದು, ಅಕಾರ, ಉಕಾರ, ಮಕಾರ, ನಾದ, ಬಿಂದು, ಕಳೆಯ ತಿಳಿದ ಪ್ರಣವ ಸ್ವರೂಪವನರಿದು ನಿರಾಳ ನಿರಂಜನ ನಿರಾಮಯ ನಿರಾಮಯಾತೀತದೊಳು ಸುಳಿವ ನಿಜ ಸುಳುಹಿಂಗೆ ಭವ ನಾಸ್ತಿಯಾದ ಬಳಿಕ ಗುರುವೆನ್ನಬಹುದು ಲಿಂಗವೆನ್ನಬಹುದು ಜಂಗಮವೆನ್ನಬಹುದು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೪೧೩. ಅಕಾರ ಉಕಾರ ಮಕಾರವನರಿದು ಅಕಾರದೊಳಗೆ ಅಕಾರವನರಿದು ಅಕಾರದೊಳಗೆ ಉಕಾರವನರಿದು ಅಕಾರದೊಳಗೆ ಮಕಾರವನರಿದು ಅಕಾರದೊಳಗೆ ಓಂಕಾರವನರಿದು ಅಕಾರದೊಳಗೆ ನಿರಾಳ ನಿರಂಜನ ನಿರಾಮಯ ನಿರಾಮಯಾತೀತವನರಿದು ನಿರಾಮಯಾತೀತದಲ್ಲಿ ನಿಷ್ಪತ್ತಿಯಾಗಿ ಸುಳಿವ ನಿಜ ಸುಳುಹಿಂಗೆ ಭವ ನಾಸ್ತಿಯಾದ ಬಳಿಕ ಗುರುವೆನ್ನಬಹುದು ಲಿಂಗವೆನ್ನಬಹುದು ಜಂಗಮವೆನ್ನಬಹುದು ನೋಡಾ ಅಪ್ರಮಾಣ ಕೂಡಲ ಸಂಗಮದೇವಾ.

೪೧೪. ಉಕಾರದೊಳಗೆ ಉಕಾರವನರಿದು ಉಕಾರದೊಳಗೆ ಅಕಾರವನರಿದು ಉಕಾರದೊಳಗೆ ಮಕಾರವನರಿದು, ಉಕಾರದೊಳಗೆ ಓಂಕಾರವನರಿದು ಉಕಾರದೊಳಗೆ ನಿರಾಳವನರಿದು ಉಕಾರದೊಳಗೆ ನಿರಾಮಯಾತೀತವನರಿದು ಆ ನಿರಾಮಯಾ ತೀತದಲ್ಲಿ ಲಿಯ್ಯವಾಗಿ ಸುಳಿವ ನಿಜ ಸುಳುಹಿಂಗೆ ಭವ ನಾಸ್ತಿಯಾದ ಬಳಿಕ ಗುರುವೆನ್ನಬಹುದು ಲಿಂಗವೆನ್ನಬಹುದು ಜಂಗಮವೆನ್ನಬಹುದು. ಆ ಮಹಾ ಶರಣನೆ ಓಂ ವಿಶ್ವಾಧಿಕೋರುದ್ರೋ ಮಹಾಋಷಿ: ಸರ್ವೋ ಮಹೇಶ್ವರ ರುದ್ರ ತಸ್ಮೈ ರುದ್ರಾಯ ನಮಸ್ತು ಎಂದು ವೇದಂಗಳು ಹೊಗಳಿ ನಮೋನಮೋ ಎನುತಿರ್ದುದೆಂದು ನಿರಾಮಯಾ ತೀತಾಗಮದಲ್ಲಿ ಕೊಂಡಾಡುತ್ತಿಹುದು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೪೧೫. ಮಕಾರದೊಳಗೆ ಮಕಾರವನರಿದು ಮಕಾರದೊಳಗೆ ಅಕಾರವನರಿದು, ಮಕಾರದೊಳಗೆ ಉಕಾರವನರಿದು ಮಕಾರದೊಳಗೆ ಓಂಕಾರವನರಿದು, ಮಕಾರದೊಳಗೆ ನಿರಾಳವನರಿದು, ಮಕಾರದೊಳಗೆ ನಿರಂಜನವನರಿದು ಮಕಾರದೊಳಗೆ ನಿರಾಮಯವನರಿದು, ಮಕಾರದೊಳಗೆ ನಿರಾಮ

ಯಾತೀತವನರಿದು, ಆ ನಿರಾಮಯಾತೀತದಲ್ಲಿ ಬೆರಸಿ ನಿಶ್ಚಿಂತ್ಯನಾಗಿ ಸುಳಿವ ನಿಜ ಸ್ಸುಳುಹಿಂಗೆ ಭವ ನಾಸ್ತಿಯಾದ ಬಳಿಕ ಗುರುವೆನ್ನಬಹುದು ಲಿಂಗವೆನ್ನಬಹುದು ಜಂಗಮವೆನ್ನಬಹುದು ಎಂದು ವೇದಂಗಳು ಆ ಮಹಾ ಶರಣನ ಮಸ್ತಕದಲ್ಲಿ ಹೊತ್ತುಕೊಂಡು ಓಂ ನಮೋ ಅಪ್ರಮಾಣ ಅಗೋಚರಾಯ ಅನಾದಿ ರುದ್ರೋನ ದ್ವಿತೀಯಾ ತಸ್ಮೈ ನಮೋನಮೋ ಎಂಬ ನುಡಿ ಇದ್ದುದೆಂದು ಅಸಿಪದಾತೀತಾಗವುದಲ್ಲಿ ಹೇಳುತ್ತಿಹುದು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೪೧೬. ಮಂತ್ರ ಹನ್ನೊಂದು ಪದ ತೊಂಭತ್ತುನಾಲ್ಕುವನರಿದು ಮೇಲಾಗಿ ಮನ ಮಹಾ ಘನದಲ್ಲಿ ನಿಂದರೆ ಆಚಾರ್ಯನೆಂದುದು ನೋಡಾ ಶ್ರುತಿಗಳು. ವರ್ಣ ಐವತ್ತೆರಡು ಭುವನ ಇನ್ನೂರ ಇಪ್ಪತ್ತುನಾಲ್ಕುವನರಿದು ಮೂವತ್ತಾರು ತತ್ವವನರಿದು ಷಟ್ಸ್ಥಲಗಳು ತಿಳಿದು ಮೇಲಾಗಿ ಮಹಾ ಘನದಲ್ಲಿ ನಿಂದರೆ ಆಚಾರ್ಯನೆಂದುದು ನೋಡಾ ಶ್ರುತಿಗಳು ಮೂವತ್ತೆಂಟು ಕಲೆಗಳು ಅರುವತ್ತುನಾಲ್ಕು ಕಲೆ ಜ್ಞಾನವನರಿದು ಮೇಲಾಗಿ ಮನ ಮಹಾ ಘನದಲ್ಲಿ ನಿಂದರೆ ಅವರ ವೇದಂಗಳು ಜಗದಾರಾಧ್ಯರೆಂದು ನಮೋ ನಮೋ ಎನ್ನುತ್ತಿದ್ದುದೆಂದು ಇತಿಹಾಸ ಪುರಾಣದಲ್ಲಿ ಹೇಳುತ್ತಿಹುದು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೪೧೭. ಪಂಚಾಕ್ಷರ ಪಂಚ ವಕ್ತ್ರಂಗಳ ನೆಲೆಯನರಿದು, ನಿರಾಳ ನಿರಂಜನ, ನಿರಾಮಯ, ನಿರಾಮಯಾತೀತವನರಿದು, ಆ ನಿರಾಮಯಾತೀತದೊಳು ಮನ ಲಿಯ್ಯವಾಗಿ ಸುಳಿವ ನಿಜ ಸುಳಿಹಿಂಗೆ ಭವ ನಾಸ್ತಿಯಾದ ಬಳಿಕ ಗುರುವೆನ್ನಬಹುದು ಲಿಂಗವೆನ್ನಬಹುದು. ಜಂಗಮವೆನ್ನಬಹುದು. ಆ ಮಹಾಶರಣನ ಶ್ರೀಪಾದಕ್ಕೆ ವೇದಂಗಳು ಇರುಳು ಹಗಲು ಎಡೆಬಿಡದೆ ನಮೋ ನಮೋ ಎನುತಿರ್ದುದು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೪೧೮. ಆಣವ, ಮಾಯೆ, ಕಾರ್ಮಿಕವೆಂಬ ಮಲತ್ರಯಂಗಳ ಕೂಡ್ದದೆ, ಪರಧನ, ಪರಸ್ತ್ರೀಗಳಿಸದೆ, ಜಾಗ್ರತ್ ಸ್ವಪ್ನ ಸುಷುಪ್ತಿಯೆಂಬ ಮೂರವಸ್ಥೆಯ ಗೆಲಿದು, ತೂರ್ಯವನೊಡಗೂಡಿ, ತೂರ್ಯಾತೀತಕತ್ತ ವ್ಯೋಮಾತೀತವಾಗಿಹ ಆತನೆ ಗುರು. ಆತನೆ ಲಿಂಗ, ಆತನೆ ಜಂಗಮ, ಆತನೆ ಮಹಾ ಶರಣ, ಆತನೆ ನಿತ್ಯ ನಿರಂಜನ ನಿರಾಮಯ, ನಿರಾಮಯಾತೀತನು ಆತನೆ ನಮ್ಮ ಅಪ್ರಮಾಣ ಕೂಡಲಸಂಗಮದೇವಾ.

೪೧೯. ಇಲ್ಲಿ ಪರಿಯಂತರ ಗುರು ಲಿಂಗ ಜಂಗಮವೆಂದು ಸುಳಿವ ಮಹಾತ್ಮರ ತಾಮಸ ನಿರಸನ ವಚನ ಸಮಾಪ್ತ ಶ್ರೀ.

ಇನ್ನು ಮುಂದೆ ಅನುಭಾವದ ವಚನವದೆಂತೆಂದಡೆ, ಜಾಗ್ರತ್, ಸ್ವಪ್ನ, ಸುಷುಪ್ತಿ, ಎಂಬ ಮೂರವಸ್ಥೆಯು ಅನಂತ ಭವ ದುಃಖಂಗಳ ತಹವು. ಈ ಮೂರವಸ್ಥೆಯು ಕೆಡೆಮೆಟ್ಟಿ ಸಾಕ್ಷಿಯಾಗಿಹ ತೂರ್ಯ ಬೋಧೆಯು ಕಂಡವರ, ಘನವನೇನೆಂದುಪಮಿಸುವೆ ನೋಡಾ ಅಪ್ರಮಾಣಕೂಡಲ ಸಂಗಮದೇವಾ.

೪೨೦. ಅಂದಾತ ದುಃಖಕ್ಕೊಳಗಾಗದೆ, ಅಂಧಕಾರವೆ ಮುಚ್ಚಿ ಕೊಂಡು, ಕಾಣಬಾರದಿರ್ಪ ಮಹಾ ಮಾಯೆಯ ಕೆಡೆ ಮೆಟ್ಟಿ ಮೇಲಾಗಿಹ ವಿಶಾಲ ತೂರ್ಯ ಬೋಧೆಯು ತಿಳಿದು, ಕಂಡರೆ ಮುಕ್ತಿಯಹುದು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೪೨೧. ತನ್ನನರಿಯದೆ ತಾನೆ ಕೆಟ್ಟೆನೆಂದುದು ಶ್ರುತಿಗಳು. ತನ್ನ ನರಿದರೆ ತನಗೆ ಕೇಡಿಲ್ಲವೆಂದುದು ನೋಡಾ ಶ್ರುತಿಗಳು. ತನ್ನನರಿದ ಅರಿವ ನರಿಯದೆ, ತನ್ನನರ್ಚಿಸುತ್ತ ತಾನಿರ್ದನು ನೋಡಾ ಅಪ್ರಮಾಣ ಕೂಡಲ ಸಂಗಮದೇವಾ.

೪೨೨. ಮೂರವಸ್ಥೆಯು ನೆಲೆಯೆಂದು ಕಾಂಬವ ಅರುವಿಲ್ಲದ ಅಜ್ಞಾನಿ ನೋಡಾ. ಹೇಳಿದವಸ್ಥಾತ್ರಯದೊಳಿದ್ದರೆ ಜನನ ಮರಣ ತಪ್ಪದು ನೋಡಾ ಸಾಕ್ಷಾತ್ ಅವಸ್ಥೆ ತೂರ್ಯವ ತತ್ಪರವೆಂದರೆ ಅಲ್ಲಲ್ಲ ಮೂರವಸ್ಥೆಯು ಅರ್ಥ ತೂರ್ಯವ ತತ್ಪರವೆಂದರೆ ಜನನ ಮರಣವಹುದು ನೋಡಾ ಅಪ್ರಮಾಣ ಕೂಡಲ ಸಂಗಮದೇವಾ.

೪೨೩. ಕಾಯ ಜೀವದ ಹೊಲಿಗೆಯು ಬಿಚ್ಚಲರಿಯದಿರ್ದಡೇನು ಅನೇಕ ಕಾಲವು ಕಾಯ ಜೀವದ ಹೊಲಿಗೆಯ ಬಿಚ್ಚಿ ತೋರಿದನೆನ್ನ ಸದ್ಗುರು ಸ್ವಾಮಿ ಜೀವ ಪರಮರ ಭೇದವನರಿಯದೆ ಅನೇಕ ಭವದಲ್ಲಿ ಬಂದೆನು. ಅನೇಕ ಭವದಲ್ಲಿ ಬಂದ ಶಿಶುವನೆತ್ತಿಕೊಂಡು ಜೀವ ಪರಮರ ಭೇದವ ತಿಳುಹಿ ಮತ್ತಂಬೆರಿಸುವ ಪರಿಯಾಯವ ತೋರಿದ ಮಹಾ ಗುರುವಿಂಗೆ ನಮೋ ನಮೋ ಎನುತಿರ್ದೆನು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೪೨೪. ತಾನೆಂಬ ಅರುವ ಬಿಟ್ಟು ಮತ್ತೆಲ್ಲವನತಿಗಳೆದು ಅಂಥಾ ದಿಂಥಾದ್ದೆಂದು ಹೇಳಬಾರದ ತೂರ್ಯಾತೀತವ ಪರವೆಂದು ಶ್ರುತಿಗಳು ಸಾರುತ್ತಿಹುದು ನೋಡಾ ಅಪ್ರಮಾಣ ಕೂಡಲಸಂಗಮದೇವಾ.

ಸಂಪುಟ ೩೦.  ಸಂಚಿಕೆ ೪.

# ಶಿವಾನುಭವ

ಸಂಪಾದಕರು
ರಾ|| ಬ|| ಫ. ಗು. ಹಳಕಟ್ಟಿ,
ಬಿ. ಎ. ಎಲ್. ಎಲ್. ಬಿ.
ವಿಜಾಪುರ

[ವಾರ್ಷಿಕ ಚಂದಾ ೫-೧೨-೦ ಅಂಚೆಯ ವೆಚ್ಚ ಬೇರೆ]

ಎಪ್ರೀಲ ೧೯೫೬

# ವಿಷಯಾನುಕ್ರಮಣಿಕೆ.







# ಶಿವಾನುಭವ

ಸಂಚಿಕೆ ೩೦ | ಎಪ್ರೀಲ ೧೯೫೬ | ಸಂಪುಟ ೪

## ಧಾರ್ಮಿಕ ಮೂಢ ನಂಬಿಗೆ

( ಲೇಖಕರು:- ಶ್ರೀ ಶಿವಾನಂದ ಸ್ವಾಮಿಗಳು ಗವಿಮಠ, ತೆಗ್ಗಿಹಳ್ಳಿ )

### ಜ್ಯೋತಿಷ್ಯ ನಂಬಬಾರದು

ವೀರಶೈವರು ಲಿಂಗಾಂಗಿಗಳಾಗಿ ವಿಹರಿಸುವದರಿಂದ ಸದಾ ದೇವರ ಸಾನ್ನಿಧ್ಯದಲ್ಲಿ ದೇವರ ಧ್ಯಾನ ಜಪಗಳೊಂದಿಗೆ ನಿಷ್ಕಾಮ ಕಾಯಕ ಮಾಡಿ ದಾಸೋಹ ಮಾಡುವ ದಾಸೋಹಿಗಳಾಗಿರುವದರಿಂದ ಅವರಿಗೆ ಯಾರ ಅಂಜಿಕೆ ಭಯಗಳಿರುವದಿಲ್ಲ. ಅದಕ್ಕಾಗಿ ಜೋತಿಷ್ಯ ಕೇಳುವದು ಶಕುನ ನೋಡುವದು ಮೊದಲಾದ ಭಾವಿಕತನಗಳನ್ನು ಎಂದೂ ಮಾಡಬಾರದು. ಸಾಮಾನ್ಯರೂ ಕೂಡ ಇವುಗಳನ್ನು ಎಂದೂ ನಂಬಬಾರದು. ಹೀಗಿದ್ದ ಬಳಿಕ ವೀರಶೈವರಂತೂ ಇವುಗಳ ಸಮೀಪಕ್ಕೆ ಸಹ ಹಾಯಬಾರದು. ವ್ಯವಹಾರಿಕ ದೃಷ್ಟಿಯಿಂದಲೂ ಇವುಗಳನ್ನು ಲಕ್ಷಿಸುವದು ವಿಚಾರಿಸುವದು ಎಷ್ಟು ಮಾತ್ರಕ್ಕೂ ಸರಿ ಎನಿಸದು. ಶರಣರು ಇವುಗಳನ್ನು ಬಲವಾಗಿ ಖಂಡಿಸಿದ್ದಾರೆ. ಅದರಂತೆ ಅವರು ನಡೆದಿದ್ದಾರೆ. ಒಬ್ಬ ಪರಮಾತ್ಮನೇ ಸರ್ವವನ್ನೂ ಮಾಡುವವನಿರುವದರಿಂದ ಜ್ಯೋತಿಷ್ಯ ಹೊತ್ತಿಗೆ ಶಕುನಗಳು ನಡುವೆ ಎಲ್ಲಿಂದ ಬರುವವು. ಹೀಗಾದರೆ ಪರಮಾತ್ಮನ ಮೇಲಿನ ನಂಬಿಗೆ ಹಾರಿ ಹೋಗುವದರಲ್ಲಿ ಸಂದೇಹವಿಲ್ಲ. ಇದೆಲ್ಲ ಪರಮಾತ್ಮನನ್ನು ನಂಬಲಾರದ ಸಂಸಾರದಲ್ಲಿ ಒಳ್ಳೇ ಭ್ರಾಂತಿ ವ್ಯಾಮೋಹಗಳುಳ್ಳ ಜನರ ಸ್ವಭಾವವಾಗಿದೆ. ಇವು ಜನರನ್ನು ಹೇಡಿಗಳನ್ನಾಗಿ ಮಾಡುವವು. ಸೋಮಾರಿಗಳನ್ನಾಗಿ ಮಾಡುವವು. ಪ್ರಯತ್ನಬಿಟ್ಟು ಹಣೆಯ ಬರಹವನ್ನೇ ಎದುರು ನೋಡುತ್ತ ಕೂಡ್ರುವರು.

ದೇವರ ಮೇಲಿನ ನಂಬಿಗೆ ಹಾರಿ ಹೋಗುವದು. ನಮ್ಮ ಪೂರ್ವ ಜನ್ಮದ ಕರ್ಮ, ವಾಸನೆ ಮೊದಲಾದವುಗಳ ಮುಖಾಂತರ ಈ ಹೊಸಜನ್ಮ ಬಂದಿರುವದು. ನಡುವೆ ಜೋತಿಷ್ಯ ಹೊತ್ತಿಗೆ ಶಕುನಗಳನ್ನು ಕೇಳಿ ನಡೆದರೆ ಅವನ ದೈವವು ಹೇಗೆ ತಪ್ಪುವದು ಶಕ್ಯವಿದೆ ? ಬೇಕಾದರೆ ಸರ್ವ ರೀತಿಯಿಂದ ಪರಮಾತ್ಮನಿಗೆ ಶರಣು ಹೊಕ್ಕರೆ ಮಾತ್ರ ಅವರ ಹೀನ ಬಾಳುವೆಯು ಬದಲಾವಣೆಯಾಗುವದು ಶಕ್ಯವಿದೆ ಹೊರತು ಉಳಿದ ಯಾರ ಕೈಯಲ್ಲಿಯೂ ಇಲ್ಲ. ಜ್ಯೋತಿಷ್ಯ ಹೊತ್ತಿಗೆ ಶಕುನಗಳು ನಮ್ಮ ಹೀನ ಜೀವನವನ್ನು ಎಂದೂ ತಿದ್ದುವದು ಶಕ್ಯವಿಲ್ಲ. ನಮಗೆ ತಾನಾಗಿಯೇ ಆಗುವದನ್ನು ಅವುಗಳ ಮೇಲೆ ಹಾಕಿ ಚಿಂತಿಸುತ್ತ ಅವುಗಳನ್ನು ಶಾಂತಗೊಳಿಸಲು ಯತ್ನಿಸುತ್ತ ಹೇಡಿಗಳಾಗಿ ಕೂಡುವ ಚಟವು ಬಹಳವಾಗಿ ಬೀಳುವದು.

ಆದ್ಯರಾದ ಶಿವಶರಣರ ಈ ಪಂಚಾಂಗ ಹೊತ್ತಿಗೆ ಶಕುನಗಳ ಬಗ್ಗೆ ಯಾವ ಪ್ರಕಾರ ನಿಷ್ಠುರವಾಗಿ ಖಂಡಿಸಿದ್ದಾರೆ ನೋಡಿರಿ.

ಪಂಚಾಂಗ ಪಂಚಾಂಗವೆಂದು ಕಳವಳಗೊಂಡು ಜೋಯಿಸರ ಕರೆಯಿಸಿ, ಕೈ ಮುಗಿದು ಕಾಣಿಕೆಯನಿಕ್ಕಿ, ಎಲೆಅಡಿಕೆಯಂ ಕೊಟ್ಟು, ಜೋಯಿಸನ ವಾಕ್ಯವು ಸಕಲ ಕಾರ್ಯಕ್ಕೆ ಸಿದ್ಧಿ ಎಂದು, ಅವನ ಬಾಯಿ ತೊಂಬುಲ ತಿಂಬ ಹಂದಿಗಳೇನು ಬಲ್ಲರಯ್ಯ, ಶಿವಾಚಾರ ಪದ್ಧತಿಯನು ? ಪಂಚಾಂಗವೆಂಬ ಶಬ್ದಕ್ಕೆ ಅರ್ಥವ ಹೇಳಲರಿಯದೆ ಜೋಯಿಸರು ಕೆಟ್ಟರು. ಕೇಳಲರಿಯದೆ ಅನಂತ ಹಿರಿಯರು ನರಕಕ್ಕೆ ಇಳಿದರು. ಪಂಚಾಂಗವೆಂದೊಡೆ ಹೇಳಿಹೆ ಕೇಳಿರಣ್ಣಾ. ಪಂಚ ಅಂದರೆ ಐದು. ಅಂಗವೆಂದಡೆ ದೇಹವು. ಪೃಥ್ವಿ, ಅಪ್, ತೇಜ, ವಾಯು, ಆಕಾಶ ಈ ಪಂಚವು ಕೂಡಿ ದೇಹವಾಯಿತ್ತು. ಈ ದೇಹದೊಳಗೆ ಕಾಮ ಕ್ರೋಧ ಲೋಭ ಮದ ಮತ್ಸರಗಳೆಂಬ ಪಂಚಗಳನ್ನು ಮರೆಯುವದೇ ಪಂಚಾಂಗವು. ಸತ್ವ, ರಜ, ತಮ, ಅಹಂಕಾರ, ಮಮಕಾರಗಳೆಂಬ ಪಂಚಗಳನ್ನು ತುಳಿಯುವದೇ ಪಂಚಾಂಗ. ಆಣವ ಮಾಯಾ ಕಾರ್ಮಿಕ ಮಾನಸಿಕ ಬೌದ್ಧಿಕಗಳೆಂಬ ಪಂಚ ಮಲಗಳನ್ನು ತೊಳೆಯುವದೇ ಪಂಚಾಂಗ. ಜಾತಿಸೂತಕ, ಜನನಸೂತಕ, ಉಚ್ಛಿಷ್ಟಸೂತಕ, ಮೃತಸೂತಕ, ರಜಸೂತಕಗಳೆಂಬ ಪಂಚ ಸೂತಕಗಳನ್ನು ಅಳಿಯುವದೇ ಪಂಚಾಂಗ. ಪರಧನ, ಪರಸತಿ, ಪರಭೂಮಿ, ಪರದೈವ, ಪರಹಿಂಸೆಗಳೆಂಬ ಪಂಚ ಆಶೆಗಳನ್ನು ಬಯಸದಿರುವದೇ ಪಂಚಾಂಗ. ಭ್ರೂಣ ಹತ್ಯ ಶಿಶು

ಹತ್ಯ, ಬ್ರಹ್ಮಹತ್ಯ, ಸುರಾಪಾನ, ತುಡುಗುಗಳೆಂಬ ಪಂಚ ಮಹಾ ಪಾತಕ ಗಳನ್ನು ಮಾಡದಿರುವದೇ ಪಂಚಾಂಗ. ಇವುಗಳನ್ನಳಿವ ಶರಣರು ಕೇಳುವ ರಾಗಿ ಶಿವಭಕ್ತರಿಗೆಲ್ಲ ಕ್ರಿಯಾ ಜ್ಞಾನ, ಇಚ್ಛಾ, ಆದಿ, ಚಿತ್‌ಶಕ್ತಿಯಾ ದುದೇ ಪಂಚಾಂಗ. ಲಿಂಗಾಚಾರ, ಸದಾಚಾರ, ಭೃತ್ಯಾಚಾರ, ಶಿವಾಚಾರ ಗಣಾಚಾರಗಳೇ ಪಂಚಾಂಗ. ಗುರು ಪ್ರಸಾದ, ಲಿಂಗ ಪ್ರಸಾದ, ಜಂಗಮ ಪ್ರಸಾದ, ಗಣಪ್ರಸಾದ, ಮಹಾ ಪ್ರಸಾದ ಕೊಂಬುದೇ ಪಂಚಾಂಗ. ಇಂತೀ ಪಂಚಾಂಗದ ನಿಲವನರಿಯದೆ, ಪಂಚ ಸೂತಕದೊಳಗೆ ಹೊಡೆದಾಡುವ ಪಂಚ ಮಹಾ ಪಾತಕರ ಎನಗೊಮ್ಮೆ ತೋರದಿರಯ್ಯ ನಿಃಶ್ಶಂಗ ನಿರಾಳ ಪ್ರಭುವೇ.

ಪಂಚಾಂಗದ ಗಂಭೀರವಾದ ಅರ್ಥವನ್ನು ಶರಣರು ಯಾವ ಪ್ರಕಾರ ಹೇಳಿದ್ದಾರೆ ವಿಚಾರಿಸಿರಿ. ಇನ್ನೂ ಪಂಚ ವಿಷಯಗಳು ಪಂಚ ಇಂದ್ರಿಯ ಗಳು, ಪಂಚ ಕರಣಗಳು, ಪಂಚ ಭೂತಗಳು, ಪಂಚ ಪ್ರಾಣಗಳು ಮೊದಲಾ ದವು ಪರಮಾತ್ಮನ ದರ್ಶನಕ್ಕೆ ಅಡ್ಡಿಯಾಗುವ ಯಾವತ್ತೂ ವಸ್ತುವಡವೆ ವಿಷಯಗಳನ್ನು ಬಿಡುವದು ಪಂಚಾಂಗ. ಮತ್ತು ಒಳ್ಳೇದಾಗಿರುವ ಯಾವತ್ತು ಪಂಚಗಳನ್ನು ಅಪ್ಪುವದೇ ಪಂಚಾಂಗವೆಂದು ಅನಿಸುವದು. ಅದನ್ನು ವಾಚ ಕರೇ ವಿಚಾರಿಸಿರಿ. ಪಂಚ ಕಲ್ಯಾಣ, ಪಂಚ ಕೋಶ, ಪಂಚ ತಂತ್ರ, ಪಂಚಾಮೃತ, ಪಂಚ ಕ್ಲೇಶ, ಪಂಚ ಬಾಣ, ಪಂಚ ಭೇದ, ಪಂಚ ಮಹಾ ಯಜ್ಞ, ಪಂಚ ಮುದ್ರೆ, ಪಂಚ ಮುಖ, ಪಂಚ ರಾತ್ರ, ಪಂಚ ಲವಣ, ಪಂಚ ವಟಿ, ಪಂಚ ಸೂತಕ, ಪಂಚ ವಿಷಯ, ಪಂಚ ರಸ, ಪಂಚಾಕ್ಷರಿ, ಪಂಚಾಗ್ನಿ, ಪಂಚೋಪಚಾರ, ಪಂಚಾರತಿ, ಪಂಚಾವಸ್ಥೆ, ಪಂಚಾಯತಿ, ಪಂಚಾನನ ಮೊದಲಾದ ಪಂಚ ಶಬ್ದಗಳಲ್ಲಿ ಅಯೋಗ್ಯವಾದವುಗಳನ್ನು ಬಿಡು ವದು ಯೋಗ್ಯವಾದವುಗಳನ್ನು ಹಿಡಿಯುವದೇ ಪಂಚಾಂಗವಾಗುವದೇ ಹೊರತು ವಾರ ತಿಥಿ ನಕ್ಷತ್ರ ಯೋಗ ಕರಣಗಳು ಕೂಡಿದ ಹೊತ್ತಿಗೆಯು ಪಂಚಾಂಗವಾಗಲಾರದೆಂದು ಶರಣರ ಸ್ಪಷ್ಟ ಅಭಿಪ್ರಾಯವಾಗಿರುವದು. ಈ ರೀತಿಯ ಪಂಚಾಂಗದ ಮರ್ಮವನ್ನು ಸರ್ವರೂ ತಿಳಿಯುವದು ಅವಶ್ಯ ವಿದೆ. ಇದೇ ತತ್ವವನ್ನು ಪಂಚೀಕರಣ ಶಾಸ್ತ್ರವು ಬೋಧಿಸಿರುವದು.

" ತಿಥಿ ವಾರವೆಂದರಿಯೆನಯ್ಯಾ. ಲಗ್ನ ವಿಲಗ್ನವೆಂದರಿಯೆನಯ್ಯಾ. ಇದನ ರಿತು ಹದಿನಾಲು ವಾರ ಹದಿನೆಂಟು ಕುಲವೆಂದೆಂಬರು. ನಾವಿದ ನರಿಯೆನಯ್ಯ ಇರುಳೊಂದು ವಾರ, ಹಗಲೊಂದುವಾರ, ಭವಿಯೊಂದು ಕುಲ, ಭಕ್ತ

ನೊಂದು ಕುಲ ನಾವು ಬಲ್ಲದು ಇದು ತಾನೆ ಬಸವಪ್ರಿಯ ಕೂಡಲ ಚನ್ನ ಸಂಗಮದೇವಾ." ತಿಥಿ, ವಾರ, ನಕ್ಷತ್ರಯೋಗ, ಕರಣ, ಇವುಗಳನ್ನು ಶರಣರು ಅರಿಯರು. ಇವುಗಳನ್ನು ನೋಡುವದಿಲ್ಲ. ಕೇಳುವದಿಲ್ಲ. ಅವರಿಗೆ ಹಗಲುರಾತ್ರಿಗಳೆಂಬ ಎರಡು ವಾರಗಳೂ ಭವಿಭಕ್ತ ಎಂಬ ಎರಡು ಕುಲಗಳೇ ಅವರಿಗೆ ಗೊತ್ತಿರುವದಲ್ಲದೆ ಹದಿನೆಂಟು ಕುಲ ಮೊದಲಾದವುಗಳನ್ನು ಅವರು ಅರಿಯರು.

"ಅಷ್ಟಮಿ ನವಮಿ ಎಂಬ ಕಲ್ಪಿತವೇಕೋ ಶರಣಂಗೆ? ತಪ್ಪಿತ್ತು ಗುಣ ಪದವಿ. ಲಿಂಗಕ್ಕೆ ದೂರ ಒಬ್ಬರಿಗಾಳಾಗಿ ಒಬ್ಬರನೋಲೈಸುವ ನಿರ್ಬುದ್ಧಿ ಮನುಜರನೇನೆಂಬೆ ಕೂಡಲ ಸಂಗಮದೇವಾ."

ಅಂದು ಇಂದು ಮತ್ತೊಂದೆನಬೇಡ. ಶುಭಲಗ್ನವೆಂದಿನ್ನಿರಯ್ಯಾ. ರಾಶಿ ಕೂಟ ಗುಣ ಸಂಬಂಧ ಉಂಟೆಂದು ಹೇಳಿರಯ್ಯಾ. ಚಂದ್ರಬಲ ತಾರಾಬಲ ಉಂಟೆಂದು ಹೇಳಿರಯ್ಯಾ. ನಾಳಿನ ದಿನಕ್ಕಿಂತ ಇಂದಿನ ದಿನವೇ ಲೇಸೆಂದು ಹೇಳಿರಯ್ಯಾ ಕೂಡಲ ಸಂಗಮನ ಪೂಜಿಸಿದ ಫಲ ನಿಮ್ಮದಯ್ಯಾ."

"ಅಂದು ಇಂದು ಮತ್ತೊಂದೆನಬೇಡ. ದಿನ ಒಂದೇ ಶಿವಶರಣನೆಂಬುವಂಗೆ ಕೂಡಲಸಂಗನ ಮಾಣದೆ ನೆನೆಯುವಂಗೆ" ಎಂದು ಶರಣರು ಪಂಚಾಂಗವನ್ನೂ ಪಂಚಾಂಗ ಹೇಳುವವರನ್ನೂ ಕೇಳುವವರನ್ನೂ ಬಹು ಮಾರ್ಮಿಕವಾಗಿ ಖಂಡಿಸಿದ್ದಾರೆ. ಇದು ಅಲ್ಲದೆ ಪಂಚಾಂಗ ಕೇಳಿದವರಿಗೆ ಒಳಿತಾಗದೆ ಕೆಡುಕಾಯಿತೇಕೆಂದು ಅವರು ಕೇಳಿದ್ದಾರೆ. ಪಂಚಾಂಗ ಕೇಳಿದ ದಕ್ಷಬ್ರಹ್ಮನ ತಲೆಹೋಯಿತು. ಪಂಚಪಾಂಡವರಿಗೆ ವನವಾಸವಾಯಿತು. ರಾಮ ಲಕ್ಷ್ಮಣ ಸೀತೆಯರಿಗೆ ವನವಾಸವಾಗಿ ವನವಾಸದಲ್ಲಿ ಸೀತೆಯನ್ನು ರಾವಣನು ಅಪಹರಿಸಿದನು. ಇಂದ್ರನ ಶರೀರವೆಲ್ಲ ಯೋನಿಮಯವಾಯಿತು. ಭಾಸ್ಕರಾಚಾರಿಯ ಮಗಳು ವಿಧವೆಯಾದಳು. ದ್ವಾರಕಾವತಿಯ ನಾರಾಯಣನ ಹೆಂಡಿರು ಹೊಲೆಮಾದಿಗರ ಕೂಡಿಕೊಂಡರು. ಸರಸ್ವತಿಯ ಮೂಗು ಹೋಯಿತು. ಕಾಮನು ಸುಟ್ಟುಕೊಂಡು ಸತ್ತನು. ಬ್ರಹ್ಮ ವಿಷ್ಣು ಮೊದಲಾದ ದೇವರಗಳು ತಾರಕಾಸುರನಿಂದ ಘಾತಿಸಲ್ಪಟ್ಟರು. ಈ ಪ್ರಕಾರ ಯಾರಿಗೂ ಅವರ ಬ್ರಹ್ಮಲಿಖಿತ ತಪ್ಪಲೇ ಇಲ್ಲ. ಪಂಚಾಂಗ ಕೇಳುವದರಿಂದ ಯಾವ ಪ್ರಯೋಜನವಾಯಿತೆಂದು ಶರಣರು ಎಲ್ಲರಿಗೂ ಪ್ರಶ್ನೆ ಹಾಕಿದ್ದಾರೆ. ಆಗುವದು ಆಗೇತೀರುವದು ಆದರೆ ಪಂಚಾಂಗ ಕೇಳಿ ಸೋಮಾರಿಗಳಾಗಬಾರದು

ಹೇಡಿಗಳಾಗಬಾರದು ಹಣೆಯಬರಹವನ್ನೇ ನೋಡುತ್ತ ಕೂಡ್ರಬಾರದು. ಆಗುವದು ಆಗಿಯೇ ತೀರುವದು ಆದರೂ ದೇವರ ಭಕ್ತಿಯಿಂದ ಮಾತ್ರ ಸರ್ವವೂ ಪಲ್ಲಟವಾಗುವದರಲ್ಲಿ ಸಂದೇಹವಿಲ್ಲ. ದೇವರ ಭಕ್ತಿ ಮಾಡಿದ ಮಾರ ಖಂಡೇಯನ ಮರಣವು ತಪ್ಪಿ ಚಿರಂಜೀವಿಯಾದನು. ಸಂಸಾರಿಕರು ಕಾಲಾ ನಂತರ ಸನ್ಯಾಸಿಗಳಾಗಿ ದೇವಭಕ್ತರಾದರೆ ಅವರು ಭೋಗಿಸಬೇಕಾದ ಸಂಕಟ ಗಳು ತಾವಾಗಿಯೇ ಬಿಟ್ಟು ದೂರ ಸರಿದ ಕಥೆಗಳನೇಕ ಉಜ್ವಲ ಶರಣರ ಆಶೀರ್ವಾದದಿಂದ ಕೂಡ ಅನೇಕ ಸ್ತ್ರೀಯರು ಸತ್ತಗಂಡನನ್ನು ಬದುಕಿಸಿ ದ್ದಾರೆ. ಸಾವಿತ್ರಿಯು ಕೂಡ ತನ್ನ ದಿವ್ಯಭಕ್ತಿಯಿಂದ ಸತ್ತಗಂಡನನ್ನು ಬದುಕಿಸಿ ಯಮನನ್ನು ಜಯಿಸಿದ ಕಥೆಯು ಸರ್ವಶ್ರುತವಿದೆ. ಮಾವನ ಹೋದ ಕಣ್ಣನ್ನು ಹೋದ ರಾಜ್ಯವನ್ನೂ ಕೂಡ ತನ್ನ ಭಕ್ತಿಯಿಂದ ಪಡೆದಳು. ಹೇಮರಡ್ಡಿ ಮಲ್ಲಮ್ಮನು ಹುಚ್ಚಗಂಡನಾದ ಭರಮರಡ್ಡಿಯನ್ನು ಜ್ಞಾನಿಯ ನ್ನಾಗಿ ಮಾಡಿ ಹಾಳಾದ ಮನೆಮಾರುಗಳನ್ನು ಪುನಃ ಪಡೆದಳು. ಇದ ರಂತೆ ಅನೇಕ ಕಥೆಗಳುಂಟು. ಇದೆಲ್ಲ ಪಂಚಾಂಗದಿಂದ ಆಗಿಲ್ಲ. ಆದರೆ ದೇವರ ಭಕ್ತಿಯಿಂದ ಮಾತ್ರ ಸಾಧಿಸಿರುವದು ಕಂಡುಬರುವದು. ಕಾರಣ ಈ ಪಂಚಾಂಗ ಕೇಳುವ ಗೋಜಿಗೆ ಯಾರೂ ಹೋಗಬಾರದು. ಲಿಂಗಾಂಗಿಗಳಿಗೆ ಅದು ಮಹಾ ಹಾನಿ ರವರವ ನರಕವೆಂದು ಅಘೋರ ಪಾತಕ ಬರುವದೆಂದೂ ಶರಣರೇ ಹೇಳಿದ್ದಾರೆ. ಅವರ ಅನುಭಾವಿಗಳು ಅನುಭವ ಮಾಡಿಕೊಂಡೇ ಇದನ್ನೆಲ್ಲ ಹೇಳುವರು. ಅದಕ್ಕೆ ಪಂಚಾಂಗ ಹೊತ್ತಿಗೆಗಳನ್ನು ಕೇಳುವ ಚಟವನ್ನು ಲಿಂಗಾಂಗಿಗಳು ಬಿಟ್ಟರೆ ಸುಖವೇ ಆಗುವದು.

ಪಂಚಾಂಗಗಳಲ್ಲಿ ಈಗಿಗ ಬಹಳೇ ಬರೆದು ಅವೆಲ್ಲ ಹೆಬ್ಬೊತ್ತಿಗೆಗಳೇ ಆಗಿವೆ. ಸರ್ವಮುಹೂರ್ತ ಸಂಗ್ರಹ ಕಷ್ಟಕ್ಕೆ, ಬಣವಿ ಕುಳ್ಳು ಒಟ್ಟಲಿಕ್ಕೆ ಹೊಲ ಹಾಕಲಿಕ್ಕೆ ಹೊತ್ತಿಸಲಿಕ್ಕೆ ಬರಲಿಕ್ಕೆ ಹೋಗಲಿಕ್ಕೆ, ಕೂಡ್ರಲಿಕ್ಕೆ ಊಟಕ್ಕೆ ಮಲಗಲಿಕ್ಕೆ ಮಾತಾಡಲಿಕ್ಕೆ ಅಂಗಿ ತೊಡಲಿಕ್ಕೆ ರಾಶಿ ತರಲಿಕ್ಕೆ ಕಣಮಾಡಲಿಕ್ಕೆ ಮೇಟಿನಡಿಸಲಿಕ್ಕೆ ಕೇಳಲಿಕ್ಕೆ ಹಂತಿಕಟ್ಟಲಿಕ್ಕೆ ಹೀಗೆ ಸಾವಿರಾರಮುಹೂರ್ತಗಳುಂಟು. ಮಳೆಯ ಭವಿಷ್ಯ ಬೆಳೆಯು ಭವಿಷ್ಯ ವ್ಯಾಪಾರ ಭವಿಷ್ಯ ವರ್ಷಭವಿಷ್ಯ, ಮಾಸ ಭವಿಷ್ಯ, ವಾರ ಭವಿಷ್ಯ, ದಿನದ ಭವಿಷ್ಯ, ತಾಸ ಭವಿಷ್ಯ, ಮಿನಿಟಿನ ಭವಿಷ್ಯಗಳೂ ಸಹ ಇರುವವು. ಪಂಚಾಂಗಗಳಂತೂ ಅವುಗಳಿಗಾಗಿಯೇ ಇರುವವು. ಅಲ್ಲದೆ ಸಕಲ ವಾರ

ಪತ್ರಿಕೆ ಮಾಸಪತ್ರಿಕೆ ದಿನಪತ್ರಿಕೆಗಳಲ್ಲಿಯೂ ಕೂಡ ಇವುಗಳನ್ನೇ ಬರೆಯುವರು. ಇದರಿಂದ ಇವರು ಜನರಿಗೆ ಎಂಥ ಕೆಟ್ಟದಾರಿಗೆ ಹಚ್ಚುತ್ತಿರುವರು ವಿಚಾರಿಸಿರಿ. ಬರೇ ಜನರಿಂದ ರೊಕ್ಕ ಎತ್ತುವದನ್ನೇ ಕಲಿತು ಮೂಢ ನಂಬಿಗೆಗಳಲ್ಲಿಯೇ ಜನರನ್ನು ಬೆಳೆಸುತ್ತ ನಡೆದಿದ್ದಾರೆ. ಪತ್ರಿಕೆಗಳು ಜನರಿಗೆ ಸಕಲ ತರದ ವಿದ್ಯೆಕಲೆಗಳನ್ನು ದೊರಕಿಸಿ ಕೊಡುವದನ್ನು ಬಿಟ್ಟು ಇಂಥ ಹೀನಕೃತಿಗಳಲ್ಲಿ ಹೆಚ್ಚಾಗಿ ಮುಳಗಿಸುತ್ತಿರುವದು ಕಂಡುಬರುವದು. ಇದು ಬಲು ಹೇಸಿಕೃತಿಯೇ ಸರಿ. ಈಗೀಗ ಜನರು ಕ್ಷಣಕ್ಷಣಕ್ಕೆ ಕೈಯಲ್ಲಿ ಪಂಚಾಂಗ ಹಿಡಿದುಕೊಂಡು ತಲೆಕೆರೆದು ಕೊಳ್ಳುತ್ತಿರುವದು ಕಂಡುಬರುವದು. ಇದು ಬಲು ಹೀನವಾದದ್ದು. ಇದರಿಂದ ಇವರಿಗೆ ಯಾವ ಲಾಭವಾಗಿದೆ ತಿಳಿಯುವದೇ ಇಲ್ಲ.

### ಶಕುನ ಚೀಟಿ ತಾಯಿತಗಳ ಕಾಟ.

ಇದಲ್ಲದೆ ತಾಯಿತ, ಚೀಟಿ, ಯಂತ್ರಗಳನ್ನು ಕೈ, ಕೊರಳ, ರಟ್ಟೆ, ಟೊಂಕಗಳಲ್ಲಿ ಕಟ್ಟಿಕೊಂಡಿರುವರು. ಇವೆಲ್ಲ ಭಾವಿಕತನದ ಮೂಢನಂಬಿಗೆಯೇ ಸರಿ. ಇದಕ್ಕೆ ಇವರು ಅಸಂಖ್ಯ ರೊಕ್ಕ ಕಳಕೊಂಡಿರುವರು. ಆ ಚೀಟಿಯಲ್ಲಿ ಅಡ್ಡತಿಡ್ಡ ಗೆರೆ ಹೊಡೆದು ಅಕ್ಷರಗಳನ್ನಾಗಲಿ ಅಂಕಿಗಳನ್ನಾಗಲಿ ಬರೆದು ಮಡಚಿ ಅದನ್ನು ಕರಿದಾರಿನಿಂದ ಕಟ್ಟಿಬಿಡುವರು. ಇದನ್ನೆಲ್ಲ ವಿಚಾರಿಸಿದರೆ ಬಹು ಹೇಯವೆನಿಸುವದು. ಇದನ್ನು ಭಟ್ಟರೂ, ಮಠಾಧೀಶರೂ, ಐಯ್ಯಗಳೂ, ಮುಜಾವರರೂ, ಮುಲ್ಲಾಗಳೂ. ಬೀರ ಪೀರರೂ ಮಾಡುತ್ತಿರುವರು. ಸಾಧುಸಂತರೂ ಕೂಡ ತಮ್ಮ ಚಹಾ, ಗಾಂಜಿ ಬೀಡಿಗಾಗಿ ಈ ಕೆಲಸವನ್ನೇ ಮಾಡುತ್ತಿರುವರು. ಸಾಧುಸಂತರೂ ಕೂಡ ತಮ್ಮ ಚಹಾ, ಗಾಂಜಿ, ಬೀಡಿಗಾಗಿ ಈ ಕೆಲಸವನ್ನೇ ಮಾಡುತ್ತಿರುವದು ಕಂಡು ಬರುವದು. ಪಂಚಾಂಗಗಳಿಗೆ ಲೆಕ್ಕವಿಲ್ಲ. ಹೊತ್ತಿಗೆಗಳಿಗೆ ಲೆಕ್ಕವಿಲ್ಲ. ಇವುಗಳ ಬಗ್ಗೆ ಅಸಂಖ್ಯ ಪುಸ್ತಕಗಳಾಗಿವೆ. ಪ್ರಶ್ನೆಚಿಂತಾಮಣಿಗೆ ಅಳತೆಗಳಿಲ್ಲ. ಅಯ್ಯೋ ದೇಶವು ಬಹು ಕೀಳುಮಟ್ಟಕ್ಕೆ ಇಳಿದಿದೆ. ಈ ಹೊತ್ತಿಗೆಗಳ ತುಂಬ ಹಕ್ಕಿ ಶಕುನ, ಕಾಗಿಯ ಶಕುನ, ಹಲ್ಲಿಯ ಶಕುನ ಮೊದಲಾದವುಗಳನ್ನು ವಿಶೇಷವಾಗಿ ಬರೆದದ್ದು ಕಂಡಬರುವದು.

“ಹಾವಾಡಿಗನು ಮೂಕೊರತೆಯು ತನ್ನ ಕೈಯ್ಯಲ್ಲಿ ಹಾವು ಮಗನ ಮದುವೆಗೆ ಶಕುನವ ನೋಡಹೋದಾಗ, ಇದಿರಲೊಬ್ಬ ಮೂಕೊರತೆಯು

ಹಾವಾಡಿಗನ ಕಂಡು ಶಕುನಹೊಲ್ಲೆಂಬ ಚಪಲರನ ನೋಡಾ. ತನ್ನ ಸತಿಯು ಮೂಕೊರತೆಯು ತನ್ನ ಕೈಯಲ್ಲಿ ಹಾವು. ತನ್ನ ಭಿನ್ನತೆಯ ನರಿಯದ ಅನ್ಯರನೆಂಬ ಕುನ್ನಿಯನೇನೆಂಬೆ ಕೂಡಲಸಂಗಮದೇವಾ." ತನ್ನ ಹೀನ ಗುಣಕ್ಕೆ ಕೆಡಕು ಸಂಭವಿಸಿದುದನ್ನು ಅನ್ಯರಮೇಲೆಹಾಕಿ ಶಕುನ, ಅಪಶಕುನ ಗಳನ್ನು ನೋಡುವ ಮೂಳರ ಪರಿಯ. ನೋಡಿ ಶರಣರು ಈ ಪ್ರಕಾರ ಹಾಡಿದ್ದಾರೆ. ಶರಣರ ಮರ್ಮಭೇದಕ ವಿಚಾರಗಳನ್ನು ನೋಡಿ ಎಲ್ಲರೂ ನಾಚುವಂತಿದೆ.

## ಕನಸಿನ. ಮರುಳಾಟ.

ಮನಸಿನ ಸಂಶಯು ಕನಸಿನ ಭೂತವಾಗಿ ಕಾಡುವದು ನೋಡಾ. ಮನಸಿನ ಸಂಶಯವ ಅಳಿದರೆ ಕನಸಿನಕಾಟ ಬಿಟ್ಟೋಡಿತ್ತು ನೋಡಾ ಮಹಾಲಿಂಗ ಗುರುಶಿವಸಿದ್ಧೇಶ್ವರ ಪ್ರಭುವೇ! ಕನಸೆಂದರೆ ಮನಸಿನ ಆಟ ಮನಸಿನ ವಿಚಾರ, ಮನಸಿನ ಸಂಕಲ್ಪ ವಿಕಲ್ಪಗಳು ಮನಸಿನ ಚಿಂತನೆ ಚಿಂತನೆಗಳೇ ರಾತ್ರಿ ಕನಸಾಗಿ ಕಾಣುವದು. ಕನಸು ಕೂಡ ಭ್ರಾಂತಿ ಭ್ರಮೆಗಳೆಂದು ಶರಣರು ಅವುಗಳನ್ನು ತುಚ್ಛೀಕರಿಸಿದ್ದಾರೆ. ಕಾರಣ ಕನಿಸಿನ ಮೇಲೆ ನಂಬಬಾರದು. ಕನಸ್ಸನ್ನು ನಂಬಿಕೆಟ್ಟವರನೇಕರುಂಟು. ಸದಾ ದೇವರ ಚಿಂತೆ ವಿಚಾರ ಸಂಕಲ್ಪ ಆಟಗಳು ನಡೆದರೆ ಕನಸಿನಲ್ಲಿ ದೇವರ ದರ್ಶನ ಮೊದಲಾದ ದೇವರ ಬಗ್ಗೆಯೇ ಕನಸುಗಳನ್ನು ಕಾಣುವೆವು. ಇದನ್ನು ಬಿಟ್ಟು ಹೊನ್ನು ಹೆಣ್ಣು ಮಣ್ಣು ಚಯನಿ ಚಟ ಆಟ ನೋಟ ಮೊದಲಾದ ವಿಷಯುಗಳನ್ನೇ ವಿಚಾರಿಸುತ್ತಿದ್ದರೆ ರಾತ್ರಿಯಲ್ಲಿ ಅವೇ ಕನಸುಗಳನ್ನು ಕಂಡು ಹುಚ್ಚರಾಗುವೆವು. ಅದಕ್ಕೆ ಇಂಥ ಹೇಯವಾದ ವಿಷಯ ವಿಚಾರಗಳನ್ನು ಬಿಟ್ಟು ಪಾರಮಾರ್ಥಿಕ ವಿಚಾರಗಳನ್ನೇ ಸದಾ ಮಾಡುತ್ತಿದ್ದರೆ ಶೀಘ್ರ ದೇವರ ದರ್ಶನವು ಶಕ್ಯವದೆ. ಜನ್ಮ ಸಾರ್ಥಕವೂ ಆಗುವದು. ಕಾರಣ ಯೋಗ್ಯ ವಿಚಾರ ಮಾಡಿ ಯೋಗ್ಯ ಕನಸು ಕಾಣಿರಿ. ಇಂಥ ಮೂಢ ನಂಬಿಗೆಗಳಿಗೆ ಎಡೆಗೊಡಬೇಡಿರಿ ಅಂತ್ಯದಲ್ಲಿ ಉಚ್ಚಸ್ಥಿತಿಯಲ್ಲಿ ಈ ಒಳ್ಳೇ ಕನಸುಗಳೂ ಕೂಡ ಲಯವಾಗುವವು. ಆಗ ನಿರ್ವಿಕಲ್ಪಸ್ಥಿತಿಯು ಪ್ರಾಪ್ತವಾಗುವದು.

## ಶಕುನಗಳ ಹುಚ್ಚಾಟ.

"ಒಡೆಯರು ಭಕ್ತರು ತಾವೆಂದು ಅಡಿಮೆಟ್ಟಿ ಹೋದಲ್ಲಿ ಕಡೆಯಿತ್ತು ಏನನೆಂದೋದರೆ ಕಾಗೆ ವಿಹಂಗ ಮಾರ್ಜಾಲ ಪಾಂಚಪಕ್ಷಿ ಗಾರ್ದಭಶೇಷ

ಶಂಕೆಗಳು ಮೊದಲಾದ ಸಂಕಲ್ಪಕ್ಕೊಳಗಾದಲ್ಲಿ ವ್ರತಕ್ಕೆ ಭಂಗ ಆಚಾರಕ್ಕೆ ದೂರ ಅದೆಂತೆಂದೊಡೆ ಅಂಗಕ್ಕಾಚಾರವ ಸಂಬಂಧಿಸಿ ಮನಕ್ಕೆ ಅರಿವು ಅರಿವಿಂಗೆ ವ್ರತವ ಮಾಡಿದಲ್ಲಿ ಬೇರೊಂದು ಶರಿ ಹರಿಸುವದು ನಿತ್ಯ ಉಂಟೇ? ಇಂತೀ ಸತ್ಕ್ರಿಯಾವಂತಂಗೆ ಕಷ್ಟ ಜೀವದ ಲಕ್ಷಣದಲ್ಲಿ ಚಿತ್ತು ಬೇಹನ್ನಕ್ಕ ಆತನು ಆಚಾರ ಭ್ರಷ್ಟ ಏಲೇಶ್ವರಲಿಂಗಕ್ಕೆ ದೂರ." ದಾರಿಯಲ್ಲಿ ಹೋಗ್ಗುವಾಗ ಎಡಕ್ಕೆ, ಬಲಕ್ಕೆ, ಅಡ್ಡ, ಎದುರು, ಹಿಂದೆ, ಕೆಲವು ಪಶುಪಕ್ಷಿ ಮನುಷ್ಯ ಸ್ತ್ರೀ ವಸ್ತುವಡವೆಗಳು ಬಂದರೆ ಒಳಿತು. ಕೆಲವು ಬಂದರೆ ಕೆಡಕು ಎಂದು ಒಂದು ದೊಡ್ಡ ಪುಸ್ತಕವನ್ನೇ ಮಾಡಿರುವರು. ಇದುಕೂಡ ಪಂಚಾಂಗದಲ್ಲಿಯೇ ಇರುವದು. ಇದನ್ನು ನೋಡುವದು ಬಹು ಮೂರ್ಖತನನೆಂದೇ ವಚನಕಾರರ ಸ್ಪಷ್ಟ ಅಭಿಪ್ರಾಯವಾಗಿದೆ. ಅವು ತಮ್ಮ ತಮ್ಮ ಕಾರ್ಯಕ್ಕಾಗಿ ಹೊಟ್ಟೆಗಾಗಿ ಅತ್ತ ಇತ್ತ ಸುತ್ತಲೆಲ್ಲ ಹಾರುವದೂ ಬರುವದೂ ಹೋಗುವದೂ ಮಾಡುವವು. ಅದಕ್ಕೆ ಒಂದು ಇಲ್ಲದ ಅರ್ಥವನ್ನು ಕಲ್ಪಿಸಿಕೊಂಡು ಕೆಲಸ ಕೆಡಿಸಿಕೊಂಡು ವೇಳೆ ಕಳಕೊಂಡು ಹೇಡಿಗಳಾಗಿ ಆಲಸಿಗಳಾಗಿ ಭಾವಿಕರಾಗುವದು ಎಷ್ಟುಮಾತ್ರಕ್ಕೂ ಸರಿಯಾಗಲಾರದು. ನಾವು ದಾರಿಗುಂಟ ಅವು ಬರಹತ್ತಿದರೆ ಅವು ಯಾವವೂ ಗೂಡಬಿಟ್ಟು ಗಿಡಬಿಟ್ಟು ಗಿಡಗಂಟೆಬಿಟ್ಟು ಹೊರಗೆ ಬರಬಾರದೇನು? ಅವು ನಮ್ಮಂತೆ ವ್ಯವಹಾರಗಳನ್ನು ಮಾಡಲು ಹೊರಗೆ ತಿರುಗಾಡುವವು. ಅವು ಹಾರಾಡುವದಕ್ಕೂ ತಿರುಗಾಡುವದಕ್ಕೂ ನಾವು ತಿರುಗುವದಕ್ಕೂ ಏನು ಸಂಬಂಧವಿದೆ ಹೇಳಿರಿ ನೋಡುವಾ. ಹೀಗೆ ಇಲ್ಲದ ಸಲ್ಲದ ಸಂಬಂಧವನ್ನು ಕಲ್ಪಿಸಿಕೊಂಡು ನಾವು ಗೋಳಾಡುವದು ಎಷ್ಟು ಮಾತ್ರವೂ ಸರಿಯಾದುದಲ್ಲೆಂದು ಶರಣರು ಖಡಾಮುಡಿಯಾಗಿ ಹಾಡಿದ್ದಾರೆ. ಇದನ್ನು ಕೇಳಿ ಎಲ್ಲರೂ ಜಾಣರಾಗಿರೆಂದೇ ಅವರು ನಡೆದು ನಮಗಾಗಿ ಹಾಡಿದ್ದಾರೆ. ಅದನ್ನು ವಿಚಾರಿಸಿ ನಾವು ಶರಣರು ಹೋದ ದಾರಿಯಲ್ಲಿ ಹೋಗುವದು ಶ್ರೇಯಸ್ಕರವಾಗಿದೆ.

ಜನರು ಪಂಚಾಂಗ ಹೊತ್ತಿಗೆ ಶಕುನ ಕನಸುಗಳನ್ನು ನೋಡುವದು ಅತೀವ ಹೆಚ್ಚಾಗಿದೆ. ಇಪ್ಪತ್ತನೇ ಶತಮಾನವು ಸುಧಾರಣೆಯು ಕಾಲವೆಂದು ಕೂಗಿಕೊಳ್ಳುವದು ಮಾತ್ರ ನಡೆದಿವೆ. ಯಾವ ಸುಧಾರಣೆಯಾಗಿದೆ ತಿಳಿಯುಲೊಲ್ಲದು. ಶರಣರು ೮೦೦ ವರ್ಷಗಳ ಹಿಂದೆ ಮಾಡಿದ ಯಾವ ಸುಧಾರಣೆಯೂ ಈಗ ಎಲ್ಲಿಯೂ ಕಾಣುವದಿಲ್ಲ. ಎಲ್ಲ ಸುಧಾರಣೆಗಳು ಬರೇ

ಕಾಗದಗಳಲ್ಲಿಯೇ ಮಾತ್ರ ಇರುವವು. ಈಗಿನ ಶಿಕ್ಷಣವನ್ನು ಕೂಡ ಅನೇಕರು ಸ್ತ್ರೀ ಪುರುಷರು ಕೂಡ ಕಲಿತಿದ್ದರೂ ಯಾವ ಸುಧಾರಣೆಯಾಗಿಲ್ಲ. ಬರೇ ಚಯನಿಯಲ್ಲಿ ಸುಧಾರಣೆ ಮಾತ್ರ ಆಗಿರುವದು. ಆಹಾರ ಪೇಯ ಉಡಿಗೆ ತೊಡಿಗೆ, ಆಟ ನೋಟ ಮೊದಲಾದವುಗಳಲ್ಲಿ ಮಾತ್ರ ನಾಟಕೀಯ ಸುಧಾರಣೆಯಾದದ್ದು ಕಂಡು ಬರುವದು. ಆದರೆ ನಿಜವಾದ ಯಾವ ಸುಧಾರಣೆಯಾಗಿಲ್ಲ. ಈ ಪಂಚಾಂಗ ಹೊತ್ತಿಗೆ ಚೀಟಿ ಶಕುನ ಕನಸು ಮೊದಲಾದ ಮೂಢನಂಬಿಗೆಯ ವಿಷಯುಗಳು ಹೆಚ್ಚಾಗಿ ಬೆಳೆದಿವೆ. ಪಂಚಾಂಗ ಕರ್ತರೂ ಭಟ್ಟರೂ ವರ್ತಮಾನ ಪತ್ರ ಮಾಸಿಕಗಳ ಸಂಪಾದಕರೂ ಇವುಗಳನ್ನೇ ಜನರಿಗೆ ಹೆಚ್ಚೆಚ್ಚಾಗಿ ಕಲಿಸುತ್ತ ಪ್ರಚಾರ ಮಾಡುತ್ತ ನಡೆದಿರುವರು. ಪತ್ರಿಕೆಗಳನ್ನು ಓದುವವರು ವಾರ ಮಾಸಿಕ ಭವಿಷ್ಯಗಳಿಗಾಗಿಯೇ ಅವುಗಳನ್ನು ಕೊಳ್ಳುವರು. ಈ ಹೀನತನ ಹೋದರೆ ಸುಧಾರಣೆಯಾಗುವದು. ಜನರು ಪ್ರಯತ್ನಶೀಲರಾಗುವರು. ಆಲಸ್ಯ ತಾನಾಗಿಯೇ ಹೋಗುವದು. ಉದ್ಯೋಗಶೀಲರಾಗುವರು. ಮೂಢನಂಬಿಗೆ ಹೋಗಿ ದೇವರಲ್ಲಿ ನಂಬಿಗೆ ಹುಟ್ಟುವದು. ದೇವರ ಭಕ್ತಿ ಬೆಳೆದು ಜನರು ಸರ್ವ ರೀತಿಯಿಂದ ಒಳ್ಳೆಯವರು ಆಗಿ ಸಂಸಾರ ಸುಗಮವಾಗಿ ಸಾಗಿಸಿಕೊಂಡು ಹೋಗುವವರಾಗುವರು. ಕಾರಣ ಈ ಮೂಢ ನಂಬಿಗೆಗಳನ್ನು ಜನರು ಅನುಸರಿಸಬಾರದು. ಅದರ ಬಗ್ಗೆ ಯಾರೂ ಶಿಕ್ಷಣವನ್ನಾಗಲಿ, ಪ್ರಚಾರವನ್ನಾಗಲಿ, ಪುಸ್ತಕ ಪತ್ರಿಕೆಗಳನ್ನಾಗಲಿ ಬರೆದು ಪ್ರಸಿದ್ಧ ಮಾಡಬಾರದು. ಅದರ ವಿರುದ್ಧ ಅಂದರೆ ಮೂಢನಂಬಿಗೆಗಳ ವಿರುದ್ಧ ಪ್ರಚಾರ ಮಾಡಬೇಕು. ಅದರಿಂದ ಆಗುವ ದುಷ್ಪರಿಣಾಮಗಳ ಬಗ್ಗೆ ಕಥೆ, ನಾಟಕ, ಲೇಖನ, ಕಾವ್ಯ, ನಿಬಂಧ, ಮೊದಲಾದವುಗಳನ್ನು ಬರೆದು ಪ್ರಸಿದ್ಧಿಸಬೇಕು. ಅಂತೂ ಜ್ಯೋತಿಷ್ಯ, ಹೊತ್ತಿಗೆ, ಶಕುನ, ಕನಸು ಮೊದಲಾದವುಗಳ ವಿರುದ್ಧ ಕ್ರಾಂತಿಯನ್ನು ಎಬ್ಬಿಸಲು ಪ್ರಯತ್ನಿಸಬೇಕು. ವಿಚಾರ ಕ್ರಾಂತಿಯೇ ನಿಜವಾದ ಕ್ರಾಂತಿಯಾಗುವದು. ಶರಣರ ಮಹಿಮರ ಮಹಾ ವಾಕ್ಯಗಳನ್ನು ಪ್ರಕಟಿಸಿ ಜನರ ಸರ್ವ ಮೂಢ ನಂಬಿಗೆಗಳನ್ನು ಹೋಗಲಾಡಿಸಬೇಕು. ಅಂದರೆ ನಿಜವಾದ ಸುಧಾರಣೆಯ ದಾರಿಯಲ್ಲಿ ನೀವು ಹೆಜ್ಜೆ ಇಟ್ಟಂತೆಯಾಗುವದು. ಇದರಿಂದ ವೀರತನ, ಉದ್ಯೋಗ ಶೀಲತೆ, ಧೈರ್ಯ, ನಂಬಿಗೆ, ದೇವಭಕ್ತಿ, ಮೊದಲಾದವುಗಳು ಹೆಚ್ಚಾಗಿ ಜನರಲ್ಲಿ ನೆಲೆಗೊಳ್ಳುವದರಲ್ಲಿ ಸಂದೇಹವಿಲ್ಲ.

# ಲಿಂಗ

(ಲೇಖಕ: ಶ್ರೀ. ಸಿ. ನಾ. ಮಹಾಂತಣ್ಣವರು ಮು. ಜಮಖಂಡಿ)

---

ಒಬ್ಬಾನೊಬ್ಬ ಮುಂಬಾಪುರದ ವ್ಯಾಪಾರಿಯು ನಾಲ್ಕೈದು ವರ್ಷದ ಸೇಂಗಾದ ವ್ಯವಹಾರದಲ್ಲಿ ಕೋಟ್ಯಾನುಗಟ್ಲೆ ಹಣ ಗಳಿಸಿ ಸುಖಾಸೀನನಾಗಿರಲು, ಇನ್ನೂ ಹೆಚ್ಚು ಸಂಪಾದಿಸಬೇಕೆಂಬ ಅತ್ಯಾಸೆಯಿಂದ ತನ್ನಲ್ಲಿರುವ ಎಲ್ಲ ಹಣದಿಂದ ಸೇಂಗಾದ ಸುಗ್ಗಿಯಲ್ಲಿ ಏರುಧಾರಣೆ ಇದ್ದರೂ ಖರೀದಿ ಮಾಡಿ ವಖಾರವನ್ನು ತುಂಬಿಟ್ಟನು. ಮುಂದೆ ಮೂರುನಾಲ್ಕು ತಿಂಗಳಲ್ಲಿ ವರ್ಷಂಪ್ರತಿಯಂತೆ ತೇಜಿ ಆಗಬಹುದೆಂದು ಹಾಗೆಯೇ ಇಟ್ಟನು. ಆದರೆ ಆ ವರ್ಷ ತೇಜಿ ಆಗದೆ ಮಾಲಿನ ಧಾರಣಿಯು ಇಳಿಯುತ್ತ ನಡೆಯಿತು. ಸ್ವಲ್ಪಹಾನಿಯಾದರೂ ಚಿಂತೆಯಿಲ್ಲೆಂದು ಅದನ್ನು ಮಾರಾಟ ಮಾಡಲಿಲ್ಲ. ಮುಂದೆ ಸೇಂಗಾದ ಧಾರಣಿಯು ಇಳಿಯುತ್ತ ನಡೆಯಿತು. ಒಂದುವರ್ಷಾವಧಿಯಲ್ಲಿ ತೀರ ಇಳಿದು, ಹಾಕಿದ ಗಂಟೆಲ್ಲ ಹೋಗುವದೆಂಬ ಎದೆಯೊಡಕು ಹುಟ್ಟಿ, ಸಂಜೆಯು ಕಡೆಗೆ ಸಮುದ್ರದ ದಂಡೆಗೆ ಅಡ್ಡಾಡುತ್ತ ಯಾರೂ ಇಲ್ಲದ ಏಕಾಂತ ಸ್ಥಳದಲ್ಲಿ ಕುಳಿತು ತನ್ನೊಳಗೆ ತಾನು ವಿಚಾರಿಸುತ್ತ ಸಮುದ್ರದ ಕಡೆಗೆ ನೋಡುತ್ತ ನಿರ್ವಿಕಲ್ಪ ಸ್ಥಿತಿಯಲ್ಲಿರುವಾಗ, ಈ ನೀರ ಮೇಲಿನ ಗುರುಳಿಗಳು ಹೇಗೆ ಉದ್ಭವಿಸಿ ನಿಂತು, ಕಡೆಗೆ ಇಲ್ಲದಂತಾಗುತ್ತವೋ ಅದರಂತೆ ಈ ಸಂಪತ್ತು ತೋರಿ ಅಡಗುವದು. ಇದೇಕೆ ಚಿಂತೆ? ಎಂದು ಧೈರ್ಯಬಟ್ಟು, ಮುಂದೆ ಮತ್ತೊಂದು ಸ್ಥಳಕ್ಕೆ ಗಮಿಸುತ್ತಿರಲು ಒಬ್ಬ ಶ್ರೀಮಂತನ ಬಗೀಚನ್ನು ನೋಡಿ ಅದರೊಳಗೆ ಆಗಮಿಸಿ ವಿಶ್ರಮಿಸಿದನು.

ಅಲ್ಲಿ ಆರಾಮಖುರ್ಚಿಯ ಮೇಲೆ ಕುಳಿತು ಅಲ್ಲಿಯ ತರತರದ ವನಸ್ಪತಿಗಳನ್ನೂ ಪಕ್ಷಿಗಳನ್ನೂ ಕ್ರಿಮಿಕೀಟಕಗಳನ್ನೂ ನೋಡಿ ಇವಾದರೂ ಈ ಸ್ಥಳದಲ್ಲಿ ನಾನು ಸಣ್ಣವನಿದ್ದಾಗ ಇರಲಿಲ್ಲ. ಈಗ ಕೆಲವು ಕಾಲ ಇದ್ದು ಇವು ನಾಶವಾಗುವವೇ ಎಂದು ವಿಚಾರಪಥದಲ್ಲಿ ಸಾಗುತ್ತಿರಲು, ತನ್ನ ಚಿಕ್ಕಂದಿನ ಕಾಲದ ಕಳೆದೋರಿ, ಆಗಿನ ಮುದಕರೆಲ್ಲ ಈಗಿಲ್ಲ. ಈಗಿನ ಮುಪ್ಪಿನವರೆಲ್ಲ ಮುಂದುಳಿಯಲಾರರು. ಇದರಂತೆ ಜಗತ್ತಿನ ಅಂಡಜ ಪಿಂಡಜ

ಜರಾಯುಜ ಉದ್ಭಿಜಗಳ ಸ್ಥಿತಿಯೆಂದು ವಿಮರ್ಶಿಸುತ್ತ, ಈ ತೋರುವ ಸಮುದ್ರ ಪರ್ವತ ಗಿರಿಗಂಹರಾದಿಯಾದ ಈ ಜಗತ್ತಿನ ಅರ್ಥಾತ್ ಈ ವಿಶ್ವದ ನಾಯಕನು ಒಬ್ಬನಿರಬಹುದಲ್ಲವೇ ? ಈ ವಿಶ್ವವನ್ನು ವ್ಯಾಪಿಸಿದ ಜೀವಾತ್ಮರುಗಳ ಅಂತರ್ಯಾಮಿಯು ಆತನೇ ಇರಬೇಕಲ್ಲವೇ ? ಆ ಜೀವಾತ್ಮ ಗಳ (ವಿಶ್ವಾತ್ಮಗಳ) ನಾನೊಬ್ಬ ಜೀವಿಯಲ್ಲವೇ ? ಎಂಬುದಾಗಿ ನಿರ್ಧರಿಸಿ, ಮುಂದೆ ಮತ್ತೊಂದು ಸ್ಥಾನಕ್ಕೆ ಗಮಿಸುತ್ತಿರಲು, ಅಲ್ಲಿ ನೂರಾರು ಜನ ಶ್ರೋತೃಗಳೂ ಅವರಲ್ಲಿ ಒಬ್ಬ ಯೋಗಿಯ ಬೋಧವೂ ನಡೆದಾಗ ಶ್ರೀನಿಜ ಗುಣಾರ್ಯರ ನುಡಿಯನ್ನು ಆಲಿಸಿದನು.

" ವಿಸ್ಮಯವೊಂದಿದೆ ಕೇಳ್ ನೀನಿಲ್ಲಿ । ಅಪ್ಪಂದಾತ್ಮಕವಹ ನಿನ್ನಲ್ಲಿ ॥ ಬಗೆಯೆಂದೆನಿಪೊಂದತ್ತಿಯ ಮರನ । ಮಿಗೆಸಸರಿಸಿ ಮಸಗಿತ್ತಾಮರನು ॥ ಕಾಲವೆನಿಪ ಘಾಳಿಯೊಳೊಲೆಯುತ್ತ । ಮೇಲೆ ನಿಜಾಶ್ರಯವನೆ ಮುಸುಗುತ್ತ ॥ ಚಿತ್ತದ ಹಮ್ಮಿನ ಬೇರುಗಳಿಂದ । ಮತ್ತೆ ಹೃಷೀಕವೆನಿಪ ತಳರಿಂದ ॥ ಜಾತಾ ಜಾಂಡಫಲಾವಳಿಯಿಂದ । ಭೂತವೆನಿಸುತೊಳಗಿಹ ನೊರಜಿಂದ ॥ ಮಸಗಿತು ಭೂತೋಪಾಧಿಗಳಲ್ಲಿ । ಎಸೆದುದು ಚಿತ್ತಖಿಳಾತ್ಮತೆಯಲ್ಲಿ ॥ ಅಂಡಜಮುದ್ಭಿಜ ಸ್ವೇದಜವೆಂದು । ಪಿಂಡಜಮಿನ್ನು ಜರಾಯುಜವೆಂದು ॥ ಈ ತೆರದಿಂದೆ ಚತುರ್ವಿಧವಹವು ॥

ವೇದಾಂತಿಗಳು ಚರಾಚರಾತ್ಮಕವಾದ ಬ್ರಹ್ಮಾಂಡಗಳಲ್ಲಿ ಯಾವದು ಅಡಕವಾಗಿರುವದೋ ಅದಕ್ಕೆ ವೀರಶೈವವು " ಲಿಂಗಮಧ್ಯೇ ಜಗತ್ಸರ್ವಂ ತ್ರೈಲೋಕ್ಯಸಚರಾಚರಂ । ಲಿಂಗಬಾಹ್ಯ ಪರನ್ನಾಸ್ತಿ ತಸ್ಮಾಲ್ಲಿಂಗಂ ಪ್ರಪೂಜ ಯೇತ್ ॥ ೧ ॥ ಲೀಯತೇ ಗಮ್ಯತೇ ಯತ್ರ ಯೇನ ಸರ್ವಚರಾಚರಂ । ತದೇವಲಿಂಗಮಿತ್ಯುಕ್ತಂ ಲಿಂಗತತ್ವಪರಾಯಣೈಃ ॥೨॥ ಈ ಪ್ರಕಾರ ಶಿವತತ್ವ ವೆಂದೂ; ಲಿಂಗತತ್ವವೆಂದೂ ಪರತತ್ವವೆಂದೂ ಭಾವಿಸಲ್ಪಟ್ಟಿದೆ. ಹಾಗೂ ಶರಣರ ಚಿದಂಗದಲ್ಲಿ ಈ ಪರಾತ್ಪರವಾದ ಲಿಂಗವು ಯಾವ ಪ್ರಕಾರ ಪ್ರಕಾ ಶಿಸುತ್ತಿರುವದೆಂಬದನ್ನು ಶ್ರೀ ಅಲ್ಲಮಪ್ರಭುದೇವರು ತಮ್ಮ ಮಂತ್ರ ಗೋಪ್ಯ ದಲ್ಲಿ ಅತಿ ರಹಸ್ಯವಾಗಿ ನಿವೇದಿಸಿದ್ದಾರೆ.

ನಿಟಿಲ ಭ್ರೂಮಧ್ಯದ ಸ್ಫಟಿಕವರ್ಣದ ಜ್ಯೋತಿ ।
ಘಟದೊಳಗೆ ತಾನಾಗಿ ತೊಳಗಿ ಬೆಳಗಿ ॥
ವಟವೃಕ್ಷದಕೆಳಗೆ ಲೋಕಾಧಿಲೋಕಗಳು ।
ಘಟಿಕೆಯಂತಡಗಿದ ಪರಾತ್ಪರವಿದು ॥೧॥

ಟೀಕೆ:— ಅಖಂಡ ಚಿತ್ಪ್ರಭಾಜ್ಯೋತಿಯಪ್ಪ ಮಹತ್ ತತ್ವವು ಅಣುವಿಂಗೆ ಅಣುವಾಗಿ ಸಮಸ್ತದೇಹಿಗಳ ಭ್ರೂಮಧ್ಯದಲ್ಲಿ ಚಿಜ್ಜ್ಯೋತಿಯಾಗಿರುವದು. ಶರಣನ ಸರ್ವಾಂಗದಲ್ಲಿ ಅಖಂಡ ಜ್ಯೋತಿಯೇ ತುಂಬಿ ಶರಣನೆಲ್ಲಾ ಚಿಚ್ಛಿಳಗೇ ಆಗಿರುವನು.

ಪರಬ್ರಹ್ಮವೆಂಬುದೇ ವಟವೃಕ್ಷವು. ಈ ಪರಬ್ರಹ್ಮವೃಕ್ಷದ ಮಧ್ಯದಲ್ಲಿ ಅನಂತ ಬ್ರಹ್ಮಾಂಡಗಳು ತೋರುತ್ತ ಅಡಗುತ್ತಲಿರುವವು. ಹೀಗಿರುವ ಪರಬ್ರಹ್ಮವು ಆ ಚಿತ್ಸ್ವರೂಪನಾದ ಶರಣನ ಅಂಗದ ಮಧ್ಯದಲ್ಲಿ ಅಡಗಿ, ಆ ಲಿಂಗದ ತಟ್ಟು ಮುಟ್ಟಿನ ಸುಖದುಃಖ ಭೋಗಂಗಳೆಲ್ಲಾ ತಾನೇ ಆಗಿ ಭೋಗಿಸುತ್ತಿರುವದು. ಅದು ಹೇಗಂದರೆ:- ರಸಘಟಿಕೆ (ರಸದ ಗುಳಿಗೆ) ಯು ನುಂಗಿದ ಸಿದ್ಧನ ಅಂಗದ ತಟ್ಟು ಮುಟ್ಟಿನ ಅಲಗಿನ ಹೊಯಿಲುಗಳನ್ನು ಆ ಘಟಿಕೆಯೇ ಹೊಂದಿಕೊಳ್ಳುವಂತೆ. ಪರಬ್ರಹ್ಮವನು ಅಂಗದಲಿ ಅಳವಡಿಸಿಕೊಂಡಿರುವ ಶರಣನೇ ಪರಬ್ರಹ್ಮವು.

ಈ ಪ್ರಕಾರ ಅಖಂಡ ಚಿತ್ಪ್ರಭಾ ಜ್ಯೋತಿಯಪ್ಪ ಸಮಸ್ತ ದೇಹಿಗಳ ಭ್ರೂಮಧ್ಯದಲ್ಲಿ ಚಿಜ್ಜ್ಯೋತಿಯಾಗಿ ಮಹಾಲಿಂಗಾಭಿಧಾನವನ್ನು ಹೊಂದಿರುವದು. ಇದುವೇ ಬ್ರಹ್ಮಚಕ್ರದಲ್ಲಿ ನಿಃಕಲಲಿಂಗವಾಗಿ, ಶಿಖಾಚಕ್ರದಲ್ಲಿ ಶೂನ್ಯ (ನಿಃಶೂನ್ಯ) ಲಿಂಗವಾಗಿ, ಪಶ್ಚಿಮ ಚಕ್ರದಲ್ಲಿ ನಿರಂಜನ ಲಿಂಗವಾಗಿ, ಅಣು ಚಕ್ರದಲ್ಲಿ ಸರ್ವಶೂನ್ಯ ಲಿಂಗವಾಗಿ ನಿಜ ಶರಣನಲ್ಲಿ ನಿವೇದ್ಯವಾದುದೆಂತೆನೆ:-

ಸರ್ವ ಶೂನ್ಯ ನಿರಾಲಂಬ :— ಪೃಥ್ವಿ, ಅಪ್ಪು, ತೇಜ, ವಾಯು, ಆಕಾಶ, ಚಂದ್ರ ಸೂರ್ಯ ಆತ್ಮರೆಂಬ ಅಷ್ಟತನು ಮೂರ್ತಿ ಸ್ವರೂಪಗೊಳ್ಳದಂದು, ನಾನುನೀನೆಂಬ ಭ್ರಾಂತಿ ಸೂತಕ ಹುಟ್ಟದಂದು, ನಾಮ ರೂಪ ಕ್ರಿಯಗಳೇನೂ ಇಲ್ಲದಂದು, ಸರ್ವಶೂನ್ಯ ನಿರಾಲಂಬಿಯಾಗಿದ್ದಿಯಲ್ಲಾ ನೀನು. ಮಹಾಲಿಂಗ ಗುರುಶಿವ ಸಿದ್ಧೇಶ್ವರ ಪ್ರಭುವೇ ॥ ೧ ॥

ನಿತ್ಯ ನಿರಂಜನ:— ಆದಿ ಮಧ್ಯಾವಸಾನವಿಲ್ಲದಂದು, ಆದಿ ಅನಾದಿ ನಾದ ಬಿಂದು ಕಳೆಗಳಿಲ್ಲದಂದು, ಸಾವಯವ ನಿರವಯವಿಲ್ಲದಂದು, ಶತ್ತ ಬ್ರಹ್ಮಾಂಡಾದಿ ಲೋಕಾದಿ ಲೋಕಂಗಳೇನೂ ಇಲ್ಲದಂದು, ನಿತ್ಯ ನಿರಂಜನ ಪರವಸ್ತು ನೀನೊಬ್ಬನೇ ಇದ್ದೆಯಲ್ಲಾ; ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೇ ॥೨॥

ಶೂನ್ಯಲಿಂಗಃ—ಬ್ರಹ್ಮ ವಿಷ್ಣು ರುದ್ರ ಈಶ್ವರ ಸದಾಶಿವರೆಂಬ ಪಂಚಾದಿ ದೇವತೆಗಳಿಲ್ಲದಂದು, ಈ ಪಂಚೈವರ ಲಯ ಗಮನಂಗಳಿಗೆ ಕಾರಣವಾದ ಶಿವ ಶಕ್ತಿ ಇಲ್ಲದಂದು, ಈ ಶಿವಶಕ್ತಿಗೆ ಕಾರಣವಾದ ಸತ್ತು ಚಿತ್ತಾನಂದ ನಿತ್ಯ ಪರಿಪೂರ್ಣನೆಂಬ ನಿಃಕಳ ಶಿವತತ್ವವಿಲ್ಲದಂದು ನೀನು ಶೂನ್ಯನಾಗಿ ಇರ್ದೆ ಯಯ್ಯಾ ಮಹಾಲಿಂಗ ಗುರು ಶಿವ ಸಿದ್ದೇಶ್ವರ ಪ್ರಭುವೇ ॥೩॥

ನಿಃಕಲ ಲಿಂಗ:— ವೇದಶಾಸ್ತ್ರ ಪುರಾಣಾಗಮಂಗಳುದಯವಾಗದಂದು, ದ್ವೈತಾದ್ವೈತವಿಲ್ಲದಂದು, ಪೀತ ಶ್ವೇತ ಹರಿತ ಮಾಂಜಿಷ್ಟ ಕಪೋತ ಮಾಣಿಕ್ಯ ವರ್ಣವೆಂಬ ಈ ಷಡ್ವರ್ಣ ಮುಖ್ಯವಾದ ಸಮಸ್ತ ವರ್ಣಂಗಳಿಲ್ಲ ದಂದು, ಸಚ್ಚಿದಾನಂದ ಪರಬ್ರಹ್ಮ ನೀನೇ ಆಗಿ, ಎಲ್ಲ ತತ್ವಂಗಳಿಗೆ ನೀನಾ ಶ್ರಯವಾಗಿ, ನಿನಗೊಂದಾಶ್ರಯವಿಲ್ಲದೆ, ತತ್ವಂಗಳಿಗೆ ನೀನಾದಿಯಾಗಿ, ನಿನ ಗೊಂದಾಧಾರವಿಲ್ಲದೆ, ನಿರಾಧಾರಿಯಾದ ಕಾರಣ ನಿಃಕಲ ಶಿವತತ್ವವೆಂದರಿ ದೆನು ನೋಡಾ, ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೇ ||೪||

ಮಹಾಲಿಂಗ:— ಅಷ್ಟತನುಯುಕ್ತವಾದ ಬ್ರಹ್ಮಾಂಡಾದಿ ಚರಾಚರ ಪ್ರಾಣಿಗಳು ತೋರುವ ತೋರಿಕೆ ಏನೇನೂ ಇಲ್ಲದಂದು, ಸರ್ವ ಶೂನ್ಯ ನಿರಾಲಂಬ ಬ್ರಹ್ಮವು ತಾನೊಂದೇ ಒಪ್ಪುತ್ತಿರ್ದಿತ್ತು. ಅಂತಿರ್ದ ಪರಬ್ರಹ್ಮವು ತಾನೊಂದೇ ಘೃತಕಾಠಿಣ್ಯವಸ್ಮೂರ್ತಿ ಸಚ್ಚಿದಾನಂದ ಲಕ್ಷಣವೆಂದು ಹೇಳು ತ್ತಿಹುದಾದ ಕಾರಣ ಒಂದಾನೊಂದು ಕಾಳಿದುಪ್ಪವೇ ಗಟ್ಟಿಗೊಂಡು ಹೆರೆದುಪ್ಪ ವಾದ ಹಾಗೆ ನಿರಂಜನ ಬ್ರಹ್ಮವಾಯಿತ್ತು. ಆ ನಿರಂಜನ ಬ್ರಹ್ಮವು ನೆನೆದ ನೆನಹೇ ನಿರಂಜನೋಂಕಾರ ಶಕ್ತಿ, ಆ ನಿರಂಜನೋಂಕಾರ ಶಕ್ತಿಯು ನೆನಹು ಮಾತ್ರದಿಂದ ವಾಚ್ಯಪ್ರಣವು ಸ್ವರೂಪವಾದ ಶೂನ್ಯಲಿಂಗವು ಪುಟ್ಟಿತ್ತು. ಆ ಶೂನ್ಯಲಿಂಗಕ್ಕಂಗವಾಗಿರುವಂಥಾದ್ದೇ ಮಹಾಜ್ಞಾನಚಿತ್ತು. ಆ ಮಹಾ ಜ್ಞಾನ ಚಿತ್ತುವಿನ ನೆನಹು ಮಾತ್ರದಿಂದ ಕಲಾಪ್ರಣವ ಸ್ವರೂಪವಾದ ನಿಃಕಲ ಬ್ರಹ್ಮವು ಹುಟ್ಟಿತ್ತು. ಆ ನಿಃಕಲಬ್ರಹ್ಮಕ್ಕಂಗವಾಗಿರುವಂಥಾದ್ದೇ ಜ್ಞಾನಚಿತ್ತು ಆ ಚಿತ್ತಿನ ಚಿನ್ನಾದವೇ ಬಕಾರ ಚಿದ್ಬಿಂದುವೇ ಸಕಾರ. ಚಿತ್ಕಳೆಯೇ ವಕಾರ. ಆ ಚಿನ್ನಾದ ಚಿದ್ಬಿಂದು ಚಿತ್ಕಳೆ ಮೂಲ ಚಿತ್ತೆಂಬ ಚತುರ್ವಿಧವು ಗಟ್ಟಿಗೊಂಡ ಗೋಳಕಾಕಾರ ತೇಜೋಮೂರ್ತಿಯಪ್ಪ ಮಹಾಲಿಂಗವಾ ಯಿತ್ತು. ॥ ೫ ॥

ಈ ಬಗ್ಗೆ ಶ್ರೀ ಅಲ್ಲಮಪ್ರಭುದೇವರ ಮಂತ್ರಗೋಪ್ಯದ ಅನುಭಾವವು ಕೆಳಗಿನಂತೆ:—

ಹಾಳ ಮೇಲಿನ ಮಣಿಯ ಕಾಣಲಾರಳವಲ್ಲ ।
ಪೌಳಿ ಪೌಳಿಯ ಕೋಣೆ ಕೋಣೆಯೊಳಗೆ ||
ಮೇಲುಗಿರಿಯ ಶಿಖರ ಪಶ್ಚಿಮ ದ್ವಾರವನು ಪೊಗಲು ||
ಕಾಣಬಾರದ ಕದಳಿಯುಂಟು ನೋಡಾ ॥

ಟೀಕೆ:— ಪ್ರಪಂಚ ವಿಷಯಗಳೆಂಬ ಪೈರು ಇಲ್ಲದೆ ಇದ್ದಂಥ ಶರಣನ ನಿರ್ಮಲ ಹೃದಯವೆಂಬ ಕೀಲಕ್ಷೇತ್ರದಲ್ಲಿ (ಹಾಳಿನ ಮೇಲೆ) ಚಿತ್‌ಪ್ರಕಾಶ ಸ್ವರೂಪವಾದ ಪ್ರಾಣಲಿಂಗ (ಮಣಿ) ವನ್ನು ಕಾಣುವದಕ್ಕೆ ದ್ವೈತಾದ್ವೈತ ಭಿನ್ನಯೋಗಿಗಳು ಅರಿಗಾದರೆಯೂ ಶಕ್ಯವಿಲ್ಲ. ಅವಸ್ಥಾತ್ರಯಂಗಳಲ್ಲಿ (ಪೌಳಿಪೌಳಿಯ) ತನುತ್ರಯಂಗಳಲ್ಲಿ (ಕೋಣೆ ಕೋಣೆಯೊಳಗೆ)ಬ್ರಹ್ಮರಂಧ್ರಚಕ್ರ (ಮೇಲುಗಿರಿ) ಶಿಖಾಚಕ್ರ (ಶಿಖರ) ಪಶ್ಚಿಮ ಚಕ್ರದ ಬಾಗಿಲ (ಪಶ್ಚಿಮ ದ್ವಾರವ) ನ್ನು ಮತಿ (ಸಮ್ಯಗ್ ಜ್ಞಾನ) ಪ್ರಕಾಶವು ಪ್ರವೇಶ ಮಾಡಲು ಅರಿಗೂ ಗೋಚರಿಸಿದೆ ಅವಸ್ಥಾತ್ರಯಂಗಳಲ್ಲಿ ಆಕಾರ ಉಕಾರ ಮಕಾರ ಮಂತ್ರಸ್ವರೂಪವಾಗಿ, ತನುತ್ರಯಂಗಳಲ್ಲಿ ಇಷ್ಟಪ್ರಾಣ ಭಾವಲಿಂಗ ಸ್ವರೂಪವಾಗಿ ಬ್ರಹ್ಮರಂಧ್ರದಲ್ಲಿ ನಿಷ್ಕಲ ಲಿಂಗಸ್ವರೂಪವಾಗಿ, ಶಿಖಾಚಕ್ರದಲ್ಲಿ ಶೂನ್ಯಲಿಂಗ ಸ್ವರೂಪವಾಗಿ, ಪಶ್ಚಿಮ ಚಕ್ರದಲ್ಲಿ ನಿರಂಜನ ಲಿಂಗ ಸ್ವರೂಪವಾಗಿ ಇರುವುದಾ ಶಿವತತ್ವವು. ಕಂಡೆಯಾ ಸಿದ್ಧರಾಮನೇ ?

ಈ ವಿಷಯವಾಗಿಯೇ ಉರಲಿಂಗ ಪೆದ್ದಿಗಳ ಅನುಭಾವ:—

ಜಲದೊಳಗಣ ಸೂರ್ಯನಂತೆ ಇರ್ಪನಯ್ಯಾ ಶಿವನು. ಲೋಕಾದಿ ಲೋಕಂಗಳೊಳಗಿರ್ದಡೇನು ? ಜಗದ ಪುಣ್ಯಪಾಪ, ಸ್ವರ್ಗ ನರಕ ಬಂಧ ಮೋಕ್ಷಕ್ಕೆ ಒಳಗಾದಾತನೇ ? ಅಲ್ಲ. ಅದೆಂತೆದೊಡೆ:—ಜಲದೊಳಗಿನ ಪ್ರಕೃತಿ ವಿಕೃತಿಗಳು ಜಲಕ್ಕಲ್ಲದೆ ಸೂರ್ಯಂಗಿಲ್ಲವಾಗಿ. ಲೋಕದ ಸ್ಥಿತಿಗತಿ ಲೋಕಕ್ಕಲ್ಲದೆ, ಶಿವಂಗಿಲ್ಲವಾಗಿ. ಅನಂತಕೋಟಿ ಬ್ರಹ್ಮಾಂಡಗಳು ತನ್ನ ಒಡಲೊಳಗೆ ಪರ್ವೆಂದೊಡೆ, ತಾ ಹೊರಗಾಗಿ ಅಡಗಲೆಡೆಯುಂಟೇ ? ಇದು ಕಾರಣ ನಮ್ಮ ಉರಿಲಿಂಗಪೆದ್ದಿ ಪ್ರಿಯ ವಿಶ್ವೇಶ್ವರನು ವಿಶ್ವದೊಳಗೆ ಹೊದ್ದಿಯೂ ಹೊದ್ದದಿರಬಲ್ಲ. ವಿಶ್ವಾಧಿಪತಿಯಾಗಲೂಬಲ್ಲ. ॥ ೧ ॥

ತನ್ನ ತಾನರಿದಿಹವೆ ಪರಮಾತ್ಮ ಯೋಗ. ತನ್ನ ತಾ ಮರೆದಿಹವೆ ಮಾಯಾ ಸಂಬಂಧ. ಅಂತರಂಗ ಬಹಿರಂಗ ಪರಮಾಕಾಶ ಮಧ್ಯದಲ್ಲಿ ಪರಮಾತ್ಮನು ಪರಬ್ರಹ್ಮ ಸ್ವರೂಪನು. ನಿತ್ಯ ನಿರಂಜನವು ಉಪಮಾತೀತ ನಿಃಪತಿ ಕೇವಲ ನಿಷ್ಕಲ ಸ್ವರೂಪನು. ಭ್ರೂಮಧ್ಯದಲ್ಲಿ ಪರಮಾತ್ಮನೆ ಅಂತರಾತ್ಮನಾಗಿ ಸಕಲ ನಿಷ್ಕಲನಾಗಿಪ್ಪನು. ಹೃದಯ ಸ್ಥಾನದಲ್ಲಿ ಆ ಪರಮಾತ್ಮನೆ ಜೀವಾತ್ಮನಾಗಿ ಕೇವಲ ಸಕಲನಾಗಿಪ್ಪನು. ಬ್ರಹ್ಮರಂಧ್ರ ಸ್ಥಾನದಲ್ಲಿ ನಿಷ್ಕಲ ಗುರುಮೂರ್ತಿ ಲಿಂಗ, ಭ್ರೂಮಧ್ಯ ಸ್ಥಾನದಲ್ಲಿ ಸಕಲ ಪರಂಜ್ಯೋತಿರ್ಲಿಂಗ. ಹೃದಯ ಸ್ಥಾನದಲ್ಲಿ ಕೇವಲ ಸಕಲ ಜಂಗಮಲಿಂಗ. ಇಂತು ಪರಮಾತ್ಮನೆ ಜೀವಾತ್ಮ, ಪರಮಾತ್ಮನೆ ಗುರು ಲಿಂಗ, ಪರಮಾತ್ಮನೆ ಶಿವಲಿಂಗ, ಪರಮಾತ್ಮನೆ ಜಂಗಮಲಿಂಗ. ಇಂತು ಪರಬ್ರಹ್ಮವೆ ಪರಮಾತ್ಮ, ಪರಮಾತ್ಮನೆ ಸರ್ವಾತ್ಮ, ಪರಮಾತ್ಮನೆ ಸರ್ವಗತ, ಪರಮಾತ್ಮನೆ ಆತ್ಮಗತ. ಇದು ಕಾರಣ ಪರಮಾತ್ಮನೆ ಅಂತರಂಗ ಬಹಿರಂಗ ಭರಿತ ಪ್ರಾಣಲಿಂಗ. ಇಂತು ಅರಿದುದೆ ಪರಮಾತ್ಮ ಯೋಗ. ಮರವೆಯೇ ಮಾಯಾಸಂಬಂಧವಯ್ಯ ಉರಿಲಿಂಗ ಪೆದ್ದಿ ಪ್ರಿಯ ವಿಶ್ವೇಶ್ವರಾ ॥೨॥

ಅಂತರಂಗ ಬಹಿರಂಗವೆಂದೆಂಬರು, ಅವುದು ಹಿಂದು ಅವುದು ಮುಂದು ಎಂದರಿಯರು. ಎಳ್ಳೊಳಗಣ ಎಣ್ಣೆಯಂತೆ, ಕಲ್ಲೊಳಗಣ ಹೇಮದಂತೆ, ಹಾಲೊಳಗಣ ತುಪ್ಪದಂತೆ, ಕಾಷ್ಠದೊಳಗಣ ಅಗ್ನಿಯಂತೆ, ಪುಷ್ಪದೊಳಗಣ ಪರಿಮಳದಂತೆ, ಭಾವದೊಳಗೆ ಶಿವನಿಪ್ಪನೆಂದೊಡೆ, ಆ ಶಿವನು ತನಗೆ ಕಾಣಿಸಿಕೊಳ್ಳನು. ಮಥನದಿಂದಲ್ಲದೆ ಅದೆಂತೆಂದೊಡೆ:—ತಿಲಮಧ್ಯೇ ಯಥಾ ತೈಲಂ ಕ್ಷೀರ ಮಧ್ಯೇಯಥಾಘೃತಂ । ಪುಷ್ಪಮಧ್ಯೇ ಯಥಾ ಗಂಧೋ ಭಾವ ಮಧ್ಯೇ ತಥಾ ಶಿವಃ ॥ ಎಂದುದಾಗಿ, ಇಂತಪ್ಪ ಚಿನ್ಮೂರ್ತಿಯನು ಮಸ್ತಕದಲ್ಲಿ ಶ್ರೀಗುರು ತನ್ನ ಹಸ್ತಾಬ್ಜ ಮಥನದಿಂದ, ಆಕರ್ಷಣವ ಮಾಡಿ ತೆಗೆದು ತಲ್ಲಿಂಗವನಂಗದಲ್ಲಿ ಸ್ಥಾಪ್ಯವ ಮಾಡಿ, ಸುಜ್ಞಾನ ಕ್ರಿಯೋಪದೇಶವಂ ಮಾಡಲು, ಘಟದ ಘೋರಗಿಹ ಅನಲವೇಧಿಸಿ ತಜ್ಜಲವ ಹಡಿದು ತೆಗೆದು ಕೊಂಬಂತೆ, ಬಾಹ್ಯದಲ್ಲಿ ಮಾಡುವ ಕ್ರಿಯಾಮಥನದಿಂದ ಶಿವಜೀವ ಸಂಯೋಗಪಹ ಬಟ್ಟೆಯನರಿಯದೆ ಕೆಟ್ಟರಲ್ಲ ಅದ್ವೈತಿಗಳು. ಅದೆಂತೆಂದೊಡೆ— ॥ಶ್ಲೋ॥ ಘಟಮಧ್ಯಸ್ಥಿತಂತೋಯಂ ಅಗ್ನಿರ್ಜ್ವಲತಿ ಬಾಹ್ಯತಃ । ಅಗ್ನಿಜ್ವಲನ ಸಂಯೋಗೇ ಉಷ್ಣಂಭವತಿ ವಾರಿಣಾಂ ॥ ಎಂದುದಾಗಿ ಈ ವರ್ಮ ಕುಳಸ್ಥಳವನರಿಯದೆ ಶಿವಲಿಂಗ ಪೂಜೆಯ ಬಿಟ್ಟು, ಅನ್ಯ ಬಟ್ಟೆಯಲ್ಲಿ ಹರಿ

ವರು, ಕರ್ಮ ನಿರ್ಮೂಲವಾಗದ ಜಡರುಗಳು, ಗುರುವಚನ ಪರಾಙ್ಮುಖರು, ಲಿಂಗನಿಷ್ಠಾವಿರಹಿತರು. ಗುರುಕೊಟ್ಟ ಇಷ್ಟಲಿಂಗದಲ್ಲಿ ಅಷ್ಟವಿಧಾರ್ಚನೆ ಷೋಡಶೋಪಚಾರಂಗಳಿಂ ಕ್ರಿಯೆವಿಡಿದು ಮಾಡಿ ಪ್ರಾಣವೇಧಿಸಿ ಪ್ರಾಣ ಲಿಂಗ ಸಂಬಂಧಿಗಳಾಗಲರಿಯದೆ ಕೆಟ್ಟರಲ್ಲ ಅದ್ವೈತಿಗಳು ಉರಿಲಿಂಗ ಪೆದ್ದಿ ಪ್ರಿಯ ವಿಶ್ವೇಶ್ವರಾ ॥೨॥

ಶಿವಲಿಂಗದ ಮಹಾತ್ಮೆಯನು ಶಿವಲಿಂಗದ ಮರ್ಮವನು ಶಿವಲಿಂಗದ ನಿಶ್ಚಯವನು ಅದಾರಯ್ಯ ಬಲ್ಲವರು? ಅದಾರಯ್ಯ ಅರಿದವರು? ಶ್ರೀಗುರು ತೋರಿಕೊಡದನ್ನಕ್ಕರ? "ಸರ್ವೈಶ್ವರ್ಯ ಸಂಪನ್ನ ಮಾದ್ಯಂತ ಕತ್ವಾಧಿಕಂ" ಎಂದುದಾಗಿ, "ಅಣೋರಣೀಯಾನ್ ಮಹತೋಮಹೀಯಾನ್" "ಯತೋ ವಾಚೋ ನಿವರ್ತಂತೇ" ಎಂದುದಾಗಿ "ಅತ್ಯತಿಷ್ಠದ್ದ ಶಾಂಗುಲಂ" ಎಂದುದಾಗಿ, ಈ ಪ್ರಕಾರದಲ್ಲಿ ವೇದಾಗಮಂಗಳು ಸಾರುತ್ತಿರಲು, ಲಿಂಗವು ಹರಿಬ್ರಹ್ಮಾದಿ ದೇವದಾನವ ಮಾನವರಿಗೆಯು ಅರಿಯಬಾರದು. "ಚಕಿತ ಮಭಿಧತ್ತೆ ಶ್ರುತಿರಪಿ" ಎಂದುದಾಗಿ ವೇದಪುರುಷರಿಗೆಯೂ ಅರಿಯಬಾರದು. ಅರಿಯಬಾರದ ವಸ್ತುವ ರೂಪಿಸಲೆಂತುಬಾರದು, ರೂಪಿಸಬಾರದ ವಸ್ತುವ ಪೂಜಿಸಲೆಂತುಬಾರದು, ಪೂಜೆಗಿಲ್ಲವಾಗಿ ಭಕ್ತಿಗಿಲ್ಲ, ಭಕ್ತಿಗಿಲ್ಲವಾಗಿ ಪ್ರಸಾದಕ್ಕಿಲ್ಲ, ಪ್ರಸಾದಕ್ಕಿಲ್ಲವಾಗಿ ಮುಕ್ತಿಗಿಲ್ಲ, ಮುಕ್ತಿಗಿಲ್ಲದೆ ದೇವದಾನವ ಮಾನವರೆಲ್ಲರು ಕೆಡುವರು ಕೆಡುವರು. ಕೆಡದಂತೆ ಮಾಡಿ ರಕ್ಷಿಸಿದನು ಸದ್ಗುರು ಮಹಾಗುರು ಶ್ರೀಗುರು "ನಗುರೋರಧಿಕಂ" ಎಂದುದಾಗಿ ಮಹಾ ಘನಗುರು ಶಾಂತಮೂರ್ತಿ ಕೃಪಾಮೂರ್ತಿ ಲಿಂಗ ಪ್ರತಿಷ್ಠೆಯಂ ಮಾಡಿದನು. ಅದೆಂತೆನಲು ಕೇಳಿರೇ "ಯತೋ ವಾಚೋ ನಿವರ್ತಂತೆ ಅಪ್ರಾಪ್ಯ ಮನಸಾಸಹ, ನಾದಬಿಂದುಕಳಾತೀತಂ ಗುರೂಣಾಂ ಲಿಂಗಮುದ್ಭವಂ" ಎಂದುದಾಗಿ "ಸದ್ಗುರು ರ್ಲಿಂಗ ಭಾವಂಚ, ಸರ್ವಬ್ರಹ್ಮಾಂಡವಾಸಿನಾಂ। ಸರ್ವಲೋಕಸ್ಯವಾಸಸ್ಯ, ಮುಕ್ತಿಕ್ಷೇತ್ರ ಸುವಾಸಿನಾಂ" ಎಂದುದಾಗಿ "ಸದ್ಗುರುರ್ದೀಯತೇ ಲಿಂಗಂ। ಸದ್ಗುರುರ್ದೀಯತೇ ಮಂತ್ರಂ। ಸದ್ಗುರುಸ್ಸರ್ವಕಾರಣಂ॥" ಎಂದುದಾಗಿ, ಸರ್ವ ಲೋಕಕ್ಕೆಯು ಸರ್ವರಿಗೆಯು ಲಿಂಗಪ್ರತಿಷ್ಠೆಯಂ ಮಾಡಿಕೊಟ್ಟನು. "ಅರೂಪ ಭಾವನಾನಾಸ್ತಿ। ಯದ್ದೃಷ್ಟಂ ತದ್ವಿನಶ್ಯತಿ। ದೃಷ್ಟಾದೃಷ್ಟ ಸ್ವರೂಪತ್ವಂ। ತಥಾಪ್ಯೇವಂ ಸದಾಭ್ಯಸೇತ್" ಎಂದುದಾಗಿ ನಿಃಕಲರೂಪನಿರವಯ ಧ್ಯಾನ ಪೂಜೆಗಸುವಲ್ಲ. ಸಕಲತತ್ವಸಾಮಾನ್ಯನೆಂದು ಸಕಲ ನಿಷ್ಕಲನೊಂದಾಗಿ ಲಿಂಗವ ಮಾಡಿದನು. ॥ಶ್ಲೋ॥ "ಲಿಂಗಂ

ತಾಪತ್ರಯಹರಂ । ಲಿಂಗಂ ದಾರಿದ್ರ್ಯನಾಶನಂ ॥ ಲಿಂಗಂಪಾಪವಿನಾಶಂಚ । ಲಿಂಗಂ ಸರ್ವತ್ರಸಾಧನಂ॥ " ಎಂದುದಾಗಿ, ಲಿಂಗವು ಪರಂಜ್ಯೋತಿರ್ಲಿಂಗವು ಪರಬ್ರಹ್ಮವೆಂದು ಲಿಂಗವನೇ ಪೂಜಿಸಿ ಭಕ್ತಿಯು ಪ್ರಸಾದ ಮುಕ್ತಿಯ ಪಡೆಯಲೆಂದು ಮಹಾಘನ ಗುರು ಲಿಂಗಪ್ರತಿಷ್ಠೆಯಿಂ ಮಾಡಿ ತೋರಿಕೊಟ್ಟನು. ಅದೆಂತೆಂದೊಡೆ: – "ಬ್ರಹ್ಮಾವಿಷ್ಣುಶ್ಚ ರುದ್ರಶ್ಚ ಈಶ್ವರಶ್ಚ ಸದಾಶಿವಃ । ಸರ್ವೇ ಲಿಂಗಾರ್ಚನೇರತಾ । ಜಾತಾಸ್ತೇ ಲಿಂಗಪೂಜಕಾಃ । " ಎಂದುದಾಗಿ, ಮತ್ತಂ "ಗೌರೀಪತಿ ಉಮಗನಾಥೋ ಅಂಬಿಕಾಪಾರ್ವತೀಪತಿಃ । ಗಂಗಾಪತಿರ್ಮಹಾದೇವೋ । ಸತತಂ ಲಿಂಗಂ ಪೂಜಕಂ । " ಎಂದುದಾಗಿ, ಈ ಮಹಾಪುರುಷರಪ್ಪ ದೇವಗಣ ರುದ್ರಗಣ ಪ್ರಮಥಗಣಂಗಳು ವಿಷ್ಣ್ವಾದಿ ದೇವದಾನವ ಮಾನವಾದಿಗಳು ಮಹಾಲಿಂಗವನೆ ಧ್ಯಾನಿಸಿ ಪೂಜಿಸಿ ಪರಮಸುಖ ಪರಿಣಾಮವ ಹಡೆದರೆಂದು ಮಾಡಿದನು. ಕೇವಲ ಸದ್ಭಕ್ತ ಜನಂಗಳಿಗೆ. ಅದೆಂತೆಂದೊಡೆ—"ಇಷ್ಟಪ್ರಾಣಸ್ತಥಾಭಾವಂ ತ್ರಿಧಾಮೇಕಂ ವರಾನನೇ " ಎಂದುದಾಗಿ ಆ ಸದ್ಗುರು ಆ ಪರಶಿವನನು ತತ್ಪ್ರಾಣವನು ಏಕೀಭವಿಸಿ ಸದ್ಭಾವದಿಂ ಲಿಂಗ ಪ್ರತಿಷ್ಠೆಯಂ ಮಾಡಿ ಪ್ರಾಣಲಿಂಗವಾಗಿ ಕರಸ್ಥಲದಲ್ಲಿ ಬಿಜಯಂಗೈದು ಅಂತರಂಗ ಬಹಿರಂಗ ಭರಿತನಾಗಿ ಪೂಜೆಗೊಳಲೆಂದು ಕರುಣಿಸಿದನು. ಮತ್ತಂ "ಏಕಮೂರ್ತಿಸ್ತ್ರಿಧಾಭೇದಂ " ಎಂದುದಾಗಿ ಗುರುಲಿಂಗಜಂಗಮಲಿಂಗ ಪರಶಿವಲಿಂಗ ಒಂದೇ. "ದೇಶಿಕಾಚಾರ ಲಿಂಗಂಚ ॥ ತ್ರಿವಿಧಂ ಲಿಂಗಮುಚ್ಯತೇ" ಎಂದುದಾಗಿ, ಲಿಂಗದ ಮರ್ಮವನು ಲಿಂಗದ ಸ್ವರೂಪವನು ಲಿಂಗದ ನಿಶ್ಚಯವನು ಆದಿಯಲ್ಲಿ ಧ್ಯಾನ ಪೂಜೆಯ ಮಾಡಿದವರನು ಭಕ್ತಿಪ್ರಸಾದ ಮುಕ್ತಿಯ ಪಡೆದವರನು ವೇದಶಾಸ್ತ್ರ ಪುರಾಣಾಗಮಂಗಳು ಹೇಳುತ್ತಿವೆ. ಶಿವನ ವಾಕ್ಯಂಗಳಿಗಿದೇ ದಿಟ. ಮನವೇ ನಂಬು ಕೆಡಬೇಡ, ಕೆಡಬೇಡ, ಮಹಾಸದ್ಭಕ್ತರ ನಂಬುವುದು, ಶಿವಲಿಂಗಾರ್ಚನೆ ನಿರಂತರ ಮಾಡುವುದು, ಇದು ನಿಶ್ಚಯ. ಶಿವನು ಬಲ್ಲನಯ್ಯ. ಈ ಕ್ರಿಯೆಯಲ್ಲಿ ಲಿಂಗಜಂಗಮವ ನರಿದು ವಿಶ್ವಾಸವಂ ಮಾಡಿ, ಕೇವಲ ಸದ್ಭಕ್ತಿಕ್ರಿಯೆಯನರಿದು, ಮರ್ಮವನರಿದು ಸದ್ಭಾವದಿಂ ಲಿಂಗಾರ್ಚನೆಯಂ ಮಾಡುವುದಯ್ಯ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ.

ವಟಬೀಜ ವಟವೃಕ್ಷ ಕೋಟಿಯ ನುಂಗಿಪ್ಪಂತೆ ಸಟೆಯಿಂದಾದ ಅಜಾಂಡ ಬ್ರಹ್ಮಾಂಡಕೋಟಿಯನೊಳಕೊಂಡಿಪ್ಪ ಲಿಂಗವೇ ದಿಟಪುಟವಾಗಿ ಎನ್ನ ಇಗ್ಗೆ ಮನಕರಸ್ಥಲಕ್ಕೆ ಬಂದು ಪ್ರಕಟವಾದೆ. ಮರ್ಘುಬಾಸು ಲಿಂಗವೇ

ನಚರೇಣು ನಚಕ್ಷುವೆಂದೆನಿಸುವೆ ಲಿಂಗವೇ ನಿನ್ನುವ ಹುಟ್ಟು ಉತ್ಪತ್ತಿ ಸ್ಥಿತಿಲಯಕ್ಕೆ ಹೊರಗಾದೆನು. ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ.

"ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ।" ಎಂದೆನಿಸುವ ಲಿಂಗವು; "ಅತ್ಯತಿಷ್ಠದ್ದಶಾಂಗುಲಂ" ಎಂದೆನಿಸುವ ಲಿಂಗವು; "ಅಣೋರಣೀಯಾನ್ ಮಹತೋ ಮಹೀಯಾನ್" ಎಂದೆನಿಸುವ ಲಿಂಗವು. "ಅಯಂ ಮೇಹಸ್ತಂ ಭಗವಾನ್। ಅಯಂ ಮೇ ಭಗವತ್ತರಂ" ಎಂದೆನಿಸುವ ಲಿಂಗವು. "ಏಕ ಮೂರ್ತಿ ಸ್ತ್ರಿಧಾ ಭೇದಂ" ಎಂದೆನಿಸುವ ಲಿಂಗವು. ಶ್ರೀ ಗುರು ಲಿಂಗ ಜಂಗನು ರೂಪಾಗಿ "ಇಷ್ಟ ಪ್ರಾಣ ಸ್ತಥಾ ಭಾವಂ ತ್ರಿಧಾ ಮೇಕಂ ವರಾನನೆ" ಎಂದುದಾಗಿ, ತ್ರಿವಿಧವು ಏಕೀಭವಿಸಿ, ಲಿಂಗರೂಪಾಗಿ, ಎನ್ನ ಕರಸ್ಥಲಕ್ಕೆ ಬಂದು ಕರತಳಾಮಳಕವಾಗಿ ತೋರುತ್ತೈದಾನೆ. ಅಹಾ ಎನ್ನ ಪುಣ್ಯವೇ! ಅಹಾ ಎನ್ನ ಭಾಗ್ಯವೇ! ಅಹಾ ಎನ್ನ ಸತ್ಯವೇ! ಅಹಾ ಎನ್ನ ನಿತ್ಯವೇ! ಶವಶಿವಾ ಮಹಾದೇವ, ಮಹಾದೇವ, ನೀನೇ ಬಲ್ಲೆ ಉರಿಲಿಂಗ ಪೆದ್ದಿ ಪ್ರಿಯ ವಿಶ್ವೇಶ್ವರಾ ।೬॥

ಅಂಗಯ್ಯ ಲಿಂಗವ ಕಂಗಳಿಂ ನೋಡಿ ಮನ ಹಾರೈಸಿದಲ್ಲಿ ಅಂಗೇಂದ್ರಿಯಂಗಳೆಲ್ಲವು ಲಿಂಗೇಂದ್ರಿಯಂಗಳಾದವು. ಇನ್ನು ನೀನಂಜದಿರು ಮನವೇ ಲಿಂಗವು ನಿನಗೆ ದೂರವೆಂದು. ಮನೋಮಧ್ಯದೊಳಿಪ್ಪನು. ಅಂಗದ ಕಂಗಳಲ್ಲಿಪ್ಪನು. ಪ್ರಾಣದ ಭಾವದಲ್ಲಿಪ್ಪನು. ಅಂಗ ಪ್ರಾಣ ಭಾವ ಸರ್ವಾಂಗ ಲಿಂಗವಾದ ಬಳಿಕ ಲಿಂಗಮಧ್ಯೇ ಪ್ರಾಣವಾಯಿತ್ತು. ಎಲೆ ಮನವೇ ಇನ್ನು ಉತ್ಪತ್ತ ಸ್ಥಿತಿ ಇಲ್ಲವಾಗಿ, ಲಿಂಗದಿಂ ಜನಿಸಿ ಲಿಂಗೇಂದ್ರಿಯ ಲಿಂಗ ಜ್ಞಾನದಲ್ಲಿ ಜನಿಸಿ, ದ್ವೈತಾದ್ವೈತವಿಲ್ಲಾಗಿ ಬಂದುದೇ ಲಿಂಗದ ಲೀಲೆ ಇದ್ದುದೇ ಲಿಂಗದಾನಂದ, ಮನೋಲಯವೇ ಲಿಂಗದ ನಿರವಯವು. ಇದು ಸತ್ಯ ಶಿವ ಬಲ್ಲ ಶಿವನಾಣೆ ಉರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರಾ. ॥ ೭ ॥

ಪಂಚಭೂತವಂಗವಾಗಿಪ್ಪಾತ್ಮಂಗೆ ಪಂಚೇಂದ್ರಿಯಂಗಳೇ ಮುಖಗಳು. ಕರಣಂಗಳೇ ಕೈಗಳು. ಪಂಚವಿಷಯವು ಪೂಜೆ. ಪಂಚಪದಾರ್ಥವೇ ಭೋಗ. ಇವನ್ನೆಲ್ಲವ ತನ್ನ ನಿಜಮೂರ್ತಿಯಪ್ಪ ಘನಕ್ಕೆಯ್ದಿಸಬಲ್ಲಡೆ, ಆತ ಸರ್ವ ನಿರ್ವಾಣಿ. ಸಕಲ ನಿಃಕನಾತ್ಮಕನು ಉರಲಿಂಗ ಪೆದ್ದಿಪ್ರಿಯ ವಿಶ್ವೇಶ್ವರಾ ।೮॥

ಪ್ರಾಣಲಿಂಗ, ಲಿಂಗಪ್ರಾಣವೆಂಬ ಧ್ಯಾನಾಮೃತದಿಂದ ಪಂಚಾಕ್ಷರಿಯೆಂಬ ಪಂಚಾಮೃತದಿಂದ ಲಿಂಗಮಜ್ಜನವೆರೆದು, ಮನವೇ ಪುಷ್ಪ, ಬುದ್ಧಿಯೇ

ಗಂಧ, ಚಿತ್ತವೇ ನೈವೇದ್ಯ, ಅಹಂಕಾರದಿಂದ ಆರೋಗಣೆಯ ಮಾಡಿಸಿ, ಪರಿಣಾಮದ ವೀಳೆಯವನಿತ್ತು, ಸ್ನೇಹದಿಂದ ವಂದನೆಯ ಮಾಡಿ, ಪ್ರಾಣ ಲಿಂಗಕ್ಕೆ ಅಂತರಂಗದ ಪೂಜೆಯ ಪರಿಯಲಿ ಬಹಿರಂಗದ ಪೂಜೆಯ ಮಾಡುವದು. ಅಂತರಂಗದ ವಸ್ತುಗಳೆಲ್ಲವನು ಬಹಿರಂಗದ ವಸ್ತುವಿನಲ್ಲಿ ಕೂಡಿ ಅಂಗಾರ್ಚನೆಯ ಮಾಡಲು, ಅಂತರಂಗ ಬಹಿರಂಗದಲ್ಲಿ ಭರಿತನಾಗಿಹನು ಶಿವನು ಉರಲಿಂಗ ಪೆದ್ದಿಪ್ರಿಯ ವಿಶ್ವೇಶ್ವರಾ ॥೯॥

ಬೆಡಗಿನಲ್ಲಿ ಅಗ್ನಿ ವೈದೋರದಿದ್ದಲ್ಲಿ, ಆಕಾರ ನಾಸ್ತಿಯಾಗದು. ಇಷ್ಟಲಿಂಗಕ್ಕೆ ಕಾಯದ ಕೈಮುಟ್ಟಿ ಮಾಡುವ ಅಷ್ಟವಿಧಾರ್ಚನೆ ಷೋಡಶೋಪಚಾರದಿಂದ ಬೆಡಗಿನಲ್ಲಿಪ್ಪ ಜ್ಞಾನಾಗ್ನಿ ವೈದೋರದಡೆ ಆಕಾರ ನಾಸ್ತಿಯಾಯಿತ್ತು. ಅಂಗದ ಮೇಲಣ ಲಿಂಗದ ಜವನಿಕೆ ಬಗೆದೆಗೆದಡೆ ಕಾಯದ ಪರಿ ನಷ್ಟವಾಗಿ ಜ್ಞಾನಾಗ್ನಿಯಿಂದ ಪ್ರಾಣನ ಭೋಗ ನಷ್ಟ. ಉರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರಾ ನಿಮ್ಮ ಪೂಜಿಸುವ ಶರಣನ ಮರ್ತ್ಯನೆಂದಡೆ ನಾಯಕ ನರಕ ತಪ್ಪದು ॥ ೧೦ ॥

ದೇವಾ ಮಂಗಳ ಮಜ್ಜನಮಂ ಮಾಡಲು ಶಿವಗಂಧೋದಕದಿಂದ ಪಾದಾರ್ಚನೆಯಂಮಾಡಿ ಹೊಂಗಳಸದೊಳಗರ್ಘ್ಯಂಗಳಂ ತುಂಬಿ ಮಧುಕರ್ಕಮಂಮಾಡಿ ದೇವಾಂಗ ವಸ್ತ್ರಂಗಳನುಡಿಸಿ ಷೋಡಶಾಭರಣಂಗಳಂ ತೊಡಿಸಿ ದೇವಗಂಗೆ ಗಂಧಾಕ್ಷತೆ ಪುಷ್ಪಗಳಿಂ ಪೂಜೆಯಮಾಡಿ ಅಗರು ಧೂಪಂಗಳಿಂ ಧೂಪಿಸಿ, ಮಂಗಳಾಚರಣೆಯಾರೋಗಣೆ ವೀಳೆಯವನಳವಡಿಸಿ ಉರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರಂಗೆ ಗೀತವಾದ್ಯ ನೃತ್ಯವನಾಡಿ ಮೆಚ್ಚಿಸುವ ಗಣಂಗಳಿಗೆ ನಮೋ ನಮೋ ಎಂಬೆನು. ॥ ೧೧ ॥

ಇನ್ನು ಬೇರೆ ಬೇರೆ ಶಿವಶರಣರ ಲಿಂಗಾನುಭವಗಳುः— ಅಂಗದ ಬೊಕ್ಕಸದ ಮಂದಿರಕ್ಕೆ ಚಿದ್ಘನ ಲಿಂಗವೆಂಬುದೊಂದು ಬೀಗ. ತ್ರಿಗುಣವೆಂಬ ಮೂರೆಸಳಿನ ಸಿಕ್ಕು ಒಂದು, ಪೂರ್ವಗತಿ ಒಂದು, ಮಧ್ಯಗತಿ ಒಂದು, ಉತ್ತರಗತಿಯಾಗಿ ಒಂದು ಸಿಕ್ಕಿದವು. ಮೂರೆಸಳ ಆ ಎಸಳಿಗೆ ಘಟ ಒಂದೇ ಒಡಲು, ಎಸಳು ತೆಗೆಯುವದಕ್ಕೆ ಕಯ್ಯಕಾಣೆ. ಪ್ರೀತಿಗೈಗೆ ಎಸಳು ಅಸಾಧ್ಯ ನೋಡಾ. ಇಂತೀ ಬೀಗದ ಗುಣವ ಬಸವಣ್ಣಪ್ರಿಯ ನಾಗರೇಶ್ವರ ಲಿಂಗವೇ ನೀವೇ ಬಲ್ಲಿರಿ.

ಅರ್ಥः— ಜ್ಞಾನಕಾಯವನೊಳಕೊಂಡು ತೋರುವ ಸದಾಚಾರ ಸಂಪತ್ತಿನ ಆಚರಣೆಯನುಳ್ಳ ಆಚಾರಾಂಗವೆಂಬ ಮಂದಿರಕ್ಕೆ ಸತ್ತ್ವಿನ

ಗಟ್ಟಿಯಪ್ಪ ಮಹಾಲಿಂಗವೆಂಬುವದೊಂದು ಬೀಗವಾಗಿಪ್ಪದು. ತ್ರಿಗುಣ ವೆನಿಸಿಕೊಂಬ ಕ್ರಿ. ಜ್ಞಾನ ಭಾವಂಗಳೇ ಸಿಕ್ಕುಗಳಾಗಿ ಬಂಧಿಸಿಕೊಂಡಿರುವವು. ಸ್ಥೂಲ ತನುವಿನಲ್ಲಿ ಸತ್ಕ್ರಿಯಾಚಾರ ಸಂಬಂಧವಾಗಲಲ್ಲಿ ಇಷ್ಟ ಲಿಂಗ ಸಂಬಂಧವಾಗಿಪ್ಪದು. ಸೂಕ್ಷ್ಮತನುವಿನಲ್ಲಿ ಸುಜ್ಞಾನ ಸಂಬಂಧವಾಗ ಲಲ್ಲಿ ಪ್ರಾಣಲಿಂಗ ಸಂಬಂಧವಾಗಿಪ್ಪದು. ಕಾರಣ ತನುವಿನಲ್ಲಿ ಸದ್ಭಾವ ಸಂಬಂಧವಾಗಲಲ್ಲಿ ಭಾವಲಿಂಗ ಸಂಬಂಧವಾಗಿಪ್ಪದು. ತನುತ್ರಯಂಗಳಲ್ಲಿ ಸಂಬಂಧವಾಗಿಪ್ಪದು ಕ್ರಿ-ಜ್ಞಾನಭಾವಂಗಳು. ಆ ಕ್ರಿ-ಜ್ಞಾನಭಾವಂಗಳ ನೊಳಕೊಂಬುದಕ್ಕೆ ತನುತ್ರಯಂಗಳೇ ಆಶ್ರಯವಾಗಿಪ್ಪವು. ಆ ತನುತ್ರ ಯಂಗಳನೇ ಒಳಕೊಂಬುವದಕ್ಕೆ ಮಹಾಲಿಂಗವೊಂದೇ ಆಶ್ರಯವಾಗಿಪ್ಪದು. ಕ್ರಿ. ಜ್ಞಾನ ಭಾವವಿಡಿದು ಆಚರಿಸಿ ಲಿಂಗದಲ್ಲಿ ಕೂಡಿದ ಬಳಿಕ ಕ್ರಿ. ಜ್ಞಾನ ಭಾವವಿಡಿದು ಆಚರಿಸುವದಕ್ಕೆ ಸದ್ಭಾವ ಹಸ್ತವು. ಭಿನ್ನವಿಟ್ಟಲ್ಲಿ ಶೃತ ಜ್ಞಾನದಿಂದ ಅಹಂಬ್ರಹ್ಮವೆಂಬ ಭಿನ್ನಭಾವದ ಹಸ್ತಕ್ಕೆ ಕ್ರಿ. ಜ್ಞಾನ ಭಾವಂಗಳು ಸಾಧ್ಯವಿಲ್ಲ ಕಂಡ್ಯಾ. ಇಂತೀ ಮಹಾಲಿಂಗದ ಆಚರಣೆಯನು ಬಸವೇಶ್ವರನೊಳು ಪ್ರೀತಿಯನುಳ್ಳ ಆತ್ಮಕರ್ತೃವಾದ ಪರಶಿವ ಲಿಂಗವೇ, ನಮಗೆ ತಿಳಿಯಬರುವದೆಂದರ್ಥ.

ಮಹಾ ನಾದಕಳೆಯೇ ಲಿಂಗಕ್ಕಾಶ್ರಯವಾಗಿ, ಲಿಂಗದ ಕಳೆಯ ಹೃದಯಕ್ಕಾಶ್ರಯವಾಗಿ, ಹೃದಯದ ಕಳೆಯೇ ಜ್ಞಾನಕ್ಕಾಶ್ರಯವಾಗಿ, ಜ್ಞಾನದ ಕಳೆಯೇ ನಿತ್ಯಕ್ಕಾಶ್ರಯವಾಗಿ, ನಿತ್ಯನಿರವಯ ಚಿಕ್ಕಯ್ಯಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲ.

ಅರ್ಥ:— ಮಹಾನಾದವುಳ್ಳ ಪರಬ್ರಹ್ಮದ ಚಿತ್ಕಳೆಯೇ ಇಷ್ಟಲಿಂಗಕ್ಕೆ ಚೈತನ್ಯವಾಗಿ, ಇಷ್ಟಲಿಂಗದ ಚೈತನ್ಯ ಕಳೆಯೇ ಮನದಲ್ಲಿ ಪ್ರಾಣಲಿಂಗ ವಾಗುವದಕ್ಕೆ ಆಸ್ಪದವಾಗಿ, ಮನದಲ್ಲಿ ಬೆಳಗಲ್ಪಟ್ಟ ಪ್ರಾಣಲಿಂಗವೇ ಚಿತ್ಪ್ರಾಣ ವನು ಒಳಕೊಂಬುವದಕ್ಕೆ ಆಶ್ರಯವಾದ ಭಾವಲಿಂಗವಾಗಿ, ಆ ಪ್ರಾಣವ ನೊಳಕೊಂಡಿಪ್ಪ ಭಾವಲಿಂಗವೇ ಆತ್ಮನೊಳಕೊಂಬುವದಕ್ಕೆ ಆಶ್ರಯವಾದ ಮಹಾಲಿಂಗವಾಗಿ ಶಾಶ್ವತವಾದ ನಿರಾಕಾರವಾದ ಪರಶಿವಲಿಂಗವು ಅಂತರಂಗ ಬಹಿರಂಗದಲ್ಲಿ ಭಿನ್ನವಿಲ್ಲೆಂಬರ್ಥ.

ಮನಕ್ಕೆ ತೋರದು ನೆನೆವಡೆ ಅನುವಲ್ಲ. ಘನಕ್ಕೆ ಘನವು, ಆದ ನೇನೆಂದು ಹೇಳುವೆನಯ್ಯ? ಆರರಿಂದ ಮೀರಿದುದ, ಬೇರೆ ತೋರಲಿಲ್ಲ ದುದ, ದೇವದಾನವ ಮಾನವರ ಬಲ್ಲತನದ ಬಗೆಯ ಮೀರಿಮುದನೇನ ಹೇಳುವೆ

ನಯ್ಯ ? ಸಾಕ್ಷಿ ಆದಿಮಧ್ಯಾಂತ ಶೂನ್ಯ ಚ ವ್ಯೋಮಾತೀತ ನಿರಂಜನ ಧ್ಯಾನ ಜ್ಞಾನ ಮನೋಹೀನಂ ಶೂನ್ಯಲಿಂಗ ಮನಾಶ್ರಯಂ ಎಂಬುದಾಗಿ ಅರಿಯಬಾರದು. ಕುರುಹುದೋರದು ತೆರಹಿಲ್ಲದಿಪ್ಪುದು, ಮಹಾಲಿಂಗ ಕಲ್ಲೇಶ್ವರಾ ॥

ಎನ್ನ ತನುವಿನ ಮರೆಯಲ್ಲಿರ್ದ ಚಿನ್ಮಯನ ಅರಸುವ ಬನ್ನಿರೆ, ಎನ್ನ ಮನದ ಮರೆಯಲ್ಲಿರ್ದ ಮಹಾಘನವಸ್ತುವನು ಹುಡುಕುವ ಬನ್ನಿರೆ, ಎನ್ನ ಪ್ರಾಣದ ಮರೆಯಲ್ಲಿರ್ದ ಪರಬ್ರಹ್ಮವೆಂಬ ಅಖಂಡೇಶ್ವರನ ನೋಡುವ ಬನ್ನಿರೆ ॥

ಬೀಜದ ಮರೆಯಲ್ಲಿ ಅಡಗಿರ್ದ ಅಂಕುರವು ಬಹಿರ್ಗತವಾದಂತೆ, ಮುಗಿಲ ಮರೆಯಲ್ಲಿರ್ದ ಕ್ಷಣಿಕವು ಸ್ಫುರಿಸಿದಂತೆ, ಎನ್ನುವ ಮನದ ಮಧ್ಯದಲ್ಲಿ ಅಡಗಿರ್ದ ಮಹಾಘನವು ತನ್ನ ಲೀಲೆಯಿಂದ ತಾನೇ ಉದಯವಾಗಲು, ನಿಮ್ಮ ಆದಿ ಅನಾದಿಯ ನಿಲವ ಕಂಡೆನಯ್ಯ ಅಖಂಡೇಶ್ವರಾ ॥

ಭವಕ್ಕೆಬಾರದ ವಸ್ತುವ ಭಾವಿಸುವ ಪರಿಯೆಂತೋ ? ನೆನಹಿಗೆ ಬಾರದ ವಸ್ತುವ ನೆನೆವ ಪರಿಯಿನ್ನೆಂತೋ ? ನೆನೆಯದೆ ಭಾವಿಸದೆ ಎನ್ನೊಳಗೆ ಬಯಲರೂಪಾಗಿ ತೋರಿದೆನು ನೋಡಾ ಅಖಂಡೇಶ್ವರಾ ॥

ಅನಂತಕಾಲ ಎನ್ನ ಒಡಲ ಮರೆಯೊಳಡಗಿರ್ದ ಎನಗೆ ಕಾಣಿಸದೆ ಇರ್ದಂದು, ಇದೇನು ನಿಮ್ಮ ಗಾರುಡವಯ್ಯ. ನೀವು ನಿಮ್ಮ ಕರುಣದಿಂದ ಎನ್ನ ಒಡಲ ಮರವೆಯ ಒಡೆದು ಎನ್ನ ಕಣ್ಣಮುಂದಣ ಸತ್ವ ರಜ ತಮದ ಪರದೆಯ ಹರಿಯಲೊಡನೆ ನಿಮ್ಮ ನಿತ್ಯದ ನಿಲವ ಕಂಡೆನಯ್ಯ ಅಖಂಡೇಶ್ವರಾ ॥

ಎನ್ನ ಅಂಗದ ಮಧ್ಯದೊಳಗೆ ಮಂಗಳಾಂಗನ ಬೆಳಗು ಥಳಥಳನೆ ಹೊಳವು ತಿರ್ಪುದಾಗಿ, ಎನ್ನ ಕಂಗಳ ಕಾಳಿಕೆಯು ಕಡೆಗಾಯ್ತು. ಎನ್ನ ಮನದ ಮುಂದಿನ ಮರವು ಹಾರಿಹೋಯಿತು, ಅಖಂಡೇಶ್ವರನ ನಿಲವಾಗಿ ಕಾಣಬಂದಿತು ||

ಅಂಜನದ ಬಲದಿಂದ ನೆಲದ ಮರೆಯ ದ್ರವ್ಯ ಕಾಣಬಂದಿತು, ಎನ್ನ ಚಿತ್ತಿನ ಮಧ್ಯದಲ್ಲಿ ನಿತ್ಯ ಶಿವಜ್ಞಾನಾಂಜನವು ಪ್ರಜ್ವಲಿಸಲಾಗಿ, ತತ್ವಾತತ್ವಗಳು ಏಕೀಕರವಾದವು. ಅಖಂಡೇಶ್ವರನೆಂಬ ಪರವಸ್ತು ಹೊಳಿರ್ದಗೊತ್ತು ಕಾಣಬಂದಿತು.

ಅರು ಸಾಧಿಸಬಾರದಂಥ ವಸ್ತುವ ಸಾಧಿಸಿ ತಂದುಕೊಟ್ಟನಯ್ಯ ಶ್ರೀ ಗುರು, ಎನ್ನ ಕರಸ್ಥಲಕ್ಕೆ, ಆರು ಭೇಧಿಸಬಾರದ ವಸ್ತುವ ತಂದು

ಕೊಟ್ಟನಯ್ಯಾ ಶ್ರೀ ಗುರು ಎನ್ನ ಕರಸ್ಥಲಕ್ಕೆ ಶ್ರೀ ಗುರು ಕರಸ್ಥಲಕ್ಕೆ ಅರು ನೋಡಬಾರದ್ದನ್ನು ನೋಡೆಂದು ಕೊಟ್ಟನಯ್ಯಾ, ಶ್ರೀ ಗುರು ಎನ್ನ ಕರ ಸ್ಥಳಕ್ಕೆ ಅರು ಕೊಡಬಾರ ವಸ್ತುವ ಕೊಡುವನೆಂದು ತಂದು ಕೊಟ್ಟನಯ್ಯಾ ಶ್ರೀ ಗುರು ಎನ್ನ ಕರಸ್ಥಲದಲ್ಲಿ ಮೂರ್ತುಗೊಂಡು ಬೆಳಗುವ ಎನ್ನ ಪರ ಬ್ರಹ್ಮವ ಎನ್ನ ಕಂಗಳ ತುಂಬಾ ನೋಡಿ ಕೈಮುಟ್ಟಿ ಪೂಜಿಸಿ, ಎನ್ನ ಜಿಹ್ವೆತುಂಬಾ ಕೊಂಡಾಡಿ, ಎನ್ನ ಮನತುಂಬಾ ಅಪ್ಪಿ ಅಗಲದಿದ್ದೆನಯ್ಯಾ ನಿಮ್ಮನು ಅಖಂಡೇಶ್ವರಾ ॥

ಅಂಧಕನಿಗೆ ಕಂಗಳು ಬಂದಂತೆ, ಹೆಳವನಿಗೆ ಕಾಲುಗಳು ಬಂದಂತೆ, ಬಂಜೆಗೆ ಮಗನಾದಂತೆ, ನಿರ್ಧನಿಗೆ ಧನವು ಸೇರಿದಂತೆ, ಮರಣವುಳ್ಳವನಿಗೆ ಮರುಜಮಣಿ ದೊರಕಿದಂತೆ, ಅಖಂಡೇಶ್ವರಾ ನೀವೆನ್ನ ಕರಸ್ಥಲಕ್ಕೆ ಬಂದ ಫಲವು ಇಂತಾಯಿತಯ್ಯಾ ॥

ಜಗವನೊಳಕೊಂಡ ಲಿಂಗವು ಸೊಗಸಿದ್ದೆನ್ನ ಕರಸ್ಥಲಕ್ಕೆ ಬಂದಿರಲು, ಕಂಡು ಹಗರಣವಾಯಿತೆನಗೆ, ಅಹಾ ಎನ್ನ ಭಾಗ್ಯವೆ ಅಹಾ ಅಖಂಡೇಶ್ವರಾ ನಿಮ್ಮ ಘನವ ಕಂಡು ಮನಕ್ಕೆ ಮಂಗಳವಾಯಿತ್ತು ನೋಡಾ ॥

ಅಣುವಿಗೆ ಅಣುವು ಮಹತ್ತಿಗೆ ಮಹತ್ತು ಎನಿಸುವ ಲಿಂಗದೇವನ ಕಂಡೆನಯ್ಯಾ ಎನ್ನ ಕರಸ್ಥಲದಲ್ಲಿ ಉಪಮಾತೀತ ವಾಙ್ಮನಕ್ಕಗೋಚರನೆನ್ನುವ ದೇವನ ಕಂಡೆನಯ್ಯಾ ಎನ್ನ ಕರಸ್ಥಲದಲ್ಲಿ, ಶ್ರುತಿತತಿಯ ಸಿರದ ಮೇಲೆ ಅತ್ಯತಿಷ್ಠದ್ದ ಶಾಂಗುಲನೆಂದೆನಿಸುವ ದೇವನ ಕಂಡೆನಯ್ಯಾ ಎನ್ನ ಕರಸ್ಥಲ ದಲ್ಲಿ ಭಾವ ಭರಿತ ಜ್ಞಾನಗಮ್ಯನೆನಿಸುವ ದೇವನ ಕಂಡೆನಯ್ಯಾ ಎನ್ನ ಕರ ಸ್ಥಲದಲ್ಲಿ ಅಖಂಡೇಶ್ವರನೆಂಬ ಅನಾದಿಯು ಪರಶಿವನ ಕಂಡೆನಯ್ಯಾ ಎನ್ನ ಕರಸ್ಥಲದಲ್ಲಿ ॥

ಮನಕ್ಕೆ ಮನೋಹರವಾದ ದೇವನ ಕಂಡೆನಯ್ಯಾ, ಎನ್ನ ಕರಸ್ಥಲ ದಲ್ಲಿ; ಕಂಗಳಿಗೆ ಮಂಗಳವಾದ ದೇವನ ಕಂಡೆನಯ್ಯಾ ಎನ್ನ ಕರಸ್ಥಲದಲ್ಲಿ ಪ್ರಾಣಕ್ಕೆ ಪರಿಣಾಮವಾದ ದೇವನ ಕಂಡೆನಯ್ಯಾ ಎನ್ನ ಕರಸ್ಥಲದಲ್ಲಿ; ಅಖಂಡೇಶ್ವರನೆಂಬ ಲಿಂಗವ ಕಂಡೆನಯ್ಯಾ ಎನ್ನ ಕರಸ್ಥಲದಲ್ಲಿ ॥

ಸತ್ತು ಚಿತ್ತಾನಂದ ನಿತ್ಯ ಪರಿಪೂರ್ಣವಾದ ವಸ್ತುವು ಪ್ರತ್ಯಕ್ಷವಾಗಿ ಎನ್ನ ಕರಸ್ಥಲದಲ್ಲಿ ಬಂದ ಬಳಿಕ ಇನ್ನೆಲ್ಲಿಯು ಜಪತಪದ ಚಿಂತೆ? ಇನ್ನೆ

ಲ್ಲಿಯದಯ್ಯಾ ಎನಗೆ ನಿತ್ಯನೇಮದ ಚಿಂತೆ? ಇನ್ನೆಲ್ಲಿದಯ್ಯಾ ಎನ್ನ ಮರಗುವ ಚಿಂತೆ? ಅಖಂಡೇಶ್ವರ ಲಿಂಗವು ಎನ್ನ ಒಳಹೊರಗೆ ತಾನಾದ ಬಳಿಕ, ಇನ್ನೆಲ್ಲಿಯದಯ್ಯಾ ಬೇರೆ ತತ್ತ್ವವು ತಿಳಿಯಬೇಕೆಂಬ ಚಿಂತೆ?

ಶಿವಶಿವ! ಮಹಾಪ್ರಸಾದ; ಎನ್ನ ಮನವು ನಿಮ್ಮಲ್ಲಿಯೊಂದು ಬಯಸಿ ಬಡವಾಗುತಿರ್ಪುದು ಅವಧರಿಸಯ್ಯಾ ಸ್ವಾಮಿ! ಶಿವನಡೆ, ಶಿವನುಡಿ, ಶಿವಭಾವ, ಶಿವಾಚಾರ, ಶಿವಭಕ್ತಿ, ಶಿವಜ್ಞಾನ, ಶಿವಾನುಭವ, ಶಿವಶರಣರ ಸಂಗ. ಇವನ್ನೇ ಕರುಣಿಸಿ ಬದುಕಿಸಯ್ಯಾ ಎನ್ನ ಅಖಂಡೇಶ್ವರಾ ॥

ಅಂತರಂಗದಲ್ಲಿಯು ಅಖಂಡ ಪರಿಪೂರ್ಣದ ಜ್ಞಾನದ ಸಿಲವನರಿದು, ಬಹಿರಂಗದಲ್ಲಿ ಸತ್ಯಸದಾಚಾರವನಳವಡಿಸಿಕೊಂಡು, ಹಿಂದು ಮುಂದಣ ಭಯವ ಹೇದು ಆನಂದವೇ ಪರವಾಗಿ ಅಭೇದ್ಯಲಿಂಗವಾಗಿ ಬೆಳಕಿನಲಿ ಸುಳಿದು, ಅಷ್ಟಾವರಣಾಭರಣವತ್ತೋರಿಸಿ ಬದುಕಿಸಯ್ಯಾ ಎನ್ನ ಅಖಂಡೇಶ್ವರಾ ॥

ಸೃಷ್ಟಿ ಸ್ಥಿತಿ ಪ್ರಳಯಂಗಳನೇ ಮೀರಿ, ಕಾಯ ಜೀವದ ಕಷ್ಟ ಗುಣಂಗಳನ್ನು ನಷ್ಟವಮಾಡಿ, ಇಷ್ಟಲಿಂಗದಲ್ಲಿ ನೆಟ್ಟನೆ ಮನವಡಗಿ ತೊಟ್ಟುಬಿಟ್ಟ ಹಣ್ಣಿನಂತೆ ಸುಳಿವ ಶ್ರೇಷ್ಠ ಶರಣನ ಪಾದಕ್ಕೆ ನಮೋ ನಮೋ ಎಂಬೆನಯ್ಯಾ ಅಖಂಡೇಶ್ವರಾ ॥

ಎಲೆ ಶಿವನೆ ಭಕ್ತ ದೇಹಿಕ ದೇವನೆಂಬುದೇ ಎನಗೆ ನಿಶ್ಚಯವಾಗಿ ಕಾಣಬಂದಿತು. ಅದೇನು ಕಾರಣವೆಂದಡೆ— ಎನ್ನ ತನುವೇ ನಿಮ್ಮ ತನುವಾಯಿತ್ತಾಗಿ, ಈ ತನುವಿಡಿದು ಗುರುವಿನ ಕಂಡೆ. ಈ ತನುವಿಡಿದು ಲಿಂಗವ ಕಂಡೆ. ಈ ತನುವಿಡಿದು ಜಂಗಮವ ಕಂಡೆ. ಈ ತನುವಿಡಿದು ಪಾದತೀರ್ಥ ಪ್ರಸಾದವ ಕಂಡೆ. ಈ ತನುವಿಡಿದು ನೀನೇ ನಾನಾದ ಪರಿಯಂ ಕಂಡು ಬೆರಗಾದೆನಯ್ಯಾ ಅಖಂಡೇಶ್ವರಾ ॥

ಹತ್ತು ದಿಕ್ಕಿನ ಒಳಹೊರಗೆ ಸುತ್ತಿ ಸುತ್ತಿ ಸುಳಿದಾಡುವ ಎನ್ನ ಮನವು ನಿಲುವುದಕ್ಕೆ ನೀವೇ ಗೊತ್ತಲ್ಲದೆ ಬೇರೆ ಮತ್ತಾವ ಸ್ಥಾನವುಂಟೇನಯ್ಯಾ? ಗಾಳಿ ಗಂಧವನಪ್ಪಿದಂತೆ ನಿಮ್ಮ ಮುಟ್ಟಿದ ಚಿತ್ತು ಎತ್ತೆತ್ತ ಹರಿದಾಡಲೇನು ಭಯವಿಲ್ಲ. ಅತ್ತತ್ತ ನೀವೇಯಲ್ಲದೆ ಬೇರೆ ಮತ್ತೇನು ಇಲ್ಲವಯ್ಯಾ ಅಖಂಡೇಶ್ವರಾ ॥

ಮಾಡಿದ ಮಾಟವ ಮರೆದೆನಯ್ಯಾ, ನಿಮ್ಮೊಳಗೆ ನೋಡಿದ ನೋಟವ ಮರೆದೆನಯ್ಯಾ, ಕೂಡಿದ ಕೂಟವ ಮರೆದೆನಯ್ಯಾ, ನಿಮ್ಮೊಳಗೆ ಕರ್ಪುರದ ಗಿರಿಯುರಿದಂತಾದೆನಯ್ಯಾ ನಿಮ್ಮೊಳಗೆ ಅಖಂಡೇಶ್ವರಾ ॥

ಶಿವಶರಣನ ನಿಸ್ಸಂಗತ್ವದಿಂದ ನಿಷ್ಪತ್ತಿಸ್ಥಲವು ನಿಗೂಢವಾಗಿ ನಿಂತಾಗ ಸರ್ವಶೂನ್ಯ ನಿರಾಲಂಬಿಯಾಗಿಯೂ, ಒಮ್ಮೆ ನಿರಂಜನನಾಗಿಯೂ, ಒಮ್ಮೆ ನಿಶ್ಶೂನ್ಯ ಸ್ಥಿತಿಯುಳ್ಳವನಾಗಿಯೂ, ಒಮ್ಮೆ ನಿಃಕಲಸ್ವರೂಪನಾಗಿಯೂ ತನ್ನ ಜ್ಞಾನ ಸುಜ್ಞಾನ ಮಹಾಜ್ಞಾನಗಳನ್ನು ದಾಟಿ ಜ್ಞಾನಶೂನ್ಯ ಸ್ಥಿತಿಯಲ್ಲಿದ್ದಾಗಿನ ತನ್ನ ಅನುಭವ ಪರಿಪೂರ್ಣತ್ವದ ಪರಿಣಾಮವನ್ನು ನಿರ್ದೇಶಿಸಿದ್ದಾಗಿವೆ. ಇದರಂತೆ ಜೀವನು ಹೃದಯ ಸ್ಥಾನದಲ್ಲಿ ಸಕಲನಾಗಿಯೂ, ಭ್ರೂಮಧ್ಯಸ್ಥಾನದಲ್ಲಿ ಸಕಲನಿಃಕಲನಾಗಿಯೂ, ಬ್ರಹ್ಮಸ್ಥಾನದಲ್ಲಿ ಕೇವಲ ನಿಃಕಲನಾಗಿ ನಿಲ್ಲುವನು. ಸಕಲನಾಗಿದ್ದಾಗ್ಗೆ ಸತ್ಕ್ರಿಯೆಯನ್ನಾಚರಿಸುತ್ತ ಬಹಿರಂಗದ ಇಷ್ಟಲಿಂಗದ ಪೂಜಾಸಂಭ್ರಮವನ್ನು ಏಕಚಿತ್ತದಿಂದಲೂ ಶ್ರದ್ಧಾನಿಷ್ಠಾ ಭಕ್ತಿಯಿಂದಲೂ ಮಾಡುತ್ತ ಹೋದಂತೆ. ಅಂತರಂಗದ ಜ್ಞಾನೋದಯವಾಗುತ್ತ ಪ್ರಾಣಲಿಂಗದ ಪ್ರತಿಷ್ಠೆಯಾಗಿ, ಪ್ರಾಣಲಿಂಗದ ಯೋಗವು ಸಮನಿಸುತ್ತ, ಜ್ಞಾನವು ಪೂರ್ಣಸ್ಥಿತಿಗೆ ಬಂದಂತೆ ಆ ಜ್ಞಾನದ ಬೆಳಗು ಭಾವದಲ್ಲಿ ಬಿಂಬಿಸಿ ಸುಜ್ಞಾನವು ಸುಶೋಭಿತವಾಗಿ, ಭಾವಲಿಂಗಾನುಭಾವವು ಬೆಳೆಯುತ್ತ ಮಹಾಜ್ಞಾನದ ಮಟ್ಟಕ್ಕೆ ಮುಟ್ಟಲು, ಅಂಗಭಾವವು ಅಡಗುತ್ತ ಲಿಂಗಭಾವವು ನಿಲ್ಲುತ್ತ ಪೂರ್ಣವಾಗಿ ತನುಮನಭಾವಂಗಳು ಲಿಂಗಮಯವೇ ಆಗಿ, ನಿರ್ಭಾವ ಸ್ಥಿತಿಯು ನಿಂತಿರಲು ಶರಣನು ಲಿಂಗಾಂಗ ಸಾಮರಸ್ಯದಿಂದ ಜ್ಞಾನವೂ ಸಹ ಇಲ್ಲದಂತವನಾಗಿ ಜ್ಞಾನಶೂನ್ಯ ಸ್ಥಳವನ್ನಿಂಬುಗೊಳ್ಳುವನು. ವಿಶ್ವಧರ್ಮವಾದ ನಮ್ಮ ವೀರಶೈವ ಮತದ ಷಡುಸ್ಥಲ ಬ್ರಹ್ಮಿಯೆನಿಸಿದ ಸಂಪೂರ್ಣ ಪರಬ್ರಹ್ಮಸ್ವರೂಪದ ಶಿವಶರಣನ ಸದ್ಗತಿಯೇ ಇದಾಗಿದೆ.

ಆದ್ದರಿಂದ ಶ್ರೀ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರನ ಮಾರ್ಮಿಕವಾದ ಈ ಕಡೆಯ ವಚನವನ್ನು ಪಠಿಸಿಕೊಂಡದ್ದಾದರೆ ಉಚ್ಚತರವಾದ ವೀರಶೈವ ಮತದ ಜೀವನದ ಬಳ್ಳಿಯು ವಿಶ್ವವನ್ನೇ ಬೆಳಗಿ ಜೀವಭಾವವು ಬದಲಾಗಿ ಶಿವಭಾವವು ಸ್ಥಿರವಾಗಿ ಲಿಂಗ ಪ್ರೇಮಿಗಳಾಗಿ ಮುಕ್ತಿಪದ ಪಡೆಯಲು ಸಂದೇಹವಿಲ್ಲೆಂಬ ಎನ್ನ ನಂಬಿಗೆ.

ನಾನಾ ಪ್ರಯತ್ನದಿಂದ ಹೊನ್ನನಾರ್ಜಿಸುವಂತೆ, ನಾನಾ ಪ್ರಯತ್ನದಿಂದ ಹೊನ್ನ ಸುರಕ್ಷಿತ ಮಾಡುವಂತೆ, ನಾನಾ ಪ್ರಯತ್ನದಿಂದ ಬೇಡಿದವರಿಗೆ ಕೊಡದೆ ಲೋಭವ ಮಾಡಿ ಸ್ನೇಹಿಸುವಂತೆ, ನಾನಾ ವಿಧದಿಂದ ವಿವೇಕಿಸಿ ವಿಚಾರಿಸಲು ಪ್ರಾಣವೇ ಹೊನ್ನೆಂಬಂತೆ, ನಾನಾ ಪರಿಯಲು ಮನ

ಬುದ್ಧಿ ಚಿತ್ತ ಅಹಂಕಾರಗಳು, ಪಂಚೇಂದ್ರಿಯಗಳು ಪ್ರಾಣವನು ಅವ ಗ್ರಹಿಸಿಕೊಂಡಿಪ್ಪಂತೆ. ಶಿವಲಿಂಗವನು ಅವಗ್ರಹಿಸಿಕೊಂಡಿರಬೇಕು. ಯಾಕೆ? ಆ ಹೊನ್ನೇ ಶಿವನಾದಕಾರಣ. "ಓಂ ನಮೋ ಹಿರಣ್ಯಬಾಹವೇ ಹಿರಣ್ಯ ವರ್ಣಾಯ. ಹಿರಣ್ಯರೂಪಾಯ, ಹಿರಣ್ಯಪರಾಯನಮಃ" ಎಂದುದಾಗಿ ಶಿವನೇ ಹೊನ್ನು ಕಾಣಿರೋ. ಶಿವಶಿವಾ ನಾನಾಪ್ರಯತ್ನದಿಂದ ಕುಲವುಳ್ಳ ವರು ಅತ್ಯಂತ ಯವ್ವನೆಯಪ್ಪ ಹೆಣ್ಣಿಂಗೆ ಪ್ರಾಣಕ್ಕೆ ಪ್ರಾಣವಪ್ಪಂತೆ. ಆ ಹೆಣ್ಣಿಂಗೆ ಅಂತಃಕರಣ ಚತುಷ್ಟಯಂಗಳ ಸ್ನೇಹಿಸುವಂತೆ ಆ ಹೆಣ್ಣೆ ಪ್ರಾಣ ವಾಗಿಪ್ಪಂತೆ, ಆ ಲಿಂಗವೇ ಪ್ರಾಣವಾಗಿರಬೇಕು. ಅದಕ್ಕೆ ಹೆಣ್ಣೇ ಶಿವ ನಾದಕಾರಣ "ಶಕ್ತ್ಯಾಧಾರ ಮಹಾದೇವೋ ಶಕ್ತಿನಾತ್ಮೇನ ವೈ ನಮಃ । ಶಕ್ತಿ ಸರ್ವಸ್ಯ ಕರ್ತಾಚ ಮುಕ್ತಾ ಶಕ್ತಿ ನಮೋ ನಮಃ" ಎಂದುದಾಗಿ. ಆ ಹೆಣ್ಣು ತಾನೇ ಶಿವನು ಕಾಣಿರೋ. ನಾನಾಪ್ರಯತ್ನದಿಂದ ಮಣ್ಣನಾರ್ಜಿಸುವಂತೆ, ಆ ಭೂಮಿಯ ಅಗುಜಾಗಿಗೆ ಅರ್ಥ ಪ್ರಾಣಾಭಿಮಾನವನಿಕ್ಕಿ, ಆ ಭೂಮಿಯ ರಕ್ಷಿಸಿ, ಆ ಭೂಮಿಯನೆ ಸರ್ವ ಭೋಗೋಪಭೋಗಗಳನು ಭೋಗಿಸಿ ಸುಖಿ ಸುವಂತೆ ಶಿವಲಿಂಗದಿಂದ ಭೋಗಿಸಬೇಕು. ಅದೇಕೆಂದರೆ ಆ ಭೂಮಿಯೇ ಶಿವನಾದ ಕಾರಣ. "ಓಂ ಯಜ್ಞಾ ರುದ್ರಸ್ಯ ಚಿತ್ಪೃಥ್ವಿ ಭೂರ್ಭುವಸ್ಸಪಕೇ ನಮೋ ನಮಃ ಶಿವಂ ಜನಯಂತಿ ಶಿವೋ ಶಿವಃ'' ಎಂದುದಾಗಿ, ಭೂಮಿಯೇ ಶಿವನು ಕಾಣಿರೋ. 'ಸರ್ವಾಧಾರ ಮಹಾದೇವ' ಇದುಕಾರಣ ಹೊನ್ನು ಹೆಣ್ಣು ಮಣ್ಣು ತ್ರಿವಿಧವು ಶಿವನು ಕಾಣಿರೋ. ಈ ತ್ರಿವಿಧದ ಮರೆಯಲ್ಲಿ ಶಿವನಿಪ್ಪನು ಕಾಣಿರೋ. ಇದುಕಾರಣ ಶಿವಲಿಂಗಕ್ಕೆ ಈ ತ್ರಿವಿಧಕ್ಕಾಗಿ ಮಾಡುವ ಸ್ನೇಹ, ಇಂತೀ ತ್ರಿವಿಧವಲ್ಲಿ ಮಾಡುವ ಲೋಭ, ಇಂತೀ ತ್ರಿವಿ ಧಕ್ಕೆ ಮಾಡುವ ತಾತ್ಪರ್ಯವ ಲಿಂಗಕ್ಕೆ ಮಾಡಿದಡೆ ಶಿವನಲ್ಲಿ ಸಾಯುಜ್ಯ ನಾಗಿ, ಸರ್ವಭೋಗೋಪಭೋಗವ ಭೋಗಿಸಿ ಪರಮ ಪರಿಣಾಮ ಸುಖ ಸ್ವರೂಪನಾಗಿಪ್ಪನಯ್ಯ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ.

ಅಷ್ಟಾವರಣದೊಳು ಆವರಿಸಿದ ಶ್ರೇಷ್ಠ ಶಿವಶರಣರ ಲಿಂಗಾನುಭಾ ದದ ವಚನಾಮೃತವು ವಾಚಕರ ಹೃನ್ಮಂದಿರದೊಳು ಮುಂಬರಿದು ಚಿದಾ ನಂದವ ಹೊಂದಲೆಂದು ಹಾರೈಸುವೆನು.

ಕಂದಪದ್ಯಃ— ವಹಿಸಿದ ಕಾಯಕ ತೀರ್ಚಿತ ।
ವಿಹಿತಾಚಾರ ಕ್ರಿಯೆಗಳ ಕೈಕೊಳ್ಳುತ್ತಂ ॥

ಬಹಿರಂಗವನತಿಗಳೆಯುತ ।
ಸಹಜಾನಂದ ಶಿವಯೋಗ ಸಿದ್ಧಿಯಪೊಂದೈ ॥೧॥

ತನುಗುಣಗಳನನು ಕರಿಸದೆ ।
ಮನಸಾದಿ ಕರಣನೆನಹಸು ಲಿಂಗಾರ್ಪಿತವಂ ॥
ದಿನ ದಿನದುಚಿತ ಸಮಯದೋ ।
ಳನುವಿಂ ಮಾಳ್ಪೊಡೆ ಚಿನುಮಯ ರೂಪಂ ದೀಪಂ ॥೨॥

ಕರತಳದಿಷ್ಟವ ಪೂಜಿಪ ।
ಪರಮಾಪ್ಟ ವಿಧಾರ್ಚನಾರ್ಪಣಂಗಳ ಕ್ರಿಯೆಯಿಂ ॥
ವರ ತನುಮನ ಭಾವಾಂಗಂ ।
ನೆರೆಶುದ್ಧಯಿಸುತ ವಿಕಾರರಹಿತಂ ವಿಹಿತಂ ॥೩॥

ಲಿಂಗತ್ರಯಗಳ ಪೂಜಿಸೆ ।
ಯಂಗತ್ರಯಗಳ್ ಸಮರಸವಾಗಲು ಯೋಗ್ಯಂ ॥
ಲಿಂಗಾಂಗೈಕ್ಯಾನುಭವಂ ।
ತುಂಗ ಶಿವಶರಣ ಶಿವಾನುಭವದಿಂ ಬರ್ಕುಂ ॥೪॥

ಲಿಂಗದ ನೆಲೆಯಂ ತಿಳಿಯುತ ।
ಲಿಂಗದ ಕಳೆಯಂ ನಿರುಕಿಸೆ ದೃಷ್ಟಿಯು ಬಲಿಯಲ್ ॥
ಲಿಂಗಧ್ಯಾನದೊಳಿರುತಿರೆ ।
ಲಿಂಗದೆ ಧಾರಣ ಸಮಾಧಿ ಸಮನಿಸುತಿರ್ಕುಂ ॥೫॥

ವಚನ:— ನೆಲದ ಮರೆಯ ನಿಧಾನದಂತೆ, ಜಲದ ಮರೆಯ ಅಗ್ನಿಯಂತೆ, ಅಗ್ನಿ ಸಂಗದ ವಾಯುವಿನಂತೆ, ಮನದ ಮರೆಯ ನಿರಾಕಾರ ನಿಜ ಲಿಂಗದೇವನ ಶರಣರೆತ್ತ ಬಲ್ಲರೈ ಸಿದ್ಧೇಶ್ವರಾ. ॥೧॥

ದಶವಾಯುಗಳ ಸೂಸಲೀಯದೊಡೆ ಶಿವಯೋಗಿ ಎಂಬೆ. ಕರಣಂಗಳ ಮಥನವಿಲ್ಲದಿರ್ದೊಡೆ ಅನುಭಾವಿ ಎಂಬೆ. ಕಣ್ಣೆವೆಗಳು ಹೆಳಚದಿದ್ದೊಡೆ ಅನುಭಾವಿ ಎಂಬೆ. ಅಂಗವ ಲಿಂಗದೊಳು ಲೀನವಮಾಡಬಲ್ಲೊಡೆ ಅನುಭಾವಿ ಎಂಬೆ. ಬಹಿರಂಗವ ಮರೆದು ಇಷ್ಟದೊಳು ದೃಷ್ಟಿ ಇಡಬಲ್ಲೊಡೆ ಅನುಭಾವಿ ಎಂಬೆ. ಈ ಅನುಭಾವದ ಅನುವನಿತ್ತು ಕಾಯಯ್ಯ ಕರುಣಾನಿಧಿ ಸಿದ್ಧೇಶ್ವರಾ ॥೨॥

ಶಿವಶರಣರ ನುಡಿಯ ನುಡಿಯುದಿರು ಗಿಳಿಯಂತೆ, ಶಿವಶರಣರ ನಡೆಯಂತೆ ನಡೆಯದಿರು ನಾಟಕದ ನಟಿಯಂತೆ ಶಿವಶರಣರ ವೇಷವ ಧರಿಸದಿರು ಗೊಂಬೆಯಂತೆ, ಶಿವಶರಣರ ಪೂಜೆಯ ನೋಡಿ ಪೂಜಿಸದಿರು ಕಾಗದದ ಚಿತ್ರದಂತೆ, ಬಹಿರಂಗವೇ ಅಂತರಂಗ, ಅಂತರಂಗವೇ ಬಹಿರಂಗವೆಂಬ ಇಂಗಿತದ ಸಂಗದೊಳಿರೆಂದ ನಮ್ಮ ಸಿದ್ಧೇಶ್ವರಾ ॥೩॥

ಜಿಹ್ವೆಗುಹ್ಯೆಗಳ ಕಾರಸ್ಥಾನಕ್ಕೆ ಕೈಹಾಕದ, ವರ್ಣರೂಪು ರಂಜನದ ಮಂಜಕ್ಕೆ ಮರುಳಾಗದ, ಸೋಂಕು ಸ್ಪರ್ಶನಗಳ ಸುಖಕ್ಕೆ ಸಂಧಿಸದ, ಗಾನಪಾನ ತಾನಮಾನ ಶಬ್ದಾಪಶಬ್ದಗಳ ನಾದಕ್ಕೆ ನಲಿಯದ, ದುರ್ನಾದ ದುಶ್ಶಬ್ದಗಳ ಸ್ವರಕ್ಕೆ ಸಮನಿಸದ, ಆಶೆವಾಸನೆ ಮಮಕಾರಹಂಕಾರಗಳಿಗೆ ಅಂಕಿತನಾಗದ ನಿನ್ನ ಸರ್ವಾಚಾರ ಸಂಪತ್ತಿನಾಚಾರದ ಅರುಹನಿತ್ತು ಪೊರೆಯಯ್ಯ ಸಿದ್ಧೇಶ್ವರಾ ॥೪॥

ಗುರುವಿನ ಅರುಹು, ಲಿಂಗದ ಇರವು, ಜಂಗಮದ ಬರವು, ತೀರ್ಥದ ತೆರವು, ಪ್ರಸಾದದ ವರವು, ಭಸ್ಮದ ಕುರುಹು, ರುದ್ರಾಕ್ಷಿಯ ಸರವು, ಮಂತ್ರದ ಮಹಾಸ್ವರವು ಸದಾಸನ್ನಿಹಿತವಾಗುವ ಪರಿಯನರಿಸಿ ಕಾಯಯ್ಯ ಎನ್ನ ಸಿದ್ಧೇಶ್ವರಾ ॥೫॥

ಪದಃ— ಮಾಡಿರಣ್ಣಾ ಲಿಂಗಪೂಜೆಯ ಘನ ಗಂಭೀರದೊಳು ॥ಪಲ್ಲವಿ॥

ಅತ್ತ ಇತ್ತ ಹರಿವ ಮನವ, ಮೃತ್ಯುಂಜಯನೊಳ್ ತಂದು ನಿಲಿಸಿ ॥
ಸತ್ವಗುಣವ ವಹಿಸಿಕೊಂಡು, ಭಕ್ತಿಭಾವ ಬಿಡದೆ ನೀವು ॥೧॥

ಕರದೊಳಿರಿಸಿದ ಗುರುವುಲಿಂಗ, ಉರದೆ ಧರಿಸಿದ ಮೂರ್ತಿಲಿಂಗ ॥
ಪರಮಜ್ಞಾನಿ ಜಂಗಮಲಿಂಗ ಅರಿತು ಕ್ರಿಯಾಚಾರ ಬಿಡದೆ ॥೨॥

ಮುಪ್ಪು ಮುಖದ ಲಿಂಗವನ್ನು, ಶುದ್ಧ ಹೃದಯ ಬದ್ಧರಾಗಿ ॥
ವೇದ್ಯವಾದ ಜ್ಞಾನದಿಂದ, ಸಿದ್ಧೇಶ್ವರನ ಸ್ಮರಿಸಿ ನೀವು ॥೩॥

# ಮಠಗಳು ಮೊದಲು ಕ್ರಾಂತಿಯ ಕೇಂದ್ರಗಳಾಗಬೇಕು.

( ಲೇಖಕರು:- ಶ್ರೀ ಶಿವಾನಂದಸ್ವಾಮಿಗಳು ಗವಿಮಠ, ತೆಗ್ಗಿಹಳ್ಳಿ (ಇಂಡಿ) )

---

ಮಠಗಳು ಹಿಂದು ಧರ್ಮದಲ್ಲಿ ವಿಶೇಷವಾಗಿವೆ. ಅವೆಲ್ಲ ಬೇರೆ ಬೇರೆ ಪಂಗಡಗಳಿಗೆ ಸಂಬಂಧಿಸಿರುವವು. ಪಂಗಡಗಳಿಗೂ ಲೆಕ್ಕವಿಲ್ಲ. ಅವುಗಳ ರೀತಿನೀತಿಗಳಲ್ಲಿಯೂ ಅಂತರವಿರುವದು. ವೀರಶೈವರ ಮಠಗಳ ಇರುವಿಕೆಯೂ ಬೇರೆಯಾಗಿದೆ. ಮಠಗಳಿಗೆ ಮರಿಗಳೆಂದು ಚಿಕ್ಕ ಹುಡುಗರನ್ನು ಬಿಡುವ ಪರಿಪಾಠವು ಬಹಳೇ ಇರುವದು. ಇದು ಎಷ್ಟು ಮಾತ್ರಕ್ಕೂ ಒಳಿತಲ್ಲ. ಮರಿಗಳು ಹೋಗಿ ಕತ್ತೆಯ ಮರಿಗಳೇ ಆದ ಕಥೆಗಳು ಬಹಳವಾಗಿರುವವು. ಇಷ್ಟಾದರೂ ಸಮಾಜವು ಕಣ್ಣುತೆರೆಯದೆ ನಿದ್ರೆಯಲ್ಲಿಯೇ ಇರುವದು ಶೋಚನೀಯವೆನಿಸುವದು. ಮಠದವರನ್ನು ಸಮಾಜ ಜಾಗ್ರತಗೊಳಿಸಬೇಕಾಗಿದೆ. ಗುರುವರ್ಗವು ನಿದ್ರೆಹೋಗಿದೆ. ಅಹಂಭಾವ ಶಠಂಭಾವಗಳು ತುಂಬಿಕೊಂಡಿವೆ. ಇದಕ್ಕೆಲ್ಲ ಒಂದೇಜಾತಿಗೆ ಗುರುವರ್ಗ ಗುತ್ತಿಗೆಯಾದದ್ದೇ ಕಾರಣವಾಗಿರುವದು. ಮಠಗಳಲ್ಲಿ ಗುರುವರ್ಗದ ಮಠಗಳೆಂತಲೂ ಭಕ್ತವರ್ಗದ ಮಠಗಳೆಂತಲೂ ಎರಡು ಪ್ರಕಾರಗಳನ್ನು ಕಲ್ಪಿಸಿರುವರು. ಇವರು ಒಬ್ಬರನ್ನೊಬ್ಬರು ಸೇರುವದಿಲ್ಲ. ಗುರುವರ್ಗದ ಮಠಗಳು ದೇವದತ್ತ ಮಠಗಳೆಂದು ಜಂಭ ಕೊಚ್ಚಿಕೊಳ್ಳುವವು. ಭಕ್ತವರ್ಗದ ಮಠಗಳೆಂದರೆ ಸಾಧನೆಸಿದ್ಧಿಗಳಿಂದ ಭಕ್ತರಾದವರು ಗುರುಗಳಾಗಿ ಮಠವನ್ನು ಸ್ವತಃ ಕಟ್ಟಿ ಶಿಷ್ಯವರ್ಗವನ್ನು ಮಾಡಿಕೊಂಡ ಸಿದ್ಧಾಟಿಗಿಯ ಸನ್ಯಾಸಿಗಳ ಮಠಗಳಾಗಿವೆ. ಮೊದಲು ಇವುಗಳನ್ನು ಸ್ಥಾಪಿಸಿದವರು. ಯೋಗ್ಯತೆಯವರು ಇರುವದರಿಂದ ಅವುಗಳ ಸ್ಥಿತಿಯು ಅವರಿರುವ ಮಟ್ಟಿಗೆ ಚನ್ನಾಗಿಯೇ ಇರುವವು. ಅವರು ಲಿಂಗೈಕ್ಯರಾದ ಬಳಿಕ ಅವರ ಸ್ಥಳಕ್ಕೆ ಅವಿವೇಕಿಗಳೇ ಬಂದುದರಿಂದ ಹೀನಮಟ್ಟಕ್ಕೆ ಇಳಿದು ಬಿಡುವದು ಕಂಡುಬರುವದು. ಇಂಥವುಗಳಲ್ಲಿ ಮಾತ್ರ ಪುಣ್ಯತಿಥಿ ಜಾತ್ರೆಗಳನ್ನು ಮಾಡಿಸುತ್ತ ಚಯನಿ ಹೊಡೆಯುತ್ತಿರುವರು. ಯಾವ ವಿಧಿನಿಷೇಧಗಳು ಇರುವದಿಲ್ಲ.

ಗುರುವರ್ಗದ ಮಠಕ್ಕೆ ಐಯ್ಯಗಳ ಮರಿಗಳೇ ಅಧಿಕಾರಕ್ಕೆ ಬರುವರು ಕೆಲವರು ಪಟ್ಟದವರ ಮಠಗಳೆಂದೂ ಕೆಲವು ವಿರಕ್ತ ಮಠಗಳೆಂದೂ ಭೇದ

ಗಳುಂಟು. ಈ ಮಠಗಳಲ್ಲಿ ಇರುವ ನಿಜವಾದ ಭೇಧವೇನೆಂದು ತಿಳಿಯದಾಗಿದೆ. ಬರೀ ಶಬ್ದಭೇದವಿದ್ದರೂ ನಾ ಹೆಚ್ಚು ನೀ ಹೆಚ್ಚು ಎಂದು ಬಡಿದಾಡುತ್ತಿರುವರು. ಪಂಚಾಚಾರ ಬಣದವರು ಪಡದಪ್ಪಗಳು, ಬಸವನ ಬಣದವರು ವಿರಕ್ತರೆಂದು ಮಾತ್ರ ಇಟ್ಟುಕೊಂಡು ಜಗಳಾಡುವರು. ಇವರಿಬ್ಬರ ಜೆಟ್ಟಿಯಾಗುವದಿಲ್ಲ. ಆದರೆ ಬಡಿದಾಟ ಹೊಡೆದಾಟಕ್ಕೆ ಪ್ರಾರಂಭ. ಒಬ್ಬರು ಬಸವಣ್ಣನವರನ್ನು ಬೈಯುವವರು. ಇನ್ನೊಬ್ಬರು ಪಂಚಾಚಾರ್ಯರನ್ನು ಬೈಯುವವರು ಹೀಗೆ ಇವರ ನಿತ್ಯ ಕಾರ್ಯಕ್ರಮ ಪೂಜೆ ಧ್ಯಾನ ಜಪಗಳಾಗಿವೆ. ಅಯ್ಯೋ ಧರ್ಮವು ಎಂಥ ಕೀಳಮಟ್ಟಕ್ಕೆ ಇಳಿದು ಹೋಗಿರುವದು. ಅನ್ಯ ಸಮಾಜದವರು ನೋಡಿ ನಗುವರು! ಇದರ ದುರುಪಯೋಗವನ್ನು ಉಳಿದವರು ಮಾಡಿಕೊಳ್ಳುವರು. ಶಿವಾನುಭವ ಪಡೆದು ಪಡದಪ್ಪ ಅಥವಾ ಪಟ್ಟದ ದೇವರು ಆಗುವರು. ಸರ್ವಸಂಗ ಪರಿತ್ಯಾಗಮಾಡಿ ಸದಾ ಶಿವಾನುಭವದಲ್ಲಿ ರತರಾದವರು ವಿರಕ್ತರಾಗುವರು. ಇವರು ಉಭಯರೂ ತ್ಯಾಗಿಗಳು ಶಿವಾನುಭವಿಗಳು ಧರ್ಮ ಪ್ರವರ್ತಕರು ಜ್ಞಾನಿಗಳು ಇಂದ್ರಿಯನಿಗ್ರಹಿಗಳು ಎಂದು ಅರ್ಥವಿರುವದು. ಇವರು ಬೇರೆ ಬೇರೆ ಅಲ್ಲ. ಇಬ್ಬರಿಗೂ ಮಠಗಳೇ ಇರುವವು. ಬಡಿದಾಡುವ ಸಲುವಾಗಿ ಇವರು ಎರಡು ಬಣಗಳನ್ನು ಕಟ್ಟಿದ್ದಾರೆ. ಇದು ಬಲು ಹೇಯವಾಗುವದು. ಈ ಪದ್ಧತಿಯು ಮೊದಲು ಹೋಗಬೇಕು. ಮಠಗಳನ್ನು ಎಂದೂ ಚಿಕ್ಕವರಿರುವಾಗ ಬಿಡಲೇಬಾರದು ದೊಡ್ಡವರಾಗಿ ಯೋಗ ಸಾಧನೆಮಾಡಿ ಯೋಗ್ಯತೆ ಪಡೆದು ನಿಜವಾಗಿ ಕಾಯಾ ವಾಚಾ ಮನಸಾ ತ್ಯಾಗಿಗಳಾದ ಧರ್ಮಾತ್ಮರನ್ನು ಯಾವ ಜಾತಿ ಭೇದವಿಲ್ಲದೆ ಶಿವಶರಣರು ಅನುಸರಿಸಿದ ತತ್ವದಂತೆ ಅಧಿಕಾರಿಗಳನ್ನು ಮಾಡಿದರೆ ಮಠಗಳ ಸ್ಥಿತಿ ಯೋಗ್ಯವಾಗುವದು. ಧರ್ಮ ಜಾಗ್ರತೆಯಾಗುವದು ಅಲ್ಲಿ ಭಕ್ತರಿಗೂ ಗುರುಗಳಾಗಲಿಕ್ಕೆ ಬರುತ್ತದೆಂದು ಪಾಲಿಸುತ್ತ ಬಂದರೆ ವೀರಶೈವದಲ್ಲಿಯ ಎಲ್ಲ ಜಾತಿಯವರಿಗೂ ಒಂದು ತರದ ಹುರುಪು ಉತ್ಸಾಹ ಬರುವದು. ಅಂದರೆ ಎಲ್ಲರೂ ಹೆಚ್ಚಿನ ಸ್ಥಿತಿಗೆ ಹೋಗಲಿಕ್ಕೆ ಯತ್ನಿಸ್ಸುವರು. ಭಕ್ತರು ಭಕ್ತರಾಗಿ ಉಳಿದರೆ ಗುರುಗಳು ಗುರುಗಳಾಗಿಯೇ ಮೆರೆದರೆ ತತ್ವಕ್ಕೆ ವಿರೋಧವಾಗುವದಲ್ಲದೆ ಯೋಗ್ಯರೂ ಸಿಗುವದಿಲ್ಲ. ಸಿಕ್ಕ ಅನಾಥ್ಯರನ್ನು ಅಧಿಕಾರಕ್ಕೆ ಏರಿಸುವ ಪ್ರಸಂಗ ತಪ್ಪುವದು. ಮಠಗಳಲ್ಲಿ ತೊಟ್ಟಿಲ ಕಟ್ಟುವದೂ ತಪ್ಪುವದು. ಭಕ್ತರು ಸದಾ ಹೀನರಾದ ಕಾಮುಕ ಗುರುಗಳಿಗೆ ಸದಾ ಶರಣಾಗತರಾಗುವ ಪ್ರಸಂಗವೇ ಉಳಿದು ಅದರ ಬಗ್ಗೆ

ತಾತ್ಸಾರವಾಗುವದು. ಗುರುಗಳಿಗೆ ತಮ್ಮ ಸ್ಥಾನ ಅಚಲವೆಂದು ತಿಳಿದರೆ ಅವರು ಮನಬಲ್ಲಂತೆ ನಡೆದು ದುರಾಚಾರಿಗಳಾಗುವರು. ಭಕ್ತರು ಉತ್ತಮ ದರ್ಜೆಯುವರಾಗಿದ್ದರೆ ಇಂಥ ಗುರುಗಳನ್ನು ತಿರಸ್ಕರಿಸಿ ತಾತ್ಸಾರ ಮಾಡು ವರು. ಗುರುಗಳಿಗಿಂತ ಭಕ್ತರೇ ಸದಾಚಾರ ಸಂಪನ್ನರಾಗುವದರಿಂದ ಅವರಿ ಗೇಕೆ ಬಾಗಬೇಕೆಂದು ಜರಿದು ಹೀಯಾಳಿಸಿಬಿಡುವದು ಸಹಜವದೆ. ಗುರು ಗಳು ಎಂಥವರಾದರೂ ನಡೆಯುತ್ತದೆಂದು ಹೇಳುವದು ಬಹು ಕೀಳ ತರದ ವಿಚಾರವಾಗಿದೆ. ಹೀಗಾದರೆ ಧರ್ಮಕ್ಕೆ ಯಾವ ಬೆಲೆ ಮಾಗುವದಿಲ್ಲ. ಪರ ಧರ್ಮದವರು ಹಾಸ್ಯ ಮಾಡುವರು. ಅದಕ್ಕೆ ಶರಣ ತತ್ವಕ್ಕೆ ಸರ್ವರೂ ಮಾನ್ಯ ಮಾಡಿ ಅದರಂತೆ ನಡೆಯಬೇಕು. ನಮಗೆ ಪಂಚಾಚಾರ್ಯರೂ ಬೇಕು. ಶ್ರೀ ಬಸವ ಮೊದಲಾದ ಶರಣರೂ ಬೇಕು. ಇವರೆಲ್ಲ ನಮ್ಮ ಧರ್ಮಕ್ಕಾಗಿ ಹೆಣಗಿದವರು ಹೆಣಗುವವರು. ಅವರನ್ನು ಎಂದೂ ಯಾರೂ ತಾತ್ಸಾರ ಮಾಡಬಾರದು. ಹೀಗೆ ಮಾಡಿದ್ದಾದರೆ ನಮ್ಮನ್ನು ನಾವೇ ತಾತ್ಸಾರ ಮಾಡಿದಂತಾಗುವದು. ನಾವು ಮುಂದೆ ಶರಣರಾಗಿ ನಮ್ಮ ಸಮಾಜದ ವರು ತಾತ್ಸಾರ ಮಾಡಿದರೆ ಹೇಗಾಗುತ್ತದೆ ವಿಚಾರಿಸಿರಿ. ಅವರೆಲ್ಲ ನಮಗೆ ಸ್ಫೂರ್ತಿ ಕೊಡುವವರು, ನಮಗಾಗಿ ದುಡಿದು ಮಡಿದವರು. ಅವರನ್ನು ನಾವು ತಿರಸ್ಕರಿಸಿ ಒಕ್ಕೊಟ್ಟರೆ ನಮ್ಮ ಧರ್ಮದ ಆಧಾರ ಸ್ತಂಭಗಳೇ ಕಂಚಿ ಬೀಳುವದರಿಂದ ಧರ್ಮಕ್ಕೆ ಆಧಾರವಿಲ್ಲದಂತಾಗಿ ಕಡಕೊಂಡು ನೆಲಕ್ಕೆ ಬೀಳು ವದು. ಕಾರಣ ಯಾರೂ ಯಾವ ಆಚಾರ್ಯನನ್ನಾಗಲಿ ಶರಣರನ್ನಾಗಲಿ ತಿರಸ್ಕರಿಸಬಾರದು. ಅವರಿಗಾಗಿ ಎಲ್ಲರೂ ಪ್ರೀತಿ ಭಕ್ತಿಗಳನ್ನು ತೋರಲೇ ಬೇಕು. ಈಗಿನ ಈ ತರದ ಜಗಳಗಳು ಅವಶ್ಯ ಹೋಗಲೇ ಬೇಕು. ಅಂದರೆ ಎಲ್ಲರೂ ನೆಮ್ಮದಿಯಾಗಿ ನಮ್ಮ ಧರ್ಮದಲ್ಲಿ ಸುಖವಾಗಿ ಬಾಳುವರು, ಶಾಂತಿ ಸಿಗುವದು.

ವಿರಕ್ತ ಪಟ್ಟದ ಜಗಳಗಳೆಲ್ಲ ಬರೇ ಮೆರವಣಿಗೆಗಾಗಿ ಊಟಕ್ಕಾಗಿ ದಕ್ಷಿಣಕ್ಕಾಗಿ ಗಳಿಕೆಗಳಿಗಾಗಿ ಜಯ ಜಯಕಾರಕ್ಕಾಗಿ ಇರುವವೇ ಹೊಂತು ಯಾರೂ ನಿಜವಾಗಿ ದೇವರನ್ನು ಕಂಡವರಲ್ಲ. ದೇವರನ್ನು ಕಂಡವರು ಯಾರೂ ಇವರಂತೆ ಬಡಿದಾಡುವದಿಲ್ಲ. ಎಲ್ಲರೂ ಆಗ ತಾವಾ ಗಿಯೇ ಶಾಂತರಾಗುವರು. ಅಜ್ಞಾನಿಗಳು ನಾ ಹೆಚ್ಚು ನೀ ಹೆಚ್ಚೆಂದು ಬಡಿದಾ ಡುವರು. ಜ್ಞಾನಿಗಳು ದೊಡ್ಡವರು ಯಾವದನ್ನೂ ಲಕ್ಷಿಸದೆ ತಮ್ಮ ಕೆಲಸ ವನ್ನು ಮಾಡುತ್ತ ಧರ್ಮದಲ್ಲಿ ನಿರತರಾಗಿರುವರು. ಅವರಿಗೆ ಮೆರವಣಿಗೆ

ಕೀರ್ತಿ ಜಯಜಯಕಾರಗಳು ಬೇಕಾಗಿರುವದಿಲ್ಲ. ಆದರೆ ಅವರಿಗೆ ಬೇಕಾಗಿರುವದು ಧಾರ್ಮಿಕ ಕಾರ್ಯ, ಜನರ ಉದ್ಧಾರ ಹೊರತು ಬೇರೆ ಏನನ್ನೂ ಅವರು ಬಯಸುವದಿಲ್ಲ. ಇಂಥವರೇ ನಿಜವಾದ ಗುರುಗಳು ಹೊರತು ಖೊಬ್ರಿ, ಪರಟಿ, ಚಾಜ, ಬಟ್ಟ, ಅಧಿಕಾರ, ಸ್ಥಾನ, ಮಾನ, ಧನ, ಎಡಿ, ನೈವೇದ್ಯ ಮೊದಲಾದವುಗಳಿಗಾಗಿ ಸದಾ ಬಡಿದಾಡುವವರು ಗುರುಗಳಲ್ಲ. ಅವರು ಮಠಕ್ಕೆ ಸಲ್ಲುವದಿಲ್ಲ. ಅನ್ಯರು ಮಾಡಿದ ಆಸ್ತಿ ಪಾಸ್ತಿಗಳ ಮೇಲೆ ಇವರು ಲಾಗ ಹೊಡೆದು ಉಂಡುಟ್ಟು ಚಯನಿ ಹೊಡೆಯಲಿಕ್ಕೆ ಬಂದ ಕೊಳುಬಕ್ಕ ಗುರುಗಳೇ ಹೌದು. ಇಂಥ ಗುರುಗಳಿಂದ, ಇಂಥ ಗುರುಗಳಿಪ್ಪ ಮಠಗಳಿಂದ ಊರಲ್ಲಿ ಬಣಗಳೇ ಆಗಿರುವದು ಕಂಡು ಬರುವದು. ಮಠಗಳಿದ್ದ ಊರಲ್ಲಿ ಸದಾ ಕೊಲೆ ಸುಲಿಗೆಗಳು ಆಗುತ್ತಿರುವದಕ್ಕೆ ಇವರೇ ಕಾರಣರೆಂದು ಭಕ್ತರು ಅನ್ನುತ್ತಿರುವರು. ಇದೆಲ್ಲ ಒಂದೇ ವರ್ಗಕ್ಕೆ ಮಠಗಳ ಗುತ್ತೆದಾರರನ್ನಾಗಿ ಮಾಡಿದ್ದರ ಪರಿಣಾಮವಲ್ಲದೆ ಬೇರೆ ಏನೂ ಇರುವದಿಲ್ಲ. ಯೋಗ್ಯರಾದವರನ್ನು ಆರಿಸಿ, ಅಧಿಕಾರಿಗಳನ್ನಾಗಿ ಮಾಡಿದ್ದರೆ ಈ ಸ್ಥಿತಿಯು ಬರುವದು ಶಕ್ಯವಿಲ್ಲ. ಅವರು ತಮ್ಮ ಪ್ರಭಾವದಿಂದ ಎಲ್ಲವನ್ನೂ ಶಾಂತಗೊಳಿಸಿ ಆಳುವರು. ಹೀಗಾದರೆ ಸರ್ವ ಊರವರಿಗೂ ನೆಮ್ಮದಿ ಸಿಗುವದು, ಶಾಂತಿ ಸಿಗುವದು.

ಮಠದವರು ಬಂದಕೂಡಲೇ ೨-೩ ತಾಸು ಲಿಂಗ ಪೂಜೆಯನ್ನೇ ಮಾಡುವರು. ಅನೇಕ ಪೂಜೆಯ ಸಾಮಾನುಗಳನ್ನು ಸುತ್ತಲೇ ಹರವಿಕೊಂಡು ಕೂಡ್ರುವರು. ೨-೩ ಟ್ರಂಕ ತುಂಬುವಷ್ಟು ಪೂಜೆಯ ಸಾಮಾನುಗಳೇ ಇರುವವು- ಇದೆಲ್ಲ ಭಕ್ತವರ್ಗಕ್ಕೆ ಶಿಷ್ಯವರ್ಗಕ್ಕೆ ಗುಂಗು ಹಿಡಿಸಲಿಕ್ಕೆ ಹಾಕಿದ ಸೋಗೇ ಆಗಿ ಬಿಡುವದೆಂದು ಅನಿಸುವದು. ಪೂಜೆಯ ತತ್ವವನ್ನೇ ಇವರಾರೂ ಅರಿತಿಲ್ಲ. ಪೂಜೆ ಎಂದರೆ ತನ್ನಲ್ಲಿ ಇರುವ ಸರ್ವ ದುರ್ಗುಣಗಳನ್ನೂ ಕಾಮನೆಗಳನ್ನು ವಾಸನೆ ಆಶೆ ಆಕಾಂಕ್ಷೆ ಅಹಂಕಾರ ಮಮಕಾರಗಳನ್ನೂ ಪೂಜೆ ಮಾಡೇದು ಸೂಚಿಸುವದು. ಪೂಜೆ ಎಂದರೆ ಇಲ್ಲಿ ಮಾಡು ಎಂದು ಅರ್ಥ. ಸ್ನಾನ, ವಿಭೂತಿ, ಗಂಟೆ, ಪತ್ರಿ, ಧೂಪ, ದೀಪ, ಜಾಗಟೆ, ಶಂಖ, ಅಕ್ಷತೆ, ನೈವೇದ್ಯ, ಮೊದಲಾದವುಗಳೆಲ್ಲ ಇಲ್ಲಿ ಮಾಡುವದನ್ನೇ ಸೂಚಿಸುವವು. ದೇವರನ್ನು ಲಿಂಗವನ್ನು ಇಲ್ಲ ಮಾಡುವದಲ್ಲ. ತನ್ನಲ್ಲಿರುವ ಕೆಟಕಾದವುಗಳನ್ನು ಇಲ್ಲಿ ಮಾಡಿದರೆ ಉತ್ತಮ ಪೂಜೆಯಾಗುವದು. ಇದರ ಸೂಚನೆಗಾಗಿ ಹೊರಗಿನ ಪೂಜೆ ಇರುವದೇ ಹೊರತ

೨-೩ ತಾಸು ಗುಂಯಿಗುಟ್ಟುತ್ತ ಮುಸುಕುಹಾಕಿಕೊಂಡು ಕೂಡ್ರುವದು ಪೂಜೆಯಲ್ಲ. ಪೂಜೆಯಲ್ಲಿ ಮೇಲಿನ ಸಾಹಿತ್ಯಗಳೊಂದಿಗೆ ಲಿಂಗವನ್ನು ಪೂಜಿಸುವದು ಅದು ಕನಿಷ್ಠ ತರಗತಿಯ ಪೂಜೆಯಾಗುವದು. ಇದಕ್ಕೂ ಹೆಚ್ಚಿನದು ಭಜನೆಯಾಗುವದು. ಜಪವು ಇವುಗಳಿಗಿಂತ ಹೆಚ್ಚಿನದು. ಪ್ರಾರ್ಥನೆಯು ಮತ್ತೂ ಹೆಚ್ಚಿನದು. ಧ್ಯಾನವೂ ಮತ್ತಷ್ಟು ಹೆಚ್ಚಿನದು. ಧಾರಣೆಯು ಅದಕ್ಕೂ ಹೆಚ್ಚಿನದು, ಸಮಾಧಿಯು ಅತಿ ಹೆಚ್ಚಿನದು. ಇದು ಕಡೆಯ ಶ್ರೇಷ್ಠ ಪೂಜೆಯೇ ಸರಿ. ಆದಕ್ಕೆ ಈ ಗುರುಗಳು ಮಾಡುವ ಪೂಜೆಯು ಕನಿಷ್ಠತರಗತಿಯ ಪೂಜೆಯಲ್ಲಿ ೨-೩ ತಾಸು ಕಳೆಯುವದು ಸರಿಯಲ್ಲ. ನಿಷ್ಕಾಮಕರ್ಮವೇ ಪೂಜೆಯಾಗುವದು. ಭಕ್ತರ ಸೇವೆಯೇ ಶಕ್ತಿಯ ಸೇವೆ. ನರಸೇವೆಯೇ ಹರಸೇವೆ. ಈಶ್ವರಾರ್ಪಿತ ಸರ್ವಕರ್ಮ ಗಳೆಲ್ಲ ದೇವ ಪೂಜೆಯಾಗುವದು. ಈ ಹೊಸ ತತ್ತ್ವವನ್ನರಿತು ದೇಶದ ಉದ್ಧಾರ ಮಾಡಲು ಪ್ರತಿಮಠಾಧೀಶರೂ ಹೆಣಗಬೇಕು. ಸದಾ ಇಪ್ಪತ್ತು ನಾಲ್ಕು ತಾಸು ದೇವರ ನಾಮ ಜಪ ಮಾಡುತ್ತಲೇ ಇರಬೇಕು. ಈ ತತ್ತ್ವ ವನ್ನು ಬಸವೇಶ್ವರ, ಶಂಕರಾಚಾರ್ಯ, ವಿದ್ಯಾರಣ್ಯ ಮೊದಲಾದವರೂ ಬೋಧಿಸಿದ್ದಾರೆ. ಈಗಂತೂ ಈ ತತ್ತ್ವವು ಹಾಸು ಹೊಕ್ಕಾಗಿರುವದು. ಇದನ್ನು ಮರೆತು ಮಠದವರು ಇಲ್ಲದ್ದನ್ನೇ ಮಾಡುತ್ತ ನಡೆದಿದ್ದಾರೆ.

ಈಗಿನ ಕಾಲದಲ್ಲಿ ಮಠಗಳಲ್ಲಿ ಉಪದೇಶಕೊಟ್ಟು ಶಿಷ್ಯರನ್ನು ಮಾಡಿ ಕೊಂಡು ಧನಾರ್ಜನೆ ಮಾಡುವರು. ಹೆಚ್ಚಿಗೆ ಶಿಷ್ಯರನ್ನು ಮಾಡಿಕೊಂಡರೆ ಹೆಚ್ಚಿಗೆ ಧನ ಸಿಗುವದು. ಹೆಚ್ಚಿಗೆ ಊಟ ಚಹಾ ಸಿಗುವದು, ಸೇವಕರ ವರ್ಗವೂ ಹೆಚ್ಚಾಗಿ, ಗುರುಗಳು ಆರಾಮ ಇರುವರು. ಪ್ರತಿವರ್ಷ ಒಂದು ರೂಪಾಯಿಯಂತೆ ಶಿಷ್ಯರಿಂದ ಫೀ ವಸೂಲ ಆದರೂ ಒಬ್ಬೊಬ್ಬ ಗುರುಗಳು ೧೦—೧೫ ಸಾವಿರ ರೂಪಾಯಿ ಉತ್ಪನ್ನ ಮಾಡಿಕೊಂಡಿರುವದು ಕಂಡುಬರು ವದು. ಸದಾ ತಮ್ಮ ವಿಷಯಾರಾಮದಲ್ಲಿಯೇ ಕಾಲಕಳೆಯುವರು ಅಲ್ಲದೆ ವಿಷಯಾರಾಮಿಯ ವಿಚಾರದಲ್ಲಿ ಮುಳುಗಿರುವರು. ಐಶ್ವರ್ಯವಂತ ಜನರಿ ಗಿಂತಲೂ ವಿಷಯಾರಾಮದಲ್ಲಿ ಲೋಲಾಡುವರು. ಸರ್ವಸಂಗಪರಿತ್ಯಾಗದಲ್ಲಿದ್ದು ಹೇಗೆ ತಿಳಿಯದಾಗಿದೆ. ಪೈ ಪೈ ಕೂಡಹಾಕಿ ಗಳಿಕೆ ಮಾಡುವರು. ಕೊಡುವ ಭಕ್ತರು ಮಠಕ್ಕೆ ಬಂದರೆ ಉತ್ತಮ ತಿಂಡಿ ತಿನಿಸುಗಳಿಂದ ಅವರನ್ನು

ಸಂತೋಷಗೊಳಿಸುವರು. ಕೊಡಲಾರದ ಬಡವನು ಬಂದರೆ ದಾಸೋಹದ ತಂಗಳು ತುಣುಕುಹಾಕಿ ಕಳಿಸುವರು. ಇದು ಮಠಗಳ ಕೆಲಸವಲ್ಲ. ಇಂಥ ಹೇಯಕಾರ್ಯಗಳು ಮೊದಲು ನಿಲ್ಲಬೇಕು.

ಮಠದಲ್ಲಿ ಚೀಟಿ ಯಂತ್ರ ತಾಯಿತು ಬೂದಿ ಮಂತ್ರಿಸುವದು ಭೂತ ಬಿಡಿಸುವದು ಸಾಂಗವಾಗಿ ಆತಂಕವಿಲ್ಲದೆ ನಡೆದಿರುವದು. ಅವುಗಳಿಗೆ ಫೀ ಸಹ ಕೊಡಬೇಕಾಗುವದು. ಹೀಗಾಗಿ ಅಮಾದಸಿ, ಹುಣ್ಣಿವೆ, ಗ್ರಹಣ, ಸಂಕ್ರಾಂತಿ ಮೊದಲಾದ ಕಾಲಗಳಲ್ಲಿ ಮಠಗಳಲ್ಲಿ ಜಾತ್ರೆಗಳೇ ನೆರೆಯುವವು. ಆಗ ಒಂದೇ ಒಂದು ರಾತ್ರಿಯಲ್ಲಿ ೫-೬ ನೂರು ರೂಪಾಯಿ ಗಳಿಸುವರು. ಇದರಿಂದ ಜನರನ್ನು ಮತ್ತಷ್ಟು ಮೂಢ ನಂಬಿಗೆ ಭಾವಿಕತನದಲ್ಲಿ ಹಾಕಿದಂತೆ ಆಗುವದು. ಭಕ್ತರನ್ನು ಅಜ್ಞತನದಲ್ಲಿ ಮುಳಗಿಸುವದು ಒಳಿತಲ್ಲ. ಭಕ್ತರನ್ನು ಭಕ್ತರನ್ನಾಗಿಯೇ ಮಾಡುವದು ಎಷ್ಟು ಮಾತ್ರಕ್ಕೂ ಸರಿಯಲ್ಲ ಅವರಿಗೆ ಯೋಗ್ಯ ಜ್ಞಾನವಮಾಡಿಕೊಟ್ಟು ಶಿಷ್ಯನಿಗೆ ಗುರುತ್ವ ಬರುವಂತೆ ಮಾಡಬೇಕು. ಗುರುಶಿಷ್ಯರಿಬ್ಬರೂ ತನ್ನ ಸ್ಥಾನದಿಂದ ಹಿಂದೆ ಹಿಂದೆ ಸರಿಯುತ್ತಿರುವದು ಕಾಣುವದು. ಮೊದಲು ಇದ್ದ ಸ್ಥಾನದಲ್ಲಿ ಸಹ ಇರುವದಿಲ್ಲ. ಅಷ್ಟೇ ಆದರೂ ಕೂಡ ಒಳ್ಳೇ ಪುಣ್ಯವೇ ಸರಿ.

ಕೆಲವು ಗುರುಗಳು ಜನವಶ್ಯ ಮನವಶ್ಯ ಸ್ತ್ರೀವಶ್ಯ ಜಾರಣ ಮಾರಣ ಭಾನುಮತಿ ತ್ಯಾಗಾಮತಿ ಚೇಡಿ ಮೊದಲಾದ ಹೀನಕೃತ್ಯಗಳನ್ನೂ ಮಾಡುತ್ತಿರುವದು ಕಂಡುಬಂದಿದೆ. ಇದಂತೂ ಲೋಕ ಬಾಹಿರಕೃತ್ಯವೇ ಸರಿ. ಭಾರತದಲ್ಲಿ ಅನೇಕ ಈ ತರದ ವಿದ್ಯೆಗಳಿರುವವು. ಇದರಿಂದಲೂ ಅನೇಕವಾಗಿ ಗಳಿಕೆಯನ್ನು ಮಾಡಿಕೊಳ್ಳುತ್ತಿರುವರು. ಮಠಗಳಲ್ಲಿ ಇದು ನಡೆದುದಾದರೆ ಮಠಗಳೆಂದು ಅನ್ನುವದು ಸರಿಯಲ್ಲ. ಅದಕ್ಕೆ ತಕ್ಕಂತೆ ಒಂದು ಹೆಸರನ್ನು ವಾಚಕರೇ ಸೂಚಿಸಿದರೆ ನೆಟ್ಟಗಾಗುತ್ತದೆ. ನನಗಂತೂ ಇಂಥದಕ್ಕೆ ಯಾವ ಹೆಸರನ್ನು ಕೊಡಬೇಕೋ ತಿಳಿಯುವದಿಲ್ಲ ವಾಚಕರೇ ವಿಚಾರಿಸಿರಿ.

ಭಕ್ತಿ ಜ್ಞಾನ ವೈರಾಗ್ಯ ಸೇವೆ ನೀತಿ ನ್ಯಾಯ ಸತ್ಯ ತ್ಯಾಗ ಅಹಿಂಸೆ ಧರ್ಮ ಬ್ರಹ್ಮಚರ್ಯ ಮೊದಲಾದ ಉಚ್ಚ ತತ್ವಗಳಂತೆ ತಾವೂ ನಡೆದು ಭಕ್ತರಲ್ಲಿ ಇವುಗಳನ್ನು ಪ್ರಚಾರಮಾಡುವದು ನಿಜವಾದ ಕರ್ತವ್ಯ. ನಮ್ಮ ಪೂರ್ವಿಕರಾದ ಆಚಾರ್ಯರ ಶರಣರ ಚರಿತ್ರೆಗಳನ್ನು ಪರಿಶೋಧಿಸುವದೂ ತತ್ವಗಳನ್ನು ಪ್ರಕಟಗೊಳಿಸುವದೂ ಅವರ ವಚನ ಗ್ರಂಥಗಳನ್ನು ಪ್ರಸಿದ್ಧಿಸಿ

ಪ್ರಕಾಶನಗೊಳಿಸುವದೂ, ವಚನಸಾಹಿತ್ಯವು ಅಗ್ಗವಾಗಿ ಸರ್ವರಿಗೂ ಸಿಗುವಂತೆ ಯತ್ನಿಸುವದೂ, ಧರ್ಮದಲ್ಲಿ ಜಾಗ್ರತೆಯುಂಟು ಮಾಡುವದು, ಧರ್ಮಪ್ರಸಾರ ಮಾಡುವದೂ, ಧರ್ಮದಲ್ಲಿ ಬರುವವರನ್ನು ಸ್ವೀಕರಿಸುವದೂ, ಧರ್ಮದಲ್ಲಿಯ ತಂಟೆಗಳನ್ನು ನಿವಾರಿಸುವದೂ ಧರ್ಮದಲ್ಲಿ ಸರ್ವತೋಮುಖವಾಗಿ ದುಡಿಯುವದೂ, ಇವೇ ಮಠಗಳಲ್ಲಿಯ ಗುರುಗಳ ಕರ್ತವ್ಯಕರ್ಮಗಳಾಗಿವೆ. ಅಲ್ಲದೆ ಬೇಡಿಕೊಳ್ಳದೆ ನಿಷ್ಕಾಮವಾಗಿ ಕಾಯಕಮಾಡಿ ಮಠಗಳನ್ನು ಸ್ವಾವಲಂಬಿ ಮಠಗಳನ್ನಾಗಿ ಮಾಡುವದೂ ಕೂಡ ಅವಶ್ಯವಿದೆ. ಬೇಡಿಕೊಳ್ಳುವದೇ ಮಠಗಳ ಕಾಯಕಗಳಾಗಿಬಿಟ್ಟಿವೆ. ಶರಣರ ಕಾಯಕದ ತತ್ವವನ್ನು ವಿಚಾರಿಸಿರಿ. ಅವರ ದುಡಿಮೆ ಅವರ ಕೆಲಸ ಅವರ ಗಳಿಕೆಗಳನ್ನು ವಿಚಾರಿಸಿ ಮಠದವರೂ ಅದರಂತೆ ನಡೆದುಕೊಳ್ಳುವದು ಒಳ್ಳೇ ಶ್ರೇಯಸ್ಕರವಾಗಿರುವದು ಮಠದ ಸೊತ್ತೆಲ್ಲ ಸಾರ್ವಜನಿಕರದೇ ಆಗಿದೆ. ಹಾಳುಮಾಡದೆ ಜೋಪಾನ ಮಾಡಿಕೊಂಡು ಹೋಗುವದೂ ಸಹ ಇವರ ಕರ್ತವ್ಯವು.

ಇಂಥ ಕಾರ್ಯಗಳನ್ನು ಬಿಟ್ಟು ಈ ಮಠಗಳಲ್ಲಿ ಜಾತ್ರೆಗಳ ಮೇಲಾಟ ನಡೆದಂತಿದೆ. ಮೊದಲು ಊರೂರ ತಿರುಗಿ ಪಟ್ಟಿಮಾಡಿ ಬಹಳಷ್ಟು ಹಣ ಕೂಡಿಸುವರು. ಜಾತ್ರೆಮಾಡುವರು ಅಗ್ನಿಹಾಯುವರು ಕುಸ್ತಿಮಾಡಿಸುವದು ಹಂದೇಶಿ ನಾಗೇಶಿ ಹಾಡಕಿ ಹಚ್ಚುವರು. ಇದಕ್ಕೆ ತಕ್ಕಂತೆ ದೊಡ್ಡ ದೊಡ್ಡ ಜಾಹೀರ ಪತ್ರಿಕೆಗಳನ್ನು ತೆಗೆದು ಪ್ರಸಿದ್ಧಿಸುವರು. ಜನರು ನೆರೆದಿರುವರು. ಜಾತ್ರೆಯನ್ನು ನೋಡಬಂದವರು ಗುರುದಕ್ಷಣೆ ಇಟ್ಟಿಷ್ಟೇ ಜಾತ್ರೆಯ ಖರ್ಚಿಗಿಂತ ಹೆಚ್ಚು ತಂದುಕೊಡುವರು. ಜಾತ್ರೆಯಲ್ಲಿ ಎಲ್ಲ ತರದ ಜನಮೆಚ್ಚನ್ನು ಮಾಡುವರು. ನಾಟಕ ಸೀನೆಮಾಗಳಿಗೆ ಆಮಂತ್ರಣ ಕೊಡುವರು. ಸರಕಸ ತೊಟ್ಟಿಲ, ಚಿರಕಿಗಾಣ ಮೊದಲಾದವುಗಳೂ ನೆರೆಯುವವು. ಜನರು ನೆರೆಯುವರೆಂದು ವಿಟಸ್ತ್ರೀಯರೂ ನೆರೆಯುವರು. ಚಹಾದ ಅಂಗಡಿಗಂತೂ ಲೆಕ್ಕವಿಲ್ಲ. ಬೀಡಿ ಸಿಗಾರೇಟ ಪಾನಪಟ್ಟಿದವರಿಗೆ ಅಳತೆ ಇಲ್ಲ. ಎಲ್ಲ ಚಯನಿಪೌಲಿನ ವಡವೆಗಳೂ ನೆರೆಯುವವು. ತಮ್ಮ ಹಳ್ಳಿಯಲ್ಲಿ ಇಲ್ಲದ್ದು ಮಠಗಳ ಜಾತ್ರೆಗಳಲ್ಲಿ ಬಂದುನೆರೆಯುದದು. ಜಾತ್ರೆಯಲ್ಲಿ ಗದ್ದಲ ಗುದುಮುರಿಗೆ ಹಾಕಿ ಹಣವನ್ನು ಹಾಳುಮಾಡಿಕೊಂಡು ಚಯನಿಮಾಡಿ ಕೂಳಗೇಡಿ ನೀರಗೇಡಿಯಾಗಿ ಹೋಗುವರು. ಸಿಕ್ಕಲ್ಲಿ ಮಲಮೂತ್ರಗಳನ್ನು ಬಿಟ್ಟು ಊರನ್ನು ಹೊಲಸು ಮಾಡಿ ಹೋಗುವದರಿಂದ ಮಾರಿಕಾದೇವಿಯು ಜನರನ್ನು ಕೊಲೆ ಮಾಡುವಳು. ಮೊದಲೇ ನಮ್ಮಲ್ಲಿ ಜಾತ್ರೆಗಳು ಬಹಳ. ಪ್ರತಿ ಊರಿಗೂ

ಜಾತ್ರೆಗಳಾಗುವವು. ಮಠಗಳಿದ್ದ ಊರಗಳು ಮಾತ್ರ ಮೊದಮೊದಲು ಜಾತ್ರೆಯ ಉಪಟಳದಿಂದ ಉಳಿದಿದ್ದವು. ಅವುಗಳೂ ಕೂಡ ಈ ಜಾತ್ರೆಗಳ ಮೇಲಾಟದಲ್ಲಿ ಜಯಪತಾಕೆಯನ್ನು ಗಳಿಸಿರುವವು. ಮೊದಲಿನ ಜಾತ್ರೆಯಾಗುವ ಊರಗಳನ್ನು ಇವು ಈಗ ಹಿಂದೆ ಸರಿಸಿರುವವು. ಅವುಗಳಿಗಿಂತಲೂ ದೊಡ್ಡ ಜಾತ್ರೆಗಳಾಗುವವು. ಇದರಿಂದ ಧರ್ಮದಲ್ಲಿ ಏನು ಜಾಗ್ರತೆಯಾಗುವದು ಹೇಳಿ ನೋಡುವಾ. ಇಂಥ ಕೆಲಸಗಳನ್ನು ಕಡಿಮೆಮಾಡಿ ಯೋಗ್ಯ ದಿಶೆಯಲ್ಲಿ ಅಂದರೆ ಧರ್ಮ ಜಾಗ್ರತಿಯಾಗುವ ಜಾತ್ರೆಗಳನ್ನು ಮಾಡಬೇಕು. ಅಂದರೆ ಒಳ್ಳೇದಾಗುವದು.

ಅಕ್ಕನ ಬಳಗ ಬಸವನ ಬಳಗ ಶಿವಾನುಭವಮಂಟಪ ಮೊದಲಾದವುಗಳನ್ನು ಎಲ್ಲಕಡೆಗೂ ಅವಶ್ಯ. ಮಠಾಧೀಶರು ತೆರೆಯುವದು ಬಹು ಶ್ರೇಯಸ್ಕರವಾಗಿದೆ. ಇವುಗಳ ಮುಖಾಂತರ ಧರ್ಮ ಜಾಗ್ರತೆಯಾಗುವದು. ಈ ಕೆಲಸಗಳನ್ನು ಗುರುವರ್ಗದವರು ಈಗ ಮಾಡುವದು. ಹೆಚ್ಚಾಗಿ ಕಂಡುಬರುವದಿಲ್ಲ. ಈ ಎಲ್ಲ ಬಳಗಗಳನ್ನು ಬಹುತರ ಭಕ್ತವರ್ಗದವರೇ ನಡಿಸಿಕೊಂಡು ಹೋಗುವದೇ ಕಂಡುಬರುವದು. ಇನ್ನು ಗುರುವರ್ಗದವರು ಕಾದಾಟ ಕಚ್ಚಾಟ ಬಡಿದಾಟಗಳಲ್ಲಿಯೇ ಕಾಲಕಳೆಯುವರು. ಇಂಥ ಕೆಲಸಗಳಲ್ಲಿ ತಮ್ಮ ಶ್ರಮವನ್ನು ನಿಜವಾಗಿ ಖರ್ಚುಮಾಡಿದರೆ ಯಾವ ಶ್ರೇಯಸ್ಸುಂಟಾಗುವದು? ಹೀಗೆ ಮಾಡದೆ ತಮ್ಮ ಶ್ರಮವನ್ನು ಮೇಲಿನ ಈ ಕೆಲಸಗಳಲ್ಲಿ ವ್ಯಯಮಾಡಿದರೆ ಧರ್ಮ ಹಾಗೂ ದೇಶದ ಉದ್ಧಾರವಾಗುವದಿಲ್ಲವೆ? ಕೆಲವು ಮಠದವರು ಬಂದ ಜನರಿಗೆ ಇಳಿಯಲಿಕ್ಕೆ ಜಾಗಕೊಡುವದಿಲ್ಲ ಕುಡಿಯಲಿಕ್ಕೆ ಒಂದು ತಂಬಿಗೆ ನೀರನ್ನೂ ಸಹ ಕೊಡುವದಿಲ್ಲ. ಊಟಕೊಡುವದಂತೂ ದೂರೇ ಉಳಿಯಿತು. ತಾವು ಮಾತ್ರ ಹಿಟ್ಟಿನ ಭಿಕ್ಷಾ ಕಂತಿ ಭಿಕ್ಷಾ ಮೊದಲಾದ ಭಿಕ್ಷೆಗಳನ್ನು ಎತ್ತಿ ಯಾರಿಗೂ ಅನ್ನ ಕೊಡುವದಿಲ್ಲ. ಇಳಿಯಲಿಕ್ಕೆ ಬಂದವರಲ್ಲಿಯ ಸಾಮಾನುಗಳನ್ನು ಸಹ ಕದಿಯುವ ಮಠಗಳೇ ಇರುವವು. ಇಂಥ ಮಠಗಳಿಂದ ಇಂಥ ಗುರುಗಳಿಂದ ಸಮಾಜಕ್ಕೆ ಯಾವ ಉಪಯೋಗವಾಗುದು ವಿಚಾರಿಸಿರಿ? ಇಲ್ಲಿ ಶಾಸ್ತ್ರ ಪುರಾಣಗಳ ಸುದ್ದಿ ಇರುವದಿಲ್ಲ. ಹೀಗಾದರೆ ಧರ್ಮ ಜಾಗ್ರತೆ ಹೇಗಾಗುವದು? ಭಕ್ತರೆಂತು ಸುಧಾರಿಸುವರು ಗುರುಗಳೆಂದರೆ ಊಟ ಹೊಡೆದು ದಕ್ಷಣಿ ತೆತ್ತುವ ನಾಕೆಗಳಾಗಿವೆ.

ಈ ವೃತ್ತಿ ಹೋಗಬೇಕು. ಸರ್ವರೂ ಮಠಗಳ ಮಹಾ ಉದ್ದೇಶವನ್ನು ವಿಚಾರಿಸಿರಿ. ನಮ್ಮಲ್ಲಿ ಇದ್ದಷ್ಟು ಮಠಗಳು ಎಲ್ಲಿಯೂ ಇಲ್ಲ. ಪ್ರತಿ ಊರಿಗೂ ಒಂದಲ್ಲೊಂದು ತರದ ಮಠಗಳಿರುವದು ಕಂಡುಬರುವದು. ಅವೆಲ್ಲ ತಮ್ಮ ಸರಿಯಾದ ಕರ್ತವ್ಯಪಾಲನೆ ಮಾಡಿದರೆ ಧರ್ಮವು ಕೂಡಲೇ ಬಹುಮುಖ ವಾಗಿ ಬಹು ವೇಗವಾಗಿ ಏಳ್ಗೆ ಹೊಂದುವದರಲ್ಲಿ ಸಂದೇಹವಿಲ್ಲ. ಕುಟಿಲ ತಂತ್ರಗಳ ಮಠಗಳಿಂದ ಯಾವ ಉಪಯೋಗವಾಗುವದು ಹೇಳಿ ನೋಡುವಾ. ಎಲ್ಲರಲ್ಲಿ ಸುಧಾರಣೆ ನಡೆದಿದೆ. ಹರಿಜನ ಹರಣ ಶಿಕಾರಿ, ಲಮಾಣಿ ಗುಡ್ಡಗಾಡ ಮೊದಲಾದ ಜನರು ಬಹು ವೇಗವಾಗಿ ಮುಂದೆ ಬರುವ ಕಾಲಕ್ಕೆ ನಮ್ಮಲ್ಲಿಯ ಕೆಲವು ಮಠಗಳು ಬಹುಹಿಂದೆ ಬಿದ್ದಿವೆ. ಇನ್ನೂ ಹಳೆ ಹರುಕ ಕೌದಿಯನ್ನೇ ಕಿತ್ತಿತೀಡುವದು ಬಹು ಶೋಚನೀಯವೇ ಸರಿ. ಹೀಗಾದರೆ ಧರ್ಮವೆಲ್ಲಿ ಉಳಿಯಬೇಕು ಎಂಥ ಗುರುಗಳೋ ಅಂಥ ಶಿಷ್ಯರು ಉದಯ ವಾಗಿ ಧರ್ಮ ಸಮಾಜಗಳು ಕೆಳಗುಟ್ಟಕ್ಕೆ ಇಳಿದಿರುವವು. ಈ ಸ್ಥಿತಿಯು ಹೋಗಬೇಕಾದರೆ ಮಠಗಳೂ ಮಠಾಧೀಶರೂ ಮೊದಲು ಜಾಗ್ರತರಾಗಬೇಕು ಸುಧಾರಿಸಬೇಕು ಧರ್ಮ ಪ್ರವೃತ್ತರಾಗಬೇಕು. ಸಾಧನೆ ಸಿದ್ಧಿಗಳನ್ನು ಪಡೆದುದು ಗುರುಗಳಾಗಬೇಕು. ಏನೂ ಇಲ್ಲದೆ ಅಧಿಕಾರಿಗಳಾಗಿ ಕೂತ್ರಜಾದು ಭಕ್ತರಿದ್ದು ಯೋಗ್ಯರಾಗದ್ದರೆ ಅವರಿಗೆ ಗುರುತ್ವವು ಬಂದಿದ್ದರೆ ಆ ಸ್ಥಾನಕ್ಕೆ ಅವರನ್ನು ಕೂಡ್ರಿಸಬೇಕು. ಅದಕ್ಕೆ ತಕ್ಕಂತೆ ಮಾನವನ್ನಣೆ ಕೊಡಬೇಕು. ಅಂದರೆ ಸಮಾಜದಲ್ಲಿ ನಿಜವಾಗಿ ಜಾಗ್ರತವಾಗುವದರಲ್ಲಿ ಸಂದೇಹವಿಲ್ಲ. ಈಗಿನ ಗುರುತ್ವದ ಗುತ್ತಿಗೆಯನ್ನು ಮೊದಲು ತೆಗೆದು ಹಾಕಬೇಕು. ಶರಣರ ಉದಾತ್ತ ವಿಶಾಲ ತತ್ವಗಳನ್ನು ಬಳಿಕೆಯಲ್ಲಿ ತರಬೇಕು. ಬರೇ ಓದಿ ಬಿಡಬಾರದು. ಇದರಿಂದ ಏನೂ ಪ್ರಯೋಜನವಾಗಲಾರದು. ಗುರುಗಳಿಗೆ ಬೇಕಾಗುವ ಸಕಲ ವಿದ್ಯೆಗಳನ್ನು ಕಲಿಸುವ ಕೇಂದ್ರಗಳನ್ನು ತೆರೆಯಬೇಕು. ಅದರಲ್ಲಿ ಸರ್ವ ಜಾತಿಯ ಜನರಿಗೆ ಪ್ರವೇಶವಿರಬೇಕು. ಯೋಗ ಸಾಧನೆಯ ಪಾಠಗಳನ್ನು ಕೊಟ್ಟು ಯೋಗ್ಯತೆ ಪಡೆದ ಪ್ರೌಢರನ್ನೇ ಮಠಾಧಿಕಾರಿಗಳನ್ನಾಗಿ ಮಾಡಿದರೆ ಸಮಾಜಕ್ಕೆ ನಿಜವಾದ ಕಲ್ಯಾಣವಾಗುವದು. ಈಗ ಮುಂದುವರಿದವರು ತಮ್ಮಷ್ಟಕ್ಕೆ ತಾವೇ ಯುತ್ನಿಸಿದ್ದರ ಪರಿಣಾಮ ಹೊರತು ಬೇರೆ ಇಲ್ಲ. ಮಠಗಳಲ್ಲಿ ಮೊದಲು ಕ್ರಾಂತಿಯ ಕಿಡಿಯು ಪುಟವಾದ ತರುವಾಯ ಅದು ಹಿಂದಿನಿಂದ ಸಮಾಜ ನಾಡು ದೇಶಗಳಲ್ಲಿ ಪ್ರಸಾರವಾಗುವದ

ರಲ್ಲಿ ಸಂದೇಹವಿಲ್ಲ. ಶರಣರ ಕಾಲಕ್ಕೆ ಆಗಿನ ಮಠಗಳೆಲ್ಲ ಕ್ರಾಂತಿಯ ಮಠಗಳೆಂದರೆ ಕಾಂಗ್ರೆಸ ಭುವನಗಳೇ ಆಗಿದ್ದವು ಅದನ್ನೇ ನಾವು ಸ್ಥಾಪಿಸ ಬೇಕು. ಧರ್ಮ ಸಮಾಜ ದೇಶಗಳ ಕೀಲಿಕೈಯನ್ನು ಈ ಪ್ರಕಾರ ಮಠಗಳು ಯುಕ್ತಿಸಿ ಪಡೆಕೊಂಡರೆ ಸಮಾಜಕ್ಕೆ ಬಹುಮುಖದ ಸುಖಸಿಗುವದು.

---

## ಕಾಯಕ ಕಲ್ಪವಲ್ಲರಿ.

(ಲೇಖಕ:— ಶ್ರೀ. ಮ. ಮಲ್ಲಪ್ಪ ಜ್ಞಾನಮಂದಿರ, ಹಲಗೂರು)

ಇಂಗ್ಲೀಷ ವಿದ್ಯಾಭ್ಯಾಸಂಗವು ಮುಂದುವರಿದಂತೆಲ್ಲ ನಮ್ಮವರಲ್ಲಿ ಒಂದು ತೆರನ ಅಧಿಕಾರ ಧೋರಣೆಯು ಮೇಲ್ಗೈಯಾಗಿ ಕಾಣಬರುತ್ತದೆ. ಪರರನ್ನು ತನ್ನ ಅಧೀನರನ್ನಾಗಿ ಮಾಡಿಕೊಂಡು ಅವರ ಮೇಲೆ ತನ ಅಧಿಕಾರವನ್ನು ಚಲಾಯಿಸಬೇಕು ಎಂಬ ಒಂದು ರಾಕ್ಷಸೀ ಮನೋಭಾವವು ಅಧಿಕಾರಕ್ಕೆ ಬರುವವರ ಮನಸ್ಸಿನಲ್ಲಿ ಮನೆಮಾಡಿಕೊಂಡು, ತತ್ಪರಿಣಾಮವಾಗಿ ನಾಡಿಗೂ, ಜನತೆಗೂ ಹಿತಕ್ಕೆ ಬದಲಾಗಿ ಹಾನಿಯೇ ಉಂಟಾಗಿ, ರಾಷ್ಟ್ರವು ಸಂತೋಷದಲ್ಲಿ ಮೀಯಲು ಅವಕಾಶವಿಲ್ಲವಾಗಿ ದುಃಖದಲ್ಲಿ ತೊಯು ವಂತಾಗಿದೆ. ಭಾವೀ ಜೀವನದ ಮೊಳಕೆಗಳು ಬಾಲ್ಯದಲ್ಲಿಯೇ ಅಂಕುರಿಸಿ ಬಳೆಯುವ ಸಹಜವಾದ ಪರಿಸ್ಥಿತಿಯಲ್ಲಿ ಮಕ್ಕಳನ್ನು ಬಳೆಸಿದರೆ ಮುಂದಿನ ಸುವ್ಯವಸ್ಥಿತವಾದ ಜನಾಂಗವಾಗಲೂ ಯಾವ ಸಂದೇಹವೂ ಇಲ್ಲವಾಗಿದೆ. ಮನಸ್ಸಿಗೆ ಬೇಕಾದ ಸ್ವಾಭಾವಿಕ ವಿಷಯಗಳನ್ನು ಶಿಕ್ಷಣವು ಒದಗಿಸಬೇಕಲ್ಲದೆ ಶರೀರಕ್ಕೂ ನೈಸರ್ಗಿಕವಾದ ಅವಶ್ಯಕತೆಗಳನ್ನು ಪರಿಪೂರ್ಣಗೊಳಿಸಬೇಕು. ವ್ಯಕ್ತಿಗೆ ತನ್ನ ಸುತ್ತ ಮುತ್ತಣ ಸಮಾಜ ಹಾಗೂ ಪ್ರದೇಶಗಳ ಸಂಗಡ ಸರಿಹೋಗುವಂತೆ ಬಾಳಲು ಕಲಿಸುವಂತಿರಬೇಕು. ತನ್ನ ವೇತನಗೆಂದು ಸ್ವಾರ್ಥಪರಾಯಣವಾಗುವಂತೆ ವುದರ ಜೊತೆಗೆ ಲೋಕಸೌಖ್ಯಕ್ಕೆ ಗಮನಕೊಡದಿರುವಂತಹ ಶಿಕ್ಷಣವು ಸಿಕ್ಕಿರುವುದೇ ನಾಡಿನ ಅವನತಿಗೆ ಆಕರವಾಗಿದೆ. ರಾಷ್ಟ್ರೋದ್ಧಾರಕರು, ಭಾಷಣಗಾರರು, ಸಮಾಜಸುಧಾರಕರು ಬರೀ ಭಾಷಣಗಳ ಪ್ರಭಾವವನ್ನು ಮಾತ್ರವೇ ಪ್ರಸರಿಸುತ್ತಿದ್ದಾರೆಯೇ ಹೊರತು

ಜನತೆಯಲ್ಲಿ ಸಂತುಷ್ಟಿ, ಸಹನೆ, ಶಾಂತಿಬೀಜವನ್ನು ಮಾತ್ರ ಬಿತ್ತುತ್ತಿಲ್ಲ. ಮಾತಿಗಿಂತ ಕೃತಿಯಲ್ಲಿ ತೊಡಗಿದರೆ ಸಾಧ್ಯ ಅಸಾಧ್ಯಗಳನ್ನು ಮನಗಂಡು ಮಾತನಾಡಿದರೆ ರಾಷ್ಟ್ರ ಕಲ್ಯಾಣವಾದೀತು. ಸಕಲರೂ ಕರ್ತವ್ಯನಿಷ್ಠರಾಗಿ 'ಕಾಯಕವೇ ಕೈಲಾಸ' ತತ್ವವನ್ನು ತಿಳಿದು ಕಾರ್ಯತತ್ಪರರಾಗುವುದರಲ್ಲಿ ಈ ರಾಷ್ಟ್ರಕಲ್ಯಾಣವು ಅಡಕವಾಗಿದೆ.

ಮನುಷ್ಯನಿಗೆ ತನ್ನ ಭವಿಷ್ಯವನ್ನು ಭವ್ಯವಾಗಿ ರೂಪಿಸಿಕೊಳ್ಳಲು ಸಹಾಯಕವಾಗಿ ಈ ಸೌಂದರ್ಯ ಶರೀರಕ್ಕೆ ನೋಡಲು ಕಣ್ಣು, ಕೇಳಲು ಕಿವಿ, ದುಡಿಯಲು ಕೈ, ನಡೆಯಲು ಕಾಲು, ಯೋಚಿಸಲು ಮಿದುಳು ಇದ್ದು ಮಾನವನು ಸೋಮಾರಿತನದಿಂದ ಕೆಲಸರಹಿತನಾಗಿ ಕಾರ್ಯಶೂನ್ಯನಾಗಿ ನಿಂತರೆ ಆತನು ನಡೆವೆಣವೇ ಸರಿಯು. ಪ್ರತಿಯೊಂದು ಅಂಗಾಂಗವೂ ಕಾರ್ಯ ಪ್ರವೃತ್ತವಾದರೆ ಅವುಗಳಿಗೆ ಒಂದುಬಗೆಯ ಸಾಮರ್ಥ್ಯವು ಬರುತ್ತದೆ. ಕಾರ್ಯನಿರ್ವಹಣೆಯಿಂದ ಶರೀರ ಬೆಳೆವಣಿಗೆ, ಹಸಿವುಪರಿಹಾರ, ಬುದ್ಧಿಸಂವ ರ್ಧನೆ, ಆತ್ಮೋನ್ನತಿಯು ಆಗುತ್ತದೆ. ಪವಿತ್ರವಾದ ಉದ್ದೇಶವನ್ನಿಟ್ಟು ಕೊಂಡಿರುವ ಕಾರ್ಯವೇ ಕಾಯಕವು. ಬರೀ ಉದರಪೋಷಣೆಯನ್ನು ಮಾಡು ವುದು ಕಾಯಕವಲ್ಲ. ಸತ್ಯ ಪರಿಶುದ್ಧವಾದ ವಿಚಾರ, ಆಚಾರ, ಕ್ರಿಯೆ, ಶ್ರಮವೇ ಕಾಯಕವು. ಕೆಲಸದ ಪ್ರತಿಫಲವು ಕೈಲಾಸ. ಹಿಂಸೆ, ವಂಚ ಕತನ ಇಲ್ಲದಿರುವ ಕೆಲಸವೇ ಕಾಯಕವು. ಕಾಯಕವು ಸುಂದರ ಮಾನವ ಜೀವನವನ್ನು ಸಾರ್ಥಕಗೊಳಿಸುತ್ತದೆ. ಮನುಷ್ಯನಿಗೆ ಸಂತೋಷವನ್ನೂ, ತೃಪ್ತಿಯನ್ನೂ, ಯೋಗಶಕ್ತಿಯನ್ನೂ ಕಾಯಕವು ಕೊಡುತ್ತದೆ. ಕಾಯಕ ವನ್ನು ಕೈಗೊಳ್ಳುವುದರಿಂದ ನಾವು ಅತಿ ಮಾನವರಾಗಿ ದೈವೀಶಕ್ತಿಯ ಸಂದ ರ್ಶನವನ್ನು ಅನುಭವಿಸಿ, ನಿತ್ಯ ಸತ್ಯ ಅಮಿತಾನಂದ ಜೀವಿಗಳಾಗಿ ಸ್ವರ್ಗ ಸುಖವನ್ನು ಕಂಡು ಕಾಯಕವೇ ಕೈಲಾಸವಾಗುವುದನ್ನು ಅನುಭವಿಸುತ್ತೇವೆ.

ಕಾಯಕವನ್ನು ಕೈಗೊಳ್ಳುವುದರಿಂದ ಸಮಾಧಿ ಸ್ಥಿತಿಯು ಪ್ರಾಪ್ತವಾ ಗುತ್ತದೆ. ಆತ್ಮಾನಂದವು ತಾನೇತಾನಾಗಿ ಕರಗತವಾಗುತ್ತದೆ. ಕಾಯಕದಲ್ಲಿ ಉಚ್ಚನೀಚ ಭಾವವಿಲ್ಲ. ಪ್ರತಿಯೊಂದು ಕಾಯಕವನ್ನು ಈಶ್ವರಾತ್ಮಕ ದೃಷ್ಟಿ ಯಿಂದ ನೋಡಬೇಕು. ಶಿವಶರಣರು ತಮ್ಮ ಸತ್ಯ, ಪರಿಶುದ್ಧ, ಪವಿತ್ರ ಕಾಯಕದ ಮೂಲಕವೇ ಪರಶಿವನಲ್ಲಿ ಐಕ್ಯತೆಯನ್ನು ಪಡೆದರು. ಕಾಯಕ ಮಾಡುವರ ಕಾಯವೇ ಕೈಲಾಸವು. ಶಿವಶರಣರು ತಮ್ಮ ಶಿವಾನುಭವ ಕ್ರಿಯೆಯಲ್ಲಿ ಜೀವನದಲ್ಲಿ ಕಾಯಕಕ್ಕೆ ಶ್ರೇಷ್ಠ ಸ್ಥಾನವನ್ನು ಇಟ್ಟದ್ದಾರೆ.

ಕಾಯಕ ಮಾಡಿಯೇ ಮೋಕ್ಷವನ್ನು ಸಾಧಿಸಬೇಕೆಂದು ನಿಯಮವಿದೆ. ಕಾಯಕಕ್ಕೆ ಶಿವಶರಣರು ಮಹತ್ವಕಾರಿ ಸ್ಥಾನವನ್ನು ಕೊಟ್ಟಿದ್ದು ಒಂದು ಕ್ರಾಂತಿಕಾರಕ ತತ್ವವಾಗಿದೆ. ಶಿವಶರಣರು ಎಂಬ ಪುಸ್ತಕದಲ್ಲಿ ಈ ರೀತಿ ವಿವರವಿದೆ.

ಒಕ್ಕಲುತನ ಮಾಡುವವರು:— ಅಜಗಣ್ಣ, ಇಳಿಹಾಳ ಬೊಮ್ಮಣ್ಣ, ಒಕ್ಕಲು ಮುದ್ದಯ್ಯ, ಮುಕ್ತಾಯಕ್ಕ, ಏಲೇಶಕೇತಯ್ಯ, ಬಡಿಹೋರಿ ಬ್ರಹ್ಮಯ್ಯ, ಬಾಹೂರು ಬ್ರಹ್ಮಯ್ಯ, ಮಾರಗೌಡ. ರೆಮ್ಮವ್ವೆ.

ಕಟ್ಟಿಗೆ ಮತ್ತು ಕುಳ್ಳು ಮಾರುವವರು।— ಮೋಳಿಗೆಯ ಮಾರಯ್ಯ, ಸಪ್ಪೆಯಲ್ಲಮದೇವ, ಅಣ್ಣ ಉದೇವಿ, ಮಾದಾರ ಚನ್ನಯ್ಯ,

ರಾಟಿಯ ಕಾಯಕದವರು:— ಅಮ್ಮವ್ವೆ ಮತ್ತು ಕದಿರು ರೆಮ್ಮವ್ವೆ.

ನೆಯ್ಗೆಯ ಕಾಯಕದವ:— ಅಮುಗಿದೇವ, ದೇವರದಾಸಿಮಯ್ಯ.

ಓಲೆಗಳನ್ನು ಮಾರುವವರು:— ಓಲೆಯ ಶಾಂಕಯ್ಯ ಮತ್ತು ನಿಜಲಿಂಗ ಚಿಕ್ಕಯ್ಯ.

ಕುರುಬನು:— ಗೊಲ್ಲಾಳ.

ಹಗ್ಗ ಮಾಡುವವನು:— ನುಲಿಯ ಚಂದಯ್ಯ.

ದೋಸೆ ಮಾಡುವವಳು: — ಪಿಟ್ಟವ್ವೆ.

ಗಾಣಿಗನು:— ಮಾರುಡಿಗೆಯ ನಾಚಯ್ಯ.

ಮೇದರರು:— ಮೇದಾರ ಕೇತಯ್ಯ, ಮೊರನ ವೇಮಯ್ಯ.

ಅಕ್ಕಸಾಲಿಗರು:—ವರದಾನಿ ಗುಡ್ಡಮ್ಮ, ಹಾವಿನಹಾಳ ಕಲ್ಲಯ್ಯ.

ಕುಂಬಾರನು:— ಕುಂಬಾರ ಗುಂಡಯ್ಯ.

ಬತ್ತ ಕುಟ್ಟುವವಳು:— ಕೊಟ್ಟಣದ ಸೋಮವ್ವೆ.

ದನಕಾಯುವರು:— ತೆಲುಗೇಶ ಮಸಣಯ್ಯ, ಶಂಕಿತೊಂಡಿ, ಗೋರಕ್ಷ.

ಚರ್ಮ ಹದ ಮಾಡುವವ:— ಮಾದಾರ ಧೂಳಯ್ಯ.

ನೀರುಹಾಕುವವ:— ಅಗ್ಗವಣಿಯ ಹೊನ್ನಯ್ಯ. ಅಲ್ಲದೆ ರಾಜ್ಯಾಧಿಕಾರಿಗಳೂ ಅವರಲ್ಲಿ ಇದ್ದಾರೆ.

ಅಧಿಕಾರಿಗಳು:— ಗುಪ್ತಮಂಚಣ್ಣ, ತಂಗಟೂರು ಮಾರಯ್ಯ, ರಾಯಸದ ಮಂಚಣ್ಣ, ಸೊಡ್ಡಳ ಬಾಚರಸ.

ಗ್ರಾಮದ ಗೌಡ:— ಮುಸುಡಿಯ ಚೌಡಯ್ಯ.

ವ್ಯಾಪಾರಸ್ಥರು:— ಆದಯ್ಯ, ಬಳ್ಳೇಶ ಮಲ್ಲಯ್ಯ, ಶಿವಪ್ರಿಯನಾಚಿ."

ಪ್ರತಿಯೊಂದು ಮಾನವ ಜೀವಿಯೂ ತಮ್ಮ ತಮ್ಮ ಶರೀರವನ್ನು ದಂಡಿಸಿ ಬಂದದ್ದನ್ನು ಶಿವಾರ್ಪಣಭಾವದಿಂದ ಪ್ರತಿದಿನವೂ ಸೇವಿಸುತ್ತಿರುವುದೇ ನಿಜವಾದ ಶುದ್ಧ ಕಾಯಕವು. ದೇಹವನ್ನು ದಂಡಿಸಿ ಒದಗಿದಷ್ಟನ್ನೇ ಮಾತ್ರ ಉಪಯೋಗಿಸಬೇಕು. ಆಯ್ದಕ್ಕಿ ಮಾರಯ್ಯನ ಕಥೆಯೇ ಇದಕ್ಕೆ ನಿದರ್ಶನವಾಗಿದೆ. ಕಾಯಕದಲ್ಲಿ ಏಕ ಮನಸ್ಸಿರಬೇಕು.

"ಕಾಯಕದಲ್ಲಿ ನಿರತನಾದೊಡೆ ಗುರುದರುಶನವಾದರೂ ಮರೆಯಬೇಕು; ಲಿಂಗಪೂಜೆಯಾದರೂ ಮರೆಯಬೇಕು. ಜಂಗಮ ಮುಂದಿದ್ದಡೆಯಾದರೂ ಹಂಗುಹರಿಯಬೇಕು. ಕಾಯಕವೇ ಕೈಲಾಸವಾದಕಾರಣ ಅಮಳೇಶ್ವರ ಲಿಂಗವಾಯಿತ್ತಾದರೂ ಕಾಯಕದೊಳಗು."

ಕೈಕೊಂಡ ಕಾಯಕವು ಸತ್ಯ ಶುದ್ಧವಾಗಿರುವುದಲ್ಲದೆ ನಿತ್ಯ ಶುದ್ಧವೂ ನಿಶ್ಚಲವೂ ಆಗಿರಬೇಕು.

"ಸತ್ಯಶುದ್ಧ ಕಾಯಕದಲ್ಲಿ ಚಿತ್ತವಿಚ್ಛಂದವಾಗದಿರಬೇಕು. ನೇಮದ ಕೂಲಿಯ ಬಿಟ್ಟು ಹೇಮದಾಸೆಗೆ ಕಾಮಿಸಿ ದ್ರವ್ಯವ ಹಿಡಿದರೆ ತಾ ಮಾಡುವ ಸೇವೆ ನಷ್ಟವಯ್ಯಾ. ಈ ನಿನ್ನ ಸೇವೆ ನನಗೆ ನನ್ನ ಪ್ರಸಾದಕ್ಕೆ ಚಂಡೇಶ್ವರ ಲಿಂಗಕ್ಕೆ ಪ್ರಾಣವಯ್ಯಾ."

ಆಶೆಯನು ಅಳಿದು ಸತ್ಯ ಶುದ್ಧ ನಿಶ್ಚಲ ಮನಸ್ಸಿನಿಂದ ಸತ್ಕ್ರಿಯೆಯಾಚರಣೆಯು ಜ್ಞಾನದಿಂದ ಮಾಡಿದುದೇ ಸಹಜ ಸತ್ಯಶುದ್ಧ ಕಾಯಕವು. ನಾವು ಆತ್ಮೋನ್ನತಿಯ ಹಾದಿಯನ್ನು ಹಿಡಿಯಬೇಕಾದರೆ ಪರರನ್ನು ಬೇಡಿ ಪರಾವಲಂಬಿಯಾಗದೆ ಸ್ವತಂತ್ರ ಜೀವನಕ್ಕೆ ಯಾವುದಾದರೊಂದು ಕಾಯಕವನ್ನು ಕೈಕೊಳ್ಳಬೇಕು. ಭಿಕ್ಷೆ ಬೇಡುವುದು ಅತ್ಯಂತ ನೀಚ ಕೆಲಸವು.

"ಬ್ರಹ್ಮಕ್ಕೆ ಬಾಯ್ದೆರೆದು ಮಾತನಾಡಿ ಪರಬೊಮ್ಮದ ವೇಷವ ನುಡಿದು ಒಮ್ಮನ ಅಂಬಲಿಯನಿಕ್ಕೆಂದು ಹಲುಬುತ ಹೊಲಬುಗೆಟ್ಟವರ ಕಂಡು ಅವರಿಗೆ ಫಲವಿಲ್ಲವೆಂದ ನಮ್ಮ ಅಂಬಿಗೆರಚೌಡಯ್ಯ."

ಕಾಯಕದಿಂದ ಜೀವನವು ಸುವ್ಯವಸ್ಥಿತವಾಗುತ್ತದೆ.

"ನೇಮವ ಮಾಡಿಕೊಂಡು ಭಕ್ತರ ಭವನಂಗಳ ಹೊಕ್ಕು ಕಾಯಕವ ಬಿಟ್ಟು ಹೊನ್ನು ಬೇಡಿಹನೆಂದರೆ ಕಷ್ಟವಲ್ಲವೇ? ಆಗುಣ ಅಮಳೇಶ್ವರಲಿಂಗಕ್ಕೆ ದೂರ."

ಕಾಯಕಕಲ್ಪವಲ್ಲರಿಯಿಂದ ಸರ್ವಪರಿಹಾರವು ಸಿಗುತ್ತದೆ.

ಗುರುವಾದರೂ ಕಾಯಕದಿಂದಲೇ ಜೀವನ್ಮುಕ್ತಿ. ಲಿಂಗವಾದರೂ ಕಾಯಕದಿಂದಲೇ ಶಿಲೆಯ ಕುಲಹರಿಯುವುದು. ಜಂಗಮವಾದರೂ ಕಾಯಕದಿಂದಲೇ ವೇಷದ ಪಾಶವು ಹರಿಯುವುದು. ಇದು ಚನ್ನಬಸವಣ್ಣ ಪ್ರಿಯ ಚಂದೇಶ್ವರಲಿಂಗವ ಅರಿವು. "

ಒಬ್ಬರಿಗೆ ತೊಂದರೆ ಪಡಿಸದೆ, ಸಟೆಯನ್ನು ನುಡಿಯದೆ ತನ್ನದಲ್ಲದ ದ್ರವ್ಯಕ್ಕೆ ಕೈಹಾಕದೆ ಕೈಗೊಳ್ಳುವ ಕಾಯಕವು ಸರ್ವ ಶ್ರೇಷ್ಠವು. ಕಾಯಕಕ್ಕೆ ಸತ್ಕ್ರಿಯೆಯಾಚರಣೆಯೇ ಮೂಲವಾಗಿರುತ್ತವೆ. ಇದೇ ಜ್ಞಾನಕ್ಕೆ ಮೂಲ ಸಾಧನೆಯಾಗಿದೆ.

"ಕ್ರಿಯಾಮಥನವಿಲ್ಲದೆ ಕಾಣಬಂದುದೇ ಇಕ್ಷುವಿನೊಳಗಣ ಮಧುರ. ಕ್ರಿಯಾಮಥನವಿಲ್ಲದೆ ಕಾಣ ಬಂದುದೇ ತಿಲದೊಳಗಣ ತೈಲ. ಕ್ರಿಯಾಮಥನವಿಲ್ಲದೆ ಕಾಣಬಂದುದೇ ಕ್ಷೀರದೊಳಗಣ ತುಪ್ಪ. ಕ್ರಿಯಾಮಥನವಿಲ್ಲದೆ ಕಾಣಬಂದುದೇ ಕಾಷ್ಠದೊಳಗಣ ಅಗ್ನಿ. ಇದುಕಾರಣ ಗುಹೇಶ್ವರಲಿಂಗವ ತನ್ನೊಳಪರಿದೆನೆಂಬ ಮಹಾಂತಂಗೆ ಸತ್ಕ್ರಿಯಾಚರಣೆಯೇ ಸಾಧನೆ ಕಾಣಿಭೋ. "

ಕಾಯಕ ಕಲ್ಪವಲ್ಲರಿಯನ್ನು ಆಶ್ರಯಿಸಿದಾತನಿಗೆ ದರಿದ್ರ, ದೌರ್ಬಲ್ಯ, ದರ್ಪದಾಂಗುಡಿ ಕನಸೇ ಸರಿಯು ಇಂದು ನಮಗೆ ಸ್ವಾತಂತ್ರ್ಯವು ಸಿಕ್ಕಿದೆ. ಸ್ವತಂತ್ರ ಪ್ರಜೆಗಳಿಗೆ ಸ್ವತಂತ್ರವಾದ ಶಿಕ್ಷಣವು ಅವಶ್ಯಕವಾಗಿದೆ. ನಮ್ಮ ನಾಯಕರು ಸುಧಾರಿತ ಶಿಕ್ಷಣದಲ್ಲಿ ಕಾಯಕ ಕಲ್ಪವಲ್ಲರಿಯ ಸ್ಥಾನವನ್ನು ಭದ್ರಪಡಿಸಲು ಶ್ರಮಿಸುತ್ತಿದ್ದಾರೆ. ಕಾಯಕ ಕಲ್ಪವಲ್ಲರಿಯ ಬೆಲೆಯು ಬಾಲ್ಯದಲ್ಲಿಯೇ ಚೆನ್ನಾಗಿ ವಿದ್ಯಾರ್ಥಿಗಳಿಗೆ ಮಂದಟ್ಟಾಗುವಂತೆ ಯೋಜನೆಯನ್ನು ಹೂಡಿದ್ದಾರೆ. ಈ ಕ್ರಿಯಾತ್ಮಕ ಶಿಕ್ಷಣವು ಹೊರಗಿನ ನಾಯಕರನ್ನೂ ಸಹ ಬೆರಗುಗೊಳಿಸಿ ನಮ್ಮ ನಾಡು ನಮ್ಮದೇ ಆದ ವೈಶಿಷ್ಟತೆಯಿಂದ ಪ್ರಕಾಶಗೊಳ್ಳುವಂತೆ ಆಗಿರುವುದು ನಮ್ಮೆಲ್ಲರ ಭಾಗ್ಯವೇ ಸರಿಯು.

# ಜನ್ಮೋದ್ಧಾರ.

(ಲೇಖಕರುः— ಶ್ರೀ ಬಸಪ್ಪ ಚನ್ನಪ್ಪ ಪಟ್ಟೇದ, ಹುಟಿಮುರಿ. )

ಮಾನವ ಜನ್ಮಕ್ಕೆ ಬಂದ ಪ್ರತಿಯೊಬ್ಬನಿಗೆ ಜನ್ಮಸಾಫಲ್ಯವು ಬೆನ್ನು ಹತ್ತಿರುತ್ತದೆ. ಅವನು ಸಾಫಲ್ಯವನ್ನು ಹೊಂದದಿದ್ದರೆ, ಅವನ ಜನ್ಮವೇ ವ್ಯರ್ಥವಾಗಿ ಬಿಡುವುದು. ಅವನು ಯಾವುದೇ ಧರ್ಮದವನಿರಲಿ, ಜಾತಿಯವ ನಿರಲಿ, ಸ್ತ್ರೀ ಇರಲಿ, ಪುರುಷನಿರಲಿ; ಉದ್ಧಾರವನ್ನು ಹೊಂದದೆ ಹೋದರೆ ಅವನಿಗೆ ಭವಚಕ್ರವು ಬೆನ್ನುಹತ್ತಿ ಯಾವಾಗಲೂ ದುಃಖ ಸೋಸಬೇಕಾಗು ವದು. ಅವನು ಶ್ರೀಮಂತನೇ ಇರಲಿ, ಬಡವನೇ ಇರಲಿ, ರಾಜನೇ ಇರಲಿ, ಬಲ್ಲಿದನನೇ ಇರಲಿ, ಪಾಮರನೇ ಇರಲಿ, ಯಾರನ್ನೂ ನೋಡದೆ, ಭವ ಚಕ್ರವು ಅವನನ್ನು ಒಂದೇ ಸವನೆ ನರಕಯಾತನೆಯಲ್ಲಿ ಕೆಡವಿ, ತಿಕ್ಕಿ ಮುಕ್ಕಿಸುವದು.

ನಮ್ಮ ಲಿಂಗವಂತರಲ್ಲಿ, ಭಕ್ತರು ಅಯ್ಯಗಳು ಎಂಬೆರಡು ಭೇದಗಳು ಬಹುಕಾಲದಿಂದ ನಡೆಯುತ್ತ ಬಂದಿರುವಷ್ಟೆ! ಅಯ್ಯಗಳು " ನಾವು ಶ್ರೇಷ್ಠರು ಪವಿತ್ರರು, ಭಕ್ತರನ್ನು ಉದ್ಧರಿಸುವವರು, ಅವರು ನಮ್ಮನ್ನು ಯಾವಾ ಗಲೂ ಸಂತುಷ್ಟ ಪಡಿಸಬೇಕು; ನಮಗೆ ಬೇಕಾದುದನ್ನೆಲ್ಲ ಅನಾಯಾಸ ವಾಗಿಯೇ ಕೂತಲ್ಲಿಯೇ ತಂದು ಕೊಡಬೇಕು. ನಾವು ಅವರಿಗೆ ಆಶೀರ್ವಾದ ಮಾಡಿದರೆ ಸಾಕು, ಅವರು ಜನ್ಮೋದ್ಧಾರವನ್ನು ಸಹಜವಾಗಿಯೇ ಹೊಂದು ವರು. ನಮಗೆ ಸ್ವತಃ ಉದ್ಧಾರ ಹೊಂದುವ ಶಕ್ತಿ ನಮ್ಮಲ್ಲಿ ಸ್ವಾಭಾವಿಕ ವಾಗಿರುತ್ತದೆ. ನಾವು ಶಿವನ ಉತ್ತಮಾಂಗದಿಂದ ಹುಟ್ಟಿದ್ದೇವೆ. " ಇತ್ಯಾದಿ ಅನೇಕ ಕಲ್ಪನೆಗಳನ್ನು ಮಾಡಿಕೊಂಡಿದ್ದಾರೆ.

ಆದರೆ ನಿಜವಾಗಿ ಇಂಥ ಕಲ್ಪನೆಗಳಿಂದ ಅವರ ಉದ್ಧಾರವಾಗುವದೇ? ಎಂದೆಂದೂ ಆಗಲಾರದು! ಹೀಗೆ ತಿಳಿದು ಒಣ ಭ್ರಾಂತಿಗೆ ಬಿದ್ದು ಸುಮ್ಮ ಸುಮ್ಮನೇ ಮನುಜತ್ವವನ್ನು ಹಾಳುಮಾಡಿಕೊಳ್ಳುತ್ತಾರೆ.— " ಎಂಥಾ ಮಾನವ ಜನ್ಮವೇನ ಕೆಡಿಸಿ ಬಿಟ್ಟರಪ್ಪಾ "

ಪ್ರತಿಯೊಬ್ಬ ಲಿಂಗಧಾರಿಯು ಜನ್ಮೋದ್ಧಾರವನ್ನು ಹೊಂದಲೆ ಬೇಕೆನ್ನುವ ಸಲುವಾಗಿ, ಶ್ರೀ ಬಸವೇಶ್ವರರು, - ಅವನು ಯಾವದೇ ಸ್ಥಳದಲ್ಲಿರಲಿ, ಅಲ್ಲೇ

ಷಟ್‌ಸ್ಥಲಗಳು ಬಂದೊದಗಬೇಕೆನ್ನುವ ಸಲುವಾಗಿ, ಪ್ರತಿಯೊಂದು ಸ್ಥಳ ದಲ್ಲಿ ಆರಾರು ಸ್ಥಳಗಳನ್ನು ಮಾಡಿ, ತಮ್ಮ ವಚನದಲ್ಲಿ ಹೇಳಿದ್ದಾರೆ. ಹಾಗೂ ಷಟ್‌ಸ್ಥಲಗಳನ್ನು ತಾನಿದ್ದ ಸ್ಥಳದಲ್ಲಿಯೇ ಹೊಂದದಿದ್ದರೆ, ಮನು ಜತ್ವಕ್ಕೆ ಬಂದ ಅವನ ಜನ್ಮವು ವ್ಯರ್ಥವಾಗುವದೆಂದು ಅವರ ಸ್ಪಷ್ಟ ಮತವಿದೆ.

ಅಯ್ಯಗಳಲ್ಲಿ ಅನೇಕರು ಕಲಿತು ಪಂಡಿತರಾಗಿ, ಪುರಾಣ ಕೀರ್ತ ನಾದಿಗಳನ್ನು ಹೇಳುವರು. ಅವೆಲ್ಲ ಮಂದಿಯ ಸಲುವಾಗಿಯೇ ಹೊರತು ತಮಗೆ ಲವ ಮಾತ್ರವೂ ಇರುವದಿಲ್ಲ. ಕೇವಲ ಫೋನೋಗ್ರಾಫ ವಾಗಿರು ತ್ತಾರೆ. ಕಲಿಯದೇ ಇದ್ದವರನಕ ಹೇಳ ಹೆಸರಿಲ್ಲದೇ ನಾಶಹೊಂದಿ ಬಿಡು ವರು. “ ನಾವು ಮಹೇಶ್ವರರು ” ಎಂಬುವೊಂದು ವಿಭ್ರಮವು ಅವರಿಗೆ ಗಂಟು ಬಿದ್ದಿರುತ್ತದೆ. ಭಿಕ್ಷಾಟನದಿಂದ ಐಹಿಕ ಸುಖಕ್ಕೆ ಮಾತ್ರ ಸಹಾಯವಾಗು ವದು ! ಆದರೆ ಪಾರಮಾರ್ಥಕ್ಕೆ ಬಲು ದೊಡ್ಡ ಪೆಟ್ಟು ಕೊಡುತ್ತಿವದು. ಮತ್ತಷ್ಟು ಆಳವಾಗಿ ಪಂಕದಲ್ಲಿ ಮುಳು ಗತ್ತ ಹೋಗುವರು. ಈ ಬಗೆಗೆ ನಾನು ನನ್ನ ಲೇಖಗಳಲ್ಲಿ ಅವರನ್ನು ಎಚ್ಚರಿಸುತ್ತ ಬಂದಿದ್ದೇನೆ. ಆದರೂ ಅವೆಲ್ಲ ಡಬ್ಬು ಕೊಡದ ಮೇಲೆ ನೀರು ಸುರುವಿದಂತೆ ಆಗಿರುವದು. ಅದ ರಿಂದ ಮತ್ತಿಷ್ಟು ಅವರ ಮೊಂಡತನವು ಹೆಚ್ಚಾಗಿರುತ್ತದೆ ಮಾತ್ರ ! ಇದ ರಿಂದ ನನ್ನದೇನೂ ಘಾತವಾಗುವದಿಲ್ಲ:— ಏಕಂದರೆ —

“ ಉದ್ಧರೆ ದಾತ್ಮನಾತ್ಮಾನಂ, ಆತ್ಮಾನಮವಸಾಮಯೇತ್ ॥
ಆತ್ಮೈವಹ್ಯಾತ್ಮನೋಬಂಧು, ರಾತ್ಮೈವ ರಿಪುರಾತ್ಮನಃ ” ॥

ಅಥವಾ — “ ತನ್ನದ್ಧರವ ತಾನೆ, ಮಾಳ್ಪದು, ತನ್ನಯ ಘಾತವ ನೆಸಗಲು ಬಾರದು ॥ ತನ್ನರಿತಾನೆ, ಮಿತ್ರನು ತಾನೇ, ನನ್ನುತ ಸುತ ಕೇಳು ॥ ” ಎಂಬು ದನ್ನು ಚಿತ್ತಕ್ಕೆ ತರಬೇಕು. “ ನ ಬ್ರೂಯಾತ್ ಸತ್ಯಮಪ್ರಿಯಮ್ ॥ ” ಎಂದು ಭಗವದ್ಗೀತಾಕಾರರು ಹೇಳಿದ್ದರೂ, ಅದನ್ನು ಬದಿಗಿಟ್ಟು ನಾನು ಅನೇಕ ಸಾರೆ ಬರೆದೆನು. “ ಅಪ್ರಿಯಸ್ಯ ತು ಪಥ್ಯಸ್ಯ ವಲ ಶ್ರೋತಾ ಚ ಕ್ಷುರ್ಲಭಃ ॥ ” ಎಂಬುದೇ ದೃಷ್ಟೋಕ್ತಿಗೆ ಬರುತ್ತದೆ. ಮನುಷ್ಯನು ದುರಭಿಮಾನಕ್ಕೆ ಬಿದ್ದು ತನ್ನ ದೋಷಗಳನ್ನು ಮುಚ್ಚಿಕೊಂಡು, ತನ್ನ ನಡತೆಯೇ ಯೋಗ್ಯವಾದದ್ದೆಂದು ತಿರುಗಿ ಪ್ರತಿವಾದಿಸಹತ್ತುತ್ತಾನೆ. ಇದ ರಿಂದ ಅವನ ವಿನಾಶವೇ ಆಗುವದು. ನರಕ ಭಾಜನನಾಗುವನು. “ ತಾನಾ ರೆಂಬರಿವಾಗಿ ಸಾಕು ” ಎಂದು ರತ್ನಾಕರಾಧೀಶ್ವರ ಶತಕಕಾರನೂ, “ ಅರು

ಸಾನೆಂದು ವಿಚಾರಿಸು। ವಿಷಮ ಸಂಸಾರವಿದನು ಕನಸೆಂದರಿದು। ಮಾರ ಮರ್ದನ ಶಂಭುಲಿಂಗವನೊಲಿಸಿ। ಗಂಭೀರ ಸುಖದೊಳಿರೆಂದುರುವುವಾ ॥"
ಎಂದು ಶ್ರೀ ನಿಜಗುಣ ಶಿವಯೋಗಿಗಳು ಹೇಳಿದ್ದಾರೆ. ನಿಜಗುರು ಸ್ವತಂತ್ರ ಶಿದ್ಧಲಿಂಗೇಶ್ವರಾ —

"ಅಧಿಷ್ಠಾನದಲ್ಲಿ ಆಚಾರಲಿಂಗವ ಭಜಿಸಿ ಆಚಾರಲಿಂಗದೇವರ ಭಕ್ತನಾದನಯ್ಯಾ ನಿಮ್ಮ ಶರಣ,

ಸ್ವಾಧಿಷ್ಠಾನದಲ್ಲಿ ಗುರುಲಿಂಗವ ಭಜಿಸಿ ಗುರುಲಿಂಗ ದೇವರ ಭಕ್ತನಾದನಯ್ಯಾ ನಮ್ಮ ಶರಣ,

ಮಣಿಪೂರಕದಲ್ಲಿ ಶಿವಲಿಂಗವ ಭಜಿಸಿ ಶಿವಲಿಂಗದೇವರ ಭಕ್ತನಾದನಯ್ಯಾ ನಮ್ಮ ಶರಣ.

ಅನಾಹತದಲ್ಲಿ ಜಂಗಮಲಿಂಗವ ಭಜಿಸಿ ಜಂಗಮಲಿಂಗ ದೇವರ ಭಕ್ತನಾದನಯ್ಯಾ ನಿಮ್ಮ ಶರಣ.

ವಿಶುದ್ಧಿಯಲ್ಲಿ ಪ್ರಸಾದಲಿಂಗವ ಭಜಿಸಿ ಪ್ರಸಾದಲಿಂಗ ದೇವರ ಭಕ್ತನಾದನಯ್ಯಾ ನಿಮ್ಮ ಶರಣ.

ಆಜ್ಞಾಚಕ್ರದಲ್ಲಿ ಮಹಾಲಿಂಗವ ಭಜಿಸಿ ಮಹಾಲಿಂಗ ದೇವರ ಭಕ್ತನಾದನಯ್ಯಾ ನಿಮ್ಮ ಶರಣ.

ಇಂತು ಷಟ್‌ಚಕ್ರದಲ್ಲಿ ಷಡ್ಲಿಂಗವ ಭಜಿಸಿ ಷಡ್ಲಿಂಗ ದೇವರ ಭಕ್ತನಾದನಯ್ಯಾ ನಿಮ್ಮ ಶರಣ ಸ್ವತಂತ್ರ ಶಿದ್ಧಲಿಂಗೇಶ್ವರಾ. " ಎಂದೂ ಹಾಗೂ — ಶ್ರೀ ಷಣ್ಮುಖ ಸ್ವಾಮಿಗಳು –

"ಕಂಗಳ ಮುಂದಣ ಕಾಮವ ಕಳೆದು ನಿಮ್ಮಂಗಳ ರೂಪವ ತೋರಿಸಯ್ಯಾ ದೇವಾ।

ಎನ್ನ ಮನದ ಮುಂದಣ ಆಶೆಯ ಬಿಡಿಸಿ ನಿಮ್ಮ ಮಂತ್ರದ ನೆನಹ ನೆಲೆಗೊಳಿಸಯ್ಯಾ ದೇವಾ।

ಎನ್ನಪ್ರಾಣದ ಮುಂದಣ ಪ್ರಪಂಚವ ಕೆಡಿಸಿ ನಿಮ್ಮ ಪರಮ ಪ್ರಸಾದವ ನೆಲೆಗೊಳಿಸಯ್ಯಾ ದೇವ।

ಎನ್ನ ತನು ಮುಸುಕಿದ ತಾಮಸವ ಕಳೆದು, ನಿಮ್ಮ ಭಕ್ತಿಯ ಅನುವ ನೀಡಿ ಬದುಕಿಸಯ್ಯಾ ಅಖಂಡೇಶ್ವರಾ ॥ ಎಂದೂ ಅದರಂತೆ ಶ್ರೀ ಪ್ರಭುದೇವರು "ಅದ್ವೈತವ ನುಡಿದು ಅಹಂಕಾರಿಯಾದೆನಯ್ಯಾ। ಬ್ರಹ್ಮವ ನುಡಿದು ಭ್ರಮಿತ

ನಾದೆನಯ್ಯಾ । ಶೂನ್ಯನೆ ನುಡಿದು ನಾನು ಸುಖದುಃಖಕ್ಕೆ ಗುರಿಯಾದೆನಯ್ಯಾ । ಗುಹೇಶ್ವರಾ. ನಿಮ್ಮ ಶರಣ ಸಂಗನಬಸವಣ್ಣನ ಸಾನ್ನಿಧ್ಯದಿಂದ ಸದ್ಭಕ್ತನಾದೆನಯ್ಯಾ ಎಂದು ಹೇಳಿದ್ದಾರೆ.

ಮೇಲಿನ ವಚನಗಳನ್ನು ನೋಡಿದರೆ, ಎಂತೆಂಥ ಮಹಾ ಮಹಾ ಸ್ವಾಮಿಗಳು ಭಕ್ತತ್ವವನ್ನು ಅಭಿನಂದಿಸುವರು. ಮತ್ತು ತಾವು ಅಂತಃಕರಣ ಪೂರ್ವಕವಾಗಿ ಭಕ್ತರಾಗಲು ಬಯಿಸುವರು ಎಂಬುದು ಸ್ಪಷ್ಟವಾಗಿ ಕಂಡು ಬರುವದು.

ವೀರಶೈವ ವಚನಕಾರರಲ್ಲದೆ ಅನ್ಯ ಪಂಥದವರೂ ಕೂಡ ಆತ್ಮೋನ್ನತಿಗೆ ಎಷ್ಟು ಪ್ರಾಧಾನ್ಯ ಕೊಟ್ಟಿರುವರೆಂಬುದು ಕೆಳಗಣ ಪದ್ಯದಿಂದ ಸ್ಪಷ್ಟವಾಗಿ ಕಂಡುಬರುವದು.

" ಚಿತ್ತ ಪಗಡಿ ಚದುರಂಗವನಾಡುತ್ತ ಹೊತ್ತುಗಳೆವುದೇತಕೆ ಹೇನು ?
ಸುತ್ತಿ ತೊಳಲಿ ಬಳಲುತ್ತ ಮಾಡಿದಾ ಗೃಹಕೃತ್ಯದೊಳಹ ಫಲವೇನು ?
ಕತ್ತಲೆಯೊಳು ಕಣ್ಣನು ತೆರದಂದದಿ, ವ್ಯರ್ಥದಿ ಸಂಗ್ರಹಿಸುವುದೇನು ?
ಚಿತ್ತವಿಟ್ಟು ದೇವರ ನೆನೆಯುತ್ತ ಸದ್ಗತಿ ಹೊಂದುವುದಕೆ ಜನ್ಮದಲ್ಲಿ ॥

(ದಾಸಕೂಟ)

ಹೀಗೆ ಜನ್ಮೋದ್ಧಾರ ಹೊಂದಲಿಕ್ಕೆ ಉತ್ತಮ ಸಾಧನವೆಂದರೆ ಶ್ರೀ ಬಸವ, ಚನ್ನಬಸವ, ಪ್ರಭುದೇವರು ಪ್ರಮಥನರ್ಯರು ನಿರ್ಧರಿಸಿದಂತೆ — ಲಿಂಗ ಧಾರಣ ಹೊಂದಿ, ಷಟ್‌ಸ್ಥಲ ಮಾರ್ಗದಲಿ ನಡೆದು, ತಪ್ಪದೇ ಲಿಂಗಾಂಗ ಸಾಮರಸ್ಯ ಹೊಂದಿ, ಪರಮ ಪರತರ ಸುಖವನು ಅನುಭೋಗಿಸುವುದೆಲೆ ಮಾನವಾ. ।

ಇನ್ನು ಕೆಳಗಿನ ವಚನಗಳತ್ತ ಗಮನಿಸಿರಿ:—

(೧) ಅಷ್ಟವಿಧಾನ ಷೋಡಶೋಪಚಾರಗಳಲ್ಲದೆ, ನಿನ್ನನು ಅರಿಯದವರ ಕಂಡರೆ, ಅದೆಂತು ಅಯ್ಯಾ ಎಂಬುದು ! ಆವ ರೂಪದಲ್ಲಿಯೂ ಆವ ಭಾವದಲ್ಲಿಯೂ ಕೂಡಲಸಂಗಮದೇವಾ, ನಿನ್ನೊಬ್ಬನನ್ನೇ ಕಾಣುವರು ಅದಾರಿರ್ಪರಯ್ಯಾ ? ಏನೆಂಬೆ ! ಸರ್ವತ್ರ ನಿನ್ನೊಬ್ಬನನ್ನೇ ಕಾಣುವ ಸತ್ಯ ಶರಣರನು ' ಅಯ್ಯಾ ' ಎಂಬೆನು ! ''

(೨) ಭಕ್ತಂಗೂ ಜಂಗಮಕ್ಕೂ ಆಚಾರದಲ್ಲಿ ಭೇದವೆ ? ಆವರಣದಲ್ಲಿ ಭೇದವೇ ? ಅಲ್ಲಲ್ಲ ! ಭಕ್ತನಾದಡೆ ಮೂರಕ್ಕೆ ( ಹೊನ್ನು, ಹೆಣ್ಣು,

ಮಣ್ಣು ) ಒಳಗು, ಜಂಗಮನಾದರೆ ಮೂರಕ್ಕೆ ಹೊರಗು. ಒಳಗಾದವರ ಪಾದೋದಕ ಸಲ್ಲದು. ಕೊಂಡವಂಗೆ ಭವಹಿಂಗದು ಕೊಟ್ಟವಂಗೆ ನರಕ ತಪ್ಪದು ಕಪಿಲಸಿದ್ಧ ಮಲ್ಲಿಕಾರ್ಜುನಾ ।

" ಈ ವಚನಗಳನ್ನು ಮನನ ಮಾಡಿಕೊಂಡರೆ ನಿಮ್ಮ ಪರಿಸ್ಥಿತಿಯು ಬೆಳಕಿಗೆ ಸ್ವಲ್ಪವಾದರೂ ಅಡ್ಡಿಯುಂಟಾಗುವದೆಂಬ ಭಯಕೆಯು ಉದ್ಭವಿಸುವದಿಲ್ಲವೇ ? ಉದ್ಭವಿಸಿದರೆ ಆ ಬಗೆಗೆ ಏನು ಯೋಚಿಸುವಿರಿ ? ಎಂಬುದ ಅಯ್ಯಗಳಿಗೆ ನನ್ನ ಸವಿನಯ ಪ್ರಾರ್ಥನೆ.

ಮಾನವ ಜನ್ಮ ಸಾಫಲ್ಯದ ಸಲುವಾಗಿ ಮಾಡಿದ ಈ ಮೇಲಿನ ವಿವರವು ಬರಿಯ ಅಯ್ಯಗಳ ವಿಷಯಕವಾದುದೆಂದು ಯಾರೂ ತಿಳಿಯಬಾರದು. ಅದು ಸರ್ವರಿಗೆ, ಮುಖ್ಯವಾಗಿ ವೀರಶೈವರಿಗೆಲ್ಲ, ಅದರಲ್ಲಿಯೂ ಮೂಢ ಭಕ್ತ ಜನರಿಗೂ ಸಹ, ಸಂಪೂರ್ಣ ಸಂಬಂಧಿಸಿರುವದು. ಅವರು ಹಿಂದಿನಂತೆ ಮುಂದೆಸಹ ಅನಾಸ್ಥೆ ತೋರಿಸದೆ, ಹೆಚ್ಚು ಮನಸ್ಸುಗೊಟ್ಟು ಆತ್ಮೋದ್ಧಾರವನ್ನು ಪಡೆಯುವರೆಂಬ ನಂಬಿಗೆಯನ್ನು ಹಿಡಿಯೋಣವೇ ?

ವಾಚಕ ಮಹಾಶಯರೇ, ನನಗೀಗ ೮೭ ವರ್ಷಗಳು. ಹುಚ್ಚುಮುಪ್ಪು ಕೂಡಿರುವವು, ಓದಲು ಬರೆಯಲು ಕಣ್ಣು ನಿರುಪಯುಕ್ತವಾಗಿವೆ. ಅವು ಕಾಣುವದೇ ಇಲ್ಲ. ಮಾತಾಡಿದುದನ್ನು, ಓದಿದುದನ್ನು ಕೇಳಲು ಕಿವಿ ನಿರುಪಯುಕ್ತವಾಗಿವೆ. ಅವು ಎಷ್ಟು ಮಾತ್ರವೂ ಕೇಳುವದೇ ಇಲ್ಲ. ಇದನ್ನು ಪರರಿಂದ ( ಪುತ್ರನಿಂದ ) ಬರೆಯಿಸಿದ್ದೇನೆ. ತಾವು ಓದಿನೋಡಿ ನೆನಹಿರಿ, ಇಲ್ಲವೆ ನಗೆಯಾಡಿ ಬಿಟ್ಟುಬಿಡಿರಿ !

# ಅಭಿನಂದನೆಗಳು.

( ಲೇಖಕ:— ಶ್ರೀ ಶಿವಾನಂದ ಸ್ವಾಮಿಗಳು, ತೆಗ್ಗಿಹಳ್ಳಿ ತಾ. ಇಂಡಿ. )

---

ಮನುಷ್ಯನಿಗೆ ದುಃಖಗಳು ಬರಹತ್ತಿದವೆಂದರೆ ಸಾಕಸಾಕಪ್ಪಾ ಎನ್ನುವಂತೆ ಅವು ಒಂದೇ ಸವನೆ ಬಂದೇಬರುವವು. ಸುಖಗಳು ಬರಹತ್ತಿದರೆ ಅವು ಕೂಡ ಒಂದೇಸವನೆ ಬರಹತ್ತುವವು. ಇದು ಪರಮಾತ್ಮನು ವಿಧಿಸಿದ ಮಹಾ ಮಾಯೆಯ ಆಟವೇ ಸರಿ. ರಾ. ಬಾ. ಫ. ಗು. ಹಳಕಟ್ಟಿಯವರಿಗೆ ಒಂದರ ಮೇಲೊಂದು ಸಮುದ್ರದ ತೆರೆಗಳು ದಂಡೆಗೆ ಬಂದು ಅಪ್ಪಳಿಸುವಂತೆ ದುಃಖಗಳು ಬಂದು ಇವರಿಗೆ ಅಪ್ಪಳಿಸಿದವು ದಂಡೆಯು ತೆರೆಗಳಿಗೆ ಬಗ್ಗದಂತೆ ಇವರೂ ದುಃಖಗಳಿಗೆ ಬಗ್ಗಲಿಲ್ಲ.

ಬಹುವಾಗಿ ಗಳಿಸುವ ಪ್ರೌಢ ಒಳ್ಳೇ ಮಗನೊಬ್ಬನು ಸತ್ತನು. ಇನ್ನೊಬ್ಬ ಮಗ ಮ್ಯಾಟ್ರಿಕದಲ್ಲಿದ್ದಾಗ ದುರುಳರು ವಿಷಕೊಟ್ಟು ಹುಚ್ಚುಹಿಡಿಸಿದರು. ಒಬ್ಬ ಮಗಳು ಯೌವನದಲ್ಲಿ ತೀರಿಹೋದಳು. ನವಕರ್ನಾಟಕ ವಾರಪತ್ರಿಕೆ ಕ್ಷಯದಿಂದ ತೀರಿಹೋಯಿತು. ಶಿವಾನುಭವ ಮಾಸಿಕಕ್ಕೆ ಕ್ಷಯದ ಲಕ್ಷಣಗಳು ಒಡೆದು ಕಾಣಹತ್ತಿ ಎರಡನೇ ಸ್ಟೇಜದಲ್ಲಿ ಬಳಲಹತ್ತಿತು. ಹಿತಚಿಂತಕ ಭಾಪಶಾನೆಯು ಬಳಲಹತ್ತಿತು. ಈಗಿನ ಸ್ಪರ್ಧೆಯ ಕಾಲದಲ್ಲಿ ಆದರೂ ಶ್ರೀ ಹಳಕಟ್ಟಿಯವರು ಯಾವ ಆಘಾತಕ್ಕೂ ಬೆಚ್ಚದೆ ಬೆದರದೆ ಅಂಜದೆ ಅಳುಕದೆ ಸದಾ ಶರಣ ಸಾಹಿತ್ಯದ ಸೇವೆ ಚಿಂತನೆಗಳನ್ನೇ ಮಾಡುತ್ತ ವಿಧಿಯ ಕೂಡ ಹೋರಾಡುತ್ತಲೇ ಇದ್ದಾರೆ. ಇವರು ನನ್ನನ್ನು ಬರಮಾಡಿಕೊಂಡು ತಮ್ಮ ಈ ಸ್ಥಿತಿಯನ್ನು ನಿವೇದಿಸಿ ಶಿವಾನುಭವ, ನವಕರ್ನಾಟಕಗಳನ್ನು ನನಗೆ ನಡಿಸಿಕೊಂಡು ಹೋಗಲಿಕ್ಕೆ ಕೇಳಿದರು. ಆಗ ನಾನು ಅವರ ಕಾರ್ಯವನ್ನು ಅವರ ಸಂಪಾದಕತ್ವದ ಕೆಳಗೆ ಮುಂದುವರಿಸಲು ಒಪ್ಪಿಕೊಂಡು ಲೇಖಗಳನ್ನು ಆಗಾಗ್ಗೆ ಬರೆದು ಕಳಿಸುವದೂ ಹೋದಲ್ಲಿ ಬಂದಲ್ಲಿ ಶಿವಾನುಭವದ ಬಗ್ಗೆ ಪ್ರಚಾರ ಮಾಡುವದೂ ಸುರುಮಾಡಿದೆನು ಅದರಂತೆ ನಮಗೆ ಜಂಗಮ ಸಾಮ್ರಾಟ ಶ್ರೀ ಮಲ್ಲಿಕಾರ್ಜುನ ಮಹಾಸ್ವಾಮಿಗಳ ಬೆಂಬಲವು ಸತತ ೮ ತಿಂಗಳವರೆಗೆ ದೊರೆಯಿತು. ನಾನು ಇವರಿಗೆ ಶ್ರೀ ಹಳಕಟ್ಟಿಯವರ ಸ್ಥಿತಿಯನು ಸವಿಸ್ತಾರವಾಗಿ ನಿವೇದಿಸಲು ಅವರು ತಮ್ಮ ಪ್ರವಚನದ ಮುಖಾಂತರ ಕಳಕಳಿ

ಯಿಂದ ಪ್ರಚಾರಮಾಡಿದರು. ಇದೆಲ್ಲದರ ಪರಿಣಾಮವಾಗಿ ವಚನಗಳ ಹೊತ್ತಿಗೆಗಳು ಪ್ರಕಟವಾಗಹತ್ತಿದವು. ಅಲ್ಲದೆ ಶಿವಾನುಭವ ಮಾಸಪತ್ರಿಕೆ ಚಂದಾದಾರರು ೨೫೦ ಇದ್ದದ್ದು ಈಗ ೫೫೦ಕ್ಕೆ ಮಿಕ್ಕಿದೆ ಇನ್ನೂ ಸ್ವಲ್ಪದಿನಗಳಲ್ಲಿ ಅದರ ಸಂಖ್ಯೆ ೧೫೦೦ಕ್ಕೆ ಹೋಗುವದೆಂದು ಅಂದಾಜಮಾಡಲಾಗಿದೆ.

ಇದಲ್ಲದೆ ಸ್ವಪ್ರೇರಣೆಯಿಂದ ಎಸ್. ಆರ್. ಪಾಟೀಲ ಮಾಸ್ತರ ಆಲಮೇಲ ಇವರು ಸೂಟಗಳಲ್ಲಿ ಹಳ್ಳಿಪಟ್ಟಣಗಳಿಗೆ ತಿರುಗಾಡಿ ಹಳಕಟ್ಟಿಯವರಿಗೆ ನಿಧಿ ಕೂಡಿಸಿಕೊಡುತ್ತಿರುವರಲ್ಲದೆ ಮಾಸಿಕಕ್ಕೆ ಚಂದಾದಾರರನ್ನು ಮಾಡುತ್ತಿರುವರು. ಈಗ ಪುನಃ ಮೇ ತಿಂಗಳ ಸೂಟಿಯಲ್ಲಿ ಅವರು ಈ ರೀತಿಯ ಪ್ರವಾಸ ಕೈಕೊಳ್ಳುವವರಿದ್ದರೆಂದು ನನಗೆ ಪತ್ರಬರೆದು ತಿಳಿಸಿದ್ದಾರೆ. ಅವರಿಗೆ ಅನೇಕ ಧನ್ಯವಾದಗಳನ್ನು ಅರ್ಪಿಸದೆ ನಮಗೆ ಸಮಾಧಾನವಾಗುವದಿಲ್ಲ. ಫೇಬ್ರುವಾರಿ-ಮಾರ್ಚ ಸಂಚಿಕೆಯಲ್ಲಿ ಆದರ್ಶ ಶಿಕ್ಷಕರೆಂಬ ಲೇಖವನ್ನು ಬರೆದು ಅವರಿಗೆ ಅಭಿನಂದನೆಗಳನ್ನು ಅರ್ಪಿಸಲಾಗಿದೆ. ಆದರೆ ಆ ಲೇಖದಲ್ಲಿ ಅವರ ಹೆಸರು ತಪ್ಪುಬಿದ್ದಿದೆ. ಎಸ್. ಆರ್. ಪಾಟೀಲ ಮಾಸ್ತರ ಆಲಮೇಲ ಅಂತಾ ಬರೆಯುವದನ್ನು ಬಿಟ್ಟು ಆರ್. ಬಿ. ಪಾಟೀಲ ಅಂತಾ ಬರೆಯೋಣವಾಗಿದೆ. ವಾಚಕರು ಅದನ್ನು ತಿದ್ದಿಕೊಳ್ಳಬೇಕು.

ಇನ್ನು ಜಂಗಮ ಸಾಮ್ರಾಟರೆಂದು ಕಿತಾಬನ್ನುಪಡೆದ ಶ್ರೀ ಮಲ್ಲಿಕಾರ್ಜುನ ಮಹಾಸ್ವಾಮಿಗಳ ಪ್ರೇರಣೆಯಿಂದ ಧಬಕವಿಯ ಸಾಹಿತ್ಯಸಮ್ಮೇಲನದಲ್ಲಿ ಉಳಿದ ಹಣವನ್ನು ಅಲ್ಲಿಯ ಯಾವತ್ತು ನಾಗರೀಕರ ಒಪ್ಪಿಗೆ ಪಡೆದು ಶ್ರೀ ಚನಮಲ್ಲಪ್ಪ ಬನಹಟ್ಟಿ ಇವರು ೧೦೦೧ ರೂಪಾಯಿ ನಿಧಿಯನ್ನು ಸದರಿ ಮಲ್ಲಿಕಾರ್ಜುನ ಮಹಾಸ್ವಾಮಿಗಳ ಹಸ್ತದಿಂದ ಶ್ರೀ ಹಳಕಟ್ಟಿಯವರಿಗೆ ಅರ್ಪಿಸಲಾಗಿದೆಯೆಂದು ಸದರಿಯವರಿಂದ ನನಗೆ ಪತ್ರಬಂದದ್ದು ಓದಿ ಬಹು ಆನಂದವಾಗಿದೆ. ಇವರಿಗೆ ಎಷ್ಟು ಆಭರಮನ್ನಿಸಿ ಅಭಿನಂದಿಸಿ ಉಪಕಾರ ಸ್ಮರಿಸಿದರೂ ಕಡಿಮೆಯೇ ಸರಿ. ಹೀಗೆ ಅನೇಕ ಜನರಲ್ಲಿ ಪರಮಾತ್ಮನು ಪ್ರೇರಣೆ ಮಾಡುತ್ತಿರುವದನ್ನು ನೋಡಿದರೆ ಹಳಕಟ್ಟಿಯವರಿಗೆ ಇಲ್ಲಿಯವರೆಗೆ ಒಂದೇಸವನೆ ಬರುತ್ತಿರುವ ವಿಧಿಮಾಯಿಯ ಕಾಟಗಳು ತಾವಾಗಿಯೇ ಇಲ್ಲದಾಗಿ ಸುಖದ ಆಶಾ ಕಿರಣಗಳು ಹೆಚ್ಚಾಗಿ ತೋರಹತ್ತಿರುವವು. ಇದರಂತೆ ಶ್ರೀ ಮಲ್ಲಿಕಾರ್ಜುನ ಮಹಾಸ್ವಾಮಿಗಳ ಅಂತಃಪ್ರೇರಣೆಯಿಂದ ಶ್ರೀ ತ್ಯಾಗವೀರ ಚಿತ್ತರಗಿಯವರು ಶ್ರೀ ಹಳಕಟ್ಟಿಯವರಿಗೆ ದೊಡ್ಡ ನಿಧಿಯನ್ನು

ಸಂಗ್ರಹಿಸುವ ಕಾರ್ಯದಲ್ಲಿ ತೊಡಗಿದ್ದು ಸಕಲರಿಗೂ ಪತ್ರಿಕೆಗಳಿಂದ ವಿದಿತ ವಾಗಲಿಕ್ಕೆ ಸಾಕು. ಇದರಂತೆ ಈ ನಮ್ಮ ಸ್ವಾಮಿಗಳು ರೋಣ, ಶಿರ ಹಟ್ಟಿ, ಗದಗ ಮೊದಲಾದವುಗಳಿಗೆ ಹೋದಕಾಲದಲ್ಲಿ ಹಳಕಟ್ಟಿಯವರ ಬಗ್ಗೆ ತಿಳಿಸಿಹೇಳಿ ಅವರ ಕಾರ್ಯಕ್ಕೆ ಸಹಾಯ ನೀಡುವಂತೆ ಚಂದಾದಾರರಾ ಗುವಂತೆ ಪ್ರೇರಣೆ ಮಾಡಿದ್ದರೆಂದು ನಮಗೆ ತಿಳಿದುಬಂದಿದೆ. ಇಷ್ಟಾದರೂ ಈ ಸ್ವಾಮಿಗಳು ತಮ್ಮ ಹೆಸರನ್ನು ಪ್ರಚಾರ ಮಾಡುವಂತೆ ಪ್ರಸಿದ್ಧಿಸಬಾರ ದೆಂದು ಕೇಳಿಕೊಂಡರೂ ನಾನು ಅವರ ಈ ಅಜ್ಞೆಯನ್ನು ಮೀರಿ ಈಸಲ ಪ್ರಸಿದ್ಧಿಸಿದ್ದೇನೆ. ಹೀಗಾದುದು ಅವರ ಬಗೆಗೆ ನನ್ನ ಅಂತಃಕರಣದಲ್ಲಿ ಪ್ರೇಮಾನಂದಗಳು ತುಂಬಿಬಂದುದೇ ಕಾರಣವಾಗಿದೆ ಎಂದು ಧಾರಾಳವಾಗಿ ಹೇಳುವೆನು. ಹೆಸರು ಕೀರ್ತಿಗಳಿಲ್ಲದೆ ಗುಪ್ತವಾಗಿ ಕಾರ್ಯ ಮಾಡಬೇ ಕೆಂಬುದೇ ಅವರ ತತ್ವವಾಗಿದೆ. ಇದರ ಮೇಲಿಂದ ಅವರಿಗೆ ಜಯಜಯ ಕಾರ ಮೆರವಣಿಗೆ ವಗೈರೆ ಏನೂ ಬೇಕಾಗಿಲ್ಲೆಂದೇ ತೋರುವದಿಲ್ಲವೇನು? ಸಕಲ ಸ್ವಾಮಿಗಳು ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳಂತೆ ಶರಣರ ಸಾಹಿ ತ್ಯದ ಬಗೆಗೆ ಕಾರ್ಯಮಾಡಿದರೆ ನಮ್ಮ ನಾಡು ಹಾಗು ಧರ್ಮಗಳು ಭರ ಗುಡುತ್ತ ಎದ್ದೇಳುವವು. ಇಂಥ ಕಾಲದಲ್ಲಿಯೂ ಕೂಡ ಇನ್ನೂ ವಿರಕ್ತ ಪಟ್ಟ ಎಂದು ಹೊಡೆದಾಡುವದು ಭೂಷಣವಲ್ಲ. ಭಕ್ತ ಜನರು ಜಾಗ್ರತ ರಾಗಿದ್ದಾರೆ. ಮುಂದುವರಿಯ ಹತ್ತಿದ್ದಾರೆ. ನೀವು ಹೊಡೆದಾಡುತ್ತ ಅಲ್ಲೇ ಕೂಡ್ರಲಿಕ್ಕೆ ನಿಮಗೆ ಹೇಳಿ ನಿಮ್ಮ ಕೈ ಬಿಡುವರೆಂಬುದನ್ನು ಲಕ್ಷದಲ್ಲಿ ತಂದು ಜಗಳ ಬಿಟ್ಟು ಸಮಾಜದಲ್ಲಿ ಶಾಂತತೆಯನ್ನು ನೆಲೆಗೊಳಿಸಿ ಶರ ಣರ ತತ್ವದಂತೆ ನಡೆದು ಸಕಲರಿಗೂ ಧಾರ್ಮಿಕ ಸ್ವಾತಂತ್ರ್ಯವನ್ನು ಕೊಟ್ಟು ಕುಲಮದವನ್ನು ಅಳಿದು ಸಮತೆಯಿಂದ ಬಾಳಲಿಕ್ಕೆ ಕಲಿಯಿರಿ. ಶ್ರೀ ಫ. ಗು. ಹಳಕಟ್ಟಿಯವರಿಗೆ ಹೆಣಗಿರಿ. ಯಾಕಂದರೆ ಸತತ ೩೦ ವರ್ಷಗಳ ಪರಿಯಂತ ತನು ಮನ ಧನಗಳನ್ನು ಸಮಾಜ ಸೇವೆಗಾಗಿ ಸವಿಸಿ ಮುಪ್ಪಾಗಿದ್ದಾರೆ. ಅದಕ್ಕಾಗಿ ಅವರಿಗೆ ನಿಧಿ ಅರ್ಪಿಸುವದೇ ಎಲ್ಲರ ಆದ್ಯ ಕರ್ತವ್ಯ ಕರ್ಮ ವಾಗಿದೆ ಎಂದು ಹೇಳದಿರಲಾರೆ.

# ಮೀಸ"ಲಪನಿಗೆ"



ಈ ತನುವು, ಈ ಮನವು ಬೆರೆತುಕೊಂಡು
ಓಂಕಾರ ರೂಪಿನೊಳು ರೂಪಗೊಂಡು,
ನಲಿಯಲ್ಕೆ, ಸಗ್ಗದೊಳು ಸೈಜಕಂಡು
ಆ ದೇವ ನಡಿಯಲ್ಲಿ, ಬಿದ್ದು ಬೇಡುತ ಬಂದು
ಅವನ ಗುಡಿ ಕಳಸವನು ಬೆಳಗಿಕೊಂಡು
ಅವನ ಹೃದಯದಿಬೆರೆತು ಚಿದ್ ವಿಭೂತಿಯ ಪಡೆದು
ಅಂತರಾಳದ ಶಕ್ತಿ ಸುಖವನುಂಡು !
ಬಾಳ ಬೆಳಗಿನ ದೀಪ, ನಲಿಯುತಲಿ ಉರಿದಿಹುದು
ತನ್ನ ತಾನೇ ಮರೆತು ಬಾಳಿನಲ್ಲಿ
ಸಕಲ ಜೀವದಿ ದಯೆಯ ತೋರಿಪುದೆ ಆದೀಪ?
ಅವರ ದೃಷ್ಟಿಯ ದಿವ್ಯ ತತ್ವದಲ್ಲಿ !
ಅಚ್ಚುತನದಲಿ, ಪೆಚ್ಚು ಮುಖವನೇ ತೊರೆಯುತಲಿ
ಸ್ಮಿತಗಪಲು, ಉಕ್ಕಲ್ಕೆ ಎಲ್ಲೆ ಇರದೆ !
ತನುಹಣತೆಯೊಳು ಎಣ್ಣೆ, ಬಿರುಸಾಗಿ ಬಿದ್ದಿರಲಿ
ನಮ್ಮ ಬತ್ತಿಯ ಕುಡಿಯ ಚಾಚಿಸುತ್ತ
ಅಧ್ಯಾತ್ಮ ಮಂತ್ರವನು, ಪಠಿಸಲ್ಕೆ ದಿನದಿನವು
ಸವಿಸುಖದಿಹೊಳೆವ ಕೆಂಪುಮುತ್ತ !
ನಮ್ಮಲ್ಲಿ ಮನಗಳಲಿ, ಆತನಾ ಬಲಬೆಳೆದು
ತೋರಲ್ಕೆ ತನ್ನಾತ್ಮ ಶಕ್ತಿಯನ್ನು !
ಈ ಮನವು ಈ ತನುವು ಕೂಡಿಕೊಂಡು !
ಗಳಿಸಲ್ಕೆ ! ಈ ಕ್ಷಣಕೆ ಮುಕ್ತಿಯನ್ನು !

— ಕೆ. ಎನ್. ಪೂರ್ವಾಚಾರಿ.

ಬೆನಕನಕೊಂಡ

ಶಿವಾನುಭವ ಗ್ರಂಥಮಾಲಾ ನಂ. ೮೬

# ಸಾರಂಗ ಮಠಾಧೀಶ್ವರರು



ಸಂಪಾದಕರು

ರಾ|| ಬ|| ಫ. ಗು. ಹಳಕಟ್ಟಿ,

ಬಿ. ಎ. ಎಲ್. ಎಲ್. ಬಿ.

ವಿಜಾಪುರ.



ಇಸ್ವಿ ೧೯೫೬]

[ಬೆಲೆ ೫ ಆಣೆ

ಇದನ್ನು ವಿಜಾಪುರದಲ್ಲಿ
ರಾ|| ಬ|| ಫ. ಗು. ಹಳಕಟ್ಟಿ ಇವರು ತಮ್ಮ
**ಹಿತಚಿಂತಕ ಪ್ರಿಂಟಿಗ ಪ್ರೆಸ್,** [ವಾರ್ಡ ನಂ. ೨. ವಿಜಾಪುರ]
ಇಲ್ಲಿ ಮುದ್ರಿಸಿದರು. ಮತ್ತು ಅವರು ಅದನ್ನು ಅಲ್ಲಿಯೇ
ಪ್ರಕಟಿಸಿದರು.

# ಪ್ರಸ್ತಾವನೆ.



ವೀರಶೈವ ಸಮಾಜದಲ್ಲಿ ಅನೇಕ ಮಹತ್ವದ ಮಠಗಳಿರುತ್ತವೆ. ಅವುಗಳ ಅಧಿಪತಿಗಳು ರಾಜಕೀಯ ಸಾಮಾಜಿಕ ಮತ್ತು ವಾಙ್ಮಯಾತ್ಮಕ ಮಹತ್ವದ ಸೇವೆಯನ್ನು ಸಲ್ಲಿಸಿದ್ದಾರೆ. ಆದರೆ ಅವರ ಹೆಸರುಗಳು ನಮ್ಮ ಸ್ಮೃತಿ ಪಥದಿಂದ ದೂರಾಗುತ್ತಲಿದೆ. ಹೀಗಾಗುವದು ಸಮಾಜದ ಯೋಗ್ಯತೆಗೆ ಕುಂದ ಕವೇಸರಿ. ಸಾರಂಗಮಠಾಧೀಶ್ವರರು ಒಂದುಕಾಲದಲ್ಲಿ ನಮ್ಮ ಸಮಾಜದಲ್ಲಿ ಮಾತ್ರವಲ್ಲದೆ ಇಡೀ ಕರ್ನಾಟಕ ಮತ್ತು ಕೇರಳದಲ್ಲಿ ಅಗ್ರಸ್ಥಾನವನ್ನು ಹೊಂದಿದವರಾಗಿದ್ದರು. ಅವರ ಚರಿತ್ರೆಗಳನ್ನು ಸಂಗ್ರಹಿಸುವದು ಅವಶ್ಯವೆಂದು ತೋರಿದ್ದರಿಂದ ನಾವು ಅವುಗಳನ್ನು ಗ್ರಂಥರೂಪಾಗಿ ಈಗ ಪ್ರಸಿದ್ಧ ಮಾಡಿದ್ದೇವೆ. ಸಾರಂಗ ಮಠಕ್ಕೆ ಹೊಂದಿದ ಒಬ್ಬ ಮಹನೀಯರು ಅವರ ಚರಿತ್ರೆಗಳನ್ನು ಹಿಂದಿನಕಾಲದಲ್ಲಿ ಸಂಗ್ರಹಿಸಿ ಬರೆದಿದ್ದು ನಮಗೆ ಅಕಸ್ಮಾತ್ತಾಗಿ ದೊರೆಯಿತು. ಅವುಗಳನ್ನು ನಾವು ಪರಿಶೀಲಿಸಲಾಗಿ ಸಾರಂಗಮಠಾಧೀಶ್ವರರು ಮುಸಲ್ಮಾನ ಧರ್ಮವು ಕರ್ನಾಟಕದಲ್ಲಿ ಪ್ರಸಾರವಾಗದಂತೆ ಅವರು ಪ್ರಯತ್ನಿಸಿದ್ದು ನಮಗೆ ತೋರಿ ಬಂದಿತು. ಇದರಲ್ಲಿ ಅವರು ಯಾವತರದ ರಕ್ತಪಾತವನ್ನು ಮಾಡಿಲ್ಲ. ಅವರು ತಮ್ಮ ಸಮಾಜದವರನ್ನು ಸಕಾಲದಲ್ಲಿ ಎಚ್ಚರಿಸುತ್ತ ಬಂದರು. ಇದರಿಂದ ವೀರಶೈವ ಧರ್ಮವು ಇಲ್ಲಿ ರಕ್ಷಣೆಯನ್ನು ಹೊಂದಿತು. ಅವರ ಕಾರ್ಯಗಳು ಈಗಿನ ಮಠಾಧೀಶರರೆಲ್ಲರಿಗೂ ಅನುಕರಣೀಯವಾಗಿರುತ್ತವೆ. ಆದ್ದರಿಂದ ನಾವು ಅವರ ಚರಿತ್ರೆಗಳನ್ನು ಇಲ್ಲಿ ಪ್ರಸಿದ್ಧಿಸಿದ್ದೇವೆ. ನಾವು ಮೂಲಗ್ರಂಥದ ಭಾಷೆ ಮತ್ತು ಪದ್ಧತಿಯನ್ನು ಅನುಸರಿಸುತ್ತ ಈ ಚರಿತ್ರೆಯನ್ನು ಬರೆವದ್ದಾಗಿದೆ. ಆದ್ದರಿಂದ ಈ ಗ್ರಂಥವು ಭಾಷಾದೃಷ್ಟಿಯಿಂದ ಪ್ರೌಢತರದ್ದಿರಲಿಕ್ಕಿಲ್ಲ. ಆದರೆ ಸಮಾಜದ ಇತಿಹಾಸದ ದೃಷ್ಟಿಯಿಂದ ಬಹು ಮಹತ್ವದ್ದೆಂದು ನಮಗೆ ತೋರಿದ್ದರಿಂದ ನಾವು ಈ ಗ್ರಂಥವನ್ನು ಶಿವಾನುಭವ ಗ್ರಂಥಮಾಲೆಯಲ್ಲಿ ಸೇರಿಸಿ ಪ್ರಕಟಿಸಿರುತ್ತೇವೆ.

ಇದರ ಪ್ರಕಟನೆಗೆ ಶ್ರೀಮದುಜ್ಜಯಿನಿ ಸದ್ಧರ್ಮ ಸಿಂಹಾಸನಾಧೀಶ ತರಳುಬಾಳು ಜಗದ್ಗುರು ಶ್ರೀ ಶಿವಕುಮಾರ ಶಿವಾಚಾರ್ಯ ಮಹಾಸ್ವಾಮಿಗಳವರು, ಮು. ಶಿರಿಗೆರೆ, ಜಿಲ್ಹಾ ಚಿತ್ರಕಲ್ಲದುರ್ಗ ಇವರು ನಮಗೆ ಸಹಾಯ ಮಾಡಿದ್ದಕ್ಕೋಸ್ಕರ ನಾವು ಅವರಿಗೆ ಬಹಳ ಕೃತಜ್ಞರಾಗಿದ್ದೇವೆ.

ನಾವು ಇದೇತರಹದ ಚಿಕ್ಕ ಚಿಕ್ಕ ಗ್ರಂಥಗಳನ್ನು ಪ್ರಕಟ ಮಾಡುವ ಕಾರ್ಯವನ್ನು ಕೈಕೊಂಡಿರುತ್ತೇವೆ. ಈಚೆಗೆ ಕೆಲ ಮಹನೀಯರು ನಮ್ಮ ಸಲುವಾಗಿ ಒಂದು ನಿಧಿಯನ್ನು ಕೂಡಿಸಲು ಪ್ರಯತ್ನ ಮಾಡುತ್ತಲಿದ್ದಾರೆ. ಅವರಿಗೋಸ್ಕರ ನಾವು ಕೃತಜ್ಞರಾಗಿದ್ದೇವೆ. ಈ ನಿಧಿಯ ಉಪಯೋಗವನ್ನು ನಾವು ಇಂಥ ಗ್ರಂಥಗಳ ಪ್ರಕಟನೆಗೋಸ್ಕರವೇ ಉಪಯೋಗ ಮಾಡಬೇಕೆಂದು ಯೋಚಿಸಿದ್ದೇವೆ. ಈ ನಿಧಿ ಸಂಗ್ರಹ ಕಾರ್ಯವು ಸಿದ್ಧಿಗೆ ಹೋಗುವದು ಪರಮಾತ್ಮನ ಇಚ್ಛೆ. ಆದರೆ ವೀರಶೈವ ಬಾಂಧವರು ನಮ್ಮ ವಾಙ್ಮಯ ಕಾರ್ಯದಲ್ಲಿ ನನಗೆ ಸಹಾಯ ಮಾಡಬೇಕೆಂದು ನಾವು ಅವರನ್ನು ವಿನಂತಿಸುತ್ತೇವೆ.

ವಿಜಾಪುರ
೧೬-೪-೧೯೫೬.

ಫ. ಗು. ಹಳಕಟ್ಟಿ,
ಸಂಪಾದಕ, ಶಿವಾನುಭವ.

# ಸಾರಂಗ ಮಠಾಧೀಶ್ವರರು.



## ಸಾರಂಗದೇವ.

ವೀರಶೈವ ಸಮಾಜದಲ್ಲಿರುವ ಮಠಗಳಿಗಿರುವಂಥ ವ್ಯವಸ್ಥೆಯು ಹಿಂದುಸ್ತಾನದಲ್ಲಿಯು ಬೇರೆ ಯಾವ ಸಮಾಜದಲ್ಲಿಯೂ ಇರುವದಿಲ್ಲೆಂದು ಹೇಳಬಹುದು. ಈ ಮಠಗಳ ಅಂತರ್ವ್ಯವಸ್ಥೆ ಮತ್ತು ಪರಸ್ಪರ ಸಂಬಂಧಗಳು ಒಂದು ಕ್ರಮಬದ್ಧ ರಾಜ್ಯ ಪದ್ಧತಿಯನ್ನು ಹೋಲುತ್ತವೆ. ಇಂಥ ವ್ಯವಸ್ಥೆಯು ವೀರಶೈವ ಸಮಾಜದಲ್ಲಿ ಬಹು ಕಾಲದಿಂದಲೂ ಇದ್ದ ಹಾಗೆ ತೋರುತ್ತದೆ. ಇದು ಯಾವ ರಾಜರ ಅಪ್ಪಣೆಯಿಂದ ಆದುದಲ್ಲ. ಸಮಾಜಕ್ಕೆ ಕಠಿಣ ಪರಿಸ್ಥಿತಿಯು ಉಂಟಾಗಲು ಅದನ್ನು ಎದುರಿಸಿ ಆತ್ಮ ಸಂರಕ್ಷಣೆಯನ್ನು ಮಾಡಿಕೊಳ್ಳುವ ಪ್ರಸಂಗಗಳು ಅದಕ್ಕೆ ಆಗಿಂದಾಗ್ಗೆ ಉಂಟಾದವು. ಅಲ್ಲದೆ ತನ್ನ ಸಾಮಾಜಿಕ ಮತ್ತು ಧಾರ್ಮಿಕ ಉಚ್ಚ ತತ್ವಗಳನ್ನು ಪ್ರಸಾರಗೊಳಿಸುವ ಭಾರವೂ ಅದಕ್ಕೆ ಒದಗಿತು. ಈ ಸ್ಥಿತಿಗಳಲ್ಲಿ ಅದು ಯೋಗ್ಯ ಮಾರ್ಗವನ್ನು ಹುಡುಕಿ ಮುಂದುವರಿಯ ಬೇಕಾಯಿತು. ಈ ಉದ್ದೇಶಗಳನ್ನು ಕೊನೆಗಾಣಿಸಲಿಕ್ಕೆ ಅದಕ್ಕೆ ಕೆಲವೊಂದು ವ್ಯವಸ್ಥೆಯನ್ನು ಮಾಡಿಕೊಳ್ಳುವ ಅವಶ್ಯಕತೆಯು ಉಂಟಾಯಿತು. ಆಗ ಅದು ಕೆಲವು ನಿರ್ಬಂಧಗಳನ್ನಿಟ್ಟುಕೊಂಡು ನಡೆಯಬೇಕಾಯಿತು. ಈ ಸ್ಥಿತಿಯಲ್ಲಿ ಸಮಾಜವಲ್ಲಿ ಕೆಲವು ಕಟ್ಟುಗಳು ಉದಯ ಹೊಂದಿದವು. ಇವುಗಳನ್ನು ಮಠಗಳ ವ್ಯವಸ್ಥೆಯಲ್ಲಿ ಕಾಣಬಹುದು.

ಈ ವೀರಶೈವ ಮಠಗಳು ವೀರಶೈವರಿದ್ದಲ್ಲಿ ಎಲ್ಲ ಕಡೆಗೂ ಪಸರಿಸಿರುತ್ತವೆ. ಅವುಗಳ ಅಧಿಕಾರಿಗಳಿಗೆ ಸಮಾಜದವರು ಮಾನ ಮನ್ನಣೆಗಳನ್ನು ಯಾವಾಗಲೂ ಕೊಡುತ್ತ ಬಂದಿರುವರು. ಈ ಮಠಗಳು ಗ್ರಾಮ ಸುಧಾರಣೆ ಮಾಡಲಿಕ್ಕೂ ಸಾಮಾಜಿಕ ಮತ್ತು ಧಾರ್ಮಿಕ ಸ್ಥಿತಿಯನ್ನು ಸುಧಾರಿಸಿಕೊಳ್ಳಲಿಕ್ಕೂ ಬಹು ಉಪಯುಕ್ತವಾಗಿರುತ್ತವೆ. ವೀರಶೈವ ಆದ್ಯ ಪ್ರವರ್ತಕರು ಈ ಮಠಗಳ ಮೂಲಕವಾಗಿಯೇ ವೀರಶೈವ ಧರ್ಮವನ್ನು ಭಾರತದಲ್ಲಿ ಪ್ರಸಾರಪಡಿಸಿದರು. ಈ ಮಠಗಳಲ್ಲಿ ಬಹುಜನ ವಿದ್ವಾಂಸರು ಆಗಿ ಹೋಗಿದ್ದಾರೆ.

ಅವರು ಅತ್ಯುಚ್ಚ ತರದ ಗ್ರಂಥಗಳನ್ನು ಬರೆದಿದ್ದಾರೆ. ಹೀಗೆ ಮಠಾಧಿಕಾರಿಗಳು ವೀರಶೈವ ಸಂಸ್ಕೃತಿಯನ್ನು ಪೋಷಿಸುತ್ತ ಬಂದಿದ್ದಾರೆ.

ಮಠಾಧಿಕಾರಿಗಳು ರಾಜಕಾರಣದಲ್ಲಿಯೂ ಕೂಡ ರಾಜರಿಗೆ ಪ್ರತ್ಯಕ್ಷ ಮತ್ತು ಅಪ್ರತ್ಯಕ್ಷ ರೀತಿಯಿಂದ ಸಹಾಯಮಾಡುತ್ತ ಬಂದಿದ್ದಾರೆ. ಬಸವೇಶ್ವರನ ಕಾಲದಲ್ಲಿ ಬಹುಜನ ಶಿವಶರಣರು ರಾಜಕಾರಣದಲ್ಲಿ ಸೇರಿದ್ದು ಕಂಡುಬರುತ್ತದೆ. ಸೊಡ್ಡಳ ಬಾಚರಸನು ಬಿಜ್ಜಳನ ಅಂತಃಪುರದಲ್ಲಿ ಸಾಮಾನುಗಳ ಪುರವಠೆಗಾರನಾಗಿದ್ದನು. ಮಧುವರಸನು ಅವನ ಗಜ ಸೈನ್ಯದ ಮೇಲೆ ಸೇನಾಧಿಪತಿಯಾಗಿದ್ದನು. ಇದೇ ಪ್ರಕಾರ ಬಿಜ್ಜಳನ ಸೈನ್ಯ ಮತ್ತು ರಾಜಕಾರಣದಲ್ಲಿ ಅನೇಕ ಶಿವಶರಣರು ಅಂಗವಹಿಸಿ ಕಾರ್ಯಮಾಡಿದ್ದು ತಿಳಿದುಬರುತ್ತದೆ. ಇದರಿಂದ ಬಸವೇಶ್ವರನಿಗೆ ರಾಜ್ಯದ ಆಡಳಿತೆಯಲ್ಲಿ ಅವನಿಗೆ ಬಹಳ ಸಹಾಯವಾಗುತ್ತಿತ್ತು. ಹೀಗೆ ಶಿವಶರಣರು ಬಸವೇಶ್ವರನ ಕಾಲದಲ್ಲಿ ಮಾತ್ರವಲ್ಲ, ಅವನ ತರುವಾಯ ಸಹ ರಾಜಕಾರಣದಲ್ಲಿದ್ದುದು ಕಂಡುಬರುತ್ತದೆ. ಮೋಳಿಗೆಯ ಮಾರಯ್ಯ, ಹಂಪೆಯ ಹರೀಶ್ವರ, ಪುಲಿಗೆರೆಯ ಜಕ್ಕಣ್ಣ ಹೀಗೆ ಅನೇಕ ಉದಾಹರಣೆಗಳನ್ನು ನಾವು ಕೊಡಬಹುದು. ಸಾರಂಗಮಠದವರಾದರೂ ವೀರಶೈವ ಧರ್ಮಪ್ರಸಾರದಲ್ಲಿ ಬಹಳ ಕಾರ್ಯಮಾಡಿದ್ದಾನೆ.

ಬಸವೇಶ್ವರನ ಕಾಲದಲ್ಲಿ ಬಹುಜನ ಶಿವಶರಣರು ಉತ್ಪನ್ನರಾಗಿ ತಮ್ಮ ಸಮಾಜ ಮತ್ತು ಧರ್ಮ ಇವುಗಳಿಗೋಸ್ಕರ ಯುದ್ಧಮಾಡಿದ್ದಾರೆ. ಬಿಜ್ಜಳನ ತರುವಾಯ ಒಂದುನೂರು ವರ್ಷಗಳಾದ ಮೇಲೆ ಮುಸಲ್ಮಾನರ ಹಾವಳಿಗಳು ದಕ್ಷಿಣ ದೇಶದ ಕಡೆಗೆ ಹರಿದು ಬರಹತ್ತಿದವು. ಅವರ ಹಾವಳಿಗಳಿಗೆ ಮಹಾರಾಷ್ಟ್ರ ದೇಶದವರು ಮೊದಲು ತುತ್ತಾದರು, ಆಗ ಅನೇಕ ಸಂತರು ಮಹಾರಾಷ್ಟ್ರ ದೇಶದಲ್ಲೆಲ್ಲ ಉಗಮಿಸಿ ಹಿಂದೂ ಧರ್ಮವನ್ನು ಕಾಪಾಡಿದರು. ಮುಂದೆ ಸ್ವಲ್ಪ ದಿವಸಗಳಲ್ಲಿಯೇ ಮುಸಲ್ಮಾನರ ದಾಳಿಗಳು ಕನ್ನಡ ದೇಶದಲ್ಲಿ ಪ್ರಾರಂಭವಾದವು. ಆದರೆ ಅಷ್ಟರಲ್ಲಿ ಈ ಪ್ರಾಂತದಲ್ಲಿ ವ್ಯವಸ್ಥಿತವಾದ ಮಠಗಳಾಗಿದ್ದರಿಂದ ಮುಸಲ್ಮಾನರಿಗೆ ಹಿಂದೂ ಜನರನ್ನು ಧರ್ಮಾಂತರ ಮಾಡಲಿಕ್ಕೆ ಶಕ್ಯವಾಗಲಿಲ್ಲ. ಇದೇ ಕಾಲದಲ್ಲಿ ಸಾರಂಗದೇವರೆಂಬ ಶಿವಾನುಭವಿಗಳು ಉದಯವಾಗಿ ವೀರಶೈವ ಧರ್ಮವನ್ನು ರಕ್ಷಿಸಿದರು. ಇವರ ಚರಿತ್ರೆಯು ಬಹು ಅಗಾಧವಾಗಿದೆ. ಅದನ್ನು ನಾವು ಇಲ್ಲಿ ಕೊಡುತ್ತೇವೆ.

ಸಾರಂಗ ಮಠಾಧೀಶರಲ್ಲಿ ಮೂವರು ಬಹು ಪ್ರಸಿದ್ಧರಾಗಿದ್ದಾರೆ. ಅವರು ಬಸವೇಶ್ವರನ ತರುವಾಯ ಒಂದು ಶತಮಾನದಿಂದ ಕೆಲವು ಶತಮಾನಗಳವರೆಗೆ

ಆಗಿರುತ್ತಾರೆ. ಇವರ ಮೂಲ ಪೀಠವು ಕೃಷ್ಣಾ ಮಲಾಪಹಾರೀನದಿಗಳ ಸಂಗಮ ಸ್ಥಳವೇ ಇರುತ್ತದೆ. ಇವರು ದಕ್ಷಿಣ ಹಿಂದುಸ್ತಾನದಲ್ಲೆಲ್ಲ ಅನೇಕ ಮಠಗಳನ್ನು ಸ್ಥಾಪಿಸಿದ್ದು ಅವುಗಳಿಗೆ ಅನೇಕ ಶಾಖಾ ಮಠಗಳೂ ಸಹ ಇವೆ. ಈ ಮಠಗಳಲ್ಲಿಯು ಅನೇಕ ಅಧಿಪತಿಗಳು ಹೆಚ್ಚಿನ ತರಗತಿಯ ಧಾರ್ಮಿಕ ಕಾರ್ಯಗಳನ್ನು ಮಾಡಿದ್ದು ಕಂಡುಬರುತ್ತದೆ. ಆದರೆ ಈ ಮಠಗಳಿಗೆಲ್ಲ ಸ್ವತಂತ್ರ ಆಸ್ತಿಯು ಇದ್ದು ಅವುಗಳ ವ್ಯವಸ್ಥೆಯು ಆಯಾ ಮಠಾಧೀಶ್ವರರ ಕಡೆಗೆಯೇ ಇರುತ್ತದೆ. ಈ ಸಾರಂಗ ಮಠಗಳು ವಿರಕ್ತಮಠಗಳಿರದೆ ಗುರುಸ್ಥಲದ ಮಠಗಳಾಗಿರುತ್ತವೆ. ಇವೆಲ್ಲವು ಮರುಳಸಿದ್ಧೇಶ್ವರನ ಶಾಖೆಗೆ ಹೊಂದಿದವು ಇದ್ದು ಇವುಗಳಲ್ಲಿ ಬಹಳ ಜನ ಮಠಾಧೀಶರು ಸಂಸಾರಿಕರಿದ್ದಾರೆ. ಅವರು ಸಮಾಜದಲ್ಲಿ ಗಣನೀಯರು ಆಗಿರುತ್ತಾರೆ. ಮೂಲ ಸಾರಂಗ ಮಠಾಧಿಪತಿಗಳು ಸಂಸಾರಿಕರೇ ಇದ್ದರು. ನಾವು ಕೆಳಗೆ ಕಾಣಿಸಿದ ಸಂಗತಿಗಳು ಯಾವ ಆಧಾರದಿಂದ ಬರೆದಿದ್ದೇವೆಂಬುವನ್ನು ಸ್ವಲ್ಪದರಲ್ಲಿ ವಿವರಿಸುವದು ಬಹು ಅವಶವಾಗಿದ್ದು ಅದನ್ನು ಕೆಳಗೆ ಕಾಣಿಸಿರುತ್ತೇವೆ.

ಕಪ್ಪಡಿಯ ಸಂಗಮೇಶ್ವರ ದೇವಾಲಯದ ಆವಾರದಲ್ಲಿ ಸಾರಂಗಮಠವೆಂಬ ಕಟ್ಟಡವಿದ್ದು ಇದೇ ಮೂಲ ಸಾರಂಗೇಶ್ವರರ ಮುಖ್ಯಸ್ಥಾನವಾಗಿತ್ತು. ಈ ಮಠವನ್ನೇ ಅವರು ಮುಖ್ಯವಾಗಿಟ್ಟುಕೊಂಡು ಇಲ್ಲಿಯೇ ಅವರು ಐಕ್ಯ ಹೊಂದಿದರು. ಅವರ ಗದ್ದುಗೆಯು ಈ ಮಠದಲ್ಲಿಯೇ ಇರುತ್ತದೆ.

ಸಾರಂಗ ದೇವನ ಚರಿತ್ರೆಯ ಅಂಶಗಳಿದ್ದ ಒಂದು ಕೈಬರಹದ ಹೊತ್ತಿಗೆಯನ್ನು ಈ ಕಪ್ಪಡಿಯ ಸಾರಂಗಮಠದ ಅಧಿಕಾರಿಗಳು ಎಳೆಂಟು ವರ್ಷಗಳ ಹಿಂದೆ ನನ್ನ ಕಡೆಗೆ ತಂದುಕೊಟ್ಟರು. ಇದರಲ್ಲಿ ೫೪ ಪುಟಗಳಿದ್ದು ಅದರಲ್ಲಿ ವಾರ್ಧಿಕ ಷಟ್ಪದಿಯಲ್ಲಿ ಬರೆದ ನಾಲ್ಕು ಅಧ್ಯಾಯಗಳು ಇರುತ್ತವೆ. ಗ್ರಂಥದ ಅಂತ್ಯದಲ್ಲಿ ಬರೆದಿರುವದೇನಂದರೆಃ— ಗಣನೆ ಎಷ್ಟು ಎಂದರೆ ೪೩ ವಾರ್ಧಿಕ ೫೧ ಗ್ರಂಥ ೪ ಕಂದ ೪ ಗದ್ಯಸಂಪೂರ್ಣ ಎಂದು ಇದೆ. ಇದರ ಮೇಲಿಂದ ಈ ಗ್ರಂಥದ ವಿಸ್ತಾರವು ಎಷ್ಟಿದೆ ಎಂಬುದನ್ನು ನಾವು ತಿಳಿಯಬಹುದು. ಗ್ರಂಥದ ಅಂತ್ಯದಲ್ಲಿ ಕೆಳಗೆಬರೆದಂತೆ ವಿವರಣೆ ಇರುತ್ತದೆ.

ಶ್ರೀಮತ್ ಪರಮ ಪಾವನ ಚಾರು ಚರಿತ್ರೆ ಚರಚಕ್ರವರ್ತಿ ಘನಲಿಂಗ ಚರಮೂರ್ತಿ ಕಾಶೀಸಾರಂಗ ಸಿಂಹಾಸನಪತಿ ಧರ್ಮ ಕಪ್ಪಡಿ ಕಾರಣ ಕರ್ತರಾದಂಥ ವೃಷಭಾದ್ರಿಯಚಲವಾಸ ಸಮ್ಮತ ಪರುತ ಪೇಟೆ ಅಧಿಕಾರಿಗಳಾದಂಥ ಗುರುಸಾರಂಗ ದೇವರ ಶಿವಸಂಗಪ್ಪನವರು ಮಾಡಿದ ಚತುರ್ಥಾಧ್ಯಾಯವು.

ಇದರ ಮೇಲಿಂದ ಈ ಗ್ರಂಥಕರ್ತೃ ಕೆಸ್ಕರ ಶಿವಸಂಗಪ್ಪ ಎಂಬ ಹೆಸರಿನ ಮಠಾಧೀಶ್ವರರು ವಿಷಯ ಸಂಗ್ರಹಮಾಡಿದರೆಂದು ತಿಳಿದು ಬರುತ್ತದೆ.

ಈ ಗ್ರಂಥವಲ್ಲದೆ ವಿಜಾಪೂರ ಜಿಲ್ಲಾ ಗುಳೇದಗುಡ್ಡದಲ್ಲಿಯೂ ಸಾರಂಗ ಮಠವಿದ್ದು ಈ ಮಠದ ಅಧಿಕಾರಿಗಳಲ್ಲಿಯೂ ಸಾರಂಗದೇವರ ಚರಿತ್ರೆಯು ಇದೆ. ಇದನ್ನು ನನಗೆ ನೋಡಲು ಈ ಮಠದ ಅಧಿಕಾರಿಗಳು ನನಗೆ ಅವಕಾಶ ಕೊಟ್ಟಿದ್ದು ಇದರಲ್ಲಿಯ ವೃತ್ತಾಂತವು ಸಂಗಮ ಮಠದಲ್ಲಿಯ ಗ್ರಂಥಕ್ಕೆ ಕೂಡುವದಲ್ಲದೆ ಇದರಲ್ಲಿ ಗುಳೇದಗುಡ್ಡ ಮಠಕ್ಕೆ ಸಂಬಂಧಪಟ್ಟ ಈಚಿನ ಅನೇಕ ವಿಷಯಗಳು ಸೇರ್ಪಡೆಯಾಗಿರುತ್ತವೆ. ಮೇಲ್ಕಂಡ ಎರಡು ಗ್ರಂಥಗಳ ಆಧಾರದಿಂದ ಸಾರಂಗ ದೇವರ ಚರಿತ್ರೆಯು ಇಲ್ಲಿ ಬರೆಯಲ್ಪಟ್ಟಿದೆ.

ಈ ಎರಡು ಹಸ್ತಲಿಖಿತ ಗ್ರಂಥಗಳಲ್ಲಿ ಕಪ್ಪಡಿಸಂಗಮೇಶ್ವರದಲ್ಲಿಯ ಚರಿತ್ರೆಯು ಪುರಾತನದ್ದು ಇದೆ. ಅದರಲ್ಲಿ ಮೂಲ ಸಾರಂಗೇಶ್ವರನ ಚರಿತ್ರೆಯು ಬಂದಿರುತ್ತದೆ.

ಸಾರಂಗದೇವನ ಜನ್ಮಸ್ಥಳವು ಯಾವುದು ಮತ್ತು ಅವನ ತಾಯಿತಂದೆಗಳಾರು ಮತ್ತು ಅವನು ಯಾವಾಗ ಇದ್ದನು ಎಂಬ ವಿಷಯಗಳು ಈ ಎರಡೂ ಗ್ರಂಥಗಳಿಂದ ಏನೂ ತಿಳಿಯುವದಿಲ್ಲ. ಆದರೂ ಅವನು ಮಾಡಿದ ಕಾರ್ಯಗಳಿಂದ ಅವನು ಯಾವಾಗ್ಗೆ ಇದ್ದನೆಂಬುದನ್ನು ನಾವು ಊಹಿಸಬಹುದು.

ಅವನ ಚರಿತ್ರೆಯು ಒಂದು ಪುರಾಣದಂತಿದ್ದು ಅದರಿಂದ ತಿಳಿದು ಬರುವದೇನಂದರೆ, ಶಿವನು ತನ್ನ ಒಡ್ಡೋಲಗದಲ್ಲಿದ್ದಾಗ್ಗೆ ನಾರದಮುನಿಯು ಅವನಲ್ಲಿಗೆ ಬಂದು ಪೃಥ್ವಿಯಲ್ಲಿ ದುರ್ನೀತಿಗಳು ಬಹಳ ಬೆಳೆದಿವೆ. ಆದ್ದರಿಂದ ಒಬ್ಬ ಮಹಾಪುರುಷನನ್ನು ಅಲ್ಲಿಗೆ ಕಳಿಸಿ ಜನರನ್ನು ಪುನೀತರನ್ನಾಗಿ ಮಾಡಬೇಕೆಂದು ವಿಜ್ಞಾಪಿಸಿಕೊಂಡನು. ಆಗ ಶಿವನು ತನ್ನ ದಕ್ಷಿಣಭಾಗವನ್ನು ಅವಲೋಕಿಸಲು ಆ ಭಾಗದಿಂದ ಸಾರಂಗಮುನಿವರನು ಉತ್ಪನ್ನನಾದನು. ಆಗ ಶಿವನು ಅವನಿಗೆ- ಭೂಲೋಕದಲ್ಲಿ ನೀನು ಅವತರಿಸಿ ಅನಾಚಾರವು ಬಹು ಹೆಚ್ಚಾಗಿದೆ. ಜನರಲ್ಲಿ ಸದಾಚಾರವು ಉಳಿದಿರುವದಿಲ್ಲ. ನೀನು ಪೃಥ್ವಿಯಲ್ಲಿ ಅವತರಿಸಿ ಜನರನ್ನು ಉದ್ಧರಿಸು ಎಂದು ತಿಳಿಸಿದನು. ಆಗ ಸಾರಂಗಮುನಿವರನು ಮೊದಲು ಕಾಶೀಪಟ್ಟಣಕ್ಕೆ ಬಂದನು. ಅಲ್ಲಿ ಕಲೀಂದ್ರರು (ಮುಸಲ್ಮಾನರು) ಜನರ ಮೇಲೆ ರಾಜ್ಯ ಮಾಡುತ್ತ ಪ್ರಬಲರಾಗಿದ್ದರು. ಆಗ ಈ ಭಾಗ

ದಲ್ಲಿ ಮಳೆಯು ಬೀಳವೆ ಜನರು ತಾಪತ್ರಯವನ್ನು ಪಡುತ್ತಿರುವದನ್ನು ಸಾರಂಗಮುನಿಯು ನೋಡಿ ಅಲ್ಲಿ ಪರ್ಜನ್ಯವು ಬರುವಂತೆ ಮಾಡಿದನು. ಹೀಗೆ ಜನರ ಸಂಕಷ್ಟಗಳನ್ನು ದೂರಮಾಡಿದನು. ಆಗ ಸಾರಂಗದೇವ ನಿಗೆ "ಮಳೆಯು ಮಲ್ಲೇಶ" ನೆಂಬ ಹೆಸರು ಪ್ರಾಪ್ತವಾಯಿತು. ಆಗ ಬಾದಶಹನು ಅವನನ್ನು ತನ್ನಲ್ಲಿಗೆ ಬರಮಾಡಿಕೊಂಡು ಅವನು ಮಹತ್ವಿಕ ನೆಂದು ಅವನಿಗೆ ತಿಳಿಯಲು ಬಾದಶಹನು ಸಾರಂಗಮುನಿಯ ಶಿಷ್ಯತ್ವ ವನ್ನು ಅಂಗೀಕರಿಸಿದನು. ಬಾದಶಹನು ಅವನಿಗೋಸ್ಕರ ಒಂದು ಮಠವನ್ನು ಕಾಶಿಯಲ್ಲಿ ಕಟ್ಟಿಸಿಕೊಡಲು ಸಾರಂಗದೇವನು ಅಲ್ಲಿ ಬಸವಲಿಂಗ ದೇಶಿಕ ನೆಂಬ ಶಿಷ್ಯನನ್ನು ಇಟ್ಟು ತಾನು ದಕ್ಷಿಣ ದೇಶಕ್ಕೆ ಧರ್ಮಬೋಧೆ ಮಾಡುತ್ತ ತೆರಳಿದನು.

ಇದರಿಂದ ಸಾರಂಗದೇವನು ಕಾಶೀಪಟ್ಟಣದವನೆಂಬ ಅನುಮಾನವು ಉಂಟಾಗುತ್ತದೆ. ಸಾರಂಗದೇವನ ಒಕ್ಕಣಿಕೆಯಲ್ಲಿ "ಘನಲಿಂಗ ಚರಮೂರ್ತಿ ಕಾಶೀಸಾರಂಗ ಸಿಂಹಾಸನಪತಿ" ಎಂಬ ಶಬ್ದಗಳು ಇರುವದು ಕಂಡುಬರುತ್ತದೆ. ಸಾರಂಗದೇವನ ಹೆಸರಿದ್ದ ಪತ್ರಗಳನ್ನು ಕಪ್ಪಡಿ ಸಂಗಮನಾಥ ಮತ್ತು ಗುಳೇದ ಗುಡ್ಡ ಮಠಸ್ಥರು ನನಗೆ ತೋರಿಸಿದರು. ಅವುಗಳಲ್ಲಿ 'ಕಾಶೀ ಸಾರಂಗ ಸಿಂಹಾ ಸನಪತಿ' ಎಂದು ಬರೆದದ್ದನ್ನು ನಾನು ನೋಡಿದ್ದೇನೆ.

ಕಾಶೀ ಪಟ್ಟಣದಲ್ಲಿ ಸಾರಂಗದೇವನಂತೆ ಕೆಲವು ಶಿವಶರಣರು ಉದ್ಭವಿಸಿದ್ದು ಅವರು ವಚನಕಾರರು ಇದ್ದಾರೆಂಬುದು ಗೊತ್ತಾಗುತ್ತದೆ. ಇದರ ಮೇಲಿಂದ ಕರ್ನಾಟಕ ದೇಶದಲ್ಲಿ ಆಗಿ ಹೋದ ಅನೇಕ ಶಿವಶರಣರು ಉತ್ತರ ದೇಶದಲ್ಲಿ ಬಂದು ತಮ್ಮ ಷಟ್‌ಸ್ಥಲ ಸಿದ್ಧಾಂತವನ್ನು ಪ್ರಸಾರಗೊಳಿಸಿರಬಹುದೆಂದು ತೋರುತ್ತದೆ. ಈ ಶಿವಶರಣರಲ್ಲಿ ಮುಖ್ಯರಾದವರು ರೇವಣಸಿದ್ಧೇಶ್ವರ, ಅಲ್ಲಮಪ್ರಭು ಇವರು ಇದ್ದು ಬಸವೇಶ್ವರನು ಸಹ ಕಾಶ್ಮೀರದ ವರೆಗೂ ಪ್ರವಾಸ ಮಾಡಿದಂತೆ ವೀರಶೈವ ಪುರಾಣಗಳಿಂದ ತೋರಿ ಬರುತ್ತದೆ. ಬಹು ಜನ ಜಂಗಮರು ಕಾಶ್ಮೀರದಲ್ಲಿದ್ದು ಅವರು ಆಗಿಂದಾಗ್ಗೆ ಕಲ್ಯಾಣ ಉಜ್ಜ ಯಿನಿ, ಶ್ರೀಶೈಲ ಇಲ್ಲಿಗೂ ಬಂದು ಶಿವತತ್ವ ಪ್ರಸಾರ ಕಾರ್ಯಗಳನ್ನು ಮಾಡಿ ರುವರು.

ಸಾರಂಗದೇವನು ಕಾಶಿಯಲ್ಲಿ ಬಾದಶಹನಿಂದ ಹಿಂದುಗಳ ಧರ್ಮಕ್ಕೆ ಚ್ಯುತಿ ಬಾರದಂತೆ ವರ್ತಿಸುವೆನೆಂದು ಆಶ್ವಾಸನವನ್ನು ಹೊಂದಿದವನಾಗಿಅವನು ದಕ್ಷಿಣ ಪ್ರಾಂತಕ್ಕೆ ಬರುವವನಾದನು. ಈ ದಕ್ಷಿಣ ಪ್ರಾಂತದಲ್ಲಿ ಶ್ರೀಶೈಲದಲ್ಲಿ ಒಂದು

ಸಂಸ್ಥಾನವಿದ್ದು ಅಲ್ಲಿ ಸಾರಂಗದೇವನೆಂಬ ಅರಸನು ಆಳುತ್ತಿದ್ದನು. ಅವನಿಗೆ ಕೈಕಾಲುಗಳಿಲ್ಲದೆ ಕಷ್ಟದಿಂದ ಬಳಲುತ್ತಿದ್ದನು. ಆಗ ಅವನು ಅಲ್ಲಿ ಕಷ್ಟತರ ವಾದ ತಪಸ್ಸನ್ನಾಚರಿಸುತ್ತಿದ್ದನು. ಆಗ ಮಳೆಯ ಮಲ್ಲೇಶ್ವರನು 'ಕಪಿಲ ಸಿದ್ಧ' ಎಂಬ ಹೆಸರಿನಿಂದ ಈ ಪ್ರಾಂತದಲ್ಲೆಲ್ಲ ಬಹು ಪ್ರಸಿದ್ಧಿಯನ್ನು ಹೊಂದಿದ್ದನು. ಆಗ ಸಾರಂಗದೇವ ನೃಪತಿಯು ಅವನನ್ನು ತನ್ನಲ್ಲಿಗೆ ಬರಮಾಡಿಕೊಂಡು ಅವನಿಗೆ ಶರಣಾಗತನಾಗಲು ಅವನಿಗೆ ಕೈಕಾಲುಗಳು ಬಂದವು. ಆಗ ಅರಸನು ಅವನಿಗೋಸ್ಕರ ಬಹಳ ಭಕ್ತಿಯನ್ನು ತಾಳಿ ಅವನಿಗೆ ಸಿದ್ದಾಪೂರ ಎಂಬ ಗ್ರಾಮ ವನ್ನು ಕಾಣಿಕೆಯಾಗಿ ಅರ್ಪಿಸಿದನು. ಮತ್ತು ತನ್ನ ಹೆಸರನ್ನೇ ಇಟ್ಟುಕೊಳ್ಳಬೇ ಕೆಂದು ಅರಸನು ವಿಜ್ಞಾಪಿಸಿಕೊಳ್ಳಲು ಸಾರಂಗ ಮುನಿಯು ತನ್ನ ಮೊದಲಿನ ಹೆಸರು ಕಪಿಲಸಿದ್ಧೇಶ್ವರ ಎಂಬುದು ಇದ್ದು ಅದನ್ನು ಬಿಟ್ಟು 'ಸಾರಂಗದೇವ' ನೆಂಬ ಹೆಸರನ್ನು ತಾಳಿದನು. ಮತ್ತು ಶ್ರೀ ಪರ್ವತದಲ್ಲಿ ಸಾರಂಗಮಠವೆಂಬ ಹೆಸರಿನಿಂದ ಒಂದು ಮಠವನ್ನು ಸ್ಥಾಪಿಸಿದನು. ಈ ಸಾರಂಗ ಮಠವು ಈಗಲೂ ಅಲ್ಲಿ ಅಸ್ತಿತ್ವದಲ್ಲಿದೆ.

ಈ ಕಾಲದಲ್ಲಿ ಶ್ರೀಶೈಲದಲ್ಲಿ ಜನವಸತಿಯುಳ್ಳ ಒಂದು ಪಟ್ಟಣವು ಅಸ್ತಿ ತ್ವದಲ್ಲಿತ್ತು. ಈ ಸ್ಥಳವು ಈಗಿನಂತೆ ನಿರ್ಜನ ಪ್ರದೇಶವಾಗಿರಲಿಲ್ಲ. ಅಲ್ಲಿಯ ದೇವಾಲಯಗಳಿಗೆ ಹಿಂದೂ ರಾಜರು ಭಕ್ತಿಯುಳ್ಳವರಾಗಿ ನಡಿಯುತ್ತ ಅವುಗ ಳಿಗೆ ಕಾಣಿಕೆಗಳನ್ನು ಕೊಡುವರು. ಅಲ್ಲಿ ಒಂದು ಸಿಂಹಾಸನವೂ ಸ್ಥಾಪಿತ ವಾಗಿತ್ತು. ದೇವರದಾಸಿಮಯ್ಯನಂತೆ ಬಹುಜನರು ಅಲ್ಲಿ ತಪಸ್ಸನ್ನಾಚರಿಸು ತ್ತಿದ್ದರು. ಮುಂದೆ ಪರಧರ್ಮೀಯರ ಹಾವಳಿ ಹೆಚ್ಚಾಗಲು ಇಲ್ಲಿ ಜನರು ಬಂದು ನಿಲ್ಲುವದು ನಿಂತು ಹೋಯಿತು. ಆಗ ಅದು ನಿರ್ಜನ ಸ್ಥಲ ವಾಯಿತು.

ಈ ಕಾಲದಲ್ಲಿ ಈ ಸ್ಥಳದಲ್ಲಿ ಚಾಲುಕ್ಯ ರಾಜರೂ, ಯಾದವ ರಾಜರೂ, ಗಜಪತಿ ರಾಜರೂ ಕೆಲಕಾಲ ಆಳಿದರು. ಅವರು ಆಳಿ ಹೋದ ಬಳಿಕ ಇಸ್ಲಾಮ ಧರ್ಮದ ಪ್ರಾಬಲ್ಯವು ಹೆಚ್ಚಾಯಿತು. ಆದರೆ ಬೇಡರಾದ ಕಂಪಿಲ ರಾಜನು ಮುಸಲ್ಮಾನರನ್ನು ಸೋಲಿಸಿ ತನ್ನ ರಾಜ್ಯವನ್ನು ಸ್ಥಾಪಿಸಿದನು. ಆದರೆ ಮುಂದೆ ಸ್ವಲ್ಪ ಕಾಲದಲ್ಲಿಯೇ ಈ ರಾಜನ ರಾಜ್ಯವೂ ನಷ್ಟವಾಯಿತು. ಆಗ ಹಿಂದೂ ಧರ್ಮಕ್ಕೆ ಗ್ಲಾನಿಯು ತಲೆದೋರಿತು. ಈ ಪುಲಿಚೆರೆಯ ರಾಜನು ದಕ್ಷಿಣ ದೇಶದಲ್ಲಿ ಪ್ರಬಲನಾಗಲಾಗಿ ಅವನು ಸಾರಂಗದೇವ ನನ್ನು ಶ್ರೀಶೈಲದಿಂದ ತನ್ನ ರಾಜ್ಯಕ್ಕೆ ಬರಮಾಡಿಕೊಂಡು ಕುಂಭಕೋಣೆ

ಎಂಬ ಗ್ರಾಮದಲ್ಲಿ ಅವನಿಗೆ ಒಂದು ವಿಶಾಲವಾದ ಮಠವನ್ನು ಕಟ್ಟಿಸಿ ಕೊಟ್ಟನು. ಆಗ ಸಾರಂಗದೇವನು ಮೂರುಸಾವಿರ ಲಿಂಗಧೀರರಿಗೆ ವೀರಶೈವ ದೀಕ್ಷೆಯನ್ನು ಕೊಟ್ಟು ಅವರನ್ನು ಮಠದಲ್ಲಿಟ್ಟುಕೊಂಡು ಪರವಾದಿಗಳ ಅಕ್ರಮಣವನ್ನು ತಡೆದನು. ಒಂದು ವೇಳೆ ಅವನು ಹೀಗೆ ಜನರನ್ನು ನೆರಿಸಿ ಇಸ್ಲಾಮ ದರ್ಮೀಯರನ್ನು ಪ್ರತಿಭಟಿಸದೆ ಇದ್ದಿದ್ದರೆ ಇಸ್ಲಾಮ ಧರ್ಮವು ಈ ಭಾಗದಲ್ಲಿ ಬೆಳೆಯುತ್ತ ಹೋಗುತ್ತಿತ್ತು. ಈ ಸ್ಥಿತಿಯುಂಟಾದಾಗ ಕರ್ನಾಟಕದ ಉತ್ತರಭಾಗದಲ್ಲಿ ಬಾಮನೀ ರಾಜ್ಯವು ಸ್ಥಾಪಿಸಲ್ಪಟ್ಟಿತು. ಆಗ ವಿಜಯನಗರದ ರಾಜರ ಕೂಡ ಘೋರವಾದ ಕಾಳಗಗಳು ನಡೆದವು. ಆಗ ಅಸಂಖ್ಯ ಹಿಂದೂ ಜನರು ಘಾತಿಸಲ್ಪಟ್ಟರು. ಅನಾಚಾರ ದುರ್ಮಾರ್ಗಗಳು ಹೆಚ್ಚಿದವು. ಈ ಸ್ಥಿತಿಯುಂಟಾದದ್ದನ್ನು ಸಾರಂಗದೇವನು ತಿಳಿದು ಅವನು ಕುಂಭಕೋಣೆಯ ಮಠದಲ್ಲಿ ಸಿದ್ಧವೀರ ದೇವರೆಂಬ ಶಿಷ್ಯನನ್ನು ನೇಮಿಸಿದನು. ಮತ್ತು ಪುದುಚರಿಯ ಅರಸನಿಗೆ ಶೀವದೀಕ್ಷೆಯನ್ನು ಕೊಟ್ಟನು. ಈ ಕಾಲದಲ್ಲಿ ಈ ಮಠಕ್ಕೆ ಲಕ್ಷಾಂತರ ರೂಪಾಯಿ ಬೆಲೆಯುಳ್ಳ ಸ್ವಾಸ್ತಿಗಳೂಉಂಬಳಿಗಳೂ ದೊರೆದವು. ಆಗ ಮಲಬಾರ ಪ್ರಾಂತದ ವರೆಗೆ ಸಾವಿರಾರು ಜನ ಶಿಷ್ಯರನ್ನು ಸಾರಂಗದೇವನು ಮಾಡಿಕೊಂಡು ಉತ್ತರ ಭಾಗಕ್ಕೆ ಬಂದ ಗಂಡಾಂತರವನ್ನು ದೂರಮಾಡಬೇಕೆಂದು ಅತ್ತಕಡೆಗೆ ನಡೆದನು. ಈ ಕಾಲದಲ್ಲಿ ಈ ಮಠದ ಉತ್ಪನ್ನವು ಲಕ್ಷಾಂತರ ರೂಪಾಯಿಗಳ ವರೆಗೆ ಇದ್ದಿತೆಂದು ತಿಳಿಯುತ್ತದೆ.

ಮುಂದೆ ಸಾರಂಗದೇವನು ವೈಸೂರ ಸಂಸ್ಥಾನದಲ್ಲಿರುವ ತುಮಕೂರ ಜಿಲ್ಲೆಯಲ್ಲಿರುವ ಶಿವಗಂಗೆಯ ಕ್ಷೇತ್ರಕ್ಕೆ ಬಂದನು. ಈ ಭಾಗದಲ್ಲಿ ಅನೇಕ ಕಾಲ ಮಳೆ ಇಲ್ಲದೆ ದುರ್ಭಿಕ್ಷೆ ಬಿದ್ದಿರಲು ಅಲ್ಲಿ ಮಳೆಯು ಕರಿಯುವಂತೆ ಮಾಡಲು ಅವನಿಗೆ ಮಳೆಯ ಮರುಳಸಿದ್ಧೇಶ್ವರ ಎಂಬ ಹೆಸರು ಬಂದಿತು. ಈ ಶಿವಗಂಗೆಯ ಸ್ಥಳದಲ್ಲಿಯೂ ಗುಮ್ಮಳಾಪುರವೆಂಬ ಗ್ರಾಮದಲ್ಲಿಯೂ ಸಾರಂಗದೇವರು ಮಠಗಳನ್ನು ಸ್ಥಾಪಿಸಿ ಅವುಗಳಿಗೆ ಸಿದ್ಧಲಿಂಗದೇಶಿಕನೆಂಬ ಶಿಷ್ಯನನ್ನು ನೇಮಿಸಿದನು.

ಆ ಮೇಲೆ ಬಳ್ಳಾರಿ ಜಿಲ್ಲಾ ಉಜ್ಜನಿಗೆ ಬಂದನು. ಅಲ್ಲಿಂದ ಕಪ್ಪಡಿಯ ಸಂಗಮನಾಥನ ಸ್ಥಳಕ್ಕೆ ಬಂದನು. ಈ ಬಗ್ಗೆ ಗ್ರಂಥದಲ್ಲಿಯ ವಿವರಣೆಗಳು ಏನಂದರೆ:—

" ಶತ್ರುಗಳು ಭಕ್ತರ ಮಾಡಿ ಮರುಳಾರ್ಯನೆನಿಸಿಕೊಂಡು ಯತ್ರ (?) ಭಾವದಿ ಕಪ್ಪಡಿಯ ಸ್ಥಳಕ್ಕೆ ತಾವು ಬಂದು ನದಿಯಲ್ಲಿ ನಿಂದುಕೊಂಡು ಸಂಗ ಮೇಶ್ವರಲಿಂಗ, ವಿದಿತ ದರುಶನಗೊಂಡು ಲಿಂಗಪೂಜೆಯಮಾಡಿ | ಸದಮಲಾ ತ್ಮನ ಭಕ್ತಿಯನು ಕೈಕೊಂಡು | ಮುದದಿ ಮಠವನು ರಚಿಸಿದಂ | ಚಂದದಲಿ ಬರಿಸಿದತ್ತನು ಪರರಾಯರ ಭಕ್ತಿಲಿ | ಒಂದೊಂದು ಸ್ವಾಸ್ತಿ ವಿತ್ತಗಳ ಪಡ ಕೊಂಡು ಪತ್ರಗಳ ಸಹಿತ | ಕಂದು ಗೊರಳನವತಾರ ಮೂರ್ತಿ ಸಾರಂಗದೇವರ ನಾಮದಿಂದ ಮೆರೆದನು. || ೮ ||

ಇದರ ಮೇಲಿಂದ ಉಜ್ಜಯನಿಯಿಂದ ಸಾರಂಗದೇವನು ಕಪ್ಪಡಿ ಸಂಗ ಮೇಶ್ವರನಲ್ಲಿಗೆ ಬಂದು ಅಲ್ಲಿ ಒಂದು ಮಠವನ್ನು ಕಟ್ಟಿಸಿ, ಅನೇಕ ರಾಜ ರಿಂದ ಸ್ವಾಸ್ತಿಗಳ ಪಡೆದನು. ಈ ಸಾರಂಗ ಮಠವು ಸಂಗಮೇಶ್ವರ ದೇವಾ ಲಯದ ಬಲಪಕ್ಕದಲ್ಲಿಯೇ ಈಗಲೂ ಇರುತ್ತದೆ. ಮುಂದೆ ಸ್ವಾಸ್ತಿಗಳನ್ನು ಪಡೆದಿದ್ದರ ವೃತ್ತಾಂತವು ಈ ಪ್ರಕಾರ ವಿವರಿಸಲ್ಪಟ್ಟಿರುತ್ತದೆ. ಅದು ಏನಂದರೆ-

ಪರಗಣೆ ಕರ್ತು ವಿಜಾಪುರ ಪ್ರಾಂತದೊಳು ಮೆರೆವದೊಂದು ಯಳನುಲಿ ಎಂಬ ಪುರದರಸು | ವರ ಚಂದ್ರಶೇಖರನು ಸುಖದಿಂದ ರಾಜ್ಯವಾಳುತ್ತಿರಲು ಸಂತೋಷದಿಂದೆ || ಚರತಿಂಥಣಿ ಇದಿರ್ಗೊಂಡು ಕರತಂದು ತನ್ನ ಅರಮನೆ ಯಲ್ಲಿ ತೃಪ್ತಿಪಡಿಸಿ ಹರುಷನ ಪಡೆದು ತಾ ವರಪುರವನು ರಚಿಸಿಕೊಟ್ಟ ಹರಕೆಯನು ಪಡಕೊಂಡು ಸುಖದಿಂ ರಾಜ್ಯವಾಳುತಾ || ೧೦ ||

ಅಂದರೆ ಸಾರಂಗದೇವನು ವಿಜಾಪುರ ಜಿಲ್ಹೆಯಲ್ಲಿರುವ ಈಗಿನ ಆಲ ಮೇಲಕ್ಕೆ ಬಂದು ಅಲ್ಲಿ ಆಳುತ್ತಿದ್ದ ಚಂದ್ರಶೇಖರನೆಂಬ ಅಧಿಪತಿಯಿಂದ ಮನ್ನಣೆಯನ್ನು ಹೊಂದಿದನೆಂತಲೂ ಅಲ್ಲಿ ಒಂದು ಮಠವನ್ನು ಸ್ಥಾಪಿಸಿದ ನೆಂತಲೂ ಅಲ್ಲಿ " ತನ್ನ ಪಾದದಲ್ಲಿ ಉದ್ಭವಿಸಿದ ಮರಿಯನ್ನು ಇಟ್ಟಂತೆ'' ಯೂ ತಿಳಿದುಬರುತ್ತದೆ. ಈ ಗ್ರಾಮದಲ್ಲಿ ಸಾರಂಗ ಮಠವೆಂಬ ಮಠವು ಈಗಲೂ ಇರುತ್ತದೆ. ಮುಂದೆ ಅಲ್ಲಿಯ ಒಂದು ತೋಟದಲ್ಲಿ ಬ್ರಹ್ಮರಾಕ್ಷಸನು ವಾಸ ಮಾಡಿಕೊಂಡು ಜನರನ್ನು ಬಹಳ ಪೀಡಿಸುತ್ತಿದ್ದದರಿಂದ, ಸ್ವಾಮಿಗಳು ಅಲ್ಲಿ ಜಪತಪಗಳನ್ನು ನಿರ್ವಹಿಸಿ ಆ ರಾಕ್ಷಸನನ್ನು ಓಡಿಸಿದರೆಂತಲೂ ಹೇಳಲ್ಪಟ್ಟಿದೆ.

ಮುಂದೆ ಆಲಮೇಲಕ್ಕೆ ಸಮೀಪವಾಗಿರುವ ಅಬ್ದುಲ್‌ಪುರಕ್ಕೆ ಹೋಗಿ ಅಲ್ಲಿ ಒಂದು ಮಠವನ್ನು ಸ್ಥಾಪಿಸಿ ಸಿಂದಗಿ ಗ್ರಾಮಕ್ಕೆ ಬಂದನು. ಅಲ್ಲಿ

ಒಂದು ಜೈನ ದೇವಾಲಯದಲ್ಲಿ ಏಳು ಜಡೆಯ ರಾಕ್ಷಸನಿರಲು, ಅದನ್ನು ಸಾರಂಗ ದೇವನು ಓಡಿಸಿ ಆ ದೇವಾಲಯವನ್ನು ಮಠವನ್ನಾಗಿ ಮಾಡಿ ಮೂವರು ಶಿಷ್ಯರನ್ನು ಆ ಸ್ಥಳದಲ್ಲಿ ಇಟ್ಟನು. ಇದರಿಂದ ಅಲ್ಲಿ ಅಧಿಕಾರಿಮಠ, ರಾಕ್ಷಸೀ ಮಠ ಮತ್ತು ಚೌಕೀಮಠ ಎಂದು ಮೂರು ಮಠಗಳಾದವು.

ಮುಂದೆ ಸಾರಂಗದೇವನು ಬಾಗೇವಾಡಿ ಗ್ರಾಮಕ್ಕೆ ಬರಲು, ಅಲ್ಲಿಯ ನಂದಿನಾಥನ ಗುಡಿಯ ಪೂಜೆಯನ್ನು ಬ್ರಾಹ್ಮಣರು ನಿರ್ವಹಿಸುತ್ತಿದ್ದುದನ್ನು ನೋಡಿ ಅಲ್ಲಿಯ ಅಧಿಪತಿಯಿಂದ ಅದನ್ನು ತಪ್ಪಿಸಿ ವೀರಶೈವರನ್ನು ಅಲ್ಲಿ ನಿಯಮಿಸುವಂತೆ ಮಾಡಿ ಅಲ್ಲಿಯೂ ಒಂದು ಮಠವನ್ನು ಸ್ಥಾಪಿಸಿದನು. ಈ ಗ್ರಾಮದಲ್ಲಿ ಸಾರಂಗಮಠವೆಂಬ ಮಠವು ಈಗ್ಗೆಯೂ ಇದೆ.

ಆಮೇಲೆ ಸಾರಂಗದೇವನು ಬೆಳ್ಳುಬ್ಬಿ ಗ್ರಾಮಕ್ಕೆ ಬರಲು, ಈ ಭಾಗದ ಅಧಿಪತಿಯಾದ ಕೊಲ್ಹಾರದ ದೇಸಾಯಿಗೆ ಪಿಶಾಚ ಬಾಧೆಯಾದದ್ದರಿಂದ, ಅದನ್ನು ಅವನು ತಪ್ಪಿಸಿದ ಮೂಲಕ, ಆಸ್ಥಳದಲ್ಲಿ ಅವನಿಗೆ ಒಂದುಮಠವು ಕಟ್ಟಿಸಿ ಕೊಡಲ್ಪಟ್ಟಿತು. ಮತ್ತು ದೇಸಾಯಿಯು ವೀರಶೈವ ದೀಕ್ಷೆಯನ್ನು ಸಾರಂಗ ದೇವನಿಂದ ಹೊಂದಿದ್ದಲ್ಲದೆ ಅಲ್ಲಿಯ ಬಹು ಜನರು ವೀರಶೈವ ಮತವನ್ನು ಅವಲಂಬಿಸಿದರು. ಈ ಬೆಳ್ಳುಬ್ಬಿಯು ಈಗ ವಿಜಾಪುರ ತಾಲೂಕಿನಲ್ಲಿದೆ ಮತ್ತು ಕೊಲ್ಹಾರ ಗ್ರಾಮವು ಬಾಗೇವಾಡಿ ತಾಲೂಕಿನಲ್ಲಿದ್ದು ಅದು ಈ ದೇಸಾಯರ ಗ್ರಾಮವಾಗಿದೆ.

ಮುಂದೆ ಸಾರಂಗದೇವನು ಯರ್ಜರಿ ಎಂಬ ಗ್ರಾಮಕ್ಕೆ ಬಂದು ಅಲ್ಲಿಯೂ ಒಂದು ಮಠವನ್ನು ಸ್ಥಾಪಿಸಿದನು. ಇದು ಹೈದರಾಬಾದ ಸಂಸ್ಥಾನ ದಲ್ಲಿದ್ದು ಈ ಸ್ಥಳದಲ್ಲಿ ಸಾರಂಗ ಮಠವು ಈಗಲೂ ಅಸ್ತಿತ್ವದಲ್ಲಿ ಇದೆ.

ಆ ಮೇಲೆ ಸಾರಂಗದೇವನು ಸಂಗಮಕ್ಕೆ ಬಂದು ವಾಸಿಸಹತ್ತಿದನು.

ಈ ಪ್ರಕಾರ ಅಲ್ಲಿ ಅವನು ವಾಸಿಸುತ್ತಿರಲು "ಗೀಜಗನಪಳ್ಳಿ" ಯಲ್ಲಿ [ಇದು ವಿಜಾಪೂರ ಪಟ್ಟಣದ ಪೂರ್ವದ ಹೆಸರು] ಒಬ್ಬ ಮುಸಲ್ಮಾನ ಅರಸನು ಆಳುತ್ತಿದ್ದು, ಅಲ್ಲಿ ಬೇತಾಳನೊಬ್ಬನು ಅವನನ್ನು ಬಹಳ ತೊಂದರೆ ಪಡಿಸು ತ್ತಿದ್ದದರಿಂದ ಬಾದಶಹನು ಸಾರಂಗದೇವನನ್ನು ತನ್ನಲ್ಲಿಗೆ ಬರಮಾಡಿಕೊಂಡನು. ಆಗ ಸಾರಂಗದೇವನು ಬಾದಶಹನ ಬಾಧೆಯನ್ನು ಪರಿಹಾರ ಮಾಡಲು ಅವನಿಗೆ ಅಲ್ಲಿ ಅನೇಕ ಸ್ವಾಸ್ತ್ಯಗಳನ್ನು ಕೊಟ್ಟನು.

ಇದರಿಂದ ಸಾರಂಗದೇವನ ಕೀರ್ತಿಯು ದೇಶದಲ್ಲಿ ಬಹಳ ಹೆಚ್ಚಾಗಿ ಹಬ್ಬಿತು. ಮುಂದೆ 'ಹನಗುಂದ' ಸೀಮೆಯ ದೇಸಾಯಿ ಮಲ್ಲರಡ್ಡಿ ಎಂಬವನು ಅವನನ್ನು ತನ್ನಲ್ಲಿಗೆ ಬರಮಾಡಿಕೊಂಡು ಅವನಿಂದ ದೀಕ್ಷೆಯನ್ನು ಹೊಂದಿದನು. ಅವನಿಗೆ ಸಂಗಾಪುರ ಎಂಬ ಗ್ರಾಮವನ್ನು ಉಂಬಳಿಯಾಗಿ ಹಾಕಿಕೊಟ್ಟನು. ಈ ಮಲ್ಲರಡ್ಡಿಯು ರಕ್ಕಸಗಿ ದೇಸಾಯರ ಪೂರ್ವಜನಿರಬಹುದೆಂದು ತೋರುತ್ತದೆ.

"ಪರಗಣೆ ಕರ್ತುರ ಹನಗುಂದ ಸೀಮೆ ದೇಸಾಯಿಗಳಾ । ವರ ಮಲ್ಲರಡ್ಡೇರ। ರಕ್ಷಗಿಯ ದೊರೆಗಳ ಭಕ್ತಿಯ ಕೈಕೊಂಡು ಸುಖದಿಂದಿರುತಲಿ ॥೧೩॥ ಪುತ್ರಕಾಮೇಷ್ಠಿ ವರವನಿತ್ತು ಲಿಂಗಪ್ಪ ನಾಮದಿಂ ನೇತೃಭಾವದಿ ಸಂಗಾಪುರ ಗ್ರಾಮವನು । ದತ್ತ ಉಂಬಳಿ ಪಡೆದು ಪತ್ರವನು ಲಿಖಿಸಿಕೊಂಡು ಸಾರಂಗದೇವ ಮುದದಿಂ ॥ ಕರ್ತುರ ದೇಸಾಯಿಗಳ ನಾಮದಿ ಶಕೆ ಸಹಿತ । ಮಿತಿ ಸಾವಿರದ ಎಣಕಿಲಿ ಇನ್ನೂರರವತ್ತು । ಚಿತ್ರಭಾನು ಸಂವತ್ಸರ ಶ್ರಾವಣ ಶುದ್ಧ ದಶಮಿ ಗುರುವಾರದಿಂ ॥೧೪॥

ಆ ಮೇಲೆ ಅದೇ ಹುನುಗುಂದ ತಾಲೂಕಿನಲ್ಲಿರುವ ಕೆಲೂರ ನಾಡಗೌಡರಿಂದ ಕರೆಯಲ್ಪಟ್ಟವನಾಗಿ ಆ ಸ್ಥಳದಲ್ಲಿಯೂ ಸಾರಂಗದೇವನು ಆಸ್ತಿಯನ್ನು ಪಡೆದನು.

"ಪರಕೆಯನು ಕೊಟ್ಟು ತೆರಳುವ ಸಮಯದೊಳು ಬಂದು । ಧರೆಯಲ್ಲಿ ವೈಯಿಕ್ಕಿ ಸಾಷ್ಟಾಂಗ ಪ್ರಣಮನಾಗಿ । ಕೆಲವರ ನಾಡಗೌಡರ ಮಲ್ಲಪ್ಪ ಕರವಿಡಿದು ತಮ್ಮ ಸ್ಥಳಕ್ಕೆ ಕರಕೊಂಡು ಹೋದಬಳಿಕ ॥ ನಿರುತದಿಂದ ಮಠವ ರಚಿಸಿಕೊಟ್ಟು ಮುದದಿಂದೆ । ವರ ತೃಪ್ತಿಗೊಳಿಸಿ ಆಶೀರ್ವಾದವನು ಪಡಕೊಂಡು ತನ್ನ ಅರಮನೆಯಲ್ಲಿ ಸುಖದ ಅನುಭಾವ ಗೋಷ್ಠಿಯಳು ಇರುತಿರಲು ಒಂದು ದಿವಸ ॥೧೫॥ ಸ್ವಾಸ್ತಿ ವಿತ್ತಗಳ ಪಸಗಿ । ವಳ್ಳಾಯ ಮುಂತಾದ ಮಸ್ತಕವ ಮಾಡಿಸಿ ಜಯಪತ್ರವ ಮಾಡಿಕೊಟ್ಟು । ಸ್ವಸ್ತದಿಂದರುತೊಂದು ಗದ್ದಿಗೆಯ ಬಂಧಿಸಿಕೊಟ್ಟು ....

ಆ ಮೇಲೆ ಈಗಿನ ಕುಷ್ಟಗಿ ಸೀಮೆಯಲ್ಲಿರುವ ಚಳ್ಳಗೆರೆಯ ದೇಸಾಯಿ ಕಸ್ತೂರಿಯ ಕೋನೇರಿ ವೆಂಕಪ್ಪನಾಯಕನು ಸಾರಂಗದೇವನನ್ನು ತನ್ನಲ್ಲಿಗೆ ಬರಮಾಡಿಕೊಂಡು ಅನೇಕ ಸ್ವಾಸ್ತಿ ವೃತ್ತಿಗಳನ್ನು ಕಲ್ಪಿಸಿಕೊಟ್ಟನು ಮತ್ತು

ತಾನು ವೀರಶೈವ ಧರ್ಮವನ್ನು ಸ್ವೀಕರಿಸಿದನು. ಅಲ್ಲಿ ಒಂದು ಮಠವೂ ಸ್ಥಾಪಿಸಲ್ಪಟ್ಟು, ಅಲ್ಲಿ ಕಾಲಾರಿ ಸಿದ್ಧದೇಶಿಕ ಎಂಬ ಶಿಷ್ಯನು ಇಡಲ್ಪಟ್ಟನು.

ಮುಂದೆ " ಪೂವಲ್ಲಿಪುರದ ಮಠಾಧಿಕಾರಿ ಪಂಚವಣ್ಣಿಗೆ ಸಿದ್ಧಯ್ಯಗಳ ಮಗಳ ತೆಗೆದು ಆ ಸಿದ್ಧದೇಶಿಕನಿಗೆ ಲಗ್ನ ಕರ್ಮವ ಮಾಡಿ " ಎಂದು ಹೇಳಲ್ಪಟ್ಟದೆ. ಅಂದರೆ ಈ ಶಿಷ್ಯನಿಗೂ ಈಗಿನ ಹೊಲಿಯ ಪಂಚವಣ್ಣಿಗೆಯ ಮಠದವರಿಗೂ ಅವನು ಶರೀರ ಸಂಬಂಧವನ್ನುಂಟು ಮಾಡಿದನೆಂದು ಹೇಳಲ್ಪಟ್ಟದೆ. ಪೂವಲ್ಲಿ ಅಥವಾ ಹೊಲಿಯು ಬೆಳಗಾವ ಜಿಲ್ಲೆಯಲ್ಲಿದೆ.

" ಮೋದದಿಂ ಕಸ್ತುರಿಯ ಕೋನೇರಿ ವೆಂಕಪ್ಪ ನಾಯಕನಿಂದು । ಸದ್ಭಕ್ತಿಯಿಂದೆ ಸಾಷ್ಟಾಂಗ ಪ್ರಣಮಿತನಾಗಿ । ಕೂಡಿ ಸಾಧುಗಳ ಸಹಿತ ಕುಷ್ಟಗಿ ಸೀಮೆಯಲಿ ಚಳ್ಳಗೆರೆಗೆ ಕರಕೊಂಡು ಬಂದನು ॥ ೧೭ ॥

ಭೇದವಿಲ್ಲದೆ ಸ್ವಾಸ್ತಿ ವೃತ್ತಿಗಳ ಗ್ರಾಮವನು ಲಿಖಿಸಿಕೊಟ್ಟು ಮೋದದಿಂದಿರುತಲಿ ॥ ಕಾಮುಹರ ನಂದನ ನಾಮ ಸಂವತ್ಸರ ನೃಪ ಶಾಲಿವಾಹನ ಶಕೆ । ಸಂದುನಾಮವು ಸಾವಿರದ ನೂರೊಂದನೆಯ ಕ್ಷೇಮದಿಂದೆ ಆಶೀರ್ವಾದವ ಕೊಟ್ಟುಬಂದರು ಕಪ್ಪಡಿಯ ಸ್ಥಳಕೆ ಮುದದಿಂ ॥ ೧೮

ಆ ಮೇಲೆ ಸಾರಂಗದೇವನು ವಿಜಯನಗರದ ಅರಸು ದೇವರಾಜನ ಆ ಸ್ಥಾನಕ್ಕೂ ಬಂದು ಅಲ್ಲಿಯೂ ಮನ್ನಣೆ ಹೊಂದಿದನು.

" ಎಲ್ಲ ಚಾಗಿಗಳರಸ ದೇವರಾಜ । ಬಲ್ಲಿದ ಚರಮೂರ್ತಿಗಳಿಗೆ ಮಠವನು ರಚಿಸಿ ಸಾರಂಗದೇವನು । ಅಲ್ಲಿಂದ ಆನೆಗುಂದಿಗೆ ಬಂದು ನಿರ್ಮಿತ ಮಠವನು ಪಡೆದು । ಖುಲ್ಲವಾದಿಗಳ ಗೆದ್ದು ಅಲ್ಲಿ ಮಹತ್ವವಮಾಡಿ । ಅಲ್ಲಿಗಲ್ಲಿ ತೋರುತ ಸಂಗಮ ಸ್ಥಲಕ್ಕೆ ಬಂದನು. " ॥ ೧೨ ॥

ಇದರಿಂದ ಸಾರಂಗದೇವನು ಹಂಪೆಗೂ ಆಮೇಲೆ ಆನೆಗೊಂದಿಗೂ ಬಂದಂತೆ ತಿಳಿಯುತ್ತದೆ. ಈ ಆನೆಗೊಂದಿಯಲ್ಲಿ ತನ್ನ "ಸೂತ್ರದವರನ್ನು ಇಟ್ಟು " ಎಂದು ಹೇಳಿರುವದರಿಂದ ಅಲ್ಲಿ ಒಂದು ಮಠವನ್ನು ಸ್ಥಾಪಿಸಿ ಶಿಷ್ಯನನ್ನು ಅಲ್ಲಿ ಇಟ್ಟಂತೆ ತಿಳಿಯುತ್ತದೆ.

ಈ ಪ್ರಕಾರ ಸಾರಂಗದೇವನು ಶ್ರೀಶೈಲದಿಂದ ತಮಿಳುದೇಶದ ವರೆಗೆ ಪ್ರವಾಸಮಾಡಿ ಅನೇಕ ಧಾರ್ಮಿಕ ಕೃತ್ಯಗಳನ್ನು ಎಸಗಿದನು ಮತ್ತು ಅನೇಕ ಮಠಗಳನ್ನು ಸ್ಥಾಪಿಸಿದನು. ಈ ಪ್ರಕಾರ ಸ್ಥಾಪಿಸಿ ಕಡೆಗೆ ಬಸವೇಶ್ವರನ ಐಕ್ಯಸ್ಥಾನವಾದ ಸಂಗಮ ಕ್ಷೇತ್ರವನ್ನು ತನ್ನ ವಾಸಸ್ಥಳವನ್ನಾಗಿ ಮಾಡಿ

ಕೊಂಡು ವಿಜಾಪುರ ಬಾದಶಹನಿಂದ ಮನ್ನಣೆಯನ್ನು ಹೊಂದಿ, ಈ ಪ್ರಾಂತ ದಲ್ಲಿರುವ ಎಲ್ಲ ಮಹತ್ವದ ದೇಸಾಯಿ ಮೊದಲಾದ ಅಧಿಪತಿಗಳನ್ನು ವೀರ ಶೈವ ಧರ್ಮದಲ್ಲಿ ಬರಮಾಡಿಕೊಂಡು ಈ ನಾಡಿನಲ್ಲೆಲ್ಲ ಧರ್ಮಜಾಗ್ರತಿಯನ್ನು ಮಾಡಿದನು. ಮತ್ತು ಕಡೆಗೆ ಈ ಸಂಗಮನಾಥನ ಸಮೀಪದಲ್ಲಿಯೇ ಐಕ್ಯವನ್ನು ಹೊಂದಿದನು. ಇದನ್ನು ಗ್ರಂಥಕರ್ತನು ಕೆಳಗೆ ಬರೆದ ಮೇರೆಗೆ ವಿವರಿಸಿರುವನು.

"ಅಲ್ಲಿ ಅಲ್ಲಿಗೆ ತಮ್ಮ ವಂಶೀಭೂತರನ್ನಿಟ್ಟು । ಉಲ್ಲಸದಿಂದೆ ಇರುವ ಸಮಯದೊಳು ಮಹಾದೇವ । ಕೈಲಾಸದಿಂದೆ ಈರ್ವರು ಚರಮೂರ್ತಿಗಳು ಪತ್ರಸಹಿತ ಕಳುಹಿದಂ ಬಂದರು ॥ ಎಲ್ಲ ಕ್ಷೇತ್ರಕ್ಕೆ ಅಧಿಕ ಸಂಗಮೇಶ್ವರಲಿಂಗ । ಸ್ಥಳದಲ್ಲಿ ಭಕ್ತಿಯನು ಮಾಡಿ ಸಂತೋಷ ಪಡೆದು । ಎಲ್ಲರ ಕರೆದು ಹೇಳಿ ಕೇಳಿ ಉಲ್ಲಾಸದಿಂದ ಲಿಂಗೈಕ್ಯಪಡೆದನು ಸಾರಂಗಸಿದ್ಧೇಶ್ವರ ನಾಮದಿಂ ॥೧೯॥ ನೆರೆದಿರ್ದ ಭಕ್ತಮಹೇಶ್ವರರು ಕೂಡಿ ತಾವು । ಹರುಷದಿಂದೆ ದಾನಧರ್ಮವ ನೆಸಗಿ ಕರಕಮಲ ಮುಗಿದು ವರ ಗದ್ದುಗೆಯನೆಸಗಿ ಸಾರಂಗ ಸಿದ್ಧೇಶ್ವರನ ಗುಡಿ ಎಂದು ಕರೆದರು ಸರ್ವಜನರು ॥ ವರಕೀರ್ತಿ ಪಡೆದ ಮರುಳಸಿದ್ಧೇಶ್ವರನ ಅವತಾರಮೂರ್ತಿ ಧರೆಯಲ್ಲಿ ಸಾರಂಗದೇವರು ಮಹತ್ವ ಪುರುಷರು ಎಂದು ಕರವೆತ್ತಿ ಕೊಂಡಾಡಿದರು ಕಂಡ್ಯಾ ಸಾರಂಗದೇವರ ಚಾರಿತ್ರ್ಯಮಂ ॥೨೦॥

ಸಂಗಮದಲ್ಲಿಯ ಪ್ರತಿಯಲ್ಲಿ ಇಷ್ಟು ಮಾತ್ರ ಉಲ್ಲೇಖವಿದ್ದು, ಗುಳೇದಗುಡ್ಡದ ಮಠದಲ್ಲಿಯ ಪ್ರತಿಯಲ್ಲಿ ಸಾರಂಗದೇವನು ಮೃತಪಟ್ಟ ತರುವಾಯ ವರ್ತಿಸಿದ ಸಂಗತಿಗಳು ವರ್ಣಿಸಲ್ಪಟ್ಟಿವೆ. ಇವಾದರೂ ಮಹತ್ವ ವಿರುವದರಿಂದ, ಅವುಗಳನ್ನು ನಾವು ಮುಂದೆ ಕೊಡುತ್ತೇವೆ.

---

## ಶಿವಸಂಗಪ್ಪಯ್ಯ.

ಸಾರಂಗದೇವನಿಗೆ ಒಬ್ಬ ತಮ್ಮನಿದ್ದು, ಈತನಿಗೆ ಶಿವಸಂಗಪ್ಪಯ್ಯ, ಕಾಶೀದೇವರು, ಮತ್ತು ಸೂರಪ್ಪಯ್ಯ ಎಂದು ಮೂವರು ಮಕ್ಕಳಿದ್ದರು. ಈ ಮಕ್ಕಳುಗಳಲ್ಲಿ ಶಿವಸಂಗಪ್ಪಯ್ಯನು ಸಂಗಮದಲ್ಲಿ, ಕಾಶೀದೇವರು, ಚಳ್ಳ ಗೆರೆಯಲ್ಲಿ ಮತ್ತು ಸೂರಪ್ಪಯ್ಯನು ಆನೇಗೊಂದಿಯಲ್ಲಿ ಅಧಿಕಾರಿಗಳಾಗಿ ಆಯಾ ಮಠಗಳ ಕಾರ್ಯಗಳನ್ನು ನಿರ್ವಹಿಸಹತ್ತಿದರು.

ಇವರಲ್ಲಿ ಶಿವಸಂಗಪ್ಪಯ್ಯನು ಬಳ್ಳಾರಿ ಜಿಲ್ಲಾ ಕೊಟ್ಟೂರ ಗ್ರಾಮಕ್ಕೆ ಕರಿಸಲ್ಪಟ್ಟವನಾಗಿ ಬಾಳೇಹಳ್ಳಿಯ ಸಿಂಹಾಸನಾಧಿಪತಿಗಳಾದ ಚನ್ನವೀರ ಸ್ವಾಮಿಗಳು ಮತ್ತು ಪರ್ವತ ಸಿಂಹಾಸನಾಧಿಪತಿಗಳಾದ ವೀರಭಿಕ್ಷಾವರ್ತಿ ಸ್ವಾಮಿಗಳು ಈ ಮೂವರೂ ಹರಪನಹಳ್ಳಿಯ ಸಂಸ್ಥಾನದ ದೊರೆಗೆ ವೀರಶೈವ ದೀಕ್ಷೆಯನ್ನು ಕೊಟ್ಟರು. ಅಂದಿನಿಂದ ಈ ಧೊರೆಗಳು ವೀರಶೈವ ಸಾಂಪ್ರದಾಯಕ್ಕೆ ಅನುಸರಿಸಿ ಕಡೆಯವರೆಗೂ ಇದ್ದರು.

ಆ ಮೇಲೆ ಶಿವಸಂಗಪ್ಪಯ್ಯನು ಕೊಟ್ಟೂರು ಉಜ್ಜನಿಗೆ ಬರಲು ಅವನಿಗೆ ಅಲ್ಲಿಯೂ ಮಠಮಾನ್ಯಗಳು ಅರಸನಿಂದ ಕೊಡಲ್ಪಟ್ಟವು. ಈ ಮಠಕ್ಕೆ ಶಿವಸಂಗಪ್ಪನ ಮಗ ಸಣ್ಣಸಾರಂಗೇಶ್ವರನೆಂಬವನು ಚರಂತಿಯಾಗಿ ನೇಮಿಸಲ್ಪಟ್ಟನು.

---

## ಸಣ್ಣ ಸಾರಂಗೇಶ್ವರ.

ಈ ಸಣ್ಣ ಸಾರಂಗೇಶ್ವರನು ವಿದ್ಯಾವಂತನಾಗಿ ದೇಶದಲ್ಲಿ ಬಹು ಪ್ರಖ್ಯಾತನಾದನು. ಅವನು ಮೂಲ ಸಾರಂಗದೇವರಂತೆ ಮಹತ್ವಿಕ ಪುರುಷನಾಗಿ ದೇಶದಲ್ಲಿ ಸಂಚರಿಸಿ, ಅನೇಕ ಮಹತ್ಕಾರ್ಯಗಳನ್ನು ಮಾಡಿದ್ದು ತೋರಿ ಬರುತ್ತದೆ. ಅವುಗಳನ್ನು ವಾಚಕರ ಮುಂದೆ ಇಡುತ್ತೇವೆ.

ಸಣ್ಣಸಾರಂಗೇಶ್ವರನು ಮೂಲ ಸಾರಂಗೇಶ್ವರನು ಸ್ಥಾಪಿಸಿದ ಮಠಗಳ ಆಡಳಿತೆಯನ್ನು ಸಮಪಡಿಸಿ ಅವುಗಳನ್ನು ನಿರ್ವಹಿಸುವ ಕಾರ್ಯವನ್ನು ಚನ್ನಾಗಿ ಜರಗಿಸಹತ್ತಿದನು.

ಉಜ್ಜನಿಯಲ್ಲಿ ಹರಪನಹಳ್ಳಿಯ ಧೊರೆಯು ಇರಲಾಗಿ ಒಂದು ದಿವಸ ಅನೇಕ ಜನ ಪಂಡಿತರು ಅವನ ಆಸ್ಥಾನದಲ್ಲಿ ನೆರೆದಿದ್ದರು. ಆಗ್ಗೆ ಧರ್ಮ ಚರ್ಚೆಗಳು ನಡೆಯಲು, ಸಣ್ಣಸಾರಂಗೇಶ್ವರನು ಎಲ್ಲರನ್ನು ವಿವಾದದಲ್ಲಿ ಸೋಲಿಸಿ, ವೀರಶೈವ ಮತದ ಹೆಚ್ಚಳವನ್ನು ಅರಸನಿಗೆ ಮನವರಿಕೆ ಮಾಡಿ ಕೊಟ್ಟನು. ಆಗ ಅರಸನು ಅಲ್ಲಿದ್ದ ಶಿಖಾ, ಶೈಲ, ಕಠಾರಿಗಳನ್ನು ಅವನಿಗೆ ಕೊಟ್ಟನು. ಆ ಮೇಲೆ ಸಣ್ಣಸಾರಂಗೇಶ್ವರನು ಉಜ್ಜನಿಯಲ್ಲಿ ತನ್ನ ಶಿಷ್ಯರನ್ನಿಟ್ಟು ಕಾಶಿಗೆ ಹೋದನು.

ಕಾಶಿಯಲ್ಲಿ ಕೆಲದಿನವಿದ್ದು ಮರಳಿ ಸ್ವದೇಶಕ್ಕೆ ಬಂದು ಸಂಗಮ ಕ್ಷೇತ್ರದಲ್ಲಿರುವ ಮಠವನ್ನು ಜೀರ್ಣೋದ್ಧಾರ ಮಾಡಿದನು. ಆಮೇಲೆ ವಿಜಾಪುರ ತಾಲೂಕಿನಲ್ಲಿರುವ ಉಪ್ಪಲದಿನ್ನಿ ಗ್ರಾಮ, ಆಮೇಲೆ ಇದೇ ಜಿಲ್ಲೆಯಲ್ಲಿರುವ ಬಿಳಗಿಯ ಪ್ರಸಿದ್ಧ ದೇವಾಲಯವಾದ ಸಿದ್ಧೇಶ್ವರ ಈ ಸ್ಥಳಗಳನ್ನು ಸಂದರ್ಶಿಸಿ ಆಮೇಲೆ ತಿರುಗಿ ಸಂಗಮಕ್ಷೇತ್ರಕ್ಕೆ ಬಂದು ಅಲ್ಲಿ ತಮ್ಮ "ಪಾದಸೂತ್ರದ ಮರಿಯನ್ನು ಇಟ್ಟು"

ಆಮೇಲೆ ಬಾಗಲಕೋಟೆ ಪ್ರಾಂತದ "ದೇಸಾಯಿ ಸರನಾಡಗೌಡ" ರಾದ ಕೆಂಚವೀರ ಎಂಬ ಅಧಿಪತಿಯು ಅವರನ್ನು ಕರಿಸಿಕೊಂಡು ಅವರಿಂದ ದೀಕ್ಷೆಯನ್ನು ಹೊಂದಿದನು. ಮತ್ತು ಚೌಡಾಪುರ ಮತ್ತು ಹೊನ್ನಿಹಾಳ ಎಂಬ ತಮ್ಮ ಗ್ರಾಮಗಳಲ್ಲಿ ಈ ಸಣ್ಣಸಾರಂಗೇಶ್ವರನಿಗೆ ಮಠಗಳನ್ನು ಕಟ್ಟಿಸಿ ಕೊಟ್ಟನು.

ಆಮೇಲೆ ಸ್ವಾಮಿಗಳು ಅದೇ ಬಾಗಲಕೋಟೆ ತಾಲೂಕಿನಲ್ಲಿರುವ ಶಿರೂರ ಗ್ರಾಮಕ್ಕೆ ಬಂದು ಅಲ್ಲಿಯವರಿಂದಲೂ ವಿಶೇಷ ಮನ್ನಣೆಯನ್ನು ಹೊಂದಿದನು.

ಆ ಕಾಲಕ್ಕೆ ಕಮತಿಗಿ ಗ್ರಾಮದಲ್ಲಿ "ಕಲ್ಲನಾಗತಿಯ ಸಂತತಿಯವರು" ವಿಶೇಷವಾಗಿ ಇರುತ್ತಿದ್ದು ನೊಸಲ ಭೈರಿ ಶೀನಪ್ಪನಾಯಕನೆಂಬವನು ಅವರಿಗೆ ಮುಖ್ಯಸ್ಥನಾಗಿ ಸುತ್ತಲಿನ ಸೀಮೆಯನ್ನು ಆಳುತ್ತಿದ್ದನು. ಈತನು ಸಣ್ಣಸಾರಂಗದೇವನನ್ನು ಬರಮಾಡಿಕೊಂಡು ಅವನಿಂದ ದೀಕ್ಷೆಯನ್ನು ಹೊಂದಿದನು. ಆಗ ಅವನ ಅನುಯಾಯಿಗಳೆಲ್ಲರೂ ಲಿಂಗಧಾರಿಗಳಾದರು.

ಐಹೊಳೆ ಗ್ರಾಮದಲ್ಲಿ ಹಿರೇ ಸೋಮನಾಯಕನೆಂಬ ಬೇಡರ ಧೊರೆಯು ಸುತ್ತಲಿನ ಸೀಮೆಯನ್ನು ಆಳುತ್ತಿದ್ದನು. ಆತನು ಸಣ್ಣಸಾರಂಗದೇವನನ್ನು ಬರಮಾಡಿಕೊಂಡು ವೀರಶೈವ ಮತಾನುವರ್ತಿಯಾದನು ಮತ್ತು ಆತನು ಅಲ್ಲಿ ಮಠಮಾನ್ಯಗಳನ್ನು ಸಾರಂಗದೇವನಿಗೆ ಹಾಕಿಕೊಟ್ಟನು,

ಮುಂದೆ ಪಟ್ಟದಕಲ್ಲಿನಲ್ಲಿ ವೀರಪ್ಪನಾಯಕನೆಂಬವನು ಆಳುತ್ತಿದ್ದು ಆತನೂ ಸಣ್ಣಸಾರಂದದೇವನಿಂದ ಶಿವದೀಕ್ಷೆಯನ್ನು ಹೊಂದಿದನು ಮತ್ತು ಚಿರಮೆಲಿಗಿ, ಪಟ್ಟದಕಲ್ಲು, ಅಕರಗಲ್ಲು, ಸಿದ್ದನಕೊಳ್ಳ, ಉಪನಹಾಳ ಈ ಸ್ಥಳಗಳಲ್ಲಿ ಮಠಮಾನ್ಯಗಳನ್ನು ಮಾಡಿಕೊಟ್ಟನು ಮತ್ತು ಸ್ವಾಮಿಗಳಾದರೂ ಅಲ್ಲಿ ಪಂಚಲಿಂಗಗಳನ್ನು ಸ್ಥಾಪನೆ ಮಾಡಿದರು.

ಈ ಮೇರೆಗೆ ಸಣ್ಣಸಾರಂಗದೇವನು ಅನೇಕ ಮಹತ್ವದ ಕಾರ್ಯಗಳನ್ನು ಮಾಡಿ ತಿರುಗಿ ಸಂಗಮಕ್ಕೆ ಬಂದನು ಮತ್ತು ದೇಶದಲ್ಲಿರುವ ಸಾರಂಗದೇವರ ಮಠಗಳನ್ನೆಲ್ಲ ತಮ್ಮ ಸಹೋದರರ ಸಂತತಿಯವರಲ್ಲಿ ಹಂಚಿಕೊಟ್ಟು, ತಾನು ತೀರ್ಥಾಟನಕ್ಕೆ ತೆರಳಿದನು.

ಈ ಪ್ರಕಾರ ತೀರ್ಥಾಟನವನ್ನು ಕೆಲವು ದಿವಸ ಮಾಡಿ ಸ್ವಾಮಿಗಳು ಕಡೆಗೆ ಹುನಗುಂದಕ್ಕೆ ಬಂದರು. ಅಲ್ಲಿಂದ ಕೆಲೂರಕ್ಕೆ ಬಂದು ಅಲ್ಲಿಯೇ ಸಮಾಧಿಸ್ತರಾದರು.

ಈ ಮೇರೆಗೆ ಸಣ್ಣಸಾರಂಗದೇವನ ವೃತ್ತಾಂತವಿದೆ. ಇದರ ಮೇಲಿಂದ ಇವನೂ ಪಂಡಿತನಾಗಿ ದೇಶದಲ್ಲಿ ಅನೇಕ ಧರ್ಮೋದ್ಧಾರದ ಕಾರ್ಯಗಳನ್ನು ನಿರ್ವಹಿಸಿದ್ದು ತೋರಿಬರುತ್ತದೆ.

ಮುಂದೆ ಕೆಲವು ವರ್ಷಗಳ ಮೇಲೆ ಗುಳೇದಗುಡ್ಡ ಗ್ರಾಮವು ವಸಾಹತ್ತು ಮಾಡಲ್ಪಟ್ಟಿತು. ಇದು ಈಗ ವಿಜಾಪುರ ಜಿಲ್ಲೆಯಲ್ಲಿ ಬಹು ದೊಡ್ಡ ಗ್ರಾಮವಾಗಿದೆ. ಈ ಗ್ರಾಮ ಸ್ಥಾಪನೆಯ ಕಾಲಕ್ಕೆ ಈ ಸಾರಂಗದೇವರ ಮಠದ ವಂಶಿಕರಾದ ಶಿವಸಂಗಪ್ಪಯ್ಯನೆಂಬವನು ಚರಂತಿಯಾಗಿ ನೇಮಿಸಲ್ಪಟ್ಟಿದ್ದು ಅವನ ಹಸ್ತದಿಂದಲೇ ಈ ಗ್ರಾಮದ ಸ್ಥಾಪನೆಯ ಕಾರ್ಯವು ನೆರವೇರಿಸಲ್ಪಟ್ಟಿತು. ಈ ಬಗ್ಗೆ ಈ ಗ್ರಂಥದಲ್ಲಿ ಉಲ್ಲೇಖವಿರುವದೇನಂದರೆ:— "ಗುಳೇದಗುಡ್ಡದ ಪೇಟಿ ಪರ್ವತಿ ನಿರ್ಮಾಣ ಮಾಡುವದರ ಸಲುವಾಗಿ ಶಿಷ್ಯ ಮಕ್ಕಳು ದೇಸಾಯಿ ಹಿರೆ ಎಲಗುರ್ದಪ್ಪನಾಯಕ ಚೊಳಚಗುಡ್ಡದ ಮುದಿಯಪ್ಪ ಶೆಟ್ಟರು ಕೂಡಿ ಸಮಸ್ತರು ಮಾತಾಡಿ ಬಿನ್ನಹ ಪತ್ರ ಬರೆದು ಕರೆಯಿಸಿಕೊಂಡರು. ಇವರ ಧೂಳಪಾದೋದಕ ಚಲ್ಲಿ ಪೂಜಿಸಿ ಪುನಸ್ಕಾರವ ಮಾಡಿ ಕೌಲು ಜಾಂಡೆಯ ನಡಿಸಿ ಶೆಟ್ಟರ ಹೆಸರಿಲಿ ಗುರುಗಳಿಗೆ ಲಿಂಗ ಮುದ್ರೆ ಪಂಚಸ್ಥಾಪನೆ ಮಾಡಿಸಿ ಮಠ ನೋಡಬೇಕೆಂದು ವತನ ಸ್ವಾಸ್ತಿವೃತ್ತಿ ಮರ್ಯಾದೆ ನೋಡಲೆಂದು ಗೊತ್ತುಮಾಡಿದರು." ಆದ್ದರಿಂದ ಗುಳೇದಗುಡ್ಡದಲ್ಲಿ ಈ ಸಾರಂಗ ಮಠಾಧಿಪತಿಗಳನ್ನೇ ಮುಖ್ಯವಾಗಿಟ್ಟುಕೊಂಡು ಈ ಪಟ್ಟಣವು ಸ್ಥಾಪಿಸಲ್ಪಟ್ಟಿದ್ದು ಕಂಡುಬರುತ್ತದೆ.

ಗುಳೇದಗುಡ್ಡದ ಗ್ರಂಥದಲ್ಲಿ ಮುಂದಿನ ವಂಶಜರ ಇನ್ನೂ ಕೆಲವು ವೃತ್ತಾಂತಗಳಿದ್ದು ಅವುಗಳಲ್ಲಿ ಮಹತ್ವದ ಐತಿಹಾಸಿಕ ಸಂಗತಿಗಳು ತೋರಿ

ಟರದ್ದರಿಂದ ನಾವು ಅವುಗಳನ್ನು ಈ ಚರಿತ್ರೆಯಲ್ಲಿ ಕೊಟ್ಟಿಲ್ಲ. ಆದರೆ ಮುಂದಿನ ಸಂತತಿಯವರು ದೇಶದಲ್ಲಿರುವ ಸಾರಂಗಮಠಗಳನ್ನು ಕಾಲ ಕಾಲಕ್ಕೆ ಹಂಚಿ ಕೊಂಡ ಹಾಗೆ ಉಲ್ಲೇಖಗಳಿವೆ.

ಮೇಲ್ಕಂಡ ವೃತ್ತಾಂತಗಳು ಬಹಳ ಮಹತ್ವದವೆಂಬುದನ್ನು ನಾವು ವಾಚಕರಿಗೆ ವಿಶದಪಡಿಸುವ ಅವಶ್ಯವಿಲ್ಲ. ಇವುಗಳ ಮೇಲಿಂದ ಪೂರ್ವಕಾಲ ದಲ್ಲಿ ಸಿಂಹಾಸನಾಧಿಪತಿಗಳೂ ಮಹತ್ವದ ಮಠಾಧೀಶ್ವರರೂ ಕರ್ನಾಟಕದಲ್ಲಿ ಯಾವಪ್ರಕಾರ ಧರ್ಮಜಾಗ್ರತಿಯ ಕಾರ್ಯಗಳಲ್ಲಿ ತೊಡಗುತ್ತಿದ್ದರೆಂಬುದು ಸ್ಪಷ್ಟವಾಗುತ್ತದೆ. ಇವರು ಧರ್ಮಬೋಧೆ ಮಾಡುತ್ತ ದೇಶದಲ್ಲಿ ಸಂಚಾರ ಮಾಡುವರು. ತಮ್ಮ ಬೋಧೆಗೆ ಮನಗೊಂಡವರನ್ನು ವೀರಶೈವ ಮತಸ್ಥ ರನ್ನಾಗಿ ಮಾಡಲು ಹಿಂದೆಗೆಯಲಿಲ್ಲ. ಮತ್ತು ತಮ್ಮ ಕಾರ್ಯವು ಆಯಾ ಸ್ಥಳಗಳಲ್ಲಿ ನಿರಂತರವಾಗಿ ಸಾಗಬೇಕೆಂದು ಅಲ್ಲಲ್ಲಿ ಮಠಗಳ ಸ್ಥಾಪನೆ ಯನ್ನು ಮಾಡುವರು. ಈ ಮೇರೆಗೆ ಅವರ ಕಾರ್ಯಕ್ರಮಗಳಿದ್ದುದು ಮೇಲ್ಕಂಡ ವಿವರಣೆಗಳಿಂದ ಕಂಡುಬರುತ್ತದೆ. ಇದರಿಂದ ದೇಶದಲ್ಲಿ ಪರಧರ್ಮಿಗಳಿಂದ ಭಯಂಕರ ಆಘಾತಗಳು ಕಾಲಕಾಲಕ್ಕೆ ಉಂಟಾಗುತ್ತ ಬಂದಿದ್ದರೂ, ಧರ್ಮ ಜಾಗ್ರತೆಯು ಕರ್ನಾಟಕದಲ್ಲಿ ಸ್ಥಿರವಾಗಿ ಉಳಿದು, ಹಿಂದುತ್ವವು ಇಲ್ಲಿ ರಕ್ಷಿಸ ಲ್ಪಟ್ಟಿತೆಂದು ತೋರುತ್ತದೆ.

ಬಾಮನಿ ಮತ್ತು ವಿಜಯನಗರದ ರಾಜರ ಕಾಲದಿಂದಲೂ ಕರ್ನಾಟಕದಲ್ಲಿ ಅನೇಕ ಜನಾಂಗದವರು ದಾಳಿ ಇಡುತ್ತ ಮತ್ತು ಅಲ್ಲಲ್ಲಿ ಸಂಸ್ಥಾನಗಳನ್ನೂ ದೇಸಗತಿಗಳನ್ನೂ ಸ್ಥಾಪಿಸುತ್ತ ಬಂದಂತೆ ತೋರುತ್ತದೆ. ಇದಕ್ಕೆ ಮೈಸೂರು ಕಿತ್ತೂರು, ನವಲಗುಂದ, ಸುರಪುರ, ಚಿತ್ರಕಲ್ಲದುರ್ಗ, ಹರಪನಹಳ್ಳಿ, ಸ್ವಾದಿ, ಬೀಳಗಿ, ಹಾಗಲವಾಡಿ ಈ ಮೊದಲಾದ ಗ್ರಾಮಗಳ ಅಧಿಪತಿಗಳೇ ಉದಾ ಹರಣೆಯಾಗಿದ್ದಾರೆ. ಇವರಲ್ಲಿ ಬಹುಜನರ ಪೂರ್ವಜರು ವೀರಶೈವರಿರದೆ, ಹಿಂದುಗಡೆ ಅವರು ವೀರಶೈವರಾದ ಹಾಗೆ ಅವರ ಚರಿತ್ರೆಗಳಿಂದ ತಿಳಿದು ಬರು ತ್ತದೆ. ಈ ಪ್ರಕಾರ ಆ ಕಾಲಕ್ಕಿನ ಸಮಾಜಗಳೂ ಅವುಗಳ ಅಧಿಪತಿಗಳೂ ಅಹಿಂ ಸಾತ್ಮಕವಾದ ಮತ್ತು ಸುಸಂಸ್ಕೃತವಾದ ವೀರಶೈವ ಧರ್ಮವನ್ನು ಸ್ವೀಕರಿಸಿ ದ್ದರ ಮೇಲಿಂದ ಆಗಿನ ವೀರಶೈವ ಧರ್ಮೀಯರ ಧಾರ್ಮಿಕ, ಸಾಮಾಜಿಕ ಮತ್ತು ರಾಜಕೀಯ ತೇಜಸ್ಸು ಎಷ್ಟು ಮಹತ್ತರವಾಗಿದ್ದಿತೆಂಬದು ಬಹು ಚನ್ನಾಗಿ ವ್ಯಕ್ತವಾಗುತ್ತದೆ. ಮರಾಟರ ವೈಭವದ ಕಾಲದಲ್ಲಿ ಅನೇಕರು ಮರಾಠರಾದದ್ದು ತಿಳಿದು ಬರುತ್ತದೆ. ಆದರೆ ಕರ್ನಾಟಕದ ವೈಭವದ ಕಾಲ

ದಲ್ಲಿ ಅಲ್ಲಿಯ ದೊಡ್ಡ ಜನಾಂಗಗಳೂ ವೀರಪುರುಷರೂ ಮಹತ್ವದ ಮನೆತನದವರೂ ವೀರಶೈವರಾದದ್ದು ಕಂಡು ಬರುತ್ತದೆ. ಹೀಗಾಗಬೇಕಾದರೆ ಆ ಕಾಲಕ್ಕಿನ ವೀರಶೈವರ ಸಂಸ್ಕೃತಿ, ಉದಾರಭಾವ, ಮತ್ತು ಧಾರ್ಮಿಕ ವರ್ಗದವರ ಉಚ್ಚ ವರ್ತನೆ ಇವುಗಳೇ ಮುಖ್ಯಕಾರಣವಾದವೆಂದು ನಾವು ಹೇಳಲು ಏನೂ ಪ್ರತ್ಯವಾಯವಿಲ್ಲ. ಸಾರಂಗಮಠದ ಅಧಿಪತಿಗಳು ಈ ಪ್ರಕಾರ ಅತ್ಯಂತ ಉಜ್ವಲ ಭಾವದಿಂದ ವರ್ತಿಸಿದ್ದು ಈ ಲೇಖದಲ್ಲಿ ಕೊಟ್ಟ ವೃತ್ತಾಂತಗಳಿಂದ ಸ್ಪಷ್ಟವಾಗುತ್ತದೆ. ಮೂಲ ಸಾರಂಗದೇವನನ್ನು ತಮಿಳು ದೇಶದ ಅನೇಕ ರಾಜರೂ, ಸಮಾಜಗಳೂ ಮನ್ನಿಸುತ್ತಿದ್ದರಲ್ಲದೆ ಉತ್ತರ ದೇಶದಲ್ಲಿ ಮುಖ್ಯವಾಗಿ ವಿಜಾಪುರ ಮತ್ತು ಹೈದರಾಬಾದ ಪ್ರಾಂತಗಳಲ್ಲಿಯ ಅನೇಕ ಮಹತ್ವದ ರಾಜಕೀಯ ಮನೆತನಗಳು ಅವರಿಗೆ ಒಳಗಾಗಿ ನಡೆದು ವೀರಶೈವ ಧರ್ಮವನ್ನು ಪಾಲಿಸುತ್ತ ಬಂದದು. ಈ ವರ್ಣನೆಗಳು ಕೇವಲ ಕಾಲ್ಪನಿಕವಿರದೆ ನಿಜವಿರುತ್ತವೆಂಬುದನ್ನು ಆ ಸ್ಥಳಗಳಲ್ಲಿ ಈಗ್ಗೆಯೂ ಕಂಡುಬರುವ ಸಾರಂಗಮಠಗಳೇ ಸಾಕ್ಷಿಯಾಗಿವೆ. ಮತ್ತು ಈ ಸಾರಂಗ ಮಠಗಳೆಲ್ಲವೂ ಆ ಸ್ಥಳಗಳಲ್ಲಿ ಜನರಿಂದ ಅತ್ಯಂತ ಭಕ್ತಿಯಿಂದ ಈಗಲೂ ಕಾಣಲ್ಪಡುತ್ತವೆ. ಈ ಎಲ್ಲ ಸಂಗತಿಗಳು ಸಾರಂಗದೇವನ ಮೇಲ್ಕಂಡ ವೃತ್ತಾಂತಗಳ ನಿಜತ್ವವನ್ನು ತೋರಿಸುತ್ತವೆ.

ಸಾರಂಗದೇವನು ಕಾಶಿಯಲ್ಲಿ ಮಳಿಯ ಮಲ್ಲೇಶನೆಂದೂ, ಪರ್ವತ ಪ್ರಾಂತಕ್ಕೆ ಬಂದಬಳಿಕ ಸಾರಂಗದೇವನೆಂದೂ, ಮೈಸೂರ ಸೀಮೆಯಲ್ಲಿ ಮರುಳ ಸಿದ್ಧೇಶ್ವರನೆಂದೂ, ಪ್ರಸಿದ್ಧಿಯನ್ನು ಹೊಂದಿದ್ದು ತಿಳಿಯುತ್ತದೆ. ಈ ಅಂಶಗಳು ನಿಜವೆಂಬುದಕ್ಕೆ ಇ ಚರಿತ್ರೆಯನ್ನು ಬರೆದ ಗ್ರಂಥಕಾರನು ಕೆಲವು ಅಧಾರಗಳನ್ನು ಕೊಟ್ಟಿರುವನು. ಅವು ಯಾವವೆಂದರೆ, “ ಕರ್ನಾಟಕ ಮಧ್ಯದೇಶದಲ್ಲಿ ಪ್ರಸಿದ್ಧವಾದ ಮಳೆ ಬಗಿ ಇದ್ದು ಮರುಳಾರ್ಯ ಸೂತ್ರಿಕರು ಗುರುಸ್ಥಲದಲ್ಲಿ ಮಠಸ್ಥಲದಲ್ಲಿ ಶಿವಾಧಿಕ್ಯ ಪುರಾಣದಲ್ಲಿ ಸಾರಂಗದೇವರ ಮಹತ್ವವನ್ನು ಹೇಳುತ್ತಾರೆ. ಶಿವರಹಸ್ಯಾಗಮದಲ್ಲಿ ಮರುಳಾರ್ಯರ ಸಾಂಪ್ರದಾಯವು ಹೇಳುವದು ನಿಶ್ಚಯವು. ಗುರುಚಾರಿತ್ರ್ಯದಿಂದ ಅನುಮಾನ ಬಿದ್ದರೆ ಸಂಶಯ ಪರಿಹಾರ ಆಗುವದು. ” ಎಂದು ಗ್ರಂಥದಲ್ಲಿ ಅಂದಿರುತ್ತಾನೆ. ಈ ಗ್ರಂಥಗಳಲ್ಲಿ ಶಿವಾಧಿಕ್ಯ ಪುರಾಣವನ್ನು ನಾವು ನೋಡಿದ್ದು, ಅದು ಬಸವಲಿಂಗ ಎಂಬ ಕವಿಯಿಂದ ರಚಿತವಾಗಿದೆಂದು ತಿಳಿಯುತ್ತದೆ. ಅದರಲ್ಲಿ ಆರಂಭದ ಶ್ಲೋಕಗಳಲ್ಲಿ ಬಸವ, ಚನ್ನಬಸವ, ಅಲ್ಲಮ, ಮಡಿವಾಳ, ಪೀರಸೊಡ್ಡಳ

ಇವರನ್ನೂ ಉಳಿದ ಶಿವಶರಣರನ್ನೂ ಸ್ತುತಿಸಿ ಶ್ರೀ ಮಲ್ಲೇಶನನ್ನೂ ಹೊಗಳಿದ್ದಾನೆ. ಈ ಮಲ್ಲೇಶನು ಮಂಗಳವಾಡ ರಾಷ್ಟ್ರಕ್ಕೆ ಮಳೆಯನ್ನು ತಂದನೆಂತಲೂ ಸಾರಂಗ ಸಿಂಹಾಸನಕ್ಕೆ ಬಂದನೆಂತಲೂ ಇದರಲ್ಲಿ ಉಲ್ಲೇಖಿಸಲ್ಪಟ್ಟಿದೆ.

ಈ ಬಸವಲಿಂಗ ಕವಿಯ ಉಲ್ಲೇಖವನ್ನು ಕರ್ನಾಟಕ ಕವಿಚರಿತ್ರೆ ಭಾಗ ೨ ಪುಟ ೩೫೩ ನೋಡ್ದರಲ್ಲಿ ರಾ|| ಬ|| ಆರ್. ನರಸಿಂಹಾಚಾರ್ಯರು ಮಾಡಿರುವರು. ಅದರಲ್ಲಿ ಅವರು ಕೊಟ್ಟ ಅವತರಣದಿಂದ ಈ ಬಸವಲಿಂಗ ಕವಿಯು ಸಾರಂಗದೇವನ ಶಿಷ್ಯನೆಂದು ತಿಳಿದುಬರುತ್ತದೆ. ಈ ಅವತರಣವು ಏನಂದರೆ ಇವನ ಗುರು "ಸಾರಂಗ ಸಿಂಹಾಸನಕ್ಕೆ ಬಂದು ಘನಲಿಂಗ ಪದವ ಸಂಗಡಿಸಿದರಿಂದ ಮಂಗಳವಾಡ ರಾಷ್ಟ್ರದೊಳು ಮೂರು ಸಿಂಹಾಸನದ ಡಾಮರವನೆಬ್ಬಟ್ಟಿ ಭೂರಿವೃಷ್ಟಿಯ ಕರೆದು ಜಗವೆತ್ತ ಚನ್ನಮಲ್ಲೇಶ್ವರ" ಎಂದು ಇದೆ. ಹೀಗೆ ಬಸವಲಿಂಗ ಕವಿಯು ಹೀಗೆ ಬರೆದದ್ದು ವಿಚಾರಾರ್ಹವಾಗಿದೆ.

ಒಟ್ಟಾರೆ ಹೇಳಬೇಕಾದರೆ ಸಾರಂಗ ಮಠಾಧೀಶ್ವರರು ತಮ್ಮ ಆರಂಭ ಕಾಲದಲ್ಲಿ ಅತ್ಯಂತ ದುಸ್ತರವಾದ ಪ್ರಸಂಗಗಳನ್ನು ಎದುರಿಸಬೇಕಾಯಿತು. ಇದು ಬಸವೇಶ್ವರನ ತರುವಾಯ ಸ್ವಲ್ಪ ಅವಧಿಯಲ್ಲಿಯೇ ಇರುತ್ತದೆ. ಆಗ ಇಸ್ಲಾಮು ಧರ್ಮೀಯರು ಕರ್ನಾಟಕದಲ್ಲಿ ಪ್ರಬಲರಾಗಹತ್ತಿದ್ದರು. ಅವರು ಇಲ್ಲಿಗೆ ಬಂದ ಸ್ವಲ್ಪ ಕಾಲದಲ್ಲಿಯೇ ಸಾರಂಗ ಮಠಾಧೀಶ್ವರರು ಉಗಮ ಹೊಂದಿ ತಮ್ಮ ಧಾರ್ಮಿಕ ಚಳವಳಿಯನ್ನು ಪ್ರಾರಂಭಿಸಿದರು. ಆರಂಭದಲ್ಲಿ ಅವರು ಶ್ರೀಶೈಲ ಮತ್ತು ಪುದುಚಿರೆಯಲ್ಲಿ ಪ್ರಬಲರಾದರು. ಮುಂದೆ ಅವರು ಮಧ್ಯ ಕರ್ನಾಟಕ ಪ್ರದೇಶದಲ್ಲಿರುವ ಕೂಡಲಸಂಗಮ ಸ್ಥಳದಲ್ಲಿ ನಿಂತುಕೊಂಡು ಜನರಲ್ಲಿ ಧರ್ಮ ಜಾಗ್ರತಿಯನ್ನು ಮಾಡಿದರು. ಅಷ್ಟರಲ್ಲಿ ಕಲಬುರ್ಗಿ, ಬೀದರ ಪಟ್ಟಣಗಳಲ್ಲಿ ಮುಸಲ್ಮಾನರು ನಿಂತು ಅವುಗಳನ್ನು ತಮ್ಮ ರಾಜಧಾನೀ ಸ್ಥಳಗಳನ್ನಾಗಿ ಮಾಡಿಕೊಂಡಿದ್ದರು. ಆದರೆ ಅವರು ಇಲ್ಲಿಯ ಹಿಂದೂ ಜನರನ್ನು ಅವಲಂಬಿಸದೆ ತಮ್ಮ ರಾಜ್ಯಗಳನ್ನು ಬೆಳಿಸುವದು ಅಸಂಭವವಾಗಿತ್ತು. ಅಷ್ಟರಲ್ಲಿ ಇಲ್ಲಿಯ ವೀರಶೈವ ಮಠಾಧಿಪತಿಗಳು ಮುಖ್ಯವಾಗಿ ಸಾರಂಗ ಮಠಾಧಿಪತಿಗಳು ಇಲ್ಲಿಯ ದೇಸಾಯಿ ನಾಡಗೌಡರನ್ನು ವೀರಶೈವರನ್ನಾಗಿ ಮಾಡಿಕೊಂಡಿದ್ದರು. ಇವರು ವಿಜಾಪುರ, ಕಲಬುರ್ಗಿ, ರಾಯಚೂರ, ಬೀದರ ಜಿಲ್ಹೆಗಳಲ್ಲಿ ಪ್ರಬಲ ಸೈನ್ಯಾಧಿಕಾರಿಗಳಾಗಿದ್ದರು. ಇದರಿಂದ ಮುಸಲ್ಮಾನ ಧರ್ಮವು ಕರ್ನಾಟಕದಲ್ಲಿ ಪಸರಿಸುವದು ಅಶಕ್ಯವಾಯಿತು.

ಈ ಕಾಲಕ್ಕೆ ಮಧ್ಯ ಕರ್ನಾಟಕ ದೇಶದಲ್ಲಿ ಪರ್ವತ ಸಿಂಹಾಸನ, ಬಾಳೇಹಳ್ಳೀ ಪೀಠಾಧಿಪತಿಗಳು, ಉಜ್ಜನಿ ಸಿಂಹಾಸನ ಇವು ಮಹತ್ವದ ಸಿಂಹಾಸನ ಮಠಗಳಾಗಿದ್ದವು. ಇವರೆಲ್ಲರೂ ಈ ಕಾಲದಲ್ಲಿ ಪರಸ್ಪರ ಐಕ್ಯತೆಯಿಂದ ವರ್ತಿಸಿದ್ದು ಅತಿ ಮಹತ್ವದ್ದಾಗಿದೆ. ಇವರಲ್ಲದೆ ಸಾರಂಗ ಮಠಾಧೀಶ್ವರರು ಕೆಲ ಕಾಲ ಉಜ್ಜನಿ ಸಿಂಹಾಸನವಲ್ಲಿ ಆರೂಢರಾಗಿದ್ದುದು ತಿಳಿದು ಬರುತ್ತದೆ. ಆಗ ಅವರೂ ಉಳಿದ ಪೀಠಾಧಿಪತಿಗಳೂ ಕೂಡಿಕೊಂಡು ವಿಜಯನಗರದ ದೇವರಾಜ, ಹರಪನಹಳ್ಳಿ ಮೊದಲಾದವುಗಳಲ್ಲಿಯ ದೊರೆಗಳು ಇವರಿಗೆ ವೀರಶೈವ ದೀಕ್ಷೆಯನ್ನು ಕೊಟ್ಟು ಅವರ ಬೆಂಬಲದಿಂದ ತಮ್ಮ ವರ್ಚಸ್ಸನ್ನು ನಾಡಿನಲ್ಲಿ ಬೆಳಿಸಿಕೊಂಡಿದ್ದರು. ಈ ಕಾರಣದಿಂದ ವೀರಶೈವ ಧರ್ಮವು ಇಲ್ಲಿ ಉಳಿಯಿತು.

ಈ ಸಂಗತಿಯನ್ನು ನಮ್ಮ ಈಗಿನ ಇಲ್ಲಿಯ ಪೀಠಾಧಿಪತಿಗಳು ಗಮನಿಸುವದು ಅವಶ್ಯವದೆ. ಈಗ ಕರ್ನಾಟಕವು ಏಕೀಕೃತವಾಗಿದೆ. ಆದ್ದರಿಂದ ಇಂಥ ಕರ್ನಾಟಕದಲ್ಲಿ ನಮ್ಮ ಪೀಠಾಧಿಪತಿಗಳಾದ ಉಜ್ಜನಿ ಸಿಂಹಾಸನ, ತರಳಬಾಳು ಸಿಂಹಾಸನ, ಬಾಳೇಹಳ್ಳೀ ಸಿಂಹಾಸನ ಮತ್ತು ಚಿತ್ರಕಲ್‌ದುರ್ಗದ ಮುರುಘಾಮಠದ ಶೂನ್ಯ ಸಿಂಹಾಸನ ಇವರೆಲ್ಲರೂ ಸಂಘಟನೆಯುಳ್ಳವರಾಗಿ ತಮ್ಮ ಸಮಾಜ ಮತ್ತು ಧರ್ಮ ಇವುಗಳ ಉದ್ಧಾರಕ್ಕಾಗಿ ಪ್ರಯತ್ನಿಸುವ ಕಾಲವು ಬಂದಿದೆ. ೧೯೫೬ನೇ ಅಕ್ಟೋಬರದ ಒಳಗಾಗಿ ವಿಸ್ತೃತ ವೈಸೂರು ಅಥವಾ ಕರ್ನಾಟಕ ರಾಜ್ಯವು ಅಸ್ತಿತ್ವದಲ್ಲಿ ಬರಲಿದೆ. ಈ ಕಾಲದಲ್ಲಿ ನಮ್ಮ ಪೀಠಾಧಿಪತಿಗಳು ಮತ್ತು ಅವರ ಅನುಯಾಯಿಗಳು ತಮ್ಮ ಅಂತರಂಗದ ಕಲಹಗಳನ್ನು ಬಿಡಲೇಬೇಕು. ಇಲ್ಲದಿದ್ದರೆ ಇತರ ಸಮಾಜದವರು ವೀರಶೈವರ ವಿರುದ್ಧ ನಡಿಸಿರುವ ಪ್ರಯತ್ನಗಳು ಹೆಚ್ಚುತ್ತಲೇ ಹೋಗುವವು. ಹೀಗಾದಲ್ಲಿ ವೀರಶೈವ ಸಮಾಜವು ಅಸ್ತಿತ್ವದಲ್ಲಿ ಇದೆಯೋ ಇಲ್ಲವೋ ಎಂಬಂತಾಗುವ ಪರಿಸ್ಥಿತಿಯು ಪ್ರಾಪ್ತವಾಗಬಹುದು.

ಬಸವೇಶ್ವರನ ಕಾಲದಲ್ಲಿ ಸಾಂತರ ರಾಜರು [ಸಾಡರು] ನೋಣಂಬ ಪಲ್ಲವರು [ನೊಣಬರು] ಹೊಯಿಸಳರನ್ನು ಎದುರಿಸಿದ ಮಲಸರು [ಮಲವರು] ಇಂಥ ಬಲಾಢ್ಯ ಸಮಾಜದವರು ವೈಸೂರಿನ ಉತ್ತರ, ಮಧ್ಯ ಮತ್ತು ಪಶ್ಚಿಮ ಭಾಗಗಳಲ್ಲಿ ೧೧ನೇ ೧೨ನೇ ಶತಮಾನಗಳಲ್ಲಿ ಪ್ರಬಲರಾಗಿ ರಾಜ್ಯವಾಳಿದರು. ಅದರಂತೆಯೇ ಈಗಿನ ಅವರ ವಂಶಜರು ತಮ್ಮ ಅಂತಃಕಲಹಗಳನ್ನು ಬಿಟ್ಟುಕೊಟ್ಟು ಬಸವೇಶ್ವರನ ಉಚ್ಚ ತತ್ವಗಳನ್ನು ಪಾಲಿಸುತ್ತ

ಅವನ ಕಾಲದಲ್ಲಿ ಹೇಗೆ ಶಿವಶರಣರು ಅಥವಾ ಶಿವಾನುಭವಿಗಳು ಸಂಘಟನೆ ಯಿಂದ ನಡೆದು, ಪರವಾದಿಗಳನ್ನೆ ಪ್ರತಿಭಟಿಸಿದರೋ ಹಾಗೆಯೇ ಆಚರಿಸುವ ಸಮಯವು ಈಗ ಪ್ರಾಪ್ತವಾಗಿದೆ.

ಹಿಂದಿನ ಕಾಲವಲ್ಲಿ ಪೀಠಾಧಿಪತಿಗಳು ವಿರಕ್ತರಾಗಿರಲಿಲ್ಲ. ಅವರು ಲಗ್ನ ವಾದವರಿದ್ದರು. ಆದರೂ ಅವರು ಕೈಕೊಂಡ ಶ್ರೇಷ್ಠ ಕಾರ್ಯಗಳ ಮೂಲಕ ಅವರು ವರ್ಚಸ್ಸುಳ್ಳವರಾಗಿದ್ದರು. ಅವರ ಅನುಕರಣವನ್ನು ಈಗಿನ ಪೀಠಾಧಿ ಪತಿಗಳು ಮಾಡಿ ಐಕ್ಯತೆಯುಳ್ಳವರಾದಲ್ಲಿ ಭಕ್ತವರ್ಗಗಳೂ ಐಕ್ಯತೆಯನ್ನು ಹೊಂದುವವು. ಇದರಿಂದ ಬಸವೇಶ್ವರನ ಕಾಲದಲ್ಲಿ ವೀರಶೈವರಿಗುಂಟಾದ ಘನತೆಯು ಈ ಕಾಲದಲ್ಲಿಯೂ ಪುನರಾವೃತ್ತಿಯನ್ನು ಹೊಂದುವದರಲ್ಲಿ ಏನೂ ಸಂದೇಹವಿರಲಾರದು.

---

## ಸಾರಂಗ ಸ್ತೋತ್ರಪಂಚಕ

ಸಾರಂಗದೇವನ ಈ ಪುರಾತನ ಪದ್ಯಗಳು ಶಬ್ದಾಲಂಕಾರ ಅರ್ಥಾ ಲಂಕಾರಗಳಿಂದ ತುಂಬಿರುವವಲ್ಲದೆ ಬಹು ಪ್ರೌಢವಾಗಿವೆ. ಇವುಗಳಿಂದ ಕನ್ನಡ ಭಾಷೆಯ ಗಾಂಭೀರ್ಯವು ಸೂಚಿತವಾಗುವದು. ಬರೆದ ಅರ್ಥವೂ ಪುರಾತನಕಾಲದ್ದು.

ವಾರ್ಧಿಕಃ— ಸಾರಂಗ ಗಮನಸಖ ಸೂರ್ಪಕಾರಿಯ ಜನಕ ।
ಸಾರಂಗ ಪದಪದ್ಮ ಶಾಮಕರನಾಂಕಿತನೆ ॥
ಸಾರಂಗಭವನ ಪನ್ನಗವರ ಧರನೆ ಕಂಜಸಾರಂಗ ತನಯ ಹರನೇ॥
ಸಾರಂಗಧರ ಲಲಾಮನೆ ಮರುತಾಪ್ತನೆ ।
ಸಾರಂಗ ದಿಗ್ವಸನ ಸುರವಂದಿತದೇವ ।
ಸಾರಂಗ ಶ್ರವಣ ಕರಕಟಕ ಸಂಗಮದೇವ ಸಾರಂಗಗೋ
ಕರುಣಿಸೂ ॥೧॥

ಟಿಪ್ಪಣೀ— ಸಾರಂಗ= ಕುದುರೆ, ನಯನ, ನೀರು, ಎರಳೆ, ಆಕಾಶ, ಕಣ್ಣು, ಮೋಕ್ಷ.

ವಾರ್ಧಿಕಃ— ಸಾರಂಗಪದ್ಮಧರ ಜೀವಮೂತಜಾವುರಣ ।
ಸಾರಂಗಮಣಿ ಪದ್ಮಧೂಮಾಂಕಗೋಪದ್ಮ ।
ಸಾರಂಗಸುರಜ್ಯೇಷ್ಠ ಶತಧರ್ಮ ನಮಿತಪದ ಸಾರಂಗಚರ್ಮಾಂಬರಾ ॥
ಸಾರಂಗಶ್ರವಣ ಭೂಷಣಸುರಭಿಸಂಹಾರ ।
ಸಾರಂಗನಾಮಾಯುಧಂ ಕಲಿತಕರಪದ್ಮ ।
ಸಾರಂಗಜೇಟಿ ಸಿದ್ಧನಂಜೇಶ ಪಾಲಿಸುದು ಸಾರಂಗಪದ
ವನಿತ್ಯೂ ॥೨॥

ಟಿಪ್ಪಣೆಃ— ಸಾರಂಗ= ಆಕಾಶ, ಸಾರಂಗಪದ್ಮ= ಆಕಾಶಗಂಗೆ, ಸಾರಂಗ ಮಣಿ= ಸೂರ್ಯ, ಗೋ= ನಯನ, ಪದ್ಮಸಾರಂಗ= ಕಮಲಾಕ್ಷ (ನಾರಾಯಣ) ಸಾರಂಗ= ಗಜ, ಸಾರಂಗಶ್ರವಣ= ಸರ್ಪ, ಸಾರಂಗ= ಚಂದ್ರ, ಸಾರಂಗ= ಶ್ರೇಷ್ಠವಾದ ದೇಹ, ಜೇಟ= ಜಟಾ.

ವಾರ್ಧಿಕಃ— ಸಾರಂಗವರ್ನಕಂ ಸೂತ್ರನಂ ಪಾತ್ರನಂ ।
ಸಾರಂಗ ಅಮೃತ ಶಿವಚರ್ಮನಂ ಧರ್ಮನಂ ।
ಸಾರಂಗಪಯಣ ಹರಿಮಿತ್ರನಂ ಪಾತ್ರನಂ ಸಾರಂಗಗಮನಸಖಗೋ
ಸಾರಂಗ ಅಂದಕುಶಲಲಾಟನಂ ಜೂಟನಂ ।
ಸಾರಂಗ ತನುಜ ವಾಮಭಾಗನಂ ಭೋಗನಂ ।
ಸಾರಂಗ ತೇಜ ಜನವಲಿಗನಂ ತಲಿಗನಂ ಸಾರಂಗ ಮೌಲಿ
ತ್ರಾಹೀ ॥೩॥

ಟಿಪ್ಪಣೆಃ—ಸಾರಂಗವರ್ಣ= ಧವಳವರ್ಣ, ಕಂ= ವಾಸುಕಿ ಎಂಬಫಣಿ, ಸೂತ್ರ= ಯಜ್ಞೋಪವೀತ, ಸಾರಂಗ= ಸ್ತಂಬರ ದೈತ್ಯ, ಅಮೃತ= ನಿತ್ಯ, ಸಾರಂಗ= ಕುದುರೆ, ಎರಳೆ, ಗೋ= ನಯನ, ಸಾರಂಗಕುಶ= ಆಕಾಶಗಂಗೆ, ಜೂಟ= ಜಡೆ, ಸಾರಂಗ= ಹಿಮವತ್ಪರ್ವತ, ಸಾರಂಗ= ಸೂರ್ಯ, ವಲಗ= ವ್ಯಾಘ್ರಾಸುರ, ಅಜಿನ= ಚರ್ಮ, ತಲಿಗ= ಧರಿಸಿದ, ಸಾರಂಗ= ಚಂದ್ರ.

ವಾರ್ಧಿಕಃ— ಸಾರಂಗ ದೈತ್ಯಚರ್ಮಾಂಬರ ಧರ ದೇವಂ ।
ಸಾರಂಗ ಧರ ಕಲಾಜೂಟ ವಿಲಸದ್ದೇವ ।
ಸಾರಂಗ ವಾಹನಾದ್ಯಖಿಳ ದೇವರ ದೇವ ಸಾರಂಗಪಾಣಿ ದೇವಾ ॥

ಸಾರಂಗಧರ ಪರಮವಾಹನ ಮಹಾದೇವ ।
ಸಾರಂಗವೈರಿ ವಾಹನೆಯಾಣ್ಮನೆದೇವ ।
ಸಾರಂಗವದನ ಪಿತ ಸಂಪಾವಿರೂಪಾಕ್ಷ ಸಾರಂಗ ಪದ
ವೀವುದೂ ॥೪॥

ಟಿಪ್ಪಣೀ—ಸಾರಂಗದೈತ್ಯ= ಗಜಾಸುರ, ಸಾರಂಗ= ಎರಳೆ, ವಿಲಸತ್= ಒಪ್ಪುವ, ಸಾರಂಗ= ಐರಾವತ, ಎರಳೆ ಕೋಡು, ಸಾರಂಗ= ಆನೆ, ಪಂ= ಬ್ರಹ್ಮಾದಿ ಪಶುಗಳಿಗೆ, ಪ= ಪತಿಯಾದ, ಸಾರಂಗಪದ= ಮೋಕ್ಷಪದನೀಯುತ.

ವಾರ್ಧಿಕ:— ಸಾರಂಗಪದ ನಮಲ ಗೋಭುವನ ಸಮರಕ್ಷ ।
ಸಾರಂಗಪಾಣಿ ಗೋಜನ್ಮ ಗೋಕರ ವಿಪುಳ ।
ಸಾರಂಗಮಥನ ಗೋವಚ್ಚ ಮುದದಿಂ ನಿಗಮ ಸಾರಂಗರಥ ವಿಶೇಷಾ
ಸಾರಂಗಚಾಪ ಗೋರಮ್ಯ ಗೋಪಂಚ ।
ಸಾರಂಗ ಸಿಂದುವರ ನಕ್ಷತ್ರ ಗೋಹುಗಳ ।
ಸಾರಂಗ ನವಿರ ಗೋಕರ್ಣ ಕೆಯೂರವರ ಸಾರಂಗರೂಪ
ಶರಣೂ ॥೫॥

ಟಿಪ್ಪಣೀ— ಸಾರಂಗಪದ= ಅಶ್ವಸಾದಖುಣೀಶ್ವರ, ಗೋಭುವನ= ದೇವ ಗಂಗೆ, ಸಾರಂಗ= ಎರಳೆ, ಗೋಜನ್ಮ= ಕಮಲೋದ್ಭವ [ಬ್ರಹ್ಮ], ಗೋ= ಮಸ್ತಕ, ಸಾರಂಗ= ಕಾಳಿಂದಿನಿ ನದಿ, ಗೋ= ನಯನ, ವಚ್ಚ= ಪಾದ, ಸಾರಂಗ= ಕುದುರೆ, ಮಹಾಮೇದ= ಪರ್ವತ, ಚಾಪ= ಬಿಲ್ಲು, ಗೋ= ಮಹಾ ಶೇಷ, ಗೋಪಂಚ= ಐದುಮುಖವುಳ್ಳ, [ಶಿವ], ಸಾರಂಗ= ಆಕಾಶ, ನವಿರ= ಮಂಡಲವಾಗುಳ್ಳಂಥ, ಸಾರಂಗರೂಪ= ಮೋಕ್ಷ ಸ್ವರೂಪ.

ಸಂಪುಟ ೪೦  ಸಂಚಿಕೆ ೨-೪

# ಶಿವಾನುಭವ



ಸಂಪಾದಕರು
**ಫ. ಗು. ಹಳಕಟ್ಟಿ,**
ಬಿ.ಎ.ಎಲ್.ಎಲ್.ಬಿ.

**ವಿಜಾಪುರ**

ವಾ. ಚ. ೫-೧೨-೦ ]●[ ಫೇಬ್ರುವರಿ, ಮಾರ್ಚ ೫೬

# ವಿಷಯಾನುಕ್ರಮಣಿಕೆ.



ಈ ವಿಷಯದಲ್ಲಿ ಉತ್ಸಾಹ ಉಳ್ಳವರಾದ ಜನರ ವಿಳಾಸಗಳನ್ನು ಮೇಲ್ಕಾಣಿಸಿದ ವಿಳಾಸಕ್ಕೆ ತಿಳಿಸಿದಲ್ಲಿ, ಅವರ ಸಂಗಡ ಪತ್ರವ್ಯವಹಾರ ಮಾಡಲಾಗುವುದು.

ವೀರಶೈವ ಸಮಾಜದ ಎಲ್ಲ ಮುಂದಾಳುಗಳು, ವೀರಶೈವ ಮಹಾಸಭೆಯು ಈ ಸಾಹಸ ಕಾರ್ಯದಲ್ಲಿ ನೆರವಾಗಿ ತಮ್ಮ ಅಮೌಲ್ಯ ಸಲಹೆ ಸೂಚನೆಗಳಿಂದ ಸಹಕರಿಸಿ, ಕಾರ್ಯವು ಕೈಗೂಡುವಂತೆ ಮಾಡುವಿರೆಂದು ಹೃತ್ಪೂರ್ವಕವಾಗಿ ಕೋರುತ್ತೇವೆ.

**ಶರಣಯ್ಯಾ ಮಹಾಗಾಂವ್,**
ಕಲ್ಯಾಣ ಕರ್ನಾಟಕ ಪ್ರೆಸ್, ಕಲ್ಬುರ್ಗಿ.

---

# ತ್ರಿವಿಧ ದಾಸೋಹ

**[ಲೇಖಕರು:- ಶ್ರೀಯುತ ಕಲ್ಯಾಣಪ್ಪ ಬ್ಯಾಳಿ, ಮು. ಹುನಗುಂದ]**

ತ್ರಿವಿಧ ದಾಸೋಹವೆಂದರೆ ಗುರುಲಿಂಗ ಜಂಗಮದ ಸೇವೆ. ಗುರುದಾಸೋಹವೆಂದರೆ ಇಷ್ಟಲಿಂಗದಲ್ಲಿ ಸದ್ಭಕ್ತಿಯನ್ನಿರಿಸಿ ಅರ್ಚಿಸುವದು. ಲಿಂಗದಾಸೋಹವೆಂದರೆ ಪ್ರಾಣಲಿಂಗಾನು ಸಂಧಾನವು, ಅರ್ಥಾತ್ ಶಿವಯೋಗವು. ಜಂಗಮದಾಸೋಹವೆಂದರೆ ಭಾವಲಿಂಗದಲ್ಲಿ ಜ್ಞಾನಮಾರ್ಗದಿಂದ ಸಾಮರಸ್ಯವನ್ನು ಹೊಂದುವದು. ಭಕ್ತಿ, ಯೋಗ, ಜ್ಞಾನಮಾರ್ಗಗಳನ್ನು ಲಿಂಗಮುಖವಾಗಿ ಸಾಧಿಸಿದರೆ ತ್ರಿವಿಧದಾಸೋಹ ಮಾಡಿದಂತಾಗುವದು. ಗುರುಮೂರ್ತಿಯೇ ಬಸವಣ್ಣನು. ಲಿಂಗಮೂರ್ತಿಯೇ ಚನ್ನಬಸವಣ್ಣನು. ಜಂಗಮಮೂರ್ತಿಯೇ ಪ್ರಭುದೇವರು. ಆದ್ದರಿಂದ ಬಸವಣ್ಣ, ಚೆನ್ನಬಸವಣ್ಣ, ಪ್ರಭುದೇವರು ಹಾಕಿಕೊಟ್ಟ ಇಷ್ಟಲಿಂಗ ಭಕ್ತಿ, ಪ್ರಾಣಲಿಂಗಾನುಸಂಧಾನ, ಭಾವಲಿಂಗ ಸಾಮರಸ್ಯವನ್ನು ಪಡೆಯುವದೇ ತ್ರಿವಿಧ ದಾಸೋಹವೆನಿಸುವದು.

ಗುರುಲಿಂಗಜಂಗಮಗಳು ಕ್ರಿಯಾಭೇದದಿಂದ ಮೂರು ತೆರನಾಗಿ ಕಂಡರೂ ಅವು ವಸ್ತುತಃ ಒಬ್ಬನೇ ಪರಶಿವನ ಸ್ವರೂಪಗಳು. ಹೇಗೆಂದರೆ

# ವಿಷಯಾನುಕ್ರಮಣಿಕೆ.



ಈ ವಿಷಯದಲ್ಲಿ ಉತ್ಸಾಹ ಉಳ್ಳವರಾದ ಜನರ ವಿಳಾಸಗಳನ್ನು ಮೇಲ್ಕಾಣಿಸಿದ ವಿಳಾಸಕ್ಕೆ ತಿಳಿಸಿದಲ್ಲಿ, ಅವರ ಸಂಗಡ ಪತ್ರವ್ಯವಹಾರ ಮಾಡಲಾಗುವುದು.

ವೀರಶೈವ ಸಮಾಜದ ಎಲ್ಲ ಮುಂದಾಳುಗಳು, ವೀರಶೈವ ಮಹಾಸಭೆಯ ಈ ಸಾಹಸ ಕಾರ್ಯದಲ್ಲಿ ನೆರವಾಗಿ ತಮ್ಮ ಅಮೌಲ್ಯ ಸಲಹೆ ಸೂಚನೆಗಳಿಂದ ಸಹಕರಿಸಿ, ಕಾರ್ಯವು ಕೈಗೂಡುವಂತೆ ಮಾಡುವಿರೆಂದು ಹೃತ್ಪೂರ್ವಕವಾಗಿ ಕೋರುತ್ತೇವೆ.

**ಶರಣಯ್ಯಾ ಮಹಾಗಾಂವ್,**
ಕಲ್ಯಾಣ ಕರ್ನಾಟಕ ಪ್ರೆಸ್, ಕಲ್ಬುರ್ಗಿ.

---

# ತ್ರಿವಿಧ ದಾಸೋಹ

**[ಲೇಖಕರು:- ಶ್ರೀಯುತ ಕಲ್ಯಾಣಪ್ಪ ಬ್ಯಾಳಿ, ಮು. ಹುನಗುಂದ]**

ತ್ರಿವಿಧ ದಾಸೋಹವೆಂದರೆ ಗುರುಲಿಂಗ ಜಂಗಮದ ಸೇವೆ. ಗುರು ದಾಸೋಹವೆಂದರೆ ಇಷ್ಟಲಿಂಗದಲ್ಲಿ ಸದ್ಭಕ್ತಿಯನ್ನಿರಿಸಿ ಅರ್ಚಿಸುವದು. ಲಿಂಗ ದಾಸೋಹವೆಂದರೆ ಪ್ರಾಣಲಿಂಗಾನು ಸಂಧಾನವು, ಅರ್ಥಾತ್ ಶಿವಯೋಗವು. ಜಂಗಮದಾಸೋಹವೆಂದರೆ ಭಾವಲಿಂಗದಲ್ಲಿ ಜ್ಞಾನಮಾರ್ಗದಿಂದ ಸಾಮರಸ್ಯವನ್ನು ಹೊಂದುವದು. ಭಕ್ತಿ, ಯೋಗ, ಜ್ಞಾನಮಾರ್ಗಗಳನ್ನು ಲಿಂಗಮುಖವಾಗಿ ಸಾಧಿಸಿದರೆ ತ್ರಿವಿಧದಾಸೋಹ ಮಾಡಿದಂತಾಗುವದು. ಗುರುಮೂರ್ತಿಯೇ ಬಸವಣ್ಣನು. ಲಿಂಗಮೂರ್ತಿಯೇ ಚನ್ನಬಸವಣ್ಣನು. ಜಂಗಮಮೂರ್ತಿಯೇ ಪ್ರಭುದೇವರು. ಆದ್ದರಿಂದ ಬಸವಣ್ಣ, ಚೆನ್ನಬಸವಣ್ಣ, ಪ್ರಭುದೇವರು ಥಾಕಿಕೊಟ್ಟ ಇಷ್ಟಲಿಂಗ ಭಕ್ತಿ, ಪ್ರಾಣಲಿಂಗಾನುಸಂಧಾನ, ಭಾವಲಿಂಗ ಸಾಮರಸ್ಯವನ್ನು ಪಡೆಯುವದೇ ತ್ರಿವಿಧ ದಾಸೋಹವೆನಿಸುವದು.

ಗುರುಲಿಂಗಜಂಗಮಗಳು ಕ್ರಿಯಾಭೇದದಿಂದ ಮೂರು ತೆರನಾಗಿ ಕಂಡರೂ ಅವು ವಸ್ತುತಃ ಒಬ್ಬನೇ ಪರಶಿವನ ಸ್ವರೂಪಗಳು. ಹೇಗೆಂದರೆ

"ಏಕೋ ದೇವಸ್ತ್ರಯೋ ಭಾಗೋ ಗುರುರ್ಲಿಂಗಂತು ಜಂಗಮಃ'' ಎಂದು ಆಗಮಗಳು ಸಾರಿವೆ. ಪರಶಿವನು ಬ್ರಹ್ಮಾಂಡವನ್ನು ಸೃಷ್ಟಿಸುವಲ್ಲಿ ಗುರುವಾಗಿಯು ರಕ್ಷಿಸುವಲ್ಲಿ ಲಿಂಗವಾಗಿಯೂ ತನ್ನೊಳನಿ ವಿಶ್ವವನ್ನು ಲಯಗೊಳಿಸುವಲ್ಲಿ ಜಂಗಮವಾಗಿಯೂ ಕಲ್ಪಿಸಲ್ಪಟ್ಟಿದ್ದಾನೆ. ಇದನ್ನೇ ಬೇರೆ ರೀತಿಯಾಗಿ ಹೇಳಬೇಕಾದರೆ ಸತ್ತೇ (Wahcre) ಗುರುವೆಂದೂ, ಚಿತ್ತೇ (Energy) ಲಿಂಗವೆಂದೂ ಆನಂದವೇ (Bliss) ಜಂಗಮವೆಂದೂ ನಾವು ಕರೆಯಬಹುದು. ಅಥವಾ ಮೇಲ್ಕಂಡ ತತ್ವದ ಜ್ಞಾನವುಳ್ಳವನೇ ಗುರುವೆಂದೂ ಆ ತತ್ವವೇ ಲಿಂಗವೆಂದೂ ಆ ಜ್ಞಾನವೇ ಜಂಗಮವೆಂದೂ ಹೇಳಬಹುದು. ಜ್ಞಾತೃ, ಜ್ಞೇಯ, ಜ್ಞಾನಗಳ ಸಾಧನೆಯು ಕೂಡ ತ್ರಿವಿಧ ದಾಸೋಹವೆನಿಸುವದು. ಆದ್ದರಿಂದಲೇ ಅರಿವೇ ಗುರು, ಆತ್ಮವೇ ಲಿಂಗ, ಸುಜ್ಞಾನವೇ ಜಂಗಮವೆಂದು ಹೇಳಿದ್ದುಂಟು.

ನಾವು ಪಿಂಡಾಂಡದಲ್ಲಿಯೂ ಕೂಡ ಗುರುಲಿಂಗಜಂಗಮದ ಸ್ವರೂಪವನ್ನು ಕಾಣಬಹುದು. ಅದು ಹೇಗೆಂದರೆ ತನುವೇ ಗುರು, ಮನವೇ ಲಿಂಗ, ಭಾವವೇ ಜಂಗಮ. ಆದುದರಿಂದ ತನುಮನ ಭಾವಗಳನ್ನು ಒಳ್ಳೆ ಸಂಸ್ಕಾರದಿಂದ ಉನ್ನತ ಮಟ್ಟಕ್ಕೆ ಒಯ್ದರೆ ತ್ರಿವಿಧ ದಾಸೋಹ ಮಾಡಿದಂತಾಗುವದು. ಪಿಂಡಾಂಡಿಯು ಮಾಡುವ ಸತ್ಕ್ರಿಯೆಲ್ಲ ಗುರು ಸ್ವರೂಪವಾಗಿಯೂ ಇರುತ್ತವೆ.

ಪಿಂಡಾಂಡ ಬ್ರಹ್ಮಾಂಡಗಳಲ್ಲಿ ಪರವಸ್ತುವಿನ ನೆಲೆಕಲೆಗಳು ಹೇಗೆ ಇರುತ್ತವೆ? ಅಂಗನು ಲಿಂಗವಾಗುವ ಪರಿಯೆಂತು? ಎಂಬುದರ ಅರಿವು ಸಾಮಾನ್ಯ ಜೀವಾತ್ಮರಿಗಿರುವದಿಲ್ಲ. ಸಂಸಾರದ ಜಂಜಾಟದಲ್ಲಿ ಅದನ್ನು ಮರೆತು ಬಿಟ್ಟಿರುತ್ತಾರೆ. ಆದರೆ ಅಂಥ ವಿಶಿಷ್ಟಶಕ್ತಿಯನ್ನು ಪರಮಾತ್ಮನು ಜಗತ್ತಿನಲ್ಲಿ ತೀರ ಸ್ವಲ್ಪ ಜೀವಜ್ಯೋತಿಗಳಿಗೆ ದಯಪಾಲಿಸಿರುವನು. ಅಂಥವರಿಗೆ ನಾವು ಶ್ರೀ ಗುರುಗಳು, ಶರಣರು, ಜಂಗಮರು, ಸದ್ಭಕ್ತರು ಇತ್ಯಾದಿಯಾಗಿ ಕರೆಯುತ್ತೇವೆ. ಅಂಥ ಮಹಾತ್ಮರು ಕಾಲಕಾಲಕ್ಕೆ ಭೂಮಿಗವತರಿಸಿ ಅಜ್ಞಾನಾಂಧಕಾರದಲ್ಲಿ ಮುಳುಗಿದ್ದ ಪಾಮರಜನಗಳಿಗೆ ಜ್ಞಾನಜ್ಯೋತಿಯನ್ನು ನೀಡಿ ಅವರನ್ನುದ್ಧಾರ ಮಾಡುತ್ತ ಬಂದಿದ್ದಾರೆ. ಅಂಥ ಮಹನೀಯರುಗಳಲ್ಲಿ ಬಸವಣ್ಣ, ಚೆನ್ನಬಸವಣ್ಣ, ಪ್ರಭುದೇವರು ವೀರಶೈವರೊಳಗೆ ಪ್ರಮುಖರಾಗಿದ್ದಾರೆ.

ಶೂನ್ಯಸಂಪಾದನೆಯ ೨ನೆಯ ಪುಟದಲ್ಲಿ ಹೇಳಿದ್ದರ ಸಾರಾಂಶವೇನಂದರೆ "ತಮ್ಮ ನಿಜಸ್ವರೂಪವ ಮರೆದ ಆತ್ಮರುಗಳು ದೇಹೋಹವೆಂದು ಜಾತಿ

ವರ್ಣಾಶ್ರಮ, ಕುಲಗೋತ್ರ, ನಾಮಸೀಮೆ, ಸುಖದುಃಖ, ಬಂಧನಕ್ಕೊಳಗಾಗಿ ಕಾಲಕಾಮರಿಗೆ ವಶವಾಗಿ ಚಟಪಡಿಸುತ್ತಿರಲು ಆ ಪರಶಿವನು ಗುರುವಾಗಿ ಬಂದು ತ್ರಿವಿಧ ದೀಕ್ಷೆಯಿಂದ ಮಲತ್ರಯಂಗಳ ಕಳೆದು ದೀಕ್ಷೆಯಿಂ ರಕ್ಷಿಸಿದನು. ಲಿಂಗಸ್ವರೂಪವಾಗಿ ಬಂದು ಕರಸ್ಥಲದಲ್ಲಿ ಪೂಜೆಗೊಂಡು ರಕ್ಷಿಸಿದನು. ಜಂಗಮಸ್ವರೂಪವಾಗಿ ಬಂದು ಅಂತರಂಗ ಬಹಿರಂಗದಲ್ಲಿ ಭರಿತನಾಗಿ ಬೋಧಿಸಿ, ಶಿಕ್ಷಿಸಿ ರಕ್ಷಿಸಿದನು. ಆ ಪರಶಿವನ ಸಚ್ಚಿದಾನಂದ ಸ್ವರೂಪವೆನಿಸಿದ ಬಸವಣ್ಣ, ಚನ್ನಬಸವಣ್ಣ, ಪ್ರಭುದೇವರೇ ಗುರುಲಿಂಗ ಜಂಗಮ ಸ್ವರೂಪವಾಗಿ ಸಕಲ ಜಗತ್ಪಾದನ ನಿಮಿತ್ಯವಾಗಿ ಮರ್ತ್ಯಲೋಕಕ್ಕೆ ಅವತರಿಸಿದರು." ಮೇಲ್ಕಂಡ ಸಂಗತಿಗಳಿಂದ ಬಸವಣ್ಣನೇ ಗುರು, ಚೆನ್ನಬಸವಣ್ಣನೇ ಲಿಂಗ, ಪ್ರಭುದೇವರೇ ಜಂಗಮವೆಂದು ಹೇಳಿದಂತಾಯಿತು. ಅರ್ಥಾತ್ ಬಸವಣ್ಣನು ಇಷ್ಟಲಿಂಗ ಸಂಬಂಧವಾದ ಕಾಯಕ ದಾಸೋಹಗಳನ್ನು ಭಕ್ತರಿಗೆ ಅರುಹಿದನು. ಚನ್ನಬಸವಣ್ಣನು ಪ್ರಾಣಲಿಂಗ ಸಂಬಂಧದ ಶಿವಯೋಗ ಪ್ರಸಾದಗಳ ಮಹಿಮೆಯನ್ನು ಬೋಧಿಸಿದನು. ಪ್ರಭುದೇವರು ಭಾವಲಿಂಗದ ಸ್ವರೂಪವನ್ನು ಅರ್ಥಾತ್ ಲಿಂಗಾಂಗ ಸಾಮರಸ್ಯವನ್ನು ಜಗತ್ತಿಗೆ ಬೀರಿದನು.

ಬಸವಣ್ಣ, ಚನ್ನ ಬಸವಣ್ಣ, ಪ್ರಭುದೇವರು ಬೇರೆ ಬೇರೆ ಕ್ರಿಯೆಗಳನ್ನು ಕೈಕೊಂಡು ೧೨ನೆಯ ಶತಮಾನದಲ್ಲಿ ಒಂದು ಸುಗಮವಾದ ಹಾಗೂ ಬಂಧುರವಾದ ಸಮಾಜವನ್ನು ಕಟ್ಟಿದರು. ಅವರ ಸಾಂಪ್ರದಾಯಕರು ಈ ಸಮಾಜವನ್ನು ಪೋಷಿಸುತ್ತ, ಬೆಳೆಸುತ್ತ ಸಾಗಿದರು. ಶ್ರೀ ಅನಾದಿ ವೀರಶೈವ ಸಂಗ್ರಹದ ೧೭ನೆಯ ಪುಟದಲ್ಲಿ ಹೇಳಿದ್ದರ ಸಾರಾಂಶವೇನಂದರೆ, "ಶ್ರೀ ಬಸವೇಶ್ವರದೇವರ ಸಾಂಪ್ರದಾಯಕರೇ ಘನಲಿಂಗ ಚಕ್ರವರ್ತಿಗಳಾದ ಹಂಚು ಕಂಥೆಯವರೆಂದರೆ ತಮ್ಮ ಶರೀರವನ್ನು ತಮ್ಮ ದೇವಿಯರ್ಗೆ ಹಂಚಿಕೊಟ್ಟರೆಂಬರ್ಥ. ಅರ್ಥಾತ್ ವಿವಾಹವಾದವರು. ಶ್ರೀ ಚನ್ನಬಸವ ಮೂರ್ತಿಯ ಅಂಶಿಕರೇ ಅತೀತ ಆರು ಸಾವಿರ ಶಿವಗಣಾಧೀಶ್ವರರು. ಅತೀತರೆಂದರೆ, ಷಡ್ಲಿಂಗಾನುಭಾವಿಗಳು. ಇವರು ವಿವಾಹಿತರಾಗಲಿ, ಅವಿವಾಹಿತರಾಗಲಿ ಇದ್ದಿರಬಹುದು. ಅಸಮಾಕ್ಷ ಅಲ್ಲಮ ಮಹಾಪ್ರಭು ಸ್ವಾಮಿ ಸಂತತಿಯೇ (ಅಂಶಿಕರೇ) ವಿರಕ್ತಿ ಮೂರು ಸಾವಿರ ಪರದೇಶಿಕರು. ವಿರಕ್ತ ಮೂರು ಸಾವಿರವೆಂದರೆ, ತ್ರಿಲಿಂಗಾನುಭಾವಿಗಳು. ಇವರು ಅವಿವಾಹಿತರು. ಮೇಲ್ಕಂಡ ಸಂಗತಿಗಳ ಮೇಲಿಂದ ೧೨ನೆಯ ಶತಮಾನದಲ್ಲಿ ಶ್ರೀ ಗುರುಗಳು ಲಗ್ನವಾಗಿ ಭಕ್ತಾದಿಗಳಿಗೆ ಲಿಂಗಧಾರಣ ಮಾಡುತ್ತಿದ್ದಂತೆ ಕಾಣುತ್ತದೆ. ಆದರೆ ಮುಂದೆ ಗುರುಗಳೆನಿಸಿಕೊಂಬು

ವವರು ಬ್ರಹ್ಮಚಾರಿಗಳಾಗಿ ಪೀಠಾಧಿಕಾರಿಗಳಾಗುತ್ತ ಬಂದ ಸಾಂಪ್ರದಾಯವೂ ಕಂಡು ಬರುತ್ತದೆ. ಅದು ಏನೇ ಇರಲಿ. ಮೂಲತಃ ಬಸವ, ಚೆನ್ನಬಸವ, ಪ್ರಭುದೇವರು ಗುರುಲಿಂಗಜಂಗಮರಾದುದರಿಂದ ಅವರ ವಚನಾಮೃತ ಪಾನ ಮಾಡಿ, ಅವರ ಆಚರಣೆಯಂತೆ ವರ್ತಿಸುವದೇ ನಿಜವಾದ ತ್ರಿವಿಧ ದಾಸೋಹ ವೆನಿಸುವದೆಂಬುದನ್ನು ನಾವು ಮರೆಯಲಾಗದು.

ಶ್ರೀ ಅನಾದಿ ವೀರಶೈವ ಸಂಗ್ರಹದ ೨೧-೨೨ ನೆಯ ಪುಟಗಳಲ್ಲಿ ಹೇಳಿದ್ದರ ಸಾರಾಂಶವೇನಂದರೆ "ಆ ಪರಮಗುರು ಪ್ರಣವಮೂರ್ತಿ ಜಗದ್ಗುರು ಜಗದಾರಾಧ್ಯ ಪರಮಾಚಾರ್ಯ ಬಸವೇಶ್ವರ ದೇವರ ಸೂತ್ರವಿಡಿದು ಚತು ರ್ದಿಶೆಯಲ್ಲಿ ಚತುರಾಕ್ಷರ ಕಲಶಮೂರ್ತಿಗಳಾದ ರೇಣುಕಗಣೇಶ್ವರ, ಮರುಳ ಶಂಕರೇಶ್ವರ, ಏಕೋರಾಮೇಶ್ವರ, ಪಂಡಿತೇಶ್ವರರೆಂಬ ಚತುರಾಚಾರ್ಯರುದಿಸಿ ದೇಶಾಧೀಶ್ವರ ಶ್ರೀ. ಬಸವಲಿಂಗ ಮೂರ್ತಿಯ ಸದ್ಭಕ್ತಿಪರ್ವನಾ ಸಾಂಪ್ರ ದಾಯಕರಾಗಿ ವರ್ತಿಸಿದರು ಮತ್ತು ಜಗದ್ಗುರುವಾದ ಆ ನಂದಿಕೇಶ್ವರ ಮೂರ್ತಿಯನ್ನು ಮಧ್ಯಕಲಶೇಶ್ವರನೆಂದು ಆರಾಧಿಸುತ್ತಿರ್ಪರು. ಇದೇ ಚತು ರಾಚಾರ್ಯರ ವಂಶೋತ್ಪತ್ತಿಯ ಲಕ್ಷಣ" ಇದರ ಮೇಲಿಂದ ಶ್ರೀ ಗುರು ಬಸವಲಿಂಗದ ಸೂತ್ರವಿಡಿದು ಮುಂದೆ ಚತುರಾಚಾರ್ಯರು ವೀರಶೈವ ಸಮಾಜ ವನ್ನು ಅನೇಕ ವರ್ಷಗಳ ವರೆಗೆ ಸುಸಂಘಟಿತವಾಗಿ ನಡೆಯಿಸುತ್ತ ಬಂದರೆಂದು ವಿದಿತವಾಗುತ್ತದೆ. ಆದರೆ ೧೮ ನೆಯ ಶತಮಾನದಲ್ಲಿ ಕಾಶೀ ಪೀಠದ ಪೂಜ್ಯ ರಾದ ಶ್ರೀ ವಿಶ್ವಾರಾಧ್ಯರ ಉತ್ಪತ್ತಿಯಾಗಿ ಮಧ್ಯಕಲಶಸ್ಥಾನವು ಅವರ ಪಾಲಿಗೆ ಹೋದಂತೆಯು ಅಲ್ಲಿಂದ ಮುಂದೆ ಅವಿವಾಹಿತರು ಗುರುಸ್ಥಲದ ಅಧಿಕಾರಿಗಳಾಗಿ ಸೂತ್ರೋಪ ಸೂತ್ರಗಳನ್ನು ನಿರ್ಮಿಸಿ ಸಮಾಜದಲ್ಲಿ ಕೆಲವು ಮಾರ್ಪಾಟುಗಳನ್ನು ಮಾಡಿದಂತೆಯೂ ಇತಿಹಾಸದಿಂದ ತಿಳಿದುಬರುತ್ತವೆ. ಕಾಲಾನುರೋಧದಿಂದ ಬಸವೇಶನ ವಂಶಿಕರ ಮಧ್ಯಕಲಶಸ್ಥಾನವು ಲೋಪ ವಾದಂತೆ ಚನ್ನಬಸವಣ್ಣನ ಅತೀತ ಆರುಸಾವಿರ ಅನುಯಾಯಿಗಳೂ ಲೋಪ ವಾಗಿ ಆತನು ಹಾಕಿಕೊಟ್ಟ ಕರುಣಪ್ರಸಾದ, ಪ್ರಸಾದಿಕ ತತ್ವ, ದೀಕ್ಷಾನು ಗ್ರಹ ಈ ಸಾಂಪ್ರದಾಯಗಳು ಮಾತ್ರ ಇದುವರೆಗೆ ಬಳಕೆಯಲ್ಲಿ ಉಳಿದಂತೆ ನಮಗೆ ಭಾಸವಾಗುತ್ತದೆ. ಅದೇ ಮೇರೆಗೆ ಜಂಗಮಸ್ಥಲದ ಪ್ರಭುದೇವರು ಶಿವಾನುಭವಮಂಟಪದ ಅಧ್ಯಕ್ಷರಾಗಿ ಜ್ಞಾನದಾಸೋಹ ಮಾಡಿ ನಿರ್ಮಿಸಿದ ೩ ಸಾವಿರ ವಿರಕ್ತರ ಹಸ್ತಕರು ಮುಂದೆ ಚಿಕ್ಕಪುಟ್ಟ ವಿರಕ್ತಪೀಠಗಳಿಗೆ ಅಧಿ ಕಾರಿಗಳಾಗಿ ಮೆರೆದಾಡಹತ್ತಿದರೇ ವಿನಾ ಪೂರ್ವಜರು ಗಳಿಸಿಕೊಟ್ಟ ಶಿವಾನು

ಭವ ಜ್ಞಾನವನ್ನೆಲ್ಲ ಕಳೆದುಕೊಂಡುಬಿಟ್ಟಂತೆ ತೋರುತ್ತದೆ. ಆದರೆ ಆ ಶಿವಾನುಭವ ಜ್ಞಾನವು ಗ್ರಂಥಸ್ಥವಾಗಿ ಹಾಗೇ ಉಳಿದಿದ್ದು ರಾ। ಬ। ಹಳಕಟ್ಟಿಯವರ ಪರಿಶ್ರಮದಿಂದ ಪ್ರಕಟವಾದದ್ದರಿಂದ ಅವರಿಗೆ ಸಮಾಜವು ಅತ್ಯಂತ ಋಣಿಯಾಗಿದೆ. ಆ ಶಿವಾನುಭವದ ಸಕೀಲಸಂಬಂಧಗಳನ್ನು ಬಲ್ಲಂಥ ಪುಣ್ಯಶಾಲಿಗಳು ಈಗ ಬಹು ಅಪರೂಪವಾಗಿ ಬಿಟ್ಟಿದ್ದಾರೆ. ಅಧಿಕಾರ, ಸ್ವಾರ್ಥ, ದುರಭಿಮಾನ, ಡಾಂಭಿಕತೆಗಳು ಹೆಚ್ಚಾಗಿ ಬಸವಾದಿಗಳ ಕಾಲದಲ್ಲಿ ತೊಳಗಿ ಬೆಳಗುತ್ತಿದ್ದ ವೀರಶೈವ ಧಾರ್ಮಿಕ ಸ್ವರೂಪವು ಕಳೆಗುಂದಿ ಮಸಕಾಳವಾಗಿರುವದು ಶೋಚನೀಯವಾಗಿದೆ.

ಬಸವ, ಚನ್ನಬಸವ, ಪ್ರಭುದೇವರು ಗತಿಸಿಹೋಗಿ ಇಂದಿಗೆಷ್ಟೆ೮೦೦ ವರ್ಷಗಳಾದರೂ ಅವರು ತಮ್ಮ ಹಿಂದೆ ಅಮೌಲ್ಯವಾದ ವಚನಸಾಹಿತ್ಯ ಭಾಂಡಾರವನ್ನು ಬಿಟ್ಟುಹೋಗಿದ್ದಾರೆ. ಸಮಾಜದ ಸುಜ್ಞರು ಆ ವಚನಗಳ ನಿಜವಾದ ರಹಸ್ಯವನ್ನರಿತುಕೊಂಡು ಸಮಾಜವನ್ನು ಮಾರ್ಪಡಿಸಿದರೆ ನಿಜವಾಗಿ ತ್ರಿವಿಧ ದಾಸೋಹ ಮಾಡಿದಂತಾಗುವದು. ನಮ್ಮ ಸಮಾಜದಲ್ಲಿ ನೂರಾರು ಜನ ಶರಣರು ವಚನಕಾರರಾಗಿದ್ದರೂ ಅವರು ಬಸವ, ಚನ್ನಬಸವ, ಪ್ರಭುದೇವರನ್ನನುಸರಿಸಿಯೇ ವಚನಗಳನ್ನು ರಚಿಸಿದ್ದಾರೆ. ಆದ್ದರಿಂದ ಸಮಾಜಕ್ಕೆ ಆ ತ್ರಿಮೂರ್ತಿಗಳೇ ಮೂಲಾಧಾರ. ಪಾಪಕರ್ಮವು ಹೆಚ್ಚಾಗಿ ಧರ್ಮವು ಲಯವಾಗುತ್ತಿರುವಾಗ ನಾವು ಅವತರಿಸಿ ಬಿದ್ದ ಸಮಾಜವನ್ನು ಪುನಃ ಮೇಲಕ್ಕೆತ್ತುವೆವೆಂದು ಶರಣರು ಕಾಲಜ್ಞಾನದಲ್ಲಿ ಅಭಿವಚನ ಕೊಟ್ಟಿದ್ದಾರೆ. ಈಗ ಶರಣರು ಉದಿಸುವ ಕಾಲವು ಬಂದಿದೆ. ಅವರು ಉದಿಸುವ ಕಾಲವೆಂದರೆ ಅವರ ತತ್ವಗಳು ಪ್ರಚಾರವಾಗಿ ಜನತೆಯ ಆಚಾರದಲ್ಲಿ ಅವು ಅಳವಡುವ ಕಾಲ. ಈಗ ಸಮಾಜದ ಭಕ್ತಸ್ಥಲ, ಗುರುಸ್ಥಲ, ಜಂಗಮಸ್ಥಲಗಳಲ್ಲಿ ಸ್ವಾರ್ಥ, ಆಡಂಬರ, ವಿಷಯವಾಸನೆಗಳು ಬೆಳೆದು ಸಮಾಜವು ಅಧೋಗತಿಗೆ ಹೋಗಿರುತ್ತದೆ ಕಾರಣ ಸಮಾಜದ ಸುಶಿಕ್ಷಿತ ಪ್ರಮುಖರು ಒಂದು ಸಂಸ್ಥೆಯನ್ನು ರಚಿಸಿ ಆ ಮೂಲಕ ವಚನಗಳ ಆಳವಾದ ಅಭ್ಯಾಸ ಪ್ರಚಾರಗಳನ್ನು ನಡೆಯಿಸಿ ಬಂಧುರವಾದ ಸಮಾಜವನ್ನು ಕಟ್ಟಿದರೆ ನಿಜವಾದ ತ್ರಿವಿಧ ದಾಸೋಹ ಸೇವೆಯಾಗುವದು. ನಮ್ಮ ಸಮಾಜವು ಬೇರೆ ನೂರಾರು ಸುಧಾರಣೆಗಳನ್ನು ಮಾಡಿದರೂ ಏನೂ ಸುಧಾರಣೆ ಮಾಡಿದಂತಾಗುವದಿಲ್ಲ. ಇದೊಂದು ಸುಧಾರಣೆ ಮಾಡಿದರೆ ಎಲ್ಲ ಸುಧಾರಣೆಯನ್ನೂ ಮಾಡಿದಂತಾಗುವದು.

---

# ಭಕ್ತಸ್ಥಲ.

(ಲೇಖಕರು:— ಶ್ರೀಮನ್ನಿರಂಜನ ಪ್ರ। ಶ್ರೀ. ಸಂಗಮನಾಥ ಸ್ವಾಮಿಗಳು.)

---

"ಸ್ವಾನುಭಾವದ ನೆಲೆಯ ನಾನೇನು ಬಲ್ಲೆನೈ. ನೀನೆನ್ನ ಒಳಹೊಕ್ಕು ಯೇನನು ನುಡಿಸಿದವನೇ ನುಡಿವೆ ಗುರುವೇ ಕೃಪೆಯಾಗು.''

"ಹೇಳಲರಿಯೆನು ನಾನು, ಹೇಳಿನಲು ಹೇಳಿದೆನು. ಬಾಳಾಲೋಚನನ ಶರಣರ ಆಳಾಗಿ ಹೇಳಿದೆನು ನೋಡ ಸರ್ವಜ್ಞ.'' ಎಂಬಂತೆ ಶಿವಶರಣರ ಆಶೀರ್ವಾದ ಹೊಂದಿ, ಈಗಿನ ಶ್ರೇಷ್ಠ ಶಿವಾನುಭಾವಿಗಳಾದ ಈಗಿನ ಶಿವಶರಣರಿಗೂ ನಮ್ಮ ಪಾಠವನ್ನು ಒಪ್ಪಿಸುವ ಉದ್ದೇಶ. ಭಕ್ತಸ್ಥಳದ ವಿಚಾರವನ್ನು ನನ್ನ ಅಲ್ಪ ಅನುಭವದಿಂದ ಮುಂದುವರಿಸಬೇಕೆಂದು ನಿಂತಿರುತ್ತೇನೆ.

ನಾನು ಸ್ವಂತ ಹೇಳಲು ಅಂತಹ ಅನುಭವಿಯು ಅಲ್ಲ; ಶಕ್ತನೂ ಅಲ್ಲ. ನನ್ನ ಅನುಭವವನ್ನು ಒಪ್ಪಲಿ, ಒಪ್ಪದೇ ಇರಲಿ. ನನ್ನ ಮತಿಗೆ ತಿಳಿದಷ್ಟು ಹೇಳಬೇಕಾದದ್ದೇ ನನ್ನ ಕರ್ತವ್ಯ.

## ಭಕ್ತಸ್ಥಳ

೧. ಲಿಂಗಾಂಗಿಯು ಸದಾಚಾರಿಯಾಗಿರತಕ್ಕದ್ದು. ಅಂಗಸಂಗಿಯಾದವಂಗೆ ಲಿಂಗಸಂಗವಿಲ್ಲ. ಲಿಂಗಸಂಗಿಯಾದವಂಗೆ ಅಂಗಸಂಗವಿಲ್ಲ. ''ಲಿಂಗಸಂಗವೆಂಬುದೇ ಸದಾಚಾರ. ಅಂಗಸಂಗವಾದುದೇ ಅನಾಚಾರ.'" ಇದು ಕಾರಣವಾಗಿ, ಅಂಗಸಂಗಮಂ ಬಿಟ್ಟು, ಲಿಂಗಸಂಗವಾಗಿರಬೇಕು. ನಮ್ಮ ಕೂಡಲ ಚನ್ನಸಂಗಯ್ಯನಲ್ಲಿ.

''ಲಿಂಗಾಂಗಿಯ ನಡೆಯು ಹೇಗೆ ಇರಬೇಕೆಂಬುದನ್ನು ಶ್ರೀ ಗುರು ಚನ್ನಬಸವಣ್ಣನವರು ಅಪ್ಪಣೆ ಕೊಡಿಸಿದ್ದಾರೆ. '' ಅಂಗ ಸಂಗವಾದವಂಗೆ ಲಿಂಗಸಂಗವೆಲ್ಲಿಯದು? ಲಿಂಗಕ್ಕೆ ಅವನು ದೂರವೇ ಸರಿ. ಅನಾಚಾರಿಯಾದನಂಗೆ ಲಿಂಗಾಂಗಿ ಎನ್ನಬಹುದೇ ? ಇಲ್ಲ. ಲಿಂಗಕ್ಕೆ ಅವನು ದೂರವೇ ಉಳಿದನು. ಅಂದರೆ, ಪರಮಾತ್ಮನಿಗೆ ದೂರನಾದ ಬಳಿಕ ಲಿಂಗಾಂಗಿ ಹೇಗಾದ?" ಆದ್ದರಿಂದ ಲಿಂಗಾಂಗಿಯು ಶುದ್ಧ ನಡೆಯುಳ್ಳವಾಗಿರಬೇಕೆಂದು ಪ್ರಮಥರ ಭಕ್ತಸ್ಥಳದ ಮುಖ್ಯ ವಚನಗಳುಂಟು. ಹಾಗೂ ಲಿಂಗ ಸಂಗಿಯಾದವಂಗೆ ಅಂಗಸಂಗವಿಲ್ಲ. ಅಂಗಸಂಗಿಯಾದವನೇ ಲಿಂಗಾಂಗಿಯೆಂದು ಅರ್ಥವಾಯಿತು. ಲಿಂಗಜ್ಞಾನ ಉಳ್ಳವರಿಗೆ ಅಂಗವೆಂಬುವದೇ ಇಲ್ಲ. ಅಂಗವಿಲ್ಲದ ಬಳಿಕ ಅರಿ

ಷಡ್ವರ್ಗಾದಿ ಅನಾಚಾರಗಳೆಲ್ಲಿರಬೇಕು ? ಅನಾಚಾರವಿಲ್ಲದ ಬಳಿಕ ಅಂಗದ ಗುಣಗಳು ಸಂಪೂರ್ಣ ಅಳಿದು, ಲಿಂಗ ಗುಣಗಳು ಅಂದರೆ ಸದಾಚಾರಗಳು ಉಳಿಯುವವು. ಈ ಸದಾಚಾರನೇ ಲಿಂಗದ ಚಿಹ್ನವು. ಲಿಂಗಾಂಗಿಯಾದುದಕ್ಕೆ ಕುರುಹು. ಇವನೇ ಲಿಂಗ ಭಕ್ತನು. ಅಂದರೆ, ಪರಮಾತ್ಮನ ಆಶೀರ್ವಾದವ ಹೊಂದಿದವನು ಎಂದು ಭಕ್ತಸ್ಥಳದಲ್ಲಿ ಒಂದನೆಯ ವಚನವನ್ನು ಆದಷ್ಟು ಮಟ್ಟಿಗೆ ಅನುಭವ ಮಾಡಿದ್ದಾಯಿತು.

೨. ಅಂಗಾಶ್ರಯವಳಿದು, ಲಿಂಗಾಶ್ರಯವಾದಬಳಿಕ ಆ ಲಿಂಗಕ್ಕೆ ಲಿಂಗಾಚಾರವಲ್ಲದೆ ಅಂಗಕ್ರಿಯೆ ಎಂಬುದಿಲ್ಲ ನೋಡಾ. ಲಿಂಗದಲ್ಲಿ ನೈಷ್ಠಿಕವಂತನಾದ ಬಳಿಕ ಅಂಗ ನಾಮವಿಡಿದು ಬಳಲುವ ಬಳಲಿಕೆಯೆಂತೋ ?

ಅನಾಚಾರವ ಜರಿದ ಬಳಿಕ ನಮ್ಮ ಕೂಡಲ ಚನ್ನ ಸಂಗನ ಶರಣರು ಅನ್ಯವ ಆಚರಿಸುವವರಲ್ಲ. ಅಂದರೆ ಅಂಗದ ಮಲತ್ರಯವಳಿದು ಲಿಂಗಾಶ್ರಯದ ಲಿಂಗಾನುಭಾವಿಯಾದಬಳಿಕ ಆ ಅಂಗಕ್ಕೆ ಲಿಂಗದ ನಡೆ, ಲಿಂಗದ ನುಡಿ ಲಿಂಗಾಚಾರವಲ್ಲದೆ, ಅಂಗದಕ್ರಿ, ಅಂಗದ ನಡೆ ಅಂದರೆ ದುರ್ನಡೆ. ದುರಾಚಾರ ಇಲ್ಲ. ಲಿಂಗದಲ್ಲೇ ನೈಷ್ಠಿಕನಾದ ಬಳಿಕ ಅಂಗದ ದುರ್ಗುಣಗಳೆಲ್ಲಿರಬೇಕು ? ಅಂಗದ ಅಭಿಮಾನವಿಡಿದು ಬಳಲುವ ಬಳಲಿಕೆ ಎಂತು ? ಅನಾಚಾರವ ಜರಿದು ಹೀಯಾಳಿಸಿ, ದೂರೀಕರಿಸಿ, ಆಚಾರವನರಿದು ನಡೆಯುವನೇ ಭಗವದ್ಭಕ್ತನೆನಿಸುವನು. ಇವನೇ ಭಕ್ತಸ್ಥಳಕ್ಕೆ ಯೋಗ್ಯನು. ಇದರಿಂದ ಅಂಗ ಗುಣಗಳು ಸಂಪೂರ್ಣ ಆಳಿದು, ಲಿಂಗ ಗುಣಗಳು ಅಳವಟ್ಟು, ಅದರಂತೆ ಆಚರಿಸುವವನ ಲಿಂಗಾಂಗಿ ಎನಬೇಕಲ್ಲದೆ, ಇವನೇ ಭಕ್ತಸ್ಥಲಕ್ಕೆ ಅಧಿಕಾರಿಯು.

" ಅಂಗ ಜೀವಿಗಳೆಲ್ಲಾ ಅಶನಕ್ಕೆ ನೆರೆದು, ಲಿಂಗವಾರ್ತೆಯ ನುಡಿವರಯ್ಯಾ. ಕಾಯ ಜೀವಿಗಳೆಲ್ಲಾ ಕಳವಳಿಸಿ ನುಡಿವರಯ್ಯಾ. ಮನಬಂದ ಪರಿಯಲ್ಲಿ ನುಡಿವರಿಗೆ ಗುಹೇಶ್ವರನೆಂಬ ಲಿಂಗ ನಿಮಗೆಲ್ಲಿಯದೋ ? "

ಅಂಗಕ್ಕಾಗಿ (ಶರೀರಕ್ಕಾಗಿ) ಜೀವಿಸಿ, ಹಸಿವುತೃಷೆಗಳಿಗೆ ಸಿಕ್ಕು, ಅಂತರಂಗದಲ್ಲಿ ಬಳಲುತ್ತಾ, ಬಹಿರಂಗದಲ್ಲಿ ಲಿಂಗವಾರ್ತೆಗಳನ್ನು ( ಪರಮಾತ್ಮನ ವಿಚಾರವನ್ನು ) ನುಡಿದು ಫಲವೇನು ? ಕಾಯ ಗುಣಕ್ಕೆ ವಳಗಾಗಿ, ಆಶೆ ಮೋಹಾದಿಗಳಿಗೆ ಸಿಕ್ಕು, ತೊಳಲಿ–ಬಳಲಿ, ತಮ ತಮಗೆ ಮನಬಂದಂತೆ ನುಡಿದು ಫಲವೇನು ? ಇಂಥವರಿಗೆ ಪರಮಾತ್ಮನ ಸುದ್ದಿ ಯೇಕೆ ? ಲಿಂಗದ

ವಿಚಾರವೇಕೆ ? ಅಂಥವರಿಗೆ ದೇವರ ಅರಿವುದು ಸಾಧ್ಯವೇ ? ಗುಹೇಶ್ವರ ನೆಂಬ ಲಿಂಗ ದೂರಲೇ ಉಳಿದನೆಂದಾಯಿತು. ಇದರ ಮೇಲಿಂದ ಭಕ್ತನ ನಡೆನುಡಿಗಳು ಶುದ್ಧವಾಗಿರಬೇಕೆಂಬ ಭಕ್ತಸ್ಥಳದ ಒಂದನೆಯ ಮೆಟ್ಟಿಲು ಬೋಧಿಸುತ್ತದೆ.

ಲಿಂಗದ ನಡೆಯುಳ್ಳವನೇ ಲಿಂಗಾಂಗಿಯು; ಭಗವದ್ಭಕ್ತನು. ( ಭಗ ವಂತನ ಆಶೀರ್ವಾದ ಹೊಂದಿದವನು.) ಹೀಗೆ ಮಾಡಲಿಕ್ಕೆ ಇಡೀ ಮಾನವ ಕೋಟಿಗೂ ಅಧಿಕಾರವಿದೆ.

ಭಕ್ತಸ್ಥಳದಿಂದ ಐಕ್ಯಸ್ಥಳದಿಂದ ಐಕ್ಯಸ್ಥಳದ ವರೆಗೂ ಅನುಭವ ಹೊಂದಿ ಷಟಸ್ಥಳ ಜ್ಞಾನಿಯಾಗುವುದಕ್ಕೆ ಯಾರಿಗೆ ತಾನೆ ಅಡ್ಡಿ (ಆತಂಕ) ಇದೆ ? ವೀರಶೈವ ಧರ್ಮವೇ ವಿಶ್ವಧರ್ಮವಲ್ಲವೇ ? ಮುಕ್ತಿಯೇ ಮಾನವನ ಗುರಿಯು ಎಂದು ಭಾರತದ ಧರ್ಮಶಾಸ್ತ್ರಗಳು ಸಾರಿ ಸಾರಿ ಹೇಳುತ್ತವೆ.

ವಿಶ್ವಧರ್ಮವೆಂಬ ವೀರಶೈವ ಧರ್ಮವು ಅಂದರೆ, ಲಿಂಗಾನುಭವ ಧರ್ಮವು ತನ್ನ ಮೂಲ ಸ್ಥಾನವನ್ನು ಮುಟ್ಟುವ ಉದ್ದೇಶ ಅಷ್ಟಾವರಣ, ಪಂಚಾಚಾರ, ಷಟುಸ್ಥಳ, ಲಿಂಗಾಂಗ ಸಾಮರಸ್ಯ ಎಂಬ ಸಾಧನ ಚತುಷ್ಟಯವನ್ನು ಹಿಡಿದು, ಸಾಗುತ್ತಿದೆ. ಸಾಧಕರಾದ ನಾವೆಲ್ಲರೂ ಮೊದಲಿನ ಸೋಪಾನವಾದ ಭಕ್ತ ಸ್ಥಳವಿಡಿದು, ಒಂದೊಂದಾಗಿ ಸಾಧಿಸುತ್ತಾ, ಅದರ ಅನುಭವವನ್ನು ನಮ್ಮ ನಡೆಯಲ್ಲಿ ಅನುಸರಿಸಿ ಹೋದದ್ದಾದರೆ, ನಮ್ಮ ಮೂಲ ಸ್ಥಾನವಾದ ಐಕ್ಯ ಸ್ಥಳವನ್ನು ಹೊಂದಿ, ತಾನು ತಾನಾಗುವದೇ ವೀರಶೈವದ ಮುಖ್ಯ ಗುರಿಯು ಎಂದು ನಾನು ಅಲ್ಪ ಜ್ಞಾನದಿಂದ ನನ್ನ ಮನಸ್ಸಿನಲ್ಲಿ ಅನುಭವವನ್ನು ಹೊಂದ ಬೇಕೆಂದು ಭಕ್ತಸ್ಥಳದ ಮುಖ್ಯ ಪೀಠಿಕೆಯನ್ನು ಹಾಕಿ, ಆದಷ್ಟು ತಿಳಿವಳಿಕೆ ಯಿಂದ ಸ್ಥಳಗಳ ಮಹತ್ವವನ್ನು ಮುಂದುವರಿಸಬೇಕೆಂದಿದ್ದೇನೆ.

ಈಗಿನ ಶಿವಶರಣರಾದ ರಾ|| ಬ|| ಫ. ಗು. ಹಳಕಟ್ಟಿ, ಬಿ. ಎ. ಎಲ್. ಎಲ್. ಬಿ. ವಿಜಾಪೂರ ಈ ಮಹನೀಯರು ೧೯೨೬ ನೆಯ ಇಸ್ವಿಯಿಂದಲೂ ನಾವು ಅವರ ಪರಿಚಯವನ್ನು ಹೊಂದಿದವರಿದ್ದೇವೆ. ಅವರು ಅಂದಿನಿಂದ ಈ ವರೆಗೂ ವೀರಶೈವ ಧರ್ಮದ ಸೇವೆ, ಈ ಧರ್ಮದ ಮೂಲ ತತ್ವಗಳನ್ನು, ಶಿವಶರಣರ ಸಿದ್ಧಾಂತವನ್ನು ಹೊರಡಿಸುತ್ತ ಬಂದಿರುವುದು ಸರ್ವರಿಗೂ ವಿಹಿ ತವೇ ಇದೆ. ಅವರಿಗಾಗಿ ವೀರಶೈವ ಮಠಾಧೀಶ್ವರರೂ, ದೊಡ್ಡ ದೊಡ್ಡ ಸಿಂಹಾಸನಾಧಿಪತಿಗಳೂ, ಶ್ರೀಮಂತರೂ, ಸಮಾಜಸೇವೆ ಮಾಡುವ ಈ ಮಹ

ನೀಯರಿಗೆ ಧನಸಹಾಯವನ್ನಾಗಲೀ ಅವರಿಗೆ ಬೆಂಬಲವನ್ನಾಗಲೀ ಪ್ರೋತ್ಸಾಹಿಸಿಕೊಂಡಿರುವುದು ಅವರ ಶಿವಾನುಭವ ಪತ್ರಿಕೆಯಲ್ಲಿ ಇದುವರೆಗೂ ಓದುತ್ತಿರುವ ನಮ್ಮ ಕಣ್ಣಿಗೆ ಕಂಡಿಲ್ಲವಾಗಿ ತೋರುತ್ತೆ.

ನಾವು ಈ ಹಿಂದೆ ವಿಜಾಪುರದಲ್ಲಿ ೭೭೦ ಅಮರಗಣಂಗಳ ಪೂಜೆಗೆ ಹೋದಾಗ ಇವರನ್ನು ಕಂಡೆವು. ಅವರನ್ನು ನೋಡಿ ನನ್ನ ಅಂತರಂಗದಲ್ಲಿ ಕಣ್ಣೀರು ಪಪ ಉದುರಿದವು. ಆವಾಗ ಇವರನ್ನು ನೋಡಿ ನಾನು ಭಾವಿಸಿದ್ದೇನೆಂದರೆ ಇವರೇ "ಈಗಿನ ಶರಣರು.'' ಈ ವೀರಶೈವ ಮತ ಉದ್ಧರಿಸುವುದಕ್ಕೆ ಬಂದ ಮಹಾತ್ಮರು.

''ಮಹಾತ್ಮ ಬಸವಣ್ಣನ ನೆನೆಪು ಬಂದು'' ನನ್ನ ಅಂತರಂಗದಲ್ಲಿ ಶರಣು ಶರಣಾರ್ಥಿ ಎಂದು ಅರ್ಪಿಸಿದೆನು! ಅವರು ನಮಗೆ ನಮಸ್ಕರಿಸುವುದಕ್ಕೆ ಬಂದಾಗ ಅವರ ನಮಸ್ಕಾರವನ್ನು ನಾನು ತೆಗೆದುಕೊಳ್ಳಬಾರದೆಂದು ಅವರ ಎರಡು ಕೈಗಳನ್ನು ಬಿಗಿಹಿಡಿದುಕೊಂಡೆನು, ಆ ಸಮಯದಲ್ಲಿ ಏನೂ ಮಾತ-ಡಲು ನನ್ನ ಮನವು ಕರಗಿ ದುಃಖದಿಂದ ಕುಳಿತುಕೊಂಡೆವು. ನಾನು ನನ್ನ ದುಃಖವನ್ನು ಹೊರಪಡಿಸಲಿಲ್ಲ. ಆಗ ನಾನು ಅವರಲ್ಲಿ ಹೇಳಿದ್ದೇನೆಂದರೆ ಪ್ರಭುದೇವರ ವಚನಗ್ರಂಥವನ್ನು ಹೊಸದಾಗಿ ಮುದ್ರಿಸಬೇಕಾಗಿದ. ಅದರ ಖರ್ಚು ಎಷ್ಟಾಗುತ್ತದೆಂದು ಕೇಳಿದೆನು. ಅದಕ್ಕೆ ಆ ಮಹನೀಯರು ಪುಟವನ್ನು ನೋಡಿ ಖರ್ಚಿನ ವಿಚಾರವನ್ನು ಮುಂದೆ ತಮಗೆ ಪತ್ರಬರೆಯುತ್ತೇನೆಂದು ಹೇಳಿದರು.

ಆಗ ನಮ್ಮ ಹಿಂದೆಬಂದ ಶಿಷ್ಯರೊಂದಿಗೆ ಹಿಂದಿರುಗಿ ಸ್ವಸ್ಥಳಕ್ಕೆ ಬಂದೆವು. ಮಹಾಪೂಜ್ಯರೇ ? ಶೂನ್ಯಸಿಂಹಾಸನಾಧೀಶ್ವರರೇ ಹಾಗೂ ಶ್ರೀಮಂತರೇ ವೀರಶೈನಾಭಿಮಾನಿಗಳೇ ವೀರಶೈವ ಸಮಾಜವು ತನ್ನ ಧರ್ಮದ ತಿಳುವಳಿಕೆ ಇಲ್ಲದೆ ಗುರುಜಂಗಮರಲ್ಲಿ ಪಾರ್ಟಿ, ಒಳಪಂಗಡಗಳಲ್ಲಿ ಪಾರ್ಟಿಗಳನ್ನು ಹೊಂದಿ ಪುಡಿ ಪುಡಿಯಾಗುತ್ತ ಇದೆ. ಅನೇಕರು ವೀರಶೈವ ಧರ್ಮದ ತಿಳಿವಳಿಕೆ ಇಲ್ಲದೆ ಮತ್ತು ವೀರಶೈವ ಧರ್ಮದ ಮೂಲತತ್ವಗಳನ್ನು ಓದದೇ ಬೇರೆ ಧರ್ಮಗಳನ್ನು ಓದಿ ತಮ್ಮ ಬಹಿರಂಗ ಸಾಂಪ್ರದಾಯದ ಅಷ್ಟಾವರಣಗಳನ್ನೇ ತೆಗೆದುಹಾಕಿರುವುದನ್ನು ನೋಡಿ ಸಂಕಟಪಡುತ್ತ ಇರುತ್ತೇವೆ. ಇನ್ನಾದರೂ ತಾವುಗಳೆಲ್ಲರೂ ದಯವಿಟ್ಟು ಈ ಮಹನೀಯರಿಗೆ ಸಹಾಯವನ್ನು ಮಾಡಿ ಆಶ್ರಯಿಸಿ ಪ್ರೋತ್ಸಾಹಿಸುವಿರಾಗಿ ನಮ್ಮ ಸವಿನಯವಿನಂತಿ.

---

# ಕ್ಷಮಾಪಣೆ

ಈಗಿನ ಸಂಚಿಕೆಯು ಎಂದಿನಂತೆ ತಿಂಗಳ ಮಧ್ಯದಲ್ಲಿ ಪ್ರಸಿದ್ಧವಾಗದೆ ತಡವಾಗಿ ಪ್ರಸಿದ್ಧವಾಗಿರುತ್ತದೆ ಅಲ್ಲದೆ ವಾಡಿಕೆಯ ಪುಟಗಳಗಿಂತಲು ಕಡಿಮೆ ಪುಟವುಳ್ಳದಾಗಿರುತ್ತದೆ ಆಕಸ್ಮಿಕ ಕಾರಣಗಳಿಗೋಸ್ಕರ ಹೀಗಾಗಿದ್ದು ಇದ ಕ್ಕೋಸ್ಕರ ನಾವು ವಾಚಕರ ಕ್ಷಮಾಪಣೆಯನ್ನು ಬೇಡುತ್ತೇವೆ. ವಿಜಾಪುರದಲ್ಲಿ ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳು ಗೀತಾ ಪ್ರವಚನ ಮತ್ತು ಸಿದ್ಧಾಂತ ಶಿಖಾ ಮಣಿ ಎಂಬ ಗ್ರಂಥಗಳ ಪ್ರವಚನಗಳನ್ನು ನಡೆಯಿಸಿದ್ದು ಅವು ಅತ್ಯಂತ ಜನ ಪ್ರಿಯವಾಗಹತ್ತಿರುತ್ತವೆ. ಅವುಗಳನ್ನು ಬರೆಯಿಸಿ ಸಕಾಲದಲ್ಲಿ ಪ್ರಕಟಿಸ ಬೇಕೆಂದು ಸಾರ್ವಜನಿಕರು ಇಚ್ಛಿಸಿದ್ದರಿಂದ ಶಿವಾನುಭವ ಪತ್ರಿಕೆಯ ಪ್ರಕಟನೆ ಯನ್ನು ಸಾವಕಾಶವಾಗಿ ಮುಂದುವರಿಸಬೇಕಾಯಿತು. ಇದರಿಂದ ಶಿವಾನು ಭವ ಪ್ರೇಮಿಗಳ ಕುತೂಹಲವು ಕುಂಠಿತವಾದದ್ದಕ್ಕೋಸ್ಕರ ವಿಷಾಧಿಸುತ್ತೇವೆ ಪತ್ರಿಕೆಯ ಮುಂದಿನ ಸಂಚಿಕೆಗಳಲ್ಲಿ ನಾವು ಈ ನ್ಯೂನತೆಯನ್ನು ಸರಿಪಡಿಸು ವೆವು. ಇದಕ್ಕೋಸ್ಕರ ವಾಚಕರು ನಮ್ಮನ್ನು ಕ್ಷಮಿಸಬೇಕೆಂದು ನಮ್ಮ ವಿನಂತಿ ಇದೆ.

ವಿಜಾಪುರ ಮ್ಯಾನೇಜರ:-

೨೬-೩-೫೩ ಶಿವಾನುಭವ

ಶಿವಾನುಭವ ಗ್ರಂಥಮಾಲಾ ನಂ|| ೬೫.

# ಶಿವಶರಣರ
# ಅಹಿಂಸಾ ಧರ್ಮ.



ಸಂಪಾದಕರು,

ರಾ|| ಬ|| ಫ. ಗು. ಹಳಕಟ್ಟಿ,

ಬಿ. ಎ. ಎಲ್. ಎಲ್. ಬಿ.

ವಿಜಾಪುರ

೧೯೫೬.

ಇದನ್ನು ವಿಜಾಪುರದಲ್ಲಿ
ರಾ॥ ಬ॥ ಪ. ಗು. ಹಳಕಟ್ಟಿ ಇವರು ತಮ್ಮ
**ಹಿತಚಿಂತಕ ಪ್ರಿಂಟಿಂಗ ಪ್ರೆಸ್,** (ವಾರ್ಡ ನಂ॥ ೨. ವಿಜಾಪುರ)
ಇಲ್ಲಿ ಮುದ್ರಿಸಿದರು ಮತ್ತು ಅವರು ಅದನ್ನು ಅಲ್ಲಿಯೇ
ಪ್ರಕಟಿಸಿದರು.

# ಪ್ರಸ್ತಾವನೆ.

---

ಕನ್ನಡ ಭಾಷೆಯಲ್ಲಿ ಶಿವಶರಣರ ವಾಙ್ಮಯವು ಅತ್ಯಂತ ಮಹತ್ವದ್ದೆಂಬದು ಈಗ ಎಲ್ಲರಿಗೂ ತಿಳಿದ ಸಂಗತಿಯಾಗಿದೆ. ಇದರಲ್ಲಿ ಈ ವರೆಗೆ ಎಂಭತ್ತುನಾಲ್ಕು ಗ್ರಂಥಗಳು ಪ್ರಸಿದ್ಧವಾಗಿರುತ್ತವೆ. ಇವು ಬಹುಶಃ ಮೂಲ ಗ್ರಂಥಗಳೇ ಇರುತ್ತವೆ. ಅವುಗಳಲ್ಲಿ ಕೆಲವುಗಳನ್ನು ನಾವು ವಿಷಯಾನುಸಾರ ವ್ಯವಸ್ಥೆಗೊಳಿಸಿದ್ದೇವೆ. ಇವುಗಳಲ್ಲಿ ಬಹುತರ ಎಲ್ಲ ಗ್ರಂಥಗಳನ್ನು ನಾವು ಸಂಗ್ರಹ ಗ್ರಂಥಗಳೊಳಗಿಂದ ಆಯ್ದು ಅವುಗಳನ್ನು ಒತ್ತಟ್ಟಿಗೆ ಸೇರಿಸಿ ಪ್ರಕಟಿಸಿರುತ್ತೇವೆ. ಹೀಗೆ ಈ ಗ್ರಂಥಗಳು ವೀರಶೈವ ವಾಙ್ಮಯ ಸಂಶೋಧನದಿಂದ ಉಂಟಾದವು ಇರುತ್ತವೆ. ಅವುಗಳಲ್ಲಿ ೧೦-೧೫ ಗ್ರಂಥಗಳು ಮಾತ್ರ ಪುರಾತನ ಕಾಲದಲ್ಲಿ ಸಂಗ್ರಹವಾದವುಗಳು ಇರುತ್ತವೆ.

ಹೀಗೆ ಮೂಲ ಗ್ರಂಥಗಳನ್ನು ಸಂಶೋಧಿಸುವದೂ ಅವುಗಳನ್ನು ಬೇರೆಯಾಗಿ ಬರೆಯಿಸಿ ಒಂದು ವ್ಯವಸ್ಥೆಗೆ ತಂದು ಅಚ್ಚುಹಾಕುವದೂ ಈ ಕಾರ್ಯಗಳಿಗೆ ವೇಳೆಯೂ ಶ್ರಮವೂ ಹತ್ತುವದು ಸ್ಪಷ್ಟವದೆ. ನಾವು ಈ ವರೆಗೆ ಪ್ರಸಿದ್ಧ ಮಾಡಿದ ಗ್ರಂಥಗಳು ಬಹುತರವಾಗಿ ದೊಡ್ಡವೂ ಹೆಚ್ಚು ಬೆಲೆಯುಳ್ಳವೂ ಇದ್ದು ಅವುಗಳ ಭಾಷೆಯು ಪುರಾತನ ಕಾಲದ್ದು ಇದೆ. ಇಂಥ ಗ್ರಂಥಗಳನ್ನು ಬೆಲೆಕೊಟ್ಟು ಕೊಳ್ಳುವಂಥವರ ಸಂಖ್ಯೆಯು ನಮ್ಮ ನಾಡಿನಲ್ಲಿ ಸ್ವಭಾವಿಕವಾಗಿ ಕಡಿಮೆ ಇರುತ್ತದೆ. ಇದರಿಂದ ಈ ಗ್ರಂಥಗಳ ಪ್ರಕಟನಾ ಕಾರ್ಯವು ಬಹು ನಿಧಾನವಾಗಿ ಸಾಗುತ್ತದೆ.

ಇನ್ನು ಮೇಲೆ ನಾವು ಈ ಪದ್ಧತಿಯನ್ನು ಬಿಟ್ಟು ಬೇರೊಂದು ಪದ್ಧತಿಯನ್ನು ಸ್ವೀಕರಿಸಲು ಯೋಚಿಸಿದ್ದೇವೆ. ನಮ್ಮ ವೀರಶೈವ ವಾಙ್ಮಯದಲ್ಲಿ ಬಹು ಜನರು ವಚನಕಾರರಿದ್ದು ಅವರ ವಚನಗಳನ್ನು ನಾವು ಬೇರೆ ಬೇರೆಯಾಗಿ ಪ್ರಸಿದ್ಧಿಸುವೆವು. ಇಂಥ ಗ್ರಂಥಗಳಲ್ಲಿ ವಚನಕಾರರ ಉಕ್ತಿಗಳು, ಅವರ ಚರಿತ್ರೆ ಮತ್ತು ವಿಚಾರಗಳನ್ನು ವಿವರಿಸುವೆವು. ಇವು ಚಿಕ್ಕ ಗ್ರಂಥಗಳಾಗುವವು. ಆಯಾ ವಚನಕಾರರ ಅಭಿಪ್ರಾಯಗಳನ್ನು ತಿಳಿದುಕೊಳ್ಳಲು ಇವು ಸಹಾಯಕವಾಗುವವು.

ಈಗ ನಾವು ಶಿವಶರಣರ ಅಹಿಂಸಾ ಮಾರ್ಗವನ್ನು ಕುರಿತು ಇರುವ ಉಕ್ತಿಗಳನ್ನು ಒತ್ತಟ್ಟಿಗೆ ಸಂಗ್ರಹಿಸಿದ್ದೇವೆ. ಇದು ಉಪಯುಕ್ತ ಗ್ರಂಥವೆಂಬುದು ವಾಚಕರಿಗೆ ಗೊತ್ತಾಗದೆ ಇರಲಾರದು. ಇದೇ ರೀತಿಯಾಗಿ ನಾವು ಒಟ್ಟು ೧೬೫ ಗ್ರಂಥಗಳನ್ನು ಪ್ರಸಿದ್ಧಿಸಬೇಕೆಂದು ಯೋಚಿಸಿದ್ದೇವೆ. ಅವುಗಳ ಪಟ್ಟಿಯನ್ನು ನಾವು ಶಿವಾನುಭವ ಪತ್ರಿಕೆಯ ಹಿಂದಿನ ಸಂಚಿಕೆಯಲ್ಲಿ ಪ್ರಕಟಿಸಿದ್ದೇವೆ. ಅವು ಯಾರಿಗಾದರೂ ಬೇಕಾಗಿದ್ದಲ್ಲಿ ಅವರು ನಮಗೆ ತಿಳಿಸಬೇಕು. ಅಂದರೆ ನಾವು ಅವುಗಳ ಪ್ರತಿಗಳನ್ನು ಅವರಿಗೆ ಕಳಿಸಿಕೊಡುವೆವು.

ಈ ಹೊಸ ಕ್ರಮವನ್ನು ಕುರಿತು ನಾವು ನಮ್ಮ ಮಿತ್ರರಾದ ಶ್ರೀಯುತ ಕಲ್ಯಾಣಪ್ಪ ಬ್ಯಾಳಿ ಬಿ. ಎ. ಹೆಡ್‌ಮಾಸ್ತರ ಹಾಯಸ್ಕೂಲ ಹುನಗುಂದ ಇವರಿಗೆ ತಿಳಿಸಲಾಗಿ ಅವರು ಈ ಯೋಜನೆಯು ಉಪಯುಕ್ತವೆಂದು ನಮಗೆ ತಿಳಿಸಿದ್ದಲ್ಲದೆ ಇದನ್ನು ಅವರು ತಮ್ಮ ಗ್ರಾಮದಲ್ಲಿರುವ ಶ್ರೀಮಂತ ದೊಡ್ಡಪ್ಪ ಅಣ್ಣಾ ನಾಗರಾಳ ಈ ಮಹನೀಯರಿಗೆ ತಿಳಿಸಲಾಗಿ ಇವರು ಈ ಕಾರ್ಯದಲ್ಲಿ ನಮಗೆ ಸಹಾಯವಾಗಬೇಕೆಂದು ೧೦೧ ರೂ. ಗಳನ್ನು ನಮಗೆ ಕಳಿಸಿದರು ಅದಕ್ಕೋಸ್ಕರ ನಾವು ಅವರಿಗೆ ಬಹಳ ಕೃತಜ್ಞರಾಗಿದ್ದೇವೆ. ನಮ್ಮ ಕನ್ನಡ ನಾಡಿನಲ್ಲಿರುವ ಮಹನೀಯರು ಇವರ ಅನುಕರಣ ಮಾಡಿದಲ್ಲಿ ಶಿವಶರಣರ ಮಹತ್ವದ ವಾಙ್ಮಯವು ಬೇಗನೆ ಪ್ರಕಾಶಕ್ಕೆ ಬರುವದೆಂದು ನಾವು ಭರವಸೆ ತಾಳಿದ್ದೇವೆ.

ವಿಜಾಪುರ
೨೫-೩-೧೯೫೬

ಫ. ಗು. ಹಳಕಟ್ಟಿ.
ಬಿ ಎ ಎಲ್. ಎಲ್. ಬಿ.
ಸಂಪಾದಕ, ಶಿವಾನುಭವ

# ವಿಷಯಾನುಕ್ರಮಣಿಕೆ



# ಶಿವಶರಣರ
# ಅಹಿಂಸಾ ಧರ್ಮ.

ಭೂತದಯೆ, ಅಹಿಂಸೆ ಇವು ಯಾವ ದೇಶದಲ್ಲಿ ಹೆಚ್ಚಾಗಿ ರೂಢವಾಗಿರುತ್ತವೆಯೋ ಆ ದೇಶವು ನಾಗರಿಕತೆಯುಳ್ಳದ್ದೆಂದು ಹೇಳುವದುಂಟು. ಆದರೆ ಯಾವ ನಾಡಿನಲ್ಲಿ ಹಿಂಸಾಚಾರಗಳೂ ಕ್ರೂರ ಕೃತ್ಯಗಳೂ ಹೆಚ್ಚಾಗಿ ನಡೆಯುತ್ತವೆಯೋ ಆ ನಾಡು ನಾಗರಿಕತೆಯಲ್ಲಿ ಹಿಂದುಳಿದದ್ದೆಂಬುದರಲ್ಲಿ ಸಂದೇಹವಿರಲಾರದು. ಕಾಡ ಮನುಷ್ಯನು ಯಾವಾಗಲೂ ಹಿಂಸಾಚಾರದಲ್ಲಿ ಮಗ್ನನಾಗಿರುತ್ತಾನೆ. ಅವನು ಪ್ರಾಣಿಗಳ ವಧೆಯನ್ನು ಮಾಡುತ್ತಾನೆ. ಮತ್ತು ಅವನಿಗೆ ಮಾಂಸಾಹಾರವೇ ಮುಖ್ಯವಾಗಿರುತ್ತದೆ. ಆದರೆ ಸುಧಾರಿಸಿದ ರಾಷ್ಟ್ರಗಳಲ್ಲಿ ಮನುಷ್ಯನು ಪ್ರಾಣಿಗಳನ್ನು ಸಂಹರಿಸುವದನ್ನು ಬಿಟ್ಟುಕೊಟ್ಟು ಶಾಕಾಹಾರಿಯಾಗಿರುತ್ತಾನೆ. ಇಂಥವನ ಮನಸ್ಸು ಕೋಮಲವಾಗಿರುತ್ತದೆ. ಅವನು ಎಲ್ಲರಲ್ಲಿಯೂ ಮಮತೆಯಿಂದ ವರ್ತಿಸುತ್ತಾನೆ. ಹಿಂದುಸ್ತಾನದ ಸಾಮಾಜಿಕ ಇತಿಹಾಸದಲ್ಲಿ ಈ ಸಂಗತಿಗಳು ಯಾವಾಗಲೂ ಕಂಡು ಬರುತ್ತವೆ.

ಹಿಂದುಸ್ತಾನವನ್ನು ಆರ್ಯರು ಬಹು ಪುರಾತನ ಕಾಲದಲ್ಲಿಯೇ ವಸಾಹತು ಮಾಡಿದರು. ಅವರು ಆರಂಭದಲ್ಲಿ ಮಾಂಸಾಹಾರಿಗಳಾಗಿದ್ದರು. ಅವರು ಈ ಕಾಲದಲ್ಲಿ ಅಗ್ನಿ, ಇಂದ್ರ, ಮರುತ್ ಇವು ದೇವತೆಗಳೆಂದು ಭಾವಿಸಿ ಅವುಗಳ ಪೂಜೆ ಮಾಡುತ್ತಿದ್ದರು. ಈ ದೇವತೆಗಳು ಯಜ್ಞಯಾಗಾದಿಗಳಿಂದ ಪ್ರೀತರಾಗುವರೆಂದು ಅವರು ತಿಳಿದು, ಪ್ರಾಣಿಗಳನ್ನು ವಧಿಸಿ, ಅವುಗಳಿಗೆ ಬಲಿ ಕೊಡುವರು. ಪ್ರಾಣಿಗಳನ್ನು ಹೀಗೆ ವಧಿಸಿ, ಅವುಗಳ ಮಾಂಸವನ್ನು ತಾವೂ ಭುಂಜಿಸುವರು. ಗೋವುಗಳನ್ನು ಸಹ ಸಂಹರಿಸಿ, ಅವುಗಳ ಮಾಂಸವನ್ನು ತಿನ್ನುವರು. ಅರಸರಾದವರು ಅಶ್ವಮೇಧ ಯಾಗಗಳನ್ನು ಮಾಡಿ, ಕುದುರೆಗಳನ್ನು ಸಂಹರಿಸಿ, ಅವುಗಳ ಮಾಂಸವನ್ನು ತಿನ್ನುವರು. ಹಾಗೆಯೇ ಅವರು ಎಲ್ಲ ತರದ ಪಶುಪಕ್ಷಿಗಳನ್ನು ಸಹ ಕೊಂದು ತಿನ್ನಲು ಹೇಸುತ್ತಿದ್ದಿಲ್ಲ. ಬ್ರಾಹ್ಮಣ ಮೊದಲ್ಗೊಂಡು ಎಲ್ಲ ವರ್ಣದವರೂ ಹೀಗೆಯೇ ಮಾಂಸವನ್ನು ಭುಂಜಿಸುವವರಾಗಿದ್ದರು. ಆದರೆ ಕ್ರಿಸ್ತ ಶಕದ ಪೂರ್ವ ೬ನೇ ಶತಮಾನದಲ್ಲಿ

ಬೌದ್ಧ, ಜೈನರು ಭಾರತ ದೇಶದಲ್ಲಿ ಉಗಮಿಸಿ, ಮಾಂಸಾಹಾರವು ನಿಷಿದ್ಧ ವೆಂದು ಸಾರಿದರು. ಅಶೋಕ ಚಕ್ರವರ್ತಿಯು ಬೌದ್ಧ ಧರ್ಮವನ್ನು ಪ್ರಸಾರ ಮಾಡಿ, ಪ್ರಾಣಿಗಳ ವಧೆಯನ್ನು ಮಾಡಬಾರದೆಂಬ ತತ್ವವನ್ನು ಭಾರತದ ಲ್ಲೆಲ್ಲ ಪ್ರಸಾರ ಮಾಡಿದನು. ಅವನ ಅನೇಕ ಶಿಲಾಶಾಸನಗಳು ಭಾರತದ ಲ್ಲಿದ್ದು, ಅವುಗಳಲ್ಲಿ ಜನರು ಪ್ರಾಣಿವಧೆ ಮಾಡಬಾರದೆಂದು ಬರೆಯಿಸಿದ್ದಾನೆ. ಅವನಂತೆಯೇ ಶೈವರು ಮುಖ್ಯವಾಗಿ ಶಿವಶರಣರು ಅಹಿಂಸೆಯನ್ನು ನಾಡಿನಲ್ಲಿ ಬಹಳ ಪ್ರಸಾರ ಮಾಡಿದರು. ಅವರು ಪ್ರಾಣಿಗಳ ವಿಷಯವಾಗಿ ಅತ್ಯಂತ ದಯಾಭಾವವುಳ್ಳವರಾಗಿ ಆಚರಿಸಿದರು. ಹಿಂಸೆಯು ಮಹತ್ಪಾಪವೆಂದು ಅವರು ಸಾರಿದರು. ಈ ತರದ ಆಚರಣೆಯು ದೇಶದ ನಾಗರಿಕತೆಯ ಸ್ಥಿತಿಯನ್ನು ತೋರಿಸುತ್ತದೆ.

ಜೈನರು ಮೊದಲು ಮಿಥಿಲಾ, ಆ ಮೇಲೆ ಗುಜರಾಥ ಈ ದೇಶಗಳಲ್ಲಿ ನೆಲಿಸಿ, ಮುಂದೆ ಕ್ರಮೇಣ ಮೈಸೂರು ಮತ್ತು ದ್ರಾವಿಡ ದೇಶಗಳನ್ನು ವಸಾಹತು ಮಾಡಿದರು. ಈ ದೇಶಗಳಲ್ಲಿಯವರು ಜೈನರ ಅಹಿಂಸಾ ಮಾರ್ಗವನ್ನು ಅಂಗೀ ಕರಿಸಿ, ಮಾಂಸಾಹಾರವನ್ನು ವರ್ಜಿಸಿ, ಶಾಕಾಹಾರಿಗಳಾದರು. ಆದರೆ ಜೈನ ಮತ್ತು ಬೌದ್ಧಧರ್ಮಗಳ ಪ್ರಸಾರವಿಲ್ಲದ ಉತ್ತರ ಭಾರತದಲ್ಲಿ ಅಂದರೆ ರಜಪೂತಸ್ಥಾನ, ಪಂಜಾಬ, ಬಂಗಾಲಗಳಲ್ಲಿ ಈ ಸ್ಥಿತಿಯು ಇರದೆ, ಮಾಂಸಾಹಾ ರವು ಅಥವಾ ಮತ್ಸ್ಯಾಹಾರವು ಈಗಲೂ ಹೆಚ್ಚಾಗಿ ರೂಢವಾಗಿರುವದು ಕಂಡುಬರುತ್ತದೆ.

ಆದರೆ ಮುಂದೆ ಬರಬರುತ್ತ ಈ ತರದ ಹಿಂಸಾ ವೃತ್ತಿಯು ?ರಿ ಯಾದ ಮಾರ್ಗವಲ್ಲ, ಚರಾಚರ ವಸ್ತುಗಳಲ್ಲೆಲ್ಲ ಪರಮಾತ್ಮನಿರುತ್ತಾನೆಂಬ ತತ್ವವು ಪ್ರಸಾರವಾಗಹತ್ತಿತು. ಇದು ಅದ್ವೈತ ಮಾರ್ಗದ ಪರಿಣಾಮವೇ ಸರಿ. ಈ ತತ್ವವು ಪ್ರಸಾರವಾದ ಹಾಗೆ ಪ್ರಾಣಿಗಳ ವಧೆಯು ಯೋಗ್ಯವಲ್ಲ ವೆಂಬುದು ಜನರ ಮನಸ್ಸಿಗೆ ತೋರಹತ್ತಿತು. ಇಂಥ ಕಾಲದಲ್ಲಿ ಭಾರತ ದಲ್ಲಿ, ತತ್ವಜ್ಞರಲ್ಲಿ ಅತ್ಯಂತ ಶ್ರೇಷ್ಠ ಸ್ಥಾನವನ್ನು ಹೊಂದಿದ ಶಂಕರಾಚಾ ರ್ಯರೂ ಅದರಂತೆಯೇ ಶಿವಶರಣರೂ ಈ ತತ್ವವನ್ನೇ ಬೋಧಿಸಿದರು. ಇದ ರಿಂದ ಪ್ರಾಣಿಗಳಲ್ಲಿ ದಯಾಭಾವವನ್ನಿಟ್ಟು ನಡಿಯಬೇಕೆಂಬ ಮನೋವೃತ್ತಿಯು ಉಂಟಾಗಹತ್ತಿತು. ಕ್ರೂರ ದೇವತೆಗಳಿಗೆ ಬಲಿಕೊಡುವದು ಯೋಗ್ಯವಲ್ಲವೆಂದು ಜನರಿಗೆ ತೋರಹತ್ತಿತು. ಶರಣರ ಕಾಲದಲ್ಲಿ ಅಂದರೆ ೧೧ ನೇ ಶತಮಾನ ದಲ್ಲಿ ಕರ್ನಾಟಕದಲ್ಲಿ ಆಗಿಹೋದ ಶಿವಶರಣರು ಅಹಿಂಸಾಚಾರವನ್ನು ಬಹು

ಬಲವಾಗಿ ಬೋಧಿಸುವವರಾದರು. ದೇವರ ದಾಸಿಮಯ್ಯನು ತನ್ನ ಉಕ್ತಿಗಳಲ್ಲಿ ಪ್ರಾಣಿಗಳಲ್ಲಿ ದಯಾಭಾವವಿರಬೇಕೆಂಬ ತತ್ವವನ್ನು ಪ್ರತಿಪಾದಿಸಿದ್ದು ಕಂಡು ಬರುತ್ತದೆ. ಬಸವೇಶ್ವರನು ತನ್ನ ಒಂದು ವಚನದಲ್ಲಿ ಹೇಳಿರುವದೇನೆಂದರೆ:-

"ದಯವಿಲ್ಲದ ಧರ್ಮವದಾವುದಯ್ಯಾ ? ದಯವೇ ಬೇಕು ಸಕಲ ಪ್ರಾಣಿಗಳೆಲ್ಲರಲ್ಲಿ. ದಯವೇ ಧರ್ಮದ ಮೂಲವಯ್ಯ. ಕೂಡಲಸಂಗಮ ದೇವನಂತಲ್ಲದವರನೊಲ್ಲನಯ್ಯ "

ಇದರಲ್ಲಿ ಬಸವೇಶ್ವರನು ದಯಾಭಾವವು ಎಷ್ಟು ಮಹತ್ವದ್ದಿದೆಂಬು ದನ್ನು ಚನ್ನಾಗಿ ಹೇಳಿದ್ದಾನೆ. ಧರ್ಮವು ದಯಾಭಾವವನ್ನು ಬೋಧಿಸದಿದ್ದರೆ ಅದು ಧರ್ಮವಲ್ಲೆಂದು ಅವನು ಹೇಳುತ್ತಾನೆ.

ಆಗಮ ಧರ್ಮವು ಒಂದುಕಾಲದಲ್ಲಿ ಕರ್ನಾಟಕ ಮತ್ತು ದ್ರಾವಿಡ ದೇಶಗಳಲ್ಲಿ ಹೆಚ್ಚಾಗಿ ಬೆಳೆಯಿತು. ಅಗಮ ಧರ್ಮಾನುಯಾಯಿಗಳು ಯಜ್ಞಗಳನ್ನು ನಿಷೇಧಿಸುವವರಾದರು. ಅವರು ಶಿವಮತದ ಪ್ರಸಾರಕರಾದರು. ಶಿವನೇ ದೈವವೆಂದು ಅವರು ನಂಬುವರು. ಶಿವನ ಹೆಂಡತಿಯು ಕಾಳಿಕಾ ದೇವಿಯು. ಆದರೆ ಈ ಹೆಸರಿನ ದೇವತೆಗಳು ಕ್ರೂರ ಮತ್ತು ಉಗ್ರವಾದವುಗಳು. ಇವುಗಳಿಗೆ ಬಲಿಕೊಡುವ ಪದ್ಧತಿಯು ಭಾರತ ದೇಶದಲ್ಲಿ ಯಾವಾಗಲೂ ಇದೆ. ಅದರೆ ಶಿವಶರಣರು ಹೀಗೆ ಇವುಗಳಿಗೆ ಬಲಿಕೊಡುವದನ್ನು ನಿಷೇಧಿಸಿದರು. ಶಿವನು ಸರ್ವ ವ್ಯಾಪಿ ಎಂದು ಅವರು ಭಾವಿಸಿ ಅತನು ತಮ್ಮ ತನು ಮನ ಭಾವಗಳಲ್ಲಿ ಅನುಕ್ರಮವಾಗಿ ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂಗ ರೂಪಾಗಿದ್ದಾನೆಂದು ತಿಳಿದು ಧ್ಯಾನ ಮಾಡುತ್ತಾರೆ. ಆದ್ದರಿಂದ ಅವರು ಶಿವನನ್ನು ತಮ್ಮಲ್ಲಿಯೇ ಕಾಣಲು ಬರುತ್ತದೆಂಬ ತತ್ವವನ್ನು ಸಾರಿದರು.

## ದೇವರ ದಾಸಿಮಯ್ಯ

ಕ್ರಿ. ಶ. ೧೦೦೮ ರಿಂದ ೧೦೪೨ ರವರೆಗೆ ಪೊಟ್ಟಲಕೆರೆಯಲ್ಲಿ ರಾಜ್ಯವಾಳಿದ ಚಾಲುಕ್ಯ ಜಯಸಿಂಹನ ಕಾಲದಲ್ಲಿ ದೇವರದಾಸಿಮಯ್ಯನೆಂಬ ಶಿವಶರಣನು ಇದ್ದು ಅವನುತನ್ನ ವಚನದಲ್ಲಿ ಹೇಳಿದ್ದೇನೆಂದರೆ:—

''ನಾನೊಂದು ಸುರಿಗಿಯನೇನೆಂದು ಹಿಡಿವೆನು ? ಏನ ಕಿತ್ತೇನ ನಿರಿವೆನು ? ಜಗವೆಲ್ಲ ನೀನಾಗಿಪ್ಪೆ ಕಾಣಾ ರಾಮನಾಥಾ "

ಅಂದರೆ ನಾನು ಕತ್ತಿಯನ್ನು ಏಕೆ ಹಿಡಿಯಬೇಕು ? ನಾನು ಏನನ್ನು ಕಿತ್ತು ಏನನ್ನು ಇರಿಯಬೇಕು ? ಎಲೋ ಪರಮಾತ್ಮನೇ ಜಗವೆಲ್ಲ ನೀನೇ ಆಗಿದ್ದೀ.

ಶಿವಶರಣರು ಈ ತರದ ವಿಚಾರಗಳನ್ನು ಪ್ರಸಾರ ಮಾಡಿದ್ದಾರೆ. ಇದ ರಿಂದ ಅಹಿಂಸಾ ಧರ್ಮವು ಕರ್ನಾಟಕದಲ್ಲಿ ಬೆಳೆಯುತ್ತ ಬಂದಿತು.

ದೇವರದಾಸಿಮಯ್ಯನು ಮೊದಲು ಶ್ರೀಶೈಲದಲ್ಲಿ ಇದ್ದು ಅಲ್ಲಿ ತಪಸ್ಸು ಮಾಡುತ್ತಾ ಇದ್ದನು. ಅಲ್ಲಿ ಅವನು ಇದ್ದಾಗ ಪರಮಾತ್ಮನು ಅವನ ನಿಷ್ಠೆಗೆ ಮೆಚ್ಚಿ ಅವನಿಗೆ ಪ್ರತ್ಯಕ್ಷನಾಗಿ ನಿನ್ನ ಇಷ್ಟವೇನೆಂದು ಕೇಳಲಾಗಿ ದೇವರ ದಾಸಿಮಯ್ಯನು ತನಗೆ ಮುಕ್ತಿಯ ಮಾರ್ಗವನ್ನು ತೋರಿಸಬೇಕೆಂದು ಬೇಡಿ ಕೊಂಡನು. ಆಗ ಪರಮಾತ್ಮನು ಅವನಿಗೆ ಕಷ್ಟಕರವಾದ ಈ ತಪಸ್ಸನ್ನು ನೀನು ಆಚರಿಸಬೇಡ. ಇಷ್ಟ, ಪ್ರಾಣ, ಭಾವಲಿಂಗಗಳ ರೀತಿಯನ್ನು ಅರಿತು ವರ್ತಿಸು, ಎಂದು ಹೇಳಿ ಅವನಿಗೆ ಲಿಂಗದ ರೀತಿಯನ್ನು ತಿಳಿಸಿ ದೀಕ್ಷೆಯನ್ನು ಮಾಡಿದನು. ಮುಂದೆ ದೇವರದಾಸಿಮಯ್ಯನು ವಿರಕ್ತಾಶ್ರಮಿಯಾಗಿ ಲಿಂಗದ ನೆಲೆ ಕಲೆಗಳನ್ನು ಅರಿತುಕೊಂಡು ಶ್ರೀಶೈಲದಲ್ಲಿ ಶ್ರೀಮಲ್ಲಿಕಾರ್ಜುನನ ಸನ್ನಿಧಿಯಲ್ಲಿ ಕೆಲವು ಕಾಲವಿದ್ದು ಸ್ವಗ್ರಾಮವಾದ ಕಲಬುರ್ಗಿ ಜಿಲ್ಲೆಯಲ್ಲಿರುವ ಮುದನೂ ರಿಗೆ ಹೊರಡುವವನಾದನು. ಅವನು ಕಾಡಿನಲ್ಲಿ ಬೇಟೆಯಾಡುತ್ತ ಮೃಗಗಳನ್ನು ಕೊಂದು ಅವುಗಳ ಮಾಂಸವನ್ನು ತಿಂದು ಉಪಜೀವಿಸುತ್ತಿದ್ದ ಕಾಡುಜನರ ತಂಡಗಳನ್ನು ನೋಡಿದನು. ಅವರ ಕೀಳು ವೃತ್ತಿಯನ್ನು ನೋಡಿ ಅವ ನಿಗೆ ಕನಿಕರವುಂಟಾಗಿ ಇವರಿಗೆ ಅಹಿಂಸಾ ಧರ್ಮವನ್ನು ಬೋಧಿಸಬೇಕೆಂದು ಅವರನ್ನು ತನ್ನ ಬಳಿಯಲ್ಲಿ ಕುಳ್ಳಿರಿಸಿಕೊಂಡು ಹೇಳಿದುದೇನೆಂದರೆ—

“ ಬೇಟೆಗಾರರೇ, ನಿಮ್ಮ ಸಾಹಸವು ಬಲು ಹೆಚ್ಚಿನದು. ನೀವು ಶೂರರು. ಆದರೆ ನಿಮ್ಮದು ದುರಿತ ಕರ್ಮವು. ಇದರಿಂದ ನೀವು ನರಕದಲ್ಲಿ ಯಾವಾಗಲೂ ತೊಳಲಾಡುವಿರಿ. ಇಹದಲ್ಲಿಯೂ ಪರದಲ್ಲಿಯೂ ನೀವು ದುರ್ಗತಿ ಗಿಳಿಯುವಿರಿ. ನೀವು ಬಲವಂತವಾಗಿ ಪ್ರಾಣಿಗಳ ಹಿಂಸೆ ಮಾಡಬೇಡಿರಿ. ಇದು ಬಹು ಪಾಪ ಕರ್ಮವು. ಇದರಿಂದ ಜನ್ಮ ಜನ್ಮಗಳಲ್ಲಿಯೂ ನೀವು ನಿಮ್ಮ ಸಂಕಟಗಳಿಂದ ಮುಕ್ತರಾಗಲಾರಿರಿ. ನಿಮ್ಮಲ್ಲಿ ಮದನ ಹರನ ಚಿಂತೆಯು ಇರಬೇಕು. ತಲ್ಲಿಂಗ ಪೂಜಾ ಧ್ಯಾನದಲ್ಲಿ ನೀವು ಇರಬೇಕು. ಪರಶುರಾಮನ ಶಾಪ ದಿಂದ ನಿಮ್ಮ ಜೀವಿತದಲ್ಲಿ ಬಹು ಕಷ್ಟಪಡುತ್ತಾ ಇದ್ದೀರಿ. ನೀವು ಅವನ ಶಾಪದಿಂದ ಮುಕ್ತರಾಗಬೇಕಾದರೆ ನಿಮ್ಮ ಈ ಹಿಂಸಾ ಕರ್ಮವನ್ನು ಬಿಟ್ಟು ಕೊಟ್ಟು ಶಮೆ, ದಮೆ, ದಾನ-ಧರ್ಮಗಳಲ್ಲಿ ಇರಬೇಕು. ನೀವು ಸದ್ಗುರು ಪಾದವನ್ನು ನಂಬಬೇಕು. ನೀವು ಈ ದುಷ್ಟ ಹಿಂಸಾ ವೃತ್ತಿಯನ್ನು ಬಿಟ್ಟು

ಬಿಡಬೇಕು. ಹೀಗೆ ನಡೆದಲ್ಲಿ ನೀವು ಮೋಕ್ಷವನ್ನು ಹೊಂದುವಿರಿ." ಈ ಪ್ರಕಾರ ದಾಸಿಮಯ್ಯನು ಅವರಿಗೆ ಬೋಧಿಸಲಾಗಿ ಆ ಕಾಡು ಜನರ ಮನೋವೃತ್ತಿಯು ಬದಲಾಯಿತು. ಆಗ ಅವರು ತಮಗೆ ನೀವು ಯಾವ ಮಾರ್ಗವನ್ನು ತೋರಿಸುವಿರಿ ಎಂದು ಕೇಳಲಾಗಿ ಅವನು–"ನೀವು ಇನ್ನು ಮೇಲೆ ನಿಮ್ಮ ಹಿಂಸಾ ಕರ್ಮಗಳನ್ನು ಬಿಟ್ಟು, ತಿಲಗಾಣವನ್ನು ಆಡಿಸಿ, ತೈಲವನ್ನು ತೆಗೆದು ಶ್ರೀ ಮಲ್ಲಿಕಾರ್ಜುನ ಲಿಂಗಕ್ಕೆ ಎರೆಯುತ್ತ ಹೋಗಬೇಕು. ಇದನ್ನೇ ನೀವು ಸತ್ಕಾಯಕವನ್ನಾಗಿ ಇಟ್ಟುಕೊಳ್ಳಬೇಕು." ಎಂದು ಬೋಧಿಸಿದನು. ಆಗ ಈ ಕಾಡು ಜನರು ತಮ್ಮ ಹಿಂಸಾಚಾರಗಳನ್ನು ಬಿಟ್ಟು ಕೊಟ್ಟು ತಿಲಕಾಯಕವನ್ನು ಕೈಕೊಂಡು, ಪರ್ವತ ಸಿಂಹಾಸನಕ್ಕೆ ನಡೆದುಕೊಳ್ಳಹತ್ತಿದರು.

ಮುಂದೆ ದೇವರ ದಾಸಿಮಯ್ಯನು ಹೀಗೆ ಕಾಡು ಜನರಿಗೆ ಬೋಧಿಸಿ, ಮುಂದೆ ಗೌಡಗೆರೆ ಎಂಬ ಗ್ರಾಮಕ್ಕೆ ಬಂದನು. ಅಲ್ಲಿದ್ದವರು ಒಕ್ಕಲುತನವನ್ನು ಮಾಡುತ್ತಲಿದ್ದು, ಕಿಸುಕುಳವನ್ನು ತಿನ್ನುತ್ತ ದುಶ್ಚಟಗಳಿಂದ ತುಂಬಿಕೊಂಡವರಾಗಿ ಆಚರಿಸುತ್ತಿದ್ದರು. ಅವರ ಅಶುದ್ಧ ರೀತಿಗಳನ್ನು ನೋಡಿ, ದೇವರ ದಾಸಿಮಯ್ಯನು ಅವರಿಗೆ—"ನಿಮ್ಮ ಕೃಷಿಕಾಯಕವನ್ನೇ ಇಟ್ಟುಕೊಳ್ಳಿರಿ. ಆದರೆ ನೀವು ಹಿಂಸಾಯುಕ್ತ ಅಶುದ್ಧ ಆಚಾರಗಳನ್ನು ಬಿಟ್ಟುಕೊಡಬೇಕು. ಪ್ರಮಥ ಗಣಗಳಲ್ಲಿ ವಿಶ್ವಾಸವನ್ನಿಟ್ಟು, ಶ್ರೀಶೈಲ ಮಲ್ಲಿಕಾರ್ಜುನನಿಗೆ ನಡೆದುಕೊಳ್ಳಿರಿ" ಎಂದು ಬೋಧಿಸಿ, ಅವರಿಗೆ ದೀಕ್ಷಾ ಸಂಸ್ಕಾರವನ್ನು ಮಾಡಿ, ಮುಂದಕ್ಕೆ ತನ್ನ ಗ್ರಾಮದ ಕಡೆಗೆ ತೆರಳುವವನಾದನು. ಅಂದಿನಿಂದ ಅವರೆಲ್ಲರೂ ಶುದ್ಧ ಶಾಕಾಹಾರಿಗಳಾಗಿ, ಭಕ್ತಿಯುತರಾಗಿ ಜೀವಿಸಹತ್ತಿದರು.

## ಬಸವೇಶ್ವರ

ಶಿವಶರಣರು ಜೀವ ಹಿಂಸೆಯನ್ನು ನಿಷೇಧಿಸಿರುವದರಿಂದ ಯಜ್ಞಯಾಗಾದಿಗಳನ್ನು ಮಾಡಕೂಡದೆಂದು ಅವರು ಬಹು ದೃಢವಾಗಿ ತಮ್ಮ ವಚನಗಳಲ್ಲಿ ಹೇಳುತ್ತ ಬಂದಿದ್ದಾರೆ. ಬಸವೇಶ್ವರನ ಕಾಲದಲ್ಲಿ ಅಂದರೆ ಸುಮಾರು ೮೦೦ ವರ್ಷಗಳ ಹಿಂದೆ ಯಜ್ಞಗಳನ್ನು ಮಾಡುವ ಪದ್ಧತಿಯು ನಮ್ಮ ದೇಶದಲ್ಲಿ ಬಹಳ ಪ್ರಚಲಿತವಾಗಿತ್ತು. ಆಗಿನ ರಾಜರು ಯಜ್ಞಗಳನ್ನು ಮಾಡಲಿಕ್ಕೆ ಯಾವಾಗಲೂ ಉತ್ತೇಜನ ಕೊಡುತ್ತಿದ್ದರು. ಅವುಗಳಿಂದ ತಮಗೆ ಪುಣ್ಯ ಬರುತ್ತದೆಂದು ಅವರೂ ಅವರಂತೆಯೇ ಸಾಮಾನ್ಯ ಜನರೂ ಭಾವಿ

ಸಿದ್ದರು. ಆದರೆ ಶಿವಶರಣರು ಪ್ರಾಣಿವಧೆ ಮಾಡಬಾರದೆಂತಲೂ, ಯಜ್ಞ ಮಾಡಬಾರದೆಂತಲೂ ಬೋಧಿಸುವರು. ಬಸವೇಶ್ವರನು ಈ ವಿಷಯವಾಗಿ ತನ್ನ ವಚನಗಳಲ್ಲಿ ಇಂಥ ಹಿಂಸಾ ಕ್ರಿಯೆಗಳನ್ನು ಅತ್ಯಂತ ಕಟು ಮಾತಿನಿಂದ ಟೀಕಿಸಿದ್ದಾನೆ. ಆವನು ಹೇಳುವದೇನಂದರೆ:—

(೧) ಕಿಚ್ಚು ದೈವವೆಂದು ಹವಿಯನಿಕ್ಕುವ ಹಾರುವರ ಮನೆಯಲು ಕಿಚ್ಚೆದ್ದು ಸುಡುವಾಗ ಬಚ್ಚಲ ನೀರ ಬೀದಿಯ ದೂಳವ ಹೊಯ್ದು ಬೊಬ್ಬಿಟ್ಟೆಲ್ಲರ ಕರೆವರಯ್ಯಾ. ಕೂಡಲಸಂಗಮದೇವನ ವಂದನೆಯ ಮರೆದು ನಿಂದಿಸುತಿರ್ದರಯ್ಯಾ.

(೨) ಇಟ್ಟಿಯ ಹಣ್ಣ ನರಿ ತಿಂದು, ಸೃಷ್ಟಿ ತಿರುಗಿತೆಂಬಂತೆ ಮಟ್ಟಿಯನಿಟ್ಟ ದ್ವಿಜರ ಮಾತದೇಕೆ ? ಹಗಲು ಗಾಣದ ಗೂಗೆ ಇರುಳಾಯಿತೆಂದರೆ ಜಗಕ್ಕೆ ಇರುಳಪ್ಪುದೇ ಮರುಳೇ ! ಹೋಮದ ನೆವದಿಂದ ಹೋತನ ಕೊಂದು ತಿಂಬ ಅನಾಮಿಕರೊಡನಾಡಿ ಗೆಲವುದೇನು ಕೂಡಲಸಂಗಮದೇವ ?

(೩) ನಿಮ್ಮ ವಚನವೆಮ್ಮ ಪುಣ್ಯವೆಂಬುದು ಹುಸಿಯಾಯಿತ್ತು ನೋಡಾ. ಶಾಸ್ತ್ರದ ವಚನ ಹೋತಿಂಗೆ ಮಾರಿ. ಎಂತು ನಂಬುವೆನಯ್ಯ ? ನಾನು ಕೊಲ್ಲೆನು, ನೇಣು ಕೊಂದಿತ್ತೆಂಬ ಸೂನೆಗಾರರನೇನೆಂಬೆನಯ್ಯಾ ಕೂಡಲಸಂಗಮದೇವಾ?

(೪) ಮಾತಿನ ಮಾತಿಂಗೆ ನಿನ್ನ ಕೊಂದಿಹರೆಂದು ಎಲೆ ಹೋತೇ ಅಳು ಕಂಡಾ. ವೇದವನೋದಿದವರ ಮುಂದೆ ಅಳು ಕಂಡಾ. ಶಾಸ್ತ್ರವ ಕೇಳಿದವರ ಮುಂದೆ ಅಳು ಕಂಡಾ. ನೀನತ್ತುದಕ್ಕೆ ತಕ್ಕುದ ಮಾಡುವ ಕೂಡಲಸಂಗಮದೇವಾ.

(೫) ಮೊರನ ಗೊಟ್ಟಿಗೆ ಬಪ್ಪ ಕಿರುಕುಳ ದೈವಕ್ಕೆ ಕುರಿಯ ನಿಕ್ಕಿಹೆನೆಂದು ನಲಿನಲಿದಾಡುವರು. ಕುರಿ ಸತ್ತು ಕಾಯುವುದೇ ಹರ ಮುಳಿದವರ ? ಕುರಿ ಬೇಡ, ಮರಿ ಬೇಡ, ಬರಿಯ ಪತ್ರೆಯ ತಂದು ಮರೆಯದೆ ಪೂಜಿಸು ನಮ್ಮ ಕೂಡಲಸಂಗಮ ದೇವನ.

(೬) ಏನಯ್ಯಾ ವಿಪ್ರರು ನುಡಿದಂತೆ ನಡೆಯರು. ಇದೆಂತಯ್ಯಾ ತಮಗೊಂದು ಬಟ್ಟೆ, ಶಾಸ್ತ್ರಕೊಂದು ಬಟ್ಟೆ ಕೂಡಲಸಂಗಮದೇವಯ್ಯಾ?

ಹೊಲೆಯರ ಬಸಿರಲ್ಲಿ ವಿಪ್ರರು ಹುಟ್ಟಿ, ಗೋಮಾಂಸವ ತಿಂಬರೆಂಬುದಕ್ಕೆ ಇದೇ ದೃಷ್ಟ.

ಈಪ್ರಕಾರ ಬಸವೇಶ್ವರನು ತನ್ನ ವಚನಗಳಲ್ಲಿ ಯಜ್ಞಯಾಗಾದಿಗಳನ್ನು ನಿಷೇಧಿಸುತ್ತ ಅಲ್ಲಿ ನಡೆಯುವ ಹಿಂಸಾಚಾರಗಳನ್ನು ಕಟುವಾದ ಶಬ್ದಗಳಿಂದ ಟೀಕಿಸಿದ್ದಾನೆ.

ಬಸವೇಶ್ವರನು ತನ್ನ ಇನ್ನೊಂದು ವಚನದಲ್ಲಿ ಕೆಳಗಿನಂತೆ ಹೇಳಿದ್ದಾನೆಃ-

(೧) ಕೊಲ್ಲೆನಯ್ಯಾ ಪ್ರಾಣಿಗಳ. ಮೆಲ್ಲೆನಯ್ಯಾ ಬಾಯಿಚ್ಚೆಗೆ, ಒಲ್ಲೆನಯ್ಯಾ. ಪರಸತಿಯರ ಸಂಗವ ಒಲ್ಲೆನಯ್ಯಾ, ಮುಂದೆ ತೊಡಕುಂಟೆಂಬುದ. ಬಳ್ಳದ ಬಾಯಂತೆ ಒಂದೆ ಮನವ ಮಾಡಿ ನಿಲ್ಲೆಂದು ನಿಲ್ಲಿಸಯ್ಯಾ ಕೂಡಲಸಂಗಮದೇವಾ.

(೨) ಅರಿದರಿದು ಸಮಗಾಣಿಸಬಾರದು ತ್ರಾಸಿನ ಕಟ್ಟಳೆಯಂತೆ. ಇನಿತು ವೆಗ್ಗಳವಾದರೆ ಈಶ್ವರ ನೋಡಿ ಇಕ್ಕದೆ ಮಾಣ್ಬನೇ ? ಪಾತ್ರಾಪಾತ್ರವೆಂದು ಕಂಡಡೆ ಶಿವನೆಂತು ಮೆಚ್ಚುವನು ? ಜೀವ ಜೀವಾತ್ಮನಸಂ ಎಂದು ಕಂಡರೆ ಸಮವೇಧಿಸದಿಪ್ಪನೆ ಶಿವನು ? ತನ್ನ ಮನದಲ್ಲಿ ಯತ್ರ ಜೀವಸ್ತತ್ರ ಶಿವನೆಂದು ಸರ್ವ ಜೀವ ದಯಾ ಪಾರಿಯಾದಡೆ, ಕೂಡಲಸಂಗಮದೇವ ಕೈಲಾಸದಿಂದ ಬಂದು ಎತ್ತಿಕೊಳ್ಳನೆ ಅವರನು?

ಈ ಮೇರೆಗೆ ಬಸವೇಶ್ವರನು ಅನೇಕ ವಿಧವಾಗಿ ಜೀವ ಹಿಂಸೆಯನ್ನು ಮಾಡಬಾರದೆಂದು ನುಡಿದಿದ್ದಾನೆ.

## ಮರುಳಸಿದ್ಧ

ಜಗದ್ಗುರುವಾದ ಮರುಳಸಿದ್ಧನು ಶಿವಶರಣರಲ್ಲಿ ಉಚ್ಚ ಸ್ಥಾನವನ್ನು ಹೊಂದಿದ್ದಾನೆ. ಅವನ ವೃತ್ತಾಂತವನ್ನು ವಿವರಿಸುವ ಪುರಾಣವು ಒಂದಿರುತ್ತದೆ. ಅವನು ಅಸ್ಪೃಶ್ಯರಲ್ಲಿ ಜನಿಸಿದ್ದರೂ ಮುಂದೆ ರೇವಣಸಿದ್ಧೇಶ್ವರನಿಂದ ವೀರಶೈವ ದೀಕ್ಷೆಯನ್ನು ಹೊಂದಿ, ಜೀವ ಹಿಂಸೆಯನ್ನು ಮಾಡಬಾರದೆಂದು ಅದನ್ನು ನಿಷೇಧಿಸುವವನಾದನು. ಅವನು ಸಿದ್ಧ ಪುರುಷನಾಗಿ ದೇಶದಲ್ಲಿ ಸಂಚಾರ ಮಾಡುತ್ತ ಅನೇಕ ಸಿದ್ಧಿಗಳನ್ನು ಸಾಧಿಸಿ, ಪ್ರಸಿದ್ಧನಾಗಿರುವನು. ಅವನು ಮಧ್ಯ ಕರ್ನಾಟಕ ಭಾಗದಲ್ಲಿ ಶಿವಶರಣರ ತತ್ವಗಳನ್ನು ಪ್ರಚಾರ ಮಾಡಿದ್ದಾನೆ. ಈ ಭಾಗದಲ್ಲಿ ಕುರುಡುಗೆ ಎಂಬ ಒಂದು ಗ್ರಾಮವಿದ್ದು, ಅದು ದಾವಣಗೆರೆ ತಾಲೂಕಿನಲ್ಲಿದೆ. ಈ ಊರಿನ ಬ್ರಾಹ್ಮಣರು ಯಜ್ಞ ಮಾಡುತ್ತಿರುವದನ್ನು ಮರುಳಸಿದ್ಧನು ನೋಡಿ ಇಂಥ ಹಿಂಸಾ ಕಾರ್ಯವನ್ನು

ನೀವು ಮಾಡಬೇಡಿರೆಂದು ವಿಡಂಬಿಸಿ ಅವರಿಗೆ ನುಡಿಯುಹತ್ತಲು ಬ್ರಾಹ್ಮಣರು ಕೋಪಗೊಂಡು ಅವನ ಕೈಕಾಲು ಕಟ್ಟಿ ಅಣಬೆ ಗ್ರಾಮದ ಹತ್ತಿರಿದ್ದ ಒಂದು ಕೆರೆಯಲ್ಲಿ ಹಾಕಿದರು. ಆದರೆ ಮರುಳಸಿದ್ಧನು ಮತ್ತೆ ಬದುಕಿ ಹೊರಗೆ ಬರಲು ಬ್ರಾಹ್ಮಣರು ರಾಜನಲ್ಲಿ ದೂರು ಹೇಳಲಾಗಿ ರಾಜನು ಮರುಳಸಿದ್ಧನ ಮೇಲೆ ಆನೆಯೊಂದನ್ನು ಹಾಯಿಸಲು ಮರುಳಸಿದ್ಧನು ತನ್ನ ಸಾಮರ್ಥ್ಯದ ಮೂಲಕ ಅದರಲ್ಲಿ ಜಯಶೀಲನಾಗಿ ಜೀವದಿಂದುಳಿದನು. ಹೀಗೆ ಅವನ ಬಗ್ಗೆ ಐತಿಹ್ಯವಿರುತ್ತದೆ. ಮರುಳಸಿದ್ಧನು ಪಂಚಾಚಾರ್ಯರಲ್ಲಿ ಒಬ್ಬನಾಗಿ ಪ್ರಸಿದ್ಧನಾಗಿದ್ದಾನೆ.

## ಮಹಾದೇವಿಯಕ್ಕ

ಶಿವಶರಣ ಶರಣೆಯರಲ್ಲಿ ಅತ್ಯಂತ ಪ್ರಸಿದ್ಧಿಯನ್ನು ಹೊಂದಿದ ಮಹಾದೇವಿಯಕ್ಕನಾದರೂ ಜೀವ ಹಿಂಸೆ ಮಾಡಬಾರದೆಂದು ತನ್ನ ವಚನ ದಲ್ಲಿ ಹೇಳಿದ್ದಾಳೆ. ಅವಳು ಹೇಳಿರುವದೇನೆಂದರೆ:-

> ಜಾಲಗಾರನೊಬ್ಬ ಜಲವ ಹೊಕ್ಕು ಶೋಧಿಸಿ ಹಲವು ಪ್ರಾಣಿಗಳ ಕೊಂದು ನಲಿನಲಿದಾಡುವ! ತನ್ನ ಮನೆಯಲೊಂದು ಶಿಶು ಸತ್ತರೆ ಅದಕ್ಕೆ ಮರುಗುವಂತೆ ಅವಕೇಕೆ ಮರುಗನು? ಅದೆಂತೆಂದೊಡೆ, "ಸ್ವಾತ್ಮನಾಮಿವೇತರಶ್ಚೈವ ದೃಷ್ಟ್ವಾ ನಿತ್ಯಾದಿ ಭಿನ್ನತೆ ಸರ್ವಂ ಚಿಜ್ಜ್ಯೋತಿ ದೇವೇತಿ ಯಃ ಪಶ್ಯತಿ ಸಪಶ್ಯತಿ" ಎಂದುದಾಗಿ ಜಾಲಗಾರನ ದುಃಖ ಜಗಕ್ಕೆಲ್ಲ ನಗೆಗೆಡೆ. ಇದು ಕಾರಣ ಚನ್ನಮಲ್ಲಿಕಾರ್ಜುನಯ್ಯನ ಭಕ್ತನಾಗಿರ್ದು ಜೀವ ಹಿಂಸೆಯ ಮಾಡುವ ಮಾದಿಗರನೇನೆಂಬೆನಯ್ಯಾ?

ಇದರಲ್ಲಿ ಮನುಷ್ಯನು ತನ್ನ ಮಕ್ಕಳನ್ನು ಹೇಗೆ ಪ್ರೀತಿಸುತ್ತಾನೋ ಹಾಗೆಯೇ ಪ್ರಾಣಿಗಳನ್ನು ಸಹ ಪ್ರೀತಿಸಬೇಕೆಂದು ಮಹಾದೇವಿಯಕ್ಕನು ಹೇಳಿದ್ದಾಳೆ. ದಯೆಯುಳ್ಳವನಾಗಿರುವದು ಭಕ್ತನಾಚರಣೆ ಎಂದು ಅವಳ ಅಭಿಪ್ರಾಯವು. ಹೀಗೆ ಆಚರಿಸದೇ ಇದ್ದವರು ಮಾದಿಗರೇ ಸರಿ ಎಂದು ಅವಳು ಇಲ್ಲಿ ಅನ್ನುತ್ತಾಳೆ.

## ಸಕಲೇಶ ಮಾದರಸ

ಸಕಲೇಶ ಮಾದರಸನೆಂಬ ವಚನಕಾರನು ಹೇಳಿರುವದೇನೆಂದರೆ:— ಜೀವಿಗಳು ಪರಮಾತ್ಮನಿಗೆ ನಿಕಟ ಸಂಬಂಧವುಳ್ಳವಿರುತ್ತವೆ. ಹೇಗೆ ಬೆಟ್ಟದ ಮೇಲಿರುವ ವೃಕ್ಷಗಳು ಬೆಟ್ಟವನ್ನವಲಂಬಿಸಿ ಬೆಳೆಯುತ್ತವೆಯೋ ಹಾಗೆಯೇ ಪ್ರಾಣಿಗಳೆಲ್ಲ ಪರಮಾತ್ಮನನ್ನು ಅವಲಂಬಿಸಿ ಪೋಷಣೆ ಹೊಂದು

ತ್ತವೆ. ಆದ್ದರಿಂದ ಪ್ರಾಣಿಗಳನ್ನು ಹಿಂಸಿಸುವದು ಪರಮಾತ್ಮನನ್ನು ಹಿಂಸಿಸಿ ದಂತೆಯೇ ಸರಿ, ಅದು ಪಾಪ ಕರ್ಮವು, ಎಂದು ವಚನಕಾರರ ಅಭಿಪ್ರಾಯ ವಿದೆ. ಪ್ರಾಣಿಗಳು ಮನುಷ್ಯನನ್ನು ನೋಡಿದ ಕೂಡಲೆ ಅವನನ್ನು ಪ್ರೀತಿಸದೆ ಅವನಿಗೆ ಅಂಜಿ ಅವನನ್ನು ಬಿಟ್ಟು ಅವನಿಂದ ದೂರ ಓಡಿ ಹೋಗುತ್ತವೆ. ಯಾಕಂದರೆ ಮನುಷ್ಯನು ಕೆಡುಕನು, ಆದ್ದರಿಂದ ಅಂಥವನ ಸಂಗತಿಯು ತಮಗೆ ಬೇಡವೆಂದು ಅವು ಓಡಿ ಹೋಗುತ್ತವೆ. ಇಂಥ ನಿರುಪದ್ರವಿ ಪ್ರಾಣಿ ಗಳನ್ನು ಹಿಡಿದು ಕೊಂದರೆ ಈಶ್ವರನು ಹೀಗೆ ಕೊಲ್ಲುವವರನ್ನು ನರಕದಲ್ಲಿ ಇಕ್ಕದೆ ಬಿಡುವನೇ? ಎಲ್ಲ ಪ್ರಾಣಿಗಳನ್ನು ಸಂರಕ್ಷಿಸುವಾತ ನಮ್ಮ ಪರಮಾತ್ಮನಿದ್ದಾನೆ. ಈ ಪ್ರಕಾರ ಸಕಲೇಶ ಮಾದರಸನೆಂಬ ಒಬ್ಬ ಪ್ರಸಿದ್ಧ ಶಿವಶರಣನು ಹೇಳು ತ್ತಾನೆ. ಆ ವಚನವು ಯಾವುದೆಂದರೆಃ—

ಬೆಟ್ಟದ ಮೇಲಣ ಗಿಡಗಳು ಬೆಟ್ಟವ ಮುಟ್ಟದಂತಿಪ್ಪವೇ? ವಿವ ರಿಸಿ ನೋಡಿದಡೆ ಸೃಷ್ಟಿಯೊಳಗಣ ಪ್ರಾಣಿಗಳು ಪರಮನ ಮುಟ್ಟದಿಪ್ಪವೇ? ಕಷ್ಟರು ಬೇಡವೆಂದು ಬಿಟ್ಟೋಡುತಿಪ್ಪ ಪ್ರಾಣಿಗಳನಟ್ಟಿ ಹಿಡಿದುಕೊಂದರೆ ಪ್ರತಿಷ್ಠಿಸಿದೀಶ್ವರನಿಕ್ಕದಿರ್ಪನೇ ನರಕದಲ್ಲಿ ? ಸಕಲ ಪ್ರಾಣಿಗಳ ಮೇಲಾಳ್ಕೆಕೆ ನಮ್ಮ ಸಕಳೇಶ್ವರನಲ್ಲದೆ ಮತ್ತೊಬ್ಬರುಂಟೆ ?

ಈ ಸಕಲೇಶ ಮಾದರಸನು ಮೊದಲು ಒಂದು ರಾಜ್ಯದ ಅರಸನಾ ಗಿದ್ದು ಮುಂದೆ ಅವನು ತನ್ನ ಅರಸುತನವನ್ನು ಬಿಟ್ಟುಕೊಟ್ಟು ಶ್ರೀಶೈಲ ಪರ್ವತಕ್ಕೆ ಬಂದು ಅಲ್ಲಿ ಕೆಲವು ಕಾಲ ತಪಸ್ಸನ್ನಾಚರಿಸಿದನು. ಮುಂದೆ ಅವನು ಬಸವೇಶ್ವರನ ಸನ್ನಿಧಿಯಲ್ಲಿರಬೇಕೆಂದು ಬಯಸಿ ಕಲ್ಯಾಣಕ್ಕೆ ಬಂದು ಅವನಲ್ಲಿ ಒಬ್ಬ ಪ್ರಸಿದ್ಧ ವಚನಕಾರನಾದನು.

## ಕಿನ್ನರೀಬ್ರಹ್ಮಯ್ಯ.

ಕಿನ್ನರೀ ಬ್ರಹ್ಮಯ್ಯನೆಂಬ ಇನ್ನೊಬ್ಬ ಶಿವಶರಣನು ಮೂಡೂರು ಎಂಬ ಗ್ರಾಮದಲ್ಲಿ ಅಕ್ಕಸಾಲಿಗನ ಕೆಲಸ ಮಾಡುತ್ತಿದ್ದನು. ಅವನು ದಿನಾಲು ತನ್ನ ಗ್ರಾಮದಲ್ಲಿದ್ದ ಶಿವಾಲಯಕ್ಕೆ ಹೋಗಿ ಬಹು ಭಕ್ತಿಯಿಂದ ಕಿನ್ನರಿಯನ್ನು ನುಡಿಸುತ್ತ ಪರಮಾತ್ಮನನ್ನು ಭಜಿಸುವನು. ಇದಕ್ಕೋಸ್ಕರ ಪರಮಾತ್ಮನು ಅವನಿಗೆ ೧೧ ಹಣ ದ್ರವ್ಯವನ್ನು ದಿನಾಲು ಕಾಣಿಕೆಯಾಗಿ ಕೊಡುತ್ತಿದ್ದನು. ಮುಂದೆ ಅವನು ಬಸವೇಶ್ವರನ ಸಮೀಪದಲ್ಲಿರಬೇಕೆಂದು ಬಯಸಿ ಕಲ್ಯಾ ಣಕ್ಕೆ ಬಂದು ತ್ರಿಪುರಾಂತಕೇಶ್ವರನ ದೇವಾಲಯದಲ್ಲಿ ಕಿನ್ನರಿಯನ್ನು ಬಾರಿ

ಸುತ್ತ ಪರಮಾತ್ಮನನ್ನು ಭಜಿಸುತ್ತ ದಿನಾಲು ಅವನಿಂದ ೧೧ ಹಣ ದ್ರವ್ಯ ವನ್ನು ಪಡೆಯುತ್ತಿದ್ದನು. ಒಂದು ದಿನ ಅವನು ಅಲ್ಲಿ ಇರುವಾಗ ಒಂದು ಕುರಿಯು ತನ್ನನ್ನು ಒಯ್ಯುತ್ತಿದ್ದವನ ಕೈಯಿಂದ ಕೊಸರಿಕೊಂಡು ಓಡಿ ಬಂದು ದೇವಾಲಯವನ್ನು ಪ್ರವೇಶಿಸಿತು. ಅಲ್ಲಿದ್ದ ಕಿನ್ನರೀಬ್ರಹ್ಮಯ್ಯನು ಈ ಕುರಿಯನ್ನು ನೋಡಿ ಅದು ತನ್ನ ಮೊರೆ ಹೊಕ್ಕಿತೆಂದು ಭಾವಿಸಿ ಅದಕ್ಕೆ ಲಿಂಗ ಮುದ್ರೆಯನ್ನು ಒತ್ತಿ ಅದನ್ನು ದೇವಾಲಯದಲ್ಲಿ ಕಟ್ಟಿ ಅರೈಕೆ ಮಾಡ ಹತ್ತಿದನು. ಮುಂದೆ ಒಬ್ಬ ವಿಟನು ಆ ಕುರಿಯನ್ನು ನೋಡಿ ಈ ಕುರಿಯು ನನ್ನದು. ನನ್ನ ಸ್ತ್ರೀಯಳಿಗೆ ಬೇಕಾಗಿದೆ. ಅದನ್ನು ತೆಗೆದುಕೊಂಡು ಹೋಗು ವೆನೆಂದು ಹೇಳಲು ಕಿನ್ನರಯ್ಯನು ಇದರ ಬೆಲೆಯನ್ನು ಕೊಡುವೆನು. ಅದನ್ನು ಬಿಟ್ಟು ಹೋಗೆಂದು ಎಷ್ಟು ಹೇಳಿದರೂ ಅವನು ಕೇಳಲಿಲ್ಲ. ಕಡೆಗೆ ಒಂದು ಸಾವಿರ ಹೊನ್ನು ಕೊಡುವೆನೆಂದು ಕಿನ್ನರಯ್ಯನು ಹೇಳಿದರೂ ಆ ವಿಟನು ಕುರಿ ಯನ್ನು ಜಗ್ಗಿಕೊಂಡು ಹೋಗುವದನ್ನು ಬಿಡಲಿಲ್ಲ. ಆಗ ಕಿನ್ನರಯ್ಯನು ಈ ಕುರಿಯು ಪರಮಾತ್ಮನ ಮೊರೆಹೊಕ್ಕಿದೆ. ಇದಕ್ಕೆ ಲಿಂಗ ಮುದ್ರೆ ಇದೆ. ಇದು ದೇವರ ಪಶು ಎಂದು ಹೇಳಲು ಆ ವಿಟನು ಅದನ್ನು ಬಿಡದೆ ಎಳೆ ದೊಯ್ಯ ಹತ್ತಲು ಕಿನ್ನರಯ್ಯನು ಕುಪಿತನಾಗಿ ತನ್ನ ಕತ್ತಿಯಿಂದ ಆ ವಿಟನ ತಲೆಯನ್ನು ಹೊಡೆದು ಅವನನ್ನು ಕೊಂದುಹಾಕಿದನು. ಆಗ ಭಟರು ಈ ವಾರ್ತೆಯನ್ನು ಬಿಜ್ಜಳನಿಗೆ ಹೇಳಲಾಗಿ ಬಿಜ್ಜಳನು ಬಸವೇಶ್ವರನೊಂದಿಗೆ ಅಲ್ಲಿಗೆ ಬಂದು ಕಿನ್ನರಯ್ಯನು ಅನ್ಯಾಯ ಮಾಡಿದ್ದಾನೆ, ಎಂದು ಅನ್ನಲು ಬಸವೇಶ್ವರನು ಇದು ಯಾರ ತಪ್ಪೆಂಬುದನ್ನು ಲಿಂಗಕ್ಕೆಯೇ ಕೇಳಬೇಕೆಂದು ಹೇಳಲಾಗಿ ಬಿಜ್ಜಳನು ಹಾಗೇಯೇ ಕೇಳಲು, ಇದು ದೇವರ ಕುರಿಯು. ಇದು ವಿಟನ ತಪ್ಪು, ಕಿನ್ನರಯ್ಯನದಲ್ಲ ಎಂಬ ಶಬ್ದಗಳು ಲಿಂಗದೊಳಗಿಂದ ಹೊರಕ್ಕೆ ಬಂದವು. ಆದರೆ ಕಿನ್ನರಯ್ಯನು ಮಹಾತ್ಮನು. ಅವನು ತಾನು ಸಿರವನರಿದ ವಿಟನಿಗೆ ಪ್ರಾಣದಾನ ಮಾಡಬೇಕೆಂದು ಲಿಂಗಕ್ಕೆ ಬೇಡಿ ಕೊಳ್ಳಲಾಗಿ ವಿಟನು ಚೇತರಿಸಿಕೊಂಡು ಎದ್ದನು.

ಈ ಕಿನ್ನರೀ ಬ್ರಹ್ಮಯ್ಯನು ಪ್ರಸಿದ್ಧ ಶಿವಶರಣನು. ಅವನು ಮಧು ವರಸ ಹರಳಯ್ಯನ ವಿಷಯವಾಗಿ ರಾಜಧಾನಿಯಲ್ಲಿ ಕೋಲಾಹಲಗಳೇಳಲು ಶರಣರು ಉಳವಿಯ ಪರ್ವತ ಪ್ರದೇಶಕ್ಕೆ ಹೊರಟಾಗ, ಕಿನ್ನರಯ್ಯನು ಅವರ ಸೇನಾಧಿಪತ್ಯವನ್ನು ವಹಿಸಿ ಶಿವಶರಣರನ್ನು ಉಳವಿಯ ಮಹಾ ಮನೆಯವರೆಗೆ

ಸಾಗಿಸುತ್ತ ಅವರನ್ನು ಒಯ್ದನು. ಈ ಸ್ಥಳದಲ್ಲಿ ಮಹಾ ಯುದ್ಧವಾಯಿತು. ಅಲ್ಲಿಯೇ ಅವನು ತೀರಿಕೊಂಡನು. ಮಹಾ ಮನೆಯ ಪರ್ವತ ಪ್ರದೇಶ ದಲ್ಲಿಯೇ ಕಿನ್ನರಯ್ಯನ ಸಮಾಧಿಯು ಇದೆ. ಅದನ್ನು ಈಗಲೂ ಅಲ್ಲಿ ಕಾಣ ಬಹುದು.

## ಶಂಕರದಾಸಿಮಯ್ಯ.

ಶಿವಶರಣರು ಎಲ್ಲರಲ್ಲಿ ದಯಾಭಾವವನ್ನು ಬೋಧಿಸಿದ್ದಲ್ಲದೆ ಯಾವ ದೇವತೆಗಳನ್ನು ಆರಾಧಿಸಿದಲ್ಲಿ ಕ್ರೂರ ಕರ್ಮಗಳಾಗಿ ಜನರು ಹಿಂಸೆಯಿಂದ ಆಚರಿಸುತ್ತಾರೋ ಅಂಥ ದೇವತೆಗಳನ್ನು ಸಹ ಅರಾಧಿಸ ಕೂಡದೆಂದು ಬೋಧಿಸಿದ್ದಾರೆ. ಯಾಕಂದರೆ ಇದರಿಂದ ಅವುಗಳ ಭಕ್ತರು ಹಿಂಸಾಚಾರಿ ಗಳಾಗುತ್ತಾರೆ. ಶಂಕರ ದಾಸಿಮಯ್ಯನು ಹುನುಗುಂದ ತಾಲೂಕಿನ ಕಂದ ಗಲ್ಲಿನವನು. ಅವನು ಚಾಲುಕ್ಯ ಜಯಸಿಂಹ ರಾಜನಲ್ಲಿಗೆ ಬಂದು ಅಲ್ಲಿ ಕ್ಷುದ್ರ ದೇವತೆಗಳ ಆರಾಧನೆಯನ್ನು ಖಂಡಿಸಿದನು. ಅವನು ಮುಂದೆ ಸಿದ್ಧರು ವಾಸಿಸುತ್ತಿದ್ದ ಮಹಾಕಾಳಿಯ ಸ್ಥಾನವಾದ ಉಜ್ಜಯಿನಿಗೆ ಹೋಗಿ ಅಲ್ಲಿದ್ದ ಸಿದ್ಧರು, ಶಾಕ್ತರು, ಕಾಪಾಲಿಕರನ್ನು ಕಂಡು ಅವರ ಮತಗಳನ್ನು ಖಂಡಿಸಿ ಸಾತ್ವಿಕ ರೀತಿಯಿಂದ ಪರಮಾತ್ಮನ ಆರಾಧನೆಯನ್ನು ಮಾಡಲು ಅವರ ಮನಸ್ಸನ್ನು ಒಲಿಸಿದನು. ಇದರಿಂದ ಈ ಸಮಾಜದವರು ತಮ್ಮ ಹಿಂಸಾತ್ಮಕ ಕೃತ್ಯಗಳನ್ನು ಬಿಡುವವರಾದರು.

## ಸುಜ್ಞಾನಿದೇವ.

ನನ್ನಯ್ಯನೆಂಬ ಇನ್ನೊಬ್ಬ ಶಿವಶರಣನು ಪ್ರಸಿದ್ಧನಾಗಿದ್ದಾನೆ. ಅವನು ಮೊದಲು ಓಡಿಸಾ ಪ್ರಾಂತದಲ್ಲಿ ಕರ್ಣಿಕಾಪುರವೆಂಬ ಗ್ರಾಮದವನು. ಅವನು ಬೇಡರವನು. ಅವನು ದಾರಿಕಾರರನ್ನು ಸುಲಿಯುತ್ತ ಪ್ರಸಂಗ ಬಂದರೆ ಅವರ ವಧೆಯನ್ನು ಮಾಡುತ್ತ ಕೇವಲ ಹಿಂಸಾಚಾರಿಯಾಗಿ ವರ್ತಿಸುತ್ತಿದ್ದನು. ಈ ಗ್ರಾಮದಲ್ಲಿ ಸುಜ್ಞಾನಿದೇವನೆಂಬ ಶಿವಶರಣನು ವಾಸ ಮಾಡುತ್ತಿದ್ದನು. ಅವನು ಜನರಿಗೆ ಶಿವಶರಣರ ಮಾರ್ಗವನ್ನು ಬೋಧಿಸಿ ಅವರಿಗೆ ಲಿಂಗ ದೀಕ್ಷೆ ಕೊಡುವ ಕಾಯಕವನ್ನು ಕೈಕೊಂಡಿದ್ದನು. ಅವನು ಬಸವೇಶ್ವರನನ್ನು ಕಾಣಬೇ ಕೆಂದು ಕಲ್ಯಾಣಕ್ಕೆ ಹೊರಟಿದ್ದನು. ನನ್ನಯ್ಯನ ಮೊದಲಿನ ಹೆಸರು ಮಾತಂಗ ತಮ್ಮನೆಂದಿತ್ತು. ಅವನು ಸುಜ್ಞಾನಿದೇವನನ್ನು ದಾರಿಯಲ್ಲಿ ಕಂಡು ಅವನನ್ನು ಅಡ್ಡಗಟ್ಟಿ ಅವನಿಗೆ ನಿನ್ನ ಗಂಟು ಬಿಚ್ಚು ಅದನ್ನು ಶೋಧಿಸುವೆನು ಎಂದು ಹೇಳಲು

ಅವನು ಯಾಕಾಗವೊಲ್ಲದು ಎಂದು ನುಡಿದು ಅದನ್ನು ಬಿಚ್ಚಿ ತೋರಿಸಲು ಅದರಲ್ಲಿ ಲಿಂಗಗಳೇ ಇದ್ದವು. ಮಾತಂಗತಮ್ಮನು ಇವೇನೆಂದು ಅವನಿಗೆ ಕೇಳಲಾಗಿ ಸುಜ್ಞಾನಿದೇವನು ಅವುಗಳನ್ನು ಧರಿಸಿದರೆ ಅವು ಬೇಡಿದ ವಸ್ತು ಗಳನ್ನು ಕೊಡುವವೆಂದು ಹೇಳಿದನು. ಹಾಗಾದರೆ ಅವುಗಳಲ್ಲಿ ಒಂದನ್ನು ನನಗೆ ಕೊಡು ಎಂದು ಬೇಡನು ಕೇಳಲಾಗಿ ಸುಜ್ಞಾನಿದೇವನು ಇವುಗ ಳನ್ನು ನೀನು ಗುರುವಿನಿಂದ ತೆಗೆದುಕೊಳ್ಳಬೇಕು ಎಂದು ಹೇಳಲು ಆ ಬೇಡನು ಆ ಗುರುವು ಎಲ್ಲಿದ್ದಾನೆ ಎಂದು ಕೇಳಲಾಗಿ ಆ ಗುರುವು ಈಗ ನಿನ್ನೆದು ರಿಗಿದ್ದ ನಾನೇ, ಎಂದು ಹೇಳಲು, ಹಾಗಾದರೆ ನನಗೆ ಉಪದೇಶ ಮಾಡು ಎಂದು ಸುಜ್ಞಾನಿದೇವನಿಗೆ ಹೇಳಿದನು. ಆಗ ಸುಜ್ಞಾನಿದೇವನು ದೀಕ್ಷೆ ತೆಗೆದುಕೊಳ್ಳುವ ವರು ಮೊದಲು ಸದಾಚಾರಿಗಳಾಗಿರಬೇಕು. ಹಿಂಸೆಯನ್ನು ಎಷ್ಟು ಮಾತ್ರವೂ ಮಾಡಬಾರದು. ಆದರೆ ನೀನು ದಿನಾಲು ಮಾಂಸವನ್ನು ತಿನ್ನುತ್ತೀ; ಇದನ್ನು ನೀನು ಬಿಡಬೇಕು. ನೀನು ಪರಮಾರ್ಥದ ವಿಚಾರದಲ್ಲಿರಬೇಕು, ಎಂದು ಹೇಳಿ ಈ ವಿಷಯಗಳನ್ನು ಕುರಿತು ಸುಜ್ಞಾನಿದೇವನು ಅವನಿಗೆ ಅನೇಕ ರೀತಿ ಯಿಂದ ತಿಳಿಸಿ ಹೇಳಿದನು. ಮುಂದೆ ಆ ಬೇಡನು ತಾನು ಹಾಗೆ ನಡೆಯು ವೆನೆಂದು ವಚನ ಕೊಡಲಾಗಿ ಅವನಿಗೆ ಸುಜ್ಞಾನಿದೇವನು ದೀಕ್ಷೆಯನ್ನು ಕೊಟ್ಟು ಮಾತಂಗತಮ್ಮನೆಂಬ ಹೆಸರಿನ ಬದಲು 'ನನ್ನಯ್ಯ' ನೆಂಬ ಹೆಸರನ್ನು ಇಟ್ಟು ಕೊಳ್ಳಬೇಕೆಂದು ಬೋಧಿಸಿದನು. ಮುಂದೆ ಆ ಉಭಯತರು ಕೂಡಿಕೊಂಡು ಕಲ್ಯಾಣಕ್ಕೆ ಬಂದು ಬಸವೇಶ್ವರನನ್ನು ಕಂಡು ಕಲ್ಯಾಣದಲ್ಲಿಯೇ ವಾಸಿಸು ವವರಾದರು. ಈ ನನ್ನಯ್ಯನ ಚರಿತ್ರೆಯು ಬಸವ ಪುರಾಣ ಮಾತ್ರವಲ್ಲದೆ ಸಾಂಗತ್ಯ ರೂಪವಾಗಿ ವೀರಶೈವ ಕವಿಗಳಿಂದ ವಿಸ್ತಾರವಾಗಿ ನಿರೂಪಿಸಲ್ಪ ಟ್ಟದೆ. ಅದಕ್ಕೆ 'ನನ್ನಯ್ಯನ ಸಾಂಗತ್ಯ' ಎಂಬ ಹೆಸರಿದೆ. ಈ ಚರಿತೆಯ ಮುಖ್ಯ ಉದ್ದೇಶವು ಅಹಿಂಸಾ ಧರ್ಮವನ್ನು ಪ್ರತಿಪಾದಿಸುವದೇ ಇರುತ್ತದೆ.

## ಬಡಿಹೋರಿ ಬ್ರಹ್ಮಯ್ಯ.

ಈ ಬ್ರಹ್ಮಯ್ಯನು ಶಿವಶರಣರಲ್ಲಿ ಬಹು ಪ್ರಸಿದ್ಧನಾಗಿದ್ದು ಅವನ ಅಹಿಂಸಾ ಚಾರದ ವರ್ತನೆಯು ಶ್ರೇಷ್ಠತರದ್ದಾಗಿರುತ್ತದೆ. ಅವನು ಒಕ್ಕಲುತನವನ್ನು ಮಾಡುತ್ತ ತನ್ನ ಉದರನಿರ್ವಾಹವನ್ನು ಸಾಗಿಸುತ್ತಿದ್ದನು. ಹೀಗಿರುವಲ್ಲಿ ಬಿತ್ತುವ ದಿನ ಬರಲು ಅವನು ಬಿತ್ತುವದನ್ನು ಪ್ರಾರಂಭ ಮಾಡುವಷ್ಟರಲ್ಲಿ ಅವನ ಎರಡು ಹೋರಿಗಳಲ್ಲಿ ಒಂದು ಹೋರಿಯು ಸತ್ತಿತು. ಆಗ ಅವನು

ಇನ್ನೊಬ್ಬ ಒಕ್ಕಲಿಗನಿಂದ ಒಂದು ಹೋರಿಯನ್ನು ಮುಯ್ಯಿಗೆ ತೆಗೆದುಕೊಂಡು ಬಿತ್ತುವದನ್ನು ಪ್ರಾರಂಭಿಸಿದನು. ಈ ಹೋರಿಯು ಹೊಸದು ಇದ್ದದರಿಂದ ಅದು ಚಂಡಿತನಕ್ಕೆ ಬೀಳಲು ಬ್ರಹ್ಮಯ್ಯನು ಅದನ್ನು ಒಳಿತಾಗಿ ಹೊಡೆದನು. ಆಗ ಅವನ ಒಂದು ಹೊಡೆತವು ಆ ಹೋರಿಯ ಆಯಸ್ಥಾನಕ್ಕೆ ಬೀಳಲು ಅದು ಸತ್ತುಹೋಯಿತು. ಇದರಿಂದ ಬಿತ್ತಿಗೆಯ ಕೆಲಸವು ಕಟ್ಟಾಗಿ ಪುನಃ ಬಿತ್ತಬೇಕಾದರೆ ಹದ ತಪ್ಪಿದ್ದರಿಂದ ಅವನಿಗೆ ಬೆಳೆಯು ಸರಿಯಾಗಿ ಬರಲಿಲ್ಲ. ಇದರಿಂದ ಬ್ರಹ್ಮಯ್ಯನಿಗೆ ಸಾಕಷ್ಟು ಕಾಳು ಬರಲಿಲ್ಲ. ಹೀಗಾಗಿ ಅವನು ಕಷ್ಟಕ್ಕೆ ಈಡಾದನು. ಆಗ ತಾನು ಹೋರಿಯನ್ನು ಹೊಡೆದು ಕೊಂದದ್ದರಿಂದ ತನಗೆ ಹೀಗಾಯಿತೆಂದು ಅವನು ಬಹಳ ಪಶ್ಚಾತ್ತಾಪಪಟ್ಟನು. ಮತ್ತು ತನ್ನಿಂದ ಹೋರಿಯ ಪ್ರಾಣ ಹೋಯಿತೆಂದು ಕಳವಳಿಸಹತ್ತಿದನು. ಹೀಗೆ ಒಂದು ದಿವಸ ಚಿಂತಿಸುತ್ತ ಕುಳಿತಿರುವಾಗ ನಿದ್ರಾಪರವಶನಾಗಿರಲು ಪರಮೇಶ್ವರನು ಅವನ ಕನಸಿನಲ್ಲಿ ಬಂದಂತಾಗಿ ಪರಮೇಶ್ವರನು ಬ್ರಹ್ಮಯ್ಯನಿಗೆ— ಎಲೋ ಬ್ರಹ್ಮಯ್ಯನೇ, ನೀನು ಬಹಳ ಪಾಪ ಮಾಡಿರುವೆ. ನೀನು ನಿರುಪದ್ರವೀ ಪ್ರಾಣಿಯನ್ನು ಕೊಂದುಹಾಕಿದೆ. ನೀನು ಇನ್ನುಮೇಲೆ ಹೊಲದ ಕೆಲಸವನ್ನು ಬಿಟ್ಟು ಹೋರಿಯಂತೆ ಹೊಡಿಸಿಕೊಂಡು ದಾಸೋಹದಲ್ಲಿರು, ಎಂದು ಹೇಳಿದಂತಾಯಿತು. ಆಗ ಅವನಿಗೆ ಎಚ್ಚರಾಯಿತು. ಎಚ್ಚರವಾದ ಬಳಿಕ ಅವನು— ನಾನು ಮಾಡಿದ ಅಪರಾಧಕ್ಕೆ ಜನರಿಂದ ಹೊಡಿಸಿಕೊಳ್ಳುವದೇ ನನಗೆ ಯೋಗ್ಯ ಶಿಕ್ಷೆಯು. ಈ ಶಿಕ್ಷೆಯನ್ನು ನಾನು ಅನುಭವಿಸುತ್ತ ಜನರಿಂದ ಕಾಯಕ ತಂದು ದಾಸೋಹ ಕಾರ್ಯಗಳನ್ನು ನಡಿಸುತ್ತ ಹೋಗುವೆನೆಂದು ಒಂದು ವ್ರತವನ್ನು ನಿಶ್ಚಯಿಸಿಕೊಂಡನು.

ಅಂದಿನಿಂದ ಜನರಿಂದ ಹೊಡಿಸಿಕೊಳ್ಳುವದೇ ಬ್ರಹ್ಮಯ್ಯನಿಗೆ ಒಂದು ಕಾಯಕವಾಯಿತು ! ಜನರಾದರೂ ಮೊದಲು ಅವನು ಹೀಗೆ ಯಾಕೆ ಹೊಡಿಸಿಕೊಳ್ಳಬೇಕೆನ್ನುತ್ತಾನೆಂಬುದನ್ನು ತಿಳಿದವರಾಗಿ ಅವನಿಗೆ ಗುದ್ದಿ ಏನಾದರೂ ಹಣಕೊಡುವರು. ಹೀಗೆ ಬಂದ ಹಣದಿಂದ ಅವನು ತನ್ನ ಪ್ರಪಂಚವನ್ನು ಸಾಗಿಸುವನು. ಹೀಗೆ ಖರ್ಚುಮಾಡಿ ಉಳಿದದ್ದನ್ನು ಅವನು ದಾಸೋಹ ಕಾರ್ಯಕ್ಕೆ ಅಂದರೆ ಕೆಲವೊಂದು ಸತ್ಕಾರ್ಯಕ್ಕೆ ಉಪಯೋಗಿಸುವನು. ಆದರೆ ಈ ಕಾಯಕವು ಬಹಳ ದಿವಸ ನಡಿಯಲಿಲ್ಲ. ಅವನ ಈ ವ್ರತವು ಜನರ ಮನಸ್ಸಿಗೆ ಬರಲಿಲ್ಲ. ಅವರು ಈ ಬ್ರಹ್ಮಯ್ಯನು ನಮಗೇನು ಮಾಡಿದ್ದಾನೆ ? ಅವನನ್ನು ನಾವೇಕೆ ಗುದ್ದಬೇಕು? ಅವನು ತನಗೆ ಉಳಿದದ್ದನ್ನು ದಾಸೋಹಕ್ಕೆ

ಉಪಯೋಗಿಸುತ್ತಾನೆ. ಅಂದರೆ ಅವನು ಪುಣ್ಯಕಾರ್ಯಕ್ಕೆ ಉಪಯೋಗಿಸುತ್ತಾನೆ. ಇಂಥವನನ್ನು ನಾವು ಹೊಡೆದರೆ ನಮಗೆ ಪಾಪ ಬರುವದು, ಎಂದು ಅವನನ್ನು ಹೊಡೆಯುವದನ್ನು ಬಿಟ್ಟರು. ಮತ್ತು ಅವರು ಅವನಿಗೆ– ಬೇಕಾದರೆ ಹಾಗೆಯೇ ನಾವು ಕಾಯಕ (ಕೂಲಿ) ಕೊಡುತ್ತೇವೆ. ಅದನ್ನು ತೆಗೆದುಕೊಂಡು ನಿನ್ನ ಉದರ ನಿರ್ವಾಹ ಸಾಗಿಸು, ಎಂದು ಹೇಳಹತ್ತಿದರು. ಆದರೆ ಬ್ರಹ್ಮಯ್ಯನು ನನ್ನ ಅಪರಾಧಕ್ಕೋಸ್ಕರ ನಾನು ಹೊಡಿಸಿಕೊಳ್ಳುವದೇ ನನ್ನ ಕಾಯಕವಾಗಿದೆ. ನೀವು ಹೊಡೆಯದಿದ್ದರೆ ನಿಮ್ಮಿಂದ ನಾನೇನೂ ತೆಗೆದುಕೊಳ್ಳುವದಿಲ್ಲ, ಎಂದು ಹೇಳಿ ಹೊರಟು ಹೋಗಿ ಬಿಡುವನು. ಇದರಿಂದ ಅವನು ಅನ್ನೋದಕಗಳಿಲ್ಲದೆ ಉಪವಾಸವಿರುವ ಪ್ರಸಂಗಗಳು ಬರಹತ್ತಿದವು. ಆದರೆ ಹೀಗೆ ಉಪವಾಸವಿದ್ದುದಕ್ಕೆ ಬ್ರಹ್ಮಯ್ಯನಿಗೆ ದುಃಖವಾಗಲಿಲ್ಲ. ಆದರೆ ಹೊಡಿಸಿಕೊಳ್ಳುವದು ನಿಂತಿತಲ್ಲಾ ಎಂದು ಅವನು ಬಹಳ ದುಃಖಿಸಹತ್ತಿದನು.

ಒಂದು ದಿವಸ ಅವನು ದುಃಖಿಸುತ್ತ ಕುಳಿತಾಗ ಅವನಿಗೆ ನಿದ್ರೆಯು ಬಂದಿತು. ಆಗ ಕನಸಿನಲ್ಲಿ ಪರಮಾತ್ಮನು ಅವನಿಗೆ— ಜನರು ತಮ್ಮ ಕಾಳುಗಳನ್ನು ಅಂಗಳದಲ್ಲಿ ಒಣಹಾಕುತ್ತಾರೆ. ಅವುಗಳನ್ನು ನೀನು ದೋಚಿಕೊಂಡು ಹೋದರೆ ಜನರು ನಿನ್ನನ್ನು ಹೊಡೆಯುತ್ತಾರೆ. ಹಾಗೆ ಮಾಡೆಂದು ಹೇಳಿದಂತಾಯಿತು. ಅವನಿಗೆ ನಿದ್ರೆಯು ತಿಳಿದ ಬಳಿಕ ಹೀಗೆಯೇ ಮಾಡಿ ನೋಡಬೇಕೆಂದು ಊರೊಳಗೆ ಹೊರಟನು.

ಅವನು ಬೀದಿಯಲ್ಲಿ ಬರುತ್ತಾ ಇರುವಾಗ ಜನರು ಅಂಗಳದಲ್ಲಿ ಒಣಹಾಕಿದ ಕಾಳುಗಳನ್ನು ಕಂಡು ಅವುಗಳನ್ನು ಎತ್ತಿಕೊಳ್ಳಹತ್ತಿದನು. ಆಗ ಜನರು ಇದನ್ನು ಕಂಡು ಇವನು ತುಡುಗನೆಂದು ತಿಳಿದು ಇವನನ್ನು ಹೊಡೆದರು. ಆದರೆ ಹೊಡೆದ ಕೂಡಲೇ ಬ್ರಹ್ಮಯ್ಯನು ಕಾಳುಗಳನ್ನು ಅಲ್ಲಿಯೇ ಚಲ್ಲಿಕೊಟ್ಟು ನನ್ನ ಕಾಯಕ ಕೊಡಿರೆಂದು ಕೇಳುವನು. ಜನರು ಅವನು ಹೀಗೇಕೆ ಬೇಡುತ್ತಾನೆ ಎಂಬುದನ್ನು ಕೇಳಿ ಅವನು ಬೇಡುವ ಕಾರಣವನ್ನು ತಿಳಿದವರಾಗಿ ಅವನನ್ನು ಗುದ್ದಿ ಕೆಲವು ದಿವಸಗಳನ್ನು ಕೊಟ್ಟು ಕಳಿಸುವರು. ಹೀಗೆ ದೊರಕಿದ್ದರ ಮೇಲೆ ಅವನು ಉಪಜೀವಿಸುತ್ತ ಕೆಲವು ಕಾಲ ತನ್ನ ದಾಸೋಹ ಕಾರ್ಯಗಳನ್ನು ನಡಿಸುವನು.

ಆದರೆ ಈ ಯುಕ್ತಿಯೂ ಕೂಡ ಬಹಳ ದಿವಸ ನಡಿಯಲಿಲ್ಲ. ಜನರು ಇವನು ಕಳ್ಳನಲ್ಲ, ಇವನು ತನಗೆ ಬಂದುದನ್ನು ಪುಣ್ಯ ಕಾರ್ಯಕ್ಕೆ ಉಪಯೋಗಿಸುತ್ತಾನೆ, ಇವನನ್ನು ಯಾಕೆ ಗುದ್ದಬೇಕು ಎಂದು ವಿಚಾರ ಮಾಡಿ ಅವನು

ಇಷ್ಟು ವರ್ಣನೆ ಸಾಲದೆಂಬಂತೆ ಕವಿಯು ಬಸವಣ್ಣನನ್ನು—"ಶಿವ ಪೂಜೆಯೊಳಗೆ ಹುಟ್ಟಿದ ಸುಧಾಕರ ಭವಪೂಜೆಯೊಳಗೆ ಬಲಿದು ಪುರುಷಾ ಕಾರವಾದನು ಎಂದು ಮುಂತಾಗಿ ವರ್ಣಿಸಿರುವುದು ಚಿನ್ನದ ಹೂವಿಗೆ ಪರಿ ಮಳವುಂಟಾದಂತಾಗಿದೆ. ಸಂಗಮೇಶ್ವರ ಪೂಜಾವರ್ಣನೆಯಿಂದ ಕೂಡಿದ ಮೂರನೆಯ ಸ್ಥಲ, ಗಣಾರಾಧನೆಯ ವರ್ಣನೆಯಿಂದ ತುಂಬಿರುವ ಏಳನೆಯ ಸ್ಥಲ ಇವೆರಡೂ ಕೃತಿಗೆ ಕಳಸವಿಟ್ಟಂತಿವೆ.

ಈ ರೀತಿಯಾಗಿ "ಸಂಗನೇ ಬಸವ, ಬಸವನೇ ಸಂಗ ಎಂಬ ಅದ್ವೈತ ಭಾವದಲ್ಲಿ ಕೂರ್ಪರ ಕುಲದೈವ, ನೋಳ್ಪರ ಕಣ್ಮಣಿ, ಬೇಳ್ಪರ ಭಾಗ್ಯನಿಧಿ, ಚಿಂತಿಪರ ಚಿಂತಾರತ್ನ"ನೆನಿಸಿದ ಬಸವಣ್ಣನು ಇರುತ್ತಿರಲು—

ಒಂದು ದಿನ ನಿದ್ರೆಯಲ್ಲಿ ಸಂಗನು ಕಾಣಿಸಿಕೊಂಡು ನೀನು ಬಿಜ್ಜಳ ರಾಯನಿರುವ ಮಂಗಳವಾಡಕ್ಕೆ ಹೋಗು ಎಂದು ಆಜ್ಞಾಪಿಸುತ್ತಾನೆ. ಇದನ್ನು ಕೇಳಿ ಬಸವಂಗೆ ಸಿಡಿಲೆರಗಿದಂತಾಯ್ತು. ನಿಂತ ನೆಲನೇ ಬಿರಿದಂತಾಯ್ತು. "ದೇವ ದೇವ ಕೆಟ್ಟೆ. ಹೊದ್ದಿದರಂ ಹೋಗೆಂಬರೆ? ಅರ್ಚಿತಕ್ಕೆ ಫಲವಾಯ್ತು" ಎಂದು ಸಂಗನನ್ನು ಬಿಟ್ಟು ಹೋಗಲಾರದೆ ಗೋಳಿಡುತ್ತಾರೆ.

ಮಾರನೆಯ ದಿನ "ಹರ ಕರುಣೋದಯ ಮಾದಂತರುಣೋದಯಮಾ ಗಲು" ಪೂಜಾ ಸಮಯದಲ್ಲಿ ವೃಷಭ ಮುಖದಿಂದ ಈಶ್ವರನೇ ಕೈಸಾರ್ದುದಂ ಕಂಡು ಹರ್ಷಿಸಿ "ಸಂಗಮ ಧ್ಯಾನವೇ ಸಂಗಡವಾಗಿ, ಸಂಗನ ಕರುಣವೆ ಬೆಂಬಲವಾಗಿ ಮಂಗಳವಾಡಕ್ಕೆ ಬಂದು ಅರಮನೆಯನ್ನು ಪ್ರವೇಶಿಸಿ ಕರುಣ ಸಾಲೆಗ ಬಂದು ಬರೆವ ಗಣಕರನ್ನು ನಿರೀಕ್ಷಿಸುತ್ತ ನಿಲ್ಲುತ್ತಾರೆ.

ಅಷ್ಟರಲ್ಲಿ ಅರಮನೆಯ ಭಾಂಡಾರಿ ಸಿದ್ಧದಂಡಾಧೀಶನು ಅಲ್ಲಿಗೆ ಬಂದು ಗಣಕರನ್ನು ಲೆಕ್ಕ ಕೇಳಲು ಅವರು ತಪ್ಪು ನುಡಿಯುತ್ತಾರೆ. ಅಲ್ಲೆ ನೋಡುತ್ತ ನಿಂತಿದ್ದ ಬಸವಣ್ಣನು ಸರಿಯಾದ ರೀತಿಯಲ್ಲಿ ಹೇಳಲು ಅಂದಿನಿಂದ ಅವ ನನ್ನು ಗಣಕನನ್ನಾಗಿ ನಿಯಮಿಸಿದರು. ಸಿದ್ಧದಂಡಾಧೀಶನು ಶಿವೈಕ್ಯನಾದ ನಂತರ ಅವನ ಸಕಲ ಐಶ್ವರ್ಯಕ್ಕೂ ಒಡೆಯನಾಗಿ, ಬಿಜ್ಜಳನ ಬಳಿ ಭಾಂಡಾರಿಯಾಗಿ ಹರಭಕ್ತರ ಚರಣ ಸೇವೆಯಲ್ಲಿ ಸುಖವಾಗಿದ್ದರು. ಈ ಸಮಯದಲ್ಲಿ ಗಂಗಾದೇವಿ ಮಾಯಿದೇವಿಯರೊಡನೆ ವಿವಾಹವೂ ನಡೆದು ಹೋಗುತ್ತದೆ.

ಬಿಜ್ಜಳರಾಯನಿಗೂ ಬಸವಣ್ಣನವರಿಗೂ ಬೆಳೆದ ಆತ್ಮೀಯತೆಯನ್ನು ಕಂಡು ನಾರಾಯಣಪೆದ್ದಿ, ಸೌರಿಭಟ್ಟ, ವಿಷ್ಣುಪೆದ್ದಿ, ಮಂಚ್ಯಣಕ್ರಮಿತ ಮೊದಲಾದವರು ಅಸೂಯೆಪಡುತ್ತಾರೆ. ಹೇಗಾದರೂ ಪ್ರಯತ್ನಿಸಿ ಬಸವಣ್ಣನಲ್ಲಿ ತಪ್ಪನ್ನು ಹುಡುಕಿ ಸ್ನೇಹಭಂಗಮಾಡಬೇಕೆಂದು ಕಾಯುತ್ತಿರುತ್ತಾರೆ. ಒಂದುಸಲ ಓಲಗಶಾಲೆಯಲ್ಲಿ ಬಸವಣ್ಣನು ಕೇತಕಿ ಕುಸುಮದಳವನ್ನು ಶಿವಲಿಂಗಕ್ಕರ್ಪಿಸಲು ಈ ವಿಪ್ರರು ಬಸವಣ್ಣ ಮಾಡಿದುದು ನಿಷಿದ್ಧ ಕಾರ್ಯವೆಂದೂ, ಕೇತಕೀ ಕುಸುಮವನ್ನು ಶಿವಲಿಂಗಕ್ಕರ್ಪಿಸಬಾರದೆಂದು ಶಿವಾಗಮಗಳಲ್ಲಿ ಹೇಳಿದೆ ಎಂದೂ ರಾಜನಿಗೆ ತಿಳಿಸುತ್ತಾರೆ. ಬಸವೇಶ್ವರನು "ಭಕ್ತರು ಕೊಟ್ಟರೆ ಸಂಗನು ಕೇತಕಿ ಕುಸುಮವನ್ನಾದರೂ ಕೊಳುವ" ಎಂದು ತಿಳಿಸಿ ಅಲ್ಲಿ ನೆರೆದಿದ್ದ ಸಹಸ್ರಾರು ಮಂದಿ ಶಿವಭಕ್ತರ ಕಕ್ಷಪುಟದಲ್ಲಿ ಕೇತಕಿ ಕುಸುಮವಿರುವುದನ್ನು ತೋರಿಸಿ ಅವರ ಬಾಯಿ ಮುಚ್ಚಿಸುತ್ತಾರೆ.

ಈ ಪ್ರಸಂಗವು ಮೇಲ್ನೋಟಕ್ಕೆ ಪವಾಡದಂತೆ ಕಂಡರೂ 'ನಿಜಭಕ್ತನಾದವನು ಏನನ್ನು ಅರ್ಪಿಸಿದರೂ ಶಿವನು ಅದನ್ನು ನಿರಾಕರಿಸುವದಿಲ್ಲ' ಎಂಬ ಅಂತರಾರ್ಥ ಇದರಲ್ಲಿ ಅಡಗಿದೆ.

ಬಸವಣ್ಣನವರು ಜಂಗಮ ಸೇವೆಯೇ ಸಂಗನ ಸೇವೆಯೆಂದು ಬಗೆದಿದ್ದರು. ಜೀವ ತೃಪ್ತಿಹೊಂದಿದರೆ ಶಿವನೇ ತೃಪ್ತಿಗೊಂಡಂತೆ ಎಂದು ಮನಗಂಡು ಜಂಗಮ ಸೇವೆಯನ್ನು ಕೈಕೊಂಡಿದ್ದರು. ಜೀವ ಶಿವಂಗೆ ಭೇದ ಮಾಡದ ಅದ್ವೈತ ವೇದಾಂತಿ ಇವರು. ಕೇವಲ ಕರ್ಮ ಜಡರಾಗಿ "ಉಂಬ ಜಂಗಮ ಬಂದರೆ ನಡೆ ಎಂಬ, ಉಣ್ಣದ ಲಿಂಗಕ್ಕೆ ಬೋನ ಇಡಿ ಎಂಬ" ನಡೆ ಬೇರೆ ನುಡಿಬೇರೆಯಾದವರನ್ನು ಖಂಡಿಸುತ್ತಿದ್ದರು. "ದಯವೇ ಧರ್ಮದ ಮೂಲ' ವೆಂದು ತಿಳಿದು ಸಕಲ ಪ್ರಾಣಿಗಳಲ್ಲಿಯೂ ದಯೆಯುಳ್ಳವರಾಗಿದ್ದರು.

ಜಂಗಮನಾಗಿ ಬಸವಣ್ಣನವರ ಬಳಿ ಬಂದ ಕಿನ್ನರ ಬೊಮ್ಮಯ್ಯನೆಂಬ ಭಕ್ತನು 'ಉಳ್ಳಿಯ ಪ್ರಕರಣ''ದಿಂದ ಕೋಪಗೊಂಡು ಎಲ್ಲಿಯೋ ಹೊರಟು ಹೋದನು. ಭಕ್ತನ ಮನಸ್ಸಿಗೆ ವ್ಯಥೆಯಾಯಿತಲ್ಲಾ ಎಂದು ನೊಂದುಕೊಂಡು (ತಮಗಿಷ್ಟವಿಲ್ಲದಿದ್ದರೂ) ಭಕ್ತನನ್ನು ಹಿಂದಕ್ಕೆ ಕರೆತಂದು ಅವರ ತೃಪ್ತ್ಯರ್ಥವಾಗಿ ಉಳ್ಳಿಯ ಸಮಾರಾಧನೆಯನ್ನು ಪ್ರತಿವರ್ಷವೂ ಉಳ್ಳಿಯ ಹಬ್ಬವನ್ನು ಆಚರಿಸತೊಡಗಿದರು. ಭಕ್ತರ ಮನಸ್ಸಿಗೆ ನೋವುಂಟಾದರೆ ಶಿವನೂ ನೊಂದುಕೊಳ್ಳುತ್ತಾನೆಂಬುದು ಅವರ ಭಾವನೆಯಾಗಿತ್ತು.

ಇದೇ ರೀತಿ ಲಿಂಗರಸನು ಗಂಗಾದೇವಿಯ ಓಲೆಗಳನ್ನು ಕಳ್ಳತನ ದಿಂದ ಅಪಹರಿಸಲು ಯತ್ನಿಸಿದಾಗ ಈ ವಿಷಯ ಬಸವಣ್ಣನಿಗೆ ತಿಳಿಯಿತು. ಬಸವಣ್ಣ ಅವನನ್ನು ಥಳಿಸಿ ದಂಡಿಸುವ ಬದಲು "ಎಲೆಲೆಲೆ ಸಂಗನ ಶರಂ ನೊಂದುದು. ಬೆಸಸುವ ಮುನ್ನವೇ ಕೊಡಬಾರದಾಗಿತ್ತೆ" ಎಂದು ಪತ್ನಿಗೆ ತಿಳಿಸುವರು.

ಮೇಲಿನ ಪ್ರಸಂಗಗಳಿಂದ "ಸಂಗನೇ ಜಂಗಮ" ಎಂಬ ಭಾವ ಅವ ರಲ್ಲಿ ನೆಲೆಗೊಂಡಿತ್ತು.

ಅವರು ಏನು ಬೇಡಿದರೂ, ಏನು ಮಾಡಿದರೂ ಅದು ಸಂಗನ ಕಾರ್ಯವೇ ಎಂದವರಿಗೆ ತೃಪ್ತಿ. "ಕೊಡುವವನೂ ಸಂಗ, ಕೊಂಬುವ ವನೂ ಸಂಗ. ಎನಗೊಂದುಂ ಭಾರವಿಲ್ಲ, ಎಂಬ ಹಿಮಾಲಯದಷ್ಟು ಅಚಲ ನಂಬಿಕೆ, ಶ್ರದ್ಧೆ ಅವರದು. ಇಂತಹ ಉಜ್ವಲ ದೃಢ ನಂಬಿಕೆಯೇ ಅವ ರನ್ನು ಎಲ್ಲಾ ವಿಪತ್ತುಗಳಿಂದ ಪಾರುಮಾಡಿತು.

ಒಂದುಸಲ ಬಸವಣ್ಣನವರ ದರ್ಶನಾಪೇಕ್ಷಿಗಳಾಗಿ ಬಂದ ಭಕ್ತರು ಅವರು ನಿದ್ರಾಮುದ್ರಿತರಾಗಿದ್ದುದರಿಂದ ತೊಂದರೆಯಾಗಬಾರದೆಂದು ಹಾಗೆಯೇ ಹೊರಟುಹೋಗುತ್ತಾರೆ. ಬಸವಣ್ಣನ ಜೀವವೂ ಅವರ ಹಿಂದೆಯೇ ಹೋಯಿತು. ಹೋದ ಜಂಗಮರನ್ನು ಮತ್ತೆ ಕರೆತಂದಾಗ ಅವರಿಗೆ ಜೀವ ಮರಳುತ್ತದೆ. ಬಸವಣ್ಣನವರಿಗೆ ಜಂಗಮರೇ ಜೀವವಾಗಿದ್ದರು. ಅವರಿದ್ದೆ ಡೆಯೇ ತಾವೂ ಇರಲು ಅಪೇಕ್ಷಿಸುತ್ತಿದ್ದರು ಎಂಬ ಅಂಶ ಇದರಿಂದ ವ್ಯಕ್ತ ವಾಗುತ್ತದೆ.

ಕಳ್ಳರು ಬಂದು ಹಸುಗಳನ್ನು ಕದ್ದೊಯ್ದರೆ, ಅವರು ಕಳ್ಳರಲ್ಲ. ಶಿವಸ್ವರೂಪಿಗಳಾದ ಜಂಗಮರು. "ಗೋವುಗಳ ಹಿಂದೆ ಕರುಗಳಂ ಬಿಡಿರೆ" ಎಂದು ಕರುಗಳನ್ನೂ ಬಿಟ್ಟುಬಿಟ್ಟರು. ಈ ಎಲ್ಲ ಪ್ರಸಂಗಗಳೂ ಬಸವಣ ನವರ ಪಾತ್ರಕ್ಕೆ ಹೆಚ್ಚಿನ ಮೆರುಗನ್ನು ತಂದಿವೆ.

ಬಸವಣ್ಣನವರು ಜಂಗಮರಲ್ಲಿ ಅನುಮಾನಪಡುವದಿಲ್ಲವೆಂದು ತಿಳಿ ದಿದ್ದ ಚಿಕ್ಕಯ್ಯನೆಂಬವನು ತನ್ನ ಸಂಗಡಿಗರೊಂದಿಗೆ ಬದನೆಕಾಯಿಗಳನ್ನು ಕಕ್ಷಪುಟದಲ್ಲಿ ಧರಿಸಿ ಜಂಗಮರಂತೆ ಬರುತ್ತಾನೆ. ಅವನ ಉದ್ದೇಶ ಬಸವಣ್ಣ ನವರನ್ನು ಕೊಲೆಮಾಡಬೇಕೆಂಬುದು. ಬಸವಣ್ಣನವರಿಗೆ ಈ ವಿಷಯ ತಿಳಿದು ಬದನೆಕಾಯಿಗಳನ್ನು ಲಿಂಗಗಳಾಗಿ ಪರಿವರ್ತನೆ ಮಾಡುತ್ತಾರೆ. ಕೊಲೆಯ

ಸಂಚಿಗಾಗಿ ಬಂದ ಕೊಲೆಪಾತಕರ ಹೃದಯ ಪರಿವರ್ತನೆಯಾಗಿ ಅವರು ಸಜ್ಜನರಾಗುತ್ತಾರೆ. ಭವಿಗಳಾಗಿ ಅಜ್ಞಾನಾಂಧಕಾರದಲ್ಲಿದ್ದ ಕೊಲೆಪಾತಕರು ಶಿವಜ್ಞಾನಹೊಂದಿ ಸಜ್ಜನರಾದರೆಂಬುದೇ ಬದನೇಕಾಯಿ ಲಿಂಗಗಳಾದ ಪವಾಡದ ರಹಸ್ಯಾರ್ಥ.

ಎಂಟನೆಯ ಸ್ಥಲದಲ್ಲಿ ಹರಿಹರನು ಬಸವಣ್ಣನನ್ನು ಭಕ್ತಿಯ ಪ್ರತಿಮೂರ್ತಿಯಾಗಿ ಕಡೆದು ನಿಲ್ಲಿಸಿದ್ದಾನೆ.

"ಬಸವಣ್ಣನ ಮಾತೆ ಮಾತು, ಭಕ್ತಿಯ ಓಜೆಯೋಜೆ, ಬಸವನ ರೀತಿ ರೀತಿ, ಬಸವನ ನಿಷ್ಠೆ ನಿಷ್ಠೆ. ಬಸವನ ನೇಮ ನೇಮ, ಬಸವನ ಗಾಡಿ, ಗೀತಿ, ಬುದ್ಧಿ, ಪುಣ್ಯದಲೀಲೆ, ರಕ್ಷೆ ಶಿಕ್ಷೆ ಅವನದೇ. ಬೇರಾರಿಗೂ ಸಾಧ್ಯವಿಲ್ಲ. ಅವನ ಪೆರ್ಮೆ, ಸೀಮೆ, ಭಾವದ ಕಾಣ್ಕೆ, ಭಕ್ತಿ" ಅನುಪಮವಾದುದು, ಅದ್ವಿತೀಯವಾದುದು. ಭಕ್ತಿಭಾವ ಪ್ರಕಾಶನಕ್ಕೆ ತಕ್ಕ ಪದಸಂಪತ್ತಿನಿಂದ ಪಾತ್ರ ಪರಿಪೋಷಣೆ ತುಂಬಿಬಂದಿದೆ

"ತನಗಿಂತ ಕಿರಿಯರಿಲ್ಲ ಭಕ್ತರಿಗಿಂತ ಹಿರಿಯರಿಲ್ಲ" ಎಂಬ ವಿನಮ್ರಭಾವದ ಪ್ರತಿಮೂರ್ತಿ ಬಸವಣ್ಣ. ತಾನು "ಶರಣರ ಬಂಟರ ಬಂಟ, ಶರಣರ ಕಿಂಕರರ ಕಿಂಕರ, ಶರಣರ ಲೆಂಕರ ಲೆಂಕ" ಎಂದು ಹೇಳಿಕೊಂಡಿರುವುದು ವಿನಯ ಸೌಜನ್ಯಗಳನ್ನು ಪ್ರತಿಬಿಂಬಿಸುತ್ತದೆ. ಪರಮೇಶ್ವರನ ಪಾದೋದಕ ಪ್ರಸಾದಕ್ಕೆ ನಂದೀಶ್ವರನು ಕೈಯೊಡ್ಡಿದರೆ, ನಂದೀಶನ ಕೈಯಿಂದ ಹರಿದು ಬರುವ ಶಿವಪ್ರಸಾದ ಜಲಕ್ಕೆ ಭೃಂಗಿ ಕೈಯೊಡ್ಡುತ್ತಾನೆ. ಆ ಪ್ರಸಾದವಾದರೂ ಧನ್ಯನಾದೇನು ಎಂದು ಭೃಂಗಿಯ ಆಶಯ. ಅಂತೆಯೆ ಶರಣರ ಕಿಂಕರರ ಕಿಂಕರರ ಕಿಂಕರನಾದರೂ ಜನ್ಮ ಸಾಫಲ್ಯವೆಂಬುದು ಬಸವಣ್ಣನವರ ನಂಬಿಕೆಯಾಗಿತ್ತು. ಇಂತಹ ಭಾವ ಪ್ರಕಾಶನದ ಮಾತುಗಳಿಂದ ಅವರ ನೈಜ ಹೃದಯ ಪ್ರತಿಬಿಂಬಿತವಾಗಿದೆ.

ಬಸವಣ್ಣನವರ ಇಡಿ ಜೀವನ ತತ್ತ್ವವೆಲ್ಲ ಹರಿಹರನು ಹೇಳಿರುವ ಈ ಕೆಲವೇ ಮಾತುಗಳಲ್ಲಿ ಅಡಕವಾಗಿದೆ.

ಕವಿ ಹೃದಯ ತುಂಬಿ ಮನತುಂಬಿ ಹೀಗೆ ವರ್ಣಿಸುತ್ತಾನೆ. "ಎಲೆ ಬಸವ ನಿನ್ನ ನೇಮವಿದಾರ್ಗುಂಟು! ಗುರುಲಿಂಗದೊಳೆರಡಿಲ್ಲದಿಪ್ಪೆ. ಶರಣರಂ ಸಂಗನೆಂದೆ ಕಾಣ್ಬೆ. ಬಂದ ಭಕ್ತರ ನತ್ಯಾದರಿಪೆ. ಬಪ್ಪ ಭಕ್ತರಂ ಹರುಷದೊಳಿದಿರ್ಗೊಂಡೆ ಬೇಡಿದುದ ಶರಣರ್ಗಿಲ್ಲೆನ್ನದೀವೆ. ಬೇಡಲೊಲ್ಲದವರ್ಗೆ

ವಿಗಿಲಾಗಿ ಆರಾಧಿಪೆ. ಜಾಗ್ರತ್ಸ್ವಪ್ನ ಸುಷುಪ್ತಿಯವಸ್ಥಾತ್ರಯಂಗಳೊಳು ಶರಣರಂ ಸಂಗನೆಂದಲ್ಲದೆ ಕಾಣೆ. ನಿಚ್ಚ ಶಿವರಾತ್ರಿಯ ನಚ್ಚರಿಯಿಂ ಮಾಳ್ಪೆ ಜಂಗಮ ಪ್ರಾಣಿಯಾಗಿಪ್ಪೆ. ಶಿವಲಿಂಗಾರ್ಪಿತವಲ್ಲದುದನಾಘ್ರಾಣಿಸೆ, ನೋಡೆ, ನುಡಿಯೆ, ಮುಟ್ಟೆ, ಕೇಳೆ ಶಿವಸಮಯವನುದ್ಧರಿಸುವೆ. ಲಿಂಗದಲ್ಲಿ ಕಠಿನದಂ ಕೇಳೆ. ಜಂಗಮದಲ್ಲಿ ಜಾತಿಯನರಸೆ. ಪ್ರಸಾದದಲ್ಲಿ ಅಪವಿತ್ರತೆಯರಿಯೆ.... ಪಾಷಂಡಿ ಭೂಮಿಯೊಳು ಶಿವಭಕ್ತಿಯನಾರಂಭಿಸಿ ಸಾಮರ್ಥ್ಯಮಂ ಬಿತ್ತಿ ಪ್ರತ್ಯಕ್ಷಂಗಳಂ ಬೆಳೆದು ಗಣಪರ್ವಂಗಳಂ ಸಫಲಂ ಮಾಳಲೆಂದು ಬಂದ ಕಾರಣಿಕ ಬಸವ, ನಿಮ್ಮ ದೆಸೆಯಿಂದೆಮ್ಮ ಭಕ್ತಿ ಬಣ್ಣವೇರಿತು .... ... "

( ಸ್ಥಲ ೮ : ೩೭-೫೯ )

ಜಂಗಮರನ್ನು ಕುರಿತು " ದೇವ ನಿಮ್ಮ ನೆನೆವುದೆ ಶಿವಚಿಂತೆ, ನೋಡುವುದೆ ದರುಶನಂ, ಮುಟ್ಟುದುದೆ ಸ್ಪರ್ಶನಂ. ನೀವೆ ಗತಿ ಮತಿ ಪ್ರಾಣ" ಎಂದು ಅವರನ್ನುಪಚರಿಸುತ್ತಿದ್ದರು. ಅವರ ಜಂಗಮ ಸೇವೆಯ ಸಂಭ್ರಮವೇ ಸಂಭ್ರಮ. ಭಕ್ತರನ್ನು ಆದರಿಸಿ ಸತ್ಕರಿಸಿ ಕೇಳದುದ-ನೀಯುವ ಸಡಗರವೇ ಸಡಗರ. ಆ ಸಂಭ್ರಮ ಸಡಗರಗಳನ್ನು ನಾವು ಓದುವದಿಲ್ಲ. ಕಣ್ಣೆದುರಿಗೇ ನೋಡುತ್ತಾ ಮಂತ್ರಮುಗ್ಧರಾಗುತ್ತೇವೆ. ಜಂಗಮರೆಲ್ಲಾ ಜೀವಂತ ವ್ಯಕ್ತಿಗಳಾಗಿ ನಮ್ಮ ಸನಿಹ ಸಾಮಿಪ್ಯಗಳಲ್ಲೆ ಸಂಚರಿಸುತ್ತಾರೆ. ಜಂಗಮರ ತೃಪ್ತ್ಯರ್ಥವಾಗಿ.

ಸಿದ್ಧಗೊಳಿಸುತ್ತಿದ್ದ ವಿವಿಧ ಭಕ್ಷ್ಯ ಭೋಜ್ಯಗಳು ಪಕ್ವಾನ್ನಗಳು ಓದುಗರ ಬಾಯಲ್ಲಿ ನೀರೂರಿಸುತ್ತವೆ. ಓಗರದ ರಾಶಿಗಳು, ಗಾರಿಗೆಯ ಅಳಸುಗಳ ಕುತ್ತರಿಗಳು, ಹೊರಿಗೆ ಲಡ್ಡುಗಳ ಬೆಟ್ಟವೇ ಇದ್ದವಂತೆ. ಹಾಲುಂಡೆ, ಘೃತಪೂರ, ಹಾಲೋಗರೊಡೆ, ಸಣ್ಣ ಸೇವಗೆ, ಸರವಳಿಗೆ, ಪೊಸಣಂಬಂ ಮೇಲೋಗರದ ರಾಶಿ ರಾಶಿಗಳೇ ರಂಜಿಸಿದುವು. ಹಾಲು ಮೊಸರು ತುಪ್ಪಗಳ ಕೋಟಿ ಕೊಪ್ಪರಿಗೆಗಳು ಮೆರೆದವು.

ಕೆಲವರು, " ಅರರೆ ಹಾಲುಂಡೆಯುಂ ತವಕದಿಂ ಸುರಿಯೆಂಬರು. " "ಸರಸ ಪಕ್ವಾನ್ನಮಂ ಸವಿದು ಎನಗೆ ತನಗೆಂಬರು. ತುಪ್ಪಮಂ ಸುರಿಸುರಿದು. ಒಪ್ಪಿ ಹಾಲಂ ಸವಿದು ಬಸವಣ್ಣ ಬಾಳ್ಗೆಂಬರು. ಬೆಲ್ಲವತ್ತದ ಪತ್ರೆಯುಂ ನಮಗೆ ನೀಡೆಂಬ ಮಲ್ಲಿಗೆಯ ನಿಲ್ಲಿತಾ _ಸುರಿಗಿಯಂ ಸುರಿಯೆಂಬ ಜಾಡಿಯುಂ

ಮೊಲ್ಲೆಯುಂ ಬೆರಸಿ ನೀಡೆಂಬ ಹೊದರುಗಳೇಕೆ ಪೆಡ್ಡಳಿಯನೆಮಗೀಯೆಂಬ ಪನ್ನೀರ ಪುಷ್ಪ ಸಿರಿಗಂಧವಂ ಬೆರಸೆಂಬ'' ಮಾತುಗಳೇ ಎಲ್ಲೆಲ್ಲೂ ಕೇಳಿ ಬರುತ್ತಿದ್ದವು.

ಬಸವಣ್ಣನವರು ಜಂಗಮರನ್ನು ಉಪಚರಿಸುವ ರೀತಿ, ಸತ್ಕರಿಸುವ ವಿಧಾನಗಳನ್ನು ಹರಿಹರನ ಮಾತುಗಳಲ್ಲಿ ಓದಿ ಅನುಭವ ಮಾಡಿಯೇ ಅರಿಯಬೇಕು. ಕವಿ ಸ್ವತಃ ಹಂಪೆಯ ವಿರೂಪಾಕ್ಷದೇವರ ಮಹಾಭಕ್ತನಾದ್ದರಿಂದ ಅನುಭವ ರಸ ಪೂರ್ಣ ವಿಕಾಸಗೊಂಡಿದೆ.

ಅಸ್ಪೃಶ್ಯತೆಯ ನಿವಾರಣೆಗಾಗಿ ಹೋರಾಡಿದ ಕ್ರಾಂತಿಕಾರರೆಂದು ಬಸವಣ್ಣನವರು. ಅವರು ಜಂಗಮರಲ್ಲಿ ಕುಲವನ್ನರಸುತ್ತಿರಲಿಲ್ಲ. ಶೈವ ಸಂಸ್ಕೃತಿ ಎಂದರೆ ಬರಿ ಲಿಂಗಾಯತ ಮತವೆಂದಲ್ಲ. ಜಗತ್ತಿನ ಎಲ್ಲ ಜನರೂ, ಎಲ್ಲ ಪಂಗಡ, ಕೋಮಿನ ಶಿವಭಕ್ತರೂ ಬಸವಣ್ಣನವರ ಮಹಮನೆಗೆ ಬರುತ್ತಿದ್ದರು. ವೀರಶೈವ ಮತದಷ್ಟು ವೈಶಾಲ್ಯ, ಮಾನವೀಯ ದೃಷ್ಟಿ ಇನ್ನೆಲ್ಲಿಯೂ ಕಂಡುಬರದು. ಚೋಳ, ಪಾಂಡ್ಯ, ಪಲ್ಲವ, ಗೌಳ ಮಾಳವ ವಂಗ, ಬಂಗಾಳ ಲಾಳ, ಕಳಿಂಗ, ಸಿಲೋನ, ತುಳುವ, ಮಲೆಯಾಳ, ತೆಲುಗು, ತಿಗುಳು, ಬರ್ಬರ, ಸಿಂಗಣ, ಕಾಶ್ಮೀರ, ಕೇರಳ ಮುಂತಾಗಿ ಭಾರತದ ಎಲ್ಲ ಕಡೆಯಿಂದಲೂ ಎಲ್ಲ ಜಾತಿಯಿಂದಲೂ ಭಕ್ತರು ನೆರೆದು ಸಮಾಜ ಸಂಸ್ಕರಣಕ್ಕೆ ಪ್ರಯತ್ನಿಸುತ್ತಿದ್ದರು. ಈ ದೇಶಗಳೆಲ್ಲವೂ ಈಗಲೂ ಇವೆ. ವೀರಶೈವ ಪಂಥದಲ್ಲಿ ಕುಂಬಾರ ಗುಂಡಯ್ಯ, ಮಾದಿಗರ ಹರಳಯ್ಯ, ಕಿನ್ನರ ಬೊಮ್ಮಯ್ಯ, ಬ್ರಾಹ್ಮಣರ ಮಧುವರಸ ಮುಂತಾದ ಸಮಸ್ತ ಜಾತಿಯವರೂ ಇದ್ದರು. ಯಾವುದು ಸರ್ವಾಂತರ್ಯಾಮಿಯೂ, ಸರ್ವಶಕ್ತನೂ ಆದ ಭಗವಂತನ ಧರ್ಮವೋ ಯಾವುದು ಅವನ ಇಚ್ಛೆಯೋ ಅದೇ ವೀರಶೈವ ಧರ್ಮ. ಈ ಅಂಶವನ್ನು ಹರಿಹರನು ಮನಗಂಡು ತನ್ನ ಕೃತಿಯಲ್ಲಿ ರೂಪಿಸಲು ಯತ್ನಿಸಿ ಸಾಫಲ್ಯಹೊಂದಿದ್ದಾನೆ.

ಅಸ್ಪೃಶ್ಯತೆಯನ್ನು ತೊಡೆದು ಹಾಕಲೆಂದೇ ಬಸವಣ್ಣನವರು ಹೊಲೆಯನೆನಿಸಿದ್ದ ಶಿವಭಕ್ತ ಕಂಬಳಿ ನಾಗಿದೇವನ ಮನೆಗೆ ಹೋಗಿ ಉಂಡು ಬರುತ್ತಾರೆ. ಈ ಸಮಾಚಾರವನ್ನು ತಿಳಿದು ಕುಪಿತನಾದ ಬಿಜ್ಜಳನು ಶಿವಾ, ಇದು ನಿನಗುಚಿತವೆ ? " ಎಂದು ಪ್ರಶ್ನಿಸಲು — " ಎಲೇ, ಬುದ್ಧಿ

ಯಿಲ್ಲದ ಭೂಪ ನಾರಾಯಣ ಕ್ರಮಿತರ ಮನೆಯಂ ಹೊಕ್ಕೆನೆ ? ವಿಷ್ಣು ಪೆದ್ದಿಗಳ ಮನೆಯಲ್ಲಿ ಉಂಡೆನೆ? ಶಿವನನರಿಯದ ಹೊಲೆಯರ ಮನೆಯಲ್ಲಿ ಉಂಡುದಿಲ್ಲ'' ಎಂದು ಉತ್ತರ ಕೊಡುತ್ತಾರೆ.

ಅಜ್ಞಾನಿಗಳು— ''ಹೊಲೆಗಂಡಲ್ಲದೆ ಪಿಂಡದ ನೆಲೆಗಾಶ್ರಯವಿಲ್ಲ" ಎಂಬುದನ್ನು ಮರೆತು "ಸೂತಕವಿಡಿದು ಜಾತಿಯನರಸುವರು, ಜ್ಯೋತಿ ವಿಡಿದು ಕತ್ತಲೆಯನರಸುವರು." ಶ್ವಪಚನಾದರೇನು ? ಶಿವಭಕ್ತನೇ ಕುಲಜ. ನಡೆವ ನೆಲ, ಸುಡುವ ಬೆಂಕಿ, ಉಸಿರಾಡುವ ವಾಯು ಒಂದೆ ಆಗಿರುವಾಗ ವಿಷಯ ಮೈಥುನ ಬಯಕೆ, ಹಸಿವು ನೀರಡಿಕೆಗಳು ಸರ್ವ ಸಮಾನವಾಗಿರುವಾಗ ಜಾತಿ ಎಲ್ಲಿಂದ ಬಂತು ? " "ಉತ್ತಮರು ಪಾಲ್ಗಡಲೊಳೆತ್ತಿದರ ಜನ್ಮವನು ? " ಎಂದು ಮುಂತಾದ ತಮ್ಮ ದೃಷ್ಟಿಯಲ್ಲಿ ಹೇಳಿರುವ ಅಂಶಗಳನ್ನಾಯ್ದುಕೊಂಡು ಹರಿಹರಕವಿ ಒಂದೊಂದು ಪ್ರಸಂಗ ದಲ್ಲಿ ನಿರೂಪಿಸಿದ್ದಾನೆ. ಈ ಮೂಲ ಧ್ಯೇಯಕ್ಕಾಗಿಯೇ ಗಾಂಧೀಜಿಯವರು "ಹರಿಜನೋದ್ಧಾರ ಎಂಬ ಹೆಸರಿನಲ್ಲಿ ಹೋರಾಟ ನಡೆಸಿದರು. ಇದೇ ಅಭಿಪ್ರಾಯವನ್ನು ಪಂಪ ತನ್ನ "ವಿಕ್ರಮಾರ್ಜುನ ವಿಜಯ'' ದಲ್ಲಿ "ಅಣ್ಮುಕುಲಂ, ತ್ಯಾಗಕುಲಂ ಸಚ್ಚಾರಿತ್ರಂಗಳೇ ಕುಲಂ" ಎಂದು ಕರ್ಣ ನಿಂದ ಹೇಳಿಸಿದ್ದಾನೆ. ಬಸವಣ್ಣನ ವಚನಗಳ ಪೂರ್ಣ ಅನುಭವವಿದ್ದ ಸರ್ವಜ್ಞ ಕವಿಯಂತೂ ಜಾತಿಯ ವಿಚಾರದಲ್ಲಿ ಬಹು ಕಠೋರವಾಗಿ ಬರೆದಿದ್ದಾನೆ.

ಆದ್ದರಿಂದ ಕಂಬಳಿ ನಾಗಿದೇವನ ಪ್ರಕರಣದಲ್ಲಿ ವಿಶಾಲ ಪ್ರಪಂಚ ಧರ್ಮವೇ ಪ್ರತಿರೂಪಾಗಿ, ಅಪಾರ ಮಾನವೀಯತೆ ವ್ಯಕ್ತವಾಗಿದೆ.

ಪವಾಡಗಳ ವಿಚಾರದಲ್ಲಿ ಒಂದುಮಾತು. ಒಂದುಸಲ ಮಹಮ್ಮದನ ದ್ವೇಷಿಗಳಾದ ಖುರೇಷಿ ಸಂಗಡದ ಜನರು ಮಹಮ್ಮದನನ್ನು "ಪವಾಡಗಳನ್ನು ಮಾಡಿ ತೋರಿಸು. ಆಗ ನಿನ್ನ ಮಾತನ್ನು ನಂಬುತ್ತೇವೆ. ಅಂದರಂತೆ. ಅದಕ್ಕೆ ಮಹಮ್ಮದನು ಪವಾಡಗಳನ್ನು ಮಾಡಿ ತೋರಿಸಬೇಕೆ ? ಪ್ರತಿಕ್ಷಣದಲ್ಲೂ ನಿಮ್ಮೆದುರಿಗೆ ಲಕ್ಷಾಂತರ ಪವಾಡ ಗಳು ನಡೆಯುತ್ತಿದ್ದರೂ ನೋಡದೆ ಹೋದಿರಲ್ಲ. ಆಲದ ಬೀಜದಂತಹ ಸಣ್ಣ ಬೀಜವೊಂದರಿಂದ ಲಕ್ಷಾಂತರ ಜನರಿಗೆ ನೆಳಲನ್ನು ಕೊಡಲು ಸಮರ್ಥವಾದ ವಿಶಾಲ ವೃಕ್ಷ ಬೆಳೆಯುವುದು ಪವಾಡವಲ್ಲವೆ ? ಸೂರ್ಯ

ಚಂದ್ರರು ತಮ್ಮ ತಮ್ಮ ಗ್ರಹಗತಿಯನ್ನು ಬದಲಿಸದೆ ತಮ್ಮ ಪಥದಲ್ಲಿಯೆ ಸ್ವಲ್ಪವೂ ಕ್ರಮತಪ್ಪದೆ ಚಲಿಸುತ್ತಿರುವುದು ಪವಾಡವಲ್ಲವೆ? ನಿಮ್ಮಂತೆಯೆ ಸಾಮಾನ್ಯ ಮನುಷ್ಯನಾದ ನನ್ನ ಮಾತಿಗೆ ಮರುಳಾಗಿ ಲೆಕ್ಕವಿಲ್ಲದಷ್ಟು ಮಂದಿ ನನ್ನನ್ನು ಹಿಂಬಾಲಿಸುತ್ತಿರುವುದು ಪವಾಡವಲ್ಲವೆ? ಎಂದು ಹೇಳಿದರಂತೆ. ಹೀಗೆ ನಿತ್ಯ ಜೀವನದಲ್ಲಿ ನಡೆಯುವ ಭಗವಂತನ ಪವಾಡಗಳನ್ನು ಕಣ್ತೆರೆದು ನೋಡದ ಜನರಿಗೆ ಮಹಾತ್ಮನೊಬ್ಬನ ಜೀವನದಲ್ಲಿ ನಂಬಿಕೆಯುಂಟು ಮಾಡಲು ಹರಿಹರನು ಪವಾಡಗಳನ್ನು ಕಲ್ಪಿಸಿರುವದೂ ಸ್ವಾಭಾವಿಕ. ಈ ಪವಾಡಗಳಿಲ್ಲದಿದ್ದರೂ ಬಸವಣ್ಣನವರ ಘನತೆ ಕುಂದುತ್ತಿರಲಿಲ್ಲ. ಇದ್ದರೂ ಬಾಧಕವೇನಿಲ್ಲ ಅವುಗಳಲ್ಲಿ ಅಡಗಿರುವ ರಹಸ್ಯಾರ್ಥ ಜನತೆಗೆ ಹೇಳಿದರೆ ಸಾಕು.

ಒಟ್ಟಿನಲ್ಲಿ— ದೈವವಾಣಿಯು ಜನರ ಮಟ್ಟಕ್ಕಿಳಿದು ಬರುವದು ಅಸಾಧ್ಯವಾದಾಗ ಜನವಾಣಿಯನ್ನೆ ದೈವವಾಣಿಯ ಮಟ್ಟಕ್ಕೇರಿಸಲು ಪ್ರಯತ್ನಿಸಿದ ಭಕ್ತಿಭಾಂಡಾರಿ ಬಸವಂಣನವರ ಜೀವನ ತತ್ವಗಳನ್ನು ಹರಿಹರನು ಚನ್ನಾಗಿ ಅರ್ಥಮಾಡಿಕೊಂಡಿದ್ದಾನೆ. ಬಸವಂಣನವರ ಹೃದಯ ಚೆನ್ನಾಗಿ ಅರ್ಥವಾಗಿರುವುದು ಹರಿಹರ ಕವಿಗೆ ಮಾತ್ರವೆ ಎಂದರೂ ತಪ್ಪಲ್ಲ. ಪಂಡಿತ ಶೈಲಿಗಾಗಲಿ ವರ್ಣನೆ ಅಲಂಕಾರ ಪಾಂಡಿತ್ಯ ಪ್ರದರ್ಶನ ಮತ ಚರ್ಚೆಗಾಗಲಿ ಗಮನಕೊಡದೆ ಸರಳವಾದರೂ ಸುಂದರವೂ ಆಕರ್ಷಕವೂ ಅರ್ಥಪೂರಿತವೂ ಆಗಿರುವ ರೀತಿಯಲ್ಲಿ ಕೃತಿ ರಚಿಸಿದ್ದಾನೆ. ಬಲಕ್ಕಿಂತ ಹೆಚ್ಚಾಗಿ ಬೊಜ್ಜನ್ನು ಮೆಚ್ಚಿ ಬೆಳಸಿಲ್ಲ. ಕಾವ್ಯಗಳಲ್ಲಿ ಜೊಂಡಿನಂತೆ ಬೆಳೆದು ಬಂದಿದ್ದ ಅಷ್ಟಾದಶ ವರ್ಣನೆಗಳನ್ನು ಕೈಬಿಟ್ಟಿದ್ದಾನೆ. ಕವಿಗೆ ಹೆಚ್ಚಿನ ಸಂಸ್ಕೃತಿ ಭಕ್ತಿಪ್ರಿಯತೆ, ಸಾತ್ವಿಕ ಜೀವಾನುಭವ ಇರದಿದ್ದರೆ ಮಹಾತ್ಮರ ಚರಿತ್ರೆಯನ್ನು ಅನುಭವಿಸಿ ರೂಪಿಸಲಾರ. ಆದ್ದರಿಂದ ಕಾವ್ಯದ ಮೂಲಕ ಕವಿಯೂ ಕವಿಯ ಮೂಲಕ ಕಾವ್ಯವೂ ಪರಸ್ಪರ ಪ್ರತಿಬಿಂಬಿತವಾಗಿವೆ. ಹರಿಹರನ “ಬಸವರಾಜದೇವರ ರಗಳೆ” ಕಥಾನಾಯಕ ಬಸವಂಣನವರು ಶರಣ ಸಾಹಿತ್ಯದಲ್ಲೊಂದು ರಸಘಟ್ಟಿ. ಇಂತಹ ಕೃತಿಗಳಿಂದ ನಾಡು ಧನ್ಯ ನುಡಿ ಧನ್ಯ.

# ಉಡುತಡಿಯ ಮಹಾದೇವಿಯಕ್ಕಗಳ ಸಂಪಾದನೆ

(ಲೇ. ಶ್ರೀ ಶಿವಾನಂದಸ್ವಾಮಿಗಳು ಗವಿಮಠ ತೆಗ್ಗಿಹಳ್ಳಿ (ಇಂಡಿ) )

ಅಕ್ಕಗಳು ಅನೇಕ ವಿಧವಾಗಿ ಪವಿತ್ರ ಕಲ್ಯಾಣ ಪಟ್ಟಣವನ್ನು ಬಣ್ಣಿಸುತ್ತ ಒಳಗೆ ಪ್ರವೇಶಮಾಡಿ ಬರುತ್ತಿರುವಾಗ ಬಸವರಾಜದೇವರ ಮಹಾಮಹಿಮೆಯನ್ನು ಕೆಳಗಿನಂತೆ ಹಾಡಿರುವಳು.

ಅಕ್ಕಗಳು — ಅಯ್ಯ ನಿಮ್ಮ ಶರಣರು ಮೆಟ್ಟಿದ ಧರೆ ಪಾವನವಯ್ಯ! ಅಯ್ಯ ನಿಮ್ಮ ಶರಣರು ಇದ್ದ ಪುರವೆ ಕೈಲಾಸವಯ್ಯ! ಅಯ್ಯಾ ನಿಮ್ಮ ಶರಣರು ನಿಂದುದೆ ನಿಜವಾಸವಯ್ಯ! ಚನ್ನಮಲ್ಲಿಕಾರ್ಜುನಯ್ಯ ನಿಮ್ಮ ಶರಣ ಬಸವಣ್ಣನಿದ್ದ ಕ್ಷೇತ್ರ ಅವಿಮುಕ್ತ ಕ್ಷೇತ್ರವಾಗಿ ಆನು ಬಸವಣ್ಣನ ಶ್ರೀಪಾದಕ್ಕೆ ನಮೋ ನಮೋ ಎನುತಿರ್ದೆನು ॥೫॥

ಭಾವಃ— ದೇವ ನಿಮ್ಮ ಶರಣರು ತುಳಿದ ಭೂಮಿ ಪಾವನವು. ನಿಮ್ಮ ಶರಣರು ಇರುವ ಪಟ್ಟಣವು ಕೈಲಾಸವು. ( ಶಿವವಾಸಸ್ಥಾನವು ) ನಿಮ್ಮ ಶರಣರು ನಿಂದುದೆ ನಿಜ. (ಸತ್ಯ ಶುದ್ಧ, ಪವಿತ್ರ) ವಾಸಸ್ಥಾನವು. ಚನ್ನಮಲ್ಲಿಕಾರ್ಜುನಯ್ಯ ನಿಮ್ಮ ಶರಣನಾದ ಬಸವಣ್ಣನಿದ್ದ ಈ ಪುಣ್ಯ ಭೂಮಿಯೇ ಅವಿಮುಕ್ತವೆಂಬ ಹೆಸರಾಂತ ಕ್ಷೇತ್ರವಾಗಿರುವದು. ಅದಕ್ಕೆ ನಾನು ಇಂಥ ಬಸವಣ್ಣನ ದುಂಗಳಕರವಾದ ಪವಿತ್ರ ಪಾದಗಳಿಗೆ ಸದಾ ನಮೋ ನಮೋ ಎನುತಿರ್ದೆನು.

ಟೀಕೆಃ— ಶರಣರು— ದೇವ ಮಾನವರು ಮಾನವರಾಗಿ ಜನಿಸಿದರೂ ದೇವರಾದವರು ಮಾನವನ ಯಾವತ್ತೂ ಗುಣಧರ್ಮಗಳನ್ನು ತ್ಯಜಿಸಿ, ಪರಮಾತ್ಮನಿಗೆ ಸಂಪೂರ್ಣ ಶರಣಾಗತರಾಗಿ ಬಾಳುತ್ತಿರುವರು. ಇಂಥ ಶರಣರು (ದೇವ ಮಾನವರು) ಇರುವ ಸ್ಥಾನದ ಸುತ್ತಲಿನ ವಾತಾವರಣವೇ ಸಕಲ ರೀತಿಯಿಂದ ಬದಲಾವಣೆ ಹೊಂದಿರುವದು. ಎಂಥ ದುಷ್ಟನೂ ಕೂಡ ಶಿಷ್ಯನಾಗುವನು. ವೈರಿ ಪ್ರಾಣಿಗಳೂ ಕೂಡ ತಮ್ಮ ವೈರ ಭಾವವನ್ನು ಬಿಟ್ಟು ಪ್ರೇಮದಿಂದಲೇ ಇರುವವು. ಅಲ್ಲಿಯ ಬಾಳು ಸಮಬಾಳು ಶಾಂತಿ ಸದಾ ನೆಲಿಸಿರುವದು. ಹೀಗಾಗಿ ಸಕಲವೂ ಒಳ್ಳೇ ಪವಿತ್ರವಾಗಿ ಅಲ್ಲಿ ಪರಿಣಮಿಸಿರುವದು. ಅದಕ್ಕೆ ಕಲ್ಯಾಣವು ಪಾವನ, ಕೈಲಾಸ, ನಿಜ

ವಾಸ, ಅವಿಮುಕ್ತ ಕ್ಷೇತ್ರ ಎಂದು ಹೊಗಳಿದ್ದಾಳೆ. ಬಸವಣ್ಣನ ಶರೀರವೇ ಅವಿಮುಕ್ತ ಕ್ಷೇತ್ರವಾಗಿತ್ತು. ಇಂಥ ಪವಿತ್ರ ಪೂಜ್ಯ ಪುಣ್ಯ ಶರೀರದ ಮಹಾ ಮಂಗಳಮಯ ಪಾದಗಳನ್ನು ಬಣ್ಣಿಸುವದು ಅಸಾಧ್ಯವಾಗಿತ್ತು. ಅವುಗಳಿಗೆ ಶ್ರೀಪಾದಗಳೆಂದು ಅಂದಿರುವಳು. ಯಾವತ್ತೂ ದಿವ್ಯ ಭವ್ಯ ಶಕ್ತಿಗಳಿಂದ ಪರಿಪೂರ್ಣ ತುಂಬಿಕೊಂಡಿರುವ ಪಾದಗಳು. ಪಾದಗಳಲ್ಲಿ ಚಿಚ್ಛಕ್ತಿಯು ಪರಿಪೂರ್ಣ ಹರಿದು ಬರುತ್ತಿರುವದು ಎಂದು ಭಾವ. ಕುಂಡಲಿನಿ ಶಕ್ತಿ ದೇವಮಾನವರಲ್ಲಿ ಸಂಪೂರ್ಣ ಜಾಗ್ರತವಾಗಿ ಆರು ಚಕ್ರಗಳಲ್ಲಿ ಹಾಯ್ದು ಬ್ರಹ್ಮರಂಧ್ರದಲ್ಲಿ ಹೊಕ್ಕು ಸಹಸ್ರದಳದಲ್ಲಿ ವಿರಾಜಿಸಿ ಪಶ್ಚಿಮ, ಶಿಖಾ, ಅಣುಚಕ್ರಗಳಗುಂಟ ಹಾಗು ಈಡಾ ಪಿಂಗಳದಗುಂಟ ಇಂದು ಪಾದುಗಳಲ್ಲಿ ಹರಿದು ಬಂದು ಹೆಬ್ಬೆರಳಿನ ಮುಖಾಂತರ ಹೊರ ಹೊಮ್ಮುತ್ತಿರುವದು. ಇಂಥ ಪಾದಗಳು ತಿರುಗಾಡಿದಂಥ ಯಾವತ್ತೂ ಭೂಮಿಯು ಪವಿತ್ರ ಪುಣ್ಯ ಕ್ಷೇತ್ರವಾಗುವದರಲ್ಲಿ ಸಂದೇಹವಿಲ್ಲ. ಕಲ್ಯಾಣದಲ್ಲಿ ಇಂಥ ಅನೇಕ ಶಿವಶರಣರು ಇದ್ದುದರಿಂದ ಅದು ಒಳ್ಳೇ ಪುಣ್ಯ ಕ್ಷೇತ್ರ ಭೂಕೈಲಾಸವೆನಿಸಿತ್ತು. ಪವಿತ್ರವಾದ ಇಂಥ ಪಾದಗಳೇ ಶ್ರೀಪಾದಗಳು. ಅಂದರೆ ಬಸವಣ್ಣನು ಎಂಥ ದೇವಮಾನವನಿದ್ದನೆಂಬುದನ್ನು ವಾಚಕರು ತರ್ಕಿಸಲಿ. ಇವನೇ ಗುರು, ಇವನೇ ಲಿಂಗ, ಇವನೇ ಜಂಗಮ, ಇವನೇ ದೇವಮಾನವ. ಇಂಥ ಬಸವಣ್ಣನು ಭಕ್ತಿಭಾಂಡಾರಿ ಎನಿಸಿದ್ದನ್ನು ಅಂದಮೇಲೆ ಭಕ್ತಿಯೇ ಸಕಲಕ್ಕೂ ಅಧಿಕವೆಂದಂತಾಯಿತು. ಇಂಥ ಭಕ್ತಿಯೇ (ಪ್ರೇಮವು) ದೇವನು. ಆ ದೇವನೇ ಪ್ರೇಮಮಯನು. ಭಕ್ತಿಪೂರ್ಣನು? ಆದಕ್ಕೆ ದೇವನು ಭಕ್ತರ ಅಡಿಯಾಳಾಗುವನು. ಭಕ್ತನು ಭಕ್ತನೆನಿಸ್ವನು. ಬಸವಣ್ಣನು ದಿವ್ಯ ಭವ್ಯ ಶ್ರೇಷ್ಠ ದೇವಮಾನವನಾದರೂ ಯಾವತ್ತೂ ಭಕ್ತಿಗೆ ಪ್ರತಿಯಾಗಿ ಭಕ್ತಿಯನ್ನು ದೇವನಂತೆಯೇ ಮಾಡಿದ್ದರಿಂದ ಭಕ್ತಿಭಾಂಡಾರಿ ಎನಿಸಿದನು. ಇವನು ಭಕ್ತನಾಗಿ ಗುರುವರ್ಗಕ್ಕೆ ಭಕ್ತಿ ಮಾಡಲಿಲ್ಲ. ದೇವನಾಗಿ ಭಕ್ತರಿಗೆ ಭಕ್ತಿ ಮಾಡಿದನು. ಇದೇ ದೇವರ ಕರ್ತವ್ಯವಾಗಿರುವದು. ದೇವನು ಭಕ್ತರ ಭಕ್ತ, ಆಳಿನ ಆಳು ಎಂದು ಹೇಳುವದರ ಇತ್ಯರ್ಥವೇ ಇದಾಗಿರುವದು. ಈಗಿನ ಅಯ್ಯಗಳು ಬಸವನ ಈ ವಿಶಾಲ ತತ್ತ್ವವನ್ನು ತಿಳಿಯದೆ ಈಗಿನ ಭಕ್ತವರ್ಗದವರಿಗೆ ತಮ್ಮ ಭಕ್ತಿಮಾಡಿ ಸೇವೆ ಮಾಡಿರೆಂದು ಹೇಳುತ್ತಿರುವರು. ಇದು ಶುದ್ಧ ತಪ್ಪು. ಹೀಗಾದರೆ ಬಸವಣ್ಣನಿಗೆ ಮಹತ್ವ ಬರುವದಕ್ಕಿಂತ ಆ ಅಯ್ಯಗಳಿಗೇ ಬರುತ್ತಿತ್ತಲ್ಲವೆ? ಪ್ರಭುದೇವ, ಚನ್ನಬಸವ ಮೊದ

ಲಾದ ಸಕಲ ಶಿವಶರಣರು ಬಸವಣ್ಣನಿಗೆ ಇಷ್ಟು ಹಿರಿತನ ಮಹತ್ವದ ಸ್ಥಾನವನ್ನು ಕೊಟ್ಟ ಕಾರಣವನ್ನು ವಿಚಾರಿಸಿರಿ. ಅಕ್ಕನೂ ಕೂಡ ಎಲ್ಲ ಶರಣರನ್ನು ಬಿಟ್ಟು ಬಸವಣ್ಣನ ಶ್ರೀಪಾದಗಳಿಗೇ ನಮೋ ನಮೋ ಎನ್ನುವ ಕಾರಣವೇನು? ಎಲ್ಲರೂ ಮುಕ್ತಕಂಠದಿಂದ ಬಸವಣ್ಣನನ್ನು ವರ್ಣಿಸುವದಾದರೂ ಯಾತರ ಸಲುವಾಗಿ? ಅವನು ಒಳ್ಳೇ ಉಚ್ಚ ಸ್ಥಾನಕ್ಕೆ ಹೋಗಿ ಭಕ್ತರ ಭಕ್ತನಾದುದು, ಆಳಿನ ಆಳಾದುದು ಕಾರಣವೇ ಹೊರತು ಬೇರೆ ಇಲ್ಲ. ಅವಿಮುಕ್ತಕ್ಷೇತ್ರ ಸ್ವಾತಂತ್ರ್ಯವಿರದಂಥ ಭೂಮಿ (ಶರೀರ) ಇಂದ್ರಿಯ ಸ್ವಾತಂತ್ರ್ಯವಿರದಂಥ ಶರೀರ ಅಂದರೆ ಪಾರತಂತ್ರ್ಯವಾದ ಶರೀರದಲ್ಲಿ ಸ್ವಾತಂತ್ರ್ಯವಾದ ಆತ್ಮದೇವನಿದ್ದನೆಂದು ಭಾವ. ಅಂದರೆ ಬಸವಣ್ಣನು ಸಂಪೂರ್ಣ ಆತ್ಮಸ್ವಾತಂತ್ರ್ಯ ಪಡೆದಿದ್ದನೆಂದು ಅರ್ಥ. "ಹತ್ತರೊಳಗೆ ಹನ್ನೊಂದಾಗಿ ನೀರ ತಾವರೆಯಂತಿಪ್ಪೆನೆಂದು" ಅಕ್ಕನು ಹಾಡಿದಂತೆ ಬಸವಣ್ಣನು ಶರೀರ ಸ್ವಾತಂತ್ರ್ಯದವನಲ್ಲಿ ಆತ್ಮಸ್ವಾತಂತ್ರ್ಯದವನೆಂದು ಭಾವ.

ಈ ಪ್ರಕಾರ ಅಕ್ಕಗಳು ಬಸವನ ಮಹಿಮೆಯನ್ನು ಕೊಂಡಾಡುತ್ತ ಬಸವದೇವರ ಮನೆಗೆ ಹೋಗಿ ನೋಡಲಾಗಿ ಅಲ್ಲಿ ಪ್ರಭುದೇವ ಮೊದಲಾದ ಅನೇಕ ಶಿವಶರಣರ ಸಮೂಹದಲ್ಲಿ ಪರಮಾನಂದದಲ್ಲಿ ಇರುವಂಥ ಸಂಗನಬಸವಣ್ಣನ ಶ್ರೀಮೂರ್ತಿಯನ್ನು ಕಂಡು ಕೆಳಗಿನಂತೆ ಹಾಡಿದಳು—

ಅಕ್ಕ:— ಅರಸಿ ತೊಳಲಿದರಿಲ್ಲ. ಬಯಸಿ ಹೊಕ್ಕರಿಲ್ಲ. ತಪಸ್ಸು ಮಾಡಿದರಿಲ್ಲ. ಅದು ತನ್ನ ಮಹಾ ಕಾಲಕ್ಕಲ್ಲದೆ ಸಾಧ್ಯವಾಗದು. ಶಿವನೊಲಿದಲ್ಲದೆ ಕೈಗೂಡದು. ಚನ್ನಮಲ್ಲಿಕಾರ್ಜುನನೆನಗೊಲಿದನಾಗಿ ನಾನು ಸಂಗನಬಸವಣ್ಣನ ಶ್ರೀಪಾದ ಕಂಡು ಬದುಕಿದೆನು ||೬||

ಭಾವ:— ಪರಮಾತ್ಮನ ದರ್ಶನಕ್ಕಾಗಿ ಎಷ್ಟು ಕಷ್ಟಬಟ್ಟರೂ ಆಗಲಿಲ್ಲ. ಅದಕ್ಕಾಗಿಯೇ ಬಯಸಿ ಬಯಸಿ ಅರಣ್ಯದಲ್ಲಿ ಹೊಕ್ಕರೂ ಸಾಧಿಸಲಿಲ್ಲ. ಬಗೆಬಗೆಯಿಂದ ತಪವನ್ನು ಮಾಡಿದರೂ ದೊರಕಲಿಲ್ಲ. ಅದು ಮಾತ್ರ ತಾನಾಗಿಯೇ ಬರುವ ಕಾಲಕ್ಕೆ ಬರುವದು. ಶಿವನು ಒಲಿಯಲಾರದೆ ಆ ಕಾಲ ಬರುವದಿಲ್ಲ, ಅದು ಕೈಗೂಡುವದೂ ಇಲ್ಲ. ಚನ್ನಮಲ್ಲಿಕಾರ್ಜುನು ತನಗೆ ಒಲಿದದ್ದರಿಂದ ಮಾತ್ರ ಸಂಗನಬಸವಣ್ಣನ ಶ್ರೀಪಾದ ಕಂಡಕೂಡಲೇ ಪರಮಾತ್ಮನ ದರ್ಶನವಾದಂತೇ ಆಗಿ ತಾನು ಬದುಕಿದಳೆಂದು ಅಂದಿರುವಳು.

ಟೀಕೆ:— ಪ್ರೇಮಪೂರಿತನಾದ ಪರಮಾತ್ಮನ ದರ್ಶನವು ಮಾತ್ರ ಅರಣ್ಯದಲ್ಲಿ ಹೋಗಿ ತಪಮಾಡಿದರಾಗಲಿ ಅನೇಕ ಬಗೆಯ ಕಷ್ಟಕರವಾದ

ಸಾಧನೆಯ ಮಾಡಿದರಾಗಲೀ ಸಾಧಿಸುವದಿಲ್ಲ. ಆದರೆ ಪ್ರೇಮುವ ಪಾತ್ರಿಯಾದ ಪರಮಾತ್ಮನು ಪ್ರೇಮಕ್ಕೆ (ಭಕ್ತಿಗೆ) ಮಾತ್ರ ಸಾಧ್ಯವೆಂದು ಹೇಳಿರುವಳು. ಶಿವನು ಒಲಿಯಲಾರದೆ ಯಾವದೂ ಸಾಧಿಸುವದಿಲ್ಲ. ಆದರೆ ಅವನು ಒಲಿಯಲು ಒಲುಮೆಯೇ ಬೇಕು. ಅವನು ಈಗ ಒಲಿದದ್ದರಿಂದಲೇ ಅವಳಿಗೆ ಬಸವಣ್ಣನ ಮಂಗಳಮಯವಾದ ಪಾದವನ್ನು ಕಂಡು ಪರಮಾನಂದಭರಿತಳಾದಳು. ದೇವನ ದರ್ಶನಕ್ಕಾಗಿ ಕಷ್ಟದಲ್ಲಿ ತೊಳಲಿ ಬಳಲಿ ಸಾಯುತ್ತಿರುವ, ಸಾಧಿಸದಿದ್ದರೆ ಸಾಯುಬೇಕೆನ್ನುವ ಅಕ್ಕನು ಬಸವನ ಮಂಗಳಕರವಾದ ಶ್ರೀಪಾದ ಕಂಡಕೂಡಲೆ ಪರಮಾತ್ಮನ ದರ್ಶನವಾದಂತೆ ಆಗಲಾಗಿ ಆಕೆ ಸಾಯುಬೇಕೆನ್ನುವ ವಿಚಾರವನ್ನು ಬಿಟ್ಟು ಇನ್ನು ಬದುಕಬೇಕು ಬಾಳಬೇಕು, ಎಂದು ಆಕೆಯ ಮನದಲ್ಲಿ ಹುಟ್ಟಿತು. ಬೇಡಿಬಯಸುತ್ತಿರುವದು ದೊರೆತ ಕೂಡಲೆ ಆನಂದವಾಗುವದು. ಆದಕಾರಣ ಬದುಕುವ ಆಶೆ ಆಯಿತು.

ಪರಮಾತ್ಮನ ದರ್ಶನವು ಭಕ್ತನಿಗೆ ಸಾಯುವ ಪರಿಸ್ಥಿತಿ ಬಂದಾಗ ದರ್ಶನವಾಗುವದೆಂದು ತೋರುವದು. ಅನೇಕ ಭಕ್ತರಿಗೆ ಹೀಗಾಗದೆ ಸಿದ್ಧರಾಮನು ಕೊಳ್ಳದಲ್ಲಿ ದುಮುಕಿದಾಗ ಪರಮಾತ್ಮನ ದರ್ಶನವಾಯಿತು. ಶ್ರೀರಾಮಕೃಷ್ಣ ಪರಮಹಂಸರಿಗೆ ಜಗನ್ಮಾತೆಯು ಹತ್ತರದ ಕತ್ತಿಯನ್ನು ತಕ್ಕೊಂಡು ಕಡಿದುಕೊಳ್ಳಹೋಗಲು ದರ್ಶನವಾಯಿತು. ನಮ್ಮ ತೆಗ್ಗಿಹಳ್ಳಿಯ ಶ್ರೀಸಿದ್ಧಲಿಂಗದೇವರಿಗೂ ಕತ್ತಿಯಿಂದ ಇರಿದುಕೊಳ್ಳಹೋಗಲು ದರ್ಶನವಾಯಿತು. ಹೀಗೆ ಅನೇಕರಿಗೆ ಆಗಿರುವದೆಂದು ಇತಿಹಾಸದಿಂದ ಕಂಡುಬರುವದು. ಕೋಳೂರ ಕೊಡಗೂಸು, ಗೊಲ್ಲಾಳ ಮುಂತಾದವರ ಉದಾಹರಣೆಗಳುಂಟು. ಇದನ್ನು ಕಂಡ ಕೆಲ ಮೂಢಭಕ್ತರು ದೇವನ ದರ್ಶನಕ್ಕಾಗಿ ಸತ್ತ ಉದಾಹರಣೆಗಳುಂಟು. ಇದು ತರವಲ್ಲ. ದೇವನಿಗಾಗಿ ಭಕ್ತಿಯ ಹುಚ್ಚು ಹಿಡಿದಾಗ ಕಾತರನಾಗಿ ಶರೀರ ಪರಿವೆ ಇಲ್ಲದೆ ಸಾಯುವೆನೆಂಬ ಕಲ್ಪನೆ ಇಲ್ಲದೆ ಅವರೆಲ್ಲ ಹಾಗೆ ಮಾಡಿದ್ದರಿಂದ ದೇವನು ದರ್ಶನ ಕೊಟ್ಟಿರುವನು. ತತ್ವವನ್ನು ತಿಳಿಯಲಾರದೆ ಆ ಸ್ಥಿತಿಗೆ ಮುಟ್ಟಲಾರದೆ ಡಾಂಭಿಕ ಭಕ್ತರು ಕೀರ್ತಿಗಾಗಿ ಮೂಢತನದಿಂದ ಒಳ್ಳೇ ದೊಡ್ಡ ಭಕ್ತರೆನಿಸಿಕೊಳ್ಳಲು ಸಾಯಲಿಕ್ಕೆ ಹೋದಂತಾಗುವದು. ಇದು ನಾಟಕದಲ್ಲಿ ಪಾರ್ಟ ಮಾಡಿದಂತೆ ಆಗುವದು. ಇದು ನಿಜಭಕ್ತಿಯಲ್ಲ. ನಿಜಭಕ್ತಿಯಲ್ಲಿ ಸ್ವಾಭಾವಿಕವಾಗಿ ಎಲ್ಲ ಸ್ಥಿತಿಗತಿಗಳು ತಾವಾಗಿಯೇ ಘಟಿಸುವವು. ಅದಕ್ಕೆ ಪರಮಾತ್ಮನು ಒಲಿಯುವನು. ಉಳಿದ ಡಾಂಭಿಕ ಭಕ್ತನು ವ್ಯರ್ಥ ಬಹು

ತೊಳಲುವನು, ಕಷ್ಟಕ್ಕೀಡಾಗುವನು, ಬಳಲುವನು. ಆದಕಾರಣ ಡಾಂಭಿಕ ಭಕ್ತರು ದೇವನಿಗಾಗಿ ಸಾಯಲಿಕ್ಕೆ ಯತ್ನಿಸಿದರೂ ಆತನು ದರ್ಶನ ಕೊಡುವದಿಲ್ಲ. ಆದರೆ ಅಭಿಮಾನಕ್ಕೆ ಬಿದ್ದು ಸಾಯುವರು.

ಚನ್ನಮಲ್ಲಿಕಾರ್ಜುನನೆಂದು ಅಕ್ಕನ ವಚನದ ಮುದ್ರಿಕೆ, ಅಂಕಿತ ವಿರುವದು. ಇದರಲ್ಲಿ ಚನ್ನ+ಮಲ್ಲಿಕಾ+ಅರ್ಜುನ ಎಂದು ಮೂರು ಪದಗಳು. ಮಲ್ಲಿಕಾ=ಮಲ್ಲಿಗೆಯ ಬಳ್ಳಿ. ಅರ್ಜುನ=ಅರ್ಜುನವೆಂಬ ಗಿಡ. ಮಲ್ಲಿಗೆಯ ಬಳ್ಳಿ ಸ್ತ್ರೀವಾಚಕ ಅಂದರೆ ಶಕ್ತಿಯನ್ನು ಬೋಧಿಸುವದು. ಅರ್ಜುನ=ಪುರುಷವಾಚಕ ಅಂದರೆ ಪುರುಷನನ್ನು ಶಿವನನ್ನು ಬೋಧಿಸುವದು. ಮಲ್ಲಿಕಾರ್ಜುನ ಪದವು ಶಕ್ತಿ ಶಿವ ಇವರ ಅವಿನಾಭಾವ ಸಂಬಂಧವನ್ನು ಬೋಧಿಸುವದು. ಅರ್ಜುನ ವೃಕ್ಷವನ್ನು ಮಲ್ಲಿಗೆ ಬಳ್ಳಿಯು ಸುತ್ತುವರಿದು ಆಶ್ರಯಿಸುವಂತೆ ಅರ್ಜುನವು ಆಧಾರವಾಗಿರುವದು. ಮಲ್ಲಿಕಾ ಆಧೇಯವಾಗಿರುವದು. ಆದಕ್ಕೆ ಚನ್ನಮಲ್ಲಿಕಾರ್ಜುನನೆಂದರೆ ಒಳ್ಳೇಪರಿಪೂರ್ಣವಾದ ಶಿವಶಕ್ತಿಯರೇ ಎಂದು ಅಂಬಂತೆ ಆಗುವದು. ಈ ಪದವು ಒಳ್ಳೇ ಭಕ್ತಿ ಜ್ಞಾನಗಳ ಬೆಸುಗೆಯನ್ನು ಸೂಚಿಸುವದು. ನಾ—ನೀ ಗಳ ಬೆಸುಗೆಯನ್ನು ಸೂಚಿಸುವದು. ಅಂದರೆ ಪರಮಾತ್ಮನಲ್ಲಿ ತಾನು ಒಂದಾಗಿದ್ದೇನೆಂದು ಸೂಚಿಸುವಳು.

ಅಕ್ಕ:— ಅಯ್ಯಾ ನಿಮ್ಮ ಸಜ್ಜನ ಸದಾಚಾರವ ಕಂಡೆನಾಗಿ ಎನ್ನ ಕಂಗಳ ಪಟಲ ಹರಿಯಿತ್ತೆಂದು. ಅಯ್ಯಾ ನಿಮ್ಮ ಸಜ್ಜನ ಸದ್ಭಾವರ ಶ್ರೀಚರಣಕ್ಕೆರಗಿದೆನಾಗಿ ಎನ್ನ ಹಣೆಯ ಲಿಖಿತ ತೊಡೆಯಿತ್ತೆಂದು ಚನ್ನಮಲ್ಲಿಕಾರ್ಜುನ ನಿಮ್ಮ ಶರಣ ಸಂಗನಬಸವಣ್ಣನ ಪಾದವ ಕಂಡು ಮಿಗೆ ಮಿಗೆ ನಮೋ ನಮೋ ಎನುತಿರ್ದೆನು ॥೭॥

ಮೇಲಿನ ಈ ಮೂರೂ ವಚನಗಳಲ್ಲಿ ಸಾಮಾನ್ಯವಾದ ತತ್ವವನ್ನು ಹೇಳಿ ಆ ತತ್ವಕ್ಕೆ ಬಸವಣ್ಣನೇ ಹೇಗೆ ಹೆಚ್ಚಾಗಿ ಹೊಂದಿಕೊಂಡಿರುವನೆಂದು ತಿಳಿಸಿರುವಳು.

ಭಾವ:— ಸಜ್ಜನರ ಸತ್ಯ ಆಚಾರ ಕಂಡು ಎನ್ನ ಅಜ್ಞಾನಾಂಧಕಾರ ಹೋಯಿತು. ಸಜ್ಜನ ಸತ್ಯ ಭಾವನೆಯವರನ್ನು ನೋಡಿ ಅವರ ಶ್ರೀಪಾದಗಳಿಗೆ ಎರಗಲಾಗಿ ಎನ್ನ ಮೊದಲಿನ ಹಣೆಯ ಬರಹ ಬದಲಾಯಿಸಿತು. ಪರಮಾತ್ಮನೇ ! ನಿಮ್ಮ ಶರಣ ಸಂಗನ ಬಸವಣ್ಣನ ಶ್ರೀಪಾದಗಳನ್ನು ಕಂಡು ಪುನಃ ಪುನಃ ನಮೋ ನಮೋ ಎನುತಿರ್ದೆನು.

ಟೀಕೆ:— ಸತ್ ಸಂಗದಿಂದ ಮಾನವನ ಕಣ್ಣುಗಳಿಗೆ ಮುಸುಕಿದ ಮಾಯಾ ಪಟಲವು ಸ್ವಾಭಾವಿಕವಾಗಿ ಹಾರಿ ಹೋಗುವದು. ಈ ಮಾಯಾ ಪಟಲ ಇರುವದರಿಂದ ದುಃಖವು ಸುಖವಾಗಿ, ಕೆಡಕು ಒಳಿತಾಗಿ, ಅಹಿತವು ಹಿತವಾಗಿ ಅನ್ಯಾಯವು ನ್ಯಾಯವಾಗಿ, ಅಸತ್ಯವು ಸತ್ಯವಾಗಿ ಕಾಣಿಸಿ ಮೋಹಗೊಂಡು ಭಯಾನಕವಾದ ವಿಷಯವೆಂಬ ದುಃಖದಲ್ಲಿ ಹಿಂದಿನಿಂದ ಬೀಳುವನು. ಅಧರಕ್ಕೆ ಸಿಹಿಯಾದುದು ಉದರಕ್ಕೆ ಕಹಿಯಾಗುವದು. ಅಧರಕ್ಕೆ ಕಹಿಯಾದುದು ಉದರಕ್ಕೆ ಸಿಹಿಯಾಗುವದು. ಇದೇ ಮಾಯೆಯ ಆಟ. ಇದರಿಂದಲೇ ಕಂಗಳಿಗೆ ಮಾಯಾ ಪಟಲ ಮುಸುಕಿ ಈ ಜಗವು ಇದ್ದ ಹಾಗೆ ಕಾಣಿಸದೆ ವಿಪರೀತ ಕಾಣುವದು. ಮಿಥ್ಯವು ಸತ್ಯವಾಗಿ ತೋರುವದು. ಈ ಮಾಯಾ ಪಟಲವು ಸತ್ ಸಂಗದಿಂದ ಶರಣರ ಸಹವಾಸದಿಂದ ದೇವ ಮಾನವರ ದರ್ಶನ ಸ್ಪರ್ಶನ ಪಾದಸೇವನ ಮೊದಲಾದವುಗಳಿಂದ ಹರಿದು ಹೋಗುವದು. ಆಗ ಇದ್ದದ್ದು ಇದ್ದಂತೇ ಮಾತ್ರ ಕಾಣುವದು. ಪೂರ್ವ ಜನ್ಮದ ಅನೇಕ ಪಾಪಗಳ ಮೂಲಕ ಈ ಜನ್ಮದ ಹಣೆಯ ಬರಹವು ಕೂಡ ಶರಣರ (ದೇವ ಮಾನವರ) ಪಾದಕ್ಕೆ ಹಣೆಹಚ್ಚಿ ಎರಗಿದರೆ ಆ ದುಷ್ಟ ಹಣೆಯ ಬರಹವೂ ಕೂಡ ಪಲ್ಲಟಿಸುವದು. ಅದಕ್ಕನುಗುಣವಾಗಿ ಅಕ್ಕನು ನಿಮ್ಮ ಶರಣರಲ್ಲಿ ಮಿಗಿಲಾದ ಶ್ರೀ ಬಸವಣ್ಣನ ಶ್ರೀಪಾದವ ಕಂಡು ಸದಾ ನಮೋ ನಮೋ ಎನ್ನುತ್ತಿರುವಳು. ಇದರಿಂದ ಬಸವಣ್ಣನ ಶ್ರೀಮೂರ್ತಿ ಹಾಗೂ ಶ್ರೀಪಾದಗಳ ಧ್ಯಾನದಿಂದ ತನ್ನ ಪೂರ್ವಜನ್ಮದ ಕರ್ಮಬಂಧನವು ಹರಿದು ಪುನರ್ಜಾತಳಾಗಿ ಸಮ್ಯಕ್‌ಜ್ಞಾನಿಯಾದೆನೆಂದು ಬಸವನ ಮಹಾ ಮಹಿಮೆಯನ್ನು ಕೊಂಡಾಡಿರುವಳು. ಇದರಿಂದ ಸಜ್ಜನರ ಸಹವಾಸ ಅರ್ಥಾತ್ ಸತ್‌ಸಂಗದ ಮಹಿಮೆಯನ್ನು ಅಕ್ಕನು ಸ್ವಲ್ಪದರಲ್ಲಿ ಹಾಡಿದ್ದಾಳೆ. ಕಲ್ಯಾಣದಲ್ಲಿ ಅನೇಕ ಸಜ್ಜನರಿದ್ದರೂ ಅದರಲ್ಲಿ ಬಸವಣ್ಣನೇ ಹೆಚ್ಚಿನ ಶರಣನೆಂದು ಈ ವಚನಗಳಲ್ಲಿ ಎದ್ದು ಕಾಣುವದು. ಉಳಿದ ಶರಣರ ಪಾದಸ್ಪರ್ಶದಷ್ಟೇ ಕಾರ್ಯವು ಶ್ರೀ ಬಸವಣ್ಣನ ಶ್ರೀಪಾದ ಧ್ಯಾನದಿಂದ ಸಹಜ ಆಗುವದೆಂದು ಅವನ ಪಾದಗಳ ಶ್ರೇಷ್ಠತೆಯನ್ನು ಹೇಳಿರುವಳು. ಇಷ್ಟು ದಿನ ಜಪ ತಪ ಅರಣ್ಯವಾಸ ಮೊದಲಾದ ಕಷ್ಟ ಸಾಧನೆಗಳಿಂದ ಆಗಲಾರದ ಸಮ್ಯಕ್‌ಜ್ಞಾನವು ಬರೇ ಶರಣರ ದರ್ಶನದಿಂದ ಅವರ ಪಾದ ಧ್ಯಾನದಿಂದ ಅವರ ಪಾದ ದರ್ಶನದಿಂದ ಇಂದೇ ಇದೇ ಕಾಲಕ್ಕೆ ಆಯಿತು; ಹಣೆಯ ಬರಹ ತಿದ್ದಿತು ಎಂದು ಹೇಳಿರುವಳು.

ಈ ಪ್ರಕಾರ ಅಕ್ಕನು ಬಸವನ ಪಾದಗಳ ಕಂಡು ನಮಸ್ಕರಿಸಿ ಕೈ ಮುಗಿದು ನಿಲ್ಲಲು; ಬಸವನು ಅಕ್ಕನನ್ನು ಕಂಡು ಪ್ರಭುದೇವರಿಗೆ ಕೆಳಗಿನಂತೆ ನುಡಿದನು.

ಬಸವಃ— ಕಾಯದ ಲಜ್ಜೆಯ ಕಲ್ಪಿತವ ಕಳೆದು, ಜೀವದ ಲಜ್ಜೆಯ ಮೋಹವನಳಿದು, ಮನದ ಲಜ್ಜೆಯ ನೆನಹು ಸುಟ್ಟು, ಭಾವದ ಕೂಟ ಬತ್ತಲೆ ಎಂದರಿದು. ತವಕದ ಸ್ನೇಹ ವ್ಯವಹಾರಕ್ಕೆ ಹೋಗದು ಕೂಡಲಸಂಗಮ ದೇವಯ್ಯ ಎನ್ನ ಹೆತ್ತ ತಾಯಿ ಮಹಾದೇವಿಯಕ್ಕನ ನಿಲವ ನೋಡಯ್ಯ ಪ್ರಭುವೆ ॥೮॥

ಶರೀರದ ನಾಚಿಕೆಯ ಕಲ್ಪನೆಯನ್ನೂ ಜೀವದ ನಾಚಿಕೆಯ ಮೋಹವನ್ನೂ, ಮನದ ನಾಚಿಕೆಯ ನೆನಪನ್ನೂ ಸುಟ್ಟು, ಭಾವ ಬತ್ತಲೆಯಾಗಿ ಬಂದ ಅಕ್ಕನ ಗೆಳತನವು ಲೋಕ ವ್ಯವಹಾರಕ್ಕೆ ಸರಿ ಹೋಗದು. ಕೂಡಲ ಸಂಗಮದೇವ ನನ್ನ ಹೆತ್ತ ತಾಯಿ ಮಹಾದೇವಿಯಕ್ಕನ ಈ ಸ್ಥಿತಿಯನ್ನು ನೋಡಯ್ಯ ಪ್ರಭುದೇವ.

ಟೀಕೆಃ— ಶರೀರ, ಜೀವ, ಮನ ಇವು ಮಾನವನ ಮುಖ್ಯ ಭಾಗಗಳು. ಶರೀರದ ನಾಚಿಕೆಯು ಬರೆ ಕಲ್ಪನೆ ಮಾಡಿಕೊಂಡದ್ದೇ ಇರುವದು. ಎಲ್ಲರ ಶರೀರಗಳು ಒಂದೇ ಸರಿ. ಅದರಲ್ಲಿ ಹೆಚ್ಚು ಕಡಿಮೆ ಎಂಬ ಭೇದ ಭಾವವೇ ಇಲ್ಲ. ಸಪ್ತ ಧಾತು ಸಮಪಿಂಡಂ। ಸಮಯೋನಿ ಸಮುದ್ಭವಂ। ಆತ್ಮ ಜೀವ ಸಮಾಯುಕ್ತಂ। ವರ್ಣಾಂ ಕಿಂ ಪ್ರಯೋಜನಂ॥ ಹೊಲೆಗಂಡಲ್ಲದೆ ಪಿಂಡದ ನೆಲೆಗಾಶ್ರಯವಿಲ್ಲ. ಜಲ ಬಿಂದುವಿನ ವ್ಯವಹಾರ ಒಂದೇ. ಆಶೆಯಾಮಿಷ ರೋಷ ಹರುಷ ವಿಷಯಾದಿಗಳೆಲ್ಲ ಒಂದೇ. ಹೊಲೆಯೊಳಗೆ ಹುಟ್ಟಿ ಕುಲವನರಸದಿರು. ಇದರ ಮೇಲಿಂದ ಎಲ್ಲರ ಶರೀರಗಳು ಒಂದೇ ಆದಮೇಲೆ ಯಾರ ಶರೀರ ಶ್ರೇಷ್ಠ? ಯಾರ ಶರೀರ ಕನಿಷ್ಠ? ಅಕ್ಕನು ಸಂಪೂರ್ಣ ತಿಳಿದವಳಿದ್ದುದರಿಂದ ಆಕೆ ಶರೀರದ ಲಜ್ಜೆ ನಾಚಿಕೆಯ ಕಲ್ಪನೆಯನ್ನು ತೆಗೆದುಹಾಕಿದ್ದಳು. ಕಲ್ಪನೆಯು ಯಾವಾಗಲೂ ಸುಳ್ಳು ಇರುವದು. ಇಲ್ಲದ್ದನ್ನು ಅದೆ ಎಂದು ತಿಳಿಯುವದೇ ಕಲ್ಪನೆ ಹೊರತು ಬೇರೆ ಇಲ್ಲ.

ಜೀವಕ್ಕೆ ಮೋಹವಿರುವದು. ತನ್ನ ಜೀವವು ಶ್ರೇಷ್ಠವೆಂಬ ಕಲ್ಪನೆಯಿಂದ ಸಾಯಲಿಕ್ಕೆ ಕಷ್ಟ ಭೋಗಿಸಲಿಕ್ಕೆ ನಾಚಿಕೆ ಲಜ್ಜೆಗಳು ಬರುವವು.

ಆದರೆ ಅಕ್ಕನು ಜೀವನದಲ್ಲಿಯ ಮೋಹವನ್ನೇ ತೊಡೆದುಹಾಕಿದ್ದಳು. ಮನಸ್ಸಿಗೂ ಲಜ್ಜೆ ನಾಚಿಕೆಗಳು ಬರುವವು. ಮೋಹ ಮಾನ ಮನ್ನಣೆ ಮೊದಲಾದವುಗಳು ಮನದಲ್ಲಿ ನೆನಹು ತೋರಿದ ಕೂಡಲೆ ಇವುಗಳನ್ನು ಬಿಡಲು ಲಜ್ಜೆ ನಾಚಿಕೆಗಳು ತಲೆಹೋರುವವು. ಅಕ್ಕನು ಇಂಥ ಮನದ ಲಜ್ಜೆ ನಾಚಿಕೆಗಳನ್ನೂ ಸಹ ತೊರೆದಿದ್ದಳು. ಮಾನವನ ಮನ, ಜೀವ, ಶರೀರಕ್ಕೆ ಅನೇಕ ಭಾವಗಳು ಅಂಟಿಕೊಂಡಿರುವವು. ಆದರೆ ಅಕ್ಕನ ಭಾವಗಳೆಲ್ಲ ಬತ್ತಲೆಯಾಗಿದ್ದವು. ಅಂದರೆ ಅವಳಲ್ಲಿ ಯಾವ ಸಂಸಾರಿಕ ಇಹಪರಗಳ ಸಂಬಂಧದ ಭಾವನೆಗಗೇ ಇರಲಿಲ್ಲ. ಅವಳ ಭಾವ ನಿರ್ಭಾವವಾಗಿತ್ತು. ಈ ಪ್ರಕಾರ ಸಕಲ ಭಾವಗಳೆಲ್ಲ ಬಯಲಾಗದ ಹೊರತು ನಿಜವಾದ ಸಮ್ಯಕ್‌ಜ್ಞಾನ ಒಡಮೂಡದು. ಅಂದರೆ ನಿರ್ಗುಣವಾದರೆ ಸಮ್ಯಕ್ ಜ್ಞಾನ ಆಕೆಗೆ ಅಂತರಂಗದಲ್ಲಿ ಶರೀರ ಅಭಿಮಾನವಾಗಲಿ, ಜೀವದ ಅಭಿಮಾನವಾಗಲಿ, ಮನದ ಅಭಿಮಾನವಾಗಲಿ ಎಳ್ಳಷ್ಟೂ ಇರಲಿಲ್ಲ. ಅದಕ್ಕಂತೆ ಅವಳು ದಿಗಂಬರೆಯಾಗಿ ವಿಹರಿಸುತ್ತಿರುವಳು. ಬಾಲಿಕೆಯರಂತೆ ದಿಗಂಬರೆಯಾಗಿ ಆ ಶಿವಾನುಭವ ಮಂಟಪಕ್ಕೆ ಬಂದಳು. ಈ ಪ್ರಕಾರ ಬಸವಣ್ಣನು ಅಕ್ಕನ ಸ್ಥಿತಿಯನ್ನು ಬಣ್ಣಿಸಿ ಪ್ರಭುದೇವರಿಗೆ - 'ತನ್ನ ಹೆತ್ತ ತಾಯಿ ಅಕ್ಕಮಹಾದೇವಿಯ ಈ ಉಚ್ಚ ಸ್ಥಿತಿಯನ್ನು ನೋಡಲಿಕ್ಕೆ ಬಿನ್ನವಿಸಿದನು. ಬಸವಣ್ಣನು ಅಕ್ಕನಿಗೆ ತನ್ನ ಹೆತ್ತ ತಾಯಿ ಎಂದು ಸಂಬೋಧಿಸಿದ್ದರಲ್ಲಿ ಎಂಥ ನಿಕಟ ಸಂಬಂಧವಿರುವದೆಂಬುದನ್ನು ಶರಣ ಬಳಗದಲ್ಲಿ ಕಲ್ಪಿಸಿ ಕೊಡುವದು ವಿಚಾರಿಸಿರಿ. ಅಕ್ಕನನ್ನು ಈ ಮೊದಲು ಅವನು ನೋಡಿರಲಿಲ್ಲ. ಅವಳು ಅವನಲ್ಲಿ ಎಂಥ ದಿವ್ಯ ಭಾವ ಮಾಡಿದಳೋ ಅದಕ್ಕೂ ಹೆಚ್ಚಿಗೆ ಅಣ್ಣನ ತಾಯಿ ! ಹೆತ್ತ ತಾಯಿ ! ಎಂದು ಶಿಶು ಸರಳ ಹೃದಯದಿಂದಲೇ ! ಸಂಬೋಧಿಸಿದನು. ಬತ್ತಲೆ ಸ್ತ್ರೀಯನ್ನು ನೋಡಿ ಮೋಹಿಸದೆ ಕೋಪಿಸದೆ ಅಸಹ್ಯಪಡದೆ ಆಕೆಯ ನಿಜಸ್ಥಿತಿಯನ್ನು ತಾನು ಅರಿತು, ಉಳಿದವರಿಗೆ ಅರಿಯಿರಿ ಎಂದು ತಿಳಿಸಿದವನ ಜ್ಞಾನವು ಅಗಮ್ಯವಾಗಿರುವದೆಂದು ತೋರುವದು.

ಮನೋಲಯ ವಾಸನಾಕ್ಷಯು ಇಗದ ಹೊರತು ನಾಚಿಕೆ, ಲಜ್ಜೆ, ಮೋಹ, ಕಾಮನೆ ಮೊದಲಾದವುಗಳು ಹೋಗುವದು ಶಕ್ಯವಿಲ್ಲ. ಮನೋಲಯ ವಾಸನಾಕ್ಷಯಗಳು ಆದದ್ದರಿಂದಲೇ ಅವುಗಳನ್ನೆಲ್ಲ ಸುಟ್ಟು ತ್ಯಜಿಸಿದ್ದರ ಗುರುತಿಗಾಗಿ ಅವಳು ಚಿಕ್ಕ ಬಾಲಿಕೆಯರಂತೆ ಬತ್ತಲೆಯಾಗಿ ಸಹಜ ಇರಹತ್ತಿದಳು. ಇದೇ ಅವಳ ತ್ಯಾಗದ ಪರಮಾವಧಿ.

ಬಸವಣ್ಣನು ಕೂಡಲಸಂಗಮದೇವ ಎಂಬ ಮುದ್ರಿಕೆಯನ್ನು ಉಪಯೋಗಿಸಿರುವನು. ಕೃಷ್ಣಾ, ಮಲಾಪಹಾರಿ ನದಿಗಳ ಸಂಗಮದಲ್ಲಿ ಇರುವ ಸ್ಥಾವರಲಿಂಗಕ್ಕೆ ಸಂಬೋಧಿಸಿದ್ದಾನೆಂದು ಕೆಲವರು ಹೇಳುತ್ತಾರೆ. ಆದರೆ ಶರಣನು ಸ್ಥಾವರ ಪೂಜೆಗೆ ಅಷ್ಟು ಮಹತ್ವಕೊಟ್ಟಂತೆ ತೋರುವದಿಲ್ಲ.

(೧) ಕೂಡಲ+ಸಂಗಮ+ದೇವ ಈ ಮೂರು ಪದದ ಅರ್ಥವನ್ನು ವಿಚಾರಿಸಬೇಕಾಗಿದೆ. ಹೃದಯಕ್ಕೆ ಮೇಲಿಂದ ಹಾಗೂ ಕೆಳಗಿಂದ ರಕ್ತನಾಳಗಳು ಬಂದು ಕೂಡಿ ಸಂಗಮ ಸ್ಥಾನವಾಗಿದೆ. ಅಲ್ಲಿ ಆತ್ಮನಿದ್ದಾನೆ. ಅವನೇ ಕೂಡಲಸಂಗಮದೇವರು. ಅದಕ್ಕಾಗಿಯೇ "ಅರುವಿನ ಹೃದಯ ಕಣ್ದೆರೆಯ ಬೇಕೆಂದು ಗುರುವೆಂದು ಕಲ್ಪಿಸಿಕೊಂಡೆನು." "ದೇವರು ಹೃದಯದ ಮನೆ ಮಾಡಿಕೊಂಡಿಯಸೆಂದು" ಹಾಡಿಹರು.

(೨) ಕರ್ಮೇಂದ್ರಿಯಗಳ ಕೇಂದ್ರ ನಾಭಿ ಜ್ಞಾನೇಂದ್ರಿಗಳ ಕೇಂದ್ರ ಭ್ರೂಮಧ್ಯ. ಅಂತಃಕರಣಗಳ ಕೇಂದ್ರ ಹೃದಯ, ಅಂದರೆ ಕರ್ಮೇಂದ್ರಿಯಗಳು ಉಚ್ಚತರಗತಿಯ ನೀತಿಕ್ರಿಯೆಗಳಿಂದ ಶುದ್ಧವಾಗಿ ಜ್ಞಾನೇಂದ್ರಿಯಗಳು ಉಚ್ಚತಮ ಸುಜ್ಞಾನದಲ್ಲಿ ಪರಿವರ್ತನೆಹೊಂದಿ ಸಕಲ ಇಂದ್ರಿಯಗಳು ಪಾರದರ್ಶಕವಾಗಿ ನಿರ್ಭೀತಿ ಪ್ರವೃತ್ತಿಯು ಬಂದಮೇಲೆ ಧರ್ಮಜೀವಿಯಾಗುವನು. ಅದಕ್ಕಂತೇ ಸತ್‌ಕ್ರಿಯೇ ಹಾಗೂ ಸುಜ್ಞಾನಗಳ ಸಂಗಮದಿಂದ ಮಾನವನು ದೇವನಾಗುವನು. ಅದಕ್ಕೆ ಕೂಡಲಸಂಗಮದೇವನೆಂದು ಅಂದಿರುವನು.

(೩) ಶಿವಭಕ್ತಿಯರ ಮಿಲನವನ್ನು ಸೂಚಿಸುವ ಸತ್+ಚಿತ್‌ಗಳ ಮಿಲನದ ಗುರುತಾದ ಲಿಂಗಕ್ಕೆ ಕೂಡಲಸಂಗಮನೆಂದು ಸೂಚಿಸಿರುವನು.

(೪) ಭಕ್ತನ ಭಕ್ತಿ ಅರಳಿದಷ್ಟು ಪರಮಾತ್ಮನ ಕೃಪೆ ಬಂದು ತುಂಬಿಕೊಳ್ಳುವದು ಸಹಜವದೆ, ಸ್ವಾಭಾವಿಕವಿದೆ. ಅಂದರೆ ಭಕ್ತಿಜೀವನ ಹಾಗೂ ದೇವಶಕ್ತಿಯ ಕೃಪೆಯ ಸಂಗಮವೇ ಕೂಡಲಸಂಗಮದೇವರು ಅಂದರೆ ಜೀವನ್ಮುಕ್ತಿ ಎಂದು ಬೋಧಿಸಿರುವನು.

(೫) ಅಂತರಂಗ ಬಹಿರಂಗಗಳ ಮಧುರ ಮಿಲನ ಉಂಟಾದರೆ ನಡೆ ನುಡಿ ಒಂದಾದಂತೆ ಆಗುವದು. ಇವುಗಳ ಮಿಲನವೇ ಕೂಡಲಸಂಗಮ ದೇವನೆಂದು ಸಂಬೋಧಿಸಿರುವನು.

ಉಪ್ಪಿಗಿಂತ ರುಚಿ ಇಲ್ಲ, ತಾಯಿಗಿಂತ ಬಂಧುವಿಲ್ಲ, ಎಂಬ ತತ್ವದಂತೆ ತನ್ನ ತಾಯಿಯ ಸ್ಥಾನದಲ್ಲಿ ಅಕ್ಕನನ್ನು ಇರಿಸಿ ಪೂಜಿಸಿದ್ದಾನೆ. ಆದರೆ ಹಡೆದ ತಾಯಿ ಎಂದರೆ ಜಗನ್ಮಾತೆ ಪಾರ್ವತಿ ಮಹಾದೇವಿ ಎಂದೇ ಅವನ ಭಾವ. ಆಕೆಯನ್ನು ಅಷ್ಟು ಪೂಜ್ಯ ದೃಷ್ಟಿಯಲ್ಲಿ ಕಂಡನು. ಶಕ್ತಿ ಸ್ವರೂಪಿಣಿಯೆಂದೆ ಆಕೆಯನ್ನು ಇದಿರಿಟ್ಟು ಪೂಜಿಸಿದನು. ಮಾತೆಯೇ ಸಕಲಲೋಕದಲ್ಲಿ ನಮ್ಮ ಹೆಚ್ಚಿನ ಸಮೀಪದ ಹಿತದ ಬಂಧುವೇ ಸರಿ. ಅಕ್ಕನಿಗೆ ಆ ಹಿರೇ ಶ್ರೇಷ್ಠ ಪವಿತ್ರ ಸ್ಥಾನವನ್ನು ಕೊಟ್ಟು ಮನ್ನಿಸಿದುದು ಬಸವನ ನಿರಹಂಕಾರ ನಿರಭಿಮಾನವನ್ನು ವ್ಯಕ್ತ ಮಾಡುವದು. ಅವನು ಬರೀ ಬಾಯಿಂದ ತಾಯಿ ಎನ್ನಲಿಲ್ಲ. ಅದರಂತೆ ಹೃದಯವು ತಾಯಿ ಭಾವನೆಯಿಂದ ಸಂಪೂರ್ಣ ತುಂಬಿತ್ತು. ಅದಕ್ಕಂತೆ ಆಕೆಯ ನಿಲವನು ಮುಂದಿನ ವಚನಗಳಿಂದ ಮನವಾರೆ ಬಣ್ಣಿಸಿ ನುಡಿದಿದ್ದಾನೆ.

(ಮುಂದುವರಿಯುವದು.)

# ವೀರಶೈವ ತತ್ವ ಸಂಶೋಧನ ಮತ್ತು ತತ್ವ ಪ್ರಚಾರ.

(ಲೇಖಕ— ಸತ್ಯವಾದಿ)



ವೀರಶೈವರು ಒಂದು ಅಧಿಕೃತವಾದ ಧರ್ಮಗ್ರಂಥವನ್ನು ಪ್ರಕಟಿಸಬೇಕೆಂದು ಕಲ್ಯಾಣ ವೀರಶೈವ ಮಹಾ ಸಭೆಯಲ್ಲಿ ಠರಾವು ಪಾಸಾಗಿರುತ್ತದಷ್ಟೇ. ಆಯಾಯ ಧರ್ಮದವರಿಗೆ ಒಂದೊಂದು ಮತಗ್ರಂಥವಿರುವಾಗ ವೀರಶೈವರಿಗೊಂದು ಪ್ರಮಾಣಗ್ರಂಥವಿಲ್ಲದಿರುವದು ಲಾಂಛನಾಸ್ಪದವು. ಆದರೆ ಅಂಥ ಪ್ರಮಾಣ ಮತಗ್ರಂಥವನ್ನು ಪ್ರಕಟ ಮಾಡುವದು ಸುಲಭವಾದ ಕೆಲಸವೇನೂ ಅಲ್ಲ. ಅದಕ್ಕೆ ದೊಡ್ಡ ಸಂಶೋಧನೆಯೂ, ಆಳವಾದ ಅಭ್ಯಾಸವೂ ಅತ್ಯಾವಶ್ಯಕ. ಯಾಕಂದರೆ ಭಿನ್ನ ಭಿನ್ನ ಗ್ರಂಥಗಳು ಭಿನ್ನ ಭಿನ್ನ ರೀತಿಯಲ್ಲಿ ತತ್ವ ಪ್ರತಿಪಾದನೆ ಮಾಡಿವೆ. ಅವುಗಳಲ್ಲಿ ಕ್ರಮಬದ್ಧವಾದ ಶಾಸ್ತ್ರೀಯ ಪದ್ಧತಿಯು ಕಂಡು ಬರುವದಿಲ್ಲ. ಕೆಲವರು ಆಗಮಗಳಲ್ಲಿ ವೀರಶೈವ ಧರ್ಮವು ಪ್ರತಿಪಾದಿತವಾಗಿದೆಯೆಂದು ಸಾಧಿಸುವರು. ನಿಜಗುಣ ಶಿವಯೋಗಿಗಳು ವಿವೇಕ ಚಿಂತಾಮಣಿಯಲ್ಲಿ ಕಾಮಿಕಾದಿ ವಾತುಲಾಂತ ೨೮ ಶಿವಾಗಮಗಳ ನಾಮ ನಿರ್ದೇಶ ಮಾಡಿದ್ದಾರೆ. ಆದರೆ ಈ ಆಗಮಗಳೆಲ್ಲ ಉಪಲಬ್ಧವಿರುವವೋ ಇಲ್ಲವೋ ಯಾರಿಗೂ ತಿಳಿದಿಲ್ಲ. ಇದ್ದರೆ ಅವುಗಳನ್ನು ಪಂಡಿತರಿಂದ ಪರಿಶೋಧಿಸಹಚ್ಚಿ ವೀರಶೈವ ತತ್ವ ಪ್ರಚಾರಮಾಡುವದು ಉತ್ತಮೋಪಾಯವು.

ಕೈ. ವಾ. ವಾರದ ಅಪ್ಪಾಸಾಹೇಬರು ಪ್ರಕಟಿಸಿದ ಕೆಲವು ಆಗಮಗಳನ್ನು ನೋಡಿಕೊಂಡ ಕೆಲವು ಪಂಡಿತರು ಅವು ಇತ್ತೀಚಿಗೆ ಪ್ರಕಟವಾದ ಗ್ರಂಥಗಳೇ ಹೊರತು ಮೂಲ ಗ್ರಂಥಗಳಲ್ಲವೆಂದು ಹೇಳುವರು. ಬೇರೆ ಕೆಲವರು ಮೂಲ ಆಗಮಗಳಲ್ಲಿ ವೀರಶೈವ ಮತ ಪ್ರತಿಪಾದನೆಯಿರದೆ ಶೈವ ಸಾಂಪ್ರದಾಯದ ಯಜ್ಞ-ಯಾಗ ಜಪ-ತಪ ಮಂತ್ರ, ಸಮಾಧಿ, ವಾಸ್ತು ಶಿಲ್ಪ, ಶಿಖಾಸೂತ್ರ ಇತ್ಯಾದಿ ವೀರಶೈವ ಸಾಂಪ್ರದಾಯ ವಿರುದ್ಧ ಸಂಗತಿಗಳು ಪ್ರತಿಪಾದಿಸಲ್ಪಟ್ಟಿವೆಯೆಂದು ಹೇಳುವರು. ಅವುಗಳಲ್ಲಿ ಭಕ್ತ ಮಹೇಶ್ವರಾದಿ ಷಟ್‌ಸ್ಥಲಗಳ ವಿವೇಚನೆ ಕಂಡುಬರುವದಿಲ್ಲವೆಂಬುದೇ ಅವರ ಮತ. ಈಗ ಸಮಾಜದ ದೃಷ್ಟಿಗೆ ಬಿದ್ದ ವಾತುಲ, ಪಾರಮೇಶ್ವರ, ಸೂಕ್ಷ್ಮ,

ಸ್ವಾಯಂಭು ಆಗಮಗಳಲ್ಲಿ ವೀರಶೈವ ಮತ ಪ್ರತಿಪಾದನೆಯಿದ್ದರೂ ಈ ಆಗಮಗಳು ಮೂಲ ಆಗಮಗಳಿರದೆ ೧೨ನೆಯ ಶತಮಾನದಿಂದೀಚೆಗೆ ವಚನ ಶಾಸ್ತ್ರಗಳ ಆಧಾರದಿಂದ ಆಂಧ್ರ ದೇಶದಲ್ಲಿ ಪಂಡಿತಾರಾಧ್ಯ ಮೊದಲಾದ ಸಂಸ್ಕೃತ ಪಂಡಿತರಿಂದ ಅವು ರಚಿಸಲ್ಪಟ್ಟಿರುವವೆಂದು ಕೆಲವರ ಅಭಿಪ್ರಾಯ.

ವೀರಶೈವ ತತ್ವ ನಿರೂಪಣೆಗೆ ವಚನ ಗ್ರಂಥಗಳೇ ಮೂಲಾಧಾರವೆಂದು ಪ್ರತಿಪಾದಿಸಿದರೆ ವಚನಗಳಲ್ಲಿಯೂ ಕೂಡ ಅಂಗಸ್ಥಲ, ಲಿಂಗಸ್ಥಲಗಳ ನ್ನೊಳಕೊಂಡ ಷಟ್‌ಸ್ಥಲಗಳು ೧೦೧ ಸ್ಥಲದ ವರೆಗೆ ಮುಟ್ಟುವವೆಂದು ಕೆಲವರು ಪ್ರತಿಪಾದಿಸಿದರೆ ಬೇರೆ ಕೆಲವರು ಷಟ್‌ಸ್ಥಲದಿಂದ ೩೬ ಸ್ಥಲಗಳು, ಆ ೩೬ ರಿಂದ ೨೧೬ರ ವರೆಗೆ ಸ್ಥಲಗಳ ಕ್ರಮವಿರುವದೆಂದು ಹೇಳುವರು. ಈ ೨೧೬ ಸ್ಥಲಗಳ ವಿವರಣೆಯನ್ನಾದರೂ ಸಂಪೂರ್ಣ ಕ್ರಮಬದ್ಧವಾಗಿ ಹೇಳುವ ಗ್ರಂಥಗಳೂ ಉಪಲಬ್ಧವಿಲ್ಲ. ಕೆಲವರು ಸಾಂಖ್ಯರ ೨೫ ತತ್ವ ಗಳೇ ವೀರಶೈವ ಧರ್ಮಕ್ಕೆ ಮೂಲಾಧಾರಗಳೆಂದು ಹೇಳುವದುಂಟು. ಅಂದ ಮೇಲೆ ೧೦೧ ಸ್ಥಲಗಳನ್ನು ನಂಬಬೇಕೋ ? ೨೧೬ ಸ್ಥಲಗಳನ್ನು ನಂಬಬೇಕೋ ಅಥವಾ ೨೫ ತತ್ವಗಳನ್ನು ನಂಬಬೇಕೋ ತಿಳಿಯದಂಥ ಸಮಸ್ಯೆಯಾಗಿದೆ.

ವೀರಾಗಮಗಳಲ್ಲಿ ವೀರಶೈವ ಮತ ಪ್ರತಿಪಾದನೆಯುಂಟೆಂದರೆ ಅವು ಗಳಲ್ಲಿ ಸಹ ಕೆಲವು ಶ್ಲೋಕಗಳಿಂದ ಷಟ್‌ಸ್ಥಲಾದಿ ತತ್ವಗಳನ್ನು ಊಹಿಸ ಬಹುದೇ ವಿನಾ ಅವುಗಳಲ್ಲಿ ಕ್ರಮಬದ್ಧವಾದ ವೀರಶೈವ ತತ್ವ ಪ್ರತಿಪಾದನೆ ಯಿಲ್ಲವೆಂದು ಕೆಲವರ ಮತ. ಅದರಂತೆಯೇ ವೇದೋಪನಿಷತ್ತುಗಳಲ್ಲಿ ರುದ್ರ, ಪಶುಪತಿ, ಪ್ರಣವ ಪಂಚಾಕ್ಷರಿ ಇತ್ಯಾದಿ ಶಬ್ದಗಳ ಪ್ರಯೋಗದಿಂದ ವೀರಶೈವ ಮತವನ್ನೂಹಿಸಬಹುದೇ ವಿನಾ ವೀರಶೈವ ಮತದ ವಿಸ್ತಾರವಾದ ವಿವೇಚನೆಯು ಅವುಗಳಲ್ಲಿಲ್ಲವೆಂದು ಕೆಲವರ ಗ್ರಹಿಕೆ. ಆ ಶಬ್ದಗಳು ಪ್ರಾಚೀನ ಶೈವ ಮತದ ದ್ಯೋತಕಗಳೇ ಹೊರತು ವೀರಶೈವಪರವಾದವುಗ ಳಲ್ಲವೆಂದು ಅವರು ಹೇಳುವರು.

ಸಿದ್ಧಾಂತ ಶಿಖಾಮಣಿಯು ಪ್ರಾಚೀನ ಗ್ರಂಥವೆಂದೂ ರೇಣುಕ ಗುರುವರ್ಯರು ಅಗಸ್ತ್ಯ ಮುನಿಗಳಿಗೆ ವೀರಶೈವ ತತ್ವೋಪದೇಶ ಮಾಡಿದ ೧೦೧ ಸ್ಥಲಗಳು ಅದರಲ್ಲಿ ವಿವರವಾಗಿರುವವೆಂದೂ ಕೆಲವರು ಹೇಳಿದರೆ ಬೇರೆ ಕೆಲವರು ಆ ಗ್ರಂಥವು ೧೪ನೇ ಶತಮಾನದಲ್ಲಿ ವಚನಶಾಸ್ತ್ರಗಳ ಆಧಾರ

ದಿಂದ ಬರೆಯಲ್ಪಟ್ಟಿದೆಯೆಂದು ಅಭಿಪ್ರಾಯಬಡುವರು. ಅದರಲ್ಲಿ ಪ್ರತಿಪಾದಿತವಾದ ತತ್ವಗಳು ಎಷ್ಟೇ ಉದಾತ್ತವಿದ್ದರೂ ಕಾಲ ಭೇದದಿಂದ ಮತ ಗ್ರಂಥದ ಪ್ರಶಸ್ತಿಯು ಅದಕ್ಕೆ ಬರಲಾರದೆಂದು ಕೆಲವರ ಗ್ರಹಿಕೆ.

ವಚನಗಳಲ್ಲಿ ಷಟ್‌ಸ್ಥಲಗಳ ಕ್ರಮದ ಮೇರೆಗೆ ಎಲ್ಲ ವಚನಕಾರರು ವಚನಗಳನ್ನು ರಚಿಸಿರುವದರಿಂದ ವಚನಗಳೇ ಪ್ರಮಾಣವೆಂದು ಹೇಳಿದರೆ ಆ ವಚನಕಾರರೇ ಕೆಲವು ಆಗಮಗಳ ಉದಾಹರಣೆಗಳನ್ನು ತಮ್ಮ ವಚನಗಳಲ್ಲಿ ಕಾಣಿಸಿರುವಾಗ ಅವಾದರೂ ಆಧಾರ ಗ್ರಂಥಗಳು ಹೇಗಾಗುತ್ತವೆ? ಇದಕ್ಕೆ ಆಗಮಾಭಿಮಾನಿಗಳು ಒಪ್ಪುವದಾದರೂ ಹೇಗೆ ?

ಅದರಂತೆ ಸದಾಚಾರ ಸಂಗ್ರಹ, ಸುಪ್ರಭೇದಾಗಮಗಳು ವೀರಶೈವ ಮತವನ್ನು ಪ್ರತಿಪಾದಿಸುವವೆಂದರೆ ಅವುಗಳಲ್ಲಿ ಅನೇಕ ಸಂಗತಿಗಳು ಪ್ರಕ್ಷಿಪ್ತವಾಗಿಯೂ ಅಸಂಗತವಾಗಿಯೂ ಇರುವದರಿಂದ ಅವು ೧೮ನೆಯ ಶತಮಾನದಲ್ಲಿ ಹೊರಟವುಗಳಾದ್ದರಿಂದಲೂ ಮತಗ್ರಂಥಗಳೆನಿಸಿಕೊಳ್ಳುವ ಅರ್ಹತೆ ಅವುಗಳಿಗಿಲ್ಲವೆಂದು ಕೆಲವು ಪಂಡಿತರ ವಾದ.

ಅದು ಕಾರಣ ಐತಿಹಾಸಿಕ ದೃಷ್ಟಿಯಿಂದ ಪ್ರಾಚೀನವಾಗಿರಬೇಕು, ಷಟ್‌ಸ್ಥಲಾದಿಗಳ ಸಂಪೂರ್ಣ ವಿವರಗಳು ಅದರಲ್ಲಿ ಅಳವಟ್ಟಿರಬೇಕು. ಅಂಥ ಪ್ರಮಾಣ ಗ್ರಂಥಗಳನ್ನು ಶೋಧಿಸುವದು ವೀರಶೈವರ ಆದ್ಯ ಕರ್ತವ್ಯವಾಗಿದೆ. ಇಂಥ ಸಂಶೋಧನೆಗಾಗಿ ನಮ್ಮ ಸಮಾಜದವರು ಸ್ವಲ್ಪೂ ಲಕ್ಷ ಹಾಕದಿರುವದೂ ಪ್ರೋತ್ಸಾಹ ನೀಡದಿರುವದೂ ಅತ್ಯಂತ ವಿಷಾದದ ಸಂಗತಿಯು. ಪರದೇಶಗಳಲ್ಲಿ ಸಂಶೋಧನೆಗಳ ಸಲುವಾಗಿ ಕೋಟ್ಯಾವಧಿ ರೂಪಾಯಿಗಳನ್ನು ವೆಚ್ಚ ಮಾಡುತ್ತಾರೆ. ಆದರೆ ನಮ್ಮವರು ಈ ವಿಷಯದಲ್ಲಿ ಸ್ವಲ್ಪು ಸಹ ಹಣ ವೆಚ್ಚಮಾಡದಿರುವದು ದುರ್ದೈವದ ಸಂಗತಿ. ಐಹಿಕ ಸುಖಲಾಭಗಳಿಗೆ ಸ್ವಲ್ಪ ಮಟ್ಟಿಗೆ ಅನುಕೂಲವಾದ ಮತ್ತು ನಿರುದ್ಯೋಗಕ್ಕೆ ಹೆಚ್ಚು ಕಾರಣಗಳಾದ ಹಾಯಸ್ಕೂಲು, ಕಾಲೇಜ, ಫ್ರೀ ಬೋರ್ಡಿಂಗಗಳನ್ನು ಇತ್ತೀಚಿಗೆ ಸ್ವಾಮಿಗಳು ಸ್ಥಾಪಿಸುವದಕ್ಕಾಗಿ ಹೆಚ್ಚು ಆಸಕ್ತಿಯನ್ನು ತೋರಿಸುವಂತೆ ಕಾಣುತ್ತದೆ. ಅದರಂತೆ ಅಕ್ರಮಗಳಾದ ಕೆಲವು ಶಿವಾನುಭವ ಮಂಟಪಗಳೂ ಅಲ್ಲಲ್ಲಿ ತೋರುತ್ತವೆ. ಶಾಲೆ ಕಾಲೇಜಗಳಂತೆ ಶಿವಾನುಭವ ಮಂಟಪಗಳನ್ನೂ ನಮ್ಮ ಸ್ವಾಮಿಗಳು ಸಂಘಟಿತವಾಗಿ ಯಾಕೆ ಸಾಗಿಸಿಕೊಂಡು ಹೋಗಬಾರದು ? ಜನರಿಗೆ ತಿಳಿಯಲಿ,

ತಿಳಿಯದಿರಲಿ ತತ್ವ ಪ್ರತಿಪಾದನೆ ಮಾಡಿಸಿದೆವೆಂಬ ಶುಷ್ಕ ಸಮಾಧಾನ ವೊಂದೇ ಈಗಿನ ಅನುಭಾವ ಮಂಟಪಗಳ ಚಾಲಕರದಾಗಿದೆ.

ಆದರೆ ನಿಜವಾಗಿ ವೀರಶೈವ ಮತ ಪ್ರತಿಪಾದನೆ ಮಾಡುವ ಪಂಡಿತರು ಹಾಗೂ ಶಾಸ್ತ್ರಿಗಳು ವೀರಶೈವ ಮತತತ್ವಗಳನ್ನು ಎಷ್ಟರ ಮಟ್ಟಿಗೆ ಅಭ್ಯಾಸ ಮಾಡಿದ್ದಾರೆಂದು ಹೇಳುವದು ಹಾಸ್ಯಾಸ್ಪದವೇ. ತಾವು ಕಲಿತ ನ್ಯಾಯ, ವೇದಾಂತ; ಉಪನಿಷತ್ತು, ಭಗವದ್ಗೀತೆಗಳ ಅರ್ಥಕ್ಕೆ ಹೊಂದಿಸಿ ಅವರು ಷಟ್‌ಸ್ಥಲಗಳ ಶಾಸ್ತ್ರಾರ್ಥ ಮಾಡುವರೇ ವಿನಾ ಅವುಗಳ ಒಳ ಹೊಕ್ಕು ಆಳವಾದ ಅಭ್ಯಾಸ ಮಾಡಿ ಅನುಭವ ಪಡೆದು ಹೇಳುವವರೊಬ್ಬರಾದರೂ ಇದ್ದಾರೆಯೇ ಹೇಗೆಂಬದು ದೊಡ್ಡ ಸಮಸ್ಯೆಯಾಗಿದೆ. ಅದೇ ಮೇರೆಗೆ ಆಂಗ್ಲ ತತ್ವಜ್ಞಾನ-ಮಾನಸಶಾಸ್ತ್ರಗಳನ್ನೋದಿಕೊಂಡ ಕೆಲವು ಪಂಡಿತರೂ, ಸ್ವಾಮಿಗಳೂ ವೀರಶೈವ ತತ್ವಗಳನ್ನು ಅವುಗಳಿಗೆ ಹೊಂದಿಸಿ ಅರ್ಥ ಮಾಡಿ ಜನರನ್ನು ಬೆರಗುಗೊಳಿಸುವರೇ ವಿನಾ, ಅವರಾದರೂ ಷಟ್‌ಸ್ಥಲಗಳ ಆಳವಾದ ಅಭ್ಯಾಸ ಮಾಡಿರುವರೇ ಹೇಗೆಂಬದು ಸಂಶಯಾಸ್ಪದವು. ನಮ್ಮ ಅನುಭವಶಾಸ್ತ್ರವು ಹಿಂದಕ್ಕೆ ಗುರು, ಶಿಷ್ಯ ಪರಂಪರೆಯಾಗಿ ಪ್ರತಿಪಾದಿಸಲ್ಪಡುತ್ತ ಬಂದಿರಲೇಬೇಕು. ಆದರೆ ಆ ಸಾಂಪ್ರದಾಯವು ನಡುವೆ ಯಾವಾಗ ನಿಂತುಹೋಗಿದೆಯೋ ಹೋಗಿಬಿಟ್ಟಿದೆ. ಆದ್ದರಿಂದಲೇ ಮುಂದಿನವರು ಆಯಾ ತತ್ವಗಳ ಗೂಢವನ್ನರಿಯದೆ ತಮ್ಮ ಬುದ್ಧಿಗೆ ಹೊಳೆದಂತೆ ವಿಧವಿಧವಾಗಿ ಅವುಗಳನ್ನು ಪ್ರತಿಪಾದಿಸುತ್ತ ಸಾಗಿದ್ದಾರೆ. ಅಂದಮೇಲೆ ಸಂಸ್ಕೃತ ಶಾಸ್ತ್ರಿಗಳ ಪ್ರತಿಪಾದನೆಯು ಪ್ರಾಮಾಣ್ಯವೋ ಆಂಗ್ಲಭಾಷಾ ಪಂಡಿತರ ವಿವರಣೆಯು ಪ್ರಾಮಾಣ್ಯವೋ ? ಇದನ್ನು ಹೇಳುವದು ದುಸ್ತರವಾಗಿದೆ.

ಒಟ್ಟಿನಮೇಲೆ ವೀರಶೈವ ತತ್ವಗಳು ಆಗಮ, ವಚನ, ಪುರಾಣ, ಕೈವಲ್ಯ, ಶತಕಗಳಲ್ಲಿಯೂ ಪರಮರಹಸ್ಯ, ಸಿದ್ಧಾಂತಶಿಖಾಮಣಿ ಕ್ರಿಯಾಸಾರ ಮೊದಲಾದ ಧರ್ಮಗ್ರಂಥಗಳಲ್ಲಿಯೂ ಪ್ರತಿಪಾದಿತವಾಗಿರುವುದೇನೋ ನಿಜ. ಅಂದಮೇಲೆ ನಮ್ಮ ಸಮಾಜದ ಮುಂದಾಳುಗಳು ಆ ಎಲ್ಲ ಗ್ರಂಥಗಳನ್ನು ಒತ್ತಟ್ಟಿಗೆ ಶೇಖರಿಸಿ ಅಭ್ಯಾಸ ಮಾಡುವ ಒಂದು ಸಂಶೋಧನಾ ಮಂಡಲವನ್ನು ಸಂಸ್ಥೆಯ ರೂಪದಿಂದ ಸ್ಥಾಪಿಸುವದು ಅತ್ಯಾವಶ್ಯಕವಾಗಿದೆ. ಇಂಥ ಮಹತ್ಕಾರ್ಯಕ್ಕೆ ವೆಗ್ಗಳವಾರ ಸಂಪತ್ತು ವೆಚ್ಚವಾದರೂ ಸ್ತುತ್ಯವೇ.

ಆದರೆ ಗುಡಿಗುಂಡಾರ, ತೀರ್ಥ ಕ್ಷೇತ್ರ, ಹೈಸ್ಕೂಲ, ಕಾಲೇಜ, ಫ್ರೀ ಬೋರ್ಡಿಂಗುಗಳಿಗೆ ಲಕ್ಷಾಂತರ ರೂಪಾಯಿ ಹಾಳು ಮಾಡುವದಕ್ಕಿಂತ ವೀರಶೈವ ತತ್ವ ಸಂಶೋಧನಾ ಸಂಸ್ಥೆಯನ್ನು ಸ್ಥಾಪಿಸುವದು ಸಾವಿರಪಟ್ಟು ಮೇಲು. ಈಗ ನಮ್ಮ ಸಮಾಜದವರು ಸ್ಥಾಪಿಸಿದ ಎಷ್ಟೋ ಸ್ಕೂಲು, ಕಾಲೇಜಗಳು ನಮ್ಮ ವಿದ್ಯಾರ್ಥಿಗಳಿಗಿಂತಲೂ ಅನ್ಯ ಮತದ ಶಿಕ್ಷಕರಿಗೂ, ವಿದ್ಯಾರ್ಥಿಗಳಿಗೂ ಹೆಚ್ಚು ಅವಕಾಶ ನೀಡಿವೆ ಅದರಿಂದ "ಗೆಜ್ಜಲು ಮನೆ ಮಾಡಿ ಸರ್ಪಂಗೀಡಾದಂತೆ" ಎಂಬ ಮಾತು ಮಾತ್ರ ಸತ್ಯವಾದಂತಾಗುವದು. ನಮಗೆ ಚುನಾವಣೆ ಪ್ರಸಂಗಗಳಲ್ಲಿ ಮಾತ್ರ ಮತ ಪಡೆಯಲಿಕ್ಕೆ ವೀರಶೈವ ಧರ್ಮವು ಬೇಕೇ ವಿನಾ ವೀರಶೈವ ಧರ್ಮವೆಂದರೇನು ? ಅದರ ತತ್ವಗಳಾವವು ? ಅವುಗಳನ್ನು ಪ್ರಚಾರ ಮಾಡುವ ಬಗೆ ಹೇಗೆ ? ಎಂಬುದನ್ನು ತಿಳಿದುಕೊಳ್ಳಲು ಅದು ಬೇಡ. ಇಷ್ಟು ಅಧೋಗತಿಗೆ ನಮ್ಮ ಸಮಾಜವು ಇಳಿದಿದೆ.

ನಿಜವಾದ ಧರ್ಮ ತತ್ವಗಳ ಸಂಶೋಧನೆಯ ಅಭಾವದ ಮೂಲಕ ಗುರು ವಿರಕ್ತರಲ್ಲಿ ಒಮ್ಮೆ ಕಲಹವೆದ್ದದ್ದು ಇನ್ನೂ ಶಾಂತವಾಗದೆ ಬೂದಿ ಮುಚ್ಚಿದ ಕೆಂಡದಂತೆ ಹಾಗೆಯೇ ಹೊತ್ತುತ್ತ ನಡೆದಿದೆ. ಗುರು ವಿರಕ್ತರು ಯಾರು ? ಅವರ ಸ್ಥಾನಮಾನಗಳಾವವು ? ಯಾರು ಹೆಚ್ಚು ಕಡಿಮೆ ? ಎಂಬ ನಿಜವಾದ ಸಂಶೋಧನೆಯಾಗಿ ಪ್ರಮಾಣ ಗ್ರಂಥವು ಪ್ರಕಟವಾದರೆ ಆಮೇಲೆ ಈ ಕಲಹವು ತಾನಾಗಿಯೇ ನಾಮಶೇಷವಾಗುತ್ತದೆ. ಸಿಕ್ಕ ಸಿಕ್ಕ ಜನರು ಸಿಕ್ಕ ಸಿಕ್ಕಂತೆ ಮಧ್ಯಂತರದಲ್ಲಿ ಗ್ರಂಥಗಳನ್ನು ಪ್ರಕಟಿಸಿರುವದರಿಂದ ಅವೇ ಪ್ರಮಾಣ ಗ್ರಂಥಗಳೆಂದು ಭಾವಿಸಿ ಕಲಹಕ್ಕೆ ಕಾರಣವಾಗಿದೆ. ಆಯಾಯ ಗ್ರಂಥಗಳು ಎಷ್ಟರ ಮಟ್ಟಿಗೆ ಪ್ರಾಮಾಣ್ಯವಾಗಿವೆ ? ಪ್ರಮಾಣವಾಗಿದಿದ್ದರೆ ಅವುಗಳನ್ನು ಖಂಡಿಸಿ ನಿಜವಾದ ಸಂಗತಿಗಳಾವವು ಎಂಬುದನ್ನು ಸಂಶೋಧಿಸಿ ಸಮಾಜದ ಮುಂದಿರಿಸಿದರೆ ಯಾರೂ ಹಿಂದುಗಡೆ ಹೊಡೆದಾಡುವ ಕಾರಣವಿಲ್ಲ. ಅದಕ್ಕಾಗಿ ಒಂದು ಸಂಶೋಧನಾ ಮಂಡಲವನ್ನು ಶೀಘ್ರ ರಚಿಸುವದು ವೀರಶೈವರ ಮುಖ್ಯ ಕರ್ತವ್ಯವಾಗಿದೆ.

ಸಮಾಜದ ಸ್ವಾಮಿಗಳನ್ನೂ ಪಟ್ಟದ ಚರಮೂರ್ತಿಗಳನ್ನೂ ತಯಾರಿಸುವದಕ್ಕಾಗಿ ಸ್ಥಾಪಿತವಾದ ಶಿವಯೋಗ ಮಂದಿರದಂಥ ಉಚ್ಚ ಆಶ್ರಮದಲ್ಲಿ ಕೂಡ ವೀರಶೈವ ಧರ್ಮದ ಕ್ರಮಬದ್ಧವಾದ ಅಭ್ಯಾಸಕ್ಕಾಗಲಿ, ಸಂಶೋಧನೆಗಾಗಲಿ ಎಷ್ಟರ ಮಟ್ಟಿಗೆ ಆಸ್ಪದವಿದೆಯೆಂಬುದನ್ನು! ಸೂಕ್ಷ್ಮವಾಗಿ

ನಿರೀಕ್ಷಿಸಿದವರಿಗೆ ಚೆನ್ನಾಗಿ ತಿಳಿಯುವದು. ಅಲ್ಲಿಂದ ಹೊರಬೀಳುವ ಸ್ವಾಮಿಗಳಾಗಲಿ, ಪಟ್ಟ ಚರಮೂರ್ತಿಗಳಾಗಲಿ ಸಂಪೂರ್ಣವಾದ ವೀರಶೈವ ಮತದ ಜ್ಞಾನವನ್ನು ಅಳವಡಿಸಿಕೊಳ್ಳಬೇಡವೇ ? ಇಲ್ಲದಿದ್ದರೆ ಅವರು ಭಕ್ತರನ್ನು ಉದ್ಧರಿಸುವ ಬಗೆ ಹೇಗೆ ? ಬರೀ ಕೆಲವು ಆಸನ, ಯೋಗ, ಪ್ರಾಣಾಯಾಮ, ಪಕ್ಕಾ ಮಡಿ, ಲಿಂಗಪೂಜಾ ವಿಧಾನಗಳನ್ನರಿತುಕೊಂಡು ಅಲ್ಪ ಮಟ್ಟಿಗೆ ಸಂಸ್ಕೃತಾಧ್ಯಯನವನ್ನು ಮಾಡಿಕೊಂಡರೆ ಪರವಾದಿಗಳನ್ನು ಸಬಲವಾಗಿ ಪ್ರತಿಪಾದಿಸುವ ಎಂಟೆರ್ದೆಯು ಅವರಿಗೆ ಹೇಗೆ ಬರುವದು ? ಮಂದಿರದಂಥ ಉಚ್ಚ ಧ್ಯೇಯದ ಸಂಸ್ಥೆಗಳು ಇನ್ನೂ ಅನೇಕಾನೇಕ ಉತ್ಪನ್ನವಾಗಬೇಕು. ಆದರೆ ಅಲ್ಲಿ ಎಲ್ಲರಿಗೂ ಧಾರ್ಮಿಕ ಶಿಕ್ಷಣ ಸಂಶೋಧನೆಗಳಿಗೆ ಆಸ್ಪದವಿರಬೇಕು. ಅಂದರೆ ನಮ್ಮ ಸಮಾಜವು ಶೀಘ್ರದಲ್ಲಿ ಉನ್ನತಿ ಹೊಂದುವದು. ಸುಮ್ಮನೆ ಅಕ್ಷರ ಪೂರ್ತೆ ಓದಿಕೊಂಡು ನಮ್ಮ ಧರ್ಮವು ಅತ್ಯಂತ ಶ್ರೇಷ್ಠವೆಂದು ವೃಥಾಲಾಪ ಮಾಡಿದರೆ ಈಗಿನ ಪ್ರಗತಿಶೀಲ ಕಾಲದಲ್ಲಿ ನಮ್ಮನ್ನು ಯಾರು ಕೇಳಬೇಕು ? ಆದ್ದರಿಂದ ಗುರು ವಿರಕ್ತರು ಪ್ರಗತಿಪರ ಮಾರ್ಗದಲ್ಲಿ ಶಿಕ್ಷಣ ಹೊಂದಿದರೆ ಭಕ್ತರು ತಾವೇ ಮುಂದೆ ಬರಲು ಅವಕಾಶವಾಗುವದು.

ಇದು ಮೂಢ ನಂಬಿಗೆಯ ಕಾಲವಲ್ಲ. ಅಧರ್ಮಿಗಳೂ ಧರ್ಮಲಂಡರೂ ಎಂದು ಭಕ್ತರನ್ನು ಹೆದರಿಸಿ ಅವರಿಂದ ದುಡ್ಡು ಸೆಳೆಯುವ ದಿನಗಳು ಹಿಂದಾದವು. ಹೊಸ ಕಾಯ್ದೆಯಿಂದ ಮಠಮಾನ್ಯಗಳು ಸ್ವಾಮಿಗಳ ಕೈಬಿಡುವ ಪ್ರಸಂಗಗಳು ಬಂದೊದಗಹತ್ತಿವೆ. ಅವು ಟ್ರಸ್ಟಿಗಳ ವಶಕ್ಕೆ ಬಂದರೆ ಸ್ವಾಮಿಗಳ ಆಡಂಬರವು ಬಹುಮಟ್ಟಿಗೆ ಕುಗ್ಗುವದು. ಆಗ ಅವರನ್ನು ಕೇಳುವವರಾರು ? ಆದ್ದರಿಂದ ಅವರಲ್ಲಿ ಆಧ್ಯಾತ್ಮಿಕ ಬಲವು ಅಳವಡಲೇಬೇಕು. ಮಠಮಾನ್ಯ ಗಳಿಸುವದು ಮಹತ್ವವಲ್ಲ. ಆಧ್ಯಾತ್ಮಿಕ ಬಲವನ್ನು ಹೆಚ್ಚಿಸಿಕೊಳ್ಳುವದು ಮಹತ್ವ. ಅಂದಾಗ ಅವರ ಸ್ಥಾನ ಮಾನಗಳು ಕಾಯಂ ಉಳಿಯುವವು. ಇಲ್ಲದಿದ್ದರೆ ಸ್ಪರ್ಧೆಯ ಪರೀಕ್ಷೆಗಳನ್ನಿಟ್ಟು ಯೋಗ್ಯ ಪ್ರಶಸ್ತಿಪತ್ರಗಳನ್ನು ಪಡೆದ ಉಮೇದವಾರರು ಯಾವ ಜಾತಿಯವರೇ ಇರಲಿ ಅವರಿಗೆ ಮಠ ಮಾನ್ಯಗಳನ್ನೊಪ್ಪಿಸುವ ದುರ್ಧರ ಪ್ರಸಂಗ ಬರಬಹುದು. ಅದು ಕಾರಣ ಸಮಾಜವು ಬೂದಲೇ ಎಚ್ಚತ್ತು ಧರ್ಮಸಂಶೋಧನೆ, ತತ್ವಾಭ್ಯಾಸ, ಧಾರ್ಮಿಕ ಶಿಕ್ಷಣ, ತತ್ವ ಪ್ರಚಾರಗಳ ಕಡೆಗೆ ಹೆಚ್ಚು ಗಮನವನ್ನೀಯುವದು ವಿಹಿತ.

ಈಗ ಕರ್ನಾಟಕ ಪ್ರಾಂತ ಭಾಗಗಳು ಒಂದಾಗಿದೆ. ಇದರಿಂದ ಬೇರೆ ಬೇರೆ ಜಿಲ್ಹೆಗಳ ವೀರಶೈವರು ಒಂದುಗೂಡಲು ಒಳ್ಳೆ ಸಮಯ ಸಿಕ್ಕಂತಾಗಿದೆ. ಸಮಾಜವನ್ನು ಬಂಧುರಗೊಳಿಸಲು ಐಕ್ಯತೆ ಬೆಳಸಲು, ಧರ್ಮತತ್ವಗಳನ್ನು ಬೆಳಕಿಗೆ ತರಲು ಸುಪ್ರಸಂಗವಿದು. ನಮ್ಮ ಸಮಾಜದ ಸ್ವರೂಪ, ಹೆಚ್ಚಳ, ಧರ್ಮತತ್ವಗಳ ಪ್ರಕಾಶವನ್ನು ಕರ್ನಾಟಕಕ್ಕಷ್ಟೇ ಅಲ್ಲ; ಭಾರತಕ್ಕೆ ಅದೇಕೆ, ಇಡೀ ಜಗತ್ತಿಗೆ ನಾವು ತೋರಿಸಿ ವಿಶ್ವಶಾಂತಿಯನ್ನು ಸ್ಥಾಪಿಸಲು ಪ್ರಶಸ್ತಿ ಪಡೆಯಬೇಕಾಗಿದೆ. ನಮ್ಮಲ್ಲಿ ದಿವ್ಯ ರತ್ನಗಳಿರುವವೆಂದು ಮುಚ್ಚಿಟ್ಟುಕೊಂಡು ಕೂಡ್ರುವಕಾಲವಿದಲ್ಲ. ಜಗತ್ತಿಗೆ ಅವುಗಳನ್ನು ತೋರಿಸಿ ಅವುಗಳ ಬೆಲೆಯೆಷ್ಟೆಂಬದನ್ನು ಅವರಿಂದ ಕಂಡುಕೊಳ್ಳಬೇಕಾಗಿದೆ. ಧರ್ಮವೊಂದು ಬಂಧುರವಾಗಿದ್ದರೆ ಸಾಮಾಜಿಕ, ರಾಜಕೀಯ, ಔದ್ಯೋಗಿಕ, ಶೈಕ್ಷಣಿಕ ರಂಗಗಳ ಪ್ರಗತಿಯು ತಾನಾಗಿಯೇ ಆಗುವದು. ಧಾರ್ಮಿಕ ಮಟ್ಟವು ಇಳಿಮುಖವಾದರೆ ಉಳಿದ ಯಾವ ರಂಗದಲ್ಲಿಯೂ ಸ್ವಾರಸ್ಯವುಳಿಯಲಾರದು. ಇದನ್ನರಿತು ಸಮಾಜದ ಮುಖಂಡರು ವೀರಶೈವತತ್ವ ಸಂಶೋಧನೆ, ಪ್ರಚಾರಗಳ ಕಡೆಗೆ ಶೀಘ್ರಗಮನಿಸುವದೊಳಿತು.

ಈಗ ರಾಷ್ಟ್ರದ ಆಡಳಿತೆಗೆ ಧಾರ್ಮಿಕ ಪುರುಷರೂ, ಆತ್ಮಬಲಶಾಲಿಗಳೂ, ನೈತಿಕ ಶಕ್ತಿಯುಳ್ಳವರೂ ಬೇಕಾಗಿದ್ದಾರೆ. ಕಾಂಗ್ರೆಸ್ಸಿನ ಹೆಸರಿನಿಂದ ಹೊರಟವರೆಲ್ಲರೂ ಮ. ಗಾಂಧಿಯವರಂತೆ ಪವಿತ್ರಾತ್ಮರಿರುವರೆಂದು ಹೇಳಲಿಕ್ಕಾಗದು. ಅವರಲ್ಲಿ ಎಂತೆಂಥವರಿರುವರೆಂಬದು ರಾಷ್ಟ್ರದ ಮುಂದಾಳುಗಳ ನಜರಿಗೆ ಬಾರದೆಹೋಗಿಲ್ಲ. ಆದ್ದರಿಂದ ಮುಂದೆ ಕಾಂಗ್ರೆಸ್ಸೇ ಯಶಸ್ವಿಯಾದೀತೆಂದು ಹೇಳಬರುವಂತಿಲ್ಲ. ಮುಂದಿನ ಆಡಳಿತೆಯಲ್ಲಿ ಯೋಗ್ಯ ಗೌರವಸ್ಥರಿಗೂ, ಆತ್ಮಬಲಶಾಲಿಗಳಿಗೂ ಸ್ಥಾನಮಾನಗಳು ದೊರೆಯಬಹುದೇ ವಿನಾ ಅಂತಿಂಥ ಕಿರುಕಳ ಜನರಿಗೆ ದೊರೆಯಲಾರವು. ಬಹುಜನ ಅಸಮರ್ಥರು ಆಡಳಿತವನ್ನು ಸಾಗಿಸಿದರೆ ಅವರಿಂದ ರಾಷ್ಟ್ರೋನ್ನತಿಯಾಗಲಾರದು. ಆದ್ದರಿಂದ ಸ್ಥಾನಮಾನಗಳಿಗೆ ಹೋರಾಡುವ ನಮ್ಮ ಜನಗಳಾದರೂ ಆತ್ಮಬಲಶಾಲಿಗಳೂ ಧರ್ಮದ ನಿಜವಾದ ತಿರುಳನ್ನರಿತವರೂ ಇದ್ದರೆ ಸಮಾಜಕ್ಕೂ ಭೂಷಣ, ರಾಷ್ಟ್ರಕ್ಕೂ ಭೂಷಣ. ಸ್ವಾರ್ಥಿಗಳೂ ದುರ್ಬಲಾತ್ಮರೂ ಅದರಲ್ಲಿ ಸೇರಿದರೆ ಯಾವ ಹಿತವೂ ಆಗದು. ಕರ್ನಾಟಕದ ಹಿತವಾಗಬೇಕು; ಭಾರತದ ಜ್ಯೋತಿಯು ಬೆಳಗಬೇಕು. ಅದಕ್ಕಾಗಿ ರಾಜ್ಯಸೂತ್ರಗಳನ್ನು ವಹಿಸುವವರು ಅಂಥ ಪ್ರತಿಭಾವಂತರಿರಬೇಕೆಂಬದನ್ನು ಬೇರೆ

ಹೇಳಬೇಕಾಗಿಲ್ಲ. ಅಂಥ ಪ್ರತಿಭೆಯು ನಿಜವಾದ ಧರ್ಮರಹಸ್ಯವನ್ನು ತಿಳಿದವರಿಗೆ ಬರುತ್ತದಲ್ಲದೆ ಕಂಡಕಂಡವರಿಗ ಬರಲಾರದು. ಇದನ್ನರಿತು ಸಮಾಜದ ಮುಂದಾಳುಗಳು ತತ್ವಸಂಶೋಧನ, ಅಭ್ಯಾಸ, ಪ್ರಚಾರಗಳನ್ನು ಸಾಧಿಸುವ ಸಂಸ್ಥೆಯನ್ನು ಬೇಗನೆ ಕಟ್ಟುವದು ಅತ್ಯಗತ್ಯವೆಂದು ಬೇರೆ ಹೇಳಬೇಕಾಗಿಲ್ಲ.'

ನಮ್ಮೊಳಗೆ ನಿಜವಾದ ಧಾರ್ಮಿಕ ಗ್ರಂಥಗಳ ಅಭಾವದಿಂದಾಗಲಿ ಆ ತತ್ವಗಳನ್ನು ವಿವರವಾಗಿ ತಿಳಿಸಿ ಹೇಳುವ ಸಮರ್ಥ ಸ್ವಾಮಿಗಳ ಅಥವಾ ಪಂಡಿತರ ಅಭಾವದಿಂದಾಗಲಿ ನಮ್ಮ ಮತದ ಎಷ್ಟೋ ಜಿಜ್ಞಾಸುಗಳು ಸಾಯಿಬಾಬಾ, ಅರವಿಂದ, ಇಂಚಗೇರಿ, ಆರ್ಯಸಮಾಜ, ವಿವೇಕಾನಂದ, ವಾರಕರಿ, ಸಾಧುಸಮಾಜ ಮೊದಲಾದ ಪಂಥಗಳನ್ನನುಸರಿಸಹತ್ತಿದ್ದಾರೆ. ನಮ್ಮ ಧರ್ಮವು ಶ್ರೇಷ್ಠವೆಂದು ಹೇಳುವವರೆಲ್ಲ ಕ್ರಮೇಣ ಪರಧರ್ಮಾನುಯಾಯಿಗಳಾಗಹತ್ತಿದರೆ ಇಲ್ಲವೆ ತಮ್ಮೊಳಗೆ ಹೊಸ ಪಂಥಗಳನ್ನು ಸ್ಥಾಪಿಸಿಕೊಂಡು ಸಮಾಜವನ್ನು ಬಿಟ್ಟು ಕೆಲವರನ್ನು ಕೂಡಿಕೊಂಡು ಪ್ರತ್ಯೇಕವಾಗಿ ಇರಹತ್ತಿದರೆ ನಮ್ಮ ಸಮಾಜದಲ್ಲಿ ಶಿಥಿಲತೆಯುಂಟಾಗಿ ಅದು ನಾಶವಾಗಿ ಹೋಗುವ ಅನಿಷ್ಟ ಪ್ರಸಂಗ ಬರಬಹುದು. ತುಲನಾತ್ಮಕ ದೃಷ್ಟಿಯಿಂದ ನಮ್ಮ ಧರ್ಮದ ಶ್ರೇಷ್ಠತೆಯನ್ನು ಪ್ರಸ್ಥಾಪಿಸಲಿಕ್ಕೆ ಹೋಗುವದೊತ್ತಟ್ಟಿಗಿರಲಿ ನಮ್ಮದರಲ್ಲಿಯೇ ವಿಶ್ವಾಸವನ್ನು ಕಳೆಕೊಂಡು ಅನ್ಯ ಮತಕ್ಕೆ ನಾವು ಧಾವಿಸಬೇಕಾದೀತು. ಧರ್ಮಗ್ರಂಥಗಳ ಪ್ರಕಟನೆ, ಅಭ್ಯಾಸ, ಪ್ರಚಾರಗಳಿಗೆ ಅವಕಾಶವಿಲ್ಲದಿದ್ದರೆ ಸ್ವಾಮಿಗಳಲ್ಲಿ ಡಾಂಭಿಕ ಪ್ರವೃತ್ತಿಯೂ ಭಕ್ತರಲ್ಲಿ ಮೂಢ ಭಾವನೆಯೂ ಹೆಚ್ಚುವದು. ಇದು ಧಾರ್ಮಿಕ ಅವನತಿಯ ಲಕ್ಷಣ.

ಇದಲ್ಲದೆ ನಮ್ಮ ಧರ್ಮದಲ್ಲಿ ಶುದ್ಧೀಕರಣಕ್ಕೆ ಆಸ್ಪದವಿದ್ದು ಹಿಂದುಳಿದ ಅಸ್ಪೃಶ್ಯರು, ಬೇಡರು, ಮೇದಾರರು, ಕ್ಷೌರಿಕರು, ಕುರುಬರು, ನೀಲಗಾರರು, ರಡ್ಡಿ ಜನರು ಹಿಂದಕ್ಕೆ ಲಿಂಗಾಯತರಾಗಿದ್ದು, ಕೆಲವರು ಬಳಿಕೆಯಿಂದ ದೂರವಾಗಿರುವದಕ್ಕೆ ಸಮಾಜದ ಅಜ್ಞಾನವೇ ಕಾರಣ. ಅದು ಕಾರಣ ಶುದ್ಧೀಕರಣಕ್ಕೆ ಈಗಿನ ಕಾಲದಲ್ಲಿ ಹೆಚ್ಚು ಪ್ರಶಸ್ತಿಯನ್ನು ನೀಡುವದು ಶ್ರೇಯಸ್ಕರ. ಹೊಲೆಯರನ್ನು ಸಹ ಲಿಂಗಾಯತರನ್ನಾಗಿ ಮಾಡುವದೇನೂ ಕೆಟ್ಟಿಲ್ಲ. ಆದರೆ ಲಿಂಗಾಯತರು ಹೊಲೆಯರೊಡನೆ ಬೆರೆತು

ಹೊಲೆಯರಾಗಬಾರದಷ್ಟೇ. ಕೇವಲ ಸಮಾಜದ ಸಂಖ್ಯೆಯನ್ನು ಬೆಳಸ ಲೋಸುಗ ಶುದ್ಧೀಕರಣದ ಧೋರಣವನ್ನಿಟ್ಟುಕೊಳ್ಳಬಾರದು. ಹಿಂದುಳಿದ ವರಿಗೂ ಉದಾರವಾದ ಮತ್ತು ವಿಶಾಲವಾದ ತತ್ವಗಳನ್ನೂ ಆಚರಣೆ ಯನ್ನೂ ಹೇಳಿಕೊಟ್ಟು, ಅವರ ಮಟ್ಟವನ್ನು ಎತ್ತಿ ತೋರಿಸುವದೇ ಅದರ ಮುಖ್ಯ ಗುರಿಯಾಗಿರಬೇಕು. ಹಿಂದುಳಿದವರನ್ನು ಶಿಕ್ಷಣ ಕೊಟ್ಟು ಮುಂದೆ ತರಬೇಕೆಂದು ಸರಕಾರದವರು ಪ್ರಯತ್ನಿಸುವದಿಲ್ಲವೇ? ಹಿಂದಕ್ಕೆ ಬಸ ವಾದಿ ಪ್ರಮಥರು ಹಿಂದುಳಿದವರನ್ನು ಧರ್ಮದಲ್ಲಿ ಸೇರಿಸಿಕೊಂಡು ಅವರ ಮಟ್ಟವನ್ನು ಏರಿಸಿ, ಐಕ್ಯತೆಯನ್ನು ಸಾಧಿಸಿದರು. ಇದನ್ನರಿತು ವೀರಶೈವ ತತ್ವ ಪ್ರಚಾರಕ್ಕೆ ಶುದ್ಧೀಕರಣವು ಅತ್ಯವಶ್ಯಕವೆಂಬುದನ್ನು ನಾವು ಮರೆ ಯಲಾಗದು. ಇದಕ್ಕಾಗಿ ಕನಿಷ್ಠ ಒಂದಾದರೂ ತತ್ವ ಪ್ರಚಾರ ಶಿಕ್ಷಣ ಸಂಸ್ಥೆಯು ಸಂಶೋಧನಾ ಮಂಡಲದ ಜೊತೆಗೆ ಸ್ಥಾಪಿಸಲ್ಪಟ್ಟರೆ ಸಮಾ ಜಕ್ಕೆ ಹೆಚ್ಚು ಶ್ರೇಯಸ್ಸುಂಟಾದೀತೆಂದು ನಮ್ಮ ಭಾವನೆ.

# ಅರಭಾವಿ ಶ್ರೀ ದುರದುಂಡೇಶ್ವರನ ಮಹಿಮೆ

(ಲೇಖಕಃ– ಶ್ರೀ ಜಿ. ಪಿ. ಅಂಗಡಿ, (ಸಂಗೊಳ್ಳಿ) 'ಸಾಹಿತ್ಯ ಭೂಷಣ')



(ಟೀಪು:— ರಾತ್ರಿಯಲ್ಲಿ ಮಲಗಿಕೊಂಡಾಗ ಶ್ರೀ ದುರದುಂಡೀ ಮಹೇಶ್ವರನು ಕನಸಿನಲ್ಲಿ ಬಂದು, "ನನ್ನ ಲೀಲೆ-ಪವಾಡಗಳನ್ನು ಬರೆದು ಪ್ರಕಟಿಸು. 'ಜಂಗಮೋ ಜಗದ್ಭರಿತಃ' 'ಈ ಸಂಸಾರ ಸಮುದ್ರವನ್ನು ದಾಟಿಸಲಿಕ್ಕೆ ಗುರುಪಾದಾನುಗ್ರಹವೇ ನೌಕೆ. ಗುರುಕೃಪಾ ಕಟಾಕ್ಷದಿಂದಲೇ ಮಾನವನ ಘೋರ ದುರಿತಗಳೆಲ್ಲವೂ ನಾಶವಾಗಿ ಉನ್ನತ ಫಲ ದೊರಕುವದು.' ಸಾಮಾನ್ಯ ಸ್ಥಿತಿಯಿಂದ ಜೀವನ್ಮುಕ್ತಾವಸ್ಥೆಗೇರಿದ ನನ್ನ ಜೀವನವೂ, ಭಕ್ತರ ಮನೆಮನೆಯಲ್ಲಿ 'ಭಕ್ತಿಯ ಹಣತೆ' ಯನ್ನು ಹಚ್ಚಿದಂತೆ ಆಗಬಲ್ಲದು. ಅರಭಾವಿಯಲ್ಲಿ ನನ್ನ ಆತ್ಮಜ್ಯೋತಿಯು ಉಜ್ವಲವಾದ ಬೆಳಕನ್ನು ಬೀರುತ್ತಾ ಭಕ್ತರ ಕಣ್ಮನಗಳಿಗೆ ಚಿರಕಾಲವು ಸಂತೋಷವನ್ನೀಯುವೆ." ಇದನ್ನು ೧೬—೪—೫೭ನೆಯ ದಿವಸ ಕನಸ್ಸಿನಲ್ಲಿ ಕಣ್ಣಾರೆ ಕಂಡೆನು. ಮನವು ತಣಿಯಿತು. ಎಚ್ಚರಾದೆನು. ಅವನ ದಿವ್ಯ ಮೂರುತಿ ಮೃಗಜಲದಂತೆ ಮಾಯವಾಯಿತು. ದುರದುಂಡೀ ಮಹೇಶ್ವರನು ಅಪ್ಪಣೆ ಕೊಡಿಸಿದಂತೆ 'ಭಕ್ತಿಯ ಹಣತೆ' ಯನ್ನು ಹಿಗ್ಗಿಸಲು ಬರೆದ "ಅರಭಾವಿ ದುರದುಂಡೇಶ್ವರನ ಮಹಿಮೆ' ಯು ಇದು. —ಲೇಖಕ)

ಶ್ರೀಮದ ವಿರಳರೂಪ ನಿರುಪಾಧಿ ಜಂಗಮಂ ।
ಹೇಮಗಿರಿಯಿಂದಿಳಿದು 'ಶಿವಲಿಂಗ'ನಾಮದಿಂ ।
ಭೂಮಿಯಲಿ ಬಂದು ನಿಜಲೀಲೆಯಿಂ ಮೆರೆದಿರ್ದನರಭಾವಿ
ಪುಣ್ಯಾದ್ರಿಯೋಳ್ ॥

ಗೋಕಾವಿ ತಾಲೂಕಿನಲ್ಲಿ ಅರಭಾವಿ ಮಠವು ಒಂದು ದಕ್ಷಿಣ ಕಾಶಿಯಂತೆ ಪುಣ್ಯ ಕ್ಷೇತ್ರವುಂಟು. ಶ್ರೀ ದುರದುಂಡೇಶ್ವರನ ಮಠವನ್ನು ಅಚ್ಚಾದ ಕಲ್ಲಿನಿಂದ ಕಟ್ಟಿದ್ದಾರೆ. ಜಡಶಿಲೆಯೊಂದನ್ನು ಆಯ್ದುಕೊಂಡು ಶಿಲ್ಪಿಯು ಅದರ ಅನವಶ್ಯಕ ಭಾಗಗಳನ್ನೆಲ್ಲ ಕೆತ್ತಿ ಎಸೆದು ಅವಶ್ಯಕ ಭಾಗಗಳನ್ನು ಉಳಿಸಿಕೊಂಡು ಶಿಲೆಗೊಂದು ಜೀವಂತ, ಸುಂದರ ಸ್ವರೂಪವನ್ನು ಕೊಟ್ಟು

ಒಂದು ಸುಂದರವಾದ ಮಠವನ್ನು ನಿರ್ಮಿಸಿದ್ದಾನೆ. ಅಲ್ಲಿಯ ಚಿತ್ರಗಳನ್ನು ಬರೆದವರು ಕನ್ನಡಿಗರು. ಆ ಚಿತ್ರ ಕೃತಿಯನ್ನು ಇಂದು ಜಗತ್ತು ಹೊಗಳುತ್ತದೆ. ಅಲ್ಲಿಯ ಒಂದೊಂದು ಕಲ್ಲಿನ ಕಂಭವನ್ನು ನೋಡಿದರೆ ಆಶ್ಚರ್ಯವಾಗುತ್ತದೆ. ನಮ್ಮವರು ಕಲ್ಲನ್ನೂ ಅಳಿಸಿದ್ದಾರೆ. ನೆನಿಸಿದ್ದಾರೆ. "ಶಿಲೆಯಲ್ಲವಿದು, ಕಲೆಯ ಬಲೆ" ಎಂದು ಅನಿಸುತ್ತದೆ. ಗುಡಿಯ ನಾಲ್ಕೂ ಮೂಲೆಗಳಲ್ಲಿ ಒಂದೊಂದು ಕಲ್ಲಿನ ಸರಪಳಿ ಇರುತ್ತದೆ. ಅವುಗಳನ್ನು ನೋಡಿದರೆ ಇದು ಕಲ್ಲು ಅಲ್ಲ, ಮೇಣವೆಂದು ತೋರುತ್ತದೆ. ಈ ಮಠವು ಇವೊತ್ತಿನವರೆಗೂ ಹೊಸದಾಗಿ ನಿರ್ಮಿಸಿದಂತೆ ಕಾಣುವದು. ಇದೊಂದು ದರ್ಶನೀಯ ಪ್ರಕೃತಿಸೌಂದರ್ಯ, ಪವಿತ್ರ ಕ್ಷೇತ್ರವುಂಟು. ರಸಜೀವಿಗಳ ಆತ್ಮ ಕಲ್ಯಾಣಕ್ಕೆ ಸಾಧನ ರಂಗವಾದ ಪುಣ್ಯಾಶ್ರಮದಂತೆ ತೋರುತ್ತದೆ. ಜಗತ್ತಿನಲ್ಲಿ ಇಂಥ ಮಹಿಮಾಮಯವಾದ ದೇವಸ್ಥಾನ ಮತ್ತೊಂದುಟೇ ?

ಇಂಥ ದೇವಸ್ಥಾನ ಸಾನ್ನಿಧ್ಯದಲ್ಲಿ ನಾನು ಚಿಕ್ಕಂದಿನಲ್ಲಿ ನಲಿದು, ದುರದುಂಡೇಶನ ಪ್ರಸಾದ ಸೇವಿಸಿ ಬೆಳೆದು ಬಂದವನು. ಅರಭಾವಿ ಮಠವೆಂದರೆ ನನಗೆ ಬಹಳ ಮಮತೆ. ಒಂದು ವಿಧವಾದ ಕುರುಡು ಮೋಹ ಎಂದರೂ ಎನ್ನಬಹುದು. ಅದು ಸೊಬಗಿನ ಬೀಡು. ಸಾಲು ಸಾಲಾಗಿ ಎದ್ದಿರುವ ಬೆಟ್ಟಗಳು, ಅಲ್ಲಲ್ಲಿ ಬನಬೆಟ್ಟಗಳ ನಡುವೆ ಹರಿಯುವ ಹೊಳೆ ತೊರೆಗಳು, ವಿಧವಿಧವಾದ ಇಂಚರಗೈವ ಸಾವಿರಾರು ಬಗೆಯ ಬಣ್ಣ ಬಣ್ಣದ ಹಕ್ಕಿಗಳು, ಅಲ್ಲಿಯ ಪ್ರಕೃತಿಸೌಂದರ್ಯವನ್ನು ಅನುಭವಿಸಿದ್ದರಿಂದ "ನೆನೆವುದೆನ್ನ ಮನಂ ಅರಭಾವಿ ಕ್ಷೇತ್ರಂ."

ದೇವಸ್ಥಾನದದ ಸಮೀಪದಲ್ಲಿ ಹೂವಿನ ತೋಟವಿದೆ. ಮನೋಹರವಾದ ಬಿಲ್ವ ಪತ್ರಿ ಗಿಡಗಳೇ. ಚಿಗುರಿದ ಎಲೆಬಳ್ಳಿಗಳೇ, ಹೂಬಿಟ್ಟ ಜಾಜಿ ಸಂಪಿಗೆಗಳು | ಸಂತಸದ ಸುಗ್ಗಿಗೆ ಕುಕಿಲ್ವ ಕೋಗಿಲೆಯೇ, ಸ್ವರವಿಡಿದು ಪಾಡುವ ಭ್ರಮರವೇ, ಬಿರಿದ ಮಲ್ಲಿಗೆಯ ಹೂವಿನ ಗಿಡಗಳೇ ಮೊದಲಾದ ಮೈತುಂಬ ಹೂವು ಬಿಟ್ಟು ಹಬ್ಬಿರುವ ಹೂಗಿಡಗಳನ್ನೂ, ಬಳ್ಳಿಗಳನ್ನೂ ನೋಡುವವನಿಗೆ ಅವುಗಳ ಸೊಗಸು ಕಾಣುವದು. ಇದೊಂದು ನೋಡುವವರ ಮನಸ್ಸನ್ನು ಸೂರೆಗೊಂಡು ಶ್ರೀ ದುರದುಂಡೀ ಮಹೇಶ್ವರನ ಮಹಿಮೆಯನ್ನು ಸಾರುವಂತೆ ಕಾಣುತ್ತಿದೆ.

ಶ್ರೀ ದುರದುಂಡೀ ಮಹೇಶ್ವರನ ಮಹಿಮೆ, ನೀತಿ, ಭಕ್ತಿ, ಜ್ಞಾನ, ವೈರಾಗ್ಯಾದಿಗಳನ್ನೊಳಕೊಂಡ ಅನಂತ ಲೀಲಾ ಜಾಲದಿಂದ ರಂಜಿಸುವದು. ಮನೋರಂಜಕವಾದಂಥ ವಿಷಯ ವ್ಯಾಪಾರವನ್ನು ಹೆಚ್ಚಿಸುವಂಥ ಬರಹಗಾರರು ಬಹಳವಾಗಿ ಬರೆಯಬಹುದು. ಆದರೆ ಜ್ಞಾನ ಪ್ರದೀಪ್ತಿಯಿಂದ ಸಂಸಾರದಲ್ಲಿದ್ದರೂ ಸದ್ಗತಿಯನ್ನು ಕೊಡುವ ಇಂಥ ಬರಹಗಾರರು ಪ್ರಸಿದ್ಧವಾಗುವದು ವಿರಲ. ಈ ನನ್ನ ಬರಹವು ಇಹಪರ ಸುಖಪ್ರದಾಯಕನಾಗಿದೆ. "ಹರನಿಗಿಂತಲೂ ಗುರುವು ದೊಡ್ಡವನು" ಎಂಬುದನ್ನು ಮನವರಿಕೆ ಮಾಡಿ ಕೊಡುವದು. ದುರ್ಧರವಾದ ಈ ಸಂಸಾರ ಸಮುದ್ರವನ್ನು ದಾಟಿಸಲಿಕ್ಕೆ ಗುರುಪಾದಾನುಗ್ರಹವೇ ನೌಕೆಯಲ್ಲವೇ ? ಗುರುಕೃಪಾ ಕಟಾಕ್ಷದಿಂದಲೇ ಮಾನವನ ಘೋರ ದುರಿತಗಳೆಲ್ಲವೂ ನಾಶವಾಗಿ ಉನ್ನತ ಫಲ ಪ್ರಾಪ್ತಿಯಾಗುವದು.

ದುರದುಂಡಿ ಜಂಗಮನು ಶಿವನಾಜ್ಞೆಯಿಂದ ದುರದುಂಡಿ ಗ್ರಾಮದಲ್ಲಿ ಅವತರಿಸಿದನು. ಚಿಕ್ಕಂದಿನಲ್ಲಿ ದನಗಾಯಿಗಳು 'ಬೊಕ್ಕಯ್ಯ' ನೆಂದು ಕರೆಯುತ್ತಿದ್ದರು. ದನಗಾಯಿಗಳ ಕೂಡ ದನ-ಕರ ಕುರಿಹಿಂಡುಗಳನ್ನು ಕಾಯಲಿಕ್ಕೆ ಹೋಗುತ್ತಿದ್ದರು. ಅವರ ಕೂಡ 'ಚಿಣಿ-ಫಣಿ' ಆಟ ಆಡುತ್ತಿದ್ದರು ಈತನಿಗೆ ಸೋಲೆಂಬುದು ಗೊತ್ತಿರಲಿಲ್ಲ. ಒಮ್ಮೆ ದನಗಾಯಿಗಳ ಕೂಡ ಜಗಳವಾಯಿತು. ಅವರೆಲ್ಲರೂ ಒಕ್ಕಟ್ಟಾಗಿ, ಹಳ್ಳದ ಮಧ್ಯದಲ್ಲಿ ಒಂದು ಆಳ ತೆಗ್ಗು ತೆಗೆದು ಈ ಮಹಿಮನನ್ನು ಹಿಡಿದು ತೆಗ್ಗಿನಲ್ಲಿ ಒಗೆದು ಉಸುಕು ಮುಚ್ಚಿದರು. ಅಷ್ಟರಲ್ಲಿ ದೊಡ್ಡದಾದ ಮಳೆ ಬಂದಿತು. ಬೊಕ್ಕಯ್ಯ ಸತ್ತನೆಂದು ಒದರಾಡುತ್ತಾ ತಮ್ಮ ದನಗಳನ್ನು ಹೊಡೆದುಕೊಂಡು ತಮ್ಮ ಮನೆಗಳಿಗೆ ತೆರಳಿದರು. ಆ ಗ್ರಾಮದಲ್ಲಿ ಬೊಕ್ಕಯ್ಯನ ಬಗ್ಗೆ ಸುದ್ದಿ ಹಬ್ಬಿತು. ಒಬ್ಬ ಹುಡುಗನು ಬೊಕ್ಕಯ್ಯನ ತಂದೆತಾಯಿಯವರಿಗೆ ತಿಳಿಸಿದನು. ಅವರು ಕೂಡಲೇ ಊರ ಪ್ರಮುಖರನ್ನು ಕರೆದುಕೊಂಡು ಬಂದರು. ಅವರು ಹುಗಿದ ಸ್ಥಳವನ್ನು ನಿರಿಕ್ಷಿಸಿದರು. ಆಶ್ಚರ್ಯಚಕಿತರಾದರು. ಯಾಕಂದರೆ ಹಳ್ಳ ತುಂಬಿ ಹರಿಯುತ್ತಿದ್ದರೂ ನೀರು ಈ ಮಹಿಮನ ಸಮಾಧಿಯ ಮೇಲೆ ಹರಿದಿಲ್ಲವಲ್ಲಾ" ಎರಡು ಇಬ್ಭಾಗವಾಗಿ ನೀರು ಹರಿಯುತ್ತಿತ್ತು. ನಡುವೆ ಹುಗಿದ ಸ್ಥಳವನ್ನು ಬಿಟ್ಟು ನೀರು ಹರಿಯುತ್ತಿತ್ತು. ಅಲ್ಲಿ ಜನರು ಹೋಗಿ

ಉಸುಕು ತೆಗೆದು ನೋಡಲಾಗಲು ಶ್ರೀ ದುರದುಂಡೀ ಮಹೇಶ್ವರನು ನಸು ನಗುತ ಮೇಲಕ್ಕೆದ್ದರು. ಅಂದಿನಿಂದ ದುರದುಂಡೇಶ್ವರನೆಂದು ಕರೆಯಲಿಕ್ಕೆ ಹತ್ತಿದರು.

ದುರದುಂಡಿ ಜಂಗಮನ ಮಹಿಮೆ ದಿನಂಪ್ರತಿ ಹೆಚ್ಚುತ್ತಾ ನಡೆಯಿತು. ಕೆಲ ದಿವಸಗಳ ತರುವಾಯ, ಅರಭಾವಿ ಮಠದಲ್ಲಿ ಆಶ್ರಮ ಮಾಡಿಕೊಂಡರು. ಅವರು ದಿನಾಲು ಬಿನ್ನಾಯಿ:ಗಳನ್ನು ತೀರಸಲಿಕ್ಕೆ ಗೋಕಾವಿಗೆ ಹೋಗುತ್ತಿದ್ದರು. ಅಲ್ಲಿಯ ಶರಣರು (ಭಕ್ತರು) ವಿಧ ವಿಧ ಪಂಚ ಪಕ್ವಾನ್ನ ಮಾಡಿ, ಇವರಿಗೆ ಉಣಬಡಿಸುತ್ತಿದ್ದರು. ಕೆಲವರು ಒಳ್ಳೇ ಭಕ್ತರಿದ್ದರು. ಕೆಲವರು ಇವರನ್ನು ಹೀಯಾಳಿಸಿ ಬಿಡುತ್ತಿದ್ದರು. ಇದೊಂದು ಲೋಕದ ರೂಢಿಯುಂಟು. ಇದನ್ನು ಲಕ್ಷಕ್ಕೆ ಇವರು ಕೊಡುತ್ತಿರಲಿಲ್ಲ. ಸಾಕ್ಷಾತ್ ಪರಶಿವನಿದ್ದುದರಿಂದ, ಕಪಟಗಳ ನಿಂದೆ, ಮೋಸ ಇವರ ಮೇಲೆ ಯಾವ ಆಟ ನಡೆಯುತ್ತಿದ್ದಿಲ್ಲ.

ಒಮ್ಮೆ ಶ್ರಾವಣದಲ್ಲಿ, ಗೋಕಾವಿಗೆ ಬಿನ್ನಾಯಿಗಳನ್ನು ತೀರಸಲಿಕ್ಕೆ ಹೋಗಿದ್ದರು. ಬಣಗಾರ ಸುಬ್ಬವ್ವನೆಂಬ ಮುದುಕಿಯಲ್ಲಿ ದುರ್ಬುದ್ಧಿಹುಟ್ಟಿ ಸುಣ್ಣದ ಹುಗ್ಗಿಯನ್ನು ಮಾಡಿ, ದುರದುಂಡಿ ಮಹಿಮನಿಗೆ ಊಟದ ಔತಣ ಕೊಟ್ಟಳು. ಅವಳ ಮನೆಯಲ್ಲಿ ಶಿವಲಿಂಗ ಪೂಜೆಯನ್ನು ತೀರಿಸಿಕೊಂಡು "ತಾಯಿ, ಪ್ರಸಾದವನ್ನು ನೀಡು." ಅವಳು 'ಸುಣ್ಣದ ಪಾಯಸವನ್ನು ನೀಡಿದಳು! ಆದರೆ ಈ ದುರದುಂಡಿ ಜಂಗಮನು ಸಾಕ್ಷಾತ್ ಪರಶಿವನ ರೂಪದಿಂದ ಅವತರಿಸಿದ್ದರಿಂದ, ಸುಣ್ಣದ ಪಾಯಸ ಏನು ಮಾಡಬಲ್ಲದು? ಅವರು ಪ್ರಸಾದವನ್ನು ಸ್ವೀಕರಿಸಿದಂತೆ, ಅವಳ ಒಡಲಲ್ಲಿ ಉರಿಯಲಿಕ್ಕೆ ಹತ್ತಿತು. ಒದರಾಡಲಿಕ್ಕೆ ಹತ್ತಿದಳು, ಚೀರಾಡಲಿಕ್ಕೆ ಹತ್ತಿದಳು. ಅವರ ಪಾದಗಳಲ್ಲಿ ಬಿದ್ದಳು.

"ಜಂಗಮ ದ್ರೋಹಕ್ಕೆ ನಿಷ್ಕೃತಿಯು ದಿಪ್ಪುದೇ? । ಸಂಗಡಿಸಿತಕಟ ಕಟ ಸರ್ವಜನ ಮರಿವಂತೆ । ಮಂಗಲಮಹಾ ಮುನಿಯು ಕೋಪಿನದ ಮುನ್ನಮೇ ತೊನ್ನಾಯ್ತು ಸರ್ವಾಂಗವು ॥ ಅಂಗನೆಯರಿಂಗಿತವು ಕೇಡಿಗದು ಗುರಿಯೆಂದು ಜಂಗಮನು ಸುಬ್ಬಾಯಿ ನಿನ್ನ ವಂಶವು ಭರದೆ । ಭಂಗ ಮಾಗುವದೆಂದು" ನುಡಿದು ಚರ ಪುಂಗವಂ ಬಯಲಾದನಾಕ್ಷಣದೊಳು. ಇದರಿಂದ ಅವಳಿಗೆ ಕುಷ್ಟರೋಗವು ಅಂಟಿಕೊಂಡಿತು.

ಸುಬ್ಬಣ್ಣನ ಮನೆಯಿಂದ ಹೊಳೆಯ ದಂಡೆಗೆ ಬಂದರು. ಮಳೆಗಾಲವಿದ್ದದರಿಂದ ಹೊಳೆ ತುಂಬಿ ಹರಿಯುತ್ತಿತ್ತು. ನಾವಿನಹೊರತು ಪ್ರಯಾಣಿಕರಿಗೆ ಬೇರೆ ಮಾರ್ಗ ಇರಲಿಲ್ಲ. “ಪರಮ ವರ ವೀರಶೈವ ಮಾರ್ಗ ಸಮ್ಮತವೆ? ಪರಿಕಿಪಡೆ ಷಟ್‌ಸ್ಥಲ ಬ್ರಹ್ಮಗಿರಿದೇಂ ಹಿತವೆ?” ದನಕರ, ಕುರಿ ಹಿಂಡುಗಳನ್ನು ಕಾಯ್ದು ಈ ಜಂಗಮನಿಗೆ ‘ಸ್ವಾಮಿ’ ಎನ್ನಬೇಕೇ? ಈತನ ಆಳವನ್ನು ಅರಿವು ಮಾಡಿಕೊಳ್ಳದಲೆ ನಾವಿಕರು, ಗೋಕಾವಿ ಶರಣರು ನಿಂದೆಗಳನ್ನು ಮಾಡಲಿಕ್ಕೆ ಹತ್ತಿದರು. “ಭಕ್ತರೇ ನನ್ನನ್ನು ನಾವಿನಿಂದ ದಾಟಿಸಿರಿ.” ನಾವಿಕರು ರೊಚ್ಚಿಗೆದ್ದು, ಬಾಯಿಗ ಬಂದ ಶಬ್ದಗಳನ್ನು ಉಪಯೋಗಿಸಿ ಬಯ್ದರು. ಕೊನೆಗೆ ನಾವಿನ ಸಮೀಪಕ್ಕೆ ಬರಗೊಡಲಿಲ್ಲ. ಆವಾಗ್ಗೆ “ವಿರೂಪ ವ್ಯಾಘ್ರ ಜಿನದ ಪರಿಯಂತೆ ಕಂಗೊಳಿಸು– । ತಿರುವ ತತ್ಕಂಬಲಾಸನದಲ್ಲಿ ಮಂಡಿಸುತೆ । ಕರಕಮಂಡಲು ವೇತ್ರವರ ಭಸ್ಮರುದ್ರಾಕ್ಷಿ ಮಾಲಾಳಿಗಳನೆಸೆಯುತೆ । ತೊರೆಯೆಲ್ಲಿ ಮನದೊಳಗೆ ಪಂಚಾಕ್ಷರೀ ಮನುವ । ಸ್ಮರಿಸುತ್ತೆ ಬರುತಿರ್ದನಿಳೆಯರಿಯೆ ಜಂಗಮಂ ॥ ಧರಣಿಯೊಳಗಿದು ಚಿತ್ರಮರಿಯಲ್ಕ ಸಾಧ್ಯಮತ್ಯಾನಂದದಂ ಮಹಿಮೆಯು॥” ಹೀಗೆ ಮಾಡಿ ಹೊಳೆಯನ್ನು ದಾಟಿದರು. ನಾವಿಕರು ನಡು ಹೊಳೆಯಲ್ಲಿ ಬಂದು, ನಾವು ಮುಂದೆ ಹೋಗಲೊಲ್ಲದಾಗಲೂ, ಪಶ್ಚಾತಾಪಪಟ್ಟು, ಇದು ಆ ಮಹಿಮನಿಗೆ ನಿಂದೆ ಮಾಡಿದ ಪ್ರತಾಪವೆಂದು ತಿಳಿದು, ದುರದುಂಡೀಶನನ್ನು ನೋಡಿದರು. ಅವರು ಹೊಳೆಯನ್ನು ದಾಟಿದ್ದರು. ಇದನ್ನು ನೋಡಿ, ತಪ್ಪಾಯಿತು, ಕ್ಷಮಿಸಿರಿ. ಎಂದು ನಾವಿಕರು ದುರದುಂಡೀಶನನ್ನು ಕರೆದರು. ಇವರು ಕೈಮಾಡಿ ಕರೆದರು. ನಾವು ತನ್ನಿಂದ ತಾನೇ ಬಂದು ದಂಡೆಗೆ ತಲುಪಿದವು. ಇದರಿಂದ ಗೋಕಾವಿ ಶರಣರ ಸಂಶಯವನ್ನು ನಿವಾರಿಸಿದರು. ಈಗ್ಗೆ ಗೋಕಾವಿಯ ಘಟಪ್ರಭಾ ನದಿಯ ದಂಡೆಯ ಮೇಲೆ ಈ ಮಹಿಮೆಯ ಕುರುಹುಗಾಗಿ ಗುಡಿಯನ್ನು ನಿರ್ಮಿಸಿದ್ದಾರೆ. ಈಗಲೂ ಅರಭಾವಿ ಮಠದ ಸೇವಕರು ಗೋಕಾವಿಗೆ ಬಂದರೆ, ಪುಕ್ಕಟವಾಗಿ ನಾವೆಗಳಿಂದ ದಾಟಿಸುವರು.

ಮತ್ತೊಮ್ಮೆ ಕೊಲ್ಹಾಪುರ ಮಹಾರಾಜನಲ್ಲಿ ಕೆಂದುಗುದುರೆಯನ್ನು ಕದ್ದು ತಂದಿದ್ದ ಒಬ್ಬ ಚೋರನು ಪೂರ್ವ ಪಾಪಗಳನ್ನು ಈ ಜಂಗಮ ದರ್ಶನದಿಂದ ನೀಗಿದನು. ಹುಡುಕಲಿಕ್ಕೆ ಬಂದಾಗ್ಗೆ ಬಿಳಿಗುದುರೆಯಾಗಿ ನಿಂತಿತು. ಕದ್ದು ತರುವಾಗ, ರಾಜರಾವುತರು ಆ ಚೋರನ ಹಿಂದೆ,

ತಮ್ಮ ಕುದುರೆಗಳನ್ನು ಬಿಟ್ಟರು. ಆದರೆ ಅವರಿಗೆ ಆ ಚೋರನು ಸಿಗಲಿಲ್ಲ. ಪಟ್ಟದ ಕುದುರೆ ಇದ್ದುದರಿಂದ ಅದರ ಓಟದ ವೇಗವು ಮೋಡಗಳ ವೇಗವಿತ್ತು. ಅವನ ಹಿಂಬಾಲಿಸಿ ತಮ್ಮ ಕುದುರೆಗಳನ್ನು ಬಿಟ್ಟರು. ಕೊನೆಗೆ ಆ ಚೋರನು ಶ್ರೀ ಅರಭಾವಿ ಕ್ಷೇತ್ರದಲ್ಲಿ ಬಂದು, ದುರದುಂಡಿ ಮಹೇಶನಿಗೆ ನಡಗುತ್ತಾ ಆದ ಸಂಗತಿಯನ್ನು ತಿಳಿಸಿದನು. “ಶಿವನು ನಿನ್ನನ್ನು ಕಾಪಾಡುವನು, ಕುದುರೆಯನ್ನು ಪಾಗಾದಲ್ಲಿ ಕಟ್ಟಿ ಬಾ” ಅಂದ ಮಹೇಶನು. ಆ ಚೋರನು ಅವರ ಹೇಳಿಕೆಯ ಪ್ರಕಾರ ಕಟ್ಟಿ ಬಂದನು. ಅಷ್ಟರಲ್ಲಿ ಕೊಲ್ಹಾಪುರದ ರಾಜ ರಾವುತರು ಅಲ್ಲಿಗೆ ಬಂದು, “ಸ್ವಾಮೀಜಿ, ನಮ್ಮ ಕೊಲ್ಹಾಪುರದ ಪಟ್ಟದ (ರಾಜನ) ಕುದುರೆಯನ್ನು ಒಬ್ಬ ಚೋರನು ನಿಮ್ಮಲ್ಲಿ ತಂದಿದ್ದಾನೆ. ಅದನ್ನು ಕಣ್ಣಾರೆ ನೋಡಿದ್ದೇವೆ” ಎಂದರು. “ನಿಮ್ಮ ಕುದುರೆ ಇದ್ದರೆ ತೆಗೆದುಕೊಳ್ಳಿರಿ, ಪಾಗಾದಲ್ಲಿ ನೋಡಿಕೊಳ್ಳಿರಿ” ಎಂದು ನಸುನಗುತ ದುರದುಂಡೀ ಮಹೇಶನು ಅಂದನು. ಭರದಿಂದೆ ಭಟಮಾನ್ಯರಾಕ್ಷಣದೆ ನಮಿಸುತ್ತೆ ಬಂದಲ್ಲಿ ನೋಡುತ್ತಿರೆ, “ಕಂದಿಲ್ಲ, ಕುಂದಿಲ್ಲದಿಹ ಕೆಂದಗುದುರೆಯದು। ಕುಂದ ಮಂದಾರ ಹರಿಚಂದನಾವೃತದಂತೆ। ಸುಂದರ ಶಿತಾಂಗವನ್ನಾಂತು ಮುಂದರೆಯಲ್ಲಿ ಥಳಥಳಿಸಲಭೀತಿಯಿಂ ॥ ನೊಂದು ಸಂದೇಹದಿಂದಾ ರಾಜ ರಾವುತರ್।” ಬಿಳಿಗುದುರೆಯಾಗಿ ಹೆಂಕರಿಸಿತು. “ನಾವೇಕೆ ಈ ಸ್ವಾಮಿಗಳವರನ್ನೂ ಕುದುರೆ ಬಗ್ಗೆ ಕೇಳಿದೆವು? ಅವರು ಏನೆಂದು ತಿಳಿದುಕೊಂಡಾರು?” ಎಂದು ಮನಸ್ಸಿನಲ್ಲಿ ಪಶ್ಚಾತ್ತಾಪ ಪಡಿಯುತ್ತಾ ಮಹೇಶನಿಗೆ ಹೇಳಿದರು, “ಈ ಕುದುರೆ ನಮ್ಮ ರಾಜರ ಪಟ್ಟದ ಕುದುರೆಯಲ್ಲಾ.” ಎಂದು ತಿಳಿಸಿ ಹೊರಟು ಹೋದರು. “ಮುಚ್ಚಿರ್ದ ಭಾಗ್ಯಪತಿ ಭಕ್ತನುರೆ ಮನದೊಳಗೆ ಹೆಚ್ಚಿರ್ದ ಭಕ್ತಿಯಿಂ ಬೆರಗಾಗುತಂ” ಬಾಯಿ ಮುಚ್ಚಿ ತನ್ನೊಳಗೆ ನಸುನಕ್ಕನು.

ಹೆಬ್ಬಳ್ಳಿಯ ಮಲ್ಲಮ್ಮನು ಈ ಜಂಗಮನ ವರದಿಂದ ಜನಿಸಿದ ಮಗನ ಮದುವೆಯನ್ನು ಮಠದಲ್ಲಿಯೇ ಮಾಡಿದಳು. ಒಳ್ಳೇ ಸಂಭ್ರಮದಿಂದ ಮದುವೆ ಮಾಡಿದಳು. ಮದುವೆ ಮುಗಿದ ನಂತರ ಈ ಮಹೇಶನ ಆಶೀರ್ವಾದ ಪಡೆದು, ತನ್ನ ಮನೆಗೆ ಹೋಗುವಾಗ ದುರಾಶೆಯಿಂದ ಮಠದ ಲಟ್ಟಣಕೆಯನ್ನು ಕದ್ದುಕೊಂಡು ಹೋದಳು. ಅದನ್ನು ಒಂದು ಗೋಣಿ ಚೀಲದಲ್ಲಿ ಹಾಕಿ ಬಿಗಿದುಬಿಟ್ಟಳು. ನಡುದಾರಿಯಲ್ಲಿ ಅದನ್ನು ಬಿಚ್ಚಿ

ನೋಡಿದಳು. ಅದು ನಾಗರ ಹಾವು ಆಗಿತ್ತು. ಮುಂದಮತಿ ಮಲ್ಲಮ್ಮಾ ನಿರಿಕ್ಷಿಸುತ್ತಿರೆ, ಗೋಣಿಯೊಳಗಿರ್ದ ಬೆಲ್ಲುಣಿಗಿಯು "ಅಜಗರಂ ತಾನಾಗುತ ಲ್ಲಿರ್ದುದಾಕ್ಷಣಂ। ಕುಜನಾಳಿ ನೋಡುತ್ತಿರೆ ಬೆರಗಾಗಿ ತಮತಮಗೆ। ಅಜಮುಖಾಮರ ನಮಿತ ದುರದುಂಡಿ ಜಂಗಮನ ಮಹಿಮೆಗುರೆ ಮನ ಮೆಚ್ಚುತಿ॥ ನಿಜದಿಂದೆ ಗೋಣಿ ಬಾಯಿಂದಿಂದೆ ಪೊರಮೊಣ್ಮಿ। ವಿಜಿತಾಂಗ ದಿಂ ಬಿಡದೆ ಫಣಿಭೂಷನಡಿಗಳ್ಗೆ। ರುಜುವಾಗಿ ಪೋಪಂತೆ ಮುಂದಕ್ಕೆ ಸಾಗಿದು ದಾಪನ್ನಗೇಶಮುಂದುಂ॥" ಬೆಲ್ಲುಣಿಗಿಯು ಹಾವು ಆಗಿ ಅವಳ ಬೆನ್ನುಹಿಂದೆ ಓಡಲಿಕ್ಕೆ ಹತ್ತಿತು. ಅವಳನ್ನು ಹಿಂಬಾಲಿಸಿ ಮಠದ ವರೆಗೆ ತಂದಿತು. ದುರದುಂಡೀ ಮಹೇಶ್ವರನ ಮುಂದೆ ಮಾಯೆವಾಗಿ ಹೋಯಿತು. ಅವಳು ಮುಖ ಲಜ್ಜೆಯನ್ನು ಮಾಡಿಕೊಂಡು ದುರದುಂಡೀಶ್ವರನ ಪಾದದ ಅಡಿಯಲ್ಲಿ ಬಿದ್ದಳು. ನಾಗರಹಾವು ಮಾಯವಾದ ಸ್ಥಳದಲ್ಲಿ ನಾಗರ ಹಾವಿನಿಂದ ಕೂಡಿದ ಚಿತ್ರದ ಕಂಬವನ್ನು ಈಗ ಹೊಸದಾಗಿ ಕಟ್ಟಿಸಿದ ನಗಾರಿ ಖಾಣೆಯ ಮಧ್ಯಭಾಗದಲ್ಲಿ ಎದ್ದು ಕಾಣಿಸುವದು. ಆ ಕಂಬದ ಮೇಲೆ ಬಸವಣ್ಣನ ಮೂರ್ತಿ ಇದೆ.

ಉಪವಾಸಿ ಮಲ್ಲಮ್ಮಾ ಮತ್ತು ಸೊಸೆ ಗುಣಶೀಲೆ ಇವರು ಜಂಗಮರ ಮೇಲೆ ಬಹಳ ಭಕ್ತಿಯಿದ್ದರು. ಅವರನ್ನು ಕರೆಯಿಸಿ ತ್ರಿಕಾಲ ಸ್ನಾನ-ಪೂಜೆ ಮಾಡಿಸಿಕೊಂಡು ಅವರಿಂದಾ ಕರ್ಣ ಪ್ರಸಾದವನ್ನು ಸ್ವೀಕರಿಸುತ್ತಿದ್ದರು. ಒಮ್ಮೆ ದುರದುಂಡೀ ಮಹೇಶ್ವರನು ಭಕ್ತರ ಪರೀಕ್ಷೆ ಮಾಡಬೇಕೆಂದು ಇವರ ಮನೆಗೆ ಬಂದರು. ಅವರು ಆದರಪೂರ್ವಕ ಬರಮಾಡಿಕೊಂಡು ಗುಣಶೀಲೆ ನೀರೊಲಗಿ ಇಟ್ಟಳು. ಮಲ್ಲಮ್ಮಾ ಪಂಚ ಪಕ್ವಾನ್ನ ಅಡಿಗಿ ಮಾಡಿದಳು. ಈ ಮಹೀಮನಿಗೆ ಗುಣಶೀಲೆ ಎಬ್ಬಿಸಿದಳು. ಸ್ನಾನ ಮಾಡಿಕೊಂಡರು. ಆದರೆ ಬೇರೆ ಕೌಪೀನ ಹಾಕಿಕೊಳ್ಳಲಿಕ್ಕೆ ಇರಲಿಲ್ಲ. "ತಂಗೀ, ನಿನ್ನ ರೇಶ್ಮಿಯ ಸೀರೆಯ ದಡಿಯನ್ನು ನನ್ನ ಕೌಪೀನ ಹಾಕಿ ಕೊಳ್ಳಲು ಹರಿದುಕೊಡು" ಅಂದಕ್ಷಣವೇ 'ಹರ ಹರ ಮಹಾದೇವ' ನೆಂದು ಗುಣಶೀಲೆ ಸೀರೆಯ ಸೆರಗನ್ನು ಹರಿದು ಕೊಟ್ಟಳು. ಅದನ್ನು ಹಾಕಿಕೊಂಡು ಈ ಮಹೀಶನು ಶಿವಪೂಜೆಗೆ ಕುಳಿತನು. ಅತ್ತೆ ಸಿಟ್ಟಿಗೆದ್ದು, "ನಿನ್ನ ಸೀರೆಯ ಸೆರಗನ್ನು ಎಲ್ಲಿ ಇಟ್ಟಿರುವಿ" ಎಂದು ಕೇಳಿದಳು. "ಟ್ರಂಕಿನಲ್ಲಿ ಇಟ್ಟಿರುವೆ ಬೇಕಾದರೆ ತೋರಿಸುವೆ" ಎಂದು ಹೇಳಿ, ಟ್ರಂಕನ್ನು ತೆಗೆದುಕೊಂಡು

ಬಂದಳು. ಇದನ್ನು ಕೇಳಿ ದುರದುಂಡೀ ಮಹೇಶ್ವರನಿಗೆ ಎಚ್ಚರಾಗಿ, ಮಾಯಾತ್ಮಕವಾಗಿ ಒಂದು ಹೊಸ ಸೀರೆಯನ್ನು ಆ ಟ್ರಂಕಿನಲ್ಲಿ ಇಟ್ಟು ಬಂದನು. ತೆಗೆದು ನೋಡುತ್ತಾರೆ. ಹೊಸ ಸೀರೆ ಅಚ್ಚಳಿಯದೆ ಹಾಗೇ ಇದೆ. ಗುಣಶೀಲೆ ಆಶ್ಚರ್ಯ ಹೊಂದಿ, ತನ್ನ ಅತ್ತೆಗೆ ಆದ ಸಂಗತಿಯನ್ನು ತಿಳಿಸಿದಳು. ಇಬ್ಬರೂ ಕೂಡಿಕೊಂಡು ಈ ಮಹಿಮನಿಗೆ ದೀರ್ಘ ದಂಡ ನಮಸ್ಕಾರ ಹಾಕಿದರು. ದುರದುಂಡೀಶರು ಇವರಿಗೆ ಆಶೀರ್ವಾದ ಮಾಡಿದರು. ಈಗಲೂ ಉಪವಾಸಿ ಮಲ್ಲಮ್ಮನ ಮನೆತನದವರೂ ಆ ಕೌಪೀನವನ್ನು ಟ್ರಂಕಿನಲ್ಲಿ ಇಟ್ಟು ಪೂಜೆ ಮಾಡುತ್ತಾರೆ.

"ನಿಡಸೋಸಿ ನಿಜಲಿಂಗ ಶರಣಭಕ್ತಿಗೆ ಒಲಿದು ಅಲ್ಲಿಯೇ ನೆಲಸಿದ್ದು, 'ಶಿವನು ಭಕ್ತನ ಆಳೆಂದು' ಸಿದ್ಧಗೊಳಿಸಿದರು."

"ಕುರುಬೆಟ್ಟದ ಸಿದ್ಧರಾಮನ ಬಿಲ್ಲರು ಬೇಟೆಗೆ ಹೋದದ್ದು ಹುಲಿಯ ನೆವದಿಂದ ಜಂಗಮ ದರ್ಶನವಾಗಿ ಹುಲಿಯ ಹಾಲನ್ನು ಕುಡಿದದ್ದು, ಸಿದ್ಧರಾಮನ ವಿಜ್ಞಾಪನೆಯಂತೆ ಕುರುಬೆಟ್ಟಕ್ಕೆ ಬಂದು ಭಕ್ತರನ್ನು ಪ್ರಸಾದ ಮಹಿಮೆಯಿಂದ ಪೊರೆದದ್ದು; ಬ್ರಾಹ್ಮಣ ವಿಧವಾ ಪುತ್ರನು ಹೊಂಡದಲ್ಲಿ ಮುಳುಗಿ ಮಡಿದಿರಲು ಪ್ರಾಣವನ್ನು ಬರಿಸಿದ್ದು."

"ಕುರುಹಟ್ಟಿಯಲ್ಲಿ ಬಸವ ರುದ್ರಾಣಿ ದಂಪತಿಗಳ ಭಕ್ತಿಗೆ ಮೆಚ್ಚಿ ಸಂತಾನವನ್ನು ಕೊಟ್ಟದ್ದು."

ಹೀಗೆ ಅನೇಕ ತರದ ಲೀಲೆಗಳ ಪವಾಡಗಳನ್ನು ಶ್ರೀ ದುರದುಂಡೀಶ್ವರನು ಮಾಡುತ್ತಾ ಹೋಗಿರುವನು. ಅಲ್ಲಿ ಒಂದೊಂದು ಗುಡಿಗಳಾಗಿ ನಿರ್ಮಿಸಿದ್ದಾರೆ. ನಾನು ಚಿಕ್ಕಂದಿನಲ್ಲಿ ಕೇಳಿದ ಕೆಲವು ಲೀಲೆಗಳಲ್ಲಿ ಇದೊಂದು ಲೀಲೆಯನ್ನು ವಿವರಿಸುವೆನು. ಅರಭಾವಿ ಮಠದಲ್ಲಿ ಒಂದ ದೊಡ್ಡದಾದ ಬಾವಿ ಇದೆ. ಅದನ್ನು ಎಷ್ಟು ಅಗಿದರೂ ನೀರಿನ ಸೆಲೆ ಹತ್ತಲಿಲ್ಲ. ಆವಾಗ್ಗೆ ಶ್ರೀ ದುರದುಂಡೇಶ್ವರನು ಒಂದು ಗದ್ದಿಗೆ ಮಾಡಿ ಪದ್ಮಾಸನ ಹಾಕಿಕೊಂಡು ೧೨ ವರ್ಷದ ವರೆಗೆ ತಪಸ್ಸಿಗೆ ಕುಳಿತರು. "ಗಂಗಾ ನದಿ" ಕನಸಿನಲ್ಲಿ ಬಂದು, "ದುರದುಂಡೀ ಮಹೇಶ್ವರನೇ, ಇನ್ನು ಮೇಲಕ್ಕೆ ಏಳು ನಾನು ಪೂರ್ವ ಭಾಗದಿಂದ ನೀರಿನ ಸೆಲೆಯ ರೂಪದಿಂದ ಬರುವೆನು" ಎಂದು ಹೇಳಿ ಮಾಯವಾದಳು. " ದುರದುಂಡೀ ಮಹೇಶ್ವರನ

ತನ್ನ ಕಾಲಿನಲ್ಲಿಯ ಆವಿಗೆಗಳನ್ನು ಗದ್ದಿಗೆಯ ಮೇಲೆ ಇಟ್ಟು ಮೇಲಕ್ಕೆ ಎದ್ದು ಬಂದನು. ಅಷ್ಟರಲ್ಲಿ ನೀರಿನಿಂದಾ ಬಾವಿ ತುಂಬಿತು. ಆವಿಗೆ ನೀರಿನಲ್ಲಿ ಮುಳಗಿಸಿದರು. ಮೇಲಕ್ಕೆ ತೇಲದೆ ಗದ್ದಿಗೆಯ ಮೇಲೆ ಹಾಗೆಯೇ ಇವೆ. ಗದ್ದಿಗೆಯ ಮೇಲೆ ೧೫ ಆಳ ನೀರು ಇದೆ. ಇದೊಂದು ಅದ್ಭುತವಾದ ಮಹಿಮೆ ಇದೆ. "

ಇವರ ಮಹೋನ್ನತವಾದ ಜೀವನ, ತ್ಯಾಗ, ವೈರಾಗ್ಯ, ಭಕ್ತಿಗಳು ಜನತೆಗೆ ಹೆಚ್ಚು ಹೆಚ್ಚು ಗೊತ್ತಾಗುತ್ತಿರುವುದೇ " ಮುರಗೋಡದಲ್ಲಿ ನೂತನವಾಗಿ ನಿರ್ಮಿಸಿದ ಶ್ರೀ ದುರದುಂಡೀಶ್ವರನ ಗುಡಿಯ ಉದ್ಘಾಟನಕ್ಕೆ " ಈಗಿನ ಉತ್ಸಾಹದ ಕಾರಣವೆನ್ನಬಹುದು. ಸಾಮಾನ್ಯ ಸ್ಥಿತಿಯಿಂದ ಜೀವನ್ಮುಕ್ತಾವಸ್ಥೆಗೇರಿದ ಇವರ ಜೀವನವೂ ಅನುಸರಣ ಯೋಗ್ಯವೂ ಆದರ್ಶಮಯವೂ ಆದ ಪುಣ್ಯಚರಿತ್ರೆಯಾಗಿದೆ. ಈ ಮಹಾ ವ್ಯಕ್ತಿಯ ಜೀವನ ಚರಿತ್ರೆ ಒಂದು ಪುಣ್ಯ ಕಾವ್ಯವಾಗಿದೆ. ಅವರ ಲೀಲೆಗಳು ಅವರ ಆತ್ಮತೇಜಸ್ಸಿನ ಕುರುಹುಗಳು; ಅವರ ಜೀವನ ಮಹಾಪ್ರಭೆಯ ಕಣ್ಣುಗಳು, ಪ್ರಗತಿಯ ಹಂತಿಗಳು. ಅವರು ಮನೆ ಮನೆಯಲ್ಲಿ ಭಕ್ತಿಯ " ಹಣತೆ " ಯನ್ನು ಹಚ್ಚುವ ಕೆಲಸವನ್ನೂ ನಿರ್ವಹಿಸಿದ್ದರು.

ಈ ರೀತಿ ಅನೇಕ ಕಾರಣಗಳಿಂದ ಶ್ರೀ ದುರದುಂಡೀ ಮಹೇಶ್ವರನು ಕನ್ನಡ ನಾಡಿನಲ್ಲಿ ಮುಖ್ಯವಾದ ಸ್ಥಾನವನ್ನು ಪಡೆದಿರುತ್ತಾರೆ. ಇವರು ಮಹಾ ಪವಾಡಪುರುಷರಾಗಿಯೂ, ಗಣಹರುಷನ ಅವತಾರವಾಗಿಯೂ, ನಿಷ್ಕಪಟಿಯಾದ ಭಕ್ತರಾಗಿಯೂ, ವೀರಶೈವೋದ್ಧಾರಕರಾಗಿಯೂ, ಮಾರ್ಗದರ್ಶಕರಾಗಿಯೂ, ಗುರು-ಜಂಗಮರಾಗಿಯೂ ಇರುವದರಿಂದ ನನಗ ಆತನಲ್ಲಿ ಭಯಭಕ್ತಿಗಳಿವೆ, ಪೂಜ್ಯ ಬುದ್ಧಿಯಿದೆ. " ಘಟಪ್ರಭಾ ತಡಸಲಿನಲ್ಲಿ ಬಿದ್ದು ಮುಳುಗುತ್ತಿದ್ದ ಪವಾಡ ಮೊದಲಾದ ಶರಣರನ್ನು ರಕ್ಷಿಸಿದ ವಿಷಯವು ' ಜಂಗಮೋ ಜಗದ್ಭರಿತಃ ' ಎಂಬುದನ್ನು ದೃಢಗೊಳಿಸಿದರು· ಗುರುಬೋಧಾಮೃತದಿಂದ ಪೂರೈಸಿ, ನಿಜತತ್ವ, ಭಕ್ತಿ, ಪ್ರೀತಿ, ಔದಾರ್ಯ, ಸರಳ ವರ್ತನಾದಿಗಳನ್ನು ವ್ಯಕ್ತಪಡಿಸುವ ಲೀಲಾ ತರಂಗಗಳಿಂದೊಪ್ಪುವದು. ಲೀಲೆ ಚರಿತ್ರೆಯ ' ಮಾರ್ಗದರ್ಶನ ' ದಲಿ ಶ್ರೀ ಅರಭಾವಿ ಮದ್ದುರದುಂಡಿ ಮಹೇಶ್ವರ ಜ್ಯೋತಿಯು ಆತ್ಮಸ್ವರೂಪೋನ್ನತಿಯಿಂದ ಉಜ್ವಲವಾದ ಬೆಳ

ಕನ್ನು ಬೀರುತ್ತ, ದಾರಿಗರ ಕಣ್ಮನಗಳಿಗೆ ಆಶ್ಚರ್ಯವನ್ನುಂಟುಮಾಡುತ್ತಾ, ಚಿರಕಾಲವೂ ಉಪಕಾರಕಾರಕವಾಗಿರುವುದೆಂದು ಹೇಳಿ, ಈ ಲೇಖನವನ್ನು ನಿಲ್ಲಿಸುವೆನು.

" ಇದು ಬಸವ ಸುಕುಮಾರನತಿ ಭಕ್ತಿಯಿಂ ಗೈದ |
ಮದನ ಹರ ಶಿವಲಿಂಗ ದೇಶಿಕ ವಿಲಾಸವಿ:ದ್ಯ "

---

# ದೇಹ ಲಿಂಗವೇ ಇರುತ್ತಿರಲು ಮತ್ತೆ ಬೇರೆ ಲಿಂಗವೇಕೆ ಬೇಕು ?

(ಲೇಖಕಃ—ಶ್ರೀ ಬಸಪ್ಪ ಚನ್ನಪ್ಪ ಪಟ್ಟೇದ, ಮು. ವಂಟಮುರಿ)



( ಮೇಲಿನ ಪ್ರಶ್ನೆಯನ್ನು ನನಗೊಬ್ಬರು ಸುಶಿಕ್ಷಿತರೇ ಕೇಳಿದ್ದರು. ಅವರಂತೆಯೇ ಸಮಾಜದಲ್ಲಿ ಬಹು ಜನರ ತಲೆಯಲ್ಲಿಯೂ ಈ ಪ್ರಶ್ನೆಯು ಬರುವದುಂಟು. ಇದಲ್ಲದೆ ಈಗ ಬಹುಜನ ಲಿಂಗಾಂಗಿ ಸಮಾಜವು ಮೈಮೇಲಿನ ಲಿಂಗವನ್ನು ತೆಗೆದು ಮನೆಯಲ್ಲಿ ಎಲ್ಲಿಯೋ ಇಟ್ಟು ತಾವು ಹಾಗೆಯೇ ತಿರುಗುತ್ತಿರುವರು. ಆದುದರಿಂದ ಈ ಪ್ರಶ್ನೆಗೆ ನಾನು ಕೊಟ್ಟ ಉತ್ತರವನ್ನು ಶಿವಾನುಭವದಲ್ಲಿ ಪ್ರಸಿದ್ಧಿಸುವದು ಯೋಗ್ಯವೆಂದು ತೋರಿದುದರಿಂದ ಅದನ್ನು ಕೆಳಗೆ ಕೊಟ್ಟಿರುತ್ತೇನೆ. —ಲೇಖಕ)

ಪ್ರಶ್ನೆಃ— ದೇವರಿತ್ತ ಪ್ರತ್ಯಕ್ಷ ದೇಹಲಿಂಗವೇ ಇರುತ್ತಿರುಲು, ಮತ್ತೆ ಅದರ ಮೇಲೆ ಬೇರೆ ಲಿಂಗವೇಕೆ ಬೇಕು ?

ಉತ್ತರಃ— ಆ ದೇಹವನ್ನು ಪರಿಶುದ್ಧಗೊಳಿಸುವದಕ್ಕಾಗಿಯೇ ಅದರ ಮೇಲೆ ಬೇರೆ ಲಿಂಗವನ್ನು ಧರಿಸಿ ಪೂಜಿಸುವದು ಅವಶ್ಯವಾಗಿರುತ್ತದೆ.

ಈ ಲಿಂಗವು ಬೇರೆ ಮತ್ತೇನೂ ಅಲ್ಲ; ದೇವರಿತ್ತ ದೇಹಲಿಂಗದ ಪ್ರತಿಕವೇ ಆಗಿರುತ್ತದೆ. ನಮ್ಮ ದೇಹದಲ್ಲಿ ಹೊರಗೆ ಕಾಣುವದೊಂದು ಭಾಗ್ಯ (ಮೈ); ಅದರೊಳಗೆ ಇರುವದೊಂದು ಸೂಕ್ಷ್ಮಭಾಗ (ಜೀವ ಮನವು ಸಹಿತ) ಮತ್ತು ತಲೆಯಲ್ಲಿ ಇರುವ ಇವೆರಡಕ್ಕೂ ಕಾರಣವಾದ ಸಮ್ಯಕ್ ಜ್ಞಾನ (ಪ್ರಜ್ಞಾನ) ಹೀಗೆ ಮೂರು ಇರುತ್ತವೆ. ದೇಹವು ಪೂಜಿಸತಕ್ಕ ಪ್ರತೀಕದಲ್ಲಿ ಹೊರಗೆ ತೋರುವ ಇಷ್ಟಲಿಂಗ, ಒಳಗೆ ಇರುವ ಪ್ರಾಣಲಿಂಗ, ತಲೆಯಲ್ಲಿರುವ ಜ್ಞಾನ (ಭಾವ) ಲಿಂಗ ಎಂದು ಮೂರು ಪ್ರಕಾರಗಳಿರುತ್ತವೆ.

ಇಷ್ಟಲಿಂಗವನ್ನು ಪೂಜಿಸುವದೆಂದರೆ, ಈ ಹೊರಗಿರುವ ಶರೀರದಿಂದ ಯಾವಾಗಲೂ ಇಷ್ಟಕಾರ್ಯಗಳೇ (ಸತ್ಕಾರ್ಯಗಳೇ) ಆಗಬೇಕು. ಆಗ ಅದು ಪರಿಶುದ್ಧವಾಯಿತು. ಒಳಗಿನ ಜೀವಗತ ಮನವು ಯಾವಾಗಲೂ ಸುವಿಚಾರ ಸುವಿವೇಕಗಳುಳ್ಳದ್ದಾಗಿ, ಸುಜ್ಞಾನವಿಡಿದೇ ನಡೆಯಬೇಕು. ಆಗ ಅದು ಪರಿಶುದ್ಧವಾಗುವದು. ಇದು ಪ್ರಾಣಲಿಂಗದ ಪೂಜೆಯು. ಜ್ಞಾನವು ಜಗದ ವಿಷಯಾನಂದದಲ್ಲಿಯೇ ನಿಮಗ್ನಿಸದೆ ಅವುಗಳಿಂದ ತಿರುಗಿ, ಅದು ತನ್ನಲ್ಲಿ ತಾನೇ ಆನಂದಿಸಿದರೆ, ಆಗ ಜ್ಞಾನವು ಪರಿಶುದ್ಧವಾಯಿತು. ಜೀವ (ಮನುಜ), ಜಗತ್ತು, ಶಿವ (ದೇವ) ಈ ಮೂರೂ ವಸ್ತುಗಳು ಏಕಮೇವಾ ದ್ವಿತೀಯವಾದರೆ, ಆಗ ಜ್ಞಾನವು ಪರಿಶುದ್ಧವಾದಂತಾಗುವದು, ಮನುಷ್ಯ ಜನ್ಮವು ಸಾರ್ಥಕವಾಗುವದು.

ಹೀಗೆ ಈ ಮೂರನ್ನೂ ನಿಷ್ಕಲಂಕಗೊಳಿಸದಿದ್ದರೆ, ದೇಹದ ಉದ್ಧಾರ ವಾಗದು. ಅದು ಒಳಗೆ ಹೊರಗೆ ಚೊಕ್ಕ ಚಿನ್ನದಂತಾಗಿರಬೇಕು. ಸುಜ್ಞಾನ ಪ್ರಾಣಿಯಾಗಿ, ಜಗತ್ತಿನ ಒಡೆತನವನ್ನು ಹೊಂದಿದ ಮನುಷ್ಯನು, ನರ ತ್ವಗಳೆದು, ಹರತ್ವವನ್ನು ಹೊಂದದಿದ್ದರೆ, ಆವನು ಹುಟ್ಟಿದ್ದು ವ್ಯರ್ಥವೇ ಸರಿ. ಆ ಕಾರಣ ಬೇರೆ ಲಿಂಗವನ್ನು ದೇಹದ ಮೇಲೆ ಧರಿಸಲೇ ಬೇಕು. ಹಾಗೂ ಅದನ್ನು ಬಹು ಸಾವಧಾನದಿಂದಲೂ, ನಿಶ್ಚಯ ಪೂರ್ವಕವಾಗಿಯೂ ಪೂಜಿಸಿ ಜನ್ಮಸಾಫಲ್ಯ ಪಡೆಯಬೇಕು.

ಸೊನ್ನಲಾಪುರದ ಶ್ರೀ ಸಿದ್ಧರಾಮೇಶ್ವರನು ಹಣೆಗಣ್ಣು ಪಡೆದವನಾಗಿ ದ್ದರೂ ಕೂಡ, ದೇಹದ ಮೇಲೆ ಲಿಂಗವಿಲ್ಲದಿದ್ದರಿಂದ ಜ್ಞಾನಾನಂದದಲ್ಲಿ ವಿಶ್ರಮಿಸದೆ, ವಿಷಯಾನಂದದಲ್ಲಿಯ (ಕೆರೆ, ಬಾವಿ, ಗುಡಿ, ಕಟ್ಟಡ ಮೊದ

ಲಾದವುಗಳನ್ನು ಕಟ್ಟುವದರಲ್ಲಿಯೇ ) ಹೊತ್ತು ಕಳೆಯುತ್ತಿದ್ದನು. ಶ್ರೀ ಪ್ರಭುದೇವರು ಇದನ್ನು ನೋಡಿ, ಸಿದ್ಧರಾಮೇಶ್ವರನ ಮನ ಒಲಿಸಿ, ಕಲ್ಯಾಣಕ್ಕೆ ಕರೆದೊಯ್ದು ಶ್ರೀ ಚನ್ನಬಸವನಿಂದ ಲಿಂಗಧಾರಣ ಮಾಡಿಸಿದರು. ಮುಂದೆ ಅವನು ಲಿಂಗ ಪೂಜಾ ನಿರತನಾಗಿ, ಕೊನೆಗೆ ಚೆನ್ನಬಸವೇಶ್ವರನ ನಂತರ ಶೂನ್ಯ (ಏಕ ಮಾವಾದ್ವಿತೀಯತ್ವ, ಅನಾದಿ ಲಿಂಗ) ಸಿಂಹಾಸನವನ್ನೇರಿದನು. ಹೀಗೆ ಅತ್ಯುಚ್ಚ ಪದವಿಗೆ ಮುಟ್ಟಲಿಕ್ಕೆ ಈ ಶರೀರದ ಮೇಲೆ ಲಿಂಗ ಧಾರಣವೇ ಕಾರಣವು.

( ಮೇಲಿನ ಉತ್ತರಕ್ಕೆ ಮತ್ತೆ ಅದೇ ಮಹಾನುಭಾವರು ಕೆಳಗಿನ ಸಂದೇಹ ವ್ಯಕ್ತಮಾಡಿರುವದರಿಂದ ಆ ಸಂದೇಹ ನಿಂಸನಕ್ಕೆಂದು ನನ್ನ ಅಭಿಪ್ರಾಯವನ್ನು ಕೆಳಗಿನಂತೆ ಕೊಟ್ಟಿರುವೆ. )

( ಸಂದೇಹ:— ಯಾವಾಗಲೂ ಜೀವದೇವ, ಭಾವದೇವರ ಅನ್ಯೋನ್ಯ ಸಾನ್ನಿಧ್ಯದಲ್ಲಿರುವ ದೇಹವನ್ನು ಪರಿಶುದ್ಧಗೊಳಿಸುವದಕ್ಕೆ ದೇಹದ ಮೇಲೆ ಜೀವ, ಭಾವಗಳಿಂದ ದೂರ ಬಹುದೂರವಾದ ಒಂದು ಜಡವಸ್ತುವನ್ನು ಇಟ್ಟುಕೊಳ್ಳಬೇಕೆಂಬ ಮಾತು ಜಗಕ್ಕೆ ಸಮ್ಮತವಾಗಬಹುದೇ ? ಜಡದೇಹಕ್ಕೆ ಇನ್ನೊಂದು ಜಡವಸ್ತುವನ್ನು ಅಂಟಿಸುವದರಿಂದ ಅದು ಶುದ್ಧವಾಗುವದೆನ್ನುವ ಮಾತು ಅನುಭವಕ್ಕೆ ಹೊರತಾದ ಮಾತು. ದೇಹವನ್ನು ಪರಿಶುದ್ಧಗೊಳಿಸುವ ಆಚಾರ ವಿಚಾರಗಳನ್ನು ಜಡವಸ್ತು ರಹಿತವಾಗಿ, ಜೀವ ಭಾವಗಳ ಮೂಲಕ ಅಳವಡಿಸಿಕೊಂಡರಾಗದೇ ? )

**ಸಂದೇಹ ನಿರಸನ:—** ಮೇಲಿನ ಸಂದೇಹವನ್ನು ಮೂರು ಭಾಗಗಳಲ್ಲಿ ವಿಂಗಡಿಸಬಹುದು. (೧) ಯಾವಾಗಲೂ ಜೀವದೇವ ಭಾವದೇವರ ಅನ್ಯೋನ್ಯ ಸಾನಿಧ್ಯದಲ್ಲಿರುವ ದೇಹವನ್ನು ಪರಿಶುದ್ಧಗೊಳಿಸುವದಕ್ಕೆ ದೇಹದ ಮೇಲೆ ಜೀವ ಭಾವಗಳಿಂದ ದೂರವಾದ, ಬಹುದೂರವಾದ ಒಂದು ಜಡವಸ್ತುವನ್ನು ಇಟ್ಟುಕೊಳ್ಳಬೇಕೆಂಬ ಮಾತು ಜಗಕ್ಕೆ ಸಮ್ಮತವಾಗಬಹುದೇ ?

ಈ ಸಂದೇಹವೆತ್ತಿದವರು ಮಾಡಿದ ದೊಡ್ಡ ತಪ್ಪು ಯಾವುದೆಂದರೆ, ಲಿಂಗವನ್ನು "ಜಡವಸ್ತು"ವೆಂದು ಭಾವಿಸಿದುದು. ಲಿಂಗವು ಜಡವಸ್ತುವಲ್ಲ. ಅದನ್ನು ನಾವು ಸುಜ್ಞಾನವೆಂದು ಪೂರ್ಣವಾಗಿ ನಂಬುತ್ತೇವೆ. ಜಡವಸ್ತುವಾದರೆ ಅದನ್ನೇಕೆ ನಾವು ಆರಾಧಿಸುತ್ತಿದ್ದೆವು ? ಶಿವದೀಕ್ಷೆಯನ್ನು ಮಾಡು

ವಾಗ ಗುರುವು ಬಾಹ್ಯ ಲಿಂಗವಲ್ಲಿ (ಹುಟ್ಟು ಲಿಂಗದಲ್ಲಿ) ದೇಹದ ಹೃದಯ ದೊಳಗಿಂದ ಪ್ರಾಣಲಿಂಗವನ್ನೂ, ತಲೆಯೊಳಗಿಂದ ಶಿರಚಿತ್ಕಳೆಯನ್ನೂ, ಮಂತ್ರ ಮೂಲಕ ಆಹ್ವಾಹನಂಗೈದು ಸ್ಥಾಪಿಸಿರುತ್ತಾನೆ. ಆದುದರಿಂದ ಇಷ್ಟ ಲಿಂಗವು ಸುಜ್ಞಾನ ಚೈತನ್ಯಗಳಿಂದ ಯುಕ್ತವಾಗಲಿಲ್ಲವೇ ? ಪ್ರತ್ಯಕ್ಷ ನಮ್ಮ ದೇಹವನ್ನೇ ಎತ್ತಿ ಪೂಜಿಸಲಿಕ್ಕೆ ಲಿಂಗ ರೂಪದಿಂದ ಕರದಲ್ಲಿ ಕೊಟ್ಟಂತಾಗಲಿಲ್ಲವೇ ? ದೇಹವೇನು ಜಡವಸ್ತುವೇ ? (ಅಲ್ಲ, ಎಂದೂ ಅಲ್ಲ.) ಅದರಂತೆಯೇ ಲಿಂಗವಾದರೂ ಜಡವಸ್ತುವಲ್ಲ. ಅದು ಜೀವ-ಭಾವಗಳ ಅನ್ಯೋನ್ಯ ಸಾನ್ನಿಧ್ಯದಲ್ಲಿಯೇ ಇರುವದು.

(೨) " ಜಡದೇಹಕ್ಕೆ ಇನ್ನೊಂದು ಜಡವಸ್ತುವನ್ನು ಅಂಟಿಸುವದರಿಂದ ಅದು ಶುದ್ಧವಾಗುವದೆಂಬ ಮಾತು ಅನುಭವಕ್ಕೆ ಹೊರತಾದಮಾತು. "

ನಾವು ದೇಹಕ್ಕೆ ಜಡವಸ್ತುವನ್ನು ಅಂಟಿಸುವದಿಲ್ಲ. ಅದು ಸುಜ್ಞಾನ ಯುತವೂ ಚೇತನೆಯಿಂದೊಡಗೂಡಿದ್ದೂ ಆಗಿರುವದೆಂಬುದು, ಮೇಲಿನ ವಿವರಣೆಯಿಂದ ಸ್ಪಷ್ಟವಾಗಿದೆ.

(೩) " ದೇಹವನ್ನು ಪರಿಶುದ್ಧಗೊಳಿಸುವ ಆಚಾರ ವಿಚಾರಗಳನ್ನು ಜಡವಸ್ತು ರಹಿತವಾಗಿ ಜೀವ ಭಾವಗಳ ಮೂಲಕ ಅಳವಡಿಸಿಕೊಂಡರಾಗದೇ ? "

ಲಿಂಗವು ಜಡವಸ್ತುವೆಂಬುದನ್ನು ಪೂರ್ಣ ಮರೆತು ಬಿಡಿ. ಅದರ ನೆರವಿಲ್ಲದೆ ಆಚಾರ ವಿಚಾರಗಳನ್ನು ಅಳವಡಿಸಿಕೊಳ್ಳುವದು ದುರಾಪಾಸ್ತವೇ ಆಗಿವೆ. ಸೊನ್ನಲಾಪುರದ ಶ್ರೀ ಸಿದ್ಧರಾಮೇಶ್ವರನಂತಹರಿಗೆ ಕೂಡ ಅದು ದುಃಸಾಧ್ಯವಾಯಿತು. ಮುಂದೆ ಲಿಂಗಧಾರಣ ಹೊಂದಿದ ನಂತರೇ ಅವನು ಚನ್ನಾಗಿ ಪ್ರಗತಿ ಪಡೆದು ಅತ್ಯುಚ್ಚಸ್ಥಾನಕ್ಕೆ ಅರ್ಹನಾದನೆಂಬುದು ಸ್ಪಷ್ಟವದೆ. ಆದುದರಿಂದ ಲಿಂಗ ರಹಿತವಾಗಿ ಹಾಗೆ ತಿರುಗುವ ಜನರು ಈ ಉದಾಹರಣೆಯನ್ನು ಒಳಿತಾಗಿ ಲಕ್ಷ್ಯದಲ್ಲಿಡಬೇಕು. ಕೆಳಗಿನ ವಚನವನ್ನು ಲಕ್ಷಿಸಿರಿ—

" ಜಗದಲಿ ಮುಗಿಲಗಲ, ಮಿಗೆಯಗಲ, ನಿನ್ನಗಲ ನಿನ್ನ ಶ್ರೀಪಾದ ಪಾತಾಳದಿಂದತ್ತತ್ತ ! ಮಣಿ ಮುಕುಟ ಬ್ರಹ್ಮಾಂಡದಿಂದತ್ತತ್ತ ! ದಶ ಭುಜಗಳು ದಶದಿಕ್ಕುಗಳಿಂದತ್ತತ್ತ ! ಅಪ್ರಮಾಣ ಅಗಮ್ಯ ಅಗೋಚರ ಕೂಡಲ ಸಂಗಮದೇವಾ, ನೀನು ಎನ್ನ ಕೈಯಲ್ಲಿ ಬಂದು ಚುಳುಕಂದೆಯಯ್ಯಾ ! "

ಇದರಿಂದ ಲಿಂಗವು ದೇಹದ ಪ್ರತೀಕವಾಗಿರುವಂತೆ ಜಗತ್ತಿನ ಪ್ರತೀಕವಾಗಿರುವದೆಂಬುದೂ ಸ್ಪಷ್ಟವಾಗುವದು. ಆದುದರಿಂದ ಜೀವ-ಶಿವ-ಜಗತ್ತು ಈ ಮೂರೂ ವಸ್ತುಗಳು ಒಂದೇ ಒಂದು, ಇಲ್ಲವೆ ಏಕಮೇವದ್ವಿತೀಯವೆಂದು ಸಿದ್ಧವಾಗುವದು.

ಶ್ರೀ ಸರ್ವಜ್ಞಮೂರ್ತಿಗಳೇನು ಸಾಮಾನ್ಯರಲ್ಲ. ಮಹಾ ಜ್ಞಾನಿಗಳೂ ಶಿವಶರಣರೂ ಆಗಿದ್ದಾರೆ. ಅವರ ಕೆಳಗಿನ ವಚನವನ್ನು, ಲಿಂಗವನ್ನು ದೇಹದಿಂದ ತೆಗೆದು ಹಾಕಿ ಹಾಗೆ ಸ್ವೇಚ್ಛಾಚಾರಿಗಳಾಗಿ ತಿರುಗುವವರೆಲ್ಲರೂ ಮನನಿಸುವದು ಅತ್ಯವಶ್ಯವದೆ.

"ಲಿಂಗಕ್ಕೆ ತೋರಿಸದೆ, ಅಂಗಕ್ಕೆ ಕೊಂಡೊಡೆ, "
ತಿಂಗಳಲಿ ಸತ್ತ ಹೆಳೆ ನಾಯ ಮಾಂಸವನು,
ನುಂಗಿದಂತಕ್ಕು ಸರ್ವಜ್ಞ !!

(ನುಂಗಿದಂತಕ್ಕು ಅಂದರೆ, ಅನಾರೋಗ್ಯಕ್ಕೆ ಇಲ್ಲವೆ ಪೂರ್ವಜನ್ಮಕ್ಕೆ ಕಾರಣ)

ಅಲಿಂಗಿಗಳಿಗೇನೂ ಇದರ ಸಂಬಂಧವಿಲ್ಲ. ಲಿಂಗಧಾರಿಗಳಾಗಿಯೂ ಸಹ ಲಿಂಗ ತ್ಯಜಿಸಿರುವರು ಮಾತ್ರ, ಚನ್ನಾಗಿ ಯೋಚಿಸಬೇಕು. ಪ್ರಮಥರು ಲಿಂಗಧಾರಿಗಳಾಗಲಿಕ್ಕೆ ನಮಗೆ ಹೇಳಿದುದು, ಸುಲಭ ಮಾರ್ಗದಿಂದ ಜನ್ಮೋದ್ಧಾರವನ್ನು ಹೊಂದುವದಕ್ಕಾಗಿ.' ಅಂತೇ ಮಹಾಜ್ಞಾನಿ ಸರ್ವಜ್ಞ ಮೂರ್ತಿಗಳು ಲಿಂಗವಂತರಿಗೆ ಹಾಗೆ ಹೇಳಿರುವರು.

---

# ಶ್ರೀ ಮಲ್ಲಿಕಾರ್ಜುನ ಮಹಾ ಸ್ವಾಮಿಗಳು

ಮಲ್ಲಿಗೆಯ ತಿಳಿನಗೆಯು ಎಲ್ಲೆಲ್ಲಿಯೂ ಸುರಿದು
ಚೆಲ್ಲುವರಿಸುವ ಚೆಲುವ ತಾಣವೆಲ್ಲಿ ?
ಮಲ್ಲಿಗೆಯ ಬಿಳಿಯುಬಗೆ ಎಲ್ಲೆಡೆಗೆ ತುಳುಕಿಸುವ
ಸಲ್ಲಲಿತ ತಿಳಿವಿನಾಗಾರವೆಲ್ಲಿ ? ||೧||

ಸವ್ಯಸಾಚಿಯು ತೊಟ್ಟ ಭವ್ಯ ಕೋದಂಡದಲಿ
ನವ್ಯ ಜಗತಿಯ ತೊಡಕುಗಳನು ಬಿಡಿಸಿ ।
ದಿವ್ಯ ಕೇಣಿಯಸಿಲಿಸಿ ಭವ್ಯ ಭವ ಹೊಂದಿಸುವ
ನವ್ಯ ಮಾರ್ಗವ ಬಿಡದೆ ಸುಖಮಗೊಳಿಸಿ ||೨||

ವೀರ ವೃತ್ತಿಯು ವೀರಶೈವನಾಗಿರುವಂತೆ
ವೀರ ಕನ್ನಡ ನಾಡ ಕೀರ್ತಿಯಾಗಿ ।
ವೀರ ಯೋಧನ ಹಾಗ ಹೋರಾಡ ನಿಂತಿರುವೆ
ಬಾಳ ಕೊಳಗುಳದ ಗೆಲುಮೂರ್ತಿಯಾಗಿ ||೩||

ಬೀಡು ಸಾಲದೆ ನೆಲೆಗೆ ನಾಡ ಗೂಡಿಗೆ ಹಾರಿ
ಊಡುತಿಹೆ ಮರಿಹಕ್ಕಿಗಳಿಗೆ ಗುಟುಕು ।
ಬಾಡಿ ಬಸವಳಿದಿರುವ ಹೇಡಿ ಜೀವನ ಜರಿದು
ಓಡಿಸುವೆ ಮಾತಿನಲಿ ಮಂತ್ರದೆಸಕು ||೪||

ಮಲ್ಲಿಗೆಯ ಪಾವಿತ್ರ್ಯ. ಅರ್ಜುನನ ವೀರತ್ವ
'ಮಲ್ಲಿಕಾರ್ಜುನ'ಗಹುದು ತಾಯಿತಂದೆ ।
ಮಲ್ಲಿಗೆಯ ತನಿಗಂಪು ಅರ್ಜುನನ ಶಿವಗೊಪ್ಪು
ಮಲ್ಲಿಕಾರ್ಜುನ ಸ್ವಾಮಿ ನೈಜವೆಂದೇ ||೫||

ಬೆಂದಿರುಹಿ ಸಿಂಕವಗೆ ಬೆಂಬತ್ತಿ ಬಹುದೆನುವ
ವಚನಕಾಗಿರುವೆ ನೀ ಹಿರಿಯ ಸಾಕ್ಷಿ।
ಮುಂದಿರುವ ಹೊಗಳಿಕೆಯ ಮಡುಹಿಗೊಬ್ಬರ ಮಾಡಿ
ಪರಿಶುದ್ಧ ಬೆಳಗಿಡುವೆ ತೆರೆದ ಅಕ್ಷಿ ॥೬॥

ನಾಡ ನೆಮ್ಮದಿಗಾಗಿ ಪಥ್ಯದೂಟವನುಂಡು
ನಾಡ ಮಕ್ಕಳ ನೆತ್ತಿಗೆಣ್ಣೆ ಸುರಿವೆ।
ಬೇಡದಿರುವದೆ ಜಟಿಲ ತಪದ ತಿರುಳಾಗಿಹುದು
ನೀಡಿದರು ಕೈಗೊಡದೆ ದೂರ ಸರಿವೆ ॥೭॥

ಏಕೆ ಬಂದಿತು ರವಿಗೆ ದಿವ್ಯ ತೇಜದ ಒಪ್ಪು
ಹೊತ್ತು ಹೊತ್ತಿನ ಕೆಲಸ ಮುಗಿಸಿಬಿಡಲು।
ಜೋಕೆವಿಡಿದಾಯುಷ್ಯ ಸವೆಯಲಾರದ ಪ್ರಾಯ-
-ಕೇನು ಕಾರಣ ಗೀತೆ ಕೇಳಿದೊಡಲು ॥೮॥

ಗೀತೆ ಹೇಳಿದ ಮೂರು ತಪಸುಗಳನಾಚರಿಸಿ
ನಿಲಿಸಿರುವೆ ಮನವ ಶಿವಚರಣದಲ್ಲಿ।
ಗೀತೆಯುಸುರದ ಗುಟ್ಟು ಕೃಷ್ಣ ಪಾರ್ಥರ ಜತ್ತು
ವೈಗೂಡಿ ನಿಂತಿಹುದು ಕರಣದಲ್ಲಿ ॥೯॥

ಸನ್ಯಾಸಿಯಾದಂತೆ ಬಳಗ ಹೆಚ್ಚುತ ಬಂತು
ತ್ಯಾಗಕೊಲಿಯಿತು ತಾನೆ ಜಗದ ಹೊನ್ನು।
ಇನ್ನಾಶೆ ಯೇನಿಲ್ಲವೆಂದು ಸಾಗಿದ ನಿನಗೆ
ಭವದಿ ಬೇಕೆನಿಸಿತ್ತು ದಿವ್ಯ ಕಣ್ಣು ॥೧೦॥

ಏಸು ಹಾಡಿದರೆಷ್ಟು ದಣಿವಿಲ್ಲ ನಿನಗೆನುವ
ಮಾತೊಂದೆ ಸಾಕು ನೀ ದೇವ ಸೊತ್ತು।
ಲೇಸು ಬಯಸುವೆ ಸಕಲ ಜೀವರಿಗೆ ನಿನಗಿಹುದು
ಸರ್ವರಲಿ ತನ್ನನ್ನೆ ಕಾಂಬ ಗೊತ್ತು ॥೧೧॥

ಹೋದ ಹೋದಲ್ಲೆಲ್ಲ ಜ್ಞಾನ ಯಜ್ಞವ ಹೂಡಿ
ಬೋಧೆಯನು ಸುರಿಯುವಿರಿ ಆಜ್ಯದಂತೆ।
ಭೇದ ಭಾವದ ಎಣಿಕೆ ಮೂಡಿ ಬಾರದ ಹಾಗೆ
ಕಾಳಿತೆಡೆಯೆ ಪರಿಶುದ್ಧ ರಾಜ್ಯದಂತೆ ॥೧೨॥

ಮೂಢನಿದ್ದರು ಸರಿಯೆ ಗೂಢನಿದ್ದರು ಸರಿಯೆ
ಹೆಣ್ಣು ಗಂಡುಗಳೆಲ್ಲ ಆತ್ಮ ಸಿರಿಯೆ।
ಗಾಢ ವಿಷಯವನೆಲ್ಲ ಬಿಡಿಸಿಡುವ ಪರಿ ಅರಿದು
ಶಿವನ ಸನ್ನಿಧಿಯೆನುವ ಭಾವ ಬಿರಿಯೆ ॥೧೩॥

ಸುಟ್ಟು ಸುಣ್ಣಾಗಿರುವೆ, ಬಿಟ್ಟು ನುಣ್ಣಾಗಿರುವೆ
ಬಿಟ್ಟ ಕಣ್ಣಾಗಿರುವೆ ನಾಡಿನಲ್ಲಿ।
ಎತ್ತ ನಲಿದಾಡಿದರು ಸುತ್ತು ಸುಳಿವರು ಗುರುವು
ಗೊತ್ತುಗಾಣುವುದರಿಂದೆ ರೂಢಿಯಲ್ಲಿ ॥೧೪॥

ಮೂಡಿ ನಿಂತಿರು ಒಮ್ಮೆ ನಾಡಿನಾಕಾಶದಲಿ
ಉತ್ತರೋತ್ತರ ಮುಖಕೆ ತಾರೆಯಾಗಿ
ಬೇಡಿ ತರುತಿರು ಗಾಢ ಶಕ್ತಿ ಸಂಪದವನ್ನು
ನಾಡಿನೆತ್ತರಕೆ ಸುರಿ ಧಾರೆಯಾಗಿ ॥೧೫॥

—ಸಿಂಪಿ ಲಿಂಗಣ್ಣ,
ಚಡಚಣ

# ಶಿವಶರಣರ ತತ್ವ ವಿಚಾರಗಳ ಅಭಾವ.

(ಲೇಖಕಃ- ಶರಣ ಸೇವಕ)

—:o:—

ಲಿಂಗವಂತರು ಅಷ್ಟಾವರಣಗಳಾದ ಗುರು ಲಿಂಗ ಜಂಗಮ ಮುಂತಾದವುಗಳಲ್ಲಿ ಪೂಜ್ಯ ಬುದ್ಧಿ ಇಟ್ಟು ಬಳಸುತ್ತಿರುವರು. ವರ್ಗದವರಂತೂ ಲಿಂಗವಂತರಿಗೆ ಈ ಅಷ್ಟಾವರಣಗಳೇ ದೇವರೆಂದು ಭಾವಿಸಿ ವರ್ತಿಸಬೇಕೆಂದು ಉಪದೇಶಿಸುತ್ತಿರುವರು. ಈ ಅಷ್ಟಾವರಣಗಳು ಎರಡು ವಿಧವಾಗಿರುವವು. (೧) ಸಮಾಜ ಸಂಬಂಧ ಅಷ್ಟಾವರಣ. ಬಾಹ್ಯ ಸ್ಥೂಲವಾದುದು. (೨) ಸಹ+ಜ, ಅಷ್ಟಾವರಣ. ಅಂತರಂಗ ಸೂಕ್ಷ್ಮವಾದುದು.

ಸುಬುದ್ಧಿ, ಸುಮನ, ನಿರಹಂಕಾರ ಮುಂತಾದವುಗಳ ಅಷ್ಟಾವರಣಗಳು ಬಾಹ್ಯವಿರಲಿ ಇಲ್ಲವೆ ಅಂತರಂಗವಿರಲಿ, ಇವು ಆವರಣಗಳೇ ಹೊರ್ತು ವಸ್ತುವಲ್ಲ; ಶಿವನಲ್ಲ. ಇವುಗಳನ್ನು ಉಪಯೋಗಿಸಿಕೊಂಡು ಇವುಗಳನ್ನು ಮೀರಿದ ಹೊರ್ತು, ದಾಟಿದ ಹೊರ್ತು, ಲಯಗೊಳಿಸಿದ ಹೊರ್ತು, ಶೂನ್ಯ—ಇಲ್ಲದಂತೆ ಮಾಡಿದ ಹೊರ್ತು ವಸ್ತು ಅಂದರೆ ಚಿಲ್ಲಿಂಗ-ಶಿವ ಪ್ರಕಟವಾಗಲಾರದು. ಅಷ್ಟಾವರಣಗಳು ಸಾಧನಗಳೇ ಹೊರ್ತು ಸಾಧ್ಯವಾದ ಪರಶಿವನಲ್ಲ. ಇದನ್ನು ಗುರು ಸ್ಥಾನದಲ್ಲಿದ್ದವರು ಪ್ರಕಟಿಸುವದಿಲ್ಲ. ಅಂದರೆ ಕೃಪೆಯಿಂದ ತಿಳಿಸಿಕೊಡುವದಿಲ್ಲ. ಸ್ವತ: ಪರಿಶ್ರಮದಿಂದಲೇ ಕೆಲವರು ತಾವೇ ಕಂಡುಕೊಳ್ಳಬೇಕು, ಈ ಸ್ಥಿತಿಯಾಗಿದೆ.

" ಯದ್ದೃಷ್ಟಂ ತನ್ನಷ್ಟಂ " ಎಂಬಂತೆ ದೃಶ್ಯವೆಲ್ಲವೂ ನಾಶವಂತೆ. ಇಂದ್ರಿಯಗಳ ಸಹಾಯವಿಲ್ಲದೆ ಮನಸ್ಸನ್ನೂ ಕೂಡ ಇದಿರಿಟ್ಟು ನೋಡುವ ಸಾಕ್ಷಿಯೇ ಸರಿ. ಚೈತನ್ಯವು, ಚಿಲ್ಲಿಂಗವು, ಶಿವಸ್ವರೂಪವು, ಅರುಹು. ಈ ಉಳಿಮೆಯು ಅರಿವು ವೇದಾಂತದಲ್ಲಿ ಹೇಳಿದ "ನೇತಿ, ನೇತಿ" ಎಂಬ ಅಂತರ್ ಬಾಹ್ಯದಲ್ಲಿ ದೃಶ್ಯವಾದದ್ದನ್ನೇ ಇಲ್ಲಿ ನೇತಿ ( ನ-ಇತಿ ) ಗಳೆದು ಉಳಿದ ಉಳಿವು ಮಹೇಶ್ವರವಾದ ಶೂನ್ಯ ಸಂಪಾದನೆಯನ್ನು ಪಡೆಯುವದೇ ನಿಜವಾದ ಪರಮ ಧ್ಯೇಯ.

ಇಂದಿನ ವೀರಶೈವ ಗುರುಗಳು ಕೇವಲ ಶೈವರೇ ಸರಿ. ಇವರು ಸ್ಥೂಲ ಸಮಾಜ ಸಂಬಂಧದ ಅಷ್ಟಾವರಣಗಳನ್ನೇ ವರ್ಣಿಸುವರು. ಇಲ್ಲವೇ

ಕ್ರಿಯೆಗೆ ಉಪಯೋಗಿಸುವರು. ಸಹಜ ಅಷ್ಟಾವರಣಗಳ ಮಾತೇ ಇವರಲ್ಲಿ ಇಲ್ಲ. ಒಂದು ವೇಳೆ ಎಲ್ಲಿಯಾದರೂ ಇದ್ದರೆ ಆ ಆವರಣಗಳನ್ನು ಮೀರಿ ಶೂನ್ಯಗೊಳಿಸಿ ನಿಲ್ಲುವ ಚರ್ಚೆಯಂತೂ ಇಲ್ಲವೇ ಇಲ್ಲ. ಈ ವಿಚಾರ ವಚನ ಗ್ರಂಥಗಳಲ್ಲಿ ಕಾಣಬಹುದು. ಗುರುವರ್ಗದವರಂತೂ ವಚನಗ್ರಂಥಗಳನ್ನು ಮುಟ್ಟುವದೇ ಇಲ್ಲ. ಚರ್ಚೆ ಮಾಡುವದಂತೂ ದೂರೇ ಉಳಿಯಿತು. ನಿಜಗುಣರ ವೇದಾಂತ ಗ್ರಂಥಗಳನ್ನು ಮನ್ನಿಸುವರು. ಆದರೆ ವಚನಗಳ ವಿಚಾರವನ್ನು ಬಳಿಸುವದಿಲ್ಲ. ಶಿವಶರಣರ ವಿಚಾರಗಳು ಶಿವಾನುಭವ ಪತ್ರಿಕೆ ಅಥವಾ ಶಿವಾನುಭವ ಗ್ರಂಥಗಳಲ್ಲಿ ಅಲ್ಲದೆ ಉಳಿದ ಸ್ಥಳಗಳಲ್ಲಿ ಕಂಡುಬರುವದಿಲ್ಲ. ಆದ್ದರಿಂದ ಇಂದಿನ ವೀರಶೈವವು ಪ್ರಾಚೀನ ಶೈವವೇ ಹೊರ್ತು ಶಿವಶರಣರ ವೀರಶೈವವನ್ನು ಮರೆಯಿಸಿ ೧೧ ಸಹಸ್ರ ಕುಂಭ ಜಲ ಅಭಿಷೇಕ, ಲಕ್ಷ ದೀಪೋತ್ಸವ ಕಾರ್ಯಗಳು, ಮಂಟಪ ಪೂಜೆ ಮುಂತಾದ ಶೈವ ರೂಢಿಗಳು ಮುಂದುವರಿಯುಹತ್ತಿವೆ. ಶಿವಶರಣರ ಕಾಯಕ ಅಡಿಗಿ ಭಿಕ್ಷಾವೃತ್ತಿಯೇ ಬೆಳೆದಿದೆ. ಇದು ಬಹು ವಿಷಾದಕರ.

# ನನ್ನ ಪ್ರವಾಸದಲ್ಲಿ ಮಾನವ ಸ್ವಭಾವದ ಪರಿಚಯ

( ಲೇಖಕಃ— ಶ್ರೀ ಎಸ್. ಆರ್. ಪಾಟೀಲ )



' ಶಿವಾನುಭವ ' ಮಾಸಿಕದ ಸಂಪಾದಕರಾದ ಶ್ರೀ ಫ. ಗು. ಹಳಕಟ್ಟಿ ವಕೀಲರ ಸುದೀರ್ಘಕಾಲದ ಸಮಾಜ ಸೇವೆಯನ್ನು ನೆನೆದು ಕೆಲಮಟ್ಟಿಗಾದರೂ ಅವರ ಋಣದಿಂದ ಮುಕ್ತರಾಗಬೇಕೆಂದು ಶ್ರೀ ಮುಧೋಳ ಮೃತ್ಯುಂಜಯ ಸ್ವಾಮಿಗಳ ಅಧ್ಯಕ್ಷತೆಯಲ್ಲಿ ನಿಧಿಸಂಗ್ರಹ ಸಮಿತಿಯು ನಿರ್ಮಾಣವಾಗಿ ಕಾರ್ಯಸಾಗಿದೆಯಷ್ಟೆ ? ಅದರಲ್ಲಿ ನನ್ನ ಕೈಲಾದಷ್ಟು ಸೇವೆಯನ್ನು ಈ ಒಂದು ತಿಂಗಳ ಬೇಸಿಗೆಯ ಸೂಟಿಯಲ್ಲಿ ಸಲ್ಲಿಸುವ ಹಂಬಲದಿಂದ ಪ್ರವಾಸವನ್ನು ಕೈಕೊಂಡೆನು. ಆಗ ಸಮಾಜದ ಅನೇಕ ವ್ಯಕ್ತಿಗಳನ್ನು ಭೆಟ್ಟಿಯಾಗುವ ಯೋಗ ಬಂದು ಅವರವರ ಸ್ವಭಾವ ಪರಿಚಯವಾಯಿತು. ಅದು ' ಶಿವಾನುಭವ ' ದ ವಾಚಕರಿಗೂ ಸಮಾಜಕ್ಕೂ ಉಪಯೋಗವಾದಿತೆಂದು ಇಲ್ಲಿ ಕೊಡಲಾಗಿದೆ.

ನಮ್ಮ ಸಮಾಜದಲ್ಲಿ ಕೃತಜ್ಞತಾಬುದ್ಧಿಯು ಚನ್ನಾಗಿ ಇದೆ. ಧರ್ಮನೀತಿಗಳಬಗ್ಗೆ ಆದರವಿದೆ. ಅದು ' ಶಿವಾನುಭವಪತ್ರಿಕೆ ' ಯಂಥ ಸಾಹಿತ್ಯ ಚಟುವಟಿಕೆಯಿಂದ ಈಗಿನ ವಿಜ್ಞಾನಯುಗದಲ್ಲಿ ಉಳಿದಿದೆ. ಇಲ್ಲವಾದರೆ ದಿನದಿನಕ್ಕೆ ನಷ್ಟವಾಗುತ್ತಿರುವ ಆಧ್ಯಾತ್ಮಿಕತೆಯು ಇಷ್ಟಾದರೂ ಉಳಿಯುವ ಸಂಭವವಿಲ್ಲ. ಆದ್ದರಿಂದ ಬೀಜರೂಪದಲ್ಲಿಯಾದರೂ ನಮ್ಮ ಹಿರಿಯರ ನಿಜವಾದ ಸಂಪತ್ತಾದ ಶಿವಾನುಭವು ಉಳಿಯಲೆಂದಪೇಕ್ಷಿಸುವ ಸಜ್ಜನರು ಈ ' ಶಿವಾನುಭವ ' ಮಾಸಿಕವನ್ನೂ ಇಂತಹ ಸಮತಾಬೋಧಕ ಧಾರ್ಮಿಕ ಪತ್ರಿಕೆಗಳನ್ನು ಪೋಷಿಸಲೇಬೇಕೆಂಬುದು ನಿರ್ವಿವಾದ.

ಬಾಗಲಕೋಟೆಯಲ್ಲಿ ಧರ್ಮಾಭಿಮಾನವು ಅತ್ಯಂತ ಪ್ರಜ್ವಲಿತವಾದದ್ದು ಕಂಡುಬಂದಿತು. ಅಲ್ಲಿಯ ೪–೬ ಕಾರ್ಯಕರ್ತರೊಡನೆ 'ಶಿವಾನುಭವ' ಚಂದಾದಾರನ್ನು ಮಾಡಲು ಹೊರಟರೆ ಬಹು ಜನರು ಚಂದಾದಾರರಾಗಲು ಒಪ್ಪಿ ಅದರ ೬ ರೂಪಾಯಿ ವಾರ್ಷಿಕ ಚಂದಾ ಸಲ್ಲಿಸಿದರು. ಇದರಿಂದ ಪ್ರವಾಸದಲ್ಲೊದಗುವ ಅನೇಕ ತೊಂದರೆಗಳ ಕಲ್ಪನೆಯೇ ನನಗೆ ಬಾರದೆ ಇಮ್ಮಡಿ ಮುಮ್ಮಡಿ ಉತ್ಸಾಹದಿಂದ ಕಾರ್ಯವನ್ನು ಮುಂದುವರಿಸಿದೆನು.

ಬೆಳಗಾವಿಯಲ್ಲಿ ಶ್ರೀ ನಾಗನೂರ ಮಹಾಸ್ವಾಮಿಗಳು ನೂರಾರು ವಿದ್ಯಾರ್ಥಿಗಳಿಗಾಗಿ ಉಚಿತ ಪ್ರಸಾದ ನಿಲಯವನ್ನು ಬಹು ದಿನಗಳಿಂದ ನಡಿಸುತ್ತಿರುವರು. ಈಗ ಬೇಸಿಗೆ ಸೂಟಿಯಿರುವದರಿಂದ ಜುಲೈದಲ್ಲಿ ನಿಧಿಯನ್ನು ಕೂಡಿಸಿಕೊಡುವ ಆಶ್ವಾಸನ ಕೊಟ್ಟರು. ಅಲ್ಲಿಯ ವರ್ತಕರೂ ಕಾರ್ತಿಕದಲ್ಲಿ ನಿಧಿ ಕೂಡಿಸುವದಾಗಿ ಅಭಿವಚನ ಕೊಟ್ಟು ಸದ್ಯದಲ್ಲಿ ೨೫ ರೂಪಾಯಿ ಕೊಟ್ಟರು.

ಹಾಲಕೆರಿ ಶ್ರೀ ಅನ್ನದಾನ ಮಹಾಸ್ವಾಮಿಗಳು ೧೦೧ ರೂಪಾಯಿ ನಿಧಿಯನ್ನರ್ಪಿಸಿದರು. ಅವರು ನಿರಂತರ ಶಿವಾನುಭವದ ಚಂದಾದಾರರಂತೂ ಇದ್ದೇ ಇರುವರು. ಅಲ್ಲದೆ ಪ್ರತಿವರ್ಷವೂ ಶಿವಾನುಭವದ ಸಹಾಯಕ್ಕೆ ಸಲ್ಲಿಸುವರು. ಹಾಗೂ ಗ್ರಂಥ ಪ್ರಕಟನೆಗೆ ನೆರವಾಗುವರು. ಹೀಗೆ ಸರ್ವ ವಿಧದ ಬೆಂಬಲವೂ ಅವರಿಂದ ಇದ್ದೇ ಇದೆ. ನರೇಗಲ್ಲಲ್ಲಿ ಡಾಕ್ಟರ ಕಾಶೀನಾಥ ಶಾಸ್ತ್ರಿಗಳು ಚಂದಾದಾರರಾಗಿ ಬಹು ಜನರಿಂದ ಸಹಾಯ ಸಲ್ಲಿಸಿದರು. ನಿಡಗುಂದಿಯಲ್ಲಿ ಶಿವನಗೌಡ್ರು ೧೧ ರೂ. ನಿಧಿ ಹಾಗು ಶಿವಾನುಭವದ ಒಂದು ವರ್ಷದ ಚಂದಾ ಸಲ್ಲಿಸಿ ಕೆಲಜನರಿಂದ ಚಂದಾ ಸಲ್ಲಿಸಿದರು. ವಿಶೇಷತಃ ಶ್ರೀ ಗ್ಯಾನಯ್ಯನವರು ಕನ್ನಡ ಶಾಲಾ ಮಾಸ್ತರರು ಚಂದಾ ೬ ರೂ. ಅಲ್ಲದೆ ೫ ರೂ. ನಿಧಿಯನ್ನು ಕೊಟ್ಟು ಬಹುಜನರಿಗೆ ತಿಳಿ ಹೇಳಿ ಸಹಾಯ ಮಾಡಿದರು. ಕನ್ನಡ ಶಾಲಾ ಶಿಕ್ಷಕರ ಆರ್ಥಿಕ ಸ್ಥಿತಿಯು ಸಮಾಧಾನಕರವಿಲ್ಲದಿದ್ದರೂ ಇವರ ಧಾರ್ಮಿಕ ಸಾಹಿತ್ಯಪೋಷಕ ಉತ್ಕಟೇಚ್ಛೆಯು ಮಾದರಿಯದೆನ್ನಲಡ್ಡಿಯಿಲ್ಲ. ಎಲ್ಲ ಶಿಕ್ಷಕರಲ್ಲಿ ಈ ಕಳಕಳಿಯು ಒಡಮೂಡಿದರೆ ಸಮಾಜವು ಸುಸಂಘಟಿತವಾಗಿ ಪ್ರಕಾಶಿಸಲು ತಡೆಯಾಗದು. ಆದರೆ ವಸ್ತುಸ್ಥಿತಿಯು ಹಾಗಿಲ್ಲ. ದುಶ್ಚಟಗಳಿಗೆ ಸಾಕಷ್ಟು ಹಣವನ್ನು ಸುರಿದು ಸತ್ಕಾರ್ಯಕ್ಕೆ ಕಾಸನ್ನು ಸಲ್ಲಿಸದವರೇ ಹೆಚ್ಚು. ಶ್ರೀಮಂತರೂ ಕೂಡ ತಮ್ಮ ಧನದ ಸದ್ವಿನಿಯೋಗಗೊಳಿಸುವವರು ವಿರಳ. "ದರಿದ್ರನಾಗಿಯೂ ದಾನಿಯೆನಿಸುವನು. ಸುರರ ಮೇಳದಲಾಡುವನು" ಎಂಬ ವಿದುರನ ನೀತಿಯು ಇಲ್ಲಿ ನೆನಪಾಗುವದು.

ಗಜೇಂದ್ರಗಡದಲ್ಲಿ ಶ್ರೀ ನಂದ್ಯಾಳ ಚನಬಸಪ್ಪನವರು ೩೫ ವರ್ಷಗಳಿಂದಲೂ ಅಂದರೆ ಶಿವಾನುಭವದ ಹುಟ್ಟಿನಿಂದ ಈ ವರೆಗೆ ಬಿಡದೆ ಚಂದಾದಾರರಿದ್ದು ಅವರು ಕೂತಲ್ಲೇ ೧೫ ಜನರನ್ನು ಚಂದಾದಾರರನ್ನು ಮಾಡಿ ಕೊಟ್ಟರು. ಅವರ ವರ್ಚಸ್ಸು ಅಷ್ಟುಂಟು. ಅವರ ಮಾತನ್ನು ಯಾರೂ

ಮೀರುವದಿಲ್ಲ. ಅಂದರೆ ಪ್ರೇಮದಿಂದ ಅವರು ಸರ್ವರಿಗೂ ಸಕ್ಕರೆಯಾಗಿ ರುವರಲ್ಲದೆ ಭಿನ್ನಮಾರ್ಗದಿಂದಲ್ಲ. ದರ್ಪದಿಂದ ಹೆದರಿಸುವದರಿಂದ ಎಲ್ಲರೂ ಮಾತನ್ನು ಕೇಳಬಹುದು. ಇದು ಬಹುದಿನ ನಡೆಯದು. ನಡೆದರೂ ಅಪಕೀರ್ತಿಗೆ ಕಾರಣವು. ಆದರೆ ಶ್ರೀ ನಂದ್ಯಾಳರು ಸದಾ ಸಮಾಜ ಹಿತಚಿಂತಕರಾಗಿದ್ದು ಎಲ್ಲರ ಹೃದಯವನ್ನು ಆಳುತ್ತಾರೆ. ಇಂಥವರ ಅವಶ್ಯಕತೆ ಸಮಾಜಕ್ಕೆ ಹೆಚ್ಚಾಗಿಂಟು. ಹಿಂದಕ್ಕೆ ಶ್ರೀ ಸಕ್ಕರಿಕರಡೆಪ್ಪನವರು ವಾರದ ಮಲ್ಲಪ್ಪನವರು ಮುಂತಾದ ಆದರ್ಶ ವರ್ತಕಶಿಖಾಮಣಿಗಳಾಗಿ ಹೋಗಿರುವರು. ಈಗೀಗ ಅಂಥವರನ್ನು ಅಪರೂಪವಾಗಿ ಕಾಣಬಹುದು. ಅಂಥವರಲ್ಲಿ ಶ್ರೀ ನಂದ್ಯಾಳ ಚನಬಸವಪ್ಪನವರೊಬ್ಬರು.

ಗದಗಿನ ಶ್ರೀ ಶಿವಾನಂದಸ್ವಾಮಿಗಳೂ ಕೂಡ ತಾವು ಚಂದಾದಾರ ರಾಗುವದಲ್ಲದೆ ತಮ್ಮ ಶಾಖಾ ಮಠಗಳ ವತಿಯಿಂದ ೧೩ ಚಂದಾದಾರರ ಹಣವನ್ನು ತಾವೇ ಕೊಟ್ಟು ನನಗೆ ಹೆಚ್ಚಾಗಿ ಪ್ರೋತ್ಸಾಹವನ್ನು ಕೊಟ್ಟರು.

ನಿಡಗುಂದಿ ಕೊಪ್ಪದಲ್ಲಿ ಗೋರಕಾಳದ ಸ್ವಾಮಿಗಳು ೫೧ ರೂ. ನಿಧಿ ಯನ್ನು ಕೊಟ್ಟು ಚಂದಾದಾರರೂ ಆದರು. ಇವರು ಇಲ್ಲಿ ಬಹುಕಾಲ ದಿಂದ ಅನುಷ್ಠಾನ ಮಾಡುತ್ತಲಿರುವರು.

ಕುಂದಗೋಳದಲ್ಲಿ ಪಂಚಗ್ರಹ ಮಠವು ಬಹು ಪ್ರಸಿದ್ಧವಿದೆ. ಮಠದ ಕೀರ್ತಿಯೇನೋ ಚನ್ನಾಗಿದೆ. ಹಿಂದೆ ಅಂತಹ ಗುರುಗಳಾಗಿ ಹೋಗಿರ ಬಹುದು. ಆದರೆ ಸದ್ಯದ ಸ್ಥಿತಿಯು ಅಸಮಾಧಾನಕಾರಕವಾಗಿದೆ. ಶ್ರೀ ಸಿದ್ಧವೀರಸ್ವಾಮಿಗಳು ಮಠದಲ್ಲಿ ಶಿವಶರಣರ ವಚನಗಳನ್ನು ತೂಗಹಾಕಿ ದ್ದಾರೆ. ಬಸವಣ್ಣನವರ ಫೋಟೋ ಕೂಡ ಎದುರಿಗೆ ಹಾಕಿದ್ದಾರೆ. ಹೀಗೆ ಅವರು ಆಡಂಬರದಲ್ಲಿ ಶರಣರ ಚರಿತ್ರೆಗಳನ್ನು ಜನರಿಗೆ ತೋರಿಸುತ್ತಿದ್ದರೂ ಹೃದಯದಿಂದಲ್ಲ. ನಿಮ್ಮ ಶಿವಾನುಭವವು ಶರಣರ ಸ್ತುತಿ ಮಾಡುತ್ತಿದೆ ಯಾದಕಾರಣ ಆ ಪತ್ರಿಕೆಯು ನಮಗೆ ಬೇಕಿಲ್ಲ. ಇಷ್ಟೇ ಅಲ್ಲದೆ ಈ ಊರಲ್ಲಿ ಕೂಡ ಯಾರೂ ಚಂದಾದಾರರಾಗಲಾರರು ಎಂದು ನುಡಿದರು. ಇಷ್ಟೇ ಕಾರ್ಯ ನೆರವೇರಿಸಿ ನಾನು ನನ್ನ ಪ್ರಯಾಣ ಮುಂದುವರಿಸಿದೆ.

## ರಾ|| ಬ|| ಪಿ. ಜಿ. ಹಳಕಟ್ಟಿ ಇವರಿಗೆ 'ಡಾಕ್ಟರ ಆಫ್ ಲೆಟರ್ಸ' ಪದವಿ.

ಕರ್ನಾಟಕ ವಿಶ್ವವಿದ್ಯಾಲಯದವರು ಈ ವರ್ಷ ಕೆಲವರಿಗೆ ಡಾಕ್ಟರ ಪದವಿಗಳನ್ನು ಬಹುಮಾನವಾಗಿ ಕೊಟ್ಟಿರುತ್ತಾರೆ ಅವು ' ಡಾಕ್ಟರ ಆಫ್ ಲೆಟರ್ಸ' ಮತ್ತು 'ಡಾಕ್ಟರ ಆಫ್ ಲಾಜ' ಎಂದಿರುತ್ತವೆ.

ಶ್ರೀ ಬಿ. ಜಿ. ಖೇರ ಇವರು ಮುಂಬಯಿ ಇಲಾಖೆಯಲ್ಲಿ ಶಿಕ್ಷಣಮಂತ್ರಿಗಳಾಗಿ ಅನೇಕ ವರ್ಷ ಕೆಲಸ ಮಾಡಿದರು. ಈಗ ಅವರು ಹಿಂದೀ ಅಭ್ಯಾಸವನ್ನು ಕುರಿತು ನೇಮಿಸಿದ ಒಂದು ಕಮೀಟಿಗೆ ಅಧ್ಯಕ್ಷರಾಗಿದ್ದಾರೆ. ಶ್ರೀ ಮಾಸ್ತಿ ವೆಂಕಟೇಶ ಅಯ್ಯಂಗಾರರು ಅನೇಕ ಚಿಕ್ಕ ದೊಡ್ಡ ಕಾದಂಬರಿಗಳನ್ನು ಬರೆದಿದ್ದಾರೆ. ಬೆಂಗಳೂರು ಸಾಹಿತ್ಯ ಪರಿಷತ್ತಿಗೆ ಅನೇಕ ವರ್ಷ ಅಧ್ಯಕ್ಷರಾಗಿದ್ದರು. ರಾ|| ಬ|| ಪಿ. ಜಿ. ಹಳಕಟ್ಟಿ ಇವರು ಕನ್ನಡ ವಾಙ್ಮಯ್ಯದಲ್ಲಿ ಮೊದಲು ವಚನಗ್ರಂಥಗಳ ಪರಿಚಯವಿರಲಿಲ್ಲ, ಆದರೆ ಅವರು ಪುರಾತನ ಗ್ರಂಥಗಳನ್ನು ಮೊದಲು ಶೋಧಿಸಿ ಅಚ್ಚು ಹಾಕಿಸಿದ್ದಾರೆ. ಹಾಗೆಯೇ ಹರಿಹರನ ರಗಳೆಗಳೂ ಮೊದಲು ಅಪರಿಚಿತವಾಗಿದ್ದವು. ಅವರು ೮೦—೮೫ ರಗಳೆಗಳನ್ನು ಪ್ರಸಿದ್ಧಿಸಿದ್ದಾರೆ. ವೀರಶೈವ ಸಮಾಜದಲ್ಲಿ ಅನೇಕ ಶಿವಶರಣರಾಗಿ ಹೋಗಿದ್ದು ಅವರ ಚರಿತ್ರೆಗಳನ್ನು ಸಂಶೋಧಿಸಿ, ಅವುಗಳ ನಾಲ್ಕು ದೊಡ್ಡ ಗ್ರಂಥಗಳನ್ನು ಪ್ರಸಿದ್ಧಿಸಿದ್ದಾರೆ. ಹಾಗೂ ಕೊಡಗು, ಹಾಗಲವಾಡಿ, ಬೀಳಗಿ ಈ ವೀರಶೈವ ರಾಜರ ಚರಿತ್ರೆಗಳನ್ನು ಪ್ರಸಿದ್ಧಿಸಿರುವರು. ವೀರಶೈವರ ಅನೇಕ ಶಿಲಾಶಾಸನಗಳನ್ನು ಬೆಳಕಿಗೆ ತಂದರು. ಅವರು ಅನೇಕ ಸ್ವತಂತ್ರ ಲೇಖಗಳನ್ನು ಈ ೩೦ ವರ್ಷಗಳಲ್ಲಿ ಶಿವಾನುಭವ ಪತ್ರಿಕೆಯ ದ್ವಾರಾ ಪ್ರಕಟಿಸಿದ್ದಾರೆ. ಇವರು ಸಿದ್ಧಪಡಿಸಿದ ಅನೇಕ ಗ್ರಂಥಗಳು ಶಾಲೆ ಕಾಲೇಜಗಳಲ್ಲಿ ಪಠ್ಯಪುಸ್ತಕಗಳಾಗಿವೆ. ಹೀಗೆ ಇವರು ೭೫-೮೦ ಗ್ರಂಥಗಳನ್ನು ಪ್ರಕಟಿಸಿದ್ದಾರೆ. ಈ ಮೂವರಿಗೆ 'ಡಾಕ್ಟರ ಆಫ್ ಲೆಟರ್ಸ' ಎಂಬ ಪದವಿಯು ಕೊಡಲ್ಪಟ್ಟಿದೆ. ಮುಂಬಯಿ ಇಲಾಖೆಯ ಮುಖ್ಯ ಮಂತ್ರಿಗಳಾದ ಶ್ರೀ ಮುರಾರಜಿ ದೇಸಾಯಿ ಇವರಿಗೂ ಶಿಕ್ಷಣ ಮಂತ್ರಿಗಳಾದ ದಿನಕರ

ದೇಸಾಯಿ ಇವರಿಗೂ ಕರ್ನಾಟಕ ವಿಶ್ವವಿದ್ಯಾಲಯ ನಿರ್ಮಾಣದ ಆರಂಭದ ಕಮೀಟಿಯ ಚೇರಮನ್ನರಾದ ಶ್ರೀ ಎನ್. ಎಸ್. ಲೋಕೂರ ನಿವೃತ್ತ ಹೈಕೋರ್ಟ ಜಜ್ಜ ಇವರಿಗೂ ಡಾಕ್ಟರ ಆಫ್ ಲಾಜ ಎಂಬ ಪದವಿಯು ಕೊಡಲ್ಪಟ್ಟಿದೆ. ಈ ನಿರ್ಧಾರಗಳು ಯೋಗ್ಯವಾಗಿರುತ್ತವೆಂಬುದರಲ್ಲಿ ಯಾವ ಸಂದೇಹವೂ ಇರಲಾರದು. ಇವರೆಲ್ಲರೂ ಕರ್ನಾಟಕಕ್ಕೆ ಮತ್ತು ಅಪರ ವಾಙ್ಮಯಕ್ಕೆ ಉಚ್ಚ ಸೇವೆಯನ್ನು ಸಲ್ಲಿಸಿದ್ದಾರೆ.

---

## ರಾ|| ಬ|| ಫ. ಗು. ಹಳಕಟ್ಟಿ ಇವರ ನಿಧಿ ಸಂಗ್ರಹ

ಶ್ರೀಯುತ ಎಸ್. ಆರ್. ಪಾಟೀಲ ಇವರು ತಮ್ಮ ಪ್ರವಾಸ ಕಾಲದಲ್ಲಿ ರಾ|| ಬ|| ಹಳಕಟ್ಟಿ ಇವರ ನಿಧಿಗಾಗಿ ಸಂಗ್ರಹಿಸಿದ ಹಣದ ವಿವರವು ಕೆಳಗೆ ಕಾಣಿಸಿದಂತೆ ಇದೆ.

೨೫ ರೂ. ಬಸವಜಯಂತ್ಯುತ್ಸವ ಸಮಿತಿ ಬೆಳಗಾವ.

೧೦ ರೂ. ಶ್ರೀ. ಎಲ್. ವಾಯು. ಅಂಕಲಿಗಿ, ಬಿಎ, ಎಲ್, ಎಲ್. ಬಿ. ಚಾರಿಟಿ ಕಮಿಶನರ, ಬೆಳಗಾವ.

೯ ರೂ. ಶ್ರೀ. ಆರ್. ಜಿ. ಮೋಹಿತೆ, ಬೆಳಗಾವ.

೧೦೧ ರೂ. ಶ್ರೀ. ಮ. ನಿ. ಪ್ರ. ಅನ್ನದಾನಿಸ್ವಾಮಿಗಳು, ಹಾಲಕೆರೆ.

೫೧ ರೂ. ಶ್ರೀ. ಚನ್ನಬಸವ ಸ್ವಾಮಿಗಳು ಶಾ. ಶಾ. ಮಠಕೊಪ್ಪ ನಿಡಗುಂದಿ.

೫ ರೂ. ಶ್ರೀ. ಗ್ಯಾನಯ್ಯ ಪಾಸ್ತರ.

೧೧ ರೂ. ಶ್ರೀ ಶಿವನಗೌಡಾ ಪಾಟೀಲ.

೫೧ ರೂ. ಶ್ರೀ ಚನ್ನವೀರ ಮಹಾಸ್ವಾಮಿಗಳು ಶಿರಹಟ್ಟಿ.

೨೫ ರೂ. ಶ್ರೀ. ರುದ್ರಯ್ಯ ಮಾಳಿಕೊಪ್ಪಮಠ.

ಕ್ಷಮಾಪಣೆ:—

ಈ ಎರಡು ತಿಂಗಳುಗಳಿಂದ ನಮ್ಮ ಪ್ರೆಸ್ಸಿನಲ್ಲಿ ಮಹತ್ವದ ಜರೂರಿಯ ಪ್ರಿಂಟಿನ ಕೆಲಸಗಳು ನಡೆದಿದ್ದರಿಂದ ನಾವು ಪತ್ರಿಕೆಯನ್ನು ಸಕಾಲದಲ್ಲಿ ಹೊರಡಿಸಲು ಶಕ್ಯವಾಗಲಿಲ್ಲ. ಇದಕ್ಕೋಸ್ಕರ ನಾವು ವಿಷಾದಿಸುತ್ತೇವೆ. ಹೀಗೆ ಅದಕ್ಕೆ ತಡವಾದದ್ದರಿಂದ ನಾವು ವಾಚಕರ ಕ್ಷಮಾಪಣೆಯನ್ನು ಬೇಡಿಕೊಳ್ಳುತ್ತೇವೆ. ಇನ್ನು ಮುಂದೆ ಅದು ಸರಿಯಾಗಿ ಹೊರಡಿಸಲ್ಪಡುವದು.

ವ್ಯವಸ್ಥಾಪಕ-'ಶಿವಾನುಭವ'

From
*Shivanubhava*
*Office*
BIJAPUR

ಚನಮಲ್ಲಪ್ಪ ಶಿದ್ದಪ್ಪ ಬಡೇವಿ
ಮು. ಪೋ. ಬನಹಟ್ಟಿ
ವ್ಹಾಯಾ ಕುಡಚಿ ಸ್ಟೇಶನ್

**R. N. B. 2554**




ಈ ಪತ್ರಿಕೆಯನ್ನು ಇದರ ಸಂಪಾದಕರಾದ ರಾ॥ ಬ॥ ಪಿ. ಜಿ. ಹಳಕಟ್ಟಿ, ಬಿ. ಎ., ಎಲ್. ಎಲ್. ಬಿ. ಇವರು ವಿಜಾಪೂರ ವಾರ್ಡ ನಂ. ೨. ಮನೆ ನಂ ೧೩೬೮ ರಲ್ಲಿರುವ ಹಿತಚಿಂತಕ ಪಾವರ ಪ್ರಿಂಟಿಂಗ್ ಪ್ರೆಸ್ಸಿನಲ್ಲಿ ಮುದ್ರಿಸಿ ಅಲ್ಲಿಯೇ ಪ್ರಸಿದ್ಧಿಸಿದರು.

ಸಂಪುಟ ೩೦ ಶ್ರೀ ಸಂಚಿಕೆ ೮

# ಶಿವಾನುಭವ

ಸಂಪಾದಕರು
ರಾ|| ಬ|| ಫ. ಗು. ಹಳಕಟ್ಟಿ,
ಬಿ. ಎ. ಎಲ್. ಎಲ್. ಬಿ.
ವಿಜಾಪುರ.

[ ವಾರ್ಷಿಕ ಚಂದಾ ೫-೧೨-೦ ಅಂಚೆಯ ವೆಚ್ಚ ಬೇರೆ ]

ಆಗಸ್ಟ ೧೯[illegible]

# ವಿಷಯಾನುಕ್ರಮಣಿಕೆ.

# ಶಿವಾನುಭವ

ಸಂಪುಟ ೩೦ | ಅಗಸ್ಟ ೧೯೫೬ | ಸಂಚಿಕೆ ೮

## ತೋಂಟದ ಮಠದ ಸ್ವಾಮಿಗಳ ಜೀವನ ಚರಿತ್ರೆ

( ಲೇಖಕರುಃ—ಶ್ರೀ ಮ. ಮಲ್ಲಪ್ಪ ಹಲಗೂರು. )



ಮುಂಡೆ ಬೋಳಿಸಿಕೊಂಡು ತುಂಡುಗಂಬಳಿ ಹೊದೆದು ।
ಹಿಂಡನಗಲಿದ ಗಜದಂತೆ ಇಪ್ಪವರ ।
ಕಂಡು ನಂಬುವದು ಸರ್ವಜ್ಞ ॥

ಭಾರತವು ಹಳ್ಳಿಗಳ ಕಣಜವು. ನಮ್ಮ ನಾಡಿನ ಕೀರ್ತಿ ಪ್ರಸಾದವು ಏನಾದರೂ ಇದ್ದರೆ ಅದು ಹಳ್ಳಿಗಳಿಂದಲೇ ಎನ್ನ ಬೇಕಾಗಿದೆ. ಈ ಬಗೆಯು ಹಳ್ಳಿಗಳಲ್ಲಿ ಮಹೋದಯರ ಜನ್ಮವು ಉಂಟಾಗುವದು ಬಹಳ ಕಾಲದಿಂದ ಬಂದ ರೂಢಿಯೇ ಸರಿಯು. ಮಹೋದಯರಿಗೆ ಜೀವದ ಜೀವಾಳವು ಪ್ರಶಾಂತ ಪ್ರದೀಪ್ತ ವಾತಾವರಣವು. ಇದು ಹಳ್ಳಿಯಲ್ಲಿ ಕರಬಿಲ್ವ ಪತ್ರ ವಾಗಿರುತ್ತದೆ. ಇದರಿಂದಲೇ ಭಗವಂತನ ಸೌಂದರ್ಯಸಾನ್ನಿಧ್ಯ ಸಂದರ್ಶನ ವನ್ನು ಕೀರ್ತಿಶೇಷ ರವೀಂದ್ರರೂ ಚಾರ್ಲೆಸ್ ಆಂಡ್ರ್ಯೂಸರೂ ಮತ್ತು ಜಪಾನಿನ ಸುಪ್ರಸಿದ್ಧ ಶಾಂತಿವಾದಿ ಖಗಾವಿರು ಹಳ್ಳಿಯಲ್ಲಿಯೇ ಹೊಂದಿದ್ದಾರೆ.

ಈ ಬಗೆಯ ಪರಿಸ್ಥಿತಿಯಲ್ಲಿನ ನಮ್ಮ ನಾಡಿನಲ್ಲಿ ದಕ್ಷಿಣ ಕರ್ನಾಟಕವು ಶಿವಶರಣರಿಗೆ ಜನ್ಮವನ್ನು ಕೊಟ್ಟಿರುವದರಲ್ಲಿ ಎತ್ತಿದ ಕೈ. ಮೈಸೂರು ಜಿಲ್ಲೆಯ ತಿರುಮಕೂಡಲು ನರಸೀಪುರದ ತಾಲೂಕಿನ ಸಿದ್ಧರಹಳ್ಳಿ – ಬೀದರಹಳ್ಳಿಯು ಪ್ರಶಾಂತ ವಾತಾವರಣದ ಸನ್ನಿವೇಶವನ್ನು ಸಮೀಪಕ್ಕೆ ಸೇರಿಸಿಕೊಂಡಿರು ವಂತಹುದು. ಸಿದ್ಧರಹಳ್ಳಿ ಗವಿಯು ಮಹಾಶಿವಶರಣರ ನೆಲೆವೀಡು. ಆ ಗವಿ

ಯೊಡೆಯರ ಆಶಿಷದ ಅಲರ್ವನೆಯಲ್ಲಿಯೇ ಸಿದ್ಧರಹಳ್ಳಿಯ ನಿವಾಸಿಗಳು ನಿರಾತಂಕವಾಗಿ, ನಿರ್ಭೀತಿಯಿಂದ ವಾಸಿಸುತ್ತಿದ್ದಾರೆ. ಈ ಸಿದ್ಧರ ಹಳ್ಳಿಯಲ್ಲಿಯೇ ಶ್ರೀ ಶಿವಯೋಗಿ ಷಡಕ್ಷರ ದೇಶಿಕೇಂದ್ರರ ಜನ್ಮೋದಯವು.

ಸೋಮನಾಥಪುರದ ಮಾದಪ್ಪ ಮತ್ತು ಸಿದ್ಧಲಿಂಗಮ್ಮ ಎಂಬ ದಂಪತಿಗಳು ಸಿದ್ಧರಹಳ್ಳಿಯಲ್ಲಿ ವಾಸಿಸುತ್ತಿದ್ದರು. ಉತ್ತಮ ವಂಶದ ವೀರಶೈವ ಮನೆತನಕ್ಕೆ ಸೇರಿದ ಇವರನ್ನು ಕಡು ಬಡತನವು ಆವರಿಸಿಕೊಂಡಿತ್ತು. ಅನುಕೂಲದ ಆಸ್ತಿಪಾಸ್ತಿ, ಧನಧಾನ್ಯಕ್ಕೆ ಬಡತನವಿದ್ದರೂ ಆಚಾರ ವಿಚಾರದಲ್ಲಿ ಮಾತ್ರ ದಾರಿದ್ರ್ಯವಿರಲಿಲ್ಲ. ಆಚಾರೋಪರ ಧರ್ಮಃ ಮತ್ತು ನ ಹಿಜ್ಞಾನೇನ ಸದೃಶಂ ಎಂಬುದನ್ನು ಇವರು ಚಾಚೂ ತಪ್ಪದೆ ಆಚರಿಸುತ್ತಿದ್ದರು. ಎಡೆಬಿಡದೆ ಶಿವಧ್ಯಾನವನ್ನು ಮಾಡುತ್ತಿದ್ದರು. ನಿಷ್ಠಾವಂತರಾದ ಈ ದಂಪತಿಗಳಿಗೆ ತನುಭವರಿಲ್ಲವ ಭಾಗ್ಯವು ಮನವನ್ನು ಆಗಾಗ್ಯೆ ಕೊರೆಯುತ್ತಿತ್ತು. ಆರ್ಭಕರಾಡ ದಂಗಳವು ಸೊಗಸಿಲ್ಲವೆಂಬುದು ಇವರಿಗೆ ಅನುಭವ ವೇದ್ಯವಾಗಿತ್ತು. ಗುರುಲಿಂಗ ಜಂಗಮ ಸೇವಾನಿರತರಾದ ಇವರ ಮನೆಗೆ ಮೊರಳೆಸುತದ ಶಿವರುದ್ರ ಸ್ವಾಮಿಯವರ ವಿಜಯವಾಯಿತು.

ಮರ್ತ್ಯಲೋಕದು ಭಕ್ತರ ಮನವ ಬೆಳಗಲೆಂದು ಇಳಿತಂದನಯ್ಯ ಕತ್ತಲೆಯ ಪಾಳೆಯುವ ರವಿ ಹೊಕ್ಕಂತಾಯಿತಯ್ಯ. ಚಿತ್ತದ ಪ್ರವೃತ್ತಿಯ ಹಿಂಗಿಸಿ, ಮುಕ್ತಿ ಪಥವ ತೋರಿದನಲ್ಲ ಅಸಂಖ್ಯಾತರುಗಳಿಗೆ. ತನುವೆಲ್ಲ ಸ್ವಯಂಲಿಂಗ: ಮನವೆಲ್ಲ ಚರಲಿಂಗ. ಭಾವವೆಲ್ಲ ಮಹಾ ಘನದ ಬೆಳಗು ಚೆನ್ನ ಮಲ್ಲಿಕಾರ್ಜುನಯ್ಯ. ನಿಮ್ಮ ಶರಣ ಸಮ್ಯಜ್ಞಾನಿ ಚೆನ್ನ ಬಸವಣ್ಣನ ಶ್ರೀ ಪಾವಕ್ಕೆ ಶರಣೆಂದು ಭವಂ ನಾಸ್ತಿಯಾಯಿತಯ್ಯ ಪ್ರಭುವೇ.

ಈ ಆಗಮನದಿಂದ ದಂಪತಿಗಳ ಹಿರಿಹಿಗ್ಗನ್ನು ಹೇಳತೀರದು. ನಲವತ್ತೆಂಟು ದಿನ ರುದ್ರಾಭಿಷೇಕಮಾಡಿ, ಆ ಜಲವನ್ನು ಬಾಡಿ ಬಳಲಿ ಹೋಗಿದ್ದ ಬಿಲ್ವಪತ್ರವೃಕ್ಷಕ್ಕೆ ಎರೆಯಲು ಅದು ಚಿಗುರಿತು. ಈ ಬಗೆಯ ಅಸಾಧ್ಯ ಮಹಿಮಾಪುರುಷರು ಮಹಾ ಸಿದ್ಧಿವಾದಿಗಳು. ಇವರು ತಮ್ಮ ಜ್ಞಾನದ ಹಿರಮೆಗರಿಮೆಗೆ ಶೃಂಗೇರಿಮಠದ ಅಂದಿನ ಅಧಿಪತಿಗಳಿಂದ ಸನ್ಮಾನವನ್ನು ಪಡೆದಿದ್ದರು. ವೀರಶೈವ ಜಗತ್ತಿನಲ್ಲಿ ಈ ಬಗೆಯ ಜ್ಞಾನ ಮಹಾಮೂರ್ತಿ ತರ್ಕಸಿದ್ಧಾಂತ ಪುರುಷ ಪುಂಗವ ಮತ್ತೊಬ್ಬರಿಲ್ಲ ಎಂಬಷ್ಟಕ್ಕೆ ಇವರ ವಿಚಾರವು ಮುಟ್ಟಿತ್ತು.

ಇಂತಹ ಜಂಗಮರ ಸೇವೆಯು ಈ ದಂಪತಿಗಳಿಂದ ಸಾಂಗೋಪಾಂಗವಾಗಿ ನಡೆಯಿತು. ಸ್ವಾಮಿಯವರಿಂದ ಇವರಿಗೆ ಪ್ರಸಾದ, ಪುಷ್ಪ, ಸುವರ್ಣವು ಅನುಗ್ರಹವಾಯಿತು. ಭಕ್ತರಿಗೆ ಆಶೀರ್ವಾದಮಾಡಿ ಬಂದ ದಾರಿಯನ್ನು ಹಿಡಿದು ಬಿಜಯಮಾಡಿದರು. ಭಾಕ್ತಿಕ ಜೀವನವನ್ನು ನಡೆಯಿಸುತ್ತಿದ್ದ ಈ ದಂಪತಿಗಳಿಗೆ ಅಭೀಷ್ಟ ಪ್ರದಾಯಕ ಕಾಲವು ಬಂದಿತೋ ಏನೋ ಭಕ್ತೆ ಸಿದ್ಧಲಿಂಗಮ್ಮನಿಗೆ ಗರ್ಭಧಾರಣದ ಚಿಹ್ನೆಯು ಕಾಣಬರುತ್ತಿತ್ತು. ಪರಮ ಕೃಪಾಕರನ ಪಪೆಯು ಲಭಿಸಿದ್ದಕ್ಕೆ ಇವರ ಹಿರಿಹಿಗ್ಗು ಹೇರಳವೇ ಸರಿಯು. ನವ ಮಾಸಗಳು ಸಮೀಪಿಸುತ್ತ ಬಂದಂತೆಲ್ಲಾ ಸಿದ್ಧಲಿಂಗಮ್ಮನಿಗೆ ಹುಣ್ಣಿಮೆಯ ಚಂದಿರನ ಕಳೆಯು ಧಾವಿಸಿ ಬರುತ್ತಲಿತ್ತು ಶರೀರಕ್ಕೆ ಏನೋ ಒಂದು ಬಗೆಯಾಗುತ್ತಿದೆ ಒಂದು ಒಮ್ಮೆ ಒರಗಿ ಸಿದ್ಧಲಿಂಗಮ್ಮನು ಕುಳಿತಳು. ಘಂಟೆಯು ಕಳೆಯುತ್ತಿದ್ದಂತೆಯೇ ಈ ದಂಪತಿಗಳಿಗೆ ಪ್ರಥಮ ಗರ್ಭದಲ್ಲಿಯೇ ಪುತ್ರರತ್ನವು ದೊರಕಿತು. ಹಸಿದು ಅಳಲಿ ಬಳಲಿ ಅಸ್ತವ್ಯಸ್ತರಾಗಿದ್ದವರಿಗೆ ಅಶನವು ಸಿಕ್ಕಿದಂತಾಯಿತು. ಈ ದಂಪತಿಗಳಿಗೆ ಈ ಶಿಶುವು ಜನಿಸಿದುದು. ಕಷ್ಟಕ್ಕೆ ಯೋಗ್ಯಫಲವು ದೊರಕಿತು. ಶಿಶುವಿಗೆ ಲಿಂಗಸಾಹಿತ್ಯವಾಯಿತು. ಮಗುವಿಗೆ ಮರಿಸ್ವಾಮಿ ಎಂಬ ಹೆಸರನ್ನು ಕರೆದರು.

ಶೈಶವದಲ್ಲಿ ಈ ಶಿಶುವಿನ ಆಟವೇ ವಿಚಿತ್ರವಾಗಿತ್ತು. ಲೌಕಿಕದಲ್ಲಿ ಇದನ್ನು ಮರ್ಯಾದೆಯಿಂದ ನೋಡಲಿಕ್ಕೆ ಹತ್ತಿದರು. ಮಗುವು ಶೈಶವದಿಂದ ಬಾಲ್ಯಕ್ಕೆ ಬಂದಿತು. ಹಳ್ಳಿಯಲ್ಲಿನ ಕೂಲಿ ಮಠಕ್ಕೆ ಈ ಮಗುವು ವ್ಯಾಸಂಗಕ್ಕೆ ಸೇರಿತು. ಅಕ್ಷರ ಕಲಿತು ಓದನ್ನು ಒಪ್ಪವಾಗಿ ಮುಗಿಸಿದರೂ ಇಹಲೋಕದ ಲಂಪಟದಲ್ಲಿ ತೊಳಲುವಂತೆಮಾಡುವ ಈ ವಿದ್ಯೆಯು ಈ ಬಾಲಕನಿಗೆ ಸೇರಲಿಲ್ಲ. ಓದುಬರಹ ಲೆಕ್ಕವನ್ನು ಮಾತ್ರ ಮನೆಗಾಣಿಸಿಕೊಂಡನು. ಲೌಕಿಕ ವಿದ್ಯೆಯು ಅಷ್ಟಾಗಿ ರುಚಿಸದಿದ್ದರೂ ಪಾರಮಾರ್ಥಿಕ ವಿಷಯವು ಸವಿಯಾಗ ಹತ್ತಿತು. ಇದನ್ನು ನೋಡಿದ ಈ ಬಾಲಕನ ಉಪಾಧ್ಯಾಯರಿಗೆ ಒಂದು ಸಮಸ್ಯೆಯೇ ಎದಿರು ಬಂದಂತಾಯಿತು. ಈ ಉಪಾಧ್ಯಾಯರಿಗೆ ಬುದ್ಧ, ಬಸವ, ನಾನಕ ಇವರುಗಳ ನೆನೆಪು ತಟಕ್ಕನೆ ಬರುತ್ತಿತ್ತು. ಶಿವಾನುಭವ, ವೈರಾಗ್ಯ, ಭಕ್ತಿ ಇವುಗಳತ್ತ ಈ ಬಾಲಕನ ಮನಸ್ಸು ಕೊನರುತ್ತಲಿತ್ತು. ತತ್ಫಲವಾಗಿ ಹಳ್ಳಿಯ ಶಾಲಾಭ್ಯಾಸವೇ ಪೂರ್ತಿಯಾಗುವದು ಇವರಿಗೆ ದುಸ್ತರವಾಯಿತು. ತತ್ಫಲವಾಗಿ ವಿದ್ಯಾಭ್ಯಾಸ ಸಾಗಿಸಲು ಈ ಬಾಲಕನಿಗೆ ಅನಾ

ದರವು ಆವರಿಸಿಕೊಂಡಿತು. ಸಿದ್ಧರಹಳ್ಳಿಯ ಅಂಗಡಿ ಬೀದಿಯ.ಲ್ಲಿ ಹೋಗುತ್ತಿರುವಾಗ ಈ ಬಾಲಕನಿಗೆ ಒಂದು ಬಿಡಿ ಗಾಸು ಸಿಗಲು ಅದಕ್ಕೆ ಕಡಲೆಯನ್ನು ತೆಗೆದುಕೊಂಡು ತಿಂದು ಬಿಟ್ಟರು. ತತ್ಫಲವಾಗಿ ಈ ಬಾಲಕನಿಗೆ ಮನೋವ್ಯಾಕುಲವು ಆವರಿಸಿತು. ಹೀಗೆ ಇರುತ್ತಿರಲು ರೂಢಿಯಂತೆ ತಾಯಿಯಿಂದ ಬಿಡಿಗಾಸೊಂದು ಬಾಲಕನಿಗೆ ಬರಲು ಅದನ್ನು ತೆಗೆದುಕೊಂಡು ಕಾಸು ಸಿಕ್ಕಿದ ಸ್ಥಳಕ್ಕೆ ಹೋಗಿ ಆಲ್ಲಿ ಅಡನ್ನು ಬಿಸಾಡಿ ಬಂದನು. ಆಗ ಆ ಬಾಲಕನ ಮನಸ್ಸು ಹಗುರವಾಯಿತು.

ಹಂಗಿನ ಅರಮನೆಗಿಂತ ವಿಂಗಡಡ ಗುಡಿಲೇಸು
ಭಂಗಬಟ್ಟುಂಬ ಬಿಸಿಯನ್ನಕ್ಕಿಂತಲೂ
ತಂಗುಳವೇ ಲೇಸು ಸರ್ವಜ್ಞ ॥

ಊರನ್ನು ಬಿಟ್ಟು, ಗುಡಿಗುಂಟಾರಗಳನ್ನೂ, ದೇಗುಲ ಪುಣ್ಯ ಕ್ಷೇತ್ರಗಳನ್ನೂ, ಮಠ ಮಾನ್ಯಗಳನ್ನೂ ನೋಡುತ್ತ, ನಿಲ್ಲುತ್ತ ಮತ್ತು ವಾಸಿಸುತ್ತಾ ಮರಿಸ್ವಾಮಿಯು ಕಾಲಕಳೆಯುತ್ತ ಬಂದನು. ಚಿಕ್ಕವನಾದರೂ ಈತನಲ್ಲಿ ನಿರ್ಭೀತಿ, ನಿರ್ಭಯವು, ನಿರರ್ಗಳವಾಗಿ ಪ್ರವಹಿಸುತ್ತಲಿತ್ತು.

ಕರದಿ ಕಪ್ಪರವುಂಟು ಹಿರಿದೊಂದು ನಾಡುಂಟು ।
ಹರನೆಂಬ ದೈವ ನಮಗುಂಟು ತಿರಿವರಿಂ ।
ಸಿರಿವಂತರಾರು ಸರ್ವಜ್ಞ ॥ – ಸರ್ವಜ್ಞ.

ಹಸಿವಾದೊಡೆ ಭಿಕ್ಷಾನ್ನಉಂಟು
ಕೃಷೆಯಾದೊಡೆ ಕೆರೆಹಳ್ಳ ಭಾವಿಗಳುಂಟು–
ಶಯನಕ್ಕೆ ಪಾಳು ದೇಗುಲ ಉಂಟು –
ಆತ್ಮ ಸಂಗಾತಕ್ಕೆ ಚೆನ್ನಮಲ್ಲಿಕಾರ್ಜುನನುಂಟು.

ಬಾಲ್ಯದಲ್ಲಿಯೇ ಬಂದ ಈ ವೈರಾಗ್ಯವನ್ನು ಕಂಡು ಮೂಗಿನ ಮೇಲೆ ಬೆರಳಿಟ್ಟು, ಕಂಡವರೆಲ್ಲರೂ ಈ ಬಾಲಕನನ್ನು ಬಹಳ ಗೌರವಡಿಂದ ಕಾಣುತ್ತಿದ್ದರು.

ತೋಂಟದ ಸಿದ್ಧಲಿಂಗ ಯತೀಶ್ವರರ ಭಾವದ ನೋಟದಲ್ಲಿಯೇ ತಲ್ಲೀನತೆಯು. ಅವರ ಧ್ಯಾನದಲ್ಲಿಯೇ ಮಗ್ನವಾಗಿರುವುದು ಇವರ ದಿನಚರಿಯು

ಕೆಲಸವಾಗಿತ್ತು ಈ ಬಾಲಕನ ದೊಡ್ಡಪ್ಪನವರಾದ ದೇಶಾಂತರದ ಮಲ್ಲಪ್ಪನವರ ವಾಗ್ಮಿಯುತೆಯು ಇವರ ಪ್ರವಾಸ ಭೋಜನಕ್ಕೆ ವ್ಯಂಜನವಾಗಿತ್ತು. ಊರು, ಮನೆ, ಮಂದಿ ಎಂದರೆ ಈ ಬಾಲಕನಿಗೆ ಒಂದು ಬಗೆಯ ಅನಾದರ. ಒಮ್ಮೆ ಸೋಮನಾಥಪುರದಲ್ಲಿ ಈ ಬಾಲಕನು ಸರ್ಪಗ್ರಸ್ತನಾದನು. ಬಾಲಕನ ಆಚಾರ ವಿಚಾರವು ಲೋಕರೂಢಿಯದಾಗಿರಲಿಲ್ಲ. ಆದಕಾರಣ ಔಷಧೋಪಚಾರಕ್ಕೆ ಸಮ್ಮತಿಸದೆ ತನ್ನದೆ ದಾರಿಯನ್ನು ಹಿಡಿದನು.

ಹಿತವಿದೆ, ಸಕಲ ಲೋಕದ ಜನಕೆ ಮತವಿದೆ
ಶ್ರುತಿ ಪುರಾಣದ ಗತಿಯಿದೆ. ಭಕುತಿಯ ಬೆಳಗಿನುನ್ನತಿಯಿದೆ
ಶ್ರೀ ವಿಭೂತಿಯನೊಲಿದು ಧರಿಸಿದೆ
ಭವವನು ಷರಿವುದು ದುರಿತಸಂಕುಳವನೊರಿಸುವುದು
ಹರನ, ಸಾಲೋಕ್ಯ ಸಾಮಿಪ್ಯದಲ್ಲಿರಿಸುವುದು
ನಿರುತವಿದೆನೇ ನಂಬು ಮನುಜಾ ಜವನ ಭೀತಿ
ಮರಣದ ಭಯದಿಂದ ಈ ವಿಭೂತಿಯು ಅಗಸ್ತ್ಯಕಶ್ಯಪ
ಜಮದಗ್ನಿಗಳು ಧರಿಸುವರು ನೋಡಾ
ಶ್ರೀ ಚೆನ್ನಮಲ್ಲಿಕಾರ್ಜುನನೊಲಿಸುವ ಪರಿ.

ಈ ವಿಭೂತಿಯನ್ನು ಮಂತ್ರಿಸಿ ಅಂಗಾಗಕ್ಕೆಲ್ಲಾ ಈ ಬಾಲಕನು ಲೇಪಿಸಿದದೋ ಇಲ್ಲವೋ ಸರ್ಪದಂಶನದ ವಿಷವು ಸುಂಗಳ ಮಾಯ ತಿಂಗಳ ಬೆಳಕು ಬಾಲ್ಯದಲ್ಲಿಯೇ ಈ ಬಗೆಯ ಪ್ರಭಾವವನ್ನು ಪಡೆದ ಈ ಬಾಲಕನು ಮಹಾ ಮಹಿಮನಾಗುವದರಲ್ಲಿ ಯಾವ ಸಂಶಯವು ತಾನೇ ಇರುತ್ತದೆ? ಹೀಗೆ ಪ್ರವಾಸ ಮಾಡುತ್ತ ಮಡೇನಹಳ್ಳಿಯ ಸಂಗಮನಾಥ ದೇಗುಲ ಮತ್ತು ಮಂಕುಂದದ ಬಸವೇಶ್ವರರ ದೇವಸ್ಥಾನ ಇವುಗಳಲ್ಲಿಯೇ ಕೆಲವು ಕಾಲ ನೆಲೆಸಿದರು. ಕಾಲವು ಕಳೆಯುತ್ತಲಿದ್ದರೂ ಕಾಂತಿಯು ಕಾವೇರುತ್ತಿತ್ತು. ಪ್ರವಾಸ ಮಾಡುತ್ತಿದ್ದಂತೆಯೇ ಕಿರುಗಾವಲಿನ ಸಂತೆ ಮೈದಾನದಲ್ಲಿ ಈ ಬಾಲಕನನ್ನು ಕಂಡು ಬೆಕ್ಕಸ ಬೆರಗಾದ ಮಹಮಹಿಯನೊಬ್ಬನು ಇವರನ್ನು ಮೆಚ್ಚಿದನು "ಸ್ವಾಮಿ ತಮ್ಮನ್ನು ನೋಡಿದರೆ ಸನ್ಯಾಸಿಗಳನ್ನು ನೋಡಿದಂತಾಗುತ್ತದೆ. ಈ ಶಾಲು ಮುಂತಾದ ಅಂದ ಚೆಂದದ ಉಡಿಗೆ ತೊಡಿಗೆ ತಮಗೆ ಉಚಿತವೇ?"

ಈ ರೀತಿ ಮಹಮ್ಮದೀಯನು ನುಡಿದನೋ ಇಲ್ಲವೋ ಅಂದಿನಿಂದಲೇ ಆ ಶಾಲೆಗೆ ತಿಲಾಂಜಲಿಯು. ಈ ಬಾಲಕನಿಗೆ ಬೋಧಾಗುರು ಚನ್ನಬಸವಪ್ಪ

ಸ್ವಾಮಿ. ದೀಕ್ಷಾಗುರು ಸಿದ್ಧರಹಳ್ಳಿಯ ಗವೀಮಠದ ಸದಾಶಿವರುದ್ರ ದೇಶಿಕೇಂದ್ರರು ಸದಾಶಿವರುದ್ರದೇಶಿಕೇಂದ್ರರು ಮಹಾ ತಪಸ್ವಿಗಳು. ಇವರು ಅನುಷ್ಠಾನ ಮಾಡಿದ ಹಲವು ಜಾಗಗಳು ಇಂದಿಗೂ ಪವಿತ್ರ ಸ್ಥಾನಗಳೆಂದು ಗಣಿಸಲ್ಪಟ್ಟಿವೆ. ಇವರದು ‘ ಕೊಚ್ಚರೆವರ ಇಟ್ಟರೆಶಾಪ ’ ಸಿದ್ಧರಹಳ್ಳಿಯ ಸುತ್ತ ಮುತ್ತಲೂ ಇವರು ‘ ಪುರಾಣಸ್ವಾಮಿ ’ ಗಳಾಗಿ ಗಣಿಸಲ್ಪಟ್ಟಿದ್ದಾರೆ. ಇವರು ಮಹಾವಿರತಿಗಳು. ಊರಿನಲ್ಲಿ ಯಾರ ಗೃಹಕ್ಕೂ ಯಾವ ವೇಳೆಯಲ್ಲಿಯೂ ಇವರು ದಯಮಾಡಿಸುತ್ತಿರಲಿಲ್ಲ. ಪುರಾಣದ ತಿಂಗಳಲ್ಲಿ ಮಾತ್ರ ಪುರಾಣದ ವೇಳೆಗೆ ಪುರಾಣ ಪ್ರವಚನವು ನಡೆಯುತ್ತಿದ್ದ ಜಾಗಕ್ಕೆ ಬಿಜಯ ಮಾಡಿಸಿ ಕಾರ‍್ಯವು ಮುಗಿದ ಮೇಲೆ ಅದು ಎಷ್ಟು ವೇಳೆಯಾಗಿರಲಿ ತಪ್ಪದೆ ಮಠಕ್ಕೆ ದಯಮಾಡಿಸುತ್ತಿದ್ದರು. ಸುತ್ತಮುತ್ತ ಹಳ್ಳಿಯಲ್ಲಿ ಪ್ರತಿಯೊಬ್ಬ ಭಕ್ತರಿಗೂ ಪುರಾಣದ ಶ್ರವಣಾಸಕ್ತಿಯನ್ನು ಇವರು ನೆಲೆಗೊಳಿಸಿದರು ಆರಾಧನೆಯ ವೇಳೆಯಲ್ಲಿ ಜನಗಳ ಪಂಕ್ತಿಯು ಮೈಲಿ ಉದ್ದವಾಗಿರುತ್ತಿತ್ತು. ಮಠದ ಶಕ್ಕದಲ್ಲಿರುವ ಪರದೇಶಪ್ಪನಕೊಳಕ್ಕೆ ಹುಣುಸೆ ಹಣ್ಣಿನ ಹುಳಿಹಾಕಿ ಪಿಂಡಿ ಪಿಂಡಿ ಬೆಲ್ಲವನ್ನು ಮುಳುಗಿಸುತ್ತಿದ್ದರು. ದಾಹಿಗಳಿಗೆ ಈ ನೀರೇ ಪಾನಕವಾಗಿರುತ್ತಿತ್ತು. ಇಂತಹವರು ಈ ಬಾಲಕನಿಗೆ ದೀಕ್ಷಾಗುರುವು ಸಾಧು–ಸಂತರು ಶಿವಯೋಗಿಗಳು ಎಂದರೆ ಈ ಹರೆಯದ ಬಾಲಕನಿಗೆ ಪಂಚ ಪ್ರಾಣ. ಬಿನಕನಹಳ್ಳಿಯಲ್ಲಿ ಭಕ್ತ ಮಹೇಶ್ವರರು ಸಂದುಣಿ ಸೇರುವ ಸಮಯವೊಂದು ಸಿಕ್ಕಿತು. ಅಲ್ಲಿಗೆ ದಯಮಾಡಿಸಿದ್ದ ಸಿದ್ಧಪುರುಷ ಶ್ರೀ ಗುರುಮಲ್ಲ ದೇಶಿಕೇಂದ್ರರರ ವಿಚಾರ ವಾಹಿನಿಯ ಪ್ರಭಾವವೇ ಇದೆಲ್ಲಕ್ಕೂ ಮೂಲವಾಗಿತ್ತು. ಅಲ್ಲಿಗೂ ತನ್ನಮಾಮೂಲಿನಂತೆ ಮರಿಸ್ವಾಮಿಯು ಹೊರಟನು. ಗುಂಪಿನ ಮಧ್ಯದಲ್ಲಿನ ಮರಿಸ್ವಾಮಿಯತ್ತ ಎಲ್ಲರ ದೃಷ್ಟಿಯೂ ಹಾರಿದ್ದುದರ ಜೊತೆಗೆ ವೇದಾಂತ, ವಿದ್ಯಾಸಕ್ತಿ, ಭಕ್ತಿಜ್ಞಾನ, ಮತ್ತು ವೈರಾಗ್ಯ ಸಂಮಿಳಿತ ಮಾಡಿಕೊಂಡ ಈ ಬಾಲಕನತ್ತ ಶ್ರೀ ಗುರುಮಲ್ಲ ದೇಶಿಕೇಂದ್ರರ ಕೃಪಾದೃಷ್ಟಿಯೂ ಚೆಲ್ಲಲ್ಪಟ್ಟಿತು. ಇವರಿಗೆ ‘ ಸೋಹಂ ’ ಭಾವನೆಯಿಂದ ಹಸ್ತಮಸ್ತಕ ಸಂಯೋಗವಾಯಿತು. ಪರುಷ ಸ್ಪರ್ಶಿಯಾದ ಹರೆಯದ ಬಾಲಕನು ಚಿದ್ಪುರುಷನಾಗುವ ಸೂಚನೆಯು ಸೂಸುತ್ತಲಿತ್ತು. ಅನಿಮಿಷ ದೇವರಲ್ಲಿ ಪ್ರಭುದೇವರಿಗೂ, ಶ್ರೀರಾಮಕೃಷ್ಣಪರಮಹಂಸರಲ್ಲಿ ವಿವೇಕಾನಂದರಿಗೂ ಆದ ಭವ್ಯ ಭಾವ ಸಮಾಧಿಯ ಸಂದರ್ಶನ ಸೌಭಾಗ್ಯವು ಇಲ್ಲಿ ಈ ಬಾಲಕನಿಗೆ ಲಭ್ಯವಾಯಿತು. ಬಾಲಕನು ಬಿನಕನ ಹಳ್ಳಿಯನ್ನು ಬಿಟ್ಟು ಗುರು

ಸ್ಮರಣೆಯಿಂದ ಅಡ್ಡಾಡುತ್ತಿದ್ದ ವೇಳೆಯಲ್ಲಿ ರೂಢಿಯಂತೆ ಸೋಸಲೆ ತೋಪಿನ ಮಠಕ್ಕೆ ಬಂದನು.

ಈ ಮಠಕ್ಕೆ ಆದ್ಯಾಚಾರ್ಯರು ಕಾಶಿ ವಿರೂಪಾಕ್ಷ ಸ್ವಾಮಿಗಳು ಉತ್ತರ ದೇಶದಿಂದ ಬಂದು, ಇವರು ಇಲ್ಲಿ ನೆಲೆಸಿದರು. ಇವರು ಅನಾದಿ ತೋಂಟದ ಸಿದ್ಧಲಿಂಗ ಯತಿಗಳಂತೆ ತೇಜೋ ಮೂರ್ತಿಗಳಾಗಿ ಓಜಸ್ವಿಗಳಾಗಿದ್ದರು. ಈ ಸ್ವಾಮಿಗಳು ಒಮ್ಮೆ ಉಕ್ಕಲಗೆರೆಯ ಗುಡ್ಡದ ಮಲ್ಲಿಕಾರ್ಜುನೇಶ್ವರ ದೇವಸ್ಥಾನಕ್ಕೆ ಹೊರಟರು. ಆ ಗುಡಿಯ ಬಾಗಿಲು ಬೀಗ ಮುದ್ರೆಯಾಗಿ ಒಳಕ್ಕೆ ಪ್ರವೇಶವಾಗಲು ಸಾಧ್ಯವಾಗದ ಕಾರಣ ಪರಶಿವನ ಸ್ತೋತ್ರಮಾಡಿ ಬಾಗಿಲನ್ನು ತೆಗೆಯಿಸಿದರು. ಸ್ವಾಮಿಯ ಸಂದರ್ಶನವು ಇವರಿಗೆ ಸಿಕ್ಕಿ ಮುಗಿದ ಮೇಲೆ ಎಂದಿನಂತೆ ದೇವಸ್ಥಾನ ಬಾಗಿಲು ಮುಚ್ಚಿಕೊಂಡಿತು. ಶಿವಯೋಗ ನಿಷ್ಠರಿಗೆ ಯೋಗ ಪ್ರಭಾವದಿಂದ ಮಹಾಮಹಿಮ ಕೆಲಸಗಳು ಸಾಧ್ಯವಾಗುವುದು ಸರ್ವಸಾಮಾನ್ಯವೇ ಸರಿಯು. ಚಿಕ್ಕಭೂವಳ್ಳಿಯಲ್ಲಿ ಮುಗುದೆಯೊಬ್ಬಳು ಗುರುವನ್ನು ನಿಂದಿಸಿ ಅಪಾಯಕ್ಕೆ ಈಡಾಗಲು ಈ ಗುರುವಿನಲ್ಲಿ ಕ್ಷಮಾಭಿಕ್ಷೆ ಕೋರಿ ಅದು ಪರಿಹಾರ. ಒಮ್ಮೆ ಕಾಶಿಯಲ್ಲಿ ವಿಶ್ವನಾಥನು ಜಂಗಮ ರೂಪಾಗಿ ಬಂದು ಇವರನ್ನು ವಿಶ್ವನಾಥ ದೇವಸ್ಥಾನಕ್ಕೆ ಕರೆದುಕೊಂಡು ಹೋಗಿ ಅಲ್ಲಿ ಅದೃಶ್ಯನಾದನು. ಆ ಮಹಾಮಹಿಮನ ಮೇಲೆ ಅಪರಾಧ ಸ್ತೋತ್ರವನ್ನು ರಚಿಸಿ ಹಾಡಿ ಆತನನ್ನು ಆರಾಧಿಸಿದರು. ಈ ಮೂರುನೂರು ಪದ್ಯಗಳು ಇನ್ನೂ ಸಿಕ್ಕಿಲ್ಲ. ಕಾಶಿಯ ಗಣ್ಯರೊಬ್ಬರ ಮನೆಗೆ ಭಿನ್ನಹಕ್ಕೆ ದಯಮಾಡಿಸಿದಾಗ ಅವರ ಪುತ್ರನೊಬ್ಬನು ಮರಣೋನ್ಮುಖವಾಗಿದ್ದನು. ಈ ಸ್ವಾಮಿಗಳ ಸನ್ನಿಧಾನದಲ್ಲಿ ಆ ಗಣ್ಯರ ಮೊರೆಯು ಬಹಳವಾಯಿತು. ಬಂದ ವಿಪತ್ತು ಆಪತ್ತನ್ನು ಪರಮೇಶನ ಕೃಪಾಪಾತ್ರರು ಪರಿಹರಿಸಕೊಳ್ಳುವರು ಎಂಬುದಕ್ಕೆ ಮಾರ್ಕಂಡೇಯನ ನಿದರ್ಶನವನ್ನು ಕೊಟ್ಟು ಶಿವಭಕ್ತಿಯಿಂದ ಶಿವಪೂಜಾ ನಿರತರಾಗಿ ನಿಂತರೆ ಯಾವ ತೊಂದರೆಯೂ ಬರುವುದಿಲ್ಲವೆಂದು ಸ್ವಾಮಿಗಳು ಮೃತ್ಯುಂಜಯ ಜಪವನ್ನು ಕೈಗೊಂಡು ಮರಣೋನ್ಮುಖಿಗೆ ಉಪಚಾರದ ಜೊತೆಗೆ ಭಸ್ಮಧಾರಣ ಮಾಡಿಸಲು ಮರಣೋನ್ಮುಖತೆಯು ಇಳಿದು ಆ ಪುತ್ರನು ಗುಣಮುಖನಾಗಲು ಆ ಗಣ್ಯನು ಹರ್ಷಪುಲಕಿತನಾದನು. ಈ ಬಗೆಯ ವಿರಕ್ತವರೇಣ್ಯನ ಮಹಾ ಮಹಿಮೆಯನ್ನು ಕಂಡ ಆ ಮನೆಯವರು ಅಭಿನವ ಮಾಯಾ ಕೋಲಾಹಲ

ಪ್ರಭು ಪರಮ ನಿರಂಜನ ಮೂರ್ತಿಯ ಪಾದಪೂಜಾ ಮಹೋತ್ಸವವನ್ನು ವೈಭವದಿಂದ ಸಾಗಿಸಿದರು.

ಕರಗಿನ ಸ್ವಾಮಿ ಎಂಬ ಹೆಸರಿನಿಂದ ಜನ ಬಳಕೆಯಲ್ಲಿ ಪ್ರಸಿದ್ಧವಾಗಿದ್ದ ಚೆನ್ನಬಸವಸ್ವಾಮಿಗಳ ಶಕ್ತಿಪ್ರಭಾವವು ಪರಿಸ್ಫುಟವಾಗಿರುವುದು ತಿಳಿಯದೆ ಇರದು! ಕರಗಿನ ಎಲೆಗಳನ್ನು ತಿಂದು ಜೀವಿಸುತಾ ಮುದ್ದೂರು ತಾಲೂಕಿನ ಮಡೇನಹಳ್ಳಿಯ- ಸಂಗಮ ಕ್ಷೇತ್ರದಲ್ಲಿ ತಪಸ್ಸನ್ನು ಆಚರಿಸುತ್ತಾ ಇದ್ದ ವೇಳೆಯಲ್ಲಿ ಸಮೀಪದ ಪಾಳೆಯಗಾರನ ಹಸುವು ಬಂದು ಇವರ ಮಸ್ತಕದ ಮೇಲೆ ಹಾಲನ್ನು ಸುರಿಸುತ್ತಲಿತ್ತು. ಇದನ್ನು ಪತ್ತೆಹಚ್ಚಿದ ಪಾಳೆಗಾರನು ಇವರ ಮಹಿಮೆಗೆ ಮೆಚ್ಚಿ ಗ್ರಾಮವೊಂದನ್ನು ಮಾನ್ಯ ಬಿಟ್ಟನು.

ವೀರಶೆಟ್ಟಪ್ಪ ಸ್ವಾಮಿಗಳು ಶಿವಯೋಗವನ್ನು ಕರತಲಾಮಲಕವನ್ನಾಗಿ ಮಾಡಿಕೊಂಡು, ಸೋಸಲೆಯ ಬನದೇವಿಯ ದೇವಸ್ಥಾನದಲ್ಲಿ ಯೋಗನಿಷ್ಠೆಯ ಪ್ರಭಾವದಿಂದ ಮಹಾಪವಾಡವನ್ನು ಮಾಡಿ ಮೆರೆದರು.

" ಮಂತ್ರಯೋಗ, ಹಠಯೋಗ, ಲಯಯೋಗ, ಭಕ್ತಿಯೋಗದ ಮೇಲೆ ನಿಂದು ರಾಜಯೋಗದ ಮೇಲೆ ನುಡಿವುದೋ ಕಾಣಿರೋ 'ಯೋಗಾತೀತಂ, ಮನಾತೀತಂ, ಭಾವನಾತೀತಂ, ನಿರಂಜನಂಸರ್ವ ಶೂನ್ಯಂ ನಿರಾಕಾರಂ ಪರಮಾನಂದ ಮವ್ಯಯಗ' ಎಂಬುದಾಗಿ ಶಿವಜೀವಲಿಂಗ ಪ್ರಾಣಿ ಶಿವಯೋಗವೆಂಬುದೇ ಐಕ್ಯ. ಮಹಾಲಿಂಗೈಕ್ಯರ ನಿಲವ ಅನುಮಾನಿಗಳೆತ್ತ ಬಲ್ಲರು. ಕೂಡಲಸಂಗಮದೇವ "

ಪಂಚಾಕ್ಷರ ಸ್ವಾಮಿಗಳು ಪರಷ ಪುರುಷರಾಗಿ ಮೆರೆದು ಈ ಮಠದ ಕೀರ್ತಿಲತೆಯನ್ನು ಕೊನರಿಸಿದರು. ಇವರು ಜೀವಸಹಿತ ಸುಖ ಸಮಾಧಿಯನ್ನು ಸೇರಿದರು. ಇವರು ಸಾಕಿದ್ದ ಬಸವನು ಶಿವಭಕ್ತರ ಮನೆಯಲ್ಲಿ ಕಂಥೆ ಭಿಕ್ಷೆ ಮಾಡಿತಂದು ಗುರುಗಳಿಗೆ ನೀಡುತ್ತಿತ್ತು. ಒಮ್ಮೆ ಭಿಕ್ಷಾ ಪ್ರಸಾದವನ್ನು ತರುತ್ತಿರುವ ವೇಳೆಯಲ್ಲಿ ಅಡುಗೆಯ ಪಾತ್ರೆಯಲ್ಲಿ ಜ್ಯೋತಿಯೊಂದು ಒಡಮೂಡಿ ಅಂತರ್ಲೀನವಾಯಿತು. ಕೊನೆಗೆ ಇವರ ಗದ್ದುಗೆಯು ವಾಠಾಳು ಮಠದಲ್ಲಿ ಇದ ವಂತಾಯಿತು. ದಾಸೋಹ ಪ್ರಿಯರಾದ ಇವರು ದಾಸೋಹಂಭಾವದಿಂದ ದಾಸೋಹವನ್ನು ದಳದಳಿತವಾಗಿರಿಸಿ ಬಾಳಬೆಳಗಿಸಿದರು.

ಮೂರು ಶತಮಾನಗಳ ಪ್ರಾಚೀನತೆಯ ಈ ಮಠದಲ್ಲಿ ಮಹಾಮಹಿಮರು ನಿಂತು ಸಲೆ ಸಾಧಿಸಿದರು. ಈ ಜಾಗವನ್ನು ಮೆಟ್ಟುವ ಯೋಗ್ಯತೆ

ಯುಳ್ಳ ಆಶ್ರಮವಾಸಿಗಳು ಅಲ್ಲದೆ ಮತ್ತೆ ಬೇರೆಯವರಿಗೆ ಸಾಧ್ಯವಾಗುವುದೇ? ಅಂಧಕಾರದಲ್ಲಿ ಮುಳುಗಿದ್ದ ಸಮಾಜ ಪುರುಷನನ್ನು ಹೊಡೆದೆಬ್ಬಿಸಿ ಸುಪ್ತವಾಗಿದ್ದ ಜ್ಞಾನ ಚೈತನ್ಯವನ್ನು ಪಟುಗೊಳಿಸಿ ಅಸುರೀ ಸಂಪತ್ತನ್ನು ಜನದ ಮನಸ್ಸಿನಿಂದ ಅಳಿಸಿ ಪವಿತ್ರಗೊಳಿಸಿ, ಭಕ್ತರ ಬಳ್ಳಿಯನ್ನು ಚಿಗುರಿಸಿ, ಸಮಾಜವು ದಾಸೋಹಾದಿ ಸತ್ಕಾರ್ಯಗಳಲ್ಲಿ ತೊಡಗುವಂತೆ ಮಾಡಿದ ಮಹಾ ಪುರುಷ ಪುಂಗವ ಶ್ರೀ ಗುರುಮಲ್ಲ ದೇಶಿಕೇಂದ್ರರು ಈ ಮಾರ್ಗವಾಗಿ ದಯಮಾಡಿಸಿದ ವೇಳೆಯಲ್ಲಿ ಪಲ್ಲಕ್ಕಿಯಿಂದಿಳಿದು ಈ ಮಠದ ವಿರೂಪಾಕ್ಷಸ್ವಾಮಿಗಳ ಗದ್ದುಗೆಗೆ ನಮಸ್ಕಾರಮಾಡಿ, ಅನಂತರ ಮುಂದೆ ದಯಮಾಡಿಸಿದರು. ಈ ಬಗೆಯ ಮಹತ್ವದಿಂದ ಮೆರೆದ ಪರಮ ಪುಣ್ಯ ಸಂಚವಟಿಯು ತೋಂಪಿನಮಠವು.

ಕಥಾನಾಯಕನಾದ ಬಾಲಕನಿಗೆ ಹದಿನೆಂಟು ವರ್ಷ ವಯಸ್ಸು ಮುಗಿಯುತ್ತಲಿತ್ತು.

ಭಕ್ತಿ ಎಂಬ ನಿಧಾನವ ಸಾಧಿಸುವರೆ
ಶಿವಪ್ರೇಮವನೆಂಬ ಅಂಜನವನೆಚ್ಚುಕೊಂಬುದು
ಭಕ್ತನಾದವಂಗೆ ಇದೇ ಪಥವಾಗಿರಬೇಕು
ನಮ್ಮ ಕೂಡಲ ಸಂಗನ ಶರಣರ ಅನುಭಾವ ಗಜವೈದ್ಯ

ಇದು ಕಥಾನಾಯಕನಿಗೆ ಹಿಡಿಸಿತೊ ಏನೋ ಬಹಳ ದಿವಸ ಮಠದಲ್ಲಿಯೇ ನಿಂತನು. ಅಂದಿನ ಮಠಾಧಿಪತಿಗಳಿಗೆ ಈತನಲ್ಲಿ ಪ್ರೇಮವು ಪಲ್ಲವಿಸಿತು. ಅಲ್ಲಿಗೆ ಬಂದ ಭಕ್ತರಿಗೂ ಸಹ ಈ ಬಾಲಕನ ನಡೆನುಡಿಯು ಮೆಚ್ಚಿಗೆಯಾಯಿತು. ವಿಷಯಗಳಿಂದ ಮನಸ್ಸನ್ನು ಹಿಡಿದೆಳೆದು ಆತ್ಮನಲ್ಲಿಯೇ ಪ್ರೀತಿಯನ್ನಿಟ್ಟು ಆತ್ಮನೇ ತನ್ನ ಬೆಳಕೆಂದೂ, ತನ್ನಸುಖವೆಂದೂ ಅರಿತುಕೊಳ್ಳುವ ಪರಮ ಜ್ಞಾನದ ಪ್ರಥಮ ಮೆಟ್ಟಲು ಇವರಲ್ಲಿ ಕಾಣಬರುತ್ತಿತ್ತು. ಓದಿನ ತಿರುಳು ಇವರಿಗೆ ಸಿಕ್ಕಿತೋ ಏನೋ ?

ಓದಿನಾ ಓದು ತಾ ಮೇದ ಕಬ್ಬಿನ ಸಿಪ್ಪೆ ।
ಓದಿನಾ ಒಡಲನರಿದಿಹರೆ ಸಿಪ್ಪೆಕ ।
ಬ್ಯಾದಂತೆ ಕಾಣೋ ಸರ್ವಜ್ಞ ॥

ಗಜನಿವಾಸದಲ್ಲಿ ಗಜನಿಗಲ್ಲದೆ ಅಜನಿಗೆ ಜಾಗವು ಸಿಗುವದಿಲ್ಲ. ಕಾಲ ಬಂತೋ ಏನೋ ? ಭಕ್ತ ಮಾಹೇಶ್ವರರ ಗುಂಪು ಬಹಳವಾಗಿ ಸೇರಿತು

ಸರ್ವಾನುಮತದಿಂದ ಮುರಿಸ್ವಾಮಿಗಳು ಷಡಕ್ಷರ ದೇಶಿಕೇಂದ್ರರ ನಾಮಾಂಕಿತದಲ್ಲಿ ಆಶ್ರಮಸ್ವೀಕಾರಮಾಡಿ, ಈ ಮಠದ ಅಧಿಪತಿಗಳಾದರು.

ಬಗೆ ಬಗೆಯ ಭಕ್ತಾದಿಜನಗಳಿಗೆ ಹಿಗ್ಗೋಹಿಗ್ಗು; ಬಯಸಿದ ಭೀಮರನ್ನು ತಮ್ಮ ಶ್ರೇಯಸ್ಸಿಗೆ ನಿಲುಕಿಸಿಕೊಂಡರು. ವಿವಿಧ ಸಜ್ಜನರ ಸಹವಾಸ ತರತರದ ಸದನುಭವದ ಸಂಪರ್ಕವು ಇವರನ್ನು ಬಗೆಗೊಳಿಸಿ ಪರಿಪಕ್ವ ಪರಿಸ್ಥಿತಿಗೆ ಪಥವನ್ನು ಹಾಕಿಕೊಟ್ಟಿತು. ವಿರಕ್ತಾಶ್ರಮವು ಸುಖದ ಸುಪ್ಪತ್ತಿಗೆಯಲ್ಲ, ಭೋಗದ ಬಂಡಿಯಲ್ಲ, ಲೌಕಿಕದಲ್ಲಿ ಪಾರಮಾರ್ಥವನ್ನು ಕಂಡು ಕೈವಲ್ಯ ಕಲ್ಪತರುವನ್ನು ತನ್ನದನ್ನಾಗಿ ಮಾಡಿಕೊಳ್ಳುವುದು. ಸಹಜ ಸನ್ಯಾಸ ಜೀವನದಲ್ಲಿ ಒಂದು ಬಗೆಯ ಪವಿತ್ರತಮ ಪ್ರೇಮಮಯವಾದ ವೀರರ ರಸವಾಹಿನಿ ಕಡೆಯಿಲ್ಲದೆ ಹರಿಯುತ್ತಿರುವದು. ಮತಧರ್ಮವನ್ನು ಬಿಡದೆ ವಿಷಯೋಪಾಸನೆಯನ್ನು ಬಿಟ್ಟು ಆತ್ಮಜ್ಞಾನದಿಂದ ಉನ್ನತಿಯನ್ನು ಪಡೆಯುವುದೇ ವೀರಶೈವ ಸನ್ಯಾಸಿಗಳ ಸೊಗಸು. ‘ ಯೋಗಃ ಕರ್ಮ ಸುಕೌಶಲಂ ’ ಎಂಬ ಗೀತೋಕ್ತಿಯ ತಿರುಳೇ ಸನ್ಯಾಸಿಯ ಜೀವನ ಸಾರವು. ಕಾಲಬಲಕ್ಕೆ ಜೋಡು ಬೀಳದ ಆತ್ಮ ಜಾಲಕ್ಕೆ ಜೋಡು ಬೀಳುವದು. ಪರಮ ವೀರಶೈವ ಸನ್ಯಾಸಿಯಾಗಿ, ವಿರಕ್ತ ಮಹಾಮೂರ್ತಿಯಾಗಿ ಜೀವನವನ್ನು ಜರುಗಿಸುವ ಚಿಹ್ನೆಗಳು ಕಂಡು ಬಂದವು.

ಇವರು ಬಿನ್ನಹಕ್ಕೆ ಹೋದರೆ ಹೆಂಗಸರ ಕೈಯಲ್ಲಿ ನೀರನ್ನು ತೆಗೆದುಕೊಳ್ಳುವುದಕ್ಕೆ ಮನಸ್ಸು ಒಪ್ಪುತ್ತಿರಲಿಲ್ಲ. ಅವರು ನೀರನ್ನು ತುಂಬಿರಿಸಿದ ಪಾತ್ರೆಯಿಂದ ತಾವೇ ಮುಂಗೈನಿಂದ ಬಗ್ಗಿಸಿಕೊಂಡು ಅದನ್ನು ಉಪಯೋಗಿಸಿಕೊಳ್ಳುತ್ತಿದ್ದರು. ಒಂದು ಸಾರಿ ಬಡಿಸಿಬಿಟ್ಟುಹೋದ ಮೇಲೆ ಪುನಃ ಹೆಂಗಸು ಬರುವಂತೆಯೂ ಇಲ್ಲ, ಇವರು ಕರೆಯುವಂತೆಯೂ ಇಲ್ಲ. ಬರಬರುತ್ತ ಹೆಂಗಸಿನ ವಿಷಯದಲ್ಲಿ ಕಠಿಣ ಕಾನೂನುಗಳನ್ನು ಅನುಸರಿಸುತ್ತಿದ್ದರು. ಪೇಟಿ ಬೀದಿಯ ಬಜಾರಿಯಾಗಿದ್ದ ಹೆಂಗಸೊಬ್ಬಳು ಈ ಮಠಕ್ಕೆ ಬಂದುಹೋಗುವುದಕ್ಕೆ ಪ್ರಾರಂಭಿಸಿದಳು. ಇದನ್ನು ತಪ್ಪಿಸಲು ಸ್ವಾಮಿಗಳು ಬಹಳವಾಗಿ ಆಲೋಚಿಸಿದರು. ಯಾವ ಉಪಾಯವೂ ಸಿಗಲಿಲ್ಲ. ಕೊನೆಗೆ ಬಿಡದೆ ಕಂಡು ಹಿಡಿದರು. ಮಠದಲ್ಲಿ ಹಳೆದಾದ ಕತ್ತಿಯೊಂದು ಇತ್ತು. ರೂಢಿಯಂತೆ ಅವಳು ಮಠಕ್ಕೆ ಬಂದಳೋ ಇಲ್ಲವೋ ಇವರು ಕತ್ತಿಯನ್ನು ಹಿಡಿದು ಅವಳ ಮುಂದೆ ಭಯಂಕರವಾಗಿ ಕುಣಿದಾಡಿದರು. ಕತ್ತಿಯನ್ನು ಝಳಪಿಸಿ ತೋರಿಸುತ್ತಾ ಮಠದ ಹತ್ತಿರಕ್ಕೆ ಇನ್ನೇನಾದರೂ ಬಂದು ನೋಡು.

ನಿನ್ನನ್ನು ತುಕ್ಕಡಾ ಮಾಡಿ ಬಿಡ್ತೀನಿ ' ಎಂದು ಗರ್ಜಿಸಿದರು. ಇದನ್ನು ನೋಡಿ ಕೇಳಿದಳೋ ಇಲ್ಲವೋ ಭಯ ಭ್ರಾಂತಳಾದ ಆವಳು ಅಂದು ಪರಾರಿಯಾದದ್ದೇ ಸರಿ. ಮತ್ತೆ ಪುನಃ ಮಠದತ್ತ **ಹೆಜ್ಜೆಹಾಕಲಿಲ್ಲ**. ಕಾಲ ಕ್ರಮೇಣ ಸ್ವಾಮಿಗಳು ಸ್ತ್ರೀದರ್ಶನ ನಿಷೇಧವನ್ನು ಏರ್ಪಡಿಸಲಿಕ್ಕೆ ನಿಂತರು. ಮುಡುಕುತೊರೆಯ ಜಾತ್ರೆಯ ಸಮಯ ಮೂರು ನಾಲ್ಕು ಮಂದಿ ಹೆಂಗಸರು ಮಠಕ್ಕೆ ಬಂದರು ರೂಢಿಯಂತೆ ಬಾಗಿಲುಮುಚ್ಚಿತ್ತು. ಒಳಗಡೆ ಸ್ವಾಮಿಗಳ ಹೊರತು ಮತ್ತೆ ಬೇರೆಯೊರೂ ಇರಲಿಲ್ಲ. ಗೃಹದಲ್ಲಿ ಒಬ್ಬಳೇ ಒಬ್ಬಳು ತರುಣಿ ಗೃಹಸ್ಥೆಯಿದ್ದು, ಆಸಮಯದಲ್ಲಿ ಅಪರಿಚಿತನೊಬ್ಬನು ಬಳಿಗೆ ಬಂದಾಗ ಆಕೆಗೆ ಆಗುವ ಅವಸ್ಥೆಯೇ ಈ ಸ್ವಾಮಿಗಳಿಗೆ ಅಂದು ಆಯಿತು. ತಕ್ಷಣವೇ ಬಾಗಿಲಿಗೆ ಅಡ್ಡಮರವನ್ನು ಹಾಕಿ ತಾಳವನ್ನು ಭದ್ರಪಡಿಸಿ ಮೂಲೆಗೆ ಹೋಗಿ ಎರಡು ಮಂಡಿಗೆ ತಲೆ ಸೇರಿಸಿ ಕುಳಿತರು. ಬಾಗಿಲು ತೆಗೆಸೋಕೆ ಆ ಹೆಂಗಸರು ಭಗೀರಥ ಪ್ರಯತ್ನ ಮಾಡಿದುದು ವ್ಯರ್ಥವಾಯಿತು. " ನಾವು ಬಂದಿರೋದು ಗಂಡಸರು. ಬುದ್ಧೀ ಬಾಗಿಲು ತೆಗೀರಿ " ಎಂದರು. ಉತ್ತರವೂ ಇಲ್ಲ, ಬಾಗಿಲು ತೆಗೆಯಲೂ ಇಲ್ಲ. ಕೊನೆಗೆ ಆ ಹೆಂಗಸರು " ಅರು ಹುಳ್ಳ ಗುರು ನೀವಾಗಿದ್ರೆ ಬಾಗಿಲಾ ತಗೀರಿ, ಇಲ್ಲದೇ ಇದ್ದರೇ ಬೇಡಿ " ಎಂದರು. ಹಿಡಿದ ನೋಂಪಿಗೆ ಭಂಗ ತಂದುಕೊಳ್ಳದಂತಹ ಈ ಸ್ವಾಮಿಯವರು ಆಗಲೂ ಮೂಕನಾಡದೆ ಮೂಗರಾಗಿ ಮೂಲೆಯಲ್ಲಿಯೇ ಕುಳಿತಿದ್ದರು. ಬಂದ ಹೆಂಗಸರು ಕಾದು ಕಾದು ಸಾಕಾಗಿ ಹಿಂತಿರುಗಿ ಹೋದರು.

ದೇಹವನು ದಂಡಿಸಿ, ಕರಣವನು ಖಂಡಿಸಿ ಶಿವಯೋಗ ಸಾಮ್ರಾಜ್ಯದಲ್ಲಿ ನಿಲ್ಲಲು ಅಣಿಯಾದರು. ರಾತ್ರಿಸಂಚಾರ, ಹಗಲು ಮಠದಲ್ಲಿ ಬಿಡಾರ, ಮೌನ ಧ್ಯಾನದಲ್ಲಿ ಆದರಾಕ್ಕರೆ, ಶಾಂತಿ ನೀರವತೆಯಲ್ಲಿ ಅತಿಶ್ರದ್ಧೆ. ನಿಜಗುಣ, ಸಪ್ಪಣ್ಣ, ಸರ್ವಜ್ಞ, ಮುಪ್ಪಿನ ಷಡಕ್ಷರಿ, ತೋಂಟದ ಸಿದ್ಧಲಿಂಗ ಯತಿ ಇವರುಗಳ ಶ್ರೇಷ್ಠ ಕೃತಿಗಳನ್ನು ಓದಿಸಿ ಕೇಳುವುದು, ಶಿವಯೋಗದಲ್ಲಿ ತಲ್ಲೀನವಾಗುವುದು, ಬಂದ ಭಕ್ತರ ಸಂಗಡ ಮಾತುಕತೆಯನ್ನು ಜರುಗಿಸುವುದು ಇವರ ದಿನಚರಿಯ ಕೆಲಸ. ಎಲ್ಲವನ್ನೂ ಪರಶಿವನ ಮೇಲೆ ಹಾಕಿ ಕಾರ್ಯಮಾಡುವುದನ್ನು ಆಚರಿಸಿ, ಅದರಂತೆಯೇ ಉಪದೇಶಿಸುತ್ತಿದ್ದರು. ಸಾತ್ವಿಕಾಹಾರ, ಸಾತ್ವಿಕ ನಡೆನುಡಿಯು ದಿನೇ ದಿನೇ ಇವರನ್ನು ಪುಟಕ್ಕಿಕ್ಕಿದ ಚಿನ್ನವನ್ನಾಗಿ ಮಾಡಿತು. ಕ್ರಿಯಾಸಿದ್ಧಿ, ವಾಕ್ಸಿದ್ಧಿಯು ಬರು ಬರುತ್ತ ಬಲಿಯುತ್ತಲಿತ್ತು.

ಅಭ್ಯಾಸಕ್ಕಿಂತಲೂ ಶಬ್ದಜ್ಞಾನವು ಲೇಸು, ಈ ಜ್ಞಾತಕ್ಕಿಂತ ಧ್ಯಾನವು ಲೇಸು; ಧ್ಯಾನದಿಂದ ಫಲತ್ಯಾಗವೂ, ತನ್ಮೂಲಕ ಶಾಂತಿಯೂ ಉಂಟಾಗುತ್ತದೆ ಎಂದೂ ಗೀತೆಯು ಹೇಳುತ್ತದೆ. ತಮ್ಮ ಇಷ್ಟಲಿಂಗ ಧ್ಯಾನಾರ್ಚನೆಯಲ್ಲಿಯೇ ತಲ್ಲೀನರಾಗಿದ್ದುದರಿಂದ ಇಂದ್ರಿಯ ಸುಖದ ಕಡೆಗೆ ಗಮನವು ಗಮಿಸಲಿಲ್ಲವು. ತತ್ಫಲರಾಗಿ ಜತೇಂದ್ರಿಯರಾಗಿ, ವೈರಾಗ್ಯ ಚಿಲುಮೆಯು ಉದ್ಭವ ಕಾಣದಾಗಿ, ಮನಸ್ಸಿನ ದೃಢತೆ, ಏಕಾಗ್ರತೆ ಮತ್ತು ಸಮತೆಯು ತಾನೇ ತಾನಾಗಿ ತಂತಿಯ ಬೇಲಿಯಾಯಿತು. ಧ್ಯಾನ ಮೌನದಿಂದಲೇ ಕಾಲಕಳೆಯುತ್ತಿರುವ ಇವರಿಗೆ ಮಧ್ಯೆ ಮಧ್ಯೆ ತೊಡರು ತೊಡಕುಗಳು ಬರುತ್ತಿದ್ದುವು. ಇವರಿಗೆ ಅಶಾಂತಿಯನ್ನು ಕೊಡುತ್ತಿದ್ದ ಸಂತೆಯು ವಾರ ವಾರವೂ ಈ ಮಠದ ಹತ್ತಿರದಲ್ಲಿಯೇ ಕೂಡುತ್ತಿತ್ತು. ಅಲ್ಲಿನ ಗಜಿಬಿಜಿಯು ಇವರಿಗೆ ಸಹಿಸದಂತಾಗಿತ್ತು. ಈ ಸಂತೆಯು ಕೂಡುವದನ್ನು ತಪ್ಪಿಸಿದರೆ ಮಾತ್ರ ನಾನು ಇಲ್ಲಿರಬಲ್ಲೆನು, ಇಲ್ಲವೇ ಈ ಜಾಗವನ್ನು ನಾನು ಬಿಟ್ಟು ಹೋಗುವುದು ಖಂಡಿತ, ಎಂದು ಪರಮೇಶ್ವರನಲ್ಲಿ ಬಾರಿಬಾರಿಗೂ ಮೊರೆಯಿಡುತ್ತಿದ್ದರು. ಎಷ್ಟಾದರೂ ಪರಮೇಶ್ವರನು ಪರಮ ಕೃಪಾಕರನಲವೇ? ಭಕ್ತರ ಮೊರೆಯನ್ನು ಪರಮೇಶ್ವರನು ತಪ್ಪದೇ ಕಿವಿಗೊಟ್ಟು ಕೇಳಿ, ಸಂಕಟ ಪರಿಹಾರವನ್ನು ಮಾಡುವದು ರೂಢಿಯಲ್ಲವೇ? ಕ್ರಮ ಕ್ರಮೇಣ ಆ ಸಂತೆಯು ಅಲ್ಲಿ ಸೇರದೆ ಬೇರೆ ಕಡೆ ಸೇರುವಂತಾಯಿತು. ಪರಪೂರ್ಣ ಶಾಂತಿಯ ವಾತಾವರಣವು ಇವರಿಗೆ ದೊರಕಿದ ಸಲುವಾಗಿ ಸಂತೋಸವೋ ಸಂತಸವು.

" ಶಿವ ಜಗವಾಗಬಲ್ಲ; ಶಿವ ಜಗವಾಗದಿರಲೂ ಬಲ್ಲ
ಶಿವ ರೂಪಾಗಬಲ್ಲ; ಶಿವ ಜಗವಾಗದಿರಲೂಬಲ್ಲ
ಶಿವ ಅಜಾಂಡ ಕೋಟಿಗಳ ಮಾಡಬಲ್ಲ; ಮಾಡದಿರಲೂ ಬಲ್ಲ
ಶಿವ ಕೆಡಿಸಬಲ್ಲ; ಶಿವ ಕೆಡಿಸದಿರಲೂ ಬಲ್ಲ
ಶಿವ ಜಂಗಮವಾಗಿ ಪೂಜಿಸಬಲ್ಲ; ಶಿವಲಿಂಗವಾಗಿ ತಾನೇ
ಪೂಜೆಯ ಕೊಳಲೂಬಲ್ಲ
ಶಿವ ಹೊರಗಾಗಿ ಮತ್ತನ್ಯೆವಿಲ್ಲವೆಂಬ ವೇದ ಉಂಟೇ ?
ಎಂದೊಡೆ ಉಂಟು ಅಥರ್ವ ವೇದ,

" ಶಿವೋ ಉಮಾಪಿತರಾಪಿ ತ್ವದೇವೋ ಭವತಿ ಪಿತರಾತ್ಯಮಹಿ "

ಎಂಬುದಾಗಿ ದೇವನು ಉರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರನು ನಮಗೆಲ್ಲ ಮಾತಾಪಿತನು.

ಇಂದ್ರಿಯದ ದುರ್ನೋಟ, ಪ್ರಬಲತೆಯನ್ನು ಬಂಧಿಸಿ ಅವುಗಳ ವ್ಯಾಪಾರವನ್ನು ಸರಿಪಡಿಸಿ ಹತೋಟಿಗೆ ತಂದರೆ ಒಳಗೆ ಅಧ್ಯಾತ್ಮಿಕ ಶಕ್ತಿಯು ಪ್ರವರ್ಧಿಸುವುದಲ್ಲದೆ, ತನ್ನ ಸ್ವರೂಪವನ್ನು ಅರಿಯುವ ಶಕ್ತಿಯೂ ಪರಮಾತ್ಮ ಪ್ರತೀತಿಯ ಬಲವೂ ಬೆಳೆಯುವುದು ಎಂಬುದು ಇವರಿಗೆ ತಿಳಿಯದೆ ಇರಲಿಲ್ಲ. ಸಹಜ ಧೀರನ ಲಕ್ಷಣ ವಿಚಾರದಲ್ಲಿ ಕಠೋಪನಿಷತ್ತಿನ ಹೇಳಿಕೆಯು.

ಪರಾಂಚಿ ಖಾಣಿ ವ್ಯಕೃಣಕ್ ಸ್ವಯಂಭುಸ್ತಸ್ಮಾತ್ ಪರಾಜ್ಪ
ಶ್ಯತಿ ನಾಂತರಾತ್ಮನ
ಕಶ್ಚಿದ್ಧೀರಃ ಪ್ರತ್ಯಗಾತ್ಮಾನಮೈಕ್ಷದಾ ವೃತ್ತ ಚಕ್ಷುರ ಮೃತತ್ವಮಿಚ್ಛನ್ ||

ಇಂದ್ರಿಯ ಭೋಗಗಳಲ್ಲಿ ವಿಶೇಷ ಭುಕ್ತಿಯನ್ನು ಪಡೆದ ಪಕ್ಷದಲ್ಲಿ ಮನುಜನನ್ನು ಭ್ರಾಂತನನ್ನಾಗಿ ಮಾಡಿ ಆಧ್ಯಾತ್ಮಿಕ ಪ್ರಗತಿಯನ್ನು ಬುಡಮೇಲು ಮಾಡಿ ತಡೆದು ನಿಲ್ಲಿಸುವವುಗಳೆಂದರೆ ಕಾಮುಜಿಹ್ವಾಚಾಪಲ್ಯಗಳೇ ಸರಿಯು. ಇವರು ಈ ಚಾಪಲ್ಯವನ್ನು ಜಗ್ಗಿಸಿ ನಿಲ್ಲುವಂತಾದರು. ಇಂದ್ರಿಯ ವ್ಯಾಪಾರಗಳನ್ನು ತಡೆದು ಹಿಡಿದು ಪರಿಸ್ಫುಟವಾದ ಪರಿಶುದ್ಧ ಜ್ಞಾನನೇತ್ರದಿಂದ ಪರಮೇಶ್ವರನ ಸನಾತನ ವೈಭವ ಸಂದರ್ಶನಕ್ಕೆ ಕಾತರಿಸುತ್ತಿದ್ದರು.

ಕನಕಪುರ ತಾಲ್ಲೋಕಿನ ಮೊರಳಿ ಮಠದ ಶ್ರೀ ಶಿವರುದ್ರಸ್ವಾಮಿಯುವರ ಪರಿಪೂರ್ಣ ಅನುಗ್ರಹ ಇವರ ಆಚಾರ ವಿಚಾರದ ಅನುವಿಗೆ ಆಯುವನ್ನು ಹಾಕಿಕೊಟ್ಟಿತು. ಮಹಾಶಕ್ತಿವಂತನಾದ ಗುರುವು ಶಿಷ್ಯನಲ್ಲಿ ದಿವ್ಯ ಶಕ್ತಿಗಳನ್ನು ಪ್ರಕಟಿಸಬಲ್ಲನು. ಆದರೆ ಶಿಷ್ಯನು ವೈರಾಗ್ಯದ ಜೀವಾಳವಾದ ಸಂಯಮವನ್ನು ಸಾಧಿಸಲೇಬೇಕು. ಅದಕ್ಕೆ ಮೂಲವು ಕಾಮಾವೇಶದಂತ ಪ್ರಾಣದ ಹೀನವೃತ್ತಿಯನ್ನು ಕಳೆದುಕೊಂಡು ಭಾಗವತ ಪ್ರೇಮದ ದಿವ್ಯ ಸ್ಪರ್ಶತೆಯನ್ನು ಮಾಡಿಕೊಳ್ಳುವುದಾಗಿದೆ. ತತ್ಪರಿಣಾಮವಾಗಿ ನಮ್ಮ ಕಥಾನಾಯಕರಿಗೆ ದೇಹಾಭಿಮಾನದ ಅಳಿವು ಆರಂಭವಾಗುತ್ತಲಿತ್ತು.

" ಚೆನ್ನಮಲ್ಲಿಕಾರ್ಜುನನರಿದ ಬಳಿಕ ಆ ಕಾಯುವ ನಾಯ ತಿಂದರೇನು? ನೀರ ಕುಡಿದರೇನು ? ಅಲ್ಲಿಯತನಕ ಕಾಯ ಕಣ್ರನೆ ಕಂದಿದರೇನು ? ಮಿಣ್ರನೇ ಮಿಂಚಿದರೇನು ? ಕಾಯದ ಸಂಗವೇ ಲೇಸು ಕಂಡಯ್ಯ ಎಂದು ನಲಿಯುವಂತಿದ್ದರೆ ಹಾವಿನ ಹಲ್ಲ ಕಳೆದು ಹಾವನಾಡಿಸ ಬಲ್ಲರೇ ಹಾವಿನ ಸಂಗವೇ ಲೇಸು ಕಂಡಯ್ಯ "

ಈ ಶಿವಯೋಗಿಗಳು ಮುಪ್ಪಿನ ಷಡಕ್ಷರಿಯ ವಚನಗಳನ್ನು ಅಪ್ಪನ ವಚನಗಳೆಂದು ಆಗಾಗ್ಗೆ ಎತ್ತಿತ್ತಿ ಹಿಗ್ಗಿ ಹಾಡುವದು ರೂಢಿಯಾಗಿತ್ತು. ಸರ್ವೇಂದ್ರಿಯಗಳು ಲಿಂಗದಲ್ಲಿ ಸ್ಥಿರವಾಗಲು ಅವು ಮೊದಲೇ ಲಿಂಗಮುಖ ವಾಗಬೇಕು.

ಲಿಂಗ ಧ್ಯಾನಂ ಲಿಂಗ ಮನೋಚರ್ಯಾ ಪತೌಕತಾ ।
ಲಿಂಗ ಶೃತಿಪರೇ ಶ್ರೋತ್ರೇಲಿಂಗಾರ್ಪಿತ ರಸಾದರಃ ॥
ಲಿಂಗ ನಿರ್ಮಾಲ್ಯ ಸುರಭಿಲೋಭೋಘ್ರಾಣಸ್ಯಪಾರ್ವತಿ ।
ಲಿಂಗಾಲಂಕಾರ ಸಂದರ್ಶನಾಸಕ್ತ ಲೋಚನೇಽಪಿಚ ॥

—ಸೂಕ್ಷ್ಮಾಗಮ—

ಲಿಂಗಧ್ಯಾನ ಮೌನದಿಂದ ತಪವನ್ನಾಚರಿಸಿ, ಹೆಚ್ಚಿನ ಆತ್ಮ ತೇಜಸ್ಸನ್ನು ಇವರು ಸಂಪಾದಿಸಿದದು. ಜಪ ತಪ ನಿಯಮಗಳಿಂದ ಆತ್ಮೋದ್ಧಾರವಂತೆ! ಮಾನುಜನು ಅಮೇರಿಕೆಯನ್ನು ಆರ್ಜಿಸಲು ತಪವು ಒಂದು ಸಾಧನವು. ನಿಜ ಗುಣ ಶಿವಯೋಗಿಗಳು ತಪದ ನಿಜ ಸ್ವರೂಪವನ್ನು ಕೊಟ್ಟಿದ್ದಾರೆ.

ಮಾಡಲಿಲ್ಲವೆ ತಪವ ।
ಕೊಡೆ ಸುಗುಣದೊಡನೆ ತಿಳಿದು ।
ನೋಡಿ ತ್ರಿವಿಧ ಕರಣದಲ್ಲಿ ।
ಗುರುಭಜನೆ ಸುಕರ್ಮ ವೃತ್ತಿ ।
ಹರನ ಪೂಜೆ ಶರಣ ಸೇವೆ ।
ಪರಮ ಸಾತ್ವಿಕಂಗಳೆನಿತು ।
ನೆರೆದು ನೆಲಸಿ ತನುವಿನಲ್ಲಿ ।
ವಿನಯವನ್ಯ ಹಿತವ ತರ್ಕ ।
ವನಪ ಶಬ್ದ ವಚಲಿತಾರ್ಥ ।
ಅನಘ ಮಂತ್ರವಾಗ ಮಂಗ ।
ಳೆನಿತು ವಿಡಿದು ವಚನದಲ್ಲಿ ।
ಶಮೆ ವಿವೇಕಾತ್ಮ ವಿದ್ಯೆ ।
ದಮೆ ದಯಾ ವಿರಕ್ತಿಯೋಗ ।
ವಿಮಳರೂಪ ಶಂಭುಲಿಂಗ ।
ವರ್ಮದರ್ಮ ತೋರೆ ಸುಮನದಲ್ಲಿ ॥

ಗೃಹಸ್ಥರಾಗದೆ ಇಂದ್ರಿಯ ನಿರೋಧದಿಂದ ಬ್ರಹ್ಮಚಾರಿಯಾಗಿ ನಿಂತು ಕಾಮವನ್ನು ಕಳೆಯುವುದು ಎಂದರೆ ಸಾಮಾನ್ಯ ಕೆಲಸವಲ್ಲ. ಮಹಾ ಮಹಾ ಋಷಿವರೇಣ್ಯರೂ ಕೂಡ ಕಾಮನಿಗೆ ಸೋತು ವ್ರತಭಂಗಿತರಾಗಿರುವರುವಲ್ಲಿ ಜಗತ್ತಿನ ಜಂಜಡಕ್ಕೆ ಸಿಕ್ಕಿದ ಪಾಡನ್ನು ಹೇಳತೀರದು. ಮನಸ್ಸು ಬಹಳ ಚಂಚಲವಾದುದು.

'ಚಂಚಲಂ ಹಿ ಮನಃ ಕೃಷ್ಣ ಪ್ರಮಥಿ ಬಲವದ್ದೃಢಂ' –(ಗೀತೆ)

ಅಂದಣವನೇರಿದ ಸೊಣಗನಂತೆ ಕಂಡಡೆ
ಬಿಡದು ತನ್ನ ಮುಂದಿನ ಸ್ವಭಾವವನು.
ಸುಡು ಸುಡು ಮನವಿದು ವಿಷಯಕ್ಕೆ ಹರಿವುದು.
ಮೃಡನಿಮ್ಮನುನದಿನ ನೆನೆಯಲೀಯದು
ಎನ್ನೊಡೆಯ ಕೂಡಲಸಂಗಮ ದೇವ ನಿಮ್ಮ ಚರಣವ ನೆನೆವಂತೆ
ಕರುಣಿಸು ಸೆರಗೊಡ್ಡಿ ಬೇಡುವೆ ನಿಮ್ಮ ಧರ್ಮ'

–ಬಸವಗೀತೆ–

ಚಿತ್ತಚಾಂಚಲ್ಯವು ರೂಢಿ ಸಾಮಾನ್ಯವೇ ಸರಿಯು. ಚಂಚಲವಾದ ಮನಸ್ಸನ್ನು ತಡೆದು ನಿಲ್ಲಿಸುವದು ಸಾಮಾನ್ಯವಾದ ಕೆಲಸವಲ್ಲ. ಮನೋನಿಗ್ರಹಕ್ಕೆ ಮೊದಲು ಇಂದ್ರಿಯ ನಿಗ್ರಹವು ಅತ್ಯಗತ್ಯವು. ಜಲತತ್ವಗಳಿಂದ ಕೂಡಿರುವ ಜಿಹ್ವೇಂದ್ರಿಯ ಗುಹ್ಯೇಂದ್ರಿಯಗಳ ದಮನವಾಯಿತೆಂದರೆ ಸಾಕು, ಸರ್ವೇಂದ್ರಿಯಗಳು ದಮನವಾದಂತೆಯೇ ಸರಿಯು. ರಸವನ್ನು ಆಸ್ವಾದಿಸುವುದು ನಾಲಗೆಯ ಧರ್ಮವು. ರಸನೇಂದ್ರಿಯವು ವೇಗವಾದಷ್ಟು ಗುಹ್ಯೇಂದ್ರಿಯವು ಉತ್ತೇಜಿತವಾಗುವದು. ಸಮಾನಶೀಲರಲ್ಲಿ ಸಖ್ಯವು ಸ್ಥಿರುವಂತೆ ಸಮಾನ ತತ್ವಗಳುಳ್ಳ ಈ ಉಭಯೇಂದ್ರಿಯಗಳ ಮೈತ್ರಿಯು ಸಹಜ ಸಾಮಾನ್ಯವು. ಏವಂಚ ಕಾಮನಿಗ್ರಹದ ಮೊದಲು ರಸನೇಂದ್ರಿಯದ ಚಾಪಲ್ಯವನ್ನು ತಗ್ಗಿಸಬೇಕು. ಇದರಿಂದಲೇ "ಸ್ವಾದನ್ನಂತುನಯಾಚ್ಯಕಾಂ ವಿಧಿವಶಾಕ್ ಪ್ರಾಪ್ತ್ಯೇನ ಸಂತುಷ್ಯಕಾಂ" ಎಂದು ಸತ್ಪುರುಷರು ಉಪದೇಶಿಸಿದ್ದಾರೆ. ಭಗವಂತನ ಅವಲೋಕನದ ಹಾದಿಯಲ್ಲಿ ಕಾಮನೊಬ್ಬ ವಿಕಟ ವಿಘ್ನಕಾರಿಯಾಗಿ ಇದಿರುನಿಲ್ಲುತ್ತಾನೆ. ಎಂತಹ ಸತ್ಯವಂತ, ಗುಣಶೀಲ ಸಿದ್ಧಿ ಪುರುಷನೂ ಸಹ ಮನ್ಮಥನ ಇದಿರು ಮಣ್ಣುಮುಕ್ಕಿದ್ದಾನೆ.

ಸುಗುಣ ಸಂತತಿಯನು ನಿಗಮಾಗನು ವಿಧಿಯನು ।
ಮಿಗೆ ತಪನನು ತನಗಪ ಸಿದ್ಧಿಗಳನು ।
ಜಪದ ಪೂಜ್ಯತೆಯನು ಸೊಗಸುವೀ ತನುವನು ।
ಬಗೆಯಿ ಕಾಮವೆ ಬಣ್ಣಗೆಡಿಪುದರಿಂದ ।
ಬಿಡಬೇಕು ಬಲುಹಿಂದೆ ಬರಿದೆ ತನ್ನಿರವನು ।
ಕೆಡಿಸುವ ಕಾಮವಿದನು ಕಂಡುಯೋಗಿ ॥

— ನಿಜಗುಣ —

ಕಾಮ ಕೆರಳಿಕೆಗೆ ಅವಕಾಶಕೊಟ್ಟರೆ ಇಂದ್ರಿಯದ ಅಪವ್ಯಯದಿಂದ ತನ್ನಬಾಳು ಕಷ್ಟ ಸಾಧ್ಯವಾಗುತ್ತದೆ. ಬಾಳಿನ ಬಹು ತೂಕಕ್ಕೆ ಬಿಂದುವೇ ಆಧಾರವಾಗಿರುತ್ತದೆ. ಮಹಾಕವಿ ಕಾಳಿದಾಸನು ರಘುವಂಶದಲ್ಲಿ ಹೇಳಿದ್ದಾನೆ,

"ಕೈಲಾಸದಂತೆ ಪರಿಶುಭ್ರವಾದ ಎತ್ತನ್ನು – ರೇತಸ್ಸನ್ನು–ಏರುವಾಗ್ಗೆ ಭಗವಂತನು ಕುಂಭೋಧರನೆಂಬ ಹೆಸರುಳ್ಳ ನನ್ನ – ಸಿಂಹದ – ಮೇಲೆ ಪಾದವನ್ನಿಟ್ಟು ಏರುತ್ತಾನೆ"

ಕುಂಭದಂತೆ ಉದರವುಳ್ಳವನಾದ ಕಾರಣ ಕುಂಭೋದರ ಅರ್ಥಾತ್ ಕಾಮನು ಬಹಳ ಅನ್ನವನ್ನು ಬೇಡತಕ್ಕವನು ಎಂಬ ಅರ್ಥವು ಇಲ್ಲಿ ಬರುತ್ತದೆ. "ಮಹಾಶನೋ ಮಹಾಪಾಪ್ಮಾ ವಿದ್ಧ್ಯೇನ ಮಿಹ ವೈರಿಣಂ" ಎಂಬ ಗೀತೋಕ್ತಿಯಂತೆ ರೇತಸ್ಸನ್ನು ತಡೆಯುವವರಿಗೆ ಮನ್ಮಥನು ಶತ್ರುವಾಗಿ ಪರಿಣಮಿಸುತ್ತಾನೆ. ಆ ಶತ್ರುವನ್ನು ಮೆಟ್ಟದ ಹೊರತು ಬಹ್ಮಚರ್ಯವು ಸಿದ್ಧಿಸಲಾರದು. ಇಂದ್ರಿಯ ಮನಸ್ಸು ಮತ್ತು ಬುದ್ಧಿ ಇವುಗಳಲ್ಲಿ ಕಾಮನು ಮನೆಮಾಡಿಕೊಂಡಿದ್ದಾನೆ. ಅತಏವ ಕಾಮನನ್ನು ಜಯಿಸಲು ಇಂದ್ರಿಯಾದಿಗಳ ಹತೋಟಿಯು ಮೊದನೆಯ ಉಪಾಯವು. ರಸನೇಂದ್ರಿಯಗಳನ್ನು 'ಉಣಲಾಗದು ಉಡಲಾಗದು' ಎಂಬ ಪ್ರಭುತತ್ವವನ್ನು ಅರಿತು ಹಿತಮಿತವಾಗಿ ಹಿಡಿತದಲ್ಲಿ ಇರಿಸಬೇಕು. ಈ ಬಗೆಯ ನಾಲಿಗೆಯ ಹತೋಟಿಯಿಂದ ಆಹಾರವನ್ನು ಸೇವಿಸುತ್ತಹೋದರೆ ರೇತಶ್ಸು ನಮ್ಮ ಆಧೀನದಲ್ಲಿದ್ದು ಅದು ಊರ್ಧ್ವ ಮುಖವಾಗುತ್ತದೆ. ಮೇಲ್ಮುಖವಾಗಿ ಸುಷುಮ್ನಾನಾಡಿಯ ಮೂಲಕ ಹೋಗುವ ಆ ರೇತಸ್ಸು ಅಮರತ್ವವನ್ನು ತಂದು ಕೊಡುತ್ತದೆ. ವಿಷಯಗಳ ಕಡೆಗೆ ಹರಿಯುವುದು ಇಂದ್ರಿಯ ಸ್ವಭಾವವು. ಜಲಪ್ರವಾಹ ಇಳಿಮುಖವಾಗಿ ಹರಿಯುವಂತೆ ಅದನ್ನು ತಡೆಯುವುದು ಸಹಜಸ್ವಭಾವವು.

ಆದಕಾರಣ ಜಾಣನು ಆ ಜಲಪ್ರವಾಹವನ್ನು ಮತ್ತೊಂದು ಕಡೆಗೆ ಪ್ರವಹಿಸುವಂತೆ ಮಾಡಿ ಅದರ ಸದುಪಯೋಗವನ್ನು ಮಾಡಿಕೊಳ್ಳುತ್ತಾನೆ. ಹಾಗೆಯೇ ಇಂದ್ರಿಯಗಳ ಪ್ರವೃತ್ತಿಯನ್ನು ಈಶ್ವರಾಭಿಮುಖವಾಗಿ ಮಾಡಿ ಅವುಗಳ ಸಾತ್ವಿಕ ಬಲವು ಹೆಚ್ಚುವಂತೆ ಮಾಡಬೇಕು. ಅವುಗಳು ಪರಮೇಶ್ವರನತ್ತ ಹರಿಯಲು ಪರಿಶುದ್ಧ ಬ್ರಹ್ಮಚರ್ಯೆಯು ಅತ್ಯಗತ್ಯವು. ಸ್ತ್ರೀ ಸ್ಮರಣ, ಕಾಮೋದ್ದೀಪನ ಸನ್ನಿವೇಶಗಳನ್ನು ಸಾಧ್ಯವಾದಷ್ಟು ಮಟ್ಟಿಗೂ ಬ್ರಹ್ಮಚಾರಿಯು ನೆನೆಸಬಾರದು. ಸಕಲೇಂದ್ರಿಯಗಳು ಅಂತರ್ಮುಖವಾಗಲು ಮನದಲ್ಲಿ ಶಾಂತಿಯು ರೂಪು ವಡೆಯುತ್ತದೆ, ಪರಶಿವನ ಸಾಕ್ಷಾತ್ಕಾರವು ಸಮೀಪವಾಗುತ್ತದೆ. ಇದನ್ನರಿತೇ ಚಂಚಲಚಿತ್ತವನ್ನು ಏಕಾಗ್ರತೆಗೆ ನಿಲ್ಲಿಸಲು ಸತತ ಅಭ್ಯಾಸಾನುಷ್ಠಾನವನ್ನು ನಮ್ಮ ಕಥಾನಾಯಕರು ಕೈಗೊಂಡ್ಡರು. ಅನಂತರ ವೈರಾಗ್ಯ ಕಮಲ ಪುಷ್ಪದ ಶಯನದ ಮೇಲೆ ಪೀಠಾರೂಢರಾದರು. ಸಹಜ ಶರಣನು ಸರ್ವೇಂದ್ರಿಯಗಳಿಂದಲೂ ಪರಶಿವನ ಸ್ವರೂಪ ದರ್ಶನವನ್ನು ಪಡೆಯಲು ಆತುರನಾಗುತ್ತಾನೆ. ಕೇನೋಪನಿಷತ್ತು ಇಂತು ಹೇಳಿದೆ.

"ಪರಮಾತ್ಮನು ನೇತ್ರದೊಳಗೆ ನೇತ್ರವಾಗಿ, ಜಿಹ್ವೆಯೊಳಗೆ ಜಿಹ್ವೆಯಾಗಿ, ಸ್ಪರ್ಶನದೊಳೆ ಸ್ಪರ್ಶನವಾಗಿ, ಮನದಲ್ಲಿ ಮನವಾಗಿ, ವಾಣಿಯಲ್ಲಿ ವಾಣಿಯಾಗಿ, ಜೀವದಲ್ಲಿ ಜೀವವಾಗಿ, ಇದ್ದಾನೆ. ಆತನನ್ನು ಅರಿತವರು ಶೂರರು ಮುಕ್ತರು.''

ಪರಶಿವನ ಪ್ರತಿಸ್ವರೂಪವೇ ಶಿವಲಿಂಗವು. ಇಂದ್ರಿಯಗಳು ಶಿವಲಿಂಗ ಮುಖವಾದರೆ ನಿಷ್ಠೆಯು ಬಲಿತಂತೆಯೇ ಆ ಬಗೆಯ ನಿಷ್ಠೆಯನ್ನು ಸಂಯಮ ಬಲದಿಂದಲೇ ಸಾಧಿಸಲು ಸಾಧ್ಯವಾಗುತ್ತದೆ. ಇದು ಶಿವಯೋಗಿ ಷಡಕ್ಷರ ದೇಶಿ ಕೇಂದ್ರರಲ್ಲಿ ತೇಜೋ ಚೇತನವಾಗಿತ್ತು.

ನಿರಾಡಂಬರ ಜೀವನ, ಸತತ ದೇವರಧ್ಯಾನ, ಭಕ್ತರ ಹಿತಾಭಿಲಾಷೆ, ಜಗತ್ತಿನ ಹಿಂಸೆ ಹಾಗೂ ಅಶಾಂತಿಯ ಅಳಿವಿನ ಆಕಾಂಕ್ಷೆ, ಜನ ಜೀವನದ ಸಿರಿ ಸಂಪತ್ತಿನ ಅಭ್ಯುದಯದ ಹಾರೈಕೆಯು ಇವರಿಗೆ ಅತಿಯು. ಈ ಯೋಗ ಮಹಿಮರ ಆಗ್ರಹಕ್ಕೆ ಆಹುತಿಯಾಗಿ ತಾವು ಮಾಡಿದ ಅಪರಾಧಕ್ಕೆ ಯೋಗ್ಯ ಶಿಕ್ಷೆಯನ್ನು ಅನೇಕರು ಅನುಭವಿಸಿದರು. ಇವರ ಅನುಗ್ರಹಕ್ಕೆ ಪಕ್ಕಾದವರು

ಬಹುಮಂದಿ. ತೊಂದರೆಗೊಳಗಾದವರು ಇವರಲ್ಲಿ ಬಂದು ಪಶ್ಚಾತ್ತಾಪದಿಂದ ಮೊರೆಯಿಡಲು ಅವರ ಕಷ್ಟವೆಲ್ಲವೂ ಬಿಸಿಲಿನ ಮಂಜಾಯಿತು. ತಮ್ಮ ಪೂರ್ವಾಚಾರ್ಯರ ನೆನಹೇ ಇವರಿಗೆ ಜೀವದ ಜೀವಾಳ.

ಅಹುದಹುದು ಸದ್ಗುರುವೆ ಸಹಜವಿದು ಪೇಳಿದಿರೊ ।
ಅಹುದಲ್ಲವೆಂಬುದ ಗುರುಪುತ್ರ ನೀ ತಿಳಿದಿರೋ ॥
ಅಂಬಿಗನು ಹಡಗೇರಿ ತುಂಬಿರುವ ಜಲಧಿಯೊಳು ।
ಸಂಭ್ರಮದಿ ನಡೆಯಿಸುತಿಹುದೇನು ಗುರುವೇ ।
ಅಂಬಿಗನು ಪ್ರಾಣದೇಹ ಹಡಗು ಬಂಧು ಜಲನಿಧಿಯು ।
ನಂಬುನಂಬೆಂದು ಸಲೆ ಸಾರುತಿಹವೆ ಅಲ್ಲವೇ ।
ಅರಿಯದೆ ಭವದೊಳೀಪರಿ ಬಂದುದೇ ತಪ್ಪು ।
ಬಾರೆನಾ ಮುಂದಣ ಜನ್ಮಕೆ ನಿನ್ನಾಣೆ ॥
ಕಾಡಲೇಂ ತವಚರಣ ಸೇವಕನಂ ।
ಬೇಡುವೆನಾಂ ತವನಿಧಿಯಾದ ನಿನ್ನಂ ॥
ಎನ್ನಗುಣಾವಗುಣಗಳು ನಿನ್ನದಲ್ಲವೇ ದೇವ ।
ಉನ್ನತ ಮಹಾಮಹಿಮ ಹಿತರಕ್ಷಾಮಣಿಯೆ ॥
ದಿಟ್ಟ ಶ್ರೀಗುರು ವಿರುಪಾಕ್ಷನೆ ನೀನೇ ಗತಿಯೋ ।
ಕೆಟ್ಟ ಬಟ್ಟೆಯವರಿಗೆ ಸಖರಿಷ್ಟರಿಲ್ಲವೋ ॥
ಬೆಳಗುವೆ ಕರ್ಪೂರಾರತಿಯ ಮುಂದೆ ।
ಹೊಳೆವ ಸ್ವತಂತ್ರ ಸಿದ್ಧಲಿಂಗಯತಿಗೆ ॥

ಅಜ್ಜಿಪುರದ ಭಕ್ತರೊಬ್ಬರು ಒಮ್ಮೆ ಈ ಸ್ವಾಮಿಗಳ ಸಂದರ್ಶನಾರ್ಥವಾಗಿ ಬಂದರು. ಅರಿಕೆಯ ಮಧ್ಯದಲ್ಲಿ ತಮ್ಮ ಮಗಳಿಗೆ ಮೂರ್ಛೆರೋಗ ಬರುತ್ತಿದ್ದ ವಿಷಯವನ್ನು ತಿಳಿಸಿದರು. ಸ್ವಾಮಿಯವರು ಉಪಚಾರದ ನುಡಿಯ ಸಂಗಡ ವಿಭೂತಿ ಪ್ರಸಾದವನ್ನು ಆ ಗೃಹಸ್ಥರಿಗೆ ಅನುಗ್ರಹಿಸಿದರು.

"ಅಯ್ಯೋ! ಶಿವನು ಏಕಪ್ಪ ಈ ಬಗೆಯ ಕಷ್ಟವನ್ನು ಭಕ್ತರಿಗೆ ಕೊಡುತ್ತಿದ್ದಾನೆ? ತಿಳಿದು ತಿಳಿದೂ ಈ ರೀತಿಯಾಗಿ ಕಾಡಿಸುವ ಶಿವನಿಗೆ ಇನ್ನೂ ದಯೆಯು ಬರಲಿಲ್ಲವೇ ? ಶಿವನ ಹೆಸರನ್ನು ಹೇಳಿ, ಭಸ್ಮಧಾರಣಮಾಡಿ ಪ್ರಸಾದ ಸೇವನೆಮಾಡಿಸಿ ಒಳ್ಳೆಯದಾಗುತ್ತದೆ." ಶ್ರೀ ಗುರುವಿನ ಹರಕೆಯಿಂದ

ಹಗುರ ಶರೀರವನ್ನು ಹೊತ್ತು ಆ ಗೃಹಸ್ಥರು ಊರಿಗೆ ಹೊರಟರು. ಮೂರ್ಛಾ ರೋಗ ಬರುತ್ತಿದ್ದ ಮಗಳಿಗೆ ಸ್ನಾನ ಪೂಜೆಯನ್ನು ಮಾಡಿಸಿ ಮುಗಿಸಿ ವಿಭೂತಿ ಧಾರಣೆಮಾಡಿ ಶ್ರೀಗುರುವಿನಿಂದ ಲಭ್ಯವಾದ ಪ್ರಸಾದವನ್ನು ಸಮಯ ಪ್ರಸಾದ ನಿಚ್ಚ ಪ್ರಸಾದ, ಅಚ್ಚಪ್ರಸಾದ, ಶುದ್ಧಪ್ರಸಾದವಾಗಿ ಸೇವನೆಮಾಡಿಸಿ ಕೆಲವು ದಿನಗಳು ಕಳೆದುವು. ಬಂದ ಪೀಡೆಯು ಪರಾರಿ. ಈಗಲೂ ಆ ಗೃಹಸ್ಥರು ಗದ್ದಿಗೆಗೆ ಸೇವೆಸಲ್ಲಿಸುವ ರೂಢಿಯನ್ನು ಇಟ್ಟುಕೊಂಡಿದ್ದಾರೆ. ಮೈಸೂರಿನ ಧರ್ಮ ರತ್ನಾಕರರೊಬ್ಬರ ಸೊಸೆಗೆ ರೋಗವೊಂದು ಸನ್ನಿಹಿತವಾಗಲು ಗುರು ಸೇವೆಯನ್ನು ಭಕ್ತಿಕಾಣಿಕೆಯ ಸಹಿತ ಸಮರ್ಪಕವಾಗಿ ಸಾಗಿಸಲು ಕ್ರಮ ಕಮೇಣ ರೋಗವು ಹರಿದು ಹೋಯಿತು. ಶ್ರೀಗುರುವಿನ ಒಪ್ಪ ಹರಕೆಯ ಹಾರವನ್ನು ಶ್ರದ್ಧಾ ಭಕ್ತಿಯಿಂದ ಧರಿಸಿದರೆ ಸಾಕು ಸಕಲ ವಿಘ್ನಗಳ ಪರಿಹಾರವು.

ಒಮ್ಮೆ ಸ್ವಾಮಿಯವರು ಮಳವಳ್ಳಿಯ ಶಂಕರಮಠದಲ್ಲಿ ನಿಂತರು. ಅಲ್ಲಿ ನೆರೆದಿದ್ದ ವಿದ್ಯಾರ್ಥಿಗಳಲ್ಲಿ ಒಬ್ಬರನ್ನು ಕುರಿತು ಬಿಂದಿಗೆಯೊಂದರಲ್ಲಿ ನೀರನ್ನು ತರುವಂತೆ ಇವರು ಕೇಳಿದರು. ಆಗ ಆತನು ಉದಾಸೀನದಿಂದ ಇವರನ್ನು ಕಡೆಗಂಡನು. ಆಗ ಸ್ವಾಮಿಗಳು "ಶಿವನೇ, ಇಂತಹವರನ್ನೂ ಭೂಮಿಯ ಮೇಲೆ ಇರಿಸಿದ್ದೀಯಾ? ಇವನ ವಿದ್ಯೆಯು ಎಂತಹ ವಿದ್ಯೆ? ಈತನಿಗೆ ಈ ಶುದ್ಧ ಶುಂಠಿ ಕಾಯಿತನವೇ ಕೊನೆಯವರೆಗೂ ಇರುವಂತಾಗಲಿ" ಎಂದು ಆ ಕಾರ್ಯವನ್ನು ತಾವೇ ಮಾಡಲು ಉದ್ಯುಕ್ತರಾದರು. ಅಷ್ಟರಲ್ಲಿಯೇ ಆ ಗುಂಪಿನಲ್ಲಿದ್ದ ಇನ್ನೊಬ್ಬವಿದ್ಯಾರ್ಥಿಯು ಇವರು ಕೆಲಸಕ್ಕೆ ಕೈಹಾಕಿದು ದನ್ನು ನೋಡಿ ಓಡಿಬಂದು ಅದನ್ನು ಮುಗಿಸಿದನು. ಇದರಿಂದ ಇವರಿಗೆ ಸಂತಸವು ಸಾವರಿಸಿ, ಆತನನ್ನು ಆಶೀರ್ವದಿಸಿದರು.

"ಶಿವನೇ! ಈ ವಿದ್ಯಾರ್ಥಿಗೆ ಇದೇ ಭಕ್ತಿಯ ಸಸಿಯು ಬೆಳೆದು ಮರ ವಾಗಲಿ. ಈತನು ಹಿಡಿದಿದ್ದು ಹೊನ್ನಾಗಲಿ" ಎಂದು ಅನಂತರ ಎಲ್ಲವನ್ನು ಮುಗಿಸಿದರು. ಆ ವಿದ್ಯಾರ್ಥಿಯು ಇವರನ್ನು ಜೋಕೆಯಲ್ಲಿ ಕರೆದುಕೊಂಡು ಹೋಗಿ ಮುಂದಿನ ಬಿಡಾರಕ್ಕೆ ಬೀಳ್ಕೊಟ್ಟನು. ಆ ವಿದ್ಯಾರ್ಥಿಯು ಮಳ-ವಳ್ಳಿ ಪೇಟೆಯಲ್ಲಿ ಈಗ ಗಣ್ಯನೂ, ಶ್ರೀ ಮಂತನೂ ಆದ ವರ್ತಕನಾಗಿದ್ದಾನೆ. ವರ್ಷೇ ವರ್ಷೇ ಸ್ವಾಮಿಗಳ ಮಠಕ್ಕೆ ಹೋಗಿ ತಪ್ಪದೆ ಯತಾರ್ಥಸೇವೆಯನ್ನು ಭಕ್ತಿಯಿಂದ ಈ ವರ್ತಕರು ಸಲ್ಲಿಸುತ್ತಿದ್ದಾರೆ. ಇದೆಲ್ಲಕ್ಕೂ ಮೂಲ ಕಾರಣವು ಈ ಸ್ವಾಮಿಗಳ ಪರಮಶಿವಯೋಗ ನಿಷ್ಠೆ, ಪರಶಿವಧ್ಯಾನ ತಲ್ಲೀನತೆಯು ಆಗಿದೆ.

" ಉದಾರ ಚರಿತಾನಾಂ ತು ವಸುಧೈವ ಕುಟುಂಬಕಂ " ಎಂಬಂತೆ ಇವರು ವಿಶ್ವ ಕುಟುಂಬಿಗಳಾಗಿ ತಮ್ಮದು, ಪರರದು ಎಂಬ ಭೇದ ಭಾವವಿಲ್ಲದೆ, ಜಗತ್ತನ್ನೇ ಆತ್ಮೀಯ ಭಾವದಿಂದ ಕಂಡು ಸಕಲರಲ್ಲಿಯೂ ಸ್ವಾಮಿಗಳು ಸಹಾನುಭೂತಿ ತೋರಿಸಿ, ಸರ್ವರ ಹಿತವನ್ನು ಬಯಸುತ್ತಿದ್ದರು. ಆದರೆ ಸ್ತ್ರೀ ಸಂದರ್ಶನವು ಮಾತ್ರ ಇವರಿಗೆ ತೀರ ನಿಷೇಧವು.

" ಬ್ರಹ್ಮ ವಿಷ್ಣುಗಳಮಾಯೆ ತೊತ್ತಳಿದುಳಿವಂದು
ದೇವದಾನವರ ಮಾಯೆ ಅಗಿದಗಿದು ತಿಂಬಂದು
ರುದ್ರಗಣ ಪ್ರಮಥಗಣರೆಂಬರ ಮಾಯೆ ಮರುಳ್ಮಾಡಿಕಾಡುವಂದು
ಅಷ್ಟಾಶೀತಿ ಸಹಸ್ರ ಋಷಿಗಳಮಾಯೆ ತಪೋಮದದಲಿಕೆಡುವಂದು
ನಾನು ಮಾಯಾ ಕೋಳಾಹಳನಾಗಿರ್ದೆಕಾಣಾಗುಹೇಶ್ವರಾ "

ಇದನ್ನು ಜೀರ್ಣಿಸಿಕೊಂಡರೋ ಏನೋ ಇವರು ಹೆಂಗಸರನ್ನು ನೋಡುವುದಾಗಲೀ, ಇವರನ್ನು ಹೆಂಗಸರು ನೋಡುವುದಾಗಲೀ ಇವರಿಗೆ ಒಗ್ಗದು. ಹೆಂಗಸರ ಹಿತಾಕಾಂಕ್ಷಿಗಳಾಗಿದ್ದರು. ಅವರಿಗೆ ದರ್ಶನ ಸ್ಪರ್ಶನವು, ಸಾಧ್ಯವಾಗುತ್ತಿರಲಿಲ್ಲವು. ಒಮ್ಮೆ ರಾಜಮನೆತನದ ಮಹಿಳೆಯರು ಇವರ ಸಂದರ್ಶನ ಸೌಭಾಗ್ಯಕ್ಕಾಗಿ ಕೈಗೊಂಡಕಾರ್ಯವು ವಿಫಲವಾಗಿ ಹೋಗಲು, ತೆರೆಯ ಮರೆಯಲ್ಲಾದರೂ ಸ್ಪರ್ಶನ, ದರ್ಶನ ಮತ್ತು ಅಮೃತವಾಣಿಯನ್ನು ಬಯಸಿದ ಬಯಕೆಯು ಕೈಗೂಡಲಿಲ್ಲ. ಇದು ಇವರನ್ನು ವಿಚಿತ್ರ ಪುರುಷರು ಎನಿಸಬಹುದು. ಲೋಕದ ಕಣ್ಣಿಗೆ ಮಹಾಶರಣನು ಮರುಳನಂತೆ! ಇವರ ದರ್ಶನ ಸಾರವನ್ನು ಸವಿದ ಅಸ್ಥಾನ್ ವಿದ್ವಾನ್ ಮ. ಗಂ. ನಂಜುಂಡಾರಾಧ್ಯರು 'ಶಿವಾನುಭವ' ಮಾಸಿಕದಲ್ಲಿ ಸ್ವಾಮಿಗಳ ಪ್ರಭೆಯನ್ನು ಸೂಸಿದ್ದರು. ಆ ಬರಹವನ್ನು ಓದಿದ ಗಜೇಂದ್ರಗಡದ ಶಿವಶರಣೆಯೋರ್ವಳು ಸ್ವಾಮಿಯವರ ಸಂದರ್ಶನಾರ್ಥವಾಗಿ ಉತ್ತರ ಕರ್ನಾಟಕದಿಂದ ಬಂದಳು. ಈಕೆಯು ಮೌನ ವ್ರತಾವಲಂಬಿಯಾಗಿದ್ದ ಕಾರಣ ವ್ಯವಹಾರವನ್ನು ಬರಹದ ಮೂಲಕ ನಡೆಯಿಸ ಬೇಕಾಗಿತ್ತು. ಈ ಶಿವ ಶರಣೆಯು ತನ್ನ ಮನದ ಬಯಕೆಯನ್ನು ಭಕ್ತರ ಮೂಲಕ ಇವರಿಗೆ ತಿಳಿಸಿದಳು. ಈ ರೀತಿಯಾಗಿ ಎರಡು ಮೂರುಬಾರಿ ತಿಳಿಸಿದರೂ ಇವರು ಸಮ್ಮತಿಯನ್ನು ಕೊಡದಕಾರಣ ಈ ಶರಣಮ್ಮನಿಗೆ ಹಿಡಿದ ಯತ್ನವು ನೆರವೇರಲಿಲ್ಲ. ಇವರಪಾದವನ್ನಾದರೂ ನೋಡಿ ನಮಸ್ಕಾರಮಾಡಿ ಸ್ಪರ್ಶನ ಗೈದು ಹೊರಡಬೇಕೆಂದು ನಾಲ್ಕನೆಯಬಾರಿ ನಿರ್ಧರಿಸಿದಳು. ಪಾದ

ಪೂಜಾಸಾಮಗ್ರಿಯನ್ನು ಸ್ವಾಮಿಯವರಿಗೆ ಕಳುಹಿಸಿದಳು. ಇತ್ತ ಇವರು ಪೂಜೆಗೆ ಸಿದ್ಧರಾಗಿ ಕುಳಿತರು. ಮಠದ ಪಕ್ಕದಲಿರುವ ಊರಿನಲ್ಲಿ ಶರಣಮ್ಮನು ಸ್ನಾನವನ್ನು ಮುಗಿಸಿ ಪೂಜೆಗೆ ಕುಳಿತಳು. ಪೂಜೆ ಮುಗಿಸಿ ಕರದ ಸಿಂಹ ಪೀಠದಲ್ಲಿ ಇಷ್ಟಲಿಂಗವನ್ನು ಮಂಡಿಸುವಂತೆ ಮಾಡಿದಳು. ಈ ಕಡೆ ಸ್ವಾಮಿಯವರೂ ಕೂಡ ಪೂಜೆಯನ್ನು ಮುಗಿಸಿದರು. ಪಾದೋದಕ ಪ್ರಸಾದವು ಶ್ರೀ ಗುರುವಿನಿಂದ ಶರಣಮ್ಮನಿಗೆ ಸೇರಿತು. ಧನ್ಯಳಾದೆ ಎಂದ ಸಂತೋಷ ದಿಂದ ಸಮಯವನ್ನು ನಿರೀಕ್ಷಿಸುತ್ತಿದ್ದಳು. ಭಕ್ತನೊಬ್ಬನು ಅರಿಕೆಮಾಡಿ ಕೊಂಡನು. "ಗುರುವೇ! ಶರಣಮ್ಮನವರು ಗದ್ದಿಗೆಗೆ ನಮಸ್ಕರಿಸಲು ಬರು ವಂತೆ ಅಪ್ಪಣೆಯು ಆಗಬೇಕು." ಆದಕ್ಕೆ ಸ್ವಾಮಿಗಳು ಉತ್ತರಕೊಟ್ಟರು.

"ಏನಪ್ಪಾ ಅದಕ್ಕೆ ಅಪ್ಪಣೆಯು ಅಗತ್ಯವೇ ? ಶರಣಮ್ಮನಿಗೆ ಶಿವನಲ್ಲಿ ಸೇರಿಹೋಗಲು ಈಗಾಗಲೇ ಆತನಿಂದ ಅಪ್ಪಣೆಯು ಆಗಿಹೋಗಿದೆ."

ತಕ್ಷಣವೇ ಆಭಕ್ತನು ಶರಣಮ್ಮನಿದ್ದ ಜಾಗಕ್ಕೆ ಹೋಗಿ ನೋಡಲು ಆಕೆಯು ಲಿಂಗೈಕ್ಯಳಾಗಿದ್ದುದು ಗೋಚರಿಸಿತು.

ಅಭಿನವ ಅಥಣಿ ಶಿವಯೋಗಿಗಳಾಗಿ ಮೆರೆದ ಈ ಸ್ವಾಮಿಗಳು ನಿಗರ್ವ ವಿರಕ್ತಪುಂಗವರು. ನೋಡಲು ಪರಕಲು ಹಸುವು; ಆದರೆ ದರ್ಶನ ಹಾಗೂ ಫಲಪ್ರಾಪ್ತಿಯ ದೃಷ್ಟಿಯಲ್ಲಿ ಕಾಮಧೇನು. ಬ್ರಹ್ಮಜ್ಞಾನ, ಬ್ರಹ್ಮಕ್ರಿಯೆ, ಯಲ್ಲಿ ಇವರು ಎತ್ತಿದ ಕೈ. ಬ್ರಹ್ಮಜ್ಞಾನಿಯನ್ನು ಕುರಿತು ಪ್ರಶ್ನೋಪ ನಿಷತ್ತಿನವಾಣಿ.

ಪರಂಚಾ ಪರಂಚ್‌ಬ್ರಹ್ಮಯ ದೋಂಕಾರಸ್ತಸ್ಮಾದ್ವಿದ್ವಾನೇ
ತೇ ನೈವಾಯತನೇನೇಕತರ ಮನ್ವೇತಿ ।
ಸಯದ್ಯೇಕಮಾತ್ರ ಮಭಿದ್ಯಾಯಿತಸಕೇನೈವ ಸಂವೇದಿಕಸ್ತೂರ್ಣ
ಮೇವ ಜಗತ್ಯಾಮಭಿ ಸಂಪದ್ಯಕೇ ।
ತಮೃಚೋ ಮನುಷ್ಯಲೋಕ ಮುಪನಯಂ ತೇ ಸತತ್ರ ತಪಸಾ-
ಬ್ರಹ್ಮೇಚರ್ಯೇಣ ಶ್ರದ್ಧಯಾಸಂಪನ್ನೋ ಮಹಿವನುಭವರೆ ॥

ಪರಾಪರ ಬ್ರಹ್ಮವು ಓಂಕಾರ. ಈ ಎರಡರಲ್ಲಿ ಒಂದನ್ನು ಪಂಡಿತನು ಆರ್ಜಿಸುತ್ತಾನೆ. ಏಕಮಾತ್ರಯಷ್ಟನ್ನೇ ಧ್ಯಾನಿಸುವ ಕಾರಣ ಆತನು ತಪಸ್ಸು ಬ್ರಹ್ಮಚರ್ಯೆ ಶ್ರದ್ಧೆಗಳಿಂದ ಸಂಪನ್ನನಾಗಿ ಸಾಗುತ್ತಾನೆ. ಬ್ರಹ್ಮಚರ್ಯ ನಿಧಾನವು ಆಹಾರವನ್ನು ಅವಲಂಬಿಸಿರುವುದು ಸ್ವಾಮಿಗಳಿಗೆ ಗೊತ್ತಾಗದೆ

ಇರಲಿಲ್ಲ. ಇವರು ಉಪ್ಪು, ಹುಳಿ, ಕಾರವನ್ನು ಉಪಯೋಗಿಸದೆ ಆಹಾರವನ್ನು ಸೇವಿಸುತ್ತಿದ್ದರು. ಪ್ರಾಣಿ ಹಿಂಸೆ ಎಂದರೆ ಇವರಿಗೆ ಆಗದು. ಸಣ್ಣ ಇರುವೆ, ಪುಟ್ಟ ಪತಂಗ–ಇವುಗಳಿಗೂ ಕೂಡ ನೋವನ್ನು ಕೊಡಲು ಇವರಿಗೆ ಮನಸ್ಸುಬಾರದು. ರಾತ್ರಿಯವೇಳೆ ಬಹಳ ಬೆಳಕಾಗುವ ದೀಪಗಳನ್ನು ಹಚ್ಚದೆ ಸಣ್ಣ ಸಣ್ಣ ಹಣತೆಯನ್ನು ಹಚ್ಚುತ್ತಿದ್ದರು. ಸ್ವಂತ ಉಪಯೋಗಕ್ಕಾಗಿ ಪರರಿಗೆ ಹಿಂಸೆಕೊಡುವುದೆಂದರೆ ಇವರಿಗೆ ಸಗ್ಗದು.

ಕೊಲ್ಲುವನೇ ಮಾದಿಗ, ಹೊಲಸು ತಿಂಬುವನೇ ಹೊಲೆಯ
ಸಕಲ ಜೀವಾಳಿಗಳಿಗೂ ಲೇಸನೆ ಬಯಸುವರು
ನಮ್ಮ ಕೂಡಲಸಂಗನ ಶರಣರು

ಅಂಗಾಂಗಗಳನ್ನೂ ನರನಾಡಿಗಳನ್ನೂ ಉದ್ರೇಸುವ ಆಹಾರ ಪಾನೀಯವನ್ನು ಕನಸಿನಲ್ಲಿಯೂ ಕಾಣರು. ಉಡಿಗೆ ತೊಡಿಗೆಗಳಂತು ಹೇಳುವ ಹಾಗೆ ಇಲ್ಲ. ಒಂದು ಕೌಪೀನ ಎದೆಯ ಮೇಲೆ ಹಾಯ್ದು ನಡುವಿನ ಮೇಲೆ ಬಿದ್ದು ತೊಡೆಯಮೇಲೆ ಮುಸುಕಿರುವ ಕಾವಿಯ ಹಚ್ಚಡವೊಂದು ಮಾಸಿದಂತೆ ಕಾಣುತ್ತಿದ್ದ ಕರವಸ್ತ್ರವೊಂದು. ಮಿತಭಾಷಿಗಳು ಕರುಣಾಮಯರು ಲಿಂಗಾಂಗ ಸಾಮರಸ್ಯ ಸುಖಿಗಳು ಲಿಂಗಾಂಗ ಸಾಮರಸ್ಯ ಸ್ವಾರಸ್ಯವನ್ನು ಅನುಭವ ಪೂರಿತವಾಗಿ ಪರರಿಗೆ ಬೋಧಿಸುವ ಸತ್ಯಭಾಷಿಗಳು. ಇವರು ನಿತ್ಯ ಸುಖಿಗಳು. ತನ್ನ ತಾನರಿದಾಡೆ ಮುಕ್ತ ಎಂಬುದನ್ನು ಬಿಡಿಬಿಡಿಯಾಗಿ ಭಕ್ತರಿಗೆ ಬೋಧಿಸಿ ತಾವೇ ತಾವಾಗಿರುವ ಆನಂದಭಾಷಿಗಳು.

ಯತ್ಕರೋಷಿಯದಶ್ನಾಸಿ ಯಜ್ಜುಹೋಷಿ ದದಾಸಿಯತ್ |
ಯತ್ತ ಪಶ್ಯಸಿ ಕಾಂತೇಯ ತತ್ಕುರುಷ್ವಮದರ್ಪಣಂ ||

ಈ ಗೀತಾ ವಾಕ್ಯದಂತೆ ಯಾವ ಕರ್ಮಮನ್ನು ಮಾಡಿದರೂ ಅದನ್ನು ಈಶ್ವರಾರ್ಪಣ ಬುದ್ಧಿಯಿಂದ ಮಾಡಬೇಕೆಂದು ಉಪದೇಶಿಸುತ್ತಿದ್ದ ಈ ಶಿವಯೋಗಿ ಪುಂಗವರನ್ನು ಒಮ್ಮೆ ನೋಡಿದ ಮಾತ್ರಕ್ಕೆ ಎಂದೆಂದೂ ಅಚ್ಚಳಿಯದ ಅಚ್ಚನ್ನು ಮನದಲ್ಲಿ ಮೂಡಿಸಿಕೊಳ್ಳದೆ ಇರಲಾರನು.

ಶಾಸ್ತ್ರಗಳ ಸಾರವನ್ನು ತಿಳಿದಿದ್ದರೆ ಮಾತ್ರ ಗುರುವಾಗಬಲ್ಲನು. ಗಿಳಿಯೋದು ಆದ ಶಾಸ್ತ್ರಪಾಂಡಿತ್ಯವು ಶಾಸ್ತ್ರಗಳ ಸಾರವಲ್ಲ. ಒಂದು ದೇಶದ ವಿಚಾರವನ್ನು ಪುಸ್ತಕಗಳ ಮೂಲಕ ಓದಿ ತಿಳಿದರೆ ಅದು ಪ್ರತ್ಯಕ್ಷ ಜ್ಞಾನ

ವಲ್ಲವು. ಯಾವುದನ್ನು ಗುರಿಯಾಗಿಟ್ಟುಕೊಂಡು ಶಾಸ್ತ್ರವು ಹೇಳುವುದೋ ಅದರ ದರ್ಶನವಾಗಿರಬೇಕು. ಆ ಬಗೆಯ ಶಾಸ್ತ್ರದ ತೀರ್ಥವು ಇವರಿಗೆ ದೊರಕಿತ್ತು. ಪುಸ್ತಕಗಳಲ್ಲಿ ಮುದ್ರಿತವಾಗಿರುವ ಶ್ಲೋಕಗಳ ಮೂಲಕವಲ್ಲ; ಆತ್ಮಜ್ಞಾನದ ಮೂಲಕ. ಇವರು ಉದ್ದಾಮ ಪಂಡಿತ ವರ್ಗಕ್ಕೆ ಸೇರಿದವರಲ್ಲ. ರಾಮಕೃಷ್ಣ ಪರಮಹಂಸರ ವಿಚಾರದಲ್ಲಿ ಸ್ವಾಮಿ ವಿವೇಕಾನಂದರು "ಪರಮಹಂಸರ ಜೀವನವು ವೇದ ವೇದಾಂತಿಗಳಿಗೆ ಬರೆದಿರುವ ಸಚೇತನ ಭಾಷ್ಯವು" ಎಂದು ಹೇಳಿರುವ ಅಂಶವನ್ನೇ ಇವರಿಗೂ ಅನ್ವಯಿಸಿದರೆ ತಪ್ಪೇನಾಗಲಾರದು. ಇವರು ಆಡುತ್ತಿದ್ದ ಮಾತಿನ ಹಿಂಬದಿಯಲ್ಲಿ ಶಿವಸಾಕ್ಷಾತ್ಕಾರದ ಶಕ್ತಿಯು ಮಿಂಚುತ್ತಿತ್ತು. ಮಾತು ಸರಳವಾಗಿದ್ದರೂ ಅದು ಕೇಳುವವರ ಎದೆಗೆ ಧೈರ್ಯವನ್ನು ಕೊಡಬಲ್ಲತಾಗಿತ್ತು ಮಾತೆತ್ತಿದರೆ ಶ್ಲೋಕಗಳನ್ನು ಉದಹರಿಸುವ ವಿದ್ವಾಂಸರ ವರ್ಗಕ್ಕೆ ಇವರು ಸೇರಿದವರಲ್ಲ. ಪರಶಿವಲಿಂಗಾನಂದದ ಶರಧಿಯಲ್ಲಿ ಮುಳುಗಿ ತಂದ ಅನರ್ಘ್ಯ ರತ್ನದಂತೆ ಇವರು ಆಡಿದ ಒಂದೊಂದು ಮಾತುಕತೆಯು.

ಪರಶಿವನು ಶಕ್ತಿಯುಕ್ತನಾಗಿ ತನ್ನ ಭಕ್ತರ ಉದ್ಧಾರಕ್ಕಾಗಿ ಉಪಾಸ್ಯನಾಗಿಯೂ ಯಾವ ಯಾವ ರೂಪುಗಳನ್ನು ಪಡೆಯುತ್ತಾನೆಯೋ ಜೀವನೂ ಕೂಡ ಭಕ್ತಿಯುಕ್ತವಾಗಿ ತನ್ನಲ್ಲಿರುವ ಉಪಾಸಕತ್ವವು ನೆಲೆಗೊಳ್ಳುವಂತೆ ಆಯಾಯ ಉಪಾಸ್ಯ ರೂಪಕ್ಕನು ಗುಣವಾದ ರೂಪಗಳನ್ನೇ ಹೊಂದುತ್ತಾನೆ. ಇದರಲ್ಲಿ ಗುರುಶಿಷ್ಯರ ಪರಸ್ಪರ ಕ್ರಿಯೆಯು ಸಾಗಿರುತ್ತದೆ. ಮುಮುಕ್ಷುವಾದ ಶಿಷ್ಯನು ಗುರುವಿನ ಬಳಿಗೆ ಹೋಗಿ 'ಕೋಹಂ' ಎಂದು ಕೇಳಿದರೆ 'ತತ್ವಮಸಿ' ಆ ಪರಶಿವನೇ ನೀನು ಎಂದು ಬೋಧಿಸುತ್ತಾನೆ. ಆದರೆ ಈ ಬೋಧನೆಯೊಂದರಿಂದಲೇ ಶಿಷ್ಯನ ಜೀವತ್ವವು ಪರಿಯದು. 'ಆತ್ಮವತ್ ಸರ್ವ ಭೂತಾನಿಯ: ಪಶ್ಯತಿ ಸ ಪಶ್ಯತಿ' ಎಂಬ ಜ್ಞಾನವನ್ನು ಶಿಷ್ಯನಿಗೆ ಮಾಡಿ ಅದರಂತೆ ಆಚರಿಸಲು ಅನುಮಾಡಿಕೊಳ್ಳಬೇಕು. ಇದಕ್ಕೆ ಈ ಬಗೆಯ ಶಿವಯೋಗಿಗಳ ಸಂದರ್ಶನ, ಸಹವಾಸ, ಉಪದೇಶ, ಉಪಾಖ್ಯಾನ ಆಗಾಗ್ಗೆ ಆಗುತ್ತಿರಬೇಕು. ಆಗ ಅರಿದರೆ ಶರಣ ಮರೆದರೆ ಮಾನವನಾಗಿ ಬಾಳುವ ಹದ ಬೆದೆಯ ಹಿಡಿತದಲ್ಲಿ ಹಾಯ್ದು ನಾವು ಬಂದ ಬಟ್ಟೆಯನ್ನು ಅರಿತು ಆಚರಿಸಿ ಪಾವನ ಪುಣ್ಯ ಪುನೀತರಾಗುವುದರಲ್ಲಿ ಯಾವ ಸಂಶಯವೂ ಇಲ್ಲ.

ಈ ಸ್ವಾಮಿಯವರು ಭಕ್ತರಿಗೆ ದರ್ಶನ, ಸ್ಪರ್ಶನ, ವಚನ ಇವುಗಳನ್ನು ನೀಡುತ್ತಲಿದ್ದರು. ಒಮ್ಮೆ ಗೌರಿಶಂಕರ ಸ್ವಾಮಿಯವರು ಈ ಮಠಕ್ಕೆ

ದಯಮಾಡಿಸಿದರು. ಮಠವನ್ನು ಕೊಂಚಕಾಲ ಈಕ್ಷಿಸಿದರು. ಬಾಗಿಲ ಮುಂದಿನ ತಟ್ಟಿಯನ್ನು ನೋಡಿದರು.

‘ ಇದೇನು ಬುದ್ಧಿ ! ಈ ತಟ್ಟಿಯನ್ನು ಕಟ್ಟಿಕೊಂಡಿರುವಿರಿ ’

‘ ಗಾಳಿ ಬಡಿತಕ್ಕೆ ಬುದ್ಧಿ ’

‘ ಅದಕ್ಕಲ್ಲ....ಯಾರಾದರೂ ಹೆಂಗಸರು ಬರುತ್ತಾರೆ ಅಂತಾ ಅಲ್ಲವೆ ಬುದ್ಧಿ ?

‘ ಹಾವಾಡಿಗ ಹಾವನಾಡಿಸವುದನ್ನು ಬಲ್ಲ; ಕಚ್ಚಿದರೆ ಮದ್ದನ್ನೂ ಬಲ್ಲ; ಅವನೇನೋ ಹಾವಿನ ಸಂಗಡ ಸರಸವಾಡಿದರೆ ನಾನೂ ಆಡಬೇಕಂತಲೇ ? ನನ್ನಂತಹವನಿಗೆ ಅದು ಏಕೆ ಬುದ್ಧಿ? ’ ಈ ಸಂವಾದದಿಂದ ಇವರ ದೃಷ್ಟಿಯು ಗಮನ ಗೋಚರವು ಸ್ತ್ರೀಯರ ವಿಚಾರದಲ್ಲಿ ಇದ್ದುದು ಗೊತ್ತಾಗುತ್ತದೆ. ಇಡೀ ಸನ್ಯಾಸಿಗಳಿಗೆ ಗೌರಿಶಂಕರ ಪ್ರಾಯವಾಗಿದ್ದ ಗೌರಿಶಂಕರ ಸ್ವಾಮಿ ಯುವರ ಮಾತಿಗೆ ಇವರು ನಯವಿನಯದಿಂದಲೇ ಉತ್ತರ ಕೊಟ್ಟು ತಮ್ಮ ಮನೋದಾರ್ಢ್ಯವನ್ನು ಅರಿಯಲು ಅವಕಾಶಮಾಡಿಕೊಟ್ಟರು. ಒಮ್ಮೆ ಧಾರ ವಾಡದ ಮೃತ್ಯುಂಜಯ ಮಹಾ ಸ್ವಾಮಿಯವರು ಇಲ್ಲಿಗೆ ದಯಮಾಡಿಸಿದರು. ಧಾರವಾಡದ ಮಹಾಸ್ವಾಮಿಯವರು ಮನದುಂಬ ಸಂತೋಷಭರಿತರಾದರು. ಉಭಯರಿಗೂ ಮಾತುಕತೆಯು ಸಾಗಿತು. ಸಾಗುತ್ತಿದ್ದುದರ ಅಂತ್ಯದಲ್ಲಿ ಇವರು ಇದ್ದಕ್ಕಿದ್ದಂತೆಯೇ ಇಂತು ನುಡಿದರು.

“ ಬುದ್ಧಿ! ನಾನು ಮುಂಚೆ ಕೈಲಾಸಕ್ಕೆ ಹೋದರೆ ನಿಮ್ಮನ್ನು ನಾನು ಕರೆಯಿಸಿ ಕೊಳ್ಳೇನಿ; ನೀವು ಮುಂಚೆ ದಯಮಾಡಿಸಿದರೆ ನನ್ನನ್ನು ಕರೆಯಿ ಸಿಕೊಳ್ಳಿ ” ಈ ಅವಿನಾಶಿ ಪ್ರೇಮಕ್ಕೆ ಮುಗ್ಧರಾದ ಮೃತ್ಯುಂಜಯ ಸ್ವಾಮಿ ಯವರು ತಟ್ಟನೆ ಎದ್ದು ಇವರನ್ನು ಬಾಚಿ ಅಪ್ಪಿಕೊಂಡು ಆನಂದತುಲ್ಯ ರಾಗಿ ‘ನನ್ನಪ್ಪಾ’ ಎಂದರು

ಕಾಲ ಕಳೆಯುತ್ತಿದ್ದಂತೆಯೇ ಮಠದ ಕಟ್ಟಡವು ಜೀರ್ಣೋದ್ಧಾರವಾ ಯಿತು. ಮಠದ ಕಟ್ಟಡದ ಒಳಗಡೆಯೂ ಸಹ ಇದ್ದುದರಲ್ಲಿಯೂ ಅಚ್ಚು ಕಟ್ಟು ಆವರಿಸಿತು. ಮಠಕ್ಕೆ ವಿದ್ಯುತ್ ದೀಪವನ್ನು ಹಾಕಿಸುವ ಪ್ರಸ್ತಾಪವು ಸ್ವಾಮಿಯವರ ಕಿವಿಗೆ ಬಿದ್ದಿತೋ ಇಲ್ಲವೋ ಕಿಡಿಕಿಡಿಗೆದರಿದರು. “ ಈಗ ಇರುವ ದೀಪವೇ ಸಾಕು, ಸುಮ್ಮನೆ ಆಡಂಬರದ ಜೊತೆಗೆ ವೃಥಾ ಹಿಂಸೆ. ಇದು ಮಠಕ್ಕೆ ನನಗೆ ಸಲ್ಲದು. ವಿದ್ಯುತ್ ದೀಪಬಂದು ಏನಾದರೂ ಹೃದ

ಯೆುದ ಒಳಗಿನ ದೀಪದ ಬೆಳಕು ಹೆಚ್ಚಾಗುತ್ತದೆಯೇ? " ಆಗ ಅಲ್ಲಿದ್ದವ ರೆಲ್ಲರೂ ಉಸಿರೆತ್ತಲಿಲ್ಲ. ವಾರ್ಧಾದಲ್ಲಿ ಗಾಂಧೀಜಿಯು ಬದುಕಿದ್ದ ವೇಳೆಯಲ್ಲಿ ಇದೇ ಪ್ರಶ್ನೆಯು ಉದ್ಭವವಾಗಲು, ಗಾಂಧೀಜಿಯವರು ತಮ್ಮ ಜೀವಮಾನ ಇರುವವರೆಗೂ ಅದಕ್ಕೆ ಅವಕಾಶವನ್ನು ಕೊಡಲಿಲ್ಲ. ಮಹಾವಿಭೂತಿಗಳ ಜೀವ ನವೇ ವೈವಿಧ್ಯತೆ ಇಲ್ಲದಿದ್ದರೂ ವೈವಿಧ್ಯತೆಯಿಂದ ಕೂಡಿ ಲೋಕದ ನರರಿಗೆ ಅಚ್ಚರಿಯನ್ನು ಉಂಟು ಮಾಡುವುದು. ಇವರು ತಮ್ಮ ಗುರಿಯನ್ನು ಸಾಧಿ ಸಿದರೋ ಏನೊ? ನಿರ್ಜನ ಪ್ರದೇಶವಾದ ಕಾಡಿನ ನಡುವೆ ರತಿಯಂತೆ ಚೆಲು ವಾದ ತರುಣಿ ಕಾಮಿಸಿ ಬಂದವಳನ್ನು ಮಹಾತಾಯಿಯಂತೆ ಕಾಣುವ ನರ ಶ್ರೇಷ್ಠನೇ ವಿರಕ್ತನು. ಆತನನ್ನು ಋಷಿದೇವಾದಿಗಳು ಬಿಡದೆ ಪ್ರೀತಿಸುತ್ತಾರೆ. ಎಂತಹ ಹೆಂಗಸಾಗಲೀ ಆಕೆಯ ಮುಖವನ್ನು ನೋಡುವುದಿಲ್ಲ ಹಾಗೂ ಹೆಂಗಸಿಗೆ ತನ್ನ ದರ್ಶನ ಸ್ಪರ್ಶನವನ್ನು ಕೊಡುವುದಿಲ್ಲ, ಎಂಬ ಅಸಿಧಾರಾ ವ್ರತವನ್ನು ಕೈಕೊಂಡ ಮಹಾಶಿವಯೋಗಿ ತಪಸ್ವಿಗಳಾದ ಇವರ ಶರೀರವು ಬರಬರುತ್ತ ಬಡಕಲಾಗಿ ಬಂಡವಿಲ್ಲದ ಬೆಂಡಾಗುತ್ತಿತ್ತು. ಯಾವ ದೇವರೇ ಆಗಲಿ ಇಳೆಗೆ ಬಂದಮೇಲೆ ಆತನ ಕಾಯವು ನಿಸರ್ಗ ನಿಯಮಗಳಿಗನು ಗುಣವಾದ ಭೋಗ, ಯೋಗ, ತ್ಯಾಗವನ್ನು ಅವಲಂಬಿಸದೆ ಇದ್ದರೆ ಡ್ಡಿ ಯಾಗುವುದರಲ್ಲಿ ಯಾವ ಸಂದೇಹವೊ ಇರುವುದಿಲ್ಲ. ಅಂತೆಯೇ ಇವರು ಬ್ರಹ್ಮಚರ್ಯಪಾಲನೆ, ಆಹಾರದ ಘೋರನಿಯಮ, ಸ್ನಾನಪಾನದ ಫಲ, ಸತತ ಸರ್ವೇಶ್ವರನ ಧ್ಯಾನ ಇತ್ಯಾದಿಗಳಿಂದ ಇವರ ಶರೀರವು ತೇಜಸ್ಸು ಓಜಸ್ಸು ಗಳಿಂದ ಕೂಡಿದ್ದರೂ ವಯೋಮಾನದ ಪರಿಣಾಮವಾಗಿ ಬಾಡಿಹೋಗುತ್ತ ಲಿತ್ತು. ಇಹಲೋಕದ ಸಂಪರ್ಕವು ಮುಗಿಯಿತೋ ಏನೋ ಅದರ ಅರಿ ವಾಗಿ ತಮ್ಮ ಮುಂದಿನ ಜಾಗಕ್ಕೆ ನಿಯಮಿತವಾಗಿದ್ದ ವಟುವನ್ನು ಕರೆಯಿ ಸಿದರು. ಏನೇನು ಆಗಬೇಕಾಗಿದ್ದಿತೋ ಅದೆಲ್ಲವನ್ನೂ ಆಗು ಮಾಡಿಸಿದರು. ಭಕ್ತರಗುಂಪು ಬಹುವಾಗುತ್ತಿದ್ದಂತೆಯೇ ಇವರ ವಾಣಿಯು ವೇಗವಾಗುತ್ತಿತ್ತು. ವಿಜಯ ಸಂವತ್ಸರ ಶ್ರಾವಣಮಾಸ ಕೃಷ್ಣಪಕ್ಷ ಬುಧವಾರದಲ್ಲಿ ಲಿಂಗದ ಸಂಗಡ ಸರಸವಾಡುತ್ತ ಅಪ್ಪಿಕೊಂಡರು. ಭಕ್ತ ಭಕ್ತೆಯರ ಗೋಳಬಾನನ್ನು ಮುಟ್ಟುತ್ತಿತ್ತು. ಜಯಘೋಷವು ಬಾನಬಯಲಲ್ಲಿ ವಿಹರಿಸುತ್ತಿತ್ತು ಮಠದ ಮೂಡಣದಲ್ಲಿ ಸ್ವಾಮಿಯವರ ಗದ್ದುಗೆಯು ವಿರಾಜಿಸುವಂತಾಯಿತು.

---

# ಭೀಮ ಕವಿಯ ಬಸವಣ್ಣ

ಲೇಖಕರುಃ- ಉದಯರವಿ (ಆರ್. ಬಸವರಾಜ್)



ಮಹಾಪುರುಷನೊಬ್ಬನ ಪುಣ್ಯ ಚರಿತ್ರೆಯನ್ನು ಐತಿಹಾಸಿಕ ಸತ್ಯ ದೃಷ್ಟಿಯಿಂದ ತಿಳಿಯಲಪೇಕ್ಷಿಸಿದಾಗ ಪುರಾಣಗಳಲ್ಲಿ ಅವರಿಗೆ ಸಂಬಂಧಿಸಿದ ವಿಷಯವು ಅತಿಶಯೋಕ್ತಿಯಿಂದಲೂ ಅಪರಿಮಿತ ಪವಾಡಗಳಿಂದಲೂ ಮುಚ್ಚಿ ಹೋಗಿದೆ ಎಂಬ ವಿಚಾರವನ್ನು ನಾವಾಗಲೆ ತಿಳಿದಿದ್ದೇವೆ. ಬಹುಶ್ರಮದಿಂದ ಈ ಪವಾಡ ಸಮುದ್ರದ ಒಳಹೊಕ್ಕು ನೋಡಿದಾಗ ಅಲ್ಲಿಯೂ ಸತ್ಯಸಂಗತಿ ಗಳಿರುವುದು ಕಂಡುಬರುತ್ತದೆ. ಸಾಧಕನು ಸಮುದ್ರದೊಳಕ್ಕೆ ಮುಣುಗಿದಾಗ ಆತನಿಗೆ ರತ್ನರಾಶಿಯಾದರೂ ಗೋಚರಿಸಬಹುದು, ಇಲ್ಲವೆ ಕೇವಲ ಕಪ್ಪೆಯ ಚಿಪ್ಪಾದರೂ ದೊರೆಯಬಹುದು. ಏನಿದ್ದರೂ ಸಾಧಕನಿಗೆ ಬೇಕಿರುವುದು 'ಏನಿದೆ' ಎಂಬ ಸತ್ಯ ಸಂಗತಿಯಷ್ಟೆ. ವಸ್ತುವು ಗುಣದಲ್ಲಿ ಮೌಲ್ಯದಲ್ಲಿ ವಿಶೇಷವಾಗಿದ್ದರೆ ಅದೂ ಒಂದು ಪುಣ್ಯವೇ. ಭೂಮಿಯನ್ನು ಅತಿಪ್ರಯಾಸ ದಿಂದ ಅಗೆದು ಮಣ್ಣಿನಿಂದ ಚಿನ್ನವನ್ನು ಹೊರತರುವಂತೆ ಪವಾಡ ಕಲ್ಪನೆ ಗಳ ಗಣಿಯಿಂದ ಸತ್ಯವೆಂಬ ಶಾಶ್ವತ ಚಿನ್ನವನ್ನು ಹುಡುಕಿ ತೆಗೆಯಬೇಕಾಗಿದೆ.

ಪ್ರಸ್ತುತಃ ಈ ಲೇಖನದಲ್ಲಿ- ಭೀಮಕವಿಯ "ಬಸವ ಪುರಾಣ" ದಲ್ಲಿ ನಮಗೆ ದೊರೆಯುವ ಅವರ (ಬಸವಣ್ಣನವರ) ಚರಿತ್ರೆ ಎಷ್ಟು, ಕವಿಯ ದೃಷ್ಟಿ ವೈಶಿಷ್ಟ್ಯಗಳೇನು, ಅವನ ದೃಷ್ಟಿಯಲ್ಲಿ ಬಸವಣ್ಣನವರ ಮಹತ್ವವೆಷ್ಟು ಎಂಬ ವಿಷಯಕ್ಕೆ ಗಮನಕೊಡಲಾಗಿದೆ.

ಪಾಲ್ಕುರಿಕೆಯ ಸೋಮನಾಥನು ತೆಲುಗಿನಲ್ಲಿ ಬರೆದ "ಸಕಲ ನಿಗಮಾ ಗಮ ದಶಶೈವ ಪುರಾಣಗಳ ಸಂಗ್ರಹ" ವನ್ನೇ ಭೀಮಕವಿ ಕನ್ನಡಿಸಿದ್ದಾನೆ. ಗ್ರಂಥದ ಆದಿಯಲ್ಲಿ "ಗುರುಬಸವ ಮಹಾ ಗುರುವೆ, ಕಲಿಯುಗದೆರಡನೆಯ ಮುಕ್ಕಣ್ಣ ಬಸವಾ, ಬಸವ ಶರಣನೆ ಪಾಪವಳಿವುದು, ಬಸವ ಶರಣನೆ ಭಕ್ತಿದೊರಕುಗು, ಬಸವ ಶರಣೆನೆ ವಚನರಚನಾ ಸಿದ್ಧಿ ವರ್ಧಿಸುಗು. ದುಸ್ಥಿತಿ ಗಳೋಡುವುವು, ಕೀರ್ತಿಯೆಸೆವುದು, ಶೀಲ ವಿಮಲಮತಿಯುಳವಡುವುದು"

ಎಂದು ಮುಂತಾಗಿ ಶಿವಸ್ವರೂಪಿ ಬಸವಣ್ಣನನ್ನು ಸ್ಮರಿಸಿ ತನ್ನ ಕೃತಿ "ಬಸವ ಚರಿತ" ಕ್ಕೆ ಸಕಲ ಸನ್ಮಂಗಳಗಳನ್ನು ಕರುಣಿಸೆಂದು ಪ್ರಾರ್ಥಿಸುತ್ತಾನೆ.

ಇತರ ಕವಿಗಳಂತೆ ಭೀಮ ಕವಿಯೂ ತನ್ನ ಹಿಂದಿನ ಕವಿಗಳಾದ– "ಕೊಂಡಗೂಳಿಯ ಕೇಶಿಗಳ ಸಿರಿ| ಪಂಡಿತರ ಶಿವಲೆಂಕ ಮಂಚಣ| ಪಂಡಿತರ ಗುರುಮಲ್ಲಿಕಾರ್ಜುನ ಪಂಡಿತ"ರನ್ನು ನೆನೆದು ಅವರ ಕೃಪೆಯಿಂದ ಕೃತಿಯನ್ನು ಹೇಳುತ್ತೇನೆಂದು ತಿಳಿಸಿದ್ದಾನೆ. ಅಲ್ಲದೆ ತಾನು "ಉಭಯ ಕವಿತ್ವ ಸಮರ್ಥನೆಂದೂ, ದೇವನಾತ್ಮಜ" ನೆಂದೂ ಹೇಳಿಕೊಂಡಿದ್ದಾನೆ.

ವಿಸ್ತಾರವಾದ ಪೀಠಿಕೆ, ಉದ್ದುದ್ದವಾದ ವರ್ಣನೆಗಳು ಗ್ರಂಥದ ಉದ್ದಕ್ಕೂ ಕಂಡುಬರುವದರಿಂದ ಇದು ಸಂಪ್ರದಾಯಸ್ಥ ಲಕ್ಷಣಗಳಿಗೆಡೆ ಕೊಟ್ಟಿದೆ.

ಹರಿಹರ ಕವಿಯ 'ಬಸವರಾಜ ದೇವರ ರಗಳೆ' ಯ ಪ್ರಾರಂಭದಲ್ಲಿ ಮೇರುಪರ್ವತ, ಈಶ್ವರನ ಓಲಗದ ವರ್ಣನೆ ಔಚಿತ್ಯವನ್ನು ಮೀರದಂತೆ ವರ್ಣಿತವಾಗಿದೆ. ಭೀಮ ಕವಿಯೂ ಕೂಡ ರಜತಾದ್ರಿಯಲ್ಲಿ ಮನೋಹರವಾಗಿರುವ ಧೌತಶೈಲವನ್ನೂ, ರತ್ನ ಸಿಂಹಾಸನದ ಮೇಲೆ ಮಂಡಿಸಿ, ಸುರ ನರ ಕಿನ್ನರ ಕಿಂಪುರುಷ, ಅಷ್ಟದಿಕ್ಪಾಲಕರಿಂದ ಪೂಜಿಸಲ್ಪಡುತ್ತಿರುವ ದುರಿತ ಹರ ಮಂಗಳಮೂರ್ತಿ ಶಿವನನ್ನು ಮನೋಹರವಾಗಿ ವರ್ಣಿಸುತ್ತಾನೆ. ತರಣಿ ಶಶಿಗಳು ಶಂಕರನಿಗೆ ಚಾಮರವಿಡುತ್ತಿದ್ದರು. ಸುರಪಂ ಶ್ರೀಪದವನೊತ್ತುತ್ತಿದ್ದನು. ತ್ರಿಮುಖ್ಯರೂ ಭಕ್ತಿಯಿಂದ ಶಿವನನ್ನಾರಾಧಿಸುತ್ತಿದ್ದರು.

ಹೀಗೆ ಓಲಗ ಒಪ್ಪಿರಲು –

ಪೌರಾಣಿಕ ಕೃತಿಗಳಲ್ಲೆಲ್ಲಾ ಪ್ರಸಿದ್ಧಿಯಾಗಿರುವ ನಾರದ ಮಹಾ ಮುನಿಯು ಸಭೆಯನ್ನು ಪ್ರವೇಶಿಸಿ, 'ಭೂಲೋಕದಲ್ಲಿರುವ ಸಮಸ್ತ ಲಿಂಗವಂತರೂ ಶಿವಧರ್ಮವನ್ನು ಮರೆತು ಪರಮ ಪಾಷಂಡಿಗಳಾಗುತ್ತಿದ್ದಾರೆ. ನಿಮ್ಮ ಭಕ್ತಿಯ ತುದಿ ಮೊದಲಿದೆಂದೊಮ್ಮೆಯುಂ ಕಲೆದೋರದು' ಎಂದು ತಿಳಿಸುವನು. ಈಶ್ವರನು ತನ್ನ ಪ್ರತಿರೂಪಾದ ನಂದಿನಾಥಾಗ್ರೇಶ್ವರನನ್ನು ಬಳಿಗೆ ಕರೆದು ಭೂಲೋಕದಲ್ಲಿ ಖಿಲವಾಗುತ್ತಿರುವ ಶಿವಧರ್ಮವನ್ನುದ್ಧರಿಸು ಎಂದು ಆಜ್ಞಾಪಿಸುತ್ತಾನೆ. ಈ ಸಮಯದಲ್ಲಿ – ನಂದೀಶ್ವರನು ಯಾರು, ಆತನ

ಮಹತ್ವವೆಂಥದು, ಶಿಲಾದ ಮುನಿಗೆ ಪುತ್ರನಾಗಿ ಜನಿಸಲು ಕಾರಣವೇನು ? ಎಂಬ ವಿಷಯವನ್ನೆಲ್ಲಾ ಪಾರ್ವತಿಗೆ ತಿಳಿಸುತ್ತಾನೆ.

"ತನಗೊಬ್ಬ ಸುನಂದನನೊಲಿದೀಯಬೇಕೆಂಬ" ಭಕ್ತ ಶಿಲಾದಮುನಿಯ ಭೀಷ್ಟದಂತೆ ಶಂಕರನ ಅನುಜ್ಞೆಯಿಂದ ನಂದೀಶ್ವರನು ಭೂಲೋಕದಲ್ಲಿ ಜನಿಸುವನು. ಬಾಲ್ಯದಲ್ಲಿ 'ಪರಮ ತತ್ವಾಮೃತವೆ ಮೊಲೆವಾಲಾಗಿ, ರಹಸ್ಯ ಮೃದುಸೂಕ್ತಿಯೆ ತೊದಲ್ನುಡಿಯಾಗಿ ಬೆಳೆದ ಶಿಶು ಪರಿವ ತೊರೆಗಳ ನಡುವೆ ಚಳಿಗಾಲ ಮಳಿಗಾಲವೆನ್ನದೆ ಕೊರಳುದ್ದ ನೀರಿನಲ್ಲಿ ನಿಂತು ಉಗ್ರ ತಪವಾಚರಿಸಿದ ತಪಃ ಪ್ರಭಾವಕ್ಕೆ ಇಳೆ ನಡುಗಿತು. ಭಾನು ಅಸ್ತಮಿಸಿದ ದಿಗ್ಗಜಗಳು ಬೆದರಿ ಬ್ರಹ್ಮಾಂಡವಲ್ಲಾಡಿತು. ಭಯಭ್ರಾಂತರಾದ ಸುರನರ ಕಿನ್ನರರು ಕೈಲಾಸಪತಿಗೆ ಮೊರೆಯಿಟ್ಟರು. ಶಂಕರನು ಅವರಿಗೆ ಅಭಯವಿತ್ತು ನಂದಿಗೆ ಪ್ರಸನ್ನನಾಗಿ ಅಭೀಷ್ಟವೇನೆಂದು ಕೇಳಿದನು. "ಮದಹರ ನಿಮ್ಮ ಚಲಭಕ್ತಿ ಸುಪದವಿಯಂ ಕೃಪೆಯಿಂ ಪ್ರಸಾದಿಸಿ ಸಲಹು" ಎಂದು ಬೇಡಿದ. ನಂದಿಯ ಆಸೆ ಸಫಲವಾಯ್ತು. ನಂದಿ ತಪಸ್ಸು ಮಾಡಿದ್ದು ಶ್ರೀಗಿರಿಯ ನೈರುತ್ಯದಲ್ಲಿ ಆ ಸ್ಥಳವು ನಂದಿಮಂಡಲವೆಂಬ ಹೆಸರಿನಿಂದ ಪ್ರಸಿದ್ಧವಾಗಿದೆ.

ನಂದಿಯ ಈ ಪುಣ್ಯ ಚರಿತೆಯನ್ನು ಪಾರ್ವತಿಗರುಹಿ ನಂದಿಯನ್ನು ಬಳಿಗೆ ಕರೆದು ಅಪ್ಪಿ ಮುಂಡಾಡಿ, ಕೊಂಡಾಡಿ, "ಭೂಲೋಕಕ್ಕೆ ಹೋಗಿ ಸತ್ಕರ್ಮಗಳಿಗೆ ಕಾರಣನಾಗು, ಜಂಗಮವನುದ್ಧರಿಸು, ನಿನ್ನುವಂ ಗುರುಲಿಂಗ ರೂಪಾಗಿ ಬಂದು ವಂದಿಸುವೆ. ಪ್ರಾಣಲಿಂಗದೊಳಗಲದಿರ್ಪೆ. ಕೂಡಿ ಜಂಗಮನಾಗಿ ನಿನ್ನೊಡನಾಡುವೆ" ಎಂದು ಅಭಯವೀಯಲು ನಂದಿ ತನುವದೆಲ್ಲಂ ಕೈಗಳಾಗಿ ಶಂಕರಂಗಭಿವಂದಿಸಿ 'ಗಿರಿಯ ಪಡುವಣಕಡೆಯ ಕರ್ಣಾಟ ದೇಶದೊಳು, ಬಾಗೆವಾಡಿಯೊಳು ಅಗ್ರಹಾರ ಗ್ರಾಮದಲ್ಲಿ' ಮಂಡಿಗೆ ಮಾದಿರಾಜ ಮಾದಾಂಬಿಕೆಯವರಿಗೆ ಪುತ್ರನಾಗಿ ಜನಿಸುತ್ತಾನೆ.

ಬಸವೇಶ್ವರನ ಜನನ ವೃತ್ತಾಂತವು ಒಂದೊಂದು ಕೃತಿಯಲ್ಲಿ ಒಂದೊಂದು ವಿಧವಾಗಿದೆ. ಹರಿಹರನ ರಗಳೆಯಲ್ಲಿ ಕೈಲಾಸದಲ್ಲಿ ಅನೃತವನ್ನಾಡಿದ ತಪ್ಪಿಗಾಗಿ ಈಶ್ವರನಿಂದ ಶಾಪಹೊಂದಿದ ವೃಷಭ ಮುಖನು ಇಳೆಯಲ್ಲಿ ಜನ್ಮತಾಳುತ್ತಾನೆ. ಸಿಂಗಿರಾಜನು ವರ್ಣಿಸಿರುವ ರೀತಿಯೇ ಬೇರೆ. ಬಸವಣ್ಣನ ಅವತಾರಕ್ಕೆ ಕಾರಣ ಅದಕ್ಕೆ ಮುನ್ನ ನಡೆದ ಘಟನೆಗಳು ಇವುಗಳನ್ನು ವರ್ಣಿಸಿ ಅನಂತರ ಶಿವಸಭೆಯಲ್ಲಿ ಶಕ್ತಿಯ ಕಲೆಯಾದ ಕ್ರಿಯೆಗೂ ಶಿವನ ಕಲೆಯಾದ

ಭಾವಕ್ಕೂ ಉಂಟಾದ ಘರ್ಷಣೆಯ ಪ್ರಸಂಗವನ್ನು ತಿಳಿಸುತ್ತಾನೆ. ಕ್ರಿಯೆಯು ಅನಿಮಿಷರನ್ನು, ಭಾವವು ವೃಷಭನನ್ನೂ ಸೇರುವುವು. ದೇವತೆಗಳ ಪೀಡನೆಯಿಂದ ನೊಂದ ವೃಷಭನು, ಧರೆಯಲ್ಲಿ ಜನಿಸಿ ವಸುದೀಪ್ಯ ನಾಮಾಂಕಿತನಾದ ಅನಿಮಿಷನಿಗೆ ಇಷ್ಟಲಿಂಗವನ್ನು ಕೊಡುವನು. ಕೈಲಾಸಕ್ಕೆ ಹೋದಾಗ 'ಭವಿ' ಎಂದು ಅಲ್ಲಿನ ಗಣಂಗಳು ತಿರಸ್ಕರಿಸಿದ ಕಾರಣ ಮತ್ತೆ ಧರೆಗೆ ಬರುತ್ತಾನೆ.

ಭೀಮ ಕವಿಯು– ' ಈಶ್ವರನ ಪೂರ್ಣ ಕೃಪಾಕಟಾಕ್ಷವು ನಂದಿಯ ಮೇಲಿದ್ದು ಅವನು ಮೊದಲೇ ಮಹಾಭಕ್ತನಾಗಿದ್ದನೆಂಬುದನ್ನು ಬಹು ಸೊಗಸಾಗಿ ಚಿತ್ರಿಸಿದ್ದಾನೆ. ಸ್ವತಃ ಶಂಕರನಿಗೆ ನಂದಿಯನ್ನು ಕುರಿತು' ಎರಡನೆಯ ಶಂಕರ, ಅಸಮ ರೂಪನೆ ಬಸವ' ಎಂಬುದಾಗಿ ಆತ್ಮೀಯ ಸಂಬಂಧವನ್ನು ವ್ಯಕ್ತ ಪಡಿಸುತ್ತಾನೆ. ಬಸವಣ್ಣ (ನಂದಿ) ಲೋಕೋದ್ಧಾರ ಮಾಡಬಲ್ಲ ಶಕ್ತ, ಮಹಾಜ್ಞಾನಿ ಎಂಬ ತಿಳಿವು ಈಶ್ವರನಿಗಿದ್ದುದರಿಂದಲೆ ಅವನು ಬೇರೆ ಯಾರನ್ನೂ ಈ ಕೆಲಸಕ್ಕೆ ನಿಯಮಿಸದೆ ನಂದಿಯನ್ನೆ ಕಳುಹಿಸಿದನು.

ಮೂರನೆಯ ಪ್ರಕರಣದಲ್ಲಿ– ಆದಿ ವೃಷಭನು ಬಾಗೇವಾಡಿಗೆ ಬಂದು ಬಸವನಾಮದಿಂದ ಜನ್ಮಿಸುವ ವೃತ್ತಾಂತ ನಿರೂಪಿತವಾಗಿದೆ. ಸವಿಸ್ತಾರ ವರ್ಣನೆಗಳಿಂದ ಭೂಯಿಷ್ಟವಾಗಿ ಜೀವೋತ್ಪತ್ತಿ ವರ್ಣನೆ, ಪಿಂಡೋತ್ಪತ್ತಿ ವಿಧಾನ, ಮಾದಲಾಂಬೆಯ ಮೊರೆ ಮುಂತಾದ ವಿಷಯಗಳಿವೆ ಮುಕ್ಕಣ್ಣನು ಮಾದಲಾಂಬೆಯರಿಗೆ ಸ್ವಪ್ನದಲ್ಲಿ ಮೈದೋರಿ 'ನಿನ್ನ ಗರ್ಭದಲ್ಲಿ ಉದಯಿಸುವವನು ಮಹಾ ಶಿವಭಕ್ತ. ಅವನಿಗೆ ಬಸವನೆಂಬ ಅಭಿಧಾನವನ್ನಿಡಿ' ಎಂದು ತಿಳಿಸಿ 'ಗುರುವಾಕಾರಮಂ ತಾಳಿ ಗರ್ಭದಲ್ಲಿರುವ ಬಸವನಂಗದ ಮೇಲೆ ಲಿಂಗ ಸಂಗವಂ' ಮಾಡುತ್ತಾನೆ.

ಈ ರೀತಿಯಲ್ಲಿ ಬಸವಣ್ಣ 'ಬಾಲ ರವಿಯುದಯಿಸುವಂತೆ' ಮೂಡಿ ಬಂದ. ತಂದೆ ತಾಯ್ಗಳು ಶಿಶು ಜನಿಸಿದ ಕೂಡಲೆ 'ಜಂಗಮವ ಕರೆಸಿ ವಿಭೂತಿ ವೀಳಯವಿತ್ತರು. ಹರಶರಣ ಚರಣೋದಕದೊಳು ತರಳನ ಮೈತೊಳೆದರು, ಬಸವಣ್ಣನಾದರೂ ತನ್ನ ವಿಸ್ಮಯ ಬಾಲಲೀಲೆಗಳಿಂದ ಜಗತ್ತಿಗೇ ಅಚ್ಚರಿಯ ಕಂದನಾಗಿದ್ದನು. ಬಾಲಲೀಲೆಯಿಂದ 'ಮುತ್ತಿ ಬಹ ಮಾಯಾ ಪ್ರಪಂಚವ! ನೊತ್ತಲೀಯದೆ ಬೀಳಲೊದೆವೆಂ. ಇಳೆಗೆ ಬರಲು ತಳುವಿದೆನೆಂದು ಉಮ್ಮಳಿಸಿ ಹೆದರುವನು ಭಕ್ತಿಯ ನೆತ್ತವಂತೆ ತಲೆಯು

ನೆತ್ತುವನು. ಆದಿದೇವನ ಹೆಸರನ್ನು ತೊದಲುವನು. ಅವನು ಸ್ಮರಿಸಿದ ಕೂಡಲೆ ಸಕಲವಿದ್ಯೆ ಕೈಸಾರ್ದುದು' ಹರನೊಲಿದವರಿಗೆ (ಬರಡು) ಕೊರಡು ಕೊನರಿ' ಸಕಲ ಜ್ಞಾನ ಸಂಪದ ಕೈಗೂಡುವುದರಲ್ಲಿ ಆಶ್ಚರ್ಯವೇನು!

ಬಾಲರವಿಯಂತೆ ದಿನದಿನಕ್ಕೆ ಪ್ರವರ್ಧಿಸುವ ಬಾಲಕಂಗೆ ಉಪನಯನ ಮಾಡಲು ತಂದೆ ಪ್ರಯತ್ನಿಸುತ್ತಾನೆ. ಆದರೆ ಕಾರಣಿಕ ಬಸವನು "ಸಂಗಮೇಶನೆ ಎನಗೆ ಸದ್ಗುರು ಶಿವಾಚಾರವೇ ಮಾರ್ಗ. ಪರಮ ಗುರುಪದವ ಹಿಡಿದು ದುರ್ನರರಿಗೆರಗುವರೆ? ಕರ್ಮಜಡರ ಈ ಉಪನಯನದಿಂದ ಆಗಬೇಕಾದುದೇನು? ಭಸಿತ ರುದ್ರಾಕ್ಷಿಗಳ ಧರಿಸದೆ ಚರ್ಮದುರ್ಮುದ್ರೆಗಳ ಹೊದ್ದುವುದೆ? ನೀರು ನೇಣಿನ ಬಾಧೆ ಬೇಡ" ಎಂಬುದಾಗಿ ಶಿವಧರ್ಮದ ಪವಿತ್ರ ತತ್ವಗಳನ್ನು ತಿಳಿಸಿ ಉಪನಯನಕ್ಕೆ ವಿರೋಧಿಸುತ್ತಾನೆ. ತಂದೆ ಕೋಪಗೊಂಡು "ನೀಕುಲಕೆ ಗುದ್ದಲಿಯಾದೆ. ಜಾತಿಯವರ್ ನಿನ್ನಂ ಪೆರಶಿಕ್ಕುವರ್" ಎಂದೆನ್ನುತ್ತಾರೆ. ಅದಕ್ಕೆ ಬಸವಣ್ಣ – "ಬ್ರಹ್ಮ ಬೇರೆ, ಈಶಭಕ್ತ ಬೇರೆ. ಎರಡನ್ನೂ ಕೂಡಿಸಲಾಗದು. ಬೇರೆ ದೈವಂ, ಬೇರೆ ಮಂತ್ರಂ, ಬೇರೆ ಗುರುವುಂ, ಬೇರೆ ವೇಷಂ" ಹೀಗಿರುವಲ್ಲಿ ಉಪನಯನಕ್ಕೆ ಸಮ್ಮತಿಸುವುದು ಏಕೆ ? 'ಕಾಗೆ ಸಾಕಿದ ಕೋಗಿಲೆಯ ಮರಿ ಸುಸ್ವರದಿ ಕೂಗುವುದಲ್ಲದೆ ಕಾಗೆಯಂದದಿ ಕಾವು ಕಾವೆಂದರಚುವುದೆ ? ಹೇಳು. ನೀವು ಕಾರಣ ಮಾತ್ರರು. ಶಿವಪಾರ್ವತಿಯರೆ ನನಗೆ ನಿಜವಾದ ತಂದೆತಾಯಿಗಳು. ನಿನ್ನಯ್ಯ ತನವೇತಕ್ಕೆ ಸುಡು. ಅಯ್ಯನಯ್ಯನು ಚೆನ್ನಯ್ಯ ಚಿಕ್ಕಯ್ಯ ಕಕ್ಕಯ್ಯನು ತೆಲಗು ಜೊಮ್ಮಯ್ಯನಯ್ಯನು ನಿಂಬಿತಾಯ್ಯಾರಮನ ಮಗ ನಾನು! ವೀರ ಮಾಹೇಶ್ವರರೇ ಎನಗೆ ಗತಿ" ಎಂದು ಹೇಳಿ ಸಂಕುಚಿತ ಗೃಹವನ್ನು ತೊರೆದು ವಿಶಾಲ ವಿಶ್ವಗೃಹಕ್ಕೆ ಕಾಲಿಡುತ್ತಾನೆ. ಬಸವಣ್ಣನ ನಿಜಸಹೋದರಿ ನಾಗಲಾಂಬಿಕೆಯೂ ಜೊತೆಗೊಂಡು ಬರುತ್ತಿರಲು ಊರಿನ ನಾರಿಯರೆಲ್ಲಾ ಪ್ರಪಂಚದ ಶಿಶು ಚಂದ್ರಹಾಸನನ್ನು ತಂತಮ್ಮ ಮನೆಗಳಿಗೆ ಕರೆದು ಉಪಚರಿಸಿದಂತೆ ಭಕ್ತರು ಬಸವಣ್ಣನನ್ನು ಕರೆದೊಯ್ದು ಉಪಚರಿಸಿದರು. ಉಪನಯನಕ್ಕೆ ಬಂದಿದ್ದ ಮಾದಲಾಂಬೆಯ ಸೋದರ ಬಿಜ್ಜಳನ ಭಂಡಾರಿ ಬಲದೇವನು ಆದಿ ಶಿವಭಕ್ತ ಬಸವ ಕುಮಾರನಿದ್ದೆಡೆಗೈದಿ ತನ್ನ ಮಗಳು ಗಂಗಾಂಬಿಕೆಯನ್ನು ಇತ್ತು ಲಗ್ನಮಾಡಿದನು.

ಬಸವಣ್ಣನು ಜನ್ಮಿಸಿದಾಗ ಶಿವಪಾರ್ವತಿಯರು ಅವನಿಗೆ ತಂದೆತಾಯ್ಗಳೇ ಹೊರತು ಬೇರೆ ಇಲ್ಲನೆಂಬಂತೆ ಬಸವಣ್ಣನ ತಂದೆತಾಯ್ಗಳು ಶಿವೈ

ಕ್ಯರಾದರೆಂದು ಹರಿಹರನು ತಿಳಿಸುತ್ತಾನೆ. ತಂದೆಯೊಂದಿಗೆ ಕಲಹ ಮಾಡಿಕೊಂಡು ಗೃಹತ್ಯಾಗ ಮಾಡುವ ಈ ನಿಷ್ಠುರ ಪ್ರಸಂಗವನ್ನೆ ಅವನು ತಂದಿಲ್ಲ. ಅಲ್ಲದೆ ಬಸವಣ್ಣನ ಪತ್ನಿಯರಾದ ಮಾಯಿದೇವಿ ಗಂಗಾದೇವಿಯರ ಜನನ, ವಿವಾಹ ವೈಭವಗಳ ವಿಚಾರವೂ ಅಲ್ಲಿಲ್ಲ. ನಮಗೆಷ್ಟು ಬೇಕೊ ಅಷ್ಟೇ ಪ್ರಾಮುಖ್ಯ ವಿಷಯಗಳನ್ನು ತಿಳಿಸುವ ಶ್ರೇಷ್ಟವರ್ತಮಾನ ಪತ್ರಿಕೆಯಂತೆ ಹರಿಹರನು ಅನವಶ್ಯಕ ವಿಚಾರಗಳನ್ನೆಲ್ಲಾ ಕಳೆದು ಬಸವಣ್ಣನ ಪ್ರತಿರೂಪು ನಮ್ಮ ಚಿತ್ತಭಿತ್ತಿಯಲ್ಲಿ ಅಚ್ಚಳಿಯದಂತೆ ರೂಪಿಸಿದ್ದಾನೆ. ರಗಳೆಯಲ್ಲಿ ಸಿದ್ಧ ದಂಡಾಧೀಶನು ಬಿಜ್ಜಳನ ಭಾಂಡಾರಿಯಾಗಿದ್ದನೆಂದೂ ಅವನ ಪೋಷಣೆಯಲ್ಲಿ ಕರಣಿಕನಾಗಿದ್ದ ಬಸವಣ್ಣನೇ ಅವನ ಮರಣಾನಂತರ ಬಂಢಾರಿಯಾಗಿ ಮಂತ್ರಿ ಪದವಿಗೇರಿದನೆಂದು ವಿವರಿಸಲಾಗಿದೆ. ಈವಸ್ತು ವ್ಯತ್ಯಾಸಕ್ಕೆ ಕಾರಣ ತಿಳಿಯದು.

'ಬಸವ ಪುರಾಣ' ದಲ್ಲಿ ವರ್ಣಿತವಾಗಿರುವ ವಿವಾಹ ಸಂಭ್ರಮದ ದೃಶ್ಯ ಹರಿಹರ ಕವಿಯ "ಜಂಗಮ ಸೇವಾ ಪ್ರಕರಣ''ವನ್ನು ನೆನಪಿಗೆ ತರುತ್ತದೆ. ಜಂಗಮರನ್ನು ಕರೆದು ಉಪಚರಿಸುವ ವಿನಯ ಭಕ್ತಿಭಾವ ಕಿಂಕರತ್ವ ಇಲ್ಲಿಯೂ ಮೆರಗು ಪಡೆದಿದೆ.

ವಧು ಗಂಗಾದೇವಿಯ ವರ್ಣನೆಯು ವಿಸ್ತಾರವಾಗಿದ್ದರೂ ಮನೋಹರವಾಗಿದೆ. ಆಕೆ "ಭಾರತಿಗೆ ರತಿಗೆ ಪ್ರಲೋಮಜೆಗೆ ಅರುಂಧತಿಗೆ ಸೀತೆಗೆ ಜಾಹ್ನವಿಗೆ ರವಿಸತಿಗೆ ಸರಿಸಮ'' ಎಂದು ಕವಿ ವರ್ಣಿಸುತ್ತಾನೆ. ಹೀಗೆ "ವರ ಕೃಪಾವಲೋಕನ" ವೆಂಬ ಲಗ್ನದಲ್ಲಿ ಭಕ್ತರ ಹರಕೆಯ ಸತ್ಯ ಬಲ ಸಹಿತ ಭಕ್ತ್ಯಾಂಗನೆಯ ಕೈಹಿಡಿಯುತ್ತಾನೆ ಬಸವಣ್ಣ. ಹರಿಹರನು ಹೇಳಿರುವ ಮಾಯಿದೇವಿ ಎಂಬ ಮತ್ತೊಬ್ಬ ಪತ್ನಿ ಯಾರೋ ತಿಳಿಯದು.

ವಿವಾಹಾನಂತರ ಬಸವಣ್ಣ ಕಪ್ಪಡಿ ಸಂಗಮಕ್ಕೆ ಪ್ರಯಾಣಿಸುವ ಪ್ರಕರಣ ಚಿತ್ರಿತವಾಗಿದೆ. ಆದರೆ ರಗಳೆಯಲ್ಲಿ-ಕಪ್ಪಡಿ ಸಂಗಮದಿಂದ ಬಿಜ್ಜಳನ ಆಸ್ಥಾನಕ್ಕೆ ಹೋದಾಗ ಸಿದ್ಧದಂಡಾಧೀಶನು ಮಾಯಿದೇವಿ ಗಂಗಾದೇವಿಯವರನ್ನು ಬಸವಣ್ಣನಿಗಿತ್ತು ಲಗ್ನ ನೇರವೇರಿಸುತ್ತಾನೆ. ಕೂಡಲಿಯಲ್ಲಿ ಸಂಗಮೇಶ್ವರನನ್ನು ಕಂಡಾಗ ಬಸವಣ್ಣನವರಿಗುಂಟಾದ ಉಜ್ವಲ ಭಕ್ತಿರಸವನ್ನು ಭೀಮ ಕವಿಯೂ ಚೆನ್ನಾಗಿ ಚಿತ್ರಿಸಿದ್ದಾನೆ. ಸಂಗನೇ ತಾಪಸಿಯಾಗಿ ಬಂದು-"ಶಿವ ಲಾಂಛನವ ಧರಿಸಿದವರಂ ಶಿವನೆಂದೆ ನಂಬು. ಜಂಗಮರಿಗೆ

ಶರಣೆನ್ನು. ಭಕ್ತರ ನಿಂದಿಸುವವರಂ ದಂಡಿಸು. ಭಕ್ತಿಯೋಗಿಯಾಗು. ಪರ ವಧು ಪರಧನಕ್ಕಳುಪದಿರು. ಪರರ ಮರ್ಮವನೆತ್ತಿ ನುಡಿಯದಿರಣ್ಣ. ಜಂಗ ಮವ ನಾನೆಂದೆ ನಂಬಿರು. ಸತ್ಯವಾಡು'' ಎಂದು ಬಸದಣ್ಣನಿಗೆ ಬೋಧಿಸಿ ಮರೆಯಾಗುತ್ತಾನೆ. ಈ ದೃಶ್ಯವನ್ನು ಕಂಡು ಆಶ್ಚರ್ಯಭರಿತರಾದ ಪುರ ಜನರು" ಭಾಪುರೇ ಬಸವಣ್ಣ, ಸತ್ಯಲಾಪ ಭಾಪುರೆ, ಭಕ್ತವರ್ಧ ಭಾಪುರೇ ಭಾಪುರೆ ಎನ್ನಯ್ಯ ಲೋಕ ತಮಂಧ ಹರದೀಪ'' ಎಂದು ಸ್ತುತಿಸುತ್ತಿದ್ದರು.

ಬಸವರಾಜ ದೇವರ ರಗಳೆಯಲ್ಲಿ ಬರುವ ಬಸವಣ್ಣನವರ ಶಿವಪೂಜಾ ನಿತ್ಯಕ್ರಮ, ಪೂಜಾರಸ ನಿಮಗ್ನತೆಯ ಮಹತ್ವ ಸಂಗನಲ್ಲಿ ಒಂದಾಗಿ ಬೆರೆತು, ಹೋಗುವ ಜೀವಶಿವ ಸಾಮರಸ್ಯ ಚಿಂತಾರತ್ನ, ಈ ಪ್ರಸಂಗಗಳನ್ನು ಭೀಮ, ಕವಿ ಕೈಬಿಟ್ಟಿದ್ದಾನೆ.

ಕೆಲವು ದಿನಗಳಲ್ಲಿ ಬಿಜ್ಜಳನ ಭಾಂಡಾರಿ ಬಲದೇವನು ಶಿವಸಾಯುಜ್ಯ ಹೊಂದಲು ಬಿಜ್ಜಳನು ಆತನ ಬಂಧುಗಳೆಲ್ಲರನ್ನೂ ಕರೆಸಿ "ನಲಿವ ತವರು ಸೋದರರು ಮಕ್ಕಳುಗಳಾರಾಯ್ದೊಡೀತನ ಬಲು ನಿಯೋಗವನೆಲ್ಲವಂ ಪ್ರತಿ ಪಾಲಿಸುವರೊಳರೆ? " ಎಂದು ಕೇಳಲು ಅವರು 'ಬಸವರಸನೇ ಇದಕ್ಕೆ ತಕ್ಕ ವನು' ಎನ್ನುವರು ರಾಯನು. ಸಂಗಮದೇವರಿದ್ದಲ್ಲಿಗೇ ಹೋಗಿ "ನೀವು ಬಂದು ಸಚಿವರಾಗಬೇಕು. ಈ ಧರಿತ್ರಿಗೆ ನಿರುತವಧಿಪತಿ ನೀವೆಯಲ್ಲಾ. ಪುರಕೆ ಬಿಜಯಂಗೈದು ಉದ್ಧರಿಪುದು" ಎಂದು ಪ್ರಾರ್ಥಿಸಿಕೊಳ್ಳುತ್ತಾನೆ. ಬಸವರಸನು ಒಪ್ಪಿ ಹನ್ನೆರಡು ಗಾವುದದಳತೆಯ ಕಲ್ಯಾಣ ಪಟ್ಟಣಕ್ಕೆ ಜಗ ತ್ತಿನ ಕಲ್ಯಾಣವನ್ನು ಸಾಧಿಸಲು ಬರುತ್ತಾನೆ.

ಬಿಜ್ಜಳನು 'ಏಳುನೂರು ಮದಾಂಧ ಗಂಪಕರಾಳ ಬಂಧುರ ಸಿಂಧುರಂ ಗಳು ತೊಂಭತ್ತು ಸಾವಿರ ಲಾಲಿತೋತ್ತಮ ವಾಜಿಗಳು, ಲಕ್ಷದ ಮೇಲೆ ತೊಂಭತ್ತೆಂಟು ಸಾವಿರ ಕಾಲುಬಲಗಳನ್ನು ಒಪ್ಪಿಸಿ ಮೇಲೆನಿಪ ಇಬ್ಬರು ಬಾಂಧಾರಿಗಳೊಳಗೆ ಬಸವಣ್ಣನನ್ನು ಹಿರಿಯನನ್ನಾಗಿ ನೇಮಿಸುತ್ತಾನೆ.

ಜಗದ್ವಿಖ್ಯಾತನೂ ಶಿವಪೂಜಾದುರಂಧರನೂ ಆದ ಬಸವಣ್ಣನ ಪುಣ್ಯ ಸಂದರ್ಶನ ಪಡೆದು ಪುನೀತರಾಗಲು ಅಸಂಖ್ಯಾತ ಸ್ತ್ರೀಪುರುಷರು ಬರುತ್ತಿ ದ್ದರು. ಬಂದ ಸುಂದರಿಯರು ಬಸವಣ್ಣನಿಗೆ ವಿಭೂತಿ ವೀಳಯವೀಯು ತ್ತಿದ್ದರು. ವೀರಗಣಾಧಿಪರು, ನಟಕರು, ವಾರಿಜಾನನೆಯರು "ಈತನೆ ನಂದೀ ಶ್ವರ ಮೂರ್ತಿ, ತ್ರೈಭುವನಪಾವನನು ಸಂಗನ ಮನವೊಲಿಸಿ ಮಾತಾಡಿದ

ಮಹಾನುಭಾವ" ಎಂದು ಕೊಂಡಾಡುತ್ತಿದ್ದರು. ಅಷ್ಟರಲ್ಲಿ "ಹರಲಿಖಿತ ಓಲೆ ಯೊಂದು" ಎಲ್ಲಿಂದಲೋ ಬಂದು. ಭೂವರನ ಸಮ್ಮುಖದಲ್ಲಿ ಬಿದ್ದಿತು. ಅದು ಸಾಮಾನ್ಯ ಲಿಪಿಯಾಗಿರದೆ ಹಲವು ಭಾಷೆಗಳ ಸಮ್ಮಿಲನ ಲಿಪಿಯಾಗಿದ್ದಿತು. ತೆಲಗು ಲಿಪಿ, ನಾಗರ ಲಿಪಿ, ಗ್ರಂಥ ಲಿಪಿ, ಪಳೆಗನ್ನಡದ ಲಿಪಿ, ದ್ರಾವಿಡ ಲಿಪಿ, ಪಾರಿಸಿ ಲಿಪಿ, ಲಾಳ ಲಿಪಿ, ಮುಂತಾದ ಹಲವು ಲಿಪಿಗಳಿದ್ದ ಆ ಪತ್ರವನ್ನೋದಲು ಆಸ್ಥಾನದ ಕರಣಿಕರಿಗೆ ಸಾಧ್ಯವಾಗಲಿಲ್ಲ. ಅದನ್ನು ಓದಿ ಅರ್ಥವನ್ನು ತಿಳಿಸಿದವರಿಗೆ "ಅಮಾತ್ಯಾದಿ ಸಕಲ ನಿಯೋಗ ದೊಡೆತನವನ್ನು" ಕೊಡುವೆನೆಂದು ರಾಜನು ವಚನವಿತ್ತನು. ಬಸವಣ್ಣನು ಅದನ್ನು ಓದಿ– "ನಿನ್ನ ಚಾಳುಕ್ಯಾನ್ವಯದವರು ಮುನ್ನ ನಿಕ್ಷೇಪಿಸಿದ ಎಂಭತ್ತೆಂಟು ಕೋಟಿಧನ" ನಿನ್ನಸಿಂಹಾಸನದ ಕೆಳಗಿದೆ, ತೆಗೆಯಿಸೆನ್ನಲು ರಾಜನು ಆಸ್ಥಳವನ್ನು ಅಗೆಯಿಸಿದನು. ಬಸವಣ್ಣನು ಅದನ್ನು ತೆಗೆಯಲು ಹೋದಾಗ ಆತನ ಪುಣ್ಯ ಸ್ಪರ್ಶದಿಂದ ಅದು ನೂರ್ಮಡಿ ಮಿಗಿಲಾಯಿತು. ಬಸವಣ್ಣನ ಮಹಿಮೆ ಜಗಕಚ್ಚರಿಯಾಯಿತು. ಸಂತಸಗೊಂಡ ರಾಯನು ಪನ್ನಿಬ್ಬರು ಮಹಾಮಾತ್ಯರೊಳಗಗ್ರೇಶ್ವರನೆನಲು ಪಿರಿಯ ಗದ್ದುಗೆಯಲ್ಲಿ ಬಸವಣ್ಣನನ್ನು ಕುಳ್ಳಿರಿಸಿದನು. ಮಹಿಮಾಪುರುಷ ಬಸವಣ್ಣನಾದರೊ "ತರುಗಳೊಳು ಕಲಾವನೀಜಂ, ಗಿರಿಗಳೊಳು ಕನಕಾದ್ರಿ, ರತ್ನನಿಕರದೊಳಗೆ ಚಿಂತಾರತ್ನ, ಧೇನುಗಳೊಳಗೆ ಅಮರಧೇನು, ಹರಿಮುಖ್ಯಾಖಿಲ ದೇವರೊಳು ಶಂಕರಮಿರ್ಪವೊಲು" ಭಕ್ತ ಸಮೂಹದಲ್ಲಿ ಮಾಣಿಕ್ಯದಂತೆಸೆದನು.

ಎಲ್ಲಿಂದಲೋ ಬಂದ ಓಲೆ ಬಿಜ್ಜಳರಾಯನ ಮುಂದೆ ಬೀಳುವ ಪ್ರಕರಣವೇ ಹರಿಹರನ ರಗಳೆಯಲ್ಲಿಲ್ಲ. ಭೀಮ ಕವಿಯು ಈ ಪ್ರಸಂಗ ಕಲ್ಪನೆಯಿಂದ ಬಸವಣ್ಣನ ಮಹಿಮೆಯನ್ನು ರಾಯನಿಗೆ ಪ್ರದರ್ಶಿಸಿ ಆಸ್ಥಾನದಲ್ಲಿ ಹಿರಿಯ ಸ್ಥಾನ ಕೊಡಿಸಿದ್ದಾನೆ.

ಭಂಡಾರದ ಸಮಸ್ತ ಧನಕನಕ ರತ್ನಗಳನ್ನು ಜಂಗಮ ಸೇವೆಗಾಗಿ ಉಪಯೋಗಿಸಿದ ವಿಷಯ ಆರನೆಯ ಪ್ರಕರಣದಲ್ಲಿ ಚಿತ್ರಿತವಾಗಿದೆ.

ಬಸವಣ್ಣನವರು ನಿತ್ಯವೂ 'ಶಿವರಾತ್ರಿ' ಮಾಡುತ್ತಿದ್ದರು. ಭಕ್ತರನ್ನು ಅಚ್ಚ ಶಿವನೆಂದಿದ್ದರು. ಶರಣರಲ್ಲಿ ಲೋಪದೋಷಗಳನ್ನು ಭಿನ್ನ ಭಾವಗಳನ್ನೆಣಿಸುತ್ತಿದ್ದಿಲ್ಲ. "ಎಡದ ಕೈಯೊಳು ಕತ್ತಿ, ಬಲದ ಕೈಯ್ಯಲಿ ಮಾಂಸ ಬಾಯಲಿ ಸುರೆಯ ಗಡಿಗೆ, ಕೊರಳಲಿ ದೇವರಿರಲು ಅವರ ಲಿಂಗನೆಂಬೆ

ಜಂಗಮವೆಂಬೆ" ಎಂದು ವಚನಗಳಲ್ಲಿ ಸಾರಿದ್ದಾರೆ. 'ಸರ್ವಭೂತೇಷು ಚಾತ್ಮಾನಂ ತತೋನ ವಿಜುಗುಪ್ಸತೆ' ಎಂಬ ಅವಿನಾಭಾವ, ಅಭೇದ ಪ್ರವೃತ್ತಿ ಇದೇ ಅಲ್ಲವೆ ?

ಅವರಿಗೆ ಅನೇಕ 'ಭಾಷೆ'(ನಿಷೆಂ)ಗಳ ತಿಳಿವಿದ್ದಿತು. ಅವುಗಳಲ್ಲಿ ಭಕ್ತರ ನುದಾಸೀನದಿ ನುಡಿವ ನುಡಿಗೇಳದಿಹ ಭಾಷೆ, ಹರಗಣಾರ್ಪಿತವಲ್ಲದಿನಿತಂ ಮುಟ್ಟದಿಹ ಭಾಷೆ, ನರರುಮಂ ಯಾಚಿಸದ ಭಾಷೆ, ಇತರ ಜನಕೆ ಕೈಸುಗಿಯದ, ಶಿವೈಕ್ಯ ಭಕ್ತಿಯನಲರಿಸುವ ಭಾಷೆಗಳು ಅವರಿಗೆ ಬಹು ಅಚ್ಚುಮೆಚ್ಚು. ಈ ನಿಷ್ಠೆಗಳ ಪ್ರತಿಪಾಲನೆಯ ಪ್ರತಿಮೂರ್ತಿಯೆ ಪ್ರಮಥಾದಿ ಬಸವ ಅವನ ಮಹಿಮೆ, ನಿಷ್ಠೆನಿಯಮಗಳನ್ನು ವರ್ಣಿಸಲು ಯಾರಿಗೆ ಸಾಧ್ಯ, 'ಬಸವ ರಾಜನೆ ಬಲ್ಲ'

ಹೀಗೆ ಬ್ರಹ್ಮಪದವಿ, ರುದ್ರಪದವಿ, ವಿಷ್ಣುಪದವಿ ಮತ್ತಾವ ಪದವಿಗಳನ್ನೂ ಒಲ್ಲದೆ, ಕೂಡಲ ಸಂಗಮದೇವನ ಸದ್ಭಕ್ತರ ಪಾದವನರಿದಿಪ್ಪ ಮಹಾ ಪದವಿಯ ಹಂಬಲದಿಂದ ಗುರುವನೊಲಿಸಲು ತನುವನ್ನೂ, ಲಿಂಗವನೊಲಿಸಲು ಮನವನ್ನೂ ಜಂಗಮವನೊಲಿಸಲು ಧನವನ್ನೂ ಕೊಟ್ಟು ಭಕ್ತ ಮಹಾರಾಜನಾಗಿದ್ದ ಬಸವಣ್ಣನ ಕೀರ್ತಿ ಕಿರಣ ಎಲ್ಲೆಡಿಯೂ ಬೆಳಗಿತು. ಜಂಗಮರ ಕಾಟಬೇಟವೆನ್ನುವ ಬಸವರಾಜನ ಪುಣ್ಯ ಸಂದರ್ಶನಕ್ಕೆ ತವಕಿಸದ ಮಾನವರೂ ಉಂಟೆ ? ಘನ ಜಟಾಧರರು, ಲಿಂಗಧಾರಿಗಳು, ಯತಿಗಳು, ಪಾಕಾದಿವರ್ಜಿತರು, ಪರಮಲಿಂಗ ಧ್ಯಾನವಂತರು, ಭವಿಜನ ಸಮೂಹ, ಮಾನಿಗಳು ಮೌನಿಗಳು ಶಿವಾನುಭವಿಗಳು, ಕವಿ ಕಮಕಿ ವಾದಿಗಳೆಲ್ಲರೂ ಅಯಸ್ಕಾಂತದಿಂದಾಕರ್ಷಿತ ವಾಗುವ ಕಬ್ಬಿಣದಂತೆ ಭಕ್ತಿರಸ ಭಾವಸೆಳೆತಕ್ಕೊಳಗಾಗಿ ಬರುತ್ತಿದ್ದರು.

ಬಸವಣ್ಣನ ದರ್ಶನಾಪೇಕ್ಷಿಗಳಾಗಿ ಬರುತ್ತಿದ್ದ ಸ್ತ್ರೀಸಮೂಹ, ಭಕ್ತ ಸಮೂಹದ ವರ್ಣನೆ ಅನುಭಾವಿಕವಾಗಿಯೂ ವೈವಿಧ್ಯ ರಸೋಲ್ಲಾಸಗಳಿಂದ ಭೂಯಿಷ್ಟವಾಗಿ ಚಿತ್ತಾಕರ್ಷಕವಾಗಿದೆ. ಸ್ವಲ್ಪ ಹೆಚ್ಚೆನಿಸಿದರೂ ಅದು ರಸ ಭರಿತವಾಗುವದರಿಂದ ಬೇಸರ ಕಂಡುಬರದು. ಬಯಸಿ ಬಂದ ಭಕ್ತ ಸಂಕುಲವನ್ನು ಸ್ತ್ರೀ ಸಮೂಹವನ್ನು ನೋಡುತ್ತಾ (ಏಕಸದ್ವಿಪ್ರಾ ಬಹುದಾವದಂತಿ'ಯ ರಹಸ್ಯಕ್ಕೆ ತಲೆದೂಗುತ್ತಾ) ಇರವನ್ನು ಮರೆತು ಕುಳಿತು ಬಿಡುತ್ತೇವೆ ಪುಂಗನಾಯದಕ್ಕೆ ಮೈಮರೆತು ಮನವುಕ್ಕೆ ತಲೆಯೊಲೆಯುವ ಫಣಿ

ರಾಜನಂತೆ ಕವಿಯ ವರ್ಣನಾ ಚಮತ್ಕಾರ, ಇಂದ್ರಜಾಲ ಮಹೇಂದ್ರ ಜಾಲಕ್ಕೆ ವಶರಾಗಿ ಬಿಡುತ್ತೇವೆ. ವಾಚಕರ ಇರವನ್ನೆ ಮರೆಸಿ ತನ್ನೆಡೆಗೆ ಸೆಳದುಕೊಳ್ಳುವುದೇ ಉತ್ತಮಕಾವ್ಯವಲ್ಲವೆ?

ಪ್ರಾಚೀನ ಪುರಾಣೇತಿಹಾಸಗಳಲ್ಲಿ ಉಲ್ಲೇಖಿತವಾಗಿರುವ ಭಾರತದ ಐವತ್ತಾರು ದೇಶಗಳಿಂದಲೂ ಭಕ್ತರು ಬಂದರೆಂದು ಕವಿ ತಿಳಿಸುತ್ತಾನೆ. ಎಲ್ಲ ಜಾತಿಯ ಶಿವಭಕ್ತರ ವಿವರವೂ ವರ್ಣಿತವಾಗಿದೆ. ಹರಿಹರನ ರಗಳೆ, ಇನ್ನಿತರ ಶಿವಸಂಬಂಧ ಪುರಾಣಗಳಲ್ಲಿಯೂ ಭರತಖಂಡದ ಚಪ್ಪನ್ನ ದೇಶಗಳ ಹೆಸರು ಉಲ್ಲೇಖಿತವಾಗಿರುವುದರಿಂದ ಬಸವಣ್ಣನವರ ಜೀವನಕ್ಕೆ ಶಾಶ್ವತ ಇತಿಹಾಸವಿದೆ. ಭೀಮಕವಿಯ ಹೇಳಿರುವ ದೇಶಗಳಲ್ಲಿ ಈಗಲೂ ಕೆಲವು ಅದೇ ಹೆಸರಿನಲ್ಲಿವೆ. ಮತ್ತೆ ಕೆಲವು ಬದಲಾವಣೆಹೊಂದಿವೆ. ಈಗಿನ ಹೈದರಾಬಾದ ಸಂಸ್ಥಾನವೇ ಕಲ್ಯಾಣಪಟ್ಟಣವೆಂಬ ಅಂಶವನ್ನು ಸಕಲರೂ ನಿಸ್ಸಂಶಯವಾಗಿ ಸಿದ್ಧಾಂತಿಸಿದ್ದಾರೆ.

ಪುಷ್ಪವನ್ನು ಎಲ್ಲಿ ಮುಚ್ಚಿಟ್ಟರೇನು? ಅದರ ಪರಿಮಳವು ಎಲ್ಲೆಡೆಯೂ ಪ್ರಸರಿಸುವದರಲ್ಲಿ ಸಂಶಯವಿಲ್ಲ. ಅದೇ ರೀತಿ ಬಸವಣ್ಣನವರು ಕಲ್ಯಾಣ ಪಟ್ಟಣದಲ್ಲಿದ್ದರೂ ಅವರ ಭಕ್ತಿ ಪರಿಮಳವು ಎಲ್ಲೆಡೆಗೂ ಪ್ರಸರಿಸಿತು. ಪೌರ್ಣಮಿಯ ಚಂದ್ರ ದರ್ಶನಕ್ಕಾಶಿಸಿ ಕಾತರಿಸುವ ಅಂಬೋಧಿಯಂತೆ ಭಕ್ತಾಂಬೋಧಿಯು —

ಲಾಳ, ಮಾಳವ, ಸಿಂಧು, ಸಿಂಹಳ, ಗೌಳ, ಗುರ್ಜರ, ಮಗಧ, ಪಾಂಚಾಳ, ಮತ್ಸ್ಯ, ಕುರಂಗ, ವಂಗ, ಕಳಿಂಗ, ಬಂಗಾಳ, ಕಾಳ, ಆಂಧ್ರ, ತುರುಷ್ಕ, ಕುರು, ನೇಪಾಳ, ಕುಂತಳ, ಕುಕುರ, ಬರ್ಬರ, ಚೋಳ, ಪಾಂಡ್ಯ, ತುಳುವ, ಮಲೆಯಾಳ, ಕರ್ಣಾಟ, ಚಾರು, ಕೊಂಕಣ, ಪಲ್ಲವಕ, ಹಮ್ಮೀರ, ಚಾಳಾಂದ್ರ, ದ್ರವಿಳ, ಕಾಶ್ಮೀರ, ಬಾಹ್ಲಿಕ, ಬೋಟಭೂ, ಕಾಂಭೋಜ, ಕನೋಜ, ಶೂರಸೇನ, ವರಾಳ, ಕರ್ಪಶ (ಕರ್ಪರ), ಪಾರಿಯಾತ್ರಕ, ಕೇರಳ, ಮುಖಾವಾರ ದೇಶಂಗಳೊಳಿಸೆವ ಸಮಸ್ತ ಭಕ್ತ ಕುಲವೂ ಭಕ್ತಾಂಬೋಧಿ ಬಸವಣ್ಣನನನ್ನು ಸದರ್ಶಿಸಲು ಬಂದರು. (ಸಂಧಿ ೬ ಪುಟ ೪೭. ಪದ್ಯ ೧೯ - ಬಸವಪುರಾಣ)

ಬಂದ ಭಕ್ತರನ್ನಾಹ್ವಾನಿಸಲು ಹಾಕಿದ್ದ ರಂಗವಾಲಿ ತೋರಣಗಳಿಂದ ಲಂಕೃತವಾದ ಚಪ್ಪರಗಳು ಅಂಬರವನ್ನು ಚುಂಬಿಸಿದವು. ಎಲ್ಲೆಲ್ಲಿಯೂ ಉಘೇ, ಉಘೇ, ಚಾಂಗು, ಬಲ, ಎನ್ನುವ ಉತ್ಸಾಹ ಧ್ವನಿ ಕೇಳಿಬರುತ್ತಿತು. ಬಸ

ವಣ್ಣನವರಾದರೂ ಭಕ್ತಿ ಆವೇಶಗಳಿಂದ ಪುಳಕಿತರಾಗಿ "ಭಕ್ತಕೋಟಿ ನುನಿದಿ ಗೊಳುತ ಭಯಭಕ್ತಿ ಪ್ರಿಯೋಕ್ತಿಗಳಿಂದ ಆರಾಧಿಸುತ್ತಾ ಸಾಷ್ಟಾಂಗವೆರಗಿ ಜಂಗಮ ಚರಣರಜ ಶಯನದಲ್ಲಿ ಹೊರಳಿ ಹೊರಳಿ, ಹರಶರಣ ಕರುಣಾ ಮೃತದ ಮಳೆಯಲ್ಲಿ ತೊಯ್ದು ತೊಯ್ದು" ತೃಪ್ತಿಪಟ್ಟರು. ಈಶ್ವರನ ಗಣಾಂಘ್ರಿಯ ಜಲದ ಕಡಲೊಳೋಲಾಡಿದರು. ಭಕ್ತರಿಗೆ ಮಣಿದರು. ಅವರು ಬೇಡಿದ ಪರಿಪರಿಯ ಇಷ್ಟಾರ್ಥಗಳನಿತ್ತರು. ಹೇಮಮಣಿ ಭೂಷಾಣಾವಳಿಗಳಿಂದ ಗಣಾವಳಿಯ ತಣಿಸಿದರು. ಭಕ್ತಿಯಲಿ ಇತರರಿಗೆ ಮಿಗಿಲೆನಿಸಿ ಅಸಾಮಾನ್ಯರಾದರು. ಅನುಪಮರಾಗಿ ಅದ್ವಿತೀಯರಾಗಿ ಮೆರೆದರು. ಹೋಗುತ್ತಲೂ ಕೊಯ್ಯುವ ಬರುತ್ತಲೂ ಕೊಯ್ಯುವ ಗರಗಸ ಸಮಾನವಾದ ಭಕ್ತಿಯೋಗವನ್ನು ಏಕೈಕ ನಿಷ್ಠೆಯಿಂದ ಸಾಧಿಸಿ ಸಿದ್ಧರಾದರು. (ಅವರು ಕಲ್ಯಾಣ ಪಟ್ಟಣದಲ್ಲಿ ಮಾಡುತ್ತಿದ್ದುದು ಭಕ್ತಿರಾಜ್ಯ)

ಜಂಗಮ ಸೇವಾ ಪ್ರಕರಣವನ್ನು ಭೀಮಕವಿಯು ಇಷ್ಟೊಂದು ಮನೋಜ್ಞವಾಗಿ ಚಿತ್ರಿಸಿದ್ದರೂ ಅದು ಹರಿಹರನ ಚಿತ್ರಣದಷ್ಟು ಪರಿಪೂರ್ಣವಾಗಿಲ್ಲ. ಜಂಗಮರನಿದಿರ್ಗೊಂಬ, ಅವರ ನಾರಾಧಿಸಿ ಸತ್ಕರಿಸಿ ಕೀರ್ತಿಸುವ ಸ್ವಕ್ಥಾಲಾಪವನ್ನು ಹರಿಹರನ ರಗಳೆಯಲ್ಲಿ ನೋಡಬೇಕು. ಶಿವಪೂಜಾ ನಿಮಗ್ನರಾಗಿರುವ ಆ ಜಂಗಮ ಸಮೂಹದ ಸಂಭ್ರಮ ವೈಭವವೇನು, ವಿವಿಧ ಪುಷ್ಪಗಳಿಂದ ವಿವಿಧ ರೀತಿಯಲ್ಲಿ ಶಿವನನಾರಾಧಿಪ ಉತ್ಸಾಹವೇನು. ಅವನ್ನು ಓದಿ ಅನುಭಾವಕ್ಕೆ ತಂದುಕೊಂಡೇ ತಿಳಿಯಬೇಕು. ಜಂಗಮರ ಆರೋಗಣೆಗಾಗಿ ಸಿದ್ಧವಾಗಿದ್ದ ವಿವಿಧ ರುಚಿಯ ಭಕ್ಷ್ಯ ಭೋಜ್ಯಗಳು, ಪಕ್ವಾನ್ನಗಳು.... ಎಂಥವರಿಗಾಗಲಿ ಶಿವಪೂಜೆಗಲ್ಲದಿದ್ದರೆ ಹೋಗಲಿ ಆ ರುಚಿರ ಭಕ್ಷ್ಯಗಳನ್ನು ತಿನ್ನುವದಕ್ಕಾದರೂ ಕೊನೆಯ ಪಕ್ಷ ಕಣ್ಣಿಂದ ನೋಡಿ ತೃಪ್ತಿಪಟ್ಟುಕೊಳ್ಳುವುದಕ್ಕಾದರೂ ಜಂಗಮರಿಗಾಗಿ ಹೋಗಬೇಕೆಂಬ ಆಸೆಯಂಕುರಿಸುತ್ತದೆ. ಹರಿಹರನ ಜಂಗಮಸೇವಾ ಪ್ರಕರಣ ಅದೊಂದು ಜೀವಂತ ಚಿತ್ರ ಭೀಮಕವಿಯಲ್ಲಿ ಅಷ್ಟೊಂದು ಆವೇಶ, ಉದ್ವೇಗ ವ್ಯಕ್ತವಾಗುವದಿಲ್ಲ. ಹೇಳಬೇಕಾದ ವಿಷಯವನ್ನು ಗಂಭೀರವಾಗಿ ಘನತೆಯಿಂದ ಚಿತ್ರಿಸುತ್ತಾನೆ.

ಚನ್ನಬಸವಣ್ಣನು ನಾಗಲಾಂಬೆಗೆ ಪುತ್ರನಾಗಿ ಜನಿಸುವ ವೃತ್ತಾಂತವು ಏಳನೆಯ ಸಂಧಿಯಲ್ಲಿ ನಿರೂಪಿತವಾಗಿದೆ.

ಪರಮಭಕ್ತಿಯೆ ಸತತ ಹರಣವಾಗುಳ್ಳ ನಾಗಲಾಂಬೆಗೆ ವರತನೂಭವನೂ, ಅಪಗತೋಭಯ ಕರ್ಮ ದುರ್ಭಯನೂ, ಬಸವ ಕರುಣಾಹಸ್ತ

ಸಂಭೂತನೂ ಮಂಗಳಾಂಗ ಸರಳಾಂಗನಾದ ಚನ್ನಬಸವನು ಜನಿಸುತ್ತಾನೆ. ಆ ಮಹಿಮನ ನೆಲೆಯನ್ನು ಬಸವನೆ ಗಣಿಸಬಲ್ಲ ಚನ್ನಬಸವಣ್ಣನು ಸತತವೂ ಬಸವಾಂಘ್ರಿ ಕಮಲವನರ್ಚಿಸುತ್ತ ಸುಖವಾಗಿದ್ದನು. ಇಷ್ಟು ವಿಷಯವಲ್ಲದೆ ಬಸವಣ್ಣ ಚನ್ನಬಸವಣ್ಣನವರಿಗೆ ಸಂಬಂಧಿಸಿದ ಬೇರಾವ ವಿಚಾರವನ್ನೂ ಕವಿ ತಿಳಿಸಿಲ್ಲ.

ಚಾಮರಸ ಕವಿಯು "ಪ್ರಭುಲಿಂಗ ಲೀಲೆ" ಯಲ್ಲಿ ಬಸವಣ್ಣನಿಂದಾಹ್ವಾನಿತನಾಗಿ ಪ್ರಭುದೇವರು 'ಶೂನ್ಯ ಸಿಂಹಾಸನ' ವೇರಲು ಬರುವ ಪ್ರಸಂಗವಿದೆ. ಆದರೆ ಭೀಮಕವಿಯ 'ಬಸವ ಪುರಾಣ' ದ ಎಂಟನೆಯ ಸಂಧಿಯಲ್ಲಿ ಬಸವಣ್ಣನ ಭಕ್ತಿಪ್ರಭೆಯಿಂದಾಕರ್ಷಿತನಾಗಿ ಪ್ರಭುದೇವರೆ ಬಸವಣ್ಣನ ದರ್ಶನಾಪೇಕ್ಷೆಯಾಗಿ ಬರುತ್ತಾನೆ. ಪ್ರಭುದೇವರ ಜೀವನ ವೃತ್ತಾಂತವಾವುದನ್ನೂ ಕವಿ ತಿಳಿಸಿಲ್ಲ. 'ಪ್ರಭುಲಿಂಗ ಲೀಲೆ' ಯಲ್ಲಿ ಚಿತ್ರಿತವಾಗಿರುವ ಪ್ರಭುದೇವರ ವಿಸ್ತಾರ ಜೀವನ 'ಚರಿತ್ರೆ, ಶೂನ್ಯ ಸಿಂಹಾಸನ ಪ್ರಕರಣ' ವಾಗಲಿ ಹರಿಹರನ ಪ್ರಭುದೇವರ ರಗಳೆಯ ಕಥಾಸಂಬಂಧವಾಗಲಿ ಇಲ್ಲಿಲ್ಲ. (ಪುಟ ೫೧, ಪದ್ಯ ೬)

ಹೀಗೆ ಚರಲಿಂಗಮೂರ್ತಿ ಪ್ರಭುವು– "ಪರಕರಸ್ಥಲಲಿಂಗ । ತನ್ನುವಂ ಮರೆದು ತರುವಿಡಿದ ಗಿಡ ಬೆಟ್ಟ ಘಟ್ಟ ಅಡವಿ ತೊರೆ ಹಳ್ಳವೆಂಬ ವಿವರವುಡುಗಿ ನೆಳಲಂ ಬಗೆಯದೆ' ಭಕ್ತಿಸಾಗರ ಬಸವಣ್ಣನನ್ನು ನೋಡಲು ಬಂದನು. (ಪದ್ಯ ೧೦) "ಸಂಗಮೇಶನ ವರತನುವಿನೊಳೋಲವ ಪ್ರಭುವರು ಲಿಂಗವೇ ಪ್ರಾಣವಾಗುಳ್ಳ ಶಿವಯೋಗಿ, ಪ್ರಣವಾತ್ಮನೂ ನಿರ್ಗುಣಿಯೂ ಆದ ಬಸವನಂ ಕಂಡು ಶರಣೆಂದನು. ಭಕ್ತಿ ಭಾಂಡಾರಿಯು ಕಣ್ ಬಂದಂತೆ, ಉಸಿಕ್ ಬಂದಂತೆ' ದೇವ ಮಮಗುರುಲಿಂಗ ಜಂಗಮದೇವ' ಎಂದು ಸ್ತುತಿಸುತ್ತಾ ನಮಿಸಿದರು.

ಶಿವಸ್ವರೂಪಿ ಪ್ರಭುವನ್ನು ಅಮಿತಾದರಗಳಿಂದ ಸತ್ಕರಿಸಿ ಸುರಗಿಯ ಚೌಡರಸನಂದು ಶಿವಗೆ ನೀಡಿದ ತೆರದಿ ಹರಿಯಾಣದಲ್ಲಿ ಪಂಚಪಕ್ವಾನ್ನವನ್ನು ನೀಡುತ್ತಾನೆ. ಆಗಸವೇ ಬಾಯ್ತೆರೆದಂತೆ ಪ್ರಭುವು ಲಕ್ಷದ ಮೇಲೆ ತೊಂಭತ್ತಾರು ಸಾವಿರ ಜಂಗಮಕ್ಕೆ ಮಾಡಿದ ಪದಾರ್ಥವನ್ನೆಲ್ಲಾ ಉಂಡನು. ಉಂಡು ತೃಪ್ತನಾಗಿ 'ಮಾಮಾ' ಎಂದು 'ಹೋ ಹೋ' 'ಎಂದು, 'ಭಾಪು ಭಾಪುರೆ' ಎಂದು ತೇಗುತ್ತ ನಗುತ್ತ ಬಸವಣ್ಣನನ್ನು ಕುರಿತು– "ಮಿಸುಪ

ಮಾಣಿಕದೊಳಗೆ ದೀವಿಗೆ, ಅಮೃತಮೊಳು ಮಲಯಜ, ವೃಕ್ಷದೊಳು ಕುಸುಮ, ಅಭಿನವ ಚಿತ್ರರೂಪಿನೊಳ್ ಅಸುವು ಪೊಸೆದೊಗೆದ ಪೊಲ್ ಪೊಗೆದೆ ಮಗನೆ. ವಿದ್ಯಾಪಂಡಿತೋತ್ತಮ ಬಸವ, ಭಕ್ತರತ್ನ ಕರಂಡ ಬಸವ, ಆದಿ ಬಸವ, ರುದ್ರಗಣಾಧಿ ಪ್ರಮಥ ಬಸವ, ಯುಗಾದಿ ಬಸವಾ, ಪುರಾತನರ ಬಸವಾ, ನಾದ ಬಿಂದು ಕಳಾಧಿ ಬಸವ, ಆದ್ಯರ ಬಸವ, ವೇದ್ಯರ ಬಸವಾ, ಸಿದ್ಧರಸ ಬಸವಾ, ಜಂಗಮ ಬಸವಾ, ಷಡ್ಗುರು ಬಸವಾ ಬಸವ ಎಂದು ಸಿರಿದೊಡೆ ವಿಷವಮೃತವಹುದು. ಬಸವ ಬಸವಾ ಎಂದೊಡೈದದೆ ಫಲವು? ಲಿಂಗ ಸುಖ ಕೇಳಿ ವಿಲೋಲಾ" ಎಂದು ಕೊಂಡಾಡಿ ಮುಂಡಾಡುತ್ತಾರೆ.

'ಜೀವನೊಲಿದರೆ ಶಿವನೊಲಿದಂತೆ' ಎಂಬ ತತ್ವವನ್ನು ಭೀಮಕವಿಯೂ ಪ್ರತಿಪಾದಿಸಿದ್ದಾನೆ. ಅಲ್ಲಮನ ವೃತ್ತಾಂತವನ್ನು ಇದಕ್ಕೆ ಉದಾಹರಣೆಯಾಗಿ ಉಪಯೋಗಿಸಿಕೊಂಡಿದ್ದಾನೆ.

ಭೀಮ ಕವಿಯ ದೃಷ್ಟಿಯಲ್ಲಿ ಅಲ್ಲಮನು, ಊರುಕೇರಿಗಳೆನ್ನದೆ, ಗಿರಿ ಗಹ್ವರಗಳೆನ್ನದೆ ತಿರುಗುವ ಮಹಾಚರಲಿಂಗ. ಅನುಭಾವಿ. ಜೀವ ಶಿವ ಬೇಧ ವರಿಯದ ಮಹಾತ್ಮ ಎಂಬುದನ್ನು ಕವಿಯು ಚೆನ್ನಾಗಿ ಚಿತ್ರಿಸಿರುತ್ತಾನೆ. ಅಲ್ಲಮನ ದೃಷ್ಟಿಯಲ್ಲಿ ಬಸವಣ್ಣನ ಪರೀಕ್ಷೆಯೇ ಅನುಚಿತವೆಂಬಂತೆ ಕಾಣು ತ್ತದೆ. ಬಸವಣ್ಣನಾಗಲೆ ಪರಿಪೂರ್ಣ ಭಕ್ತಯೋಗಿಯಾಗಿ ನಿಸ್ಸೀಮತ್ವ ಸಾಧಿ ಸಿರುವುದನ್ನು ಮೆಚ್ಚಿ ಕೊಂಡಾಡುತ್ತಾನೆ ಮಾತ್ರ. ಉಪದೇಶಕ್ಕೆ ಪ್ರಾರಂಭಿ ಸುವುದಿಲ್ಲ. 'ಶೂನ್ಯ ಸಿಂಹಾಸನಾರೋಹಣ ಪ್ರಕರಣವೇ ಇಲ್ಲಿಲ್ಲದಿರುವುದು ಗಮನಿಸತಕ್ಕ ಅಂಶ.

ಪ್ರಭುದೇವರಂತಹ ಮಹಾತ್ಮರ ಮೆಚ್ಚುಕೆಯ ಮಾತುಗಳು ಬಸವ ಣ್ಣನವರ ಪಾತ್ರಕ್ಕೆ ಮೆರುಗಿತ್ತು ಹಿರಿಮೆಯನ್ನುಂಟುಮಾಡಿವೆ.

ಒಂಭತ್ತನೆಯ ಸಂಧಿಯಲ್ಲಿ ಬಸವಣ್ಣನನ್ನು ಮೋಸಗೊಳಿಸಲು ಬಂದ ಬಂಡಿಕಾರರು ಭಕ್ತರಾಗಿ, ಜೋಳ ಮುತ್ತಾದ ಪ್ರಸಂಗಗಳ ಚಿತ್ರಣವಿದೆ. ಕಪಟಿಯೇ ಆಗಲಿ ಕಳ್ಳನೇ ಇರಲಿ ಲಿಂಗಧಾರಣ ಮಾಡಿದ್ದರೆ ಬಸವಣ್ಣ ನವರು ಅವರನ್ನು ನಂಬುತ್ತಿದ್ದರು. ಇದನ್ನು ತಿಳಿದ ಕೆಲವು ಮಂದಿ ತಸ್ಕ ರರು ಕರಿಯ ಬದನೆಕಾಯಿಗಳನ್ನು ಕಕ್ಷಪುಟದಲ್ಲಿ ಧರಿಸಿ ಬರುತ್ತಾರೆ. ಆದರೆ ಅವರ ಸ್ನೇಹ ಸಾಮೀಪ್ಯ ಆದರಾತಿಥ್ಯ, ಸಲ್ವಾತುಗಳಿಂದ ಹೃದಯ ಪರಿವರ್ತಕ ವಾಗಿ ಭವಿಗಳು ಭಕ್ತರಾಗುತ್ತಾರೆ. ದುಷ್ಟರು ಸಜ್ಜನರಾಗುತ್ತಾರೆ.

ಪ್ರಾಸಂಗಿಕವಾಗಿ— ಗಾವಿಲರು ತಂದಿರಿಸಿದ ಬಳ್ಳವನ್ನು ಲಿಂಗವೆಂದು ಭಾವಿಸಿ ಪೂಜಿಸಿದ ಬಳ್ಳೇಶ್ವರಮಲ್ಲಯ್ಯನ ಕಥೆ ಬರುತ್ತದೆ. ಆಡಿನ ಹಿಕ್ಕೆಯನ್ನು ಶಿವನೆಂದು ಭಾವಿಸಿ ತಂದೆಯ ಆಗ್ರಹಕ್ಕೆ ಪಾತ್ರನಾಗಿ ಈಶನೊಲಿಮೆಯನ್ನು ಗಳಿಸಿದ ಕಾಲಕೋಟನೆಂಬ ಗೊಲ್ಲಭಕ್ತನ ಚರಿತ್ರೆ ಇದೆ. ಬಾಪೂರ ಬೊಮ್ಮಯ್ಯನ ಇಷ್ಟದಂತೆ ಜೋಳ ಮುತ್ತಾದ ಪ್ರಕರಣ, ಕೊರಡಿಂ ಬಿಲ್ವಪತ್ರೆಯನ್ನು, ಬರಡು ಪಶುವಿಂ ಹಾಲನ್ನೂ ಪಡೆದ ಕಥೆಗಳಿವೆ.

ಮತ್ತೊಂದು ಸಮಯದಲ್ಲಿ ಸಂಗನು ಜಂಗಮನಾಗಿ ಬಂದು ಬಸವನ ನೊಸಲ ಕಣ್ಣನ್ನು ಬೇಡುತ್ತಾನೆ. ಬಸವನಾತನ ಮುಖಕೆ ಮುಕುರುವಂ ತೋರಲು ತನ್ನ ಗುರುತು ತಿಳಿದು ಹೋಯಿತೆಂದು ಭಯಗೊಂಡ ಶಂಕರನು ಓಡತೊಡಗಿದನು. ಬಸವಣ್ಣನು ತಡೆಯಲು ತ್ವರೆಮಾಡುತ್ತ ನಿಲ್ಲು ನಿಲ್ಲು, ದಾಸಿಮಯ್ಯನ ತೆರದಿ ಗಾಸಿಮಾಡೆನು, ನಂಬಿಯಂತೆ ವಿಲಾಸಿನಿಯಳೆದೆ ಯಾಡಿಸೆನು. ಸಿರಿಯೊಳನಂದದಿ ಸುಕನಸರ್ಪಿಸೆನು. ನುಂಡಯ್ಯನಂತೆ ಮಿಂಡ ಹರೆಯುವ ಯಾಚಿಸೆನು. ಸ್ವರ್ಗಭೋಗಾದಿಗಳವಾವ್ಪವಂ ಬೇಡೆನು'' ಎಂದ ಶಿವನನ್ನು ಪ್ರಾರ್ಥಿಸುತ್ತಾನೆ. ಇದರಿಂದ ಕೇವಲ ಭಕ್ತಿಗಾಗಿ ಭಕ್ತಿಯೆ ಹೊರತು ಸ್ವಾರ್ಥಸುಖ ಸಂಪದಕ್ಕಾಗಿ ಬಸವಣ್ಣನವರ ನಿಸ್ವಾರ್ಥ ಭಕ್ತಿಯೋಗವನ್ನು ಕವಿ ಚೆನ್ನಾಗಿ ಚಿತ್ರಿಸಿದ್ದಾನೆ.

ಸಾಮಾನ್ಯವಾಗಿ ಶಿವಶರಣರಕಥೆಗಳೆಲ್ಲಾ ಉಥೃಕವಾಗಿರುವ ವಿವಿಧ ಜಾತಿಯ ಶಿವಭಕ್ತರನೇಕರವಿವರ ಮತ್ತು ಹೆಸರಗಳನ್ನು ಭೀಮಕವಿಯು ಉಲ್ಲೇಖಿಸಿದ್ದಾನೆ. ಕುತುಹಲಕ್ಕೆಯಾದರೂ ಅವರ ಹೆಸರುಗಳನ್ನು ನೋಡಿ–

ಗೊಲ್ಲಾಳರಾಜ, ತಾರಕವ್ವೆ, ಕಣ್ಣಪ್ಪದೇವ, ದೀಪದಕಲಿ, ನಂಬಿ, ಸೋಮಣ್ಣಬೂತಿ, ಮಾಚಯ್ಯ, ಓಹಿಲ, ವಿಜಿತಕಂದರ್ಪ, ರೇಚಯ್ಯ, ತಂಬಂಕಿದೇವ, ಕೊಡಗೂಸು, ಶಂಕರದಾಸಿಮಯ್ಯ, ದೇವರದಾಸಿ, ಮಂಚಿದೇವ, ಬಂಕಯ್ಯ, ಏಣಾಧಿನಾಯಿಕ, ಶಂಕರಯ್ಯ, ಸಂಕಿದೇವ, ಸಿರಿಯಾಳ ಚಂಗಳೆ, ಚೋಳರಾಯ, ಚೆನ್ನಯ್ಯ, ಚೋಳವ್ವೆ, ಬಲ್ಲಳ, ಕಲಿಯಂಬ, ಹೊನ್ನದೇವ, ಮಾರಯ್ಯ, ಕೇಶಿರಾಜಯ್ಯ, ಸೊಡ್ಡಳದೇವ, ಬಾಚಯ್ಯ, ಭಾವಿಯ ಭೋಗಯ್ಯ, ಪಂಡಿತಯ್ಯ, ಸಿರಿಪತಿಪಂಡಿತಯ್ಯ, ಪಾಂಡುರಂಗ ಪುರೋಹಿತರು, ಮಾಯಿಭಟ್ಟ, ಉದ್ಭಟ, ಗಾರುಡಿ ಮಾದಿರಾಜ, ಹಾವಿನ ಹಾಳ ಕಲ್ಲಯ್ಯ, ಬಿಬ್ಬಿ ಬಾಚಯ್ಯ, ಕಿನ್ನರ, ಜಾರಮಹೇಶ, ಬಳ್ಳೇಶ್ವರನ

ಮಲ್ಲಯ್ಯ, ಚಂಡೇಶಯ್ಯ, ಹಾಳ ಬೊಮ್ಮಯ್ಯ, ಅಲ್ಲಯ್ಯ, ಕಕ್ಕಯ್ಯ, ಮಳಯರಾಜ, ಚಾವುಂಡರಾಯ, ರಾಮಯ್ಯ, ಮಡಿವಳ ಮಾಚಯ್ಯ, ಗುಂಡಯ್ಯ, ಹೆಗ್ಗಡೆ ಕುಲಚ್ಚರೆ, ಬೊಮ್ಮಯ್ಯ, ಕೇತಯ್ಯ, ಬಸವಯ್ಯ, ಬಲದೇವ, ಮಧುವರಸ ಮುಂತಾದ ಶಿವನನೊಲಿಸಿದ ಮಹಾಭಕ್ತರನ್ನು ಹೆಸರಿಸಿದ್ದಾನೆ. ಮೋಹಿನೀ ದೈವಿ; ಮಮಕಾರ ಭೂಪಾಲ, ನಿರಹಂಕಾರ ಮುಂತಾದ ಹೆಸರುಗಳಂತೆ ಇವು ಕಲ್ಪನೆಯ ಸೊಗಸಿನ ಹೆಸರುಗಳಲ್ಲವೆಂದು ಗಮನಿಸಬೇಕು.

ಹತ್ತನೆಯ ಪ್ರಕರಣವಲ್ಲಿ-ಕೆಸರಿನಲ್ಲಿ ಜಾರಿಬೀಳುತ್ತಿದ್ದ ಗೊಲ್ಲತಿಯೋರ್ವಳ ಕೊಡವನ್ನು ಬಿಜ್ಜಳನ ಆಸ್ಥಾನದಲ್ಲಿದ್ದಂತೆಯೆ ಮೇಲೆತ್ತಿ ಹಿಡಿದು ರಕ್ಷಿಸಿದ ಪವಾಡ ಚಿತ್ರಿತವಾಗಿದೆ. ಈ ಪ್ರಸಂಗವನ್ನು ಸಿಂಗಿರಾಜನೂ ನಿರೂಪಿಸಿದ್ದಾನೆ. 'ಬಸವನೆಂದುಸಿರಿದೊಡೆ ಭಯವುಂಟೆ? ಎಂಬ ಉಕ್ತಿಯನ್ನು ಸತ್ಯವಾಗಿಸಲು ಈ ಪವಾಡವನ್ನು ಚಿತ್ರಿಸಿದ್ದರೂ ಅದಕ್ಕೆ ಮಹತ್ವ ದೊರೆಯದು.

ಈಶ್ವರನ ಎರಡನೆಯ ಅವತಾರಿಯೆನಿಸಿದ ಕರ್ಮಯೋಗಿ ಸಿದ್ಧರಾಮಣ್ಣನವರ ವಿಚಾರ ಇಲ್ಲಿ ಸಂಕ್ಷಿಪ್ತವಾಗಿ ಬರುತ್ತದೆ. ಅವನು 'ಸಿರಿಗಿರಿಗೆಣೆ ಪ್ರಭೆಯಪ್ಪ ಪುರಮಂ ರಚಿಸಿ ಪರ್ವತನಾಥನಂ ತಂದು ಸೊನ್ನಲಿಗೆಯೊಳಿರಿಸಿ ಶಿವಲಿಂಗಗಳ ನಿಲಿಸಿ ಅನ್ನಪಾನಾದಿಗಳ ಹಂಗಿಲ್ಲದೆ ಸಮಾಧಿಯುತ್ತದಲ್ಲಿ ಪ್ರಮಥ ಲೋಕವನ್ನೈದುತ್ತಾನೆ.

ಮೂಲೋಕದ ಸಕಲ ಮುನಿಗಳೊಳು ಸದ್ಭಕ್ತರೊಳು ಬಸವನೇ ಮೊದಲನೆಯವನೆಂದು ಉಮೆಯರಸನು ತಿಳಿಸುತ್ತಾನೆ. ಈ ಸಮಯಮದಲ್ಲಿ ಬಹು ಪುರಾತನರಾದ ಶ್ವೇತ, ಮಾರ್ಕಂಡೇಯ, ಕಶ್ಯಪ, ಸೂತ, ಕಪಿಲ, ಅಂಗೀರಸ, ಭಲ್ಲುಕ, ಗೌತಮ, ಬ್ರಾಹ್ಮಣ್ಯ, ವಾಸಿಷ್ಟ, ಮೌದ್ಗಲ್ಯ, ನಾಕಭಕ್ಷಣ, ಭೃಗು, ಘಟಜಾತ, ವತ್ಸ, ಪುಲಸ್ತ್ಯ, ಕುತ್ಸ, ಶಿಲಾದ, ಪರ್ಣಾದ, ಮೃಕಂಡು, ಜಮದಗ್ನಿ, ಅತ್ರಿ, ಭಾರದ್ವಾಜ, ವಿಶ್ವಾಮಿತ್ರ, ಸುಮ, ಹನುಮಂತ, ಪುಲಹ, ಸುಮಿತ್ರ, ಮೈತ್ರಾವರಣ, ನಾರದ, ರೈಭ್ಯಕ, ಬ್ರಹ್ಮ, ಪುತ್ರಮಂಕಣ, ವಾಮದೇವ, ಪವಿತ್ರಪಾಣಿ, ವ್ಯಾಘ್ರಪಾದ, ಸುಸೂತ್ರ, ಪರ್ವತ, ಮಂದಪಾಲ, ವ್ಯಾಸ, ದೂರ್ವಾಸ, ಸನಕ, ಭಾರ್ಗವ, ಕಾಂಡ, ಶುಕ, ಜೈಮಿನಿ, ಪಲಾದ, ಪರಾಶರಾ, ಕಣಾಶನಾ, ದಧೀಚಿ, ಚ್ಯವನ, ಜುಹ್ನು, ಸನದ, ಪತ್ಕ, ಸುಪತ್ಕ, ಶೌನಕ, ಸನಕ, ಗಾರ್ಗ, ಮತಂಗ ಮುಂತಾದ ಮಹಾಮುನಿಗಳಲ್ಲಿ,

ವರಾಹಕೇತುಗಳು, ಅಷ್ಟವಸುಗಳು, ನವಬ್ರಹ್ಮರು, ಸಪ್ತ ಮಾತೃಕೆಯರು, ಸಿದ್ಧ ಕನ್ನಿಕೆಯರು, ಗರುಡ ವಿದ್ಯಾಧರ, ಮಯೂರಾಸುರ, ಯಕ್ಷರು, ಸರಿಗಮಪದನಿ ಎಂಬ ನಾದಲೋಲ ನಾರದರು ಇವರೇ ಮೊದಲಾದವರ ಹೆಸರುಗಳನ್ನು ತಿಳಿಸಿ' ಎಸೆವ, ಸದ್ಭಕ್ತರೊಳು, ಪ್ರಮಥರೊಳು ಬಸವನೇ ಮೊದಲೆಂದು ತಿಳಿಸುವನು. ಆವಿ ಬಸವೇಶ್ವರನಾವ ನಾನೆ ಎರಡಾವೆ, ಶಿಲಾದನಿಗೊಲಿದೆ. ಭಕ್ತರಾಜ ಬಸವನಂ ವಸುಧೆಗೆ ಕಳುಹಿಸಿದೆ. ಎರಡನೆಯ ಶಂಭು ಬಸವರಾಜನಂ ನೆನೆದರೂ ಮುಕ್ತಿದೊರೆಯುವುದು. ಸಕಲ ಭಕ್ತರೂ ಎನ್ನೊಳು ಬಸವರೂಪಾಗಿಹರು' ಎಂದು ಗಿರಿಜೆಯರಸ, ಬಸವರಸನ ಮಹಾತ್ಮೆಯನ್ನು ತಿಳಿಸುತ್ತಾನೆ.

ಹನ್ನೊಂದನೆಯ ಪ್ರಕರಣದಲ್ಲಿ- ಜಂಗಮ ತೃಪ್ತ್ಯರ್ಥವಾಗಿ ಬಸವಣ್ಣನು ಬಿಜ್ಜನರಾಯನ ಬೊಕ್ಕಸದ ಹೊನ್ನನ್ನಿತ್ತ ವೃತ್ತಾಂತವಿದೆ. ಭಕ್ತರಿಗೆ ಹೊನ್ನನ್ನಿತ್ತು ಬೊಕ್ಕಸವನ್ನು ಬರಿದು ಮಾಡಿದರೆಂದು ಕಾಳಿಯರಸು, ಕೇಶವ, ಜೋಳಿಯಂಣ ಮುಂತಾದವರು ರಾಜನಿಗೆ ದೂರಿಡುತ್ತಾರೆ. ರಾಜನು ಚಾಡಿಮಾಲೆಗೊಳಗಾಗಿ ಬಸವಣ್ಣನನ್ನು ಕರೆಸಿ "ಹೀಗೆ ಮಾಡುವರೆ? ನಿನ್ನ ದೃಷ್ಟಿ ನಿನಗೆ ಹೊರತು ಮಿಕ್ಕಿನವರೇನಾದಡೇನು? ನಮ್ಮ ಧನಮಂ ತಂದೊಪ್ಪಿಸಿಹೋಗು" ಎಂದು ಆಗ್ರಹದಿಂದ ನುಡಿಯುವನು. ಬಸವಣ್ಣನು- "ಎಲೆ ಭೂಪ, ವಾರಿಜಕೊಲಿದೆರಗುವ ಅಳಿ ದತ್ತೂರ ಕುಸುಮ ಕೆರಗುವುದೆ? ಚಂದ್ರಗೆಳಸುವುದಲ್ಲದೆ ಮರ್ಬಿಂಗೆಳಸುವುದೆ? ಕ್ಷೀರಸಾಗರದೊಳಿಪ್ಪ ಹಂಸಂ ಕ್ಷಾರನೀರಂ। ಸೇವಿಪುದೆ ? ಸೂರ್ಯಂ ಕನ್ನಡಿಯ ಬೆಳಗಂಪಾರ್ವನೆ ? ಪೊಡವಿ ನಡುಗಿದಡೆ, ಉರಗರಾಜನ ಹೆಡೆ ಬಳುಕಿದಡೆ, ಜಲಧಿ ಬರತಡೆ, ಕುಲಶೈಲಂಗಳಲುಗಿದಡೆ ಮೃಡನ ಭಕ್ತರು ಪರಧನಕ್ಕಾಸೆಪಡುವರೆ ? ನನ್ನ ಒಡವೆಗಳನ್ನೆ ಕೊಟ್ಟೆ' ಎಂದು ಹೇಳಿ ಭಂಡಾರದ ಪೆಟ್ಟಿಗೆಗಳಂ ತರಿಸಿ ಜನಪನ ಸಂಶಯದ ಬೇರೊಟ್ಟಿಕಳೆವಂತೆ ಪೆಟ್ಟಿಗೆಯ ಕೀಲ್ಗಳಂ ಕಳೆದು ನೋಡಲು ಮೊದಲಿದ್ದ ಹಣ ಅಂತೆಯೆ ಇತ್ತು. ರಾಜನು ಬಸವಣ್ಣನನ್ನರಿಯದೆ ವೃಥಾ ಹವಾದ ಹೊರಿಸಿದ ತಪ್ಪಿಗಾಗಿ ವ್ಯಥಿಸಿ ಅನೇಕ ರತ್ನಾಭರಣಗಳನ್ನಿತ್ತು ಸನ್ಮಾನಿಸಿದನು.

ಬೇರೊಂದು ಸಮಯದಲ್ಲಿ ಜಂಗಮನೊಬ್ಬನು ಗಂಗಾದೇವಿಯ ದಿವ್ಯ ದುಕೂಲವಂ ಬೇಡಿ ಪಸಡೆ.

ಬಸವ ಪುರಾಣದಲ್ಲಿ ಬಸವಣ್ಣನವರ ಚಾರಿತ್ರ್ಯಕ್ಕಿಂತ ಹೆಚ್ಚಾಗಿ ಅನೇಕ ಶಿವಭಕ್ತರ ಕಥೆಗಳಿವೆ. ಇದೊಂದು ಸರಿತ್ಸಾಗರವಿದ್ದಂತೆ. ಇಲ್ಲಿ ದೊರೆಯುವ ಚಾರಿತ್ರ್ಯಾಂಶಗಳೂ ಬಹಳ ಕಡಿಮೆ. ಹತ್ತನೆಯ ಸಂಧಿ ಪೂರ್ತ ಬಸವಣ್ಣನವರ ವಿಚಾರವಿದೆ. ಇನ್ನುಳಿದ ೩೫–೪೦ ಸಂಧಿಗಳು ಶಿವನನೊಲಿಸಿದ ಮುಗ್ಧ ಭಕ್ತರ ಕಥೆ ಮತ್ತು ಪವಾಡಗಳಿಗೆ ಮೀಸಲಾಗಿವೆ. ಈ ಶಿವಭಕ್ತರಲ್ಲಿ ಮುಗ್ಧ ಸಂಗಯ್ಯ, ರುದ್ರಪಶುಪತಿ, ಕೊಳೂರ ಕೊಡಗೂಸು, ರೆವ್ಮೈಪೆ, ದೀಪದ ಕಲಿಯಾರ, ಏಕನಾಥ, ಬೇಡರ ಕಣ್ಣಪ್ಪ, ಮಲ್ಲರಸ, ಮಾದಿರಾಜಯ್ಯ ಮಡಿವಾಳಮಾಚಯ್ಯ, ಜಾಹೂರ ಬೊಮ್ಮಯ್ಯ, ಸಿರಿಯಾಳ, ನಂಬಿ, ಹಲಾಯುಧ, ಮಾಚಿದೇವ, ಕಿನ್ನರಯ್ಯ, ಕಲಕೇತಬೊಮ್ಮಯ್ಯ, ಕನ್ನದಬೊಮ್ಮಯ್ಯ ಮಾರಯ್ಯ, ಸುರಗಿಯ ಚೌಡಯ್ಯ, ತೆಲಗು ಬೊಮ್ಮಯ್ಯ, ಮೇದರಕೇತಯ್ಯ ದಸರಯ್ಯ, ಅರಿಂದಮ, ಆಂಡಾರಿ, ಶ್ವೇತಭೂಪಾಲ, ಮಲುಹಣ, ಓಹಿಲಯ್ಯ ಗುರ್ಜರ, ವೇಮನಾರಾಧ್ಯ, ಚಿಕ್ಕಮಾದ, ಕದಿರರೇಮಯ್ಯ, ಏಕಾಂತ ರಾಮಯ್ಯ, ಪಿಳ್ಳೆಯ ನೈನಾರ, ಸುಗ್ಗಲದೇವಿ, ಗುರುದಾಸಿಮಯ್ಯ, ಬಿಬ್ಬಿ ಬಾಚರಸ, ಬಲದೇವ, ಇದಿಷ್ಟು ಜನರ ಕಥೆಯೂ ವರ್ಣಿತವಾಗಿವೆ.

ಮೂವತ್ತೈದನೆಯ ಸಂಧಿಯಲ್ಲಿ 'ಬಸವಣ್ಣ ಜಂಗಮಪ್ರಾಣ' ಎಂಬ ವಿಚಾರವನ್ನು ಪೃಥಕ್ಕರಿಸಲು ದೃಷ್ಟಾಂತವೊಂದು ಸೃಷ್ಟಿಯಾಗಿದೆ. ಈ ಪ್ರಸಂಗ ಬ. ರಾ. ದೇ. ರಗಳೆಯಲ್ಲಿಯೂ ಇದೆ.

ಒಂದು ದಿನ ಭಕ್ತಿಯರಸ ಬಸವಣ್ಣ "ಶಿವರಾತ್ರಿಯಂ ಮಾಡಿ ಸಂಗನ ನೆನಹಿನೊಳೋಲಾಡಿ ಲಿಂಗವಂ ನೋಡಿ ಸುರಂಗಿಸುತ್ತಂ ಪರಮ ಶಿವಸುಖ ಸಂಗಮ ಸುಧೆಯಂ ಸವಿಸವಿದು ಡಣಿವಿಲ್ಲದೀಂಟಿದನು. ಮನವೊಸೆವೊಸೆದು ಹಾಡಿಹಾಡಿ ಸ| ವಿನಯದಿಂ ಲೀಲಾಂಬುಧಿ ಯೊಳೋಲಾಡಿ ಯೋಲಾಡಿ ಬಾಲೇಂದು ಧರನೊಳು ಪೊಕ್ಕು ಪರಶಿವಯೋಗ ನಿದ್ರಾ ಮುದ್ರೆಯೊಳಿರ್ದನು. ತಾನು ತನ್ನಯ ನೆನಹು ಚಿತ್ತದೊ| ಳೀನ ನೆನೆಯಲು ತೋರುವರ್ಥವು ತನ್ನಲ್ಲಿಯೇ ಅಡಗಿಕೊಂಡಿದ್ದಂತೆ ಜೀವ ಶಿವೈಕ್ಯಭಾವಮುದ್ರೆಯೊಳಿರಲು ಕೆಲವು ಜನ ಜಂಗಮರು ಬಸವಣ್ಣನ ದರ್ಶನಾರ್ಥವಾಗಿ ಬಂದು 'ನಿದ್ರೆಯಲ್ಲಿದ್ದಾರೆ ಎಚ್ಚರಿಸಬಾರದೆ'ನ್ನಲು ಹಾಗೆಯೆ ಹೊರಟು ಹೋದರು. ಬಸವಣ್ಣನ ಪ್ರಾಣವೂ ಅವರ ಹಿಂದೆಯೇ ಹೋಗಿ, ಪುನಃ ಹೋದ ಜಂಗಮರನ್ನು ಕರೆತಂದಾಗ ಮೇಲೇಳುತ್ತಾರೆ.

ಬಸವಣ್ಣನ ಮೇರುವಿನಷ್ಟು ಹಿರಿದಾದ ಅಚಲವಾದ ಭಕ್ತಿ, ಜಂಗಮ ಪ್ರೀತಿ–ಕಿನ್ನರೇಶ್ವರನ ಮರಣಪ್ರಸಂಗದಲ್ಲಿಯೂ ಚೆನ್ನಾಗಿ ವ್ಯಕ್ತವಾಗಿದೆ. ಭಕ್ತನಾದ ಕಿನ್ನರೇಶನು ಹರನಿಚ್ಛೆಯಿಂದ ಅಸುವು ಮರೆಯಲು ಬಸವಣ್ಣನ ದುಃಖ ಕಡಲ್ವರಿಯುತ್ತದೆ. ಮೃತ ಕಿನ್ನರಯ್ಯನನ್ನು ಕಂಡು "ಕಿನ್ನರೇಶ್ವರ ಭೂಮಿದೇವಾ! ಯನ್ನ ಲಿಂಗವೆ, ಯನ್ನ ಗುರುವೆ, ಯನ್ನ ಸುರತರುವೆ! ಯನ್ನ ಜೀವ, ಭಾವ ಚಿಂತಾಮಣಿ, ಮೇರು ಸಜ್ಜನ ಮಿತ್ರ, ದಾತ, ತಾತ, ದುರಿತನಾಶಾ ಕಿನ್ನರೇಶಾ, ಎನ್ನ ಗತಿಯೆ, ಮತಿಯೆ! ಮಾತಾಡು ಮಾತಾಡು' ಎಂದು ರೋದಿಸುತ್ತಾರೆ. ಈ ವಿಷಯ ಮಾದರಸನಿಗೆ ತಿಳಿದು ಬಸವಣ್ಣನ ಎಣೆಯಿಲ್ಲದ ಜಂಗಮಪ್ರೇಮವನ್ನು ಕಂಡು ಹರ್ಷ ಆಶ್ಚರ್ಯ ಗಳಿಂದ ಕೂಡಿ –"ಜಂಗಮ ಪ್ರಾಣ ಪಾಲನಾ! ಜಂಗಮ ಪ್ರಾಣ ಪ್ರಧಾನ! ಜಂಗಮ ಪ್ರಾಣ ಪ್ರಣಯಾ ಭಾಪು, ಜಂಗಮ ಪ್ರಾಣ ಸುಸಂಗ! ಜಂಗಮ ಪ್ರಾಣ ತರಂಗಾ! ಭಕ್ತಿಮದ ತಲೆಗಡರಿ ಇಂತು ಅರಚುವದರೆ ? ಬಸವ ಜಂಗಮ ಜೀವ ಭಾಪುರೆ! ಭಾಪುರೇ ಚರಲಿಂಗ ಜೀವ ಕಳಾಪ! ಜಂಗಮ ಸ್ವೀಕೃತ ಕೃಪಾಯುತ ಪ್ರಾ! ಣಾಂಗ ಜಂಗಮ ಪರಿವೃಢ! ಜಂಗಮಾಶ್ರಿತ ಸಂಚಿಪ್ರಾಣ! ಪ್ರಾಣಾಂಗ! ಜಂಗಮ ಪರಿವೃಢ" ಎಂದು ಹೃದಯವುಕ್ಕಿ, ಭಾವವೊರೆದು ಬಸವಣ್ಣನ ಭಾವಭಕ್ತಿಯನ್ನು ಮಾತಿನಲ್ಲಿ ರೂಪಿಸುತ್ತಾನೆ.

—" ಆವಯುಗದೊಳಗಾವಕಾಲದೊ! ಆವ ಭೂಮಿಯೊಳಾವ ದೇಶದೊ! ಆವ ನಾಡೊಳ! ಗಾವ ಪುರದೊಳ ಗಾವ ಕಾಲದಲಿ!! ದೇವ ದಾನವ ಮಾನವರೊಳಾ! ವಾದ ಭಕ್ತರೊಳ್ ಬಸವನ ಭಾವದಿಂ ಜಂಗಮ ಪ್ರಾಣಿಗಳೆನಿಸಿದವರೊಳರೆ ? ಎಂದು ವರ್ಣಿಸಿ ಕವಿ ಬಸವಣ್ಣನನ್ನು ಸರ್ವ ಶ್ರೇಷ್ಠ ಶಿವಭಕ್ತನನ್ನಾಗಿ ರೂಪಿಸಿದ್ದಾನೆ. (ಸಂಧಿ ೩೭. ಪುಟ ೨೪೦. ಪದ್ಯ ೨೮, ೨೯.

ಕವಿ ಹರನನೊಲಿಸಿದ ಮುಗ್ಧ ಭಕ್ತರು, ಮತ್ತಿತರ ಹಲವಾರು ಮಂದಿ ಭಕ್ತರ ಕಥೆಗಳನ್ನು ಸವಿಸ್ತಾರವಾಗಿ ತಿಳಿಸಿದ್ದರೂ ಬಸವರಸನ ವಿಚಾರ ಬಂದಾಗ ಅವರ ಭಕ್ತಿ ಶ್ರದ್ಧೆ ಇವುಗಳನ್ನು ಉನ್ನತವಾಗಿಯೂ ಉಜ್ವಲ ವಾಗಿಯೂ ಚಿತ್ರಿಸುವದನ್ನು ಮರೆತಿಲ್ಲ. ಬಸವಂಣನ ಭಕ್ತಹೃದಯವನ್ನೂ ಸರ್ವ ಶ್ರೇಷ್ಠತ್ವವನ್ನು ಇನ್ನಿಲ್ಲವೆಂಬಂತೆ ವರ್ಣಿಸಿದ್ದಾನೆ.

— " ಭಾನುವಿಲ್ಲದ ಪೃಥ್ವಿ, ಚಂದ್ರನಿಲ್ಲದ ರಾತ್ರೆ, ಸನ್ಮಾನವಿಲ್ಲದ ಬಂಟ, ಸುಜ್ಞಾನವಿಲ್ಲದ ಯೋಗಿ ದಾನಗುಣವಿಲ್ಲದ ಸಿರಿ, ಅಭಿಮಾನವಿಲ್ಲದ ಭಾರ್ಯ, ಸದ್ಗುರು ಜ್ಞಾನವಿಲ್ಲದ ಶಿಷ್ಯ, ಗಾನವಿಲ್ಲದ ನರ್ತನ, ವಿದ್ಯಾ ನಿಪುಣನಲ್ಲದ ಬುಧ, ಸಂತಾನವಿಲ್ಲದ ಮನೆ, ಜನನಿಯಿಲ್ಲದ ತನೂಭವ, ನಲ್ಲನಿಲ್ಲದ ನಲ್ಲಳು, ಅಂಗನೆಯಿಲ್ಲದಿರ್ಪ ಗೃಹಸ್ಥ, ಹಂಸೆಯಿಲ್ಲದ ಕೊಳ, ಶಾಸ್ತ್ರಕೋವಿದರಿಲ್ಲದಾಸ್ಥಾನ, ಸೊಡರಿಲ್ಲದ ನಿವಾಸ, ಹದುಳವಿಲ್ಲದ ದೇಹ ಸಮುದಿತವಿಲ್ಲದ ರತಿ " ಹೇಗೆ ಶೋಭಿಸಲಾರೆವೋ ಅದೇ ರೀತಿ ಬಸವ ನಿಲ್ಲದ ಬಕ್ತಿ ಲೋಕದೊಳು ಪ್ರವರ್ಧಿಸುವದಿಲ್ಲ ಎಂದು ವರ್ಣಿಸಿರುವದು ಆ ಪಾತ್ರಕ್ಕೆ ಹೆಚ್ಚಿನ ವೈಶಿಷ್ಯವನ್ನುಂಟುಮಾಡಿದೆ.

" ಜಲನಿನದಕೆ ಕುಣಿವ ನವಿಲುಗಳಂತೆ, ವಸಂತ ಸಮಯವ ಬಯಸುವ ಗಿಳಿಗಳವೊಲು, ಪೂರ್ಣ ಶಶಿರುಚಿಗೆಳಸುವ ಚಕೋರಿ ಕುಲದಂತೆ, ಸೂರ್ಯೋದಯಕೆ ಮನವೊಲಿವ ಚಕ್ರಂಗಳ ವೊಲ್ ಜಗದ ಸಕಲ ಭಕ್ತ ಸಮೂಹವೊ ಬಸವರಾಜನ ದಿವ್ಯ ಸಂದರ್ಶನಕ್ಕೆ ಕಾತರಿಸುತ್ತಿತ್ತು. " ಅಂದ ಮೇಲೆ ಅವರ ಭಕ್ತಿಪ್ರಭೆಯ ಹೆಚ್ಚಳವನ್ನು ವರ್ಣಿಸಲು ಸಾಧ್ಯವೆ ?

ತನ್ನನ್ನು ನೋಡಲು ಬಂದ ಹಿರಿಯ ಭಕ್ತರನ್ನು ಬಸವಣ್ಣನವರು ಮನತುಂಬಿ ಉಪಚರಿಸುತ್ತಿದ್ದರು. " ಹಿರಿಯ ಭಕ್ತರು ಹಿರಿಯ ಭಕ್ತರು ಹಿರಿಯ ಭಕ್ತರೆನ್ನುತ್ತ । ಹಿರಿದು ಮನ್ನಿಪನು. ಅವರ ಕಾಲ್ಗಳಮೇಲೆ ಬೀಳುವನು ॥ ಮರಳಿ ತಾನವರುಂಡು ಮಿಕ್ಕುದ । ನಿರದೆ ಕೊಂಬನು. ಕೈಯ್ಯನಾಂ । ತೋರಿಸದೆ ಅನುದಿನದವರನೇ ಕೊಂಡಾಡುವಂ ........ (ಸಂ. ೫೬ ಪು ೩೮೩)

ಹೊಲೆಯನಾದ ಕಂಬಳಿನಾಗಿದೇವನ ಮನೆಯಲ್ಲಿ ಉಂಡು ಬಂದರೆಂಬ ಮಾತಿನ ಮೇಲೆ ಬಿಜ್ಜಳನು ಬಸವಣ್ಣನನ್ನು ಕರೆಸಿ " ಹೊಲೆಗಲಸಿ ಕುಲ ಸಂಕರವ ನಗ್ಗಲಿಸಿಯೀ ಕಲ್ಯಾಣ ಕಟಕವ ನಿಂತು ಕೆಡಿಸುವರೆ ? " ಎಂದು ಪ್ರಶ್ನಿಸುತ್ತಾನೆ. ಆ ಮಾತಿಗೆ ಬಸವಣ್ಣ —

"ಅಂತ್ಯಜರಂತ್ಯಜರುಮೆನು। ತಂತರವ ನರಿಯದೆ ಗಳಹುವರೆ ? ಸಂತತ ಸತ್ಕುಲಜರಹ ನಿಪ್ಕುಂತವರ್ಗಂ ವರವು ಭಕ್ತ ಗೃ। ಹಾಂತದೊಳು ಹುಗಬಾರದೆಂದೊಡೆ ನಿಮ್ಮನೇನೆಂಬೆ... ಮೇರುವಂ ಸೋಂಕಿದೊಡಲಾ ತ। ದ್ಭೂರಿ ವರ್ಣದೊಳಿಹುದು-ಕಾಗೆ। ವಿಚಾರಿಸಲು ಲಿಂಗೈಕ್ಯ ಭಾವಶ ಕುಲವ ನರಸುವರೆ? ಸಿದ್ಧರಸ ಸಂಯೋಗದಿಂ ಕಬ್ಬಿಣವು ಸುವರ್ಣವಾಗದೆ ? ಶಿವ

ಭಕ್ತಿಯೆಂಬ ಪುರುಷತಾಗಲು ಅಂತ್ಯಜನೂ ಕುಲಜನಾಗುವನು. ಕಲ್ಲುಗಳೆತ್ತ ಚಿಂತಾರತ್ನಗಳೆತ್ತ? ಹರನೊಡನೆ ಮೋಣಿತರ ದಿವಿಜರು, ಶಿವನಾಗಮಯ್ಯಗೆ ಭೂಸುರರು ಸರಿಯಹರೆ? ಶಿವಭಕ್ತನಾದಡೆ ಅನಾಮಿಕ ನಗ್ರಜನ್ಮ ಭೂಸುರನಾದರೂ ಈಶಭಕ್ತನಾಗದೊಡೆ ಅಂತ್ಯಜನು... ಭೂಸುರರ ಗುರು ವ್ಯಾಸನೊಗೆದುದು ಕಬ್ಬಲಿತಿಗೆ ಊರ್ವಸಿಗೆ ಆಲಘುಮುನಿ ಜನಿಸಿದ. ಮಾತಂಗ ಜನಿಸಿದನಾ ಮಾತಂಗಿಗೆ. ಸನ್ಮುಸಿವಲ್ಲಭರ ಜನಿತಂಗಳೆಲ್ಲಿಯವು? ಎಂಬುದಾಗಿ ಹೇಳಿ' ಶಿವಭಕ್ತನೇ ಕುಲಜನು' ಎಂಬ ತತ್ವರನ್ನು ಸಿದ್ಧಾಂತವಾಗಿಸುತ್ತಾನೆ.

ಬಸವಣ್ಣನವರು ಲೋಕ ಕಲ್ಯಾಣಾರ್ಥವಾಗಿ ತೊಡೆದು ಹಾಕಿದ ಕೆಲವು ಅಂಧ ಶ್ರದ್ಧೆಗಳಲ್ಲಿ ಜಾತೀಯತೆಯನ್ನು ತೊಡೆದು ಹಾಕಲು ಪ್ರಯತ್ನಿಸಿದ್ದು ಬಹಳ ಮುಖ್ಯವಾದದ್ದು. ಇಂತಹ ಅನೇಕ ಸುಧಾರಣೆಗಳು ಕರ್ಮಜಡರಿಗೆ ಹಿಡಿಸಲಿಲ್ಲ. ಬಸವಣ್ಣ ಎಲ್ಲರೊಡನೆಯೂ ಉಂಡು ಎಲ್ಲರೊಂದಿಗೂ ಕಲೆತು ಹರಳಯ್ಯ ಮಧುವರಸಯ್ಯಗಳ ಸಂಬಂಧವುಂಟುಮಾಡಿ ಜಾತಿಯನ್ನು ಹೊಲೆಗಲಸಿದನು ಎಂದು ವೈದಿಕ ಮತ ಸಂಪ್ರದಾಯಸ್ಥರು ರೊಚ್ಚಿಗೆದ್ದರು. ಇಂತಹ ಕೆಲಸಗಳಿಗೆಲ್ಲ ರಾಜನೇ ಪ್ರೋತ್ಸಾಹಕನೆಂದು ದೂರಿದರು. 'ಕೆಡುಗಾಲಕ್ಕೆ ಬುದ್ಧಿಯಿಲ್ಲವೆಂಬಂತೆ ಬಿಜ್ಜಳನಿಗೂ ಬಸವಣ್ಣನವರ ಬಗ್ಗೆ ಅಸಮಾಧಾನವುಂಟಾಯಿತು." ಕಾಲನ ಪೊಳಲಿಗೈದಲು ಬಗೆದು ಅಜ್ಞಾನಮದದಿಂದಿಸಿ ಅಂಧನಾಗಿ ಹರಳಯ್ಯ ಮಧುವಯ್ಯಗಳ ತಪ್ಪೇನುಮಿಲ್ಲದವರಂ ಕರೆಸಿ ಕಣ್ಣಂ ತೆಗೆಸಿದನು. ವಿಚಾರವನ್ನು ತಿಳಿದ ಬಸವಣ್ಣನು ಸಂಗನೊಲುಮೆಯಿಂದ ಅವರ ಕಣ್ಗಳಂ ಮತ್ತೆ ಪಡೆದನು. ನಿಷ್ಕಾರಣವಾಗಿ ಶಿವಭಕ್ತರಂ ಕೊಲಿಸಿದನೆಂದು ಮುನಿದು ಶಿವಗಣಂಗಳು ರಾಯನ ಕೊಲೆಗೆ ಪ್ರಯತ್ನಿಸಿದರು.

ಈ ಎಲ್ಲ ಪ್ರಸಂಗಗಳಿಂದ ಮನನೊಂದು ಬಸವಣ್ಣನವರು ಕಪ್ಪಡಿ ಸಂಗಮಕ್ಕೆ ಬರುತ್ತಾರೆ. ಸಕಲ ಶಿವಾಚಾರ ಧರ್ಮಕ್ಕೆ ಆಶ್ರಯದಾತನಾಗಿದ್ದ ರಾಜನೇ ಶಿವಸಂತತಿಗೆ ಕೇಡಂ ಬಗೆದನೆಂದು ಇಹದ ರೀತಿ ಬಾಧೆಗಳನ್ನು ಕೊನೆಗಾಣಿಸಲು ಸಂಗನನ್ನು ಮೊರೆಹೊಕ್ಕು ಅವನಲ್ಲಿ ಐಕ್ಯವಾಗುತ್ತಾರೆ.

ದಿವ್ಯ ಲೋಕದಿಂದ ಇಳಿದು ಬಂದ ಜಾಜ್ವಲ್ಯಮಾನ ಜ್ಯೋತಿಯು ಇಹಲೋಕದಲ್ಲಿ ಬೆಳಗಿ ಮತ್ತ ದೇವನಲ್ಲೆ ಐಕ್ಯವಾಯಿತು. " ಗಾಳಿಯೊಳು ಸುಳಿಗಾಳಿಯೂ, ಸಮುದ್ರದಲ್ಲಿ ಹುಟ್ಟಿದ ಅಲೆ, ಗುಳ್ಳೆ ನೊರೆಗಳು ಸಮುದ್ರದಲ್ಲಿಯೇ ಲೀನವಾಗುವಂತೆ, ಆಗಸದಲ್ಲಿ ಜನ್ಮಿಸಿ ಹೊಳೆದು ಮಿಂಚು ಆಗಸ

ದಲ್ಲಿಯೇ ಮರೆಯಾಗುವಂತೆ ನೀರಿನಿಂದುಂಟಾದ ಆಲಿಕಲ್ಲು ಮತ್ತೆ ನೀರಾಗಿ ಸಮುದ್ರದಲ್ಲಿ ಆವಿನಾಭಾವದಿಂದ ಬೆರೆತುಹೋಗುವಂತೆ ಮೂಲಾತ್ಮ ವೃಕ್ಷದಿಂದ ಸಿಡಿದು ಬಂದಿದ್ದ ಜೀವಕಣವು ಮತ್ತೆ ಮೂಲಾತ್ಮದಲ್ಲೆ ಲೀನವಾಯಿತು.
(ಪುಟ ೪೩೯ ಸಂ. ೬೧ ಪ. ೬೬)

" ಗುರುದಯಾ ಸಂತತಿಯೊಳುದಯಿಸಿ | ಗುರುದಯಾ ಸಂಪದದಿವರ್ಧಿಸಿ ಗುರು ಜಠರ ವಿಶ್ರಾಂತಿಯಲ್ಲಿ ಸದ್ಗುರುವೆ ತಾನಾಗಿ ಬೆರಸಿದನು ಶಿವಲಿಂಗ ತತ್ವದೊಳು || "

ಸಂಗಮೇಶ್ವರನಲ್ಲಿ ಸೇರಿಹೋದ ಮಹಾಮಹಿಮ ಬಸವನ ಪವಿತ್ರ ಪುಣ್ಯನಾಮವನ್ನು ಕವಿ ಮತ್ತೆ ಮತ್ತೆ ನೆನೆಯುತ್ತಾನೆ. ಹೃದಯ ಕಮಲವು ಹಿಗ್ಗಿ ವಸಂತ ಋತುವನ್ನು ಕಂಡ ಕೋಗಿಲೆಯಂತೆ ಹೇಗೆ ನಿನದಿಸುತ್ತದೆ. " ಬಸವನೆಂಬ ನಿದಾನಮಿರುತಿರೆ | ಬಸವನೆಂಬ ಸುಮೇರುವಿರುತಿರೆ | ಬಸವನೆಂಬ ವಿನೂತನ ಚಿಂತಾರತ್ನವಿರುತಿರಲು || ಬಸವನೆಂಬುದು ಕಾಮದುಘವಿರೆ | ಬಸವನೆಂಬೀ ಕಲ್ಪತರುವಿರೆ | ಬಸವ ಕೃಪೆಯಿಂ ಪಡೆಯಬಾರದ ವಸ್ತುವೊಂದುಂಟೇ ? ಎಂದು ವರ್ಣಿಸಿ ಬಸವಧ್ಯಾನ, ನಡೆನುಡಿಗಳು ಶಾಶ್ವತ ಧನವೆಂದೂ, ಧ್ಯಾನವು ಮೋಕ್ಷವಿಧಾನವೆಂದೂ ತಿಳಿಸುತ್ತಾನೆ.

ಇಷ್ಟು ಸಾಲದೆ ಬಸವನ ಸುಶೀಲ ಸಚ್ಚಾರಿತ್ರಂಗಳಿಗೆ ಕಣ್ದೆರೆದ ಕವಿ ಹೃದಯವು " ಬಸವಾ ಬಸವಾ ಬಸವಾ | ಬಸವ ವಿಭುವೆ ಬಸವ ಪ್ರಭುವೆ ಬಸವರಾಜಾ, ಬಸವ ಚಕ್ರೇಶ, ಬಸವದೇವಾ || ಬಸವಲಿಂಗ ಸ್ವಾಮಿ, ಬಸವ | ಬಸವ ಎನ್ನ ಪ್ರಾಣನಾಥಾ ಬಸವ, ಆಯುಂ ಶ್ರೀಯು ಗತಿಮತಿ ನೀನೆಗೆ ಬಸವ || ದೇವನಪ್ಪನು ನೀನೆ, ಸದ್ಗುರು | ದೇವನಪ್ಪನು ನೀನೆ, ಜಂಗಮ ದೇವನಪ್ಪನು ನೀನೆ, ನೀನೆ ಸಜ್ಜನ ಭಕ್ತನಪ್ಪವನು, ಜನನಿ ಜನಕ ಬಂಧು ಬಳಗವು ಸರ್ವಬಾಂಧವರು. ನಿನ್ನ ಪುಣ್ಯ ಚರಿತಾರ್ಥದ ತಿರುಳು ಮೋಕ್ಷಕೆ ಮಾರ್ಗ" ಎಂದು ಮುಂತಾಗಿ ಸ್ತುತಿಸುತ್ತ ಬಸವನ ಪುಣ್ಯನಾಮದಿಂದ ಪ್ರಾರಂಭವಾದ ಕೃತಿಯನ್ನು ಬಸವನಾಮ ಮಹತ್ವದಿಂದಲೆ ಪೂರ್ಣಗೊಳಿಸುತ್ತಾನೆ.

ಒಟ್ಟನಲ್ಲಿ ಬಸವಣ್ಣನವರಿಗೆ ಸಂಬಂಧಿಸಿದ ಕೆಲವೊಂದು ಚಾರಿತ್ರಿಕ ಅಂಶಗಳನ್ನು ಭೀಮ ಕವಿಯು ಘನವಾಗಿ ಚಿತ್ರಿಸಿದ್ದಾನೆ. ಪೂರ್ಣಜ್ಞಾನಿಯಾದ ಬಸವಣ್ಣನ ಭಕ್ತಿಯೋಗ, ಅವನು ಪರಶಿವನ ಅವತಾರವಾಗಿ ಮಹಿ

ಮೆಗಳನ್ನು ಮೆರೆಯುವುದು, ಕೊನೆಗೆ ಸಂಗನಲ್ಲಿ ಐಕ್ಯವಾಗುವ ಮಹತ್ವ ಪೂರ್ಣ ಸನ್ನಿವೇಶಗಳು ಮನೋಹರವಾಗಿವೆ. ನಿಜ ಚರಿತ್ರೆಗಿಂತ ಪವಾಡ ಗಳನ್ನೆ ಮೆಚ್ಚುವ ಜನಸಾಮಾನ್ಯರಿಗಂತೂ ಈ ಕೃಪೆ ಅಚ್ಚುಮೆಚ್ಚು. ಆದರೂ ವಿಸ್ತಾರವಾದ ವಿವಿಧ ಭಕ್ತರ ಕಥಾ ಸರಿತ್ಸಾಗರದಲ್ಲಿ ಬಸವಣ್ಣನ ವರ ಚರಿತ್ರೆಯನ್ನು ಆರಿಸಿ ತೆಗೆಯಬೇಕಾಗಿದೆ. ಸಂಜೀವಿನಿ ಮೂಲಿಕೆಯನ್ನು ತಾರೆಂದರೆ ಇಡೀ ಚಂದ್ರದ್ರೋಣ ಪರ್ವತವನ್ನೆ ತಂದು ಮುಂದಿಟ್ಟರೆ.... ಬುದ್ಧಿವಂತ ವೈದ್ಯನು ಮಾತ್ರ ಅದನ್ನು ಹುಡುಕಿ ಪಡೆಯಬಲ್ಲ.

ಕಥಾನಿರೂಪಣಾ ವಿಧಾನವು ಸರಳವಾಗಿಯೂ ಮನೋಹರವಾಗಿಯೂ ಇದೆ. ಅಲ್ಲಲ್ಲಿ ಪ್ರಾಸಂಗಿಕವಾಗಿ ಬಂದಿರುವ ವರ್ಣನೆಗಳು, ಉಪಮಾನ ರೂಪಕಗಳು ಪಾತ್ರಕ್ಕೆ ಮೆರಗುತ್ತಿವೆ. ಬಸವಣ್ಣನ ಚಾರಿತ್ರವನ್ನು ತಿಳಿ ಯಲೆಳಸುವವರು ಆವಶ್ಯಕವಾಗಿ ಓದಬೇಕಾದ ಗ್ರಂಥ.

# — ಸದಾಚಾರ ಸದ್ಭಕ್ತಿ ಪ್ರಾಯಶ್ಚಿತ್ತಗಳು —

( ಲೇಖಕಃ— ಕಲ್ಯಾಣಪ್ಪ ಬ್ಯಾಳಿ. ಹುಶಗುಂದ )



ಬಸವಣ್ಣನವರು ತಮ್ಮದೊಂದು ವಚನದಲ್ಲಿ " ಸದಾಚಾಆ ಸದ್ಭಕ್ತಿಯಿಲ್ಲದವರನೊಲ್ಲನಯ್ಯ. ಅವರ ಆರಾಧನೆ ದಂಡ ನಿಚ್ಚ ನಿಚ್ಚ ಪ್ರಾಯಶ್ಚಿತ್ತರನೊಲ್ಲೆನಯ್ಯ. ಕೂಡಲ ಸಂಗಮದೇವಾ ಭೂಮಿಯ ಭಾರಕರ " ಎಂದು ಹೇಳಿದ್ದಾರೆ. ಈ ವಚನದಲ್ಲಿ ಆವರ ಸದಾಚಾರ ಸದ್ಭಕ್ತಿ-ಪ್ರಾಯಶ್ಚಿತ್ತ ಎಂಬ ೩ ಶಬ್ದಗಳನ್ನು ಪ್ರಯೋಗಿಸಿದ್ದಾರೆ. ಇವುಗಳ ಅರ್ಥವನ್ನು ವಿವರಿಸಿ ನೋಡಲಾಗಿ, ಮನುಷ್ಯನ ಜೀವನವು ಇಹಪರಗಳನ್ನು ಸಾಧಿಸಿ ಸುಖದಿಂದಿರ ಬೇಕಾದರೆ ಈ ಮೂರು ಶಬ್ದಗಳ ಮಥಿತಾರ್ಥವನ್ನು ತನ್ನಲ್ಲಿ ಅವಶ್ಯವಾಗಿ ಅಳವಡಿಸಿಕೊಳ್ಳಬೇಕೆಂದು ಸ್ಪಷ್ಟವಾಗುವದು. ಸದಾಚಾರ ಈ ಶಬ್ದದಿಂದ ಈ ಲೋಕದಲ್ಲಿ ಮನುಷ್ಯನು ಜನರೊಡನೆ ಹೇಗೆ ವರ್ತಿಸಬೇಕೆಂಬುದು ವಿದಿತವಾಗುತ್ತದೆ. ಸದ್ಭಕ್ತಿ ಈ ಶಬ್ದದಿಂದ ಈ ಜಗತ್ತನ್ನು ನಿರ್ಮಿಸಿ ಆಳುತ್ತಿರುವಂಥ ಪರಮಾತ್ಮನಲ್ಲಿ ಯಾವತರಹದ ಪ್ರೇಮಭಾವವನ್ನಿರಿಸಿ ಆಧ್ಯಾತ್ಮಿಕಾನಂದವನ್ನು ಹೊಂದಬೇಕೆಂಬುದು ತಿಳಿಯುತ್ತದೆ. ಪ್ರಾಯಶ್ಚಿತ್ತ ಈ ಶಬ್ದದಿಂದ ಪ್ರಮಾದಶೀಲನಾದ ಮನುಷ್ಯನು ಒಮ್ಮೆ ಅಕಸ್ಮಾತ ತಪ್ಪುಮಾಡಿದರೆ ಆ ತಪ್ಪು ಪುನಃ ಆಗದಂತೆ ತನ್ನ ಜೀವನವನ್ನು ಮಾರ್ಪಡಿಸಿಕೊಂಡು ಹೇಗೆ ಸಾರ್ಥಕತೆಯನ್ನು ಪಡೆಯಬೇಕೆಂಬುದು ಧ್ವನಿತವಾಗುತ್ತದೆ. ಆದ್ದರಿಂದ ಸದಾಚಾರ ಸದ್ಭಕ್ತಿ ಪ್ರಾಯಶ್ಚಿತ್ತಗಳ ಬಗ್ಗೆ ನನಗೆ ತಿಳಿದ ಮಟ್ಟಿಗೆ ವಿವೇಚಿಸಬೇಕೆಂಬ ಉದ್ದೇಶದಿಂದ ಈ ಲೇಖವನ್ನು ಬರೆಯಲಾಗಿದೆ.

## ಸದಾಚಾರ

ಆಚಾರಗಳಲ್ಲಿ ಸದಾಚಾರ, ದುರಾಚಾರ, ಅನಾಚಾರ, ಡಂಭಾಚಾರ ಎಂದು ನಾಲ್ಕು ವಿಭಾಗಮಾಡಬಹುದು. ಸದಾಚಾರವೆಂಬ ಶಬ್ದವು ಒಳ್ಳೆ ನಡತೆ, ಮತ್ತು ತನ್ನ ಧಾರ್ಮಿಕ ಕಟ್ಟಳೆಗಳನ್ನು ಸುಗಮವಾಗಿ ಸಾಗಿಸಿಕೊಂಡು ಹೋಗೋಣ ಎಂಬರ್ಥದಲ್ಲಿ ಉಪಯೋಗಿಸಲ್ಪಡುತ್ತದೆ. ಬಸವಣ್ಣನವರು ಬೇರೊಂದು ವಚನದಲ್ಲಿ ಹೇಳುವಂತೆ " ಕಳಬೇಡ, ಕೊಲಬೇಡ,

ಹುಸಿಯ ನುಡಿಯಲು ಬೇಡ, ಅನ್ಯರಿಗೆ ಅಸಹ್ಯ ನುಡಿಯಲು ಬೇಡ, ತನ್ನ ಬಣ್ಣಿಸಬೇಡ, ಇದಿರು ಹಳಿಯಲು ಬೇಡ, ಇದೇ ಅಂತರಂಗದ ಶುದ್ಧಿ, ಇದೇ ಬಹಿರಂಗದ ಶುದ್ಧಿ, ಇದೇ ನಮ್ಮ ಕೂಡಲ ಸಂಗಮದೇವರ ನೊಲಿಸುವ ಪರಿ'' ಎಂಬೀ ಮಾತಿನಿಂದ ಮನುಷ್ಯನ ಶೀಲವು ನೆಟ್ಟಗಿರಬೇಕು. ಸಮಾಜದಲ್ಲಿ ಅವನು ಎಲ್ಲರಿಗೂ ಬೇಕಾಗಿ ನಡೆಯಬೇಕು. ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರು ಎಂದು ಗೊತ್ತಾಗುವದು. ನೀತಿಯೇ ವ್ಯಕ್ತಿ ಸಮಾಜ ರಾಷ್ಟ್ರಜೀವನದ ಜೀವಾಳವಾಗಿರುತ್ತದೆ. ನೀತಿಯಿಲ್ಲದ ವ್ಯಕ್ತಿಯ ಜೀವನ ಹಾಳು, ಸಮಾಜ ಜೀವನ ಗೋಳು, ರಾಷ್ಟ್ರಜೀವನ ಬೀಳು. ಆದ್ದರಿಂದ ನೀತಿಯೇ ಸದಾಚಾರ ಈ ಸದಾಚಾರದಿಂದಲೇ ವ್ಯಕ್ತಿ ಸಮಾಜ ರಾಷ್ಟ್ರಗಳ ಉತ್ಕರ್ಷವೆಂಬ ಮಾತನ್ನು ಯಾರೂ ಅಲ್ಲಗಳೆಯಲಾರರು.

ಸದಾಚಾರ ಈ ಶಬ್ದವನ್ನು ಧಾರ್ಮಿಕ ವಿಧಾನಗಳ ಪಾಲನೆಗೂ ಸಮನ್ವಯಿಸುತ್ತಾರೆ. ಹೇಗೆಂದರೆ ಪ್ರತಿನಿತ್ಯ ಸ್ನಾನ, ಪೂಜೆ, ಪಾದೋದಕ-ಪ್ರಸಾದ, ವಿಭೂತಿ ರುದ್ರಾಕ್ಷಿ ಧಾರಣ, ಧ್ಯಾನ, ಮಂತ್ರಪಠಣ ಇತ್ಯಾದಿ ಕ್ರಿಯೆಗಳು ನಮ ಸಮಾಜದಲ್ಲಿ ಸದಾಚಾರಗಳೆಂದೇ ಗ್ರಹಿಸಲ್ಪಡುತ್ತಿವೆ. ಇದಕ್ಕೆ ವ್ಯತಿರಿಕ್ತವಾದ ಕ್ರಿಯೆಗಳು ಅನಾಚಾರವೆಂದು ಕರೆಯಲ್ಪಡುತ್ತವೆ. ಉದಾಹರಣಾರ್ಥ ಲಂಗವನ್ನು ಬಿಟ್ಟರೆ, ವಿಭೂತಿರುದ್ರಾಕ್ಷಿಗಳನ್ನು ಧರಿಸದಿದ್ದರೆ, ಸ್ನಾನಮಾಡದೆ ಊಟ ಮಾಡಿದರೆ, ಅಭಕ್ಷ್ಯ ಭಕ್ಷಣ- ಅಪಾನಪೇಯಗಳನ್ನಾಚರಿಸಿದರೆ, ಭವಿಗಳೊಡನೆ ರೋಟಿ-ಬೇಟಿ ವ್ಯವಹಾರ ನಡೆಸಿದರೆ- ಇದಕ್ಕೆ ಅನಾಚಾರವೆಂದು ಕರೆಯುತ್ತಾರೆ. ಇಂಥ ಅನಾಚಾರಿಗಳು ಸಮಾಜಕ್ಕೆ ದೂರಮನುಷ್ಯನು ಒಂದು ವೇಳೆ ನೀತಿ ಬಾಹಿರನಾದರೂ ಅಡ್ಡಿಯಿಲ್ಲ. ಆದರೆ ಅನಾಚಾರಿಯಾಗಿ ನಡೆದರೆ ಮಾತ್ರ ಧರ್ಮಕ್ಕೆ ದೂರನೆಂದು ಅವನನ್ನು ಕುಲದಿಂದ ಹೊರಗಿಡುವ ಸಾಂಪ್ರದಾಯವು ಬಹು ದಿನಗಳಿಂದ ನಮ್ಮ ಸಮಾಜದಲ್ಲಿ ಸೂತ್ರವಾಗಿತ್ತು. ಆದರೆ ಜಾತ್ಯತೀತವಾದ ಈಗಿನ ಕಾಲದಲ್ಲಿ ಅಂಥ ಕಟ್ಟಳೆಗಳು ಜಾತ್ಯಂಧತೆಯ ಲಕ್ಷಣಗಳೆಂದು ಶಿಥಿಲತೆಯನ್ನು ಹೊಂದಿವೆ.

ನಿಜವಾಗಿ ವಿಚಾರಿಸಿದರೆ ಮನುಷ್ಯನು ತನ್ನ ಧರ್ಮಕಟ್ಟಳೆಗನ್ನೆಂದಿಗೂ ಮೀರಬಾರದು. ಹಾಗೆಮಾಡಿದರೆ ಸಮಾಜದಲ್ಲಿ ಬಂಧುರತೆಯು ಉಳಿಯಲಾರದು. ಮನುಷ್ಯನಲ್ಲಿ ಸ್ವಚ್ಛತೆ; ಆರೋಗ್ಯ, ದೀರ್ಘಾಯುಷ್ಯಗಳು ಬೆಳೆದು

ಸಮಾಜದ ನೈತಿಕ ಮಟ್ಟವನ್ನು ಹೆಚ್ಚಿಸಲು ಆ ಕಟ್ಟಳೆಗಳು ಹೆಚ್ಚು ಪೋಷಕವಾಗಿರುತ್ತವೆ. ಆದರೆ ಧಾರ್ಮಿಕ ವ್ರತನೇಮುಗಳನ್ನು ಚೆನ್ನಾಗಿ ಪಾಲಿಸಿ ಮನುಷ್ಯನು. ವ್ಯಭಿಚಾರಿಯೂ, ಹಿಂಸಾಪರನೂ, ಕಳ್ಳನೂ, ಸುಳ್ಳನೂ, ಆಗಿ ಬಿಟ್ಟರೆ ಅವನ ಆಚಾರಕ್ಕೆ ಭಂಗ. ಕೇವಲ ನೀತಿಯಿಂದ ನಡೆದರೆ ಸಾಕು. ಅರ್ಥವಿಲ್ಲದ ಪೂಜೆ–ಪುನಸ್ಕಾರ, ವಿಭೂತಿ ರುದ್ರಾಕ್ಷಿಗಳಿಂದೇನು ಪ್ರಯೋಜನವೆಂದು ಹೇಳುವದೂ ಅನಾಚಾರವೇ ಸರಿ. ನಮ್ಮ ಸಮಾಜದಲ್ಲಿ ನೀತಿಗೆ ಪ್ರಾಮುಖ್ಯತೆಯಿದ್ದಷ್ಟು ಕ್ರಿಯಾಚಾರಕ್ಕೂ ಉಂಟು.. ನೀತಿಯೂ ಸದಾಚಾರ. ಕ್ರಿಯಾಚಾರವೂ ಸದಾಚಾರ. ಆದ್ದರಿಂದ ವೀರಶೈವರು ನೀತಿಮಾರ್ಗವನ್ನು ಬಿಡತಕ್ಕದ್ದಲ್ಲ. ಪ್ರತಿನಿತ್ಯದ ಧಾರ್ಮಿಕ ಕ್ರಿಯಾಚಾರಗಳನ್ನೂ ಬಿಡತಕ್ಕದಲ್ಲ.

ಕೆಲವರು ನೀತಿಗೆ ಹೆಚ್ಚು ಪ್ರಾಧಾನ್ಯ ಕೊಟ್ಟು ಧಾರ್ಮಿಕ ಕಟ್ಟಳೆಗಳನ್ನು ಜರೆದು ಬಿಟ್ಟುಬಿಡುತ್ತಾರೆ. ಇದು ಶುದ್ಧತಪ್ಪು. ಬೇರೆ ಕೆಲವರು ಧಾರ್ಮಿಕ ವಿಧಾನಗಳನ್ನು ಯಾಂತ್ರಿಕ ರೀತಿಯಿಂದ ತಪ್ಪದೆ ನಡೆಯಿಸಿ ನೀತಿ ಬಾಹಿರರಾಗಿ ವರ್ತಿಸುತ್ತಾರೆ. ಅದೂ ಶುದ್ಧ ತಪ್ಪು. ನೀತಿ ಕ್ರಿಯಾಚಾರಗಳು ಪರಸ್ಪರ ಪೋಷಕವಾಗಿರುತ್ತವೆ. ನೀತಿವಂತನಾಗಿ ಕ್ರಿಯಾ ಬಾಹ್ಯನಾದವನೂ ವೀರಶೈವನಲ್ಲ. ಕ್ರಿಯಾವಂತನಾಗಿ ನೀತಿಬಾಹ್ಯನಾದವನೂ ವೀರಶೈವನಲ್ಲ. ಆದರೆ ನೀತಿ ಕ್ರಿಯಾಚಾರಗಳನ್ನು ತಪ್ಪದೆ ಪಾಲಿಸಿಕೊಂಡು ಹೋಗುವವನೇ ಸದಾಚಾರಿಯು. ಅವನೇ ಶುದ್ಧ ವೀರಶೈವನು.

ಇನ್ನು ದುರಾಚಾರವೆಂದರೆ ನೀತಿ ಬಾಹ್ಯವಾದ ಆಚರಣೆ ಉದಾಹರಣಾರ್ಥವಾಗಿ ಕಳವು, ಕೊಲೆ, ಸುಲಿಗೆ, ವ್ಯಭಿಚಾರ, ಮದ್ಯಪಾನ, ಪರನಿಂದೆ, ಆತ್ಮಸ್ತುತಿ, ಅಸತ್ಯ, ಅಪ್ರಮಾಣಿಕತನ— ಇವೆಲ್ಲ ದುರಾಚಾರಗಳೆಂದು ಹೇಳಬಹುದು. ದುರಾಚಾರಗಳು ನಿಷಿದ್ಧವೆಂದು ಎಲ್ಲ ಧರ್ಮಗಳೂ ಒಪ್ಪಿದೆ. ಎಲ್ಲ ಸರಕಾರಗಳು ಕಾಯಿದೆಗಳಿಂದ ಅವುಗಳನ್ನು ನಿಗ್ರಹಿಸುತ್ತವೆ. ವ್ಯಕ್ತಿ ವ್ಯಕ್ತಿಗಳಲ್ಲಿ ದುರಾಚಾರಗಳು ಅಧಿಕವಾಗಿ ಬಿಟ್ಟರೆ ಸಮಾಜದಲ್ಲಾಗಲಿ ರಾಷ್ಟ್ರದಲ್ಲಾಗಲಿ ಶಾಂತತೆ ಸುವ್ಯವಸ್ಥೆಗಳು ನೆಲೆಗೊಳ್ಳಲಾರವು. ಆದ್ದರಿಂದ ದುರಾಚಾರಗಳಿಂದ ದೂರಾದವನೇ ನಿಜವಾದ ವೀರಶೈವನು.

ಇನ್ನು ಡಂಭಾಚಾರವೆಂದರೆ ಜನಮೆಚ್ಚಿಗೆಗಾಗಿ ಕೆಲಸ ಮಾಡಿ ತನ್ನ ಸ್ವಾರ್ಥ ಸಾಧಿಸುವಗುಣ. ಡಂಭಾಚಾರದಲ್ಲಿ ತಥ್ಯಾಂಶವೇನೂ ಇರುವದಿಲ್ಲ. ಒಳಗಿಂದೊಳಗೆ ಪಾಪಿಯೂ ದುಷ್ಕರ್ಮಿಯೂ ಅನಾಚಾರಿಯೂ

ಆದ ಮನುಷ್ಯನು ಹೊರಗೆ ಒಳ್ಳೆ ಸಂಭಾವಿತ ಹಾಗೂ ಧಾರ್ಮಿಕನ ಸೋಗು ಹಾಕಿಕೊಂಡು ಮರಳು ಜನರ ಕಣ್ಣಿಗೆ ಮಂಕು ಬೂದಿಯನ್ನು ಹಚ್ಚಿ ತನ್ನ ಸ್ವಾರ್ಥವನ್ನು ಸಾಧಿಸುವನು. ಮುಂದಿಗೆ ತಾನು ಮೋಸ ಮಾಡಿ ಹಾದಿ ನಿಸಿಕೊಂಡರೂ ಅವನ ಮನಸ್ಸು ತಾನು ಎಂಥ ನೀಚನೆಂಬುದನ್ನು ಹೇಳೀ ಹೇಳುತ್ತದೆ. ಪರಮಾತ್ಮನಿಗೆ ಇವನ ನೀಚತನವೂ ಕಪಟ್ಯವೂ ಗೊತ್ತಾಗದೆ ಎಂದೂ ಹೋಗುವದಿಲ್ಲ. ಆದ್ದರಿಂದ ಮುಪ್ಪಿನ ಷಡಕ್ಷರ ಸ್ವಾಮಿಗಳು "ಇತರ ರರಿಯದಿರ್ದಡೇನೆಲಾ, ನಿನ್ನಂತರಂಗ ಕ್ಷಿತಿಯುಮೇಶನರಿಯನೇನೆಲಾ" ಎಂದು ಅಪ್ಪಣೆ ಕೊಡಿಸಿದ್ದಾರೆ. ಸರ್ಪಭೂಷಣ ಶಿವಯೋಗಿಗಳು ಜನಮೆಚ್ಚಿ ನಡೆಕೊಂಡರೇನುಂಟು ಲೋಕದಿ ಮನಮೆಚ್ಚಿ ನಡ ಕೊಂಬುವದೆ ಚಂದವು" ಎಂದು ಅಪ್ಪಣೆಕೊಡಿಸಿರುವರು. ಕಳ್ಳ ಶರಣನು ಜನರಿಗೆ ತಾನು ಒಳ್ಳೇ ಭಕ್ತನೆಂದು ತೋರಿಸಲಿಕ್ಕೆ ಬಂಡಿತುಂಬ ಪತ್ರಿಪುಷ್ಪ ಗಳನ್ನು ತಂದು ಶಿವಪೂಜಾ ಸಾಮಾನುಗಳನ್ನು ಕಂಚುಗಾರರ ಪಸಾರದಂತೆ ಹರವಿ, ಗಟ್ಟಿಮಾಡಿದ ಮಂತ್ರಗಳನ್ನು ಪಠಿಸುತ್ತ ಒಳ್ಳೆ ಆಡಂಬರದಿಂದ ಶಿವ ಪೂಜೆ ಮಾಡಿ ಜನರನ್ನು ದಂಗುಬಡಿಸಿ ಅವರಿಂದ ಗಂಟು ಎಬ್ಬಿಸಬಹುದು. ಆದರೆ ಡಂಭಾಚಾರವು ಒಮ್ಮೆಲ್ಲೊಮ್ಮೆ ಹೊರಬಿದ್ದರೆ ಅವನ ಸ್ವರೂಪಹಾನಿ ಯಾಗುವದರಲ್ಲಿ ಸಂದೇಹವಿಲ್ಲ. ಡಂಭಾಚಾರಿಗಳು ನಿಜವಾದ ವೀರಶೈವರಲ್ಲ ಅವರು ಗಂಟುಗಳ್ಳರು ಇಲ್ಲವೆ ವಿಷಯಲಂಪಟರು.

ಒಟ್ಟನಮೇಲೆ ನಾವು ನೆನಪಿಡತಕ್ಕ ಸಂಗತಿಗಳೆಂದರೆ ಮನುಷ್ಯನಿಗೆ ಸದಾಚಾರ (ನೀತಿ) ಸತ್ಕ್ರಿಯೆ (ಧಾರ್ಮಿಕಕಟ್ಟುಪಾಡು) ಗಳು ಅವಶ್ಯವಾಗಿ ಬೇಕು. ಆದರೆ ಅನಾಚಾರ, ದುರಾಚಾರ, ಡಂಭಾಚಾರಗಳು ಸರ್ವಥಾ ಬೇಡ.

ಕೆಲವರು ಕಾಮ, ಕ್ರೋಧ, ಲೋಭ, ಮೋಹ, ಮದ ಮತ್ಸರವೆಂಬ ಷಡ್ರಿಪುಗಳನ್ನು ಅಳಿಯುವದು ಸದಾಚಾರವೆಂದು ಹೇಳುತ್ತಾರೆ. ಅವು ಹುಟ್ಟುಗುಣಗಳಾದ್ದರಿಂದ ಅವುಗಳನ್ನು ಅಳಿಯುವದು ಯಾರಿಗೂ ಶಕ್ಯವಿಲ್ಲ. ಆದರೆ ಅವುಗಳ ಸದುಪಯೋಗ ಮಾಡಿಕೊಳ್ಳುವದೇ. ಸದಾಚಾರ. ದುರಪ ಯೋಗ ಮಾಡಿಕೊಳ್ಳುವದೇ ದುರಾಚಾರವೆಂದು ಹೇಳಬಹುದು. ಅದು ಹೇಗೆಂ ದರೆ ಶಾಸ್ತ್ರಪರಿತು ಕಾಮುವನ್ನು ಸ್ವ ಸ್ತ್ರೀಯಲ್ಲಿ ಆಚರಿಸುವದು ಸದಾಚಾರ ಪರಸ್ತ್ರೀ-ವೇಶ್ಯಾಸಂಗದಲ್ಲಿ ಅದನ್ನಾಚರಿಸಿದರೆ ಅದು ದುರಾಚಾರ. ಕಳ್ಳತನ

ದಿಂದ ವ್ಯಭಿಚಾರವನ್ನು ದಕ್ಕಿಸಿಕೊಂಡು ಸರಕಾರದ ಶಾಸನದಿಂದ ಮನುಷ್ಯನು ತಪ್ಪಿಸಿಕೊಳ್ಳಬಹುದು. ಆದರೆ ಸರ್ವಜ್ಞನಾದ ಪರಮಾತ್ಮನ ಶಿಕ್ಷೆಯನ್ನಿಂದಿಗೂ ಆತನು ತಪ್ಪಿಸಿಕೊಳ್ಳಲಾರ. ವಿವಾಹತ್ಯಾವಾಗಲಿ, ಸನ್ಯಾಸ ಸ್ವೀಕಾರವಾಗಲಿ ಸದಾಚಾರವೆಂದು ಹೇಳಲಾಗುವದಿಲ್ಲ. ಅವಿವಾಹಿತನೂ ಸನ್ಯಾಸಿಯೂ ಸ್ವೇಚ್ಛಾಚಾರಿಯಾಗುವ ಸಂಭವವುಂಟು. 'ಉಂಡುಉಪವಾಸಿ ಬಳಸಿ ಬ್ರಹ್ಮಚಾರಿ'ಯಾಗಿರುವದು ಲೇಸೆಂದು ಶರಣ ಸಂಪ್ರದಾಯವು ಹೇಳುತ್ತದೆ. ಕೇವಲ ಶರಣರಸತಿ ಲಿಂಗವಂತಿಯೆಂಬ ಭಾವದಿಂದ ಕಾಮವನ್ನು ಗೆದ್ದು ವ್ಯವಹರಿಸುವ ವ್ಯಕ್ತಿಗಳು ಅಲ್ಲಮಪ್ರಭು ಅಕ್ಕಮಹಾದೇವಿಯರಂತೆ ಅತೀವ ವಿರಳರಾಗಿರುತ್ತಾರೆ.

ಬುದ್ಧಿಯಲ್ಲಿ ಸಿಟ್ಟನ್ನುಕೊಡುವದು ಸದಾಚಾರ. ಸಿಟ್ಟಿನಕೈಯಲ್ಲಿ ಬುದ್ಧಿಯನ್ನು ಕೊಡುವದು ದುರಾಚಾರ. ನಮ್ಮ ದುಶ್ಚಟ; ಪಾಪ, ದುರ್ಬುದ್ಧಿಗಳಿಗೆ ಹೇಸಿ ಸಿಟ್ಟಾಗಿ ಅವುಗಳನ್ನು ತ್ಯಜಿಸುವದಾಗಲಿ ಅನ್ಯರಲ್ಲಿದ್ದುದನ್ನು ಛೀಹಾಕಿ ಬಿಡಿಸುವದಾಗಲಿ ಸದಾಚಾರವೇ. ಆದರೆ ಸಿಟ್ಟಿನಭರದಲ್ಲಿ ನಾಲಿಗೆಯನ್ನು ನಿಯಂತ್ರಣಗೊಳಿಸದೆ ಮನಸ್ಸನ್ನು ಸ್ವಾಧೀನದಲ್ಲಿಟ್ಟುಕೊಳ್ಳದೆ ಅವಿವೇಕತನದಿಂದ ಹಿಂಸೆ ಮುಂತಾದ್ದನ್ನಾಚರಿಸಿದರೆ ಅದು ದುರಾಚಾರ. 'ಸಹಸಾ ವಿದಧೀತ ನ ಕ್ರಿಯಾಂ ಅವಿವೇಕಃ ಪರಮಾಪದಾಂ ಪದಂ ಎಂದು ಭಾರವಿ ಕವಿಯು ಹೇಳಿದ್ದಾನೆ. ಅಂದರೆ ಅವಿವೇಕತನದಿಂದ ಯಾವಕೆಲಸವನ್ನೂ ಮಾಡಬೇಡ. ಹಾಗೆ ಮಾಡಿದರೆ ವಿಪತ್ತಿಗೀಡಾಗುವಿ ಎಂಬರ್ಥ. ತೋಳವನ್ನು ಕೊಂದ ನಾಯಿಯು ತನ್ನ ಮಗನನ್ನೇ ಕೊಂದಿರುವದೆಂದು ಭಾವಿಸಿ ಸಿಟ್ಟಿನಿಂದ ಅದನ್ನು ಗುಂಡಿಕ್ಕಿಕೊಂದು ಹಿಂದುಗಡಿಗೆ ನಿಜಾಂಶವನ್ನು ತಿಳಿದು ಪಶ್ಚಾತಾಪ ಬಡುವ ಒಕ್ಕಲಿಗನ ಕೃತಿಯು ಪಾಪವೇ ಸರಿ. ನಮ್ಮ ಸಿಟ್ಟು ದುರ್ಗುಣವೋಲಿರಬೇಕಲ್ಲದೆ ವ್ಯಕ್ತಿಯ ವಿನಾಶಕ್ಕಲ್ಲ. ಮಡಿವಳನು ಸಿಟ್ಟಿನಿಂದ ಬಟ್ಟೆಯನ್ನು ಸೆಳೆಯುವಾಗ ಅವನ ಉದ್ದೇಶವು ಬಟ್ಟೆಯ ಮಲಿನತ್ವವು ಹೋಗಬೇಕೆಂಬದಿಷ್ಟೇ ಇರುತ್ತದಲ್ಲದೆ ಬಟ್ಟೆಯನ್ನು ಹರಿಯಬೇಕೆಂದಿರುವದಿಲ್ಲ. ಲಿಂಗವಂತನು ಲಿಂಗವಂತನಿಗೆ ಬುದ್ಧಿಯ ಹೇಳುವಲ್ಲಿ ಅವನ ದುರ್ಗುಣಗಳನ್ನು ಕಳೆಯಬೇಕೆಂಬ ಸಿಟ್ಟಿರಬೇಕಲ್ಲದೆ ಅವನನ್ನೇ ನಾಶಮಾಡಿಬಿಡಬೇಕೆಂಬ ಸಿಟ್ಟಿರಕೂಡದು.

ನಿತ್ಯಶುದ್ಧಕಾಯಕದಿಂದ ತಾನು ಗಳಿಸಿದ್ದರಲ್ಲಿಯೇ ತೃಪ್ತಿಯಿಂದಿರುವದು ಸದಾಚಾರ. ಆದರೆ ಪ್ರಾಮಾಣಿಕ ಗಳಿಕೆಯಿಂದ ತೃಪ್ತನಾಗದೆ, ಕಳ್ಳಪೇಟೆ

ಲಂಚಗುಳಿತನ ಚೌರ್ಯ, ಕಪಟತನ, ದರೋಡೆ ಮುಂತಾದವುಗಳಿಂದ ಹಣ ಗಳಿಸಬೇಕೆಂಬಾಸೆಯು ಅರ್ಥಾತ ಲೋಭವು ದುರಾಚಾರವು. "ಕಡುಲೋಭ ದಿಂದ ದುರ್ಗುಣವುನ್ಯಳುಂಟೇ ?" ಎಂದು ನಿಜಗುಣ ಶಿವಯೋಗಿಗಳು ಹೇಳಿದ್ದಾರೆ. ಸದಾಚಾರದ ಗಳಿಕೆಗೆ ಚ್ಯುತಿಯಿಲ್ಲ. ಅನ್ಯಾಯದಗಳಿಕೆ ಅಡವೀ ಪಾಲು. ಅ ಪ್ರಾಮಾಣಿಕ ವ್ಯವಹಾರವು ಒಮ್ಮೆ ಬೈಲಿಗೆ ಬಿದ್ದರೆ ಸರ್ವಸ್ವೀ ಘಾತವಾಗುವದು. ಕಡುಲೋಭಿಯಾದ ಮನುಷ್ಯನು ಎಂಥ ಪಾಪ ಕೃತ್ಯ ವನ್ನು ಮಾಡಲಿಕ್ಕೂ ಹೇಸನು. ಆತನು ತಾಯ್ತಂದೆಗಳ ಕುತ್ತಿಗೆ ಕೊಯ್ಯಲು ಸಹ ಹಿಂದು ಮುಂದೆ ನೋಡುವದಿಲ್ಲ. ಇತರರ ಪಾಡೇನು ? ನಿತ್ಯ ಶುದ್ಧ ಕಾಯಕವೇ ಕಡುಲೋಭವನ್ನು ನಿಗ್ರಹಿಸುವ ಪರಮ ಸಾಧನವು.

ತನಗೆ ಈಶನು ಕರುಣಿಸಿಕೊಟ್ಟ ಹೊನ್ನು, ಹೆಣ್ಣು, ಮಣ್ಣು ಇವು ಪರಮಾತ್ಮನ ವಸ್ತುಗಳೆಂದೇ ತಿಳಿದು ಅವುಗಳಲ್ಲಿ ಪ್ರೇಮವಿಟ್ಟು ನಡೆಯು ವದೇ ಸದಾಚಾರ. ಆದರೆ ಅವು ತನ್ನವೆಂದೇ ಭಾವಿಸಿ ಅವುಗಳಿಗಾಗಿ ಪ್ರಾಣ ಕೊಡುವದಾಗಲಿ ಅನ್ಯರು ಅವಕ್ಕೆ ಕೈ ಹಾಕಿದರೆ ಅವರ ಪ್ರಾಣವನ್ನು ಹೀರುವ ದಾಗಲಿ ದುರ್ಮೋಹವು. ಈಶನ ವಸ್ತುಗಳೆಂದು ತಿಳಿದವನು ಮನುಷ್ಯನು ಅವು ನಷ್ಟವಾದಾಗ ಶಿವನ ವಸ್ತುಗಳು ಶಿವನಿಗೆ ಅರ್ಪಿತವಾದವೆಂದು ದುಃಖ ಕ್ಕೀಡಾಗುವದಿಲ್ಲ. ಆದರೆ ದುರ್ಮೋಹಿಯು ಎದೆ ಎದೆ ಹೊಡಕೊಂಡು ಗೋಳಾಡುವನು, ಇಲ್ಲವೆ ಆತ್ಮಹತ್ಯಮಾಡಿಕೊಳ್ಳುವನು ಕಾರಣ ಆ ವಸ್ತು ಗಳು ಪರಮಾತ್ಮನವೆಂಬ ಸನ್ಮೋಹವಿರಬೇಕೇ ವಿನಾ ತನ್ನವೆಂಬ ದುರ್ಮೋಹ ವಿರಕೂಡದು.

ಮದವೆಂದರೆ ಮೈಸೊಕ್ಕು; ದುರಹಂಕಾರ. "ಶಿವಶರಣರಾಮನೆಯು ತವೆ ಸೇವೆಗಳ ಮಾಡಿ ಭವವ ಗೆದ್ದವು ನಮಗೆ ಸರಿಯದಾರು?" ಎಂದು ಮುಪ್ಪಿನ ಷಡಕ್ಷರಿಗಳು ಹೇಳುವಂತೆ ಸದಹಂಕಾರ ವಿರುವದು ಸದಾಚಾರ. ಆದರೆ ನನ್ನ ಸಮಾನ ಶ್ರೀಮಂತರಾರು? ಶಕ್ತಿವಂತರಾರು? ಬುದ್ಧಿವಂತರಾರು? ಅಧಿಕಾರವಂತರಾರು? ಭಕ್ತಿವಂತರಾರು? ಎಂದು ಕಣ್ಣು ನೆತ್ತಿಯಮೇಲೆ ಬಂದು ಗುರು ಹಿರಿಯರನ್ನು ಲೆಕ್ಕಿಸದೆ ಅನ್ಯರೊಡನೆ ಕಾಲ್ಕೆದರಿ ನ್ಯಾಯವಾಡಿ ಅವರನ್ನು ಹಿಂಸಿಸುವ ದುರಹಂಕಾರವು ದುರಾಚಾರವೇ ಸರಿ. ಅದಕ್ಕಂತೆಯೇ ಬಾಲ ಲೀಲಾ ಮಹಾಂತ ಶಿವಯೋಗಿಗಳು "ಗುರುಹಿರಿಯರನ್ನು ಕಂಡು ಕೋಣ

ನಂಪದಿ ಮಲೆತು ಸಿರಬಾಗದಿರೆ ಮುಂದೆ ಘನಬಾಧೆ ಬಡುವೆ" ಎಂದು ಮಹಾಂಧರಿಗೆ ಬುದ್ಧಿವಾದ ಹೇಳಿದ್ದಾರೆ. ಕೀಳರಾದೆಮಗೆ ಈಶಕೃಪೆಯಿಂದ ಐಶ್ವರ್ಯ ಅಧಿಕಾರ ವಿನಯಾದಿ ಸೌಜನ್ಯಗಳುಂಟಾದವೆಂಬ ಹೆಮ್ಮೆಯಿರ ಬೇಕು. ಆದರೆ ಅಧಿಕಾರ ಸಂಪತ್ತು ಬಂದಾಗ ಅನ್ಯರನ್ನು ಕಡೆಗಣ್ಣಿ ಕಾಲ ಕೆಳಗೆ ತುಳಿಯಬೇಕೆಂಬ ದುಷ್ಟ ಪ್ರವೃತ್ತಿಯು ಸರ್ವಥಾಬೇಡ.

ಅನ್ಯರ ಹೆಚ್ಚಳವನ್ನು ನೋಡಿ ಹೊಟ್ಟೆಯಲ್ಲಿ ಕಸಿವಿಸಿಗೊಂಡು ಉರಿಯುವ ಪ್ರವೃತ್ತಿಯು ಮತ್ಸರವೆನಿಸುವದು. ಇಂಥ ಮತ್ಸರ್ಯವು ದುರಾಚಾರವೇ ಸರಿ. ಆದರೆ ತಾನೂ ಅವರಂತಾಗಬೇಕೆಂದು ಸ್ಪರ್ಧಿಸುವ ಗುಣವು ಸದಾಚಾರವು. ಸ್ಪರ್ಧಿಸುವದು ಶಕ್ಯವಿರದಿದ್ದರೆ ಅವರನ್ನು ನೋಡಿ ಹಿಗ್ಗುವದಾಗಲಿ ಸಹಿಸಿಕೊಂಡು ಸುಮ್ಮನಿರುವದಾಗಲಿ ಸದಾಚಾರವೇ ಸರಿ ಅದೂ ಶಕ್ಯವಿರದಿದ್ದರೆ ಉಳಿದ ಎಷ್ಟೋ ಜನರಿಗಿಂತ ತಾನು ಬುದ್ಧಿವಂತನೂ ಶ್ರೀಮಂತನೂ ಇರುವೆನಲ್ಲ? ಎಂಬ ಸಮಾಧಾನವನ್ನಳವಡಿಸಿ ಕೊಳ್ಳುವದೂ ಸದಾಚಾರವೇ ಸರಿ. ಆದರೆ ಎಲ್ಲವೂ ತನಗೇ ಒಳಿತಾಗಬೇಕು. ಉಳಿದವರಿಗೆ ಕೇಡಾಗಬೇಕು. ಎಂದು ತಿಳಿದು ವರ್ತಿಸುವ ಮತ್ಸರ್ಯವು ಮಾತ್ರ ಅತ್ಯಂತ ಹೇಯವಾದುದು

ಈ ರೀತಿಯಾಗಿ ನಾವು ಅರಿಷಡ್ವರ್ಗಗಳ ಸದ್ವಿನಿಯೋಗ ಮಾಡಿಕೊಂಡು ನಡೆದರೆ ಅದೇ ಸದಾಚಾರ. ದುರುಪಯೋಗ ಮಾಡಿಕೊಂಡರೆ ಅದೇ ದುರಾಚಾರ.

## —ಸದ್ಭಕ್ತಿ—

ತನಗೆ ಇಷ್ಟವಾದ ಪರಮಾತ್ಮನು ಒಬ್ಬನೇ ಎಂದು ಭಾವಿಸಿ ಶುದ್ಧಾಂತಕರುಣದಿಂದ ಫಲಾಪೇಕ್ಷೆಯಿಲ್ಲದೆ ಆತನಲ್ಲಿ ಪ್ರೇಮಧ್ಯಾನ-ಪೂಜಾಕ್ರಿಯಾದಿಗಳನ್ನಾಚರಿಸುವದೇ ಸದ್ಭಕ್ತಿಯು. ಸದ್ಭಕ್ತಿಯುಳ್ಳೊಡೆ ಆನಂದ ಬಾಷ್ಪಗಳು ಉಕ್ಕಿ ಬರಬೇಕು. ಮೈಬೆವರಿನವಿರೇಳಬೇಕು. ಸ್ವರವು ಗದ್ಗದಿತವಾಗಬೇಕು. ಆತನ ಹಂಬಲದ ಹೊರತು ಬೇರಾವ ಹಂಬಲವೂ ಬರಕೂಡದು. ಹೀಗೆ ಮಾಡುವದನ್ನು ಬಿಟ್ಟು ಬೇರೆ ರೀತಿಯಾಗಿ ಮಾಡುವಭಕ್ತಿಯು ಡಾಂಭಿಕ ಭಕ್ತಿಯು. ಯಾಂತ್ರಿಕ ಭಕ್ತಿಯು, ಇಲ್ಲವೆ ವ್ಯಾಪಾರಿ ಭಕ್ತಿಯು ಇಂಥ ಭಕ್ತಿಗಳಿಗೆ ಪರಮಾತ್ಮನು ಮೆಚ್ಚನು. ಕಾಡಗಲ್ಲ ಮೇಲೆ ನೀರು ಸುರುವಿದರೆ ಅದು ನೆನೆಯ ಬಲ್ಲುದೇ ? ಅಂತರಂಗ ಉಕ್ಕದೆ ಎಷ್ಟುದಿನ ಯಾಂತ್ರಿಕ

ಭಕ್ತಿಯನ್ನಾಚರಿಸುವದರಿಂದೇನು ಫಲ. ತನಗೆ ಸಂಪತ್ತು ಅಧಿಕಾರ-ಮಕ್ಕಳು ದೊರೆತರೆ ದೇವರಿಗೆ ಕಿರೀಟಮಾಡಿಸುವೆನೆಂದು ಕರಾರು ಹಾಕುವ ವ್ಯವಹಾರಿ ಭಕ್ತಿಯಿಂದಾದರೂ ಪ್ರಯೋಜನವೇನು ? ಜನರ ಕಣ್ಣಲ್ಲಿ ಮಣ್ಣೆರಚುವ ಸ್ವಾರ್ಥಸಾಧನೆಯ ಭಕ್ತಿಯಿಂದಾದರೂ ಯಾವ ಸಾರ್ಥಕತೆಯಿದೆ ? ಪರಮಾತ್ಮನ ಸಲುವಾಗಿ ಆತ್ಮಾರ್ಪಣಮಾಡಲಿಕ್ಕೆ ಸಿದ್ಧವಾದಾಗ ಅದು ನಿಜವಾದ ಭಕ್ತಿಯೆನಿಸುವದು. ಗುಡಿಯು ಕಡಕೊಂಡು ಬಿದ್ದು ಮೃಡನು ಸಾಯಬಾರದೆಂದು ಲಿಂಗದ ಮೇಲೆ ಬೇಡರ ಕಣ್ಣಪ್ಪನು ಸಾಗರಬಿದ್ದನು. ತಾನು ತಂದ ಹಾಲನ್ನು ಶಿವನು ಕುಡಿಯಲೊಲ್ಲನೆಂದು ಹಂಬಲಿಸಿ ಆಲ್ಪರಿದು ಕೋಳೂರ ಕೊಡಗೂಸು ಆತನಿಗಾಗಿ ತನ್ನ ಜೀವನವನ್ನು ಪರಿತ್ಯಾಗ ಮಾಡಲು ಸಿದ್ಧಳಾದಳು. ಇದೇ ನಿಜಭಕ್ತಿ. ಅಂತೆಯೇ ಪ್ರಭುದೇವರು "ಹೊನ್ನಿಗಾಗಿ ಸತ್ತವರು ಕೋಟಿ, ಹೆಣ್ಣಿಗಾಗಿ ಸತ್ತವರು ಕೋಟಿ, ಮಣ್ಣಿಗಾಗಿ ಸತ್ತವರು ಕೋಟಿ, ಗುಹೇಶ್ವರಾ ನಿನಗಾಗಿ ಸತ್ತವರನೊಬ್ಬರನೂ ಕಾಣೆ" ಎಂದು ಅಪ್ಪಣೆ ಕೊಡಿಸಿದ್ದಾರೆ.

ಜಗತ್ತಿನಲ್ಲಿ ಕಣ್ಣಪ್ಪ ಕೊಡಗೂಸಿನಂಥ ನಿಜಭಕ್ತರು ಅತಿವಿರಳ ಆದರೆ ತನಗೆ ವ್ಯಾಪಾರದಲ್ಲಿ ದೊಡ್ಡ ಲಾಭವಾಗಬೇಕು; ದೊಡ್ಡ ನೌಕರಿ ಸಿಗಬೇಕು, ಸತಿಸುತ ಸಿರಿಸಂಪತ್ತುಗಳೊದಗಬೇಕು ಎಂದು ಹರಕೆ ಹೊತ್ತು ದೇವರಿಗೆ ಕಾಯಿ ಕಪ್ಪುರ ಮುಡುಪುಗಳನ್ನರ್ಪಿಸಿ ಅವುಗಳನ್ನು ಪಡಕೊಳ್ಳುವ ವ್ಯಾಪಾರಿ ಭಕ್ತರೇ ಅತ್ಯಧಿಕ ಅದರಂತೆ ಆಡಿಹಾಡಿ ಕುಣಿದು ನಲಿನಲಿದಾಡಿ ತಾಳಮದ್ದಳೆ ಏಕದಾರಿಗಳ ಸಹಾಯದಿಂದ ಭಕ್ತಿಮಾಡುವ ಜನರೂ ಅನೇಕರುಂಟು. ಇದೆಲ್ಲ ಜನರ ಕಣ್ಣಲ್ಲಿ ಮಣ್ಣು ತೂರುವ ಸ್ವಾರ್ಥಪರ ಜಾಣ್ಮೆಯಷ್ಟೇ!

ನಿಜವಾದ ಭಕ್ತಿಗೆ ದೇಶ-ಕಾಲ-ವಸ್ತುವಿನ ನಿರ್ಬಂಧವಿಲ್ಲ. ದೇವರ ಮನೆ, ಮಠ, ಚರ್ಚು, ಮಸೀದೆ ತೀರ್ಥಕ್ಷೇತ್ರಗಳಲ್ಲಷ್ಟೇ ದೇವರ ಪ್ರಾರ್ಥನೆ ಪೂಜೆಗಳನ್ನು ಮಾಡಬೇಕೆಂಬ ನಿಯಮವಿಲ್ಲ. ನಡೆವಾಗ-ನುಡಿವಾಗ-ಕಾಯಕ ಮಾಡುವಾಗ-ಅಶುಚಿ ಕಾರ್ಯಮಾಡುವಾಗ ಸಹ ಭಕ್ತಿಯನ್ನಾಚರಿಸಿದರೆ ದೋಷವಿಲ್ಲ. ಮುಗ್ಧ ಸಂಗಯ್ಯನು ಮಲಮೂತ್ರ ವಿಸರ್ಜನೆ ಮಾಡುವ ಸ್ಥಳದಲ್ಲಿ ಕುಳಿತು ತುಂಬಿಯ ಪುಷ್ಪಗಳಿಂದ ಲಿಂಗ ಪೂಜಾ ಸಂಭ್ರಮ ನಡೆಸಿದನು. ಆತನ ಭಕ್ತಿಗೆ ಬಸವಣ್ಣನು ತಲೆದೂಗಿದನು. ಸರ್ವ ಶೀಲದ

ಹೊನ್ನಮ್ಮನೆಂದು ಹೆಸರು ಪಡೆದ ಸಾಧ್ವಿಯೋರ್ವಳನ್ನು ಪರೀಕ್ಷಿಸಬೇಕೆಂದು ೬೩ ಶೀಲಗಳನ್ನು ತಪ್ಪದೆ ಆಚರಿಸುತ್ತಿದ್ದ ಪಾಲ್ಕುರಿಕೆ ಸೋಮನಾರಾಧ್ಯರು ಅವಳನ್ನು ಊರ ಹೊರಗೆ ಅಶುಚಿ ಸ್ಥಳದಲ್ಲಿ ಕಂಡಾಗ ಅವಳು ತಾನು ಹೊತ್ತ ತುಂಬಿದಕೊಡವನ್ನು ತಿಪ್ಪೆಯ ಮೇಲಿಟ್ಟು ಅವರಿಗೆ ಸಾಷ್ಟಾಂಗ ಹಾಕಿದಳಂತೆ ಆಗ ಸ್ವಾಮಿಗಳು ತಿಪ್ಪೆಯ ಮೇಲೆ ಕೊಡವನ್ನಿಳುಹಿ ನಮಸ್ಕರಿಸುವದು ನಿನ್ನದೆಂಥ ಶೀಲವೆಂದು ಮೂದಲಿಸಿದಂತೆ ಆಗ ಅವಳು ' ಸ್ವಾಮಿ ಪರಮಯೋಗಿಗಳಾದ ತಾವು ನಿಂತ ನೆಲವೇ ಪವಿತ್ರಕ್ಷೇತ್ರವೆಂದು ತಿಳಿದು ಕೊಡವನ್ನಿಳುಹಿ ಸಾಷ್ಟಾಂಗ ಹಾಕಿದೆನೆಂದಳಂತೆ ಸಾಧಕ ಸ್ಥಿತಿಯನ್ನು ಮಿರಿ ಸಿದ್ಧಾವಸ್ಥೆಗೇರಿದ ಅವಳ ನಿಜವಾದ ಭಕ್ತಿಗೆ ಸ್ವಾಮಿಗಳು ತಲೆದೂಗಿ ಅವಳ ಮನೆಯಲ್ಲಿ ಶಿವಪೂಜೆ ಪ್ರಸಾದಗಳನ್ನು ತೀರಿಸಿಕೊಂಡರಂತೆ ಹೊನ್ನಮ್ಮನಂಥ ನಿಜ ಭಕ್ತಳಿಗೆ ಶುಚಿ-ಅಶುಚಿ ಸ್ಥಾನಗಳಲ್ಲಿ ಭೇದವುಂಟೇ ?

ಕೆಲವರು ಭಕ್ತಿಯನ್ನು ತ್ರಿಕಾಲದಲ್ಲಿ ಮಾಡಬೇಕು, ಅಮಾವಾಸಿ, ಪುಣ್ಯತಿಥಿ, ಶಿವಯೋಗ, ಶ್ರಾವಣಮಾಸಗಳಲ್ಲಿ ಮಾಡಿದರೆ ಹೆಚ್ಚು ಫಲ ಪ್ರಾಪ್ತಿಯೆಂದು ಹೇಳುವರು. ದುಷ್ಟ ನಕ್ಷತ್ರ ತಿಥಿವಾರಗಳಲ್ಲಿ ಶಿವಭಕ್ತಿಯನ್ನಾಚರಿಸಿದರೆ ನಿಷ್ಫಲವೆಂದು ಹೇಳುವರು. ಶಿವಶರಣರು ಈ ಮಾತಿಗೆ ಒಪ್ಪುವದಿಲ್ಲ. ಭಕ್ತಿಭಾವವುಕ್ಕಿ ಬಂದ ದಿನವು ಎಂಥ ದುರ್ದಿನವಿದ್ದರೂ ಅಂಥ ಶುಭ ದಿವಸವು ಯಾವದು ಇಲ್ಲವೆಂದು ಅವರು ಹೇಳುವರು. ಸದ್ಭಕ್ತಿಸ್ಫುರಣವಾದ ದಿನವೇ ಶುಭದಿನ, ಶುಭನಕ್ಷತ್ರ, ಶುಭತಿಥಿ, ಶುಭಯೋಗ, ಶುಭಕರಣವೆಂಬದು ಅವರ ಮತ. ' ನಿಚ್ಚಲುಂ ಶಿವರಾತ್ರಿಯುಂ ಅಚ್ಚಳಿಯದೆ ಮಾಳ್ಪನೆಂದು " ಬಸವಣ್ಣನವರು ಹೇಳಿದ್ದಾರೆ. ಪ್ರತಿದಿನವೂ ಶಿವಪೂಜೆಗೆ ಶಿವಯೋಕದಷ್ಟೇ ಪವಿತ್ರ ದಿನವೆಂದು ಅವರ ಭಾವನೆ, ಆದ್ದರಿಂದ ಶಿವಭಕ್ತಿಯುನ್ನಾರಂಭಿಸಲಿಕ್ಕೆ ಶುಭ ದಿನ ಶುಭ ಮುಹೂರ್ತವನ್ನು ನಿರೀಕ್ಷಿಸುತ್ತ ಕಾಲಹರಣ ಮಾಡದೆ ಭಾವ ಹೊರಹೊಮ್ಮಿದ ಕ್ಷಣದಲ್ಲಿ ಮಾಡುವದೇ ಸದ್ಭಕ್ತಿಯೆಂಬದನ್ನು ನೆನಪಿನಲ್ಲಿಡಬೇಕು.

ಇನ್ನು ಯಾವ ವಸ್ತುವಿನಲ್ಲಿ ಭಕ್ತಿಯನ್ನಿಡಬೇಕು ? ಹರನಲ್ಲಿಯೋ ? ರಾಮನಲ್ಲಿಯೋ ? ರಹಿಮನಲ್ಲಿಯೊ? ಶಕ್ತಿಯಲ್ಲಿಯೊ? 'ದೇವನೊಬ್ಬ ನಾಮ ಹಲವು ಎಂದು' ಬಸವಣ್ಣನವರು ಅಪ್ಪಣೆಕೊಡಿಸಿದ ಮೇರೆಗೆ ನಮಗೆ ಇಷ್ಟ

ವಾದ ಬೇಕಾದ್ದೊಂದು ಹೆಸರಿನ ದೇವರನ್ನಾರಿಸಿಕೊಂಡು ಅಚಲವಾದ ಶ್ರದ್ಧೆಯಿಂದಾಚರಿಸುವದೇ ಸದ್ಭಕ್ತಿ "ಅವರವರ ಭಕ್ತಿಗಂ ಅವರವರ ಭಾವಕ್ಕೆ ಅವರವರ ತೆರನಾಗಿ ಶಿವನಿರ್ಪನು" ಎಂದು ಮುಪ್ಪಿನ ಷಡಕ್ಷರ ಸ್ವಾಮಿಗಳು ಹೇಳಿದ್ದಾರೆ. ಆದರೆ ನಾವು ಒಮ್ಮೆ ನಂಬಿ ಶ್ರದ್ಧೆಯನ್ನಿಟ್ಟ ದೇವರನ್ನು ಬಿಟ್ಟು ಬೇರೆ ಬೇರೆ ಹೆಸರುಗಳ ದೇವರನ್ನಾರಾಧಿಸುತ್ತ ಹೋದರೆ ನಮ್ಮ ಭಕ್ತಿಯು ಕುಂದುತ್ತ ಹೋಗುವದು. ‹ ರಾಮ ರಾಮ › ಎಂಬುವನನು ಕಡೆತನಕ ‹ ರಾಮ ರಾಮ ›ನೆಂದು ನುಡಿಯುತ್ತ ಸಾಯುವದು ಲೇಸು. ಆದರೆ ರಾಮ ನಾಮವನ್ನು ಬಿಟ್ಟು ‹ ಉದೋ ಉದೋ › ಎಂದು ಯಲ್ಲಮ್ಮನ ಮಂತ್ರ ಪಠಣ ಮಾಡಹತ್ತಿದರೆ ಹಿಂದೆಗಳಿಸಿದ ಅವನ ಶಕ್ತಿಯು ಕುಗ್ಗಿ ಹೊಸ ಶಕ್ತಿಯನ್ನು ಕಾಣಲು ಬಹುಕಾಲ ಹಿಡಿಯುವದು. ಅಂತೆಯೇ ಲಿಂಗಾಂಗಿಗಳು ಅನ್ಯದೇವರ ಪೂಜೆಮಾಡುವದನ್ನು ಶಿವಶರಣರು ಖಂಡತುಂಡವಾಗಿ ನಿಷೇಧಿಸಿರುವರು. ಬೇರೆ ದೇವರುಗಳ ಕಡೆಗೆ ಮನಸ್ಸು ಹೋಗಬಾರದೆಂದು ಅನ್ಯ ದೇವರುಗಳು ಕಿರುಕುಳ ದೇವರೆಂದು ಹೀಯಾಳಿಸಿರುವರು. ಒಬ್ಬ ದೇವರಲ್ಲಿಯೂ ವಿಶ್ವಾಸವಿಡದೆ "ಮುಳ್ಳು ಕಂಡು ಮುಳ್ಳು ಠ್ಯಾಂ ಠ್ಯಾ" ಎಂಬಂತೆ ಹಲವು ದೈವದೆಂಜಲವತಿಂಬ ಸಂಶಯಾತ್ಮನಿಗೆ ಅಧೋಗತಿಯುಂಟಾಗುವದು. ವಿಶ್ವಾಸವೇ ಸದ್ಗತಿ ವಿಶ್ವಾಸ ಸ್ಖಲನವೇ ದುರ್ಗತಿ. ‹ಸಂಶಯಾತ್ಮಾ ವಿನಶ್ಯತಿ› ಎಂಬುದನ್ನು ನಾವು ಲಕ್ಷದಲ್ಲಿಡಬೇಕು.

## ಪ್ರಾಯಶ್ಚಿತ್ತ

ಕೆಲವು ಶಾಸ್ತ್ರಗಳು ಮನುಷ್ಯನು ಮಾಡುವ ಪಾಪ ಕಾರ್ಯಗಳಿಗನುಸಾರವಾಗಿ ಪ್ರಾಯಶ್ಚಿತ್ತಗಳನ್ನು ಹೇಳಿವೆ. ಗೋಹತ್ಯ-ಸುರಾಪಾನ-ಹಿಂಸಾಚಾರ್ಯ ಮುಂತಾದ ಪಾಪಗಳನ್ನು ಮಾಡಿದವರು ತೀರ್ಥಸ್ನಾನ, ಸಹಸ್ರ ಪಣವ ಪಂಚಾಕ್ಷರಿ ಜಪ, ಶತಬ್ರಾಹ್ಮಣ ಭೋಜನ, ಗೋ ಸುವರ್ಣ ಧಾನ್ಯ-ವಸ್ತ್ರ ಇತ್ಯಾದಿ ದಾನ ಮುಂತಾದ ಕ್ರಿಯೆಗಳನ್ನಾಚರಿಸಿದರೆ ಅವರ ಪಾಪವು ಪರಿಹಾರವಾಗುವದೆಂದು ಅವರವರ ನಂಬಿಕೆ. ಶಿವಶರಣರು ಇಂಥ ಪ್ರಾಯಶ್ಚಿತ್ತಗಳನ್ನು ಖಂಡಿಸಿದ್ದಾರೆ, ಪಾಪಿಗೆ ಪ್ರಾಯಶ್ಚಿತ್ತದಿಂದ ತನ್ನ ಪಾಪಗಳನ್ನು ಕಳೆದುಕೊಳ್ಳಲಿಕ್ಕೆ ಬರುತ್ತದೆಂದ ಬಳಿಕ ಪಾಪ ಮಾಡಲಿಕ್ಕೆ ಅವನೇಕೆ ಹೇಸುವನು ? ಅದರಿಂದ ಪ್ರಾಯಶ್ಚಿತ್ತಗಳು ಪಾಪ ವಿಮೋಚನೆಗೆ ಕಾರಣವಾಗದೆ ಹೆಚ್ಚೆಚ್ಚಿಗೆ ಪಾಪ ಮಾಡಲು

ಅನುಕೂಲವಾದಂತಾಗುವವಲ್ಲವೆ? ಇದನ್ನರಿತೇ ಶಿವಶರಣರು ನಿಚ್ಚ ನಿಚ್ಚ ಪ್ರಾಯಶ್ಚಿತ್ತಹೊಂದುವ ಪಾಪಿಗಳನ್ನು ಮನವಾರೆ ಜರಿದಿರುವರು. ಮನುಷ್ಯನು ಪ್ರಮಾದಶೀಲ ಪ್ರಾಣಿಯೆಂಬುದೇನೋ ನಿಜ. ಆದರೆ ಏನೋ ಪ್ರಮಾದವಶಾತ ಪಾಪಗಳು ಘಟಿಸಿದರೆ ಪಶ್ಚಾತ್ತಾಪಹುಟ್ಟಿ ಶಪಥತೊಟ್ಟು ಪುನಃ ಅಂಥ ಪಾಪಗಳೆಂದೂ ತನ್ನಿಂದ ಘಟಿಸದಂತೆ ನೋಡಿಕೊಳ್ಳುವದೇ ಆತ್ಮೋದ್ಧಾರದ ನಿಜವಾದ ಮಾರ್ಗವು. ಆದ್ದರಿಂದ ಪ್ರಾಯಶ್ಚಿತ್ತಕ್ಕಿಂತಲೂ ಪಾಪವಿಮೋಚನೆಗೆ ಪಶ್ಚಾತ್ತಾಪ ದೃಢಶಪಥಗಳೇ ನಿಜೋನ್ನತಿಯ ಮಾರ್ಗಗಳೆಂದು ಶರಣರು ಸಾರಿದ್ದಾರೆ. ಆದ್ದರಿಂದ ನಾವು ನಮ್ಮಿಂದ ತಪ್ಪುಗಳಾಗಲಿ ಪಾಪಗಳಾಗಲಿ ಘಟಿಸದಂತೆ ಸದಾ ಜಾಗರೂಕರಾಗಿರುವದೇ ಉತ್ತಮೋಪಾಯವು. ಪ್ರಸಂಗವಶಾತ್ ಸಂಭವಿಸಿದರೆ ಪಶ್ಚಾತ್ತಾಪ ದೃಢಸಂಕಲ್ಪದಿಂದ ಪುನ: ಸಂಭವಿಸಿದಂತೆ ನೋಡಿಕೊಳ್ಳುವದು ಮಧ್ಯಮೋಪಾಯವು. ಆದರೆ ಒಮ್ಮೆ ಪಾಪಮಾಡಿ ಪ್ರಾಯಶ್ಚಿತ್ತಹೊಂದಿ ಪುನಃ ಪಾಪಮಾಡಿ ಮತ್ತು ಪ್ರಾಯಶ್ಚಿತ್ತಹೊಂದುವದು ಕನಿಷ್ಠೋಪಾಯವು. ಶರಣರು ಇದನ್ನು ಮೆಚ್ಚರು, ನಿಚ್ಚ ನಿಚ್ಚ ಪ್ರಾಯಶ್ಚಿತ್ತರು ಭೂಭಾರಕರೇ ಸರಿ.

ಶರಣರ ಮಾರ್ಗವು ಉತ್ತಮತರಹದ್ದು. ಜೀವನವೆಂಬುದು ಮುಳ್ಳಿನ ಹಾಸಿಗೆಯೆಂದು ತಿಳಿದು ಅತ್ಯಂತ ಜಾಗರೂಕರಾಗಿ ಪರಮಾತ್ಮನಲ್ಲಿ ಅಚಲ ಶ್ರದ್ಧೆಯಿಟ್ಟು (ಕಾರ್ಯನಿರ್ವಹಿಸುವದೇ) ಶ್ರೇಯಸ್ಕರವು. '**Trust in God and do the right**' ಎಂದು ಒಬ್ಬ ಆಂಗ್ಲಕವಿಯು ಹೇಳಿದ್ದಾನೆ. ಇದೇ ನಿಜವಾದ ಉನ್ನತಿಯ ಮಾರ್ಗ.



# ಭಕ್ತಿಯೋಗ

( ಬರೆದವರು:- ಶ್ರೀ ಶಿವಾನಂದ ಸ್ವಾಮಿಗಳು ಗವಿಮಠ ತೆಗ್ಗಿಹಳ್ಳಿ [ಇಂಡಿ] )



## ( ಇಷ್ಟಲಿಂಗ ಪೂಜೆ ಮೂರ್ತಿಪೂಜೆಯಲ್ಲ )

ಭಕ್ತಿ ಮಾಡಲಿಕ್ಕೆ ಒಂದು ಆಧಾರಬೇಕು. ಭಕ್ತನಿಗೆ ಮಾರ್ಗ ದರ್ಶಕನಾದ ಸದ್ಗುರುವು ಅವಶ್ಯ ಬೇಕಾಗಿರುವನು. ಅದರ ಬಗೆಗೆ ಹಿಂದಿನ ಲೇಖದಲ್ಲಿ ವಿವರಿಸಲಾಗಿದೆ. ಇನ್ನು ಮುಂದಿನ ಅವಶ್ಯಕತೆ ಎಂದರೆ ಪರ ಮಾತ್ಮನನ್ನು ಗುರುತುಮಾಡಿ ಕೊಡುವ ಒಂದು ಚಿನ್ಹೆ ಚಿನ್ಹೆಗಳು ಅಸಂಖ್ಯ ವಾಗಿರುವವು. ಮನುಷ್ಯ ಪಶು, ಪಕ್ಷಿ ಮೊದಲಾದವುಗಳ ಆಕಾರಗಳನ್ನು ಮಾಡಿಕೊಂಡು ಜನರು ಪೂಜಿಸುವದುಂಟು. ಆದರೆ ಇವುಗಳ ಶಕ್ತಿ ಇವು ಗಳ ಆಕಾರ ಇವುಗಳ ಯೋಗ್ಯತೆಗಳು ನಮ್ಮ ಕಣ್ಮುಂದೆ ಬಂದು ನಾವೂ ಮನುಷ್ಯರು ನಾವೇಕೆ ಇವುಗಳ ಭಕ್ತಿಮಾಡಬೇಕು? ನಮಗೂ ಇವುಗಳಿಗೂ ಏನು ಅಂತರ ವಿದೆ. ನಮ್ಮಲ್ಲಿರುವ ಗುಣಗಳೇ ಅವರಲ್ಲಿ ಇದ್ದಬಳಿಕ ನಾವೇಕೆ ಅವರನ್ನು ಪೂಜಿಸಬೇಕು ? ಎಂದು ಸಂದೇಹ ಹುಟ್ಟುವದು. ಅಲ್ಲದೆ ಬೆಳ್ಳಿ, ಬಂಗಾರ, ಹಿತ್ತಾಳಿ, ತಾಮ್ರಗಳ ಮೂರ್ತಿಗಳನ್ನು ಮಾಡಿದರೆ ಹೊಟ್ಟೆಗಿಲ್ಲ ದಾಗ ಮಾರಿಕೊಂಡ ತಿಂದ ಉದಾಹರಣೆಗಳೂ ಉಂಟು. ಅದಕ್ಕೆ ಇವುಗಳ ಮೇಲೆ ಭಕ್ತಿ ಹುಟ್ಟುವದಿಲ್ಲ. ಮಣ್ಣಿನಿಂದ ಮಾಡಿದರೆ ನೀರು ಹಾಕಿದರೆ ನೆನೆದು ಹೋಗುವದು. ಕೈಕಾಲು ಮೂಗು ಕಣ್ಣು ಬೆರಳು ಮೊದಲಾದ ಸೂಕ್ಷ್ಮ ಇಂದ್ರಿಯಗಳನ್ನು ಮಾಡಿದ ಮೂರ್ತಿಗಳಾದರೆ ಅವು ಒಡೆದು ಮುರಿದು ಹೋದದ್ದುಂಟು ಇದರಿಂದ ಭಿನ್ನವಾದ ಮೂರ್ತಿಗಳ ಮೇಲೆ ಭಕ್ತಿ ಬೀಳುವದು ಕಡಿಮೆಯಾಗುವದು. ಅಲ್ಲದೆ ಈ ತರದ ಆಕಾರದ ಮೂರ್ತಿಗಳನ್ನು ತಮ್ಮ ಸಂಗಡ ತಕ್ಕೊಂಡುಹೋಗಲಿಕ್ಕೆ ಬರುವದಿಲ್ಲ. ಪರಊರುಗಳಿಗೆ ಹೋದಾಗ ದೇವರ ಪೂಜೆ ಇಲ್ಲದೆ ಊಟ ಮಾಡಬೇಕಾಗುವದು. ಅಥವಾ ಒಂದೇ ಗುಡಿಯಲ್ಲಿರುವ ಮೂರ್ತಿಗೆ ಬಹುಜನರು ಭಕ್ತಿಮಾಡಲಿಕ್ಕೆ ಬರುವದಿಲ್ಲ. ಜನರ ಗದ್ದಲವೇ ಹೆಚ್ಚಾಗುವದು. ಇದುತನ್ನ ದೇವರೆಂಬ ಅಭಿಮಾನ ಹುಟ್ಟುವದಿಲ್ಲ. ಎಲ್ಲರೂ ಅದನ್ನು ಪೂಜಿಸುವದೂ ಶಕ್ಯವಿಲ್ಲ. ಪೂಜಾರಿಯ ಪೂಜೆಯನ್ನು ಕೆಡಿಸಲಿಕ್ಕೆ ಬರುವದಿಲ್ಲ. ಬಂದ ಭಕ್ತರು ಬರೇ ದೂರಿಂದ

ನಮಸ್ಕರಿಸಿ ಹೋಗಬೇಕಾಗುವದು. ಕೆಲವು ದೇವರಿಗೆ ಕರ ಕಂದಾಯ ತೆರಿಗೆಗಳು ಸಹ ಇರುವವು. ಹಣವನ್ನು ನಿತ್ಯ ಕೊಟ್ಟು ದರ್ಶನಮಾಡಿ ಕೊಳ್ಳುವದು ಯಾರಿಗೂ ಶಕ್ಯವಿಲ್ಲ. ಟಿಂಗುನೈವಿದ್ಯಗಳಿಗೆ ಫೀಗಳುಂಟು ಇದರಿಂದ ಭಕ್ತರು ಭಕ್ತಿ ಮಾಡುವದು ಶಕ್ಯವಾಗುವದಿಲ್ಲ ಈಗ ದೇವರು ನಜರಾಣಿ, ಇನಾಮು, ದಕ್ಷಿಣೆ, ಲಂಚ, ಪರಿಹಾರಧನ, ಮೊದಲಾದವುಗಳನ್ನು ಎತ್ತಿ ಶಿರಿವಂತವಾಗಿ ಬಿಟ್ಟಿರುವವು. ಜನರು ಉಪವಾಸ ಸಾಯುದರು ಈ ಕಲ್ಲಿನ ಮೂರ್ತಿಗಳು ಮಾತ್ರ ಒಳ್ಳೇ ಶಿರಿವಂತರಾಗಿರುವವು. ಅದಕ್ಕಾಗಿಯೇ ಉತ್ಪನ್ನದ ಮೇಲಿನ ಕರವನ್ನು ಹಾಕಿದ್ದಾರೆ. ಹೀಗಾಗಿ ಇದಾವೂ ಭಕ್ತಿಗೆ ಯೋಗ್ಯ ಶಾಂತ ಸ್ಥಾನವಾಗಲಾರವು. ಅದಕ್ಕೆ ಭಕ್ತಿ ಕೆಡುವದು, ಅಲ್ಲದೆ ಸ್ಥಾವರಲಿಂಗಗಳ ಹಣೆಯಬರಹವೂ ಹೀಗಾಗಿ ಬಿಟ್ಟಿರುವದು ಅದಕ್ಕೆ ಶರಣರು ಈ ಎಲ್ಲ ಗದ್ದಲಗಳನ್ನು ಹೋಗಲಾಡಿಸಿ ಒಳ್ಳೇ ದಿವ್ಯ ಭಕ್ತಿ ಹುಟ್ಟುವಸಲು ವಾಗಿಯೇ ಇಷ್ಟಲಿಂಗವನ್ನು ಕಲ್ಪಿಸಿದ್ದಾರೆ. ಇದು ಬಹು ವಿಶಾಲ ತತ್ವದ ಮೇಲೆ ನಿಂತಿದೆ. ಸರ್ವ ಮೂರ್ತಿಗಳಗಿಂತ ವಿಶೇಷ ಸುಧಾರಣೆ ಉಪಯುಕ್ತತೆ ಗಳಿಂದ ಕೂಡಿದ್ದಾಗಿದೆ. ಅಲ್ಲದೆ ಇದು ಸರ್ವಸ್ವತಂತ್ರವಿದ್ದು ಅದನ್ನು ಪೂಜಿಸುವ ಭಕ್ತರಿಗೆ ಸ್ವತಂತ್ರವನ್ನು ಕೊಡುವದು ಇದು ಪರಮಾತ್ಮನು ಹೀಗೇ ಇದ್ದಾನೆಂದು ತೋರಿಸುವ ಒಂದು ಚಿನ್ಹೆಯಾಗಿದೆ. ಉಳಿದವುಗಳಲ್ಲಿ ಮೂರ್ತಿಪೂಜೆ ಮೂರ್ತಿಗಳಾದರೂ ಇದು ಮೂರ್ತಿಯಲ್ಲ. ಇದು ಪರ ಮಾತ್ಮನ ಚಿನ್ಹೆಯಾದುದರಿಂದ ಇದು ಮೂರ್ತಿಯೂ ಅಲ್ಲ ಮೂರ್ತಿ ಪೂಜೆಯು ಆಗುವದಿಲ್ಲ. ಕೆಲವರು ಇದಕ್ಕೆ ಮೂರ್ತಿ ಎಂದು ಅನ್ನುವ ದುಂಟು ಈಗ ಬೀಜದಲ್ಲಿ ಒಂದು ಚಿಕ್ಕದಾದ ಅಂಕುರ ವಿರುವದು ಎಲ್ಲರಿಗೂ ಗೊತ್ತಾಗಿರುವದು ಆದರೆ ಇದು ಗಿಡವೆಂದು ಯಾರೂ ಅನ್ನಲಾರರು ಆದರೆ ಗಿಡದ ಸರ್ವಭಾಗಗಳು ಅದರಲ್ಲಿ ಒಳ್ಳೇ ಸೂಕ್ಷ್ಮವಾಗಿಯೇ ಇರುವ ವೆಂದು ಎಲ್ಲರೂ ಅರಿತ ವಿಷಯವೇ ಇರುವದು. ಆ ಚಿಕ್ಕಬೀಜದಲ್ಲಿಯ ಚಿಕ್ಕ ಅಂಕುರಕ್ಕೆ ಭೂಮಿ ನೀರು ಗಾಳಿ ಗೊಬ್ಬರಗಳ ಸಂಪರ್ಕವಾದ ಕೂಡಲೆ ಜಾದು ಆಟದಂತೆ ಅದು ಸಾವಧಾನವಾಗಿ ಬೆಳೆದು ಮಹಾ ಹೆಮ್ಮ ರವಾಗಿ ಭೂಮಿಯನ್ನು ವ್ಯಾಪಿಸಿನಿಂತು ಬಿಡುವದು. ಅದರಂತೆ ಈ ಇಷ್ಟ ಲಿಂಗವು ಆ ಸಚ್ಚಿದಾನಂದ ಪರಮಾನ್ಮನ ಅಂಕುರವಿದ್ದಂತೆ ಇರುವದು. ಈ ಇಷ್ಟಲಿಂಗವೆಂಬ ಅಂಕುರಕ್ಕೆ ಭಕ್ತಿ ಪ್ರೇಮ ಧ್ಯಾನ ಜಪಗಳೆಂಬ ಭೂಮಿ ಗೊಬ್ಬರ ನೀರುಗಾಳಿಗಳನ್ನು ನಿತ್ಯ ಹಾಕಿದರೆ ಆ ಇಷ್ಟಲಿಂಗವೆಂಬ ಅಂಕು

ರವು ದೊಡ್ಡದಾಗಿ ಇಡೀ ವಿಶ್ವವನ್ನೇ ವ್ಯಾಪಿಸಿ ಮಹಾಲಿಂಗವಾಗುವದು ಅಂದರೆ ಇಷ್ಟಲಿಂಗವೇ ದೊಡ್ಡದಾಗುವದೆಂದು ಹೇಳಲಿಲ್ಲ. ಆ ಇಷ್ಟಲಿಂಗ ವನ್ನೂ ಭಕ್ತಿ ಪ್ರೇಮಗಳಿಂದ ಪೂಜಿಸುತ್ತ ಹೋದ ಹೋದಂತೆ ಪ್ರಾಣ ಲಿಂಗದ ಜ್ಞಾನವಾಗುವದು ಆ ಮೇಲೆ ಭಾವಲಿಂಗದ ಜ್ಞಾನವಾಗುವದು ಅಂದರೆ ಇವು ಒಂದಕ್ಕಿಂತ ಒಂದು ಇಷ್ಟಲಿಂಗಗಳು ಅಲ್ಲದೆ ಇಷ್ಟಲಿಂಗ ಅಲ್ಪ ವ್ಯಾಪಕವಾಗದೆ ಪ್ರಾಣಲಿಂಗ ಬಹುವ್ಯಾಪಕವಾಗುವದು ಭಾವಲಿಂಗವಂತೂ ಸರ್ವ ವ್ಯಾಪಕವಾಗಿರುವದು, ಈ ಮೂರು ಲಿಂಗಗಳಲ್ಲಿ ಪುನಃ ಪ್ರತಿಯೊಂ ದರಲ್ಲಿ ಎರಡೆರಡು ಭಾಗಗಳನ್ನು ಮಾಡಬಹುದು ಇಷ್ಟಲಿಂಗದಲ್ಲಿ ಆಚಾರ ಲಿಂಗ ಮತ್ತು ಗುರುಲಿಂಗ, ಪ್ರಾಣಲಿಂಗ-ಶಿವಲಿಂಗ ಹಾಗೂ ಜಂಗಮ ಲಿಂಗ; ಭಾವಲಿಂಗದಲ್ಲಿ-ಪ್ರಸಾದಲಿಂಗ ಮತ್ತು ಮಹಾಲಿಂಗಗಳೆಂದು ಹೀಗೆ ಆರು ಲಿಂಗಗಳಿರುವವು ಕಡೆಯ ಪರಿಪೂರ್ಣಲಿಂಗವೆಂದರೇನೇ ಮಹಾಲಿಂಗ ಇದು ಪರಿಪೂರ್ಣ ಬ್ರಹ್ಮಾಂಡಗಳನ್ನು ವ್ಯಾಪಿಸಿದೆ ಈ ಪ್ರಕಾರ ಇಷ್ಟಲಿಂಗದ ಭಕ್ತಿ ಪೂಜೆಗಳಿಂದ ಅದು ಬೆಳೆದು ಆರು ಲಿಂಗಗಳಾಗಿ ಹೋಗುವದು ಇವು ಬೇರೆ ಬೇರೆ ಲಿಂಗಗಳಲ್ಲಿ ಅವು ಬೇರೆ ಬೇರೆ ಆರು ಮೆಟ್ಟಲುಗಳು. ಜನನ ಬಾಲ್ಯ ಕೌಮಾರ ಯೌವ್ವನ ಮುಪ್ಪು ಸಾವುಗಳು ಹೇಗೆ ಒಬ್ಬ ಮನುಷ್ಯ ನಲ್ಲಿಯ ಸ್ಥಿತ್ಯಂತರಗಳೋ ಹಾಗೆ ಈ ಆರುಲಿಂಗಳೂ ಕೂಡ ಭಕ್ತನಲ್ಲಿಯ ಸ್ಥಿತ್ಯಂತರಗಳನ್ನೇ ಸೂಚಿಸುವವು ಮನುಷ್ಯನು ಆರುಮೆಟ್ಟಲುಗಳನ್ನು ಹತ್ತಿ ಮುಕ್ತನಾಗಬೇಕಾಗುವದು (೧) ಭಕ್ತಸ್ಥಲ (೨) ಮಹೇಶ್ವರ ಸ್ಥಲ (೩) ಪ್ರಸಾದಿ ಸ್ಥಲ (೪) ಪ್ರಾಣಲಿಂಗ ಸ್ಥಲ (೫) ಶರಣ ಸ್ಥಲ (೬) ಐಕ್ಯ ಸ್ಥಲ ಇವುಕೂಡ ಸ್ಥೂಲ-ಸೂಕ್ಷ್ಮ-ಕಾರಣ ಶರೀರಕ್ಕೆ ಕ್ರಮವಾಗಿ ಎರಡೆ ರಡು ಸ್ಥಲಗಳು ಸಂಬಂಧ ಪಡುವವು ಅದರಂತೆ ಇಷ್ಟಲಿಂಗ-ಪ್ರಾಣಲಿಂಗ- ಭಾವಲಿಂಗಗಳು ಕ್ರಮವಾಗಿ ಈ ಮೂರು ಶರೀರಗಳಿಗೆ ಸಂಬಂಧಿಸಿರುವವು ಈ ಆರುಲಿಂಗಳೂ ಕೂಡ ಕ್ರಮವಾಗಿ ಭಕ್ತನಿಗೆ- (ಇಷ್ಟ) ಆಚಾರಲಿಂಗ; ಮಹೇಶನಿಗೆ (ಹೆಚ್ಚಿನ ಇಷ್ಟ) ಗುರಲಿಂಗ, ಪ್ರಸಾದಿಗೆ- (ಪ್ರಾಣಲಿಂಗ) ಶಿವ ಲಿಂಗ; ಪ್ರಾಣಲಿಂಗಿಗೆ- (ಹೆಚ್ಚಿನ ಪ್ರಾಣಲಿಂಗ) ಜಂಗಮಲಿಂಗ; ಶರಣನಿಗೆ- (ಬಾವಲಿಂಗ) ಪ್ರಸಾದಲಿಂಗ; ಐಕ್ಯಂಗೆ- (ಹೆಚ್ಚಿನ ಭಾವಲಿಂಗ) ಮಹಾಲಿಂಗ ಇವು ಭಕ್ತನು ಭಕ್ತಿಸಾದನೆ ಮಾಡಿ ಮಾಡಿದಂತೆ ಹೆಚ್ಚೆಚ್ಚಿನ ಸ್ಥಿತಿಯನ್ನು ಪಡೆದದ್ದನ್ನು ತಿಳಿಸುವವು ಮಹಾಲಿಂಗ ಪೂಜಕನಾದಾಗ ಐಕ್ಯನಾಗುವನೆಂದು ಸೂಚಿಸುವದು. ಇದು ಹೇಗೆ ಮೂರ್ತಿಪೂಜೆ ಯಾಗುವದು ವಿಚಾರಿಸಿರಿ ?

ಗಿಡಕ್ಕೆ ಬೇರು ಬೊಡ್ಡೆ ಟೊಂಗೆ ಎಲೆ ತೊಗಟೆ ಹೂ ಕಾಯಿಗಳನ್ನೂ ಪ್ರತ್ಯಕ್ಷ್ಯ ಈ ಕಣ್ಣುಗಳಿಂದ ನಾವು ಅನುಭವಿಸುತ್ತಿರುವೆವು ಆದರೆ ಅಂಕು ರಕ್ಕೆ ಇವೆಲ್ಲ ಅತಿ ಸೂಕ್ಷ್ಮವಾಗಿ ಇದ್ದರೂ ಕೂಡ ಅವುಗಳು ನಮ್ಮದೃಷ್ಟಿಗೆ ಬೀಳುವದಿಲ್ಲ ಅದರಂತೆ ಮಹಾಲಿಂಗ (ಪರಶಿವ ಪರಮಾತ್ಮ) ನು ಗಿಡದಂತೆ ಸರ್ವ ವ್ಯಾಪಕನಾಗಿರುವನು ಇಷ್ಟಲಿಂಗವು ಅದರ ಅಂಕುರವು ಮಾತ್ರ ಅದಕ್ಕೆ ಇದು ಮೂರ್ತಿ ಎನಿಸುವದಿಲ್ಲ.

ಈ ಲಿಂಗದಲ್ಲಿ ಸ್ಥೂಲವಾಗಿ ಮೂರು ಭಾಗಗಳುಂಟು. ಪೆಂಡಿಕೆ, ಪೀಠ ಜಲಹರಿ (ಜಲಾರಿ) ಇವು ಪರಮಾತ್ಮನ ಗುಣಗಳನ್ನು ಸೂಚಿಸುತ್ತವೆ. ಸತ್-ಚಿತ್-ಆನಂದ (ಸಚ್ಚಿದಾನಂದ) ಸತ್ = ಪೆಂಡಿಕೆ, ಚಿತ್ = ಪೀಠ, ಆನಂದ = ಜಲಹರಿ, ಪೆಂಡಿಕೆಯು ತಂದೆಯ ಗುರುತು, ಪೀಠವು ತಾಯಿಯ ಗುರುತು, ಜಲಹರಿಯು ಇವರ ಮಿಲನದ ಗುರುತಾದ ಆನಂದ, ಅಂದರೆ ಪಾರ್ವತಿ ಪರಮೇಶ್ವರರು ಕೂಡಿದ್ದರೆ ಆನಂದವೇ ಇರುವದು ಎಂಬುದರ ಅರ್ಥವು ಈ ಇಷ್ಟ ಲಿಂಗವು ಸೂಚಿಸುವದು. ಅದರಂತೆ ಈ ಲಿಂಗವು ಸತ್ ಚಿತ್-ಆನಂದ (ಸಚ್ಚಿದಾನಂದ) ವೆಂಬ ಮೂರು ಗುಣಗಳನ್ನೇ ಸೂಚಿಸುವದು ಆದಕ್ಕೆ ಇಷ್ಟಲಿಂಗವು ಮೂರ್ತಿಯಲ್ಲಿ ಇದನ್ನು ಪೂಜಿಸಿದರೆ ಮೂರ್ತಿಪೂಜೆಯೂ ಅಲ್ಲಿ ಸತ್ = ಶಿವ (ತಂದೆ ಕಾರಣರೂಪ) ಚಿತ್ = ಆದಿ ಶಕ್ತಿ ಪಾರ್ವತಿ ಕಾರ್ಯರೂಪಳು ಆನಂದ = ಶಿವಶಕ್ತಿಮಿಲನ ( ಕಾರಣ ಕಾರ್ಯಗಳು ಕೂಡಿದರೆ ಮಹಾನಂದ ರೂಪಫಲ ) ಇವುಗಳನ್ನು ಸೂಚಿಸುವದೇ ಇಷ್ಟಲಿಂಗ ಇದಕ್ಕೆ ಹೇಗೆ ಮೂರ್ತಿ ಅನ್ನಬೇಕು ವಿಚಾರಿಸಿ ನೋಡಿರಿ. ಎಲ್ಲ ಹಿಂದು, ಮುಸಲ್ಮಾನ, ಕ್ರಿಸ್ತ ಯಹುದಿಗಳು ಮೂರ್ತಿಪೂಜಕರು ಆದರೆ ಲಿಂಗಗಳನ್ನು ಪೂಜಿಸುವವರು ಮೂರ್ತಿಪೂಜಕರಲ್ಲಿ ಅಲ್ಲದೆ ಈ ಇಷ್ಟಲಿಂಗವು ಜಗದ ಪುರುಷ ರನ್ನೆಲ್ಲ ತಂದೆಯಂತೆ ಸ್ತ್ರೀಯರನ್ನೆಲ್ಲ ತಾಯಿಯಂತೆ ನಾವು ಪೂಜ್ಯಭಾವ ದಿಂದ ಕಂಡರೆ ಅಂದರೆ ಶಿವಶಕ್ತಿಯರಂತೆ ಪೂಜಿಸಿದರೆ ಮಹಾನಂದವಾಗು ವದೆಂದು ಸೂಚಿಸುವದು. ಇದೆಲ್ಲ ಹೊರಗಿನದಾಯಿತು ಅದರಂತೆ ನಮ್ಮ ಲ್ಲಿಯೂ ಶಿವಶಕ್ತಿ, ತಾಯಿತಂದೆ, ಕಾರಣ-ಕಾರ್ಯ, ಪೆಂಡಿಕೆ-ಪೀಠ, ಸತ್ ಚಿತ್‌ಗಳು ಸಹ ಇರುವವು. ಸಹಸ್ರಕಮಲದಲ್ಲಿ ಶಿವನು ಮೂಲಾಧಾರದ ತಳದಲ್ಲಿ (ಕುಂಡಲಿನ) ಶಕ್ತಿ ಇರುವವು. ಇವರು ಅಗಲಿದ್ದಾರೆ ಅವರನ್ನು ಕೂಡಿಸಬೇಕು ಹೊರಗೆ ಭಕ್ತ-ಮಹೇಶ, ಪ್ರಸಾದಿ, ಪ್ರಾಣಲಿಂಗ, ಶರಣ,

ಐಕ್ಯ ಎಂದು ಇರುವಂತೆ ಶರೀರದಲ್ಲಿ ಇವೆರೆಡರ ನಡುವೆ ಆಧಾರ, ಸ್ವಾದಿಷ್ಟ ಮಣಿಪೂರ, ಅನಾಹತ, ವಿಶುದ್ಧ, ಆಜ್ಞೇಯೋ ಎಂದು ಆರು ಚಕ್ರಗಳುಂಟು ಆ ಕುಂಡಲಿನ ಶಕ್ತಿ, ಕ್ರಮವಾಗಿ ಈ ಆರೂ ಚಕ್ರಗಳನ್ನು ಏರಿಹೋಗಿ ತನ್ನಪತಿಯಾದ ಶಿವನನ್ನು ಕೂಡಬೇಕು ಆಗ ನಿಜಾನಂದ ಮಹಾನಂದವಾಗು ವದು. ಒಂದೊಂದು ಚಕ್ರವನ್ನು ಈ ಶಕ್ತಿ ಏರಿದಂತೆ ಬೇರೆ ಬೇರೆ ಅನು ಭವಗಳಾಗುತ್ತ ಹೋಗುವವು. ಈ ಇಷ್ಟಲಿಂಗವು ನಮ್ಮಲ್ಲಿ ಈಗ ಅಗಲಿ ಇರುವ ಶಿವಶಕ್ತಿಯರನ್ನು ಭಕ್ತಿ ಮೊದಲಾದ ಸಾಧನೆಗಳಿಂದ ಕೂಡಿಸಿದರೆ ಆನಂದವಾಗುವದೆಂದೇ ಸೂಚಿಸುವದು. ಇದನ್ನೆಲ್ಲ ವಿಚಾರಿಸಿದರೂ ಕೂಡ ಇಷ್ಟಲಿಂಗವು ಮೂರ್ತಿಯಲ್ಲಿ ಇದನ್ನು ಪೂಜಿಸುವವರು ಮೂರ್ತಿಪೂಜಕ ರಲ್ಲೆಂದು ಧಾರಳವಾಗಿ ಹೇಳಬಹುದು. ಉಳಿದ ಆ ಮೂರ್ತಿಗಳು ಸಚ್ಚಿ ದಾನಂದವನ್ನು ಸೂಚಿಸುವದಿಲ್ಲ ಅಥವಾ ನಮ್ಮಲ್ಲಿಯ ಷಟ್‌ಚಕ್ರವನ್ನು ಬೋಧಿಸುವದಿಲ್ಲ. ಅಥವಾ ಜಗತ್ತಿನ ಆಧಾರವಾದ ಪ್ರಕೃತಿಪುರುಷರನ್ನೂ ಸೂಚಿಸುವದಿಲ್ಲ. ಒಂದೆ ಮೂರ್ತಿಯು ಇಷ್ಟಲಿಂಗದಂತೆ ಶಿವಶಕ್ತಿ ಅಥವಾ ತಂದೆತಾಯಿಯಂತೆ ಸೂಚಿಸುವದಿಲ್ಲ ಅಥವಾ ಒಂದೇ ಮೂರ್ತಿ ಕಾರಣ ಕಾರ್ಯಗಳನ್ನು ಸೂಚಿಸಿ ಅದರ ಆನಂದ ಫಲವನ್ನು ಬೋಧಿಸುವದಿಲ್ಲ ಯಾವ ದೃಷ್ಟಿಯಿಂದ ಉಳಿದ ಸಕಲ ಮೂರ್ತಿಗಳು ಚಿನ್ನಗಳು ಈ ಇಷ್ಟಲಿಂಗದಂತೆ ಉಚ್ಚ ಉದಾರ ಶ್ರೇಷ್ಠ ತತ್ವಗಳನ್ನು ಸೂಚಿಸುವದಿಲ್ಲ. ಅದಕ್ಕೆ ಲಿಂಗ ಪೂಜೆ ಕರಹೊರತು ಉಳಿದವರೆಲ್ಲ ಪೂರ್ತಿಪೂಜಕರು. ಲಿಂಗ ಪೂಜೆಯು ಶಿವ ಶಕ್ತಿವಾರ ಪೂಜೆಯಿರುವದರಿಂದ ಇದೇ ಪೂರ್ಣ ಪೂಜೆಯು. ಅವರೇ ಪೂರ್ಣ ಯೋಗಿಗಳು ಅಂದರೆ ಶಿವಯೋಗಿಗಳೆಂದು ಹೇಳಲಡ್ಡಿ ಇಲ್ಲ. ಯಾಕಂದರೆ ಇದು ಶಿವನೊಡನೆ ಶಕ್ತಿಯನ್ನು ಕೂಡಿಸುವದರಿಂದ ಇದು ಶಿವ ಯೋಗವಾಗುವದು. ಈ ಪ್ರಕಾರ ಯಾವ ಮೂರ್ತಿಯ ಕಲ್ಪನೆ ಇಲ್ಲ ಅದರಿಂದ ಸಕಲ ಮೂರ್ತಿ ಪೂಜೆಗಳಿಗಿಂತ ಲಿಂಗಪೂಜೆ ಹೆಚ್ಚು. ಲಿಂಗ ಪೂಜೆಗಿಂತ ಇಷ್ಟಲಿಂಗ ಪೂಜೆ ಹೆಚ್ಚಿನದು ಎಂದು ಧಾರಳವಾಗಿ ಹೇಳ ಬಹುದು. ಸ್ಥಾವರ ಲಿಂಗಕ್ಕೆ ಆಕಾರ ತತ್ವವು ಇರುವದಿಲ್ಲ ಅಲ್ಲದೆ ಇದನ್ನು ಸಂಗಡ ತಕ್ಕೊಂಡು ಹೋಗಲಿಕ್ಕೆ ಬರುವದಿಲ್ಲ ಇಷ್ಟಲಿಂಗಕ್ಕೆ ತಂತಿಯುನ್ನು ಕೂಡ್ರಿಸಿದ್ದರಿಂದ ಆಕಾಶ ತತ್ವವು ಇದ್ದತಾಗುವದು ಅಲ್ಲದೆ ವಸ್ತ್ರದಲ್ಲಿ ಗುಂಡಗಡಿಯಲ್ಲಿ ಚೌಕದಲ್ಲಿ ಇದನ್ನು ಹಾಕಿ ಕೊರಳಲ್ಲಿ ರಟ್ಟೆಯಲ್ಲಿ ಕಟ್ಟಿ ಕೊಂಡು ಹೋಗಲಿಕ್ಕೆ ಬರುವದು. ಉಡರು ಉಡಚು ತ್ರಾಸು ಆಗುವದಿಲ್ಲ.

ಇದು ಕರೇ ಬಣ್ಣದ್ದು ಇರುವದರಿಂದ ನೋಡಲಿಕ್ಕೆ ತ್ರಾಸು ಆಗುವದಿಲ್ಲ. ಅದಕ್ಕೆ ಮುದ್ರಾಮಾಡಿ ಮನಸ್ಸನ್ನು ನಿಲ್ಲಿಸಲಿಕ್ಕೆ ಬರುವದು. ಅದರ ಜೋತೆಗೆ ಧ್ಯಾನ ಜಪಗಳೂ ನಡೆಯುವವು ಈ ಸಕಲ ಕಾರಣಗಳ ಮೂಲಕ ಇಷ್ಟ ಲಿಂಗು ಪೂಜೆಯು ಸುಲಭ ಸರಳ ಶ್ರೇಷ್ಠ ಅತ್ಯುತ್ತಮವೆಂದು ಹೇಳಲಿಕ್ಕೆ ಅಡ್ಡಿ ಇಲ್ಲ ಈ ಲಿಂಗ ತತ್ವವು ವಿಶಾಲವಾಗಿದೆ.

ಇಷ್ಟಿ ಅಂದರೆ ಪೂಜೆ ಅದಕ್ಕೆ ಪೂಜೆಗೆ ಯೋಗ್ಯವಾದದ್ದೇ ಇಷ್ಟ ಲಿಂಗವು. ಲಿಂಗಾಂಗ ಸಮರಸ ಪಡೆಯಲು ಸಾಧನ ವಾಗಿರುವದು ಸ್ಥಾವರ ಲಿಂಗ ಹಾಗೂ ಇಷ್ಟಲಿಂಗಗಳೆರಡೂ ಆಕಾರದಲ್ಲಿ ಒಂದೇ ಆದರೂ ಮೇಲೆ ತೋರಿದಂತೆ ಇಷ್ಟಲಿಂಗವು ಸರಳ ಸುಲಭ ಸಾಧನೆಗೆ ಹೆಚ್ಚಿಗೆ ಯೋಗ್ಯ ನೆಂದು ತೋರಿಸಲಾಗಿದೆ. ಅನಿಷ್ಟದೊಡನೆ ಹೋರಾಡುದದೇ ಇಷ್ಟಲಿಂಗ ಪೂಜೆಯಾಗಿರುವದು. ಅನಿಷ್ಟವೆಂದರೆ ಲಿಂಗಾಂಗ ಸಮರಸಕ್ಕೆ ವಿರೋಧ ವಾದುದೆಲ್ಲವೂ ಅನಿಷ್ಟವೇ ಸರಿ. ವ್ಯಕ್ತಿಯ ಅನಿಷ್ಟ, ಕೌಟುಂಬಿಕ ಅನಿಷ್ಟ, ಸಾಮಾಜಿಕ ಅನಿಷ್ಟ, ಪ್ರಾಂತೀಯ ಅನಿಷ್ಟ, ರಾಷ್ಟ್ರೀಯ ಅನಿಷ್ಟ, ಅಂತರ ರಾಷ್ಟ್ರೀಯ ಅನಿಷ್ಟ ಈ ಎಲ್ಲ ಅನಿಷ್ಟಗಳು ಹೋಗುವತನಕ ಹೋರಾಡು ವದೇ ಇಷ್ಟಲಿಂಗ ಪೂಜೆಯಾಗುವದು. ಲಿಂಗಾಂಗಿಯು ವೈಯಕ್ತಿಕ ವ್ಯಕ್ತಿಗೆ ಬೆಲೆ ಕೊಡುವದಿಲ್ಲ. ಭೂಲೋಕದಲ್ಲಿ ಸ್ವರ್ಗಲೋಕ ತರುವಸಲುವಾಗಿ ಸದಾ ಹೋರಾಡುತ್ತಲೇ ಇರುವನು. ಅದೇ ಅವನ ಇಷ್ಟಲಿಂಗ ಪೂಜೆಯಾಗುವದು ಅದರ ಗುರುತಿಗಾಗಿ ಅವನು ಸದಾ ಅಂಗದಮೇಲೆ ಲಿಂಗವನ್ನು ಧರಿಸಿರು ವನು. ಇದೇ ರೀತಿಯಿಂದ ಜಗದಲ್ಲಿಯ ಅನಿಷ್ಟವಳಿದು ಇಷ್ಟವು ಉಳಿಯು ವತನಕ ಹೋರಾಡುವನು ಇದೇ ಅವನ ಇಷ್ಟಲಿಂಗ ಪೂಜೆ ಎನಿಸುವದು ಲಿಂಗಾಂಗಿಯು ಇಂಥ ಹೋರಾಟದಲ್ಲಿಯೇ ಆನಂದ ಉತ್ಸಹ ಹೆರುಷ ಪಡೆ ಯುವನು ಅದಕ್ಕೆ ಅವನಿಗೆ ವೀರಶೈವನೆನ್ನುವರು ಈ ಸುಂದರ ಜಗವನ್ನು ಇನ್ನಷ್ಟು ಸುಂದರವನ್ನಾಗಿ ಮಾಡುವದಕ್ಕೆ ಹೋರಾಡುವವನು ತಾನೂ ಹೆಚ್ಚಿಗೆ ಸುಂದರನಾಗುವನು ಇದೇ ಅವನ ಇಷ್ಟ ಲಿಂಗಪೂಜೆಯಾಗಿರುವದು. ಇಂಥ ಹೋರಾಟದಲ್ಲಿ ಪ್ರಾಣಕೊಡಲೂ ಸಿದ್ಧನು ಪ್ರಾಣತಕ್ಕೊಳ್ಳಲು ಸಿದ್ಧನು ದುಷ್ಟರ ಹಿಂಸೆಯಂತೆ ಕ್ರೂರತನವೂ ಇರುವ ದಿಲ್ಲ ಹೇಡಿಯ ಅಹಿಂಸೆಯಂತೆ ಪುಕ್ಕತನವೂ ಇರುವದಿಲ್ಲ. ಇಂಥ ಮಾರ್ಗ ದವನು ಈ ಲಿಂಗಾಂಗಿಯಾದ ವೀರಶೈವನು ಎಂದು ಧಾರಳವಾಗಿ ಹೇಳಬ ಹುದು. ಹೀಗಾದರೆ ಇದು ಮೂರ್ತಿ ಪೂಜೆ ಹೇಗೆ ವಿಚಾರಿಸಿರಿ.

— ಮುಂದುವರಿಯುವದು

From
Shivanubhava
Office
BIJAPUR



R. N. B. 2554




ಈ ಪತ್ರಿಕೆಯನ್ನು ಇದರ ಸಂಪಾದಕರಾದ ರಾ|| ಬ|| ಪಿ. ಜಿ. ಹಳಕಟ್ಟಿ, ಬಿ. ಎ. ಎಲ್. ಎಲ್. ಬಿ. ಇವರು ವಿಜಾಪೂರ ವಾರ್ಡ ನಂ. ೩. ಮನೆ ನಂ. ೧೩೬೮ ರಲ್ಲಿರುವ ಹಿತಚಿಂತಕ ಪಾವರ ಪ್ರಿಂಟಿಂಗ್ ಪ್ರೆಸ್ಸಿನಲ್ಲಿ ಮುದ್ರಿಸಿ ಅಲ್ಲಿಯೇ ಪ್ರಸಿದ್ಧಿಸಿದರು.

ಸಂಪುಟ ೩೦ ❀ ಸಂಚಿಕೆ ೯

# ಶಿವಾನುಭವ

ಸಂಪಾದಕರು

ರಾ|| ಬ|| ಫ. ಗು. ಹಳಕಟ್ಟಿ,

ಬಿ. ಎ. ಎಲ್. ಎಲ್. ಬಿ.

ವಿಜಾಪುರ.

[ ವಾರ್ಷಿಕ ಚಂದಾ ೫-೧- -೦ ಅಂಚೆಯ ವೆಚ್ಚ ಬೇರೆ ]

ಸಪ್ಟಂಬರ ೧೯೫೬

# ವಿಷಯಾನುಕ್ರಮಣಿಕೆ

# ಶಿವಾನುಭವ

| ಸಂಪುಟ ೩೦ | ಸಪ್ಟಂಬರ ೧೯೫೬ | ಸಂಚಿಕೆ ೯ |
| --- | --- | --- |


## ಹಿಂದೂ ಧರ್ಮ

( ಲೇಖಕಃ— ಶ್ರೀ. ಮ. ಮಲ್ಲಪ್ಪ ಹಲಗೂರ. )



ಧರ್ಮ, ರಿಲಿಜನ್, ಮಜಹಬ್, ಮಾರ್ಗ, ಪಂಥ ಇವೆಲ್ಲವೂ ಸಾಮಾನ್ಯವಾಗಿ ಒಂದೇ ಅರ್ಥವನ್ನು ಕೊಡತಕ್ಕವಾಗಿವೆ. ಧೃ ಧಾತುವಿನಿಂದ ' ಧರ್ಮ 'ವೂ ಉತ್ಪತ್ತಿಯಾಗಿದೆ. ಧಾರಣ ಮಾಡು ಎಂಬುದೇ ಧೃ ಧಾತುವಿನ ಅರ್ಥವು. ಹಿಂದು ದೇಶದ ಜನತೆಯಲ್ಲಿ ಆವಿರ್ಭವಿಸಿದ ಧರ್ಮವೇ ಹಿಂದೂ ಧರ್ಮ. ಧಾರಣಾ ಧರ್ಮ ಇತ್ಯಾಹುಃ, ಧರ್ಮಧಾರಯೇತ್ ಪ್ರಜಾಃ ಎಂಬ ಪ್ರಾಚೀನವಾಣಿಯನ್ನು ನೋಡಿದರೆ ಧರ್ಮದ ಪ್ರಾಚೀನತೆಯು ಅರಿವಾಗುತ್ತದೆ. ಚ್ಯುತಿ ಬಂದರೂ ಧರ್ಮವು ಮಾತ್ರ ಪುನಃ ಸ್ವಸ್ವರೂಪವನ್ನು ಬಿಡದೆ ಪಡೆಯುತ್ತದೆ.

ಯದಾ ಯದಾಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ |
ಅಭ್ಯುತ್ಥಾನ ಮ ಧರ್ಮಸ್ಯ ತದ್ಯಾತ್ಮಾನಂ ಸೃಜಾಮ್ಯಹಮ್ ||

ಭಗವದ್ಗೀತೆ-

ಜೀವನದ ಸಕಲ ರೂಪನ್ನು ಧರ್ಮವು ಅಳವಡಿಸಿಕೊಂಡಿದೆ. ಹಿಂದೂ ದೇಶೀಯರ ಧರ್ಮವಾದ ಹಿಂದೂ ಧರ್ಮವು, ಔನ್ನತ್ಯದಲ್ಲಿ ಹಿಮಾಲಯವನ್ನೂ, ಗಾಂಭೀರ್ಯದಲ್ಲಿ ಪೆಸಿಫಿಕ್ ಸಾಗರವನ್ನೂ, ಪವಿತ್ರತೆಯಲ್ಲಿ ಗಂಗಾನದಿಯನ್ನೂ ಹೋಲುತ್ತದೆ. ಮಾನವನ ಮೇಲೆ ಧರ್ಮದ ಕಲ್ಪನೆಯು ಕಸಿಗೊಂಡಿದೆ.

ಅಮಾನುಷ-ದೈವೀ-ಬಲಗಳಾಗಲೀ, ತತ್ವಗಳಾಗಲೀ ತಾನು ಅಧೀನವಾಗಿರುವನೆಂದೂ, ಆ ಬಲ ತತ್ವಗಳ ಅಧಿಕಾರವು ತನ್ನ ಮೇಲಿದೆಯೆಂದೂ ಮತ್ತೆ ಇನ್ನಾವ ಬಗೆಯಲ್ಲಿಯೂ ಅವುಗಳ ಸಂಗಡ ತಾನು ವರ್ತಿಸಬೇಕಾಗುವದೋ ಎಂದು, ಮನುಜನ ಗ್ರಹಿಕೆಯಾಗುವದೋ ಅಂದೇ ಆತನ ಬಾಳಿನಲ್ಲಿ ಧರ್ಮದ ಕಲ್ಪನೆಯಾಗಿದೆ ಎಂಬುದೇ ಮೊಳಣದರ ಅಂಶ. ಧರ್ಮದ ಮೂಲವು ಮಾನವನ ಸ್ಥಿತಿಯಲ್ಲಿದೆ. ಸಕಲ ಮತಗಳಿಗೂ ಬುನಾದಿಯು ಸನಾತನ ಧರ್ಮವಾದ ಹಿಂದೂ ಧರ್ಮವು. ಮಹತ್ತರವಾದ ಒಂದು ವಟವೃಕ್ಷವು ಹಿಂದೂ ಧರ್ಮವಾಗಿದೆ.

ಧೃತಿ, ಕ್ಷಮೆ, ದಯೆ, ಅಸ್ತೇಯ, ಶೌಚ, ಇಂದ್ರಿಯ ನಿಗ್ರಹ, ಧೀ, ತಪಸ್ಸು, ಅಕ್ರೋಧ, ಸತ್ಯ ಎಂಬ ದಶ ಸೋಪಾನಗಳಿಂದ ಹಿಂದೂ ಧರ್ಮವು ಕೂಡಿದೆ. ಸಂತೋಷ ಸಮಯದಲ್ಲಿ ಹಿರಿಹಿರಿ ಹಿಗ್ಗಿ ಹೆಮ್ಮೆ ಪಡದೆ, ಕಷ್ಟಕಾಲದಲ್ಲಿ ಕುಗ್ಗಿ ಕರಗಿ ವ್ಯಸನ ಪಡದೆ ಏಕ ರೀತಿಯಾಗಿರುವುದೇ ಧೃತಿಯು. ಇದನ್ನೇ ಇಂತು ಭಗವದ್ಗೀತೆಯು ತಿಳಿಸುತ್ತದೆ.

ಸುಖ ದುಃಖೇ ಸಮೇ ಕೃತ್ವಾ ಲಾಭಾ ಲಾ ಭೌಜಯಾ ಜಯೌ|
ತತೋ ಯುದ್ಧಾಯ ಯುಜ್ಯಸ್ವನೈವಂ ಪಾಪ ಮವಾಪ್ಸ್ಯಸೀ ||

ಕೇಡಿಗೆ ಪ್ರತಿಯಾಗಿ ಕೇಡನ್ನು ಬಯಸಿ ಮಾಡದೆ ಒಳ್ಳೆಯದನ ಮಾಡುವದೇ ಕ್ಷಮೆಯಾಗಿದೆ.

ಹೊಯಿದವರೆನ್ನ ಹೊರೆದವರೆಂಬೆನು |
ಬಯ್ದವರನ್ನು ಬಂಧುಗಳೆಂಬೆನು |
ನಿಂದಿಸಿದವರೆನ್ನ ತಾಯಿತಂದೆಗಳೆಂಬೆ |
ಅಳಿಗೊಂಡವರೆನ್ನನಾಳ್ದವರೆಂಬೆ |
ಕೊಂಡಾಡಿದವರೆನ್ನ ಹೊನ್ನಶೂಲದಲ್ಲಿಕ್ಕಿಡವರೆಂಬೆ ಕೂಡಲ
ಸಂಗಮದೇವ || – ಬಸವಗೀತೆ

ಚಿತ್ತ ವಿಕಾರವನ್ನುಂಟು ಮಾಡುವ ಪರದ್ರವ್ಯಾದಿ ಪದಾರ್ಥಗಳು ತನಗೆ ಹಿತವಾಗಿ ಕಂಡರೂ ಅದಕ್ಕೆ ಲಕ್ಷ್ಯಕೊಡದೆ ಚಿತ್ತ ಬದಲಾವಣೆ ಯಿಲ್ಲದಿರುವುದೇ ದಮನವು.

ಬಟ್ಟೆಯಲ್ಲಿ ಹೊನ್ನು ವಸ್ತ್ರ ಬಿದ್ದಿದ್ದರೆ, ನಾನು ಕೈಮುಟ್ಟಿ ಎತ್ತಿದೆನಾದಡೆ ನಿಮ್ಮಾಣೆ, ನಿಮ್ಮ ಪ್ರಮಥರಾಣೆ; ಅದೇನು ಕಾರಣ ನೀವಿಕ್ಕಿದ ಭಿಕ್ಷೆಯಲ್ಲಿಪ್ಪನಾಗಿ; ಇಂತಲ್ಲದೆ ನಾನು ಅಳಿಮನವ ಮಾಡಿ, ಪರದ್ರವ್ಯಕ್ಕೆ ಆಸೆ

ಮಾಡಿದೆನಾದಡೆ ನೀನಾಗಲೇ ನನ್ನ ನರಕದಲದ್ದಿ ನೀನೆದ್ದು ಹೋಗು ಶಂಭುಜಕ್ಕೇಶ್ವರಾ. — ವಚನಶಾಸ್ತ್ರ

ದುರ್ಬುಗೆಯಿಂದ ಅರ್ಥಾರ್ಜನೆ ಮಾಡದೆ ಸದ್ರೀತಿಯಿಂದ ಹಣವನ್ನು ಗಳಿಸಿ ವ್ಯಯಮಾಡುವದೇ ಅಸ್ತೇಯ. ಕಾರೆಯ ಸೊಪ್ಪಾದರೂ ಕಾಯಕದಿಂದ ಬಂದುದು ಭಗವಂತನಿಗೆ ಸಮರ್ಪಕವಾದುದೇ ಹೊರತು ದುರಾಸೆಯಿಂದ ಬಂದುದು ಅನರ್ಪಿತವು ಎಂಬುದು ವಚನಕಾರರ ವಾದವಾಗಿದೆ. ಸಶಾಸ್ತ್ರೀಯವಾಗಿ ಕಾಯವನ್ನು ಶುದ್ಧಮಾಡಿ ಅಶುಚಿ ವಸ್ತುಗಳ ಸಂಬಂಧವನ್ನು ತ್ಯಾಗಮಾಡುವದೇ ಶೌಚವು. ತನುಶುಚಿ ಇಲ್ಲದವನ ದೇಹಾರವೇಕೆ ಎಂಬ ಬಸವ ವಾಣಿಯೇ ಇದಕ್ಕೆ ಸಲೆಸಾಕ್ಷಿಯಾಗಿದೆ. ವಿಷಯದಲ್ಲಿ ಹರಿದಾಡುವ ನಾಲಿಗೆ, ಕಿವಿ, ಕಣ್ಣು ಇತ್ಯಾದಿ ಇಂದ್ರಿಯಗಳನ್ನು ಕೆಟ್ಟ ವಿಚಾರದಲ್ಲಿ ಹಾಯ್ದು ಹೋಗದಂತೆ ಮಾಡುವದೇ ಇಂದ್ರಿಯ ನಿಗ್ರಹ.

ಅಭಯಂ ಸತ್ವಸಂಶುದ್ಧಿ: ಜ್ಞಾನಯೋಗವ್ಯವಸ್ಥಿತ: |
ದಾನಂದಮಶ್ಚ ಯಜ್ಞಶ್ಚಸ್ವಾಧ್ಯಾಯಸ್ತಪ ಆರ್ಜವಮ || —ಗೀತೆ

ವೇದ ಶಾಸ್ತ್ರ ಪುರಾಣಗಳಿಂದ ತತ್ವಜ್ಞಾನವನ್ನು ಹೊಂದುವುದೇ ಧೀಯು.

ಅಂಧಂತಮಃ ಪ್ರವಿಶಂತಿಯೇಽವಿದ್ಯಾ ಮುಪಾಸತೇ |
ತತೋಭೂಯ ಇವತೇತಮೋಯ ಉ ವಿದ್ಯಾಯಾಂ ರತಃ |
ಅನ್ಯದೇವಾಹುರ್ವಿದ್ಯಯಾ ಅನ್ಯದಾಹುರ ವಿದ್ಯಯಾ |
ಇತಿ ಶುಶ್ರುಮ ಧೀರಾಣಾಂ ಯೇನಸ್ತ ದ್ವಿಚಚಕ್ಷರೇ |
ವಿದ್ಯಾಂಚ ಅವಿದ್ಯಾಂಚ ಯಸ್ತ ದ್ವೇದೋಭಯಂ ಸಹ |
ಅವಿದ್ಯಾಯಾ ಮೃತ್ಯುತೀರ್ತ್ವಾ ವಿದ್ಯಯಾಽಮೃತ ಮಶ್ನುತೇ ||

ಅಧ್ಯಾತ್ಮ ವಿದ್ಯೆಯ ಶ್ರೇಷ್ಠತೆಯ ವಿಚಾರವಾಗಿ ಈ ಶೋಪನಿಷತ್ತಿನ ನುಡಿಯು ಇದಾಗಿದೆ. ಹಸಿವು ಬಾಯಾರಿಕೆಗಳ ಆಸೆಯನ್ನು ಬಿಟ್ಟು ದೇವರು ಮತ್ತು ಗುರುವಿನ ಕ್ರಿಯೆಗಳನ್ನು ಮಾಡುವದೇ ತಪಸ್ಸು. "ಹರಿದಾಸರೊಳಿರು ಮನವೇ, ನಮ್ಮ ಕೂಡಲ ಸಂಗನ ಶರಣರ ಕಂಡು ನಲಿದಾಡಲಿ ಮನವೇ, ಕಂಸಾರಿಯ ನೆನೆಯುವಂತಹ ಭಾಗ್ಯವಿರಲಿ; ಎನಗೆ ನಿಮ್ಮ ನೆನಹೇ ಪ್ರಾಣಾ ತಂದೆ ಸ್ವಾಮಿ" ಎಂಬ ಉಪದೇಶ ವಾಕ್ಯಾವಳಿಗಳು ತಪಸ್ಸಿನ ಘನತೆಗೆ ಕುರುಹಾಗಿವೆ. ಕೋಪವು ಜನಿಸುವದಕ್ಕೆ ಕಾರಣಗಳಿದ್ದರೂ ಕೋಪವು ಜನಿಸದಂತೆ ಮಾಡುವದೇ ಅ ಕ್ರೋಧ.

ತನಗೆ ತಾ ಮುನಿವರೇಕಯ್ಯ ! ತನಗಾದಡೇನು !
ತನುವಿನ ಕೋಪ ತನ್ನ ಹಿರಿಯತನದ ಕೇಡು
ಮನದ ಕೋಪ ತನ್ನ ಅರುಹಿನ ಕೇಡು
ತನ್ನ ಮನೆಯ ಕಿಚ್ಚು ತನ್ನ ಮನೆಯನಲ್ಲದೆ ನೆರೆಮನೆಯ ಸುಡದು
ಕೂಡಲ ಸಂಗಮದೇವಾ. — ಬಸವಗೀತೆ

ಕೋಪವೆಂಬ ಕೊಳೆಯು ಕಳೆ ಎಂದು ಹರಿದಾಸರ ಉಕ್ತಿಯಿದೆ. ಪಾಪದ ಮೂಲವಾದ ಸಟೆಯನ್ನು ನುಡಿಯದೆ ದಿಟವನ್ನು ಹೇಳುವುದೇ ಸತ್ಯವು.

ಹಿರಣ್ಮಯೇನ ಪಾತ್ರೇಣ ಸತ್ಯಸ್ಯಾಪಿಹಿತಂ ಮುಖಂ ।
ತತ್ತ್ವಂ ಪೂಷನ್ನ ಪಾವೃಣು ಸತ್ಯಧರ್ಮಾಯ ವೃಷ್ಟಯೇ ॥
—ಉಪನಿಷತ್

ಸತ್ಯದಲ್ಲಿ ನಡೆವುದು ಶೀಲ, ಸತ್ಯದಲ್ಲಿ ನುಡಿವುದು ಶೀಲ.
ಸಜ್ಜನಸದಾಚಾರದಲ್ಲಿ ವರ್ತಿಸಿ ಸತ್ಯವನರಿವುದೇ ಶೀಲಕಾಣಿರೋ.
ಮಹಾಲಿಂಗಗುರು ಶಿವಸಿದ್ಧೇಶ್ವರಪ್ರಭುವೇ. —ವಚನಶಾಸ್ತ್ರ

ವೇದ, ಆಗಮ, ಉಪನಿಷತ್ತು, ಸ್ಮೃತಿ, ಪುರಾಣ, ದರ್ಶನ, ಗೀತೆ, ಸೂಕ್ತಾದಿಗಳು ಹಿಂದೂಧರ್ಮದ ಆಧಾರ ಗ್ರಂಥಗಳು. ಹಿಂದೂಧರ್ಮದ ಪ್ರಾಶಸ್ತ್ಯವೇನು ?

ಸತ್ಯಂ ಮಾತಾ ಪಿತಾ ಜ್ಞಾನಂ ಧರ್ಮೋಭ್ರಾತಾ ದಯಾ ಸಖಾ ।
ಶಾಂತಿಃ ಪತ್ನಿಃ ಕ್ಷಮಾಪುತ್ರಂ ಷಡೇತೇ ಮಮಬಾಂಧವಾಃ ।
ಶ್ಲೋಕಾರ್ಧೇನ ಪ್ರವಕ್ಷ್ಯಾಮಿ ಯದುಕ್ತಂಗ್ರಂಥ ಕೋಟಿಭಿಃ ।
ಪರೋಪಕಾರಃ ಪುಣ್ಯಾಯ ಪಾಪಾಯ ಪರಪೀಡನಃ ॥ —ಭಾರತ

ಸಾವು ತಡವಿಲ್ಲ, ನರಕ ದೂರವಿಲ್ಲ
ದೇಹದಿಚ್ಛೆಗೆ ಹರಿದು ಕೆಮ್ಮನೆ ಕೆಡಬೇಡ

ದುರ್ವಿಷಯವ ಬಿಡುಬೇಗ ಗುರುಪದವ ನಂಬು ನಮ್ಮ ಸಿಮ್ಮಲಿಗೆಯ
ಚೆನ್ನರಾಮನಲ್ಲಿ ನೀನು ಸುಖಿಯಪ್ಪೆ ಎಲೆ ಮರುಳೆ.

— ವಚನಶಾಸ್ತ್ರ.

ಹಿಂದೂಧರ್ಮದ ವಿಚಾರ ಸರಣಿಯ ಸಂಭ್ರಮ ಸಡಗರವು ಸಂತಸ ಸ್ರೋತವಾಗಿದೆ. ಕಷ್ಟದುಃಖಾದಿಗಳಲ್ಲಿ ಸಿಲುಕಿ ಅಳಲಿ ಬಳಲಿದಾಗ, ಅನಂತ ದಚಿತ್ರಭಿಯೊಮ್ಮೆ ಅಂತರಂಗದಲ್ಲಿ ಮೂಡಿ ಈ ತೊಡರು ತೊಡಕುಗಳೆಲ್ಲವೂ ಮುಂದಿನ ಅಭ್ಯುದಯಕ್ಕಾಗಿ ಎನಿಸುತ್ತವೆ. "ಆನಂದವು ಅಳಿಸಿಹೋಗಿದ್ದರೆ ಪ್ರಪಂಚವು ಉಳಿಯುತ್ತಿರಲಿಲ್ಲ." ಎಂದು ಉಪನಿಷತ್ತು ಸಾರಿದೆ. ಈ ಸ್ಥಾವರ ಸತ್ವವೇ ಬ್ರಹ್ಮವೆಂಬ ಸತ್ಯವು. ಇದು ತ್ರಿಮೂರ್ತಿಗಳಾಗಿ ಪುರಾಣ ಗಳಲ್ಲಿ ಬಣ್ಣಿಸಲ್ಪಟ್ಟಿದೆ. ಈ ಜಗತ್ತಿನಲ್ಲಿ ಸತ್ವ, ರಜ, ತಮೋಗುಣತ್ರಯ ಗಳು ಅಂಟಿಕೊಂಡಿವೆ. ಸೃಷ್ಟಿ ಸ್ಥಿತಿಲಯ ಕಾರ್ಯಗಳು ಈ ಗುಣಾವಲಂಬ ನದಿಂದಲೇ ಈಶ್ವರನ ಮೂಲಕ ನಡೆಯಿಸಲ್ಪಡುತ್ತವೆ. ಸರಸ್ವತಿ, ಲಕ್ಷ್ಮಿ, ಕಾಳಿ ಎಂಬ ರೂಪಿನಿಂದ ಕ್ರಿಯಾ ಶಕ್ತಿಗಳು ವರ್ತಿಸುತ್ತಿವೆ. ಬ್ರಹ್ಮವು ಸಂಪೂರ್ಣ ಜೀವನ ಪ್ರತೀಕವೆಂದೂ, ಕೇವಲ ಪ್ರಪಂಚ ಪ್ರಧಾನದೃಷ್ಟಿ ಯಿಂದಾಗಲಿ, ಶೂನ್ಯವಾದದಿಂದಾಗಲೀ, ಉಭಯವೂ ಅಪೂರ್ಣ ಜೀವನ ಸಿದ್ಧಾಂತಗಳೇ ಎಂಬ ಅಭಿಪ್ರಾಯವು ತೇಜೋಬಿಂದೂಪನಿಷತ್ತಿನಲ್ಲಿ ವ್ಯಕ್ತ ಪಟ್ಟಿದೆ. ದೇವದೇವನ ಸ್ವರೂಪು ಜಗತ್ತೇ ಆಗಿದೆ.

"ಜೀವ ಕೋಟಿಗಳಲ್ಲಿ ಉಸಿರಾಡುವ ಜೀವಿಗಳೇ ಹೆಚ್ಚು. ಅವುಗಳ ಲ್ಲೆಲ್ಲ ಮನಸ್ಸಿರುವ ಜೀವಿಗಳು ಮಿಗಿಲು. ಇವುಗಳಲ್ಲಿ ಬುದ್ಧಿಯಿರುವವರು ಶ್ರೇಷ್ಠ. ಎಲ್ಲಕ್ಕಿಂತಲೂ ಬ್ರಹ್ಮಜ್ಞಾನಿಗಳು ಉತ್ತಮ."

—ಮನುಸ್ಮೃತಿ

ಅನಂತದರ್ಶನ ಅವಸರವಾದಾಗ ದೊರಕುವ ಹೆಚ್ಚಿಗೆ ಬೆಲೆಯಿಂದ ಫಲಿಸಿದ ಭಗವಂತನ ಅವತಾರವೇ ಮಹಾವಿಭೂತಿಯ ಜನ್ಮವು ಎನ್ನುವುದು ಗೋಚರವಾಗುತ್ತದೆ.

ಯದ್ಯದ್ವಿಭೂತಿ ಮತ್ಸತ್ವಂ ಶ್ರೀಮದೂರ್ಜಿತಮೇವವಾ ।
ತತ್ತದೇವಾಗಚ್ಛತ್ವಂ ಮಮತೇಜೋಂಶ ಸಂಭವಮ್ ॥ —ಗೀತೆ

ಜಗದುಪಕಾರ ಮಾಡಿರುವವರನ್ನೆಲ್ಲರನ್ನು ಪರಮಾತ್ಮನ ಅವತಾರ ವೆಂದು ಹಿಂದೂಗಳು ಪೂಜಿಸುವುದು ರೂಢಿಯಾಗಿದೆ. ಅವತಾರಿಗಳ ಅವ ತಾರದಿಂದ ಮಾನವನೂ ಸಹ ಅಮರನಾಗಲು ಅವಕಾಶವಾಗುತ್ತದೆ. ಶ್ರೀ ಕೃಷ್ಣನ ಅವತಾರದಿಂದ ಹಲವಾರು ಮಹನೀಯರು ಅಮರೀಯ ಮಾನವ

ರಾಗಿ ಮೆರೆದಿದ್ದಾರೆ ಎನ್ನಲು ಚೈತನ್ಯ, ರಾಮಕೃಷ್ಣರಾದಿ ಮಹಾತ್ಮರೇ ನಿದರ್ಶನರಾಗಿದ್ದಾರೆ. ದೈವತ್ವದ ಅಂಶದ ಜೊತೆಗೆ ಕರ್ಮತ್ವವೂ ಕೂಡ ಮಾನವನಲ್ಲಿ ಸೇರಿದೆ. ಕರ್ಮಕ್ಕೆ ಜ್ಞಾನ, ಭಕ್ತಿ ಇತ್ಯಾದಿಯ ಸಾರವು ಅತ್ಯಗತ್ಯವು. ಇದರಿಂದಲೇ ಕರ್ಮವು ಸತ್ಫಲವನ್ನು ನೀಡುತ್ತದೆ. ಆಧ್ಯಾತ್ಮಿಕ ಸಾಧನೆಯಿಂದ ಜ್ಞಾನಕರ್ಮ ಸುಂದರ ಸಮನ್ವಯ ದೂಡಿಕೊಂಡು ಧಾರ್ಮಿಕ ಹಾದಿಯಲ್ಲಿ ಪುರುಷ ಪ್ರಗತಿಯಿಂದ ಮುಂದುವರಿಯಬೇಕು.

"ಯಜ್ಞಾಯಾಚರತಃ ಕರ್ಮಸಮಗ್ರಂ ಪ್ರವಿಲೀಯತೇ, ಸರ್ವಂ ಕರ್ಮಾಖಿಲಂ ಪಾರ್ಥಜ್ಞಾನೇ ಪರಿಸಮಾಪ್ಯತೇ, ಜ್ಞಾನಾಗ್ನಿಃ ಸರ್ವ ಕರ್ಮಾಣಿ ಭಸ್ಮಸಾತ್ ಕುರುತೇಽರ್ಜುನ"

ಎಂಬ ಗೀತೋಕ್ತಿಯಂತೆ ಜ್ಞಾನದಲ್ಲಿ ಕರ್ಮಬೋಧೆಯು ಪ್ರತಿಷ್ಠಿತವಾಗಿದೆ. ಅರಿವುದೇ ಜ್ಞಾನ, ಅರಿತಂತೆ ಆಚರಿಸುವುದೇ ಕ್ರಿಯೆಯು ಎಂಬ ಬಸವ ಗೀತಾವಾಣಿಯೂ ಸಹ ಜ್ಞಾನಕರ್ಮದ ಪೂರಕವನ್ನು ವಿವರಿಸುತ್ತದೆ.

ಹಿಂದೂ ಧರ್ಮವು ಜಗತ್ತಿನ ತತ್ವಜ್ಞಾನಿಗಳ ಚಿತ್ರವನ್ನು ಸೂರೆಗೊಂಡಿದೆ. ಪ್ರಪಂಚದ ಪ್ರಾಚೀನ ಭಂಡಾರದಲ್ಲಿ ಹಿಂದೂಗಳ ವೇದೋಪನಿಷತ್ತುಗಳು ರತ್ನ ಪ್ರಾಯವಾಗಿವೆ. ಹಲವು ಮಂದಿ ಮಹರ್ಷಿಗಳ, ಆಚಾರ್ಯರ, ಪಂಡಿತೋತ್ತಮರ, ತತ್ವಜ್ಞಾನಿಗಳ, ಕವಿ ಶ್ರೇಷ್ಠಾದಿ ಮಹಾ ವಿಭೂತಿಗಳ ತಪಸ್ಸು, ಅನುಭವ, ಪ್ರತಿಭೆಗಳ ಸಾರಸರ್ವಸ್ವವೇ ಇಂದಿನ ಹಿಂದೂ ಧರ್ಮವಾಗಿದೆ. "ಪ್ರಜಾನಾರ್ಥಂ ಮಹಾ ಭಾಗ: ಪೂಜಾರ್ಹ ಗೃಹದೀಪ್ರಯಃ" ಎಂಬ ಆದ್ಯ ಋಷಿ ವಾಣಿಯಿಂದ ಹಿಂದೂ ಧರ್ಮದಲ್ಲಿ ಹಿಂದೆ ಸ್ತ್ರೀಯರಿಗಿದ್ದ ಸ್ಥಾನ ಮಾನವು ಗೊತ್ತಾಗುತ್ತದೆ. ಸಂತಾನ ಪ್ರಾಪ್ತಿಯು ನಮ್ಮ ನಾಡಿನಲ್ಲಿ ಒಂದು ಪವಿತ್ರವಾದ ಮಂಗಳ ವ್ಯಾಪಾರವೂ ನಮ್ಮ ನಾಡಿನ ಹೆಂಗಸರ ಮುಖ್ಯ ಸ್ಥಾನವು ಜನನಿ ಪದವಿಯೂ ಆಗಿರುವದು ಇದರಿಂದ ನಿದರ್ಶಕವಾಗುತ್ತದೆ. ತೊಟ್ಟಿಲನನ್ನು ತೂಗುವ ಕೈಯು ಜಗತ್ತನ್ನೆ ತೂಗುವದು ಎಂಬ ಗಾದೆಯನ್ನು ನೋಡಿದರೆ ಹೆಂಗಸಿನ ಸ್ಥಾನ ಮಾನವು ಗೊತ್ತಾಗುತ್ತದೆ. ಮಾನವತ್ವದ ಶ್ರೇಷ್ಠತೆಯನ್ನೂ, ಮಹತ್ತನ್ನೂ ಹಿಂದೂ ಧರ್ಮವು ಉಚ್ಚ ಶೈಲಿಯಲ್ಲಿ ಪ್ರಶಂಸನೆ ಮಾಡುವಂತೆ ಮತ್ತೆ ಇನ್ನಾವ ಧರ್ಮವೂ ಸಹ ಮಾಡುವದಿಲ್ಲ ಎಂದು ಸ್ವಾಮಿ ವಿವೇಕಾನಂದರು ಹೇಳಿದ್ದಾರೆ. ರಾಮಕೃಷ್ಣ ಪರಮಹಂಸ, ಸ್ವಾಮಿರಾಮತೀರ್ಥ, ಮಹರ್ಷಿ

ದಯಾನಂದ ಸರಸ್ವತಿ, ಪಂಡಿತ ಈಶ್ವರಚಂದ್ರ ವಿದ್ಯಾಸಾಗರ, ಲೋಕಮಾನ್ಯ ತಿಲಕ, ದೇಶಭಕ್ತ ರಾಜಾರಾಮ ಮೋಹನರಾಯ, ಸ್ವಾಮಿ ಶ್ರದ್ಧಾನಂದ, ಧರ್ಮಾತ್ಮ ಮಾಳವೀಯ, ಮಹಾತ್ಮಾ ಗಾಂಧಿ, ಡಾಕ್ಟರ ಮೂಂಜೆ, ಪರಮಾನಂದಬಾಯಿ, ಜಗದ್ಗುರು ಶಂಕರಾಚಾರ್ಯ, ವಿಶ್ವಕವಿ ರವೀಂದ್ರರ ಸೇವೆಯೂ ಸಹ ಈ ಧರ್ಮದ ಪುರೋಭಿವೃದ್ಧಿಗೆ ಸಹಾಯಕರವಾಗಿರುವುದು ಗುರುಕರವಾಗಿದೆ. ಶಿಖರದ ಮೇಲೆ ಬಿದ್ದ ಮಳೆಯು ಪರ್ವತ ಪ್ರದೇಶಗಳಲ್ಲಿ ಬೇರೆ ಬೇರೆಯಾಗಿ ಕಾಣುವುದು ನೇತ್ರದೋಷವೇ ಹೊರತು ಜಲ ದೋಷ ವಲ್ಲವು. ದೇಶಕಾಲ ಪರಿಸ್ಥಿತಿಗನುಗುಣವಾಗಿ ಧರ್ಮವು ತನ್ನ ವಿಶ್ವರೂಪನ್ನು ವಿಸ್ತರಿಸುತ್ತದೆ. ಧರ್ಮ ಕ್ರಾಂತಿಯ ಫಲವಾಗಿ ಷಡಾನನವು ನಮ್ಮ ಧರ್ಮ ದಲ್ಲಿ ಅಳಪಟ್ಟಿದೆ ಎಂಬುದು ವಿಚಾರ ಕ್ರಾಂತಿಯ ಪರಿಚಯದಿಂದ ತಿಳಿಯು ತ್ತದೆ. ಜ್ಞಾನಯುಗ, ಪೌರುಷಯುಗ, ಅಹಿಂಸಾಯುಗ, ಸಿದ್ಧಾಂತಯುಗ, ಭಕ್ತಿಯುಗ, ಕ್ರಾಂತಿಯುಗವಾಗಿ ಸಾವಿರಾರು ವರ್ಷಗಳ ಹೆಣಗಾಟದಿಂದ ಫಲಿತವಾಗಿದೆ. ಕ್ರೈಸ್ತ, ಇಸ್ಲಾಮೀಯ, ಸೂಫೀ ಧರ್ಮ ಇವೆಲ್ಲದರ ಏಕ ಸ್ವರೂಪತೆಯನ್ನು ನಮ್ಮ ಧರ್ಮದಲ್ಲಿ ನಾವು ಕಾಣುತ್ತೇವೆ. ಮಾನವನಲ್ಲಿ ಅಡಕವಾಗಿರುವ ಬ್ರಹ್ಮವನ್ನು ಪ್ರಕಾಶಿಸುವದೇ ಧರ್ಮ ಎಂದು ಹೇಳಿದ ಸ್ವಾಮಿ ವಿವೇಕಾನಂದರು ಇನ್ನೊಂದೆಡೆ ಇಂತು ಹೇಳಿದ್ದಾರೆ. "ಹಸಿದ ಉದರಕ್ಕೆ ಧರ್ಮ ಬೋಧೆ ಹಿಡಿಸದು. ಬರೀ ಪುಸ್ತಕ ಸಿದ್ಧಾಂತವಾಗಲೀ ಕೇವಲ ಪುಸ್ತಕ ಜ್ಞಾನವಾಗಲೀ ಧರ್ಮ ಎನಿಸಿಕೊಳ್ಳಲಾರದು. ಧರ್ಮದ ಉನ್ನತಿಗಾಗಿ ಪ್ರತಿಯೊಬ್ಬರೂ ದುಡಿಯಲೇಬೇಕು. ಉತ್ಸಾಹ ಹುರುಪಿನ ಬೆಂಬಲವಿದ್ದರೆ ಧರ್ಮವು ಫಲಕಾರಿಯು. ಶ್ರೇಯಸ್ಸಿಗೆ ಯಾವುದು ಸಹಾ ಯವಾಗುವದೋ ಅದೇ ಧರ್ಮವು. ಸಾಮಾಜಿಕ ವ್ಯಾಪಾರಗಳಲ್ಲಿ ಧರ್ಮವು ತಲೆ ಹಾಕದೆ ಇರಲಿ. ನಿನ್ನ ಧರ್ಮವನ್ನು ತಪ್ಪದೆ ಪಾಲಿಸು."

ಮಾನವನಿಗಿಂತ ಮಹತ್ತರವಾಗಿರುವ ಒಂದು ಬಲದ ವಶವಾಗಿ ಅದರ ಉಪಾಸಕನಾಗಿ ನಡೆದುಕೊಳ್ಳುವುದೇ ಧರ್ಮದ ಮೂಲವಾಗಿದೆ. ಶಕ್ತಿಯ ಕಲ್ಪ ನೆಯೇ ಇಪುದವಾದ ಆತ್ಮದ ವಿಷಯವನ್ನು ಹೊರಹೊಮ್ಮಿಸುತ್ತದೆ. ಮಾನವ ದೇವರ ಸಂಬಂಧವಾಗಿ ಬೆಳೆದುಕೊಂಡು ಬಂದ ವಿಷಯವು ಇತರ ವಿಷಯ ಗಳಿಂದ ಬೇರೆಯಾಗಿ ಪರದೇಶಗಳಲ್ಲಿ ಮತ, ಜಾತಿ ಎಂಬ ನಾಮವನ್ನು ಹೊಂದಿದೆ, ಆದರೆ ಭರತಖಂಡದಲ್ಲಿ ಈ ವಿಷಯದ್ವಯಗಳಲ್ಲಿ ಧ್ಯಾನಮನನಾದಿ

ಗಳನ್ನು ಮಾಡಿ, ಅವುಗಳಿಗೂ ಪ್ರಪಂಚದ ಪ್ರತಿಯೊಂದು ವ್ಯಾಪಾರಾದಿಗಳಿಗೂ ಇರುವ ಸಹಜ ಸಂಬಂಧವನ್ನು ಪ್ರಾಚೀನ ಋಷಿಗಳು ಕಂಡುಹಿಡಿದು ಅದಕ್ಕೆ ವ್ಯಾಪಕವಾದ ಧರ್ಮವೆಂಬ ನಾಮಕರಣವನ್ನು ಮಾಡಿದ್ದಾರೆ. ಜಗತ್ತು ಧರ್ಮದಿಂದ ಹಿಡಿಯಲ್ಪಟ್ಟಿದೆ. ಧರ್ಮವು ಜಗತ್ತಿಗೆ ಆಧಾರವಾಗಿದೆ ಎಂಬುದೇ ಧರ್ಮದ ಲಕ್ಷಣವು. ಧರ್ಮೋ ವಿಶ್ವಸ್ಯ ಜಗತಃ ಪ್ರತಿಷ್ಠಾಃ ಎಂದು ನಾರಾಯಣೋಪನಿಷತ್ತಿನಲ್ಲಿ ನಿರೂಪಿತವಾಗಿ ಧರ್ಮವು ಜಗದಾಧಾರಕವೆನಿಸಿದೆ. ಧರ್ಮಾಧರ್ಮಗಳು ಮರಣ ದೇವತೆಯನ್ನು ಹಿಂಬಾಲಿಸುತ್ತವೆ. ಧರ್ಮದಿಂದ ಸತ್ಯವಾಗಲೀ, ದಾನವಾಗಲೀ ಉದಯಿಸುತ್ತದೆ ಎಂಬ ಚಾಣಿಕ್ಯ ಸೂತ್ರದಿಂದ ಧರ್ಮದ ಗುರುತ್ವವು ಗೊತ್ತಾಗುತ್ತದೆ. ದಯಯೇ ಮಾತೃ ಭೂಮಿಯು ಎಂದು ಚಾಣಿಕ್ಯನು ಹೇಳಿದ್ದಾನೆ. ದಯಾವೃತ್ತಿಯಿಂದ ಜನಿಸಿದ ಧರ್ಮವೇ ಸರ್ವೋತ್ಕೃಷ್ಟವಾಗಿದೆಯೆನಲು ದಯವೇ ಧರ್ಮದ ಮೂಲವಯ್ಯ ಎಂಬ ಬಸವವಾಣಿಯೇ ಸಾಕಾಗಿದೆ. ಧರ್ಮದ ಪ್ರಯೋಜನವು ಹಣವಾಗಲೀ, ತಿಂಡಿಯಾಗಲೀ ಅಲ್ಲ. ಈ ತರನ ಪುಟ್ಟಮಾನದಿಂದ ಈ ಗಹನ ವಿಚಾರವನ್ನು ಅಳೆಯಬಾರದು. ಅನಂತ ವಿಷಯವನ್ನು ಅನಂತದ ಏಕಮಾನದಿಂದಲೇ ಅಳೆಯುವುದು ಸೂಕ್ತವಾಗಿದೆ.

ಮಾನವ ಪ್ರಾಣಿಯನ್ನು ಮನುಷ್ಯನನ್ನಾಗಿ ಮಾರ್ಪಡಿಸುವುದು ಧರ್ಮವೇ ಆಗಿದೆ. ಕ್ರಮಕ್ರಮೇಣ ಅದೇ ಆತನನ್ನು ಅಮರನನ್ನಾಗಿ ಮಾಡುತ್ತದೆ. ಬರೀ ಇಂದ್ರಿಯ ಭೋಗವು ಮಾತ್ರ ಮಾನವ ಬಾಳಿನ ಗುರಿಯಲ್ಲವು. ಪಶುಪ್ರಾಣಿಗಳ ಇಂದ್ರಿಯ ಭೋಗಕ್ಕಿಂತ ಮನುಷ್ಯನ ಬೌದ್ಧಿಕ ವಿಕಾಸವು ಹಿರಿಯದಾಗಿದೆ. ಸತ್ಕರ್ಮಗಳನ್ನು ಮಾಡುತ್ತಾ ಇದ್ದರೆ ಬೌದ್ಧಿಕ ವಿಕಾಸ ಉಂಟಾಗುತ್ತದೆ. ಬುದ್ಧಿಯ ವಿಕಾಸದಿಂದ ಉಂಟಾದ ಅಂತಃಶಕ್ತಿಯ ಪರಿಪೂರ್ಣತೆಯೇ ಆತ್ಮವಿಶ್ವಾಸದ ಸಾಧನವಾಗಿದೆ. ನಹಿ ಜ್ಞಾನೇನ ಸದೃಶಂ ಎಂಬುದು ಜ್ಞಾನದ ಶ್ರೇಷ್ಠತೆಯನ್ನು ವ್ಯಕ್ತಪಡಿಸುತ್ತದೆ. ಬರೀ ಪುಸ್ತಕಗಳ ವಾಚನದಿಂದ ಬಂದುದು ಮಾತ್ರವೇ ಜ್ಞಾನವಲ್ಲವು; ಉಚಿತ ಉಪಯುಕ್ತ ಕ್ರಿಯೆಯಿಂದ ಜ್ಞಾನವು ಜನಿಸಬೇಕು. ಈ ಕರ್ಮದಿಂದ ಜ್ಞಾನ ಕ್ಷೇತ್ರವು ವಿಸ್ತಾರವಾಗುತ್ತದೆ. ಇದರಿಂದ ಲೋಕ ಸಂಗ್ರಹವು ತಾನೇ ತಾನಾಗಿಯೇ ಆಗುತ್ತದೆ. ತತ್ಫಲವಾಗಿ ಸಮಾಜವು ಎಚ್ಚತ್ತು ಧರ್ಮಪ್ರವೃತ್ತವಾಗಿ, ಅಲ್ಲಿನ ವ್ಯಕ್ತಿಗಳಲ್ಲಿ ಪರಸ್ಪರ ಪ್ರೇಮವು ಫಲಿತವಾಗುತ್ತದೆ. ಅಂದು ಜನತೆಯು ಧರ್ಮೋದ್ದೇಶಗಳನ್ನು ತಿಳಿದುಕೊಂಡು ಬಾಳಿ ಬೆಳೆಯು

ತ್ತದೆ. ಈ ಪರಿಯ ಕ್ರಿಯೆಯನ್ನು ಮಾಡುವುದೇ ಯೋಗವಾಗಿದೆ. ಯೋಗಃ ಕರ್ಮ ಸುಕೌಶಲಂ ಎಂದು ಗೀತಾಚಾರ್ಯನು ಹೇಳಿರುವದನ್ನು ನೆನಪಿನಲ್ಲಿ ಟ್ಟುಕೊಂಡು ಯೋಗಸಿದ್ಧಿಯನ್ನು ಪಡೆದು ಅದು ಸಮಾಜಕ್ಕೆ ಉಪಕಾರವನ್ನು ನೀಡುವಂತೆ ಮಾಡಿ, ಆತ್ಮಜ್ಯೋತಿಯ ಸಾಕ್ಷಾತ್ಕಾರವಾಗಿ, ಪ್ರಜಾವರ್ಗವೇ ಪರಮಾತ್ಮನ ಪ್ರತಿಬಿಂಬವಾಗಿ ಮೆರೆದು ಇಹದಲ್ಲಿ ಕೈವಲ್ಯಕಮನೀಯ ಕುರುಹುಗಳಾರ್ಜನೆಯ ಮೂಲಕ ಪರದಲ್ಲಿನ ಕೈವಲ್ಯಕ್ಕೆ ಸಾಧನವಾಗಿ ಅಖಂಡ ಸ್ವಾನಂದ ಸಾಮ್ರಾಜ್ಯ ಪದವಿಯು ತಾನೇ ತಾನಾಗಿ ಒದಗುವದೇ ಧರ್ಮದ ಪ್ರಯೋಜನವಾಗಿದೆ.

ಆತ್ಮಶಕ್ತಿ ಸ್ವಾತಂತ್ರ್ಯವೇ ಇಂದ್ರಿಯ ಧರ್ಮಕ್ಕೆ ಅತ್ಯಗತ್ಯವಾಗಿ ಬೇಕಾದದ್ದಾಗಿದೆ. ಶಕ್ತಿಹೀನರಿಗೆ ಆತ್ಮಜ್ಞಾನವು ಲಭಿಸುವದಿಲ್ಲ; ಧೀರರಿಗೆ ಮಾತ್ರ ಆತ್ಮಜ್ಞಾನವು ಲಭಿಸುತ್ತದೆ. ನಾಯಮಾತ್ಮಾ ಬಲಹೀನ ಲಭ್ಯತೇ ಎಂಬುದೇ ಇದಕ್ಕೆ ಸಾಕಾದಷ್ಟು ಆಧಾರವಾಗಿದೆ. ಈ ವಿಷಯದಲ್ಲಿ ಸ್ವಾಮಿ ವಿವೇಕಾನಂದರ ವಾಣಿಯು ಇಂತಿದೆ. “ಬಂಧುಗಳೇ ! ನಿಮ್ಮ ಇಂದಿನ ಪರಿಸ್ಥಿತಿಗೆ ನೀವೇ ಕಾರಣರು, ನಿಮ್ಮ ಶಕ್ತಿಹೀನತೆಯೇ ಕಾರಣವು. ನಿಮ್ಮ ಕಾಯವು ಶಕ್ತಿಹೀನವಾಗಿದೆ. ನಿಮ್ಮ ಮನಸ್ಸು ನಿಶ್ಶಕ್ತಿಯಾಗಿ ಆತ್ಮವಿಶ್ವಾಸವನ್ನೇ ಕಳೆದು ಕೊಂಡಿರಿ. ಸೋದರ ನೆಂಟರಿಷ್ಟರೇ ! ಹಲವಾರು ಶತಮಾನಗಳ ಜಾತಿ ಜಗಳಗಳು ಹಾಗೂ ದೇಶವಿದೇಶೀಯರ ಕ್ರೂರಕರ್ಮಗಳು ನಿಮ್ಮ ಬಲವನ್ನು ತಗ್ಗಿಸಿ ಹಾಳು ಮಾಡಿವೆ. ನಿಮ್ಮ ಬೆನ್ನು ಮುರಿದಿರುವವರೇ ನಿಮ್ಮನ್ನು ಕೀಟಗಳನ್ನಾಗಿ ಮಾಡಿದ್ದಾರೆ. ಇಂದು ನಿಮಗೆ ಬೇಕಾಗಿರುವ ಶಕ್ತಿಯು ಅದನ್ನು ಆರ್ಜಿಸಲು ಉಪನಿಷತ್ತುಗಳನ್ನು ಆಶ್ರಯ ಹೊಂದಿರಿ. ನಾನೇ ಆತ್ಮವು ಎಂಬ ವಿಶ್ವಾಸವನ್ನು ನಿಶ್ಚಯಮಾಡಿಕೊಳ್ಳಬೇಕು. ‘ನನ್ನ ಆತ್ಮವನ್ನು ಶಸ್ತ್ರಗಳು ಕತ್ತರಿಸಲಾರವು; ಜಲವು ನೆನೆಯಿಸಲಾರದು. ಗಾಳಿಯು ಒಣಗಿಸಲಾರದು; ನಾನು ಸರ್ವಶಕ್ತನು. ಏನನ್ನು ಬೇಕಾದರೂ ಮಾಡಬಲ್ಲೆ, ಎಂಬ ವಿಶ್ವಾಸವನ್ನು ಹೊಂದಿರಿ. ಬೇರೆ ಶಕ್ತಿಯುತ ಜನಾಂಗದಲ್ಲಿರುವ ಪ್ರತಿಭಾಮಯ ಆತ್ಮವೇ ನಿಮ್ಮಲ್ಲಿಯೂ ಸಹ ಇದೆ. ಅದನ್ನು ನಂಬಿ. ನಚಿಕೇತನಂತ ಆತ್ಮ ವಿಶ್ವಾಸಿಗಳಾಗಿ. ಆತನ ಜನಕನು ಯಾಗ ಮಾಡುವ ವೇಳೆಯಲ್ಲಿ ನಚಿಕೇತನ ಈ ಆತ್ಮವಿಶ್ವಾಸವು ಬೇರೂರಿತು. ನಿಮ್ಮೆಲ್ಲರಲ್ಲಿಯೂ ಆ ತೆರನ ಆತ್ಮವಿಶ್ವಾಸವು ಮನೆಮಾಡಿಕೊಳ್ಳಲಿ. ನಿಮ್ಮಲ್ಲಿಯ ಪ್ರತಿಯೊಬ್ಬರೂ

ಅನಂತಶಕ್ತನಾದ ಭಗವಂತನಂತೆ ಮಹತ್ತರವಾದ ಬುದ್ಧಿವಿಕಾಸದಿಂದ, ಆತ್ಮ ಶಕ್ತಿಯಿಂದ ಪ್ರಪಂಚವನ್ನೇ ಆಳುವಂತಹ ಅರಸಾಗುವಿರಿ. ಇದೇ ನನ್ನ ಅಭಿಲಾಷೆಯು. ಹಿಂದೂ ದೇಶದ ಯಶಸ್ಸನ್ನು ಪ್ರಕಾಶಿಸಿದ ನಮ್ಮ ಹಿಂದಿನವರು ಉಪನಿಷತ್ತುಗಳಿಂದ ಈ ಬಲವನ್ನು ಹೊಂದಿದ್ದರು. ಈಗಲೂ ನೀವು ಆ ಬಲವನ್ನು ಉಪನಿಷತ್ತಿನಿಂದಲೇ ಪಡೆಯುವಿರಿ. ”

ಹಿಂದೂ ಧರ್ಮೀಯರಿಗೆ ಅವಶ್ಯಕವಾದ ಆತ್ಮವಿಶ್ವಾಸವು ಇದರಿಂದ ನಮಗೆ ಚೆನ್ನಾಗಿ ಮನದಟ್ಟಾಗುತ್ತದೆ. ಹಿಂದೂ ಧರ್ಮದ ಭಾಂಡಾರದಲ್ಲಿ ಆತ್ಮವಿಶ್ವಾಸವು ಅಮೋಘವಾಗಿದೆ.

ಇಂದು ಧರ್ಮವು ಗೋಸುಂಬೆಯಾಗಿದೆ. ಜನರ ಆಚಾರವಿಚಾರಗಳೇ ಇದಕ್ಕೆ ಕಾರಣವಾಗಿದೆ. ಈ ಬಗೆಯ ಭಾವನಾಲಹರಿಯು ಬದಲಾವಣೆಯು ಪಾಶ್ಚಿಮಾತ್ಯರ ಸಂಪರ್ಕದಿಂದ ಉತ್ಪತ್ತಿಯಾಗಿವೆ. ‘ ಭಸ್ಮೀಭೂತಸ್ಯ ದೇಹಸ್ಯ ಪುನರಾಗಮನಂ ಕುತ ’ ಎಂದು ಹೇಳುವ ಚಾರ್ವಾಕರಿಗೆ ಧರ್ಮದ ಸ್ವರೂಪವು ಅದೆಂತು ಅರಿವಾಗುತ್ತದೆ ? ಮಾನವನ ಪುರುಷಾರ್ಥವು ಧರ್ಮದಲ್ಲಿ ಅಡಕವಾಗಿದೆ. ಅತಿರಥಮಹಾರಥನಾದ ರಾವಣನ ಪರಾಕ್ರಮವು ಸರ್ವಲೋಕ ಸಾಮಾನ್ಯ ಸಂಗತಿಯೇ ಸರಿಯು. ಅಂತಹುದರಲ್ಲಿ ಸಾಮ್ರಾಜ್ಯ ವೈಭವದಿಂದ ಮೆರೆಯುತ್ತಿದ್ದ ರಾವಣನು ಓರ್ವನಿಂದ ಹತನಾದನಲ್ಲವೇ ? ಧರ್ಮಿಯಾದ ರಾಮನಿಗೆ ವಿಜಯ; ಅಧರ್ಮಿಯಾದ ರಾವಣನಿಗೆ ಅಪಜಯ. ಕಾರಣ ರಾಮನಿಗೆ ಅಗಣಿತ ಪರಿವಾರವಿಲ್ಲದಿದ್ದರೂ ಬಹುವಾಗಿ ಧರ್ಮದ ನೆರವು. ಪರಧರ್ಮದ ಶ್ರೇಯಸ್ಸಿಗಿಂತ ಸ್ವಧರ್ಮದ ನಿಧನವೇ ಲೇಸು ಎಂಬ ಗೀತಾ ವಚನದ ನೆನಪಿನಿಂದ ನಮ್ಮ ನಮ್ಮ ಕೈಲಾದ ಮಟ್ಟಿಗೆ ನಮ್ಮ ನಮ್ಮ ಧರ್ಮಾಚರಣೆಯನ್ನು ಬಿಡದೆ ಎಷ್ಟೇ ಅಡ್ಡಿ ಆತಂಕಗಳು ಬಂದರೂ ಧರ್ಮಾವಲಂಬಿಗಳಾದರೆ ಅಂದೇ ಬಾಳು ಹಿರಿ ಹಿಗ್ಗೀತು ! ವಿಧಿನಿಷೇಧಗಳನ್ನು ಲಕ್ಷಕ್ಕೆ ತಾರದೆ ಮೂಢಮಾರ್ಗದಲ್ಲಿ ನಡೆದರೆ ಅಧರ್ಮವೆಂಬ ಕಲ್ಲು ಮುಳ್ಳುಗಳಿಂದ ಬಾಧಿತರಾಗಿ ತುಂಬು ನೋವು ಕಾವಿಗೆ ಈಡಾಗಬೇಕಾಗುತ್ತದೆ. ಜಗತ್ತನ್ನು ಆಳುವ ಅರಸನನ್ನು ಆಕ್ರಮಿಸಲು ಬಯಸುವ ಕಾಮ ಕ್ರೋಧಾದಿ ಅರಿ ಷಡ್ವರ್ಗವೆಂಬ ಅಜಾತ ಶತ್ರುಗಳನ್ನು ಹೊರದೂಡಿ, ಈ ದೇಹವು ನಿತ್ಯ ಸಾಮ್ರಾಜ್ಯಾಧಿಪತ್ಯವನ್ನು ಹೊಂದಲು ಧರ್ಮವೇ ಸಾಧನವಾಗಿದೆ. ಆತಏವ ಪ್ರತಿಯೊಬ್ಬರೂ ಬರೀ ಇಹಲೋಕದ ಭೋಗಕ್ಕೆ ಮರುಳಾಗಿ, ಪರಲೋಕದ

ಸಂಪತ್ತನ್ನು ಮರೆಯದಿರಲಿ. ಸತ್ಕಾರ್ಯಗಳನ್ನು ಮಾಡುತ್ತ ಧರ್ಮಸಂಗ್ರಹ ಮಾಡುವದೇ ಶ್ರೇಷ್ಠವಾಗಿದೆ. ಹಿಂದೂ ಸಮಾಜವು ತನ್ನ ಉದಾರ ತತ್ವ ಜ್ಞಾನವನ್ನು ಮರೆತು ಅಸೂಯೆ ದ್ವೇಷಾದಿಗಳಿಂದ ಕೂಡಿ ದಿನೇ ದಿನೇ ಅವನತಿಯನ್ನು ಹೊಂದುತ್ತಿರುವದು ವಿಷಾದಕರವಾಗಿದೆ. ರಾಜರ್ಷಿಜನಕ ಯಾಜ್ಞ್ಯವಲ್ಕ್ಯ ಶ್ರೀ ಕೃಷ್ಣ, ಮಹಾವೀರ, ಬುದ್ಧ, ಶಂಕರಾಚಾರ್ಯ, ರಾಮಾನುಜಾಚಾರ್ಯ, ಆನಂದತೀರ್ಥ, ವಿದ್ಯಾರಣ್ಯ, ಗುರು ನಾನಕ, ಚೈತನ್ಯ, ಬಸವೇಶ್ವರಾದಿ ಮಹಾತ್ಮರು ಯಾವ ಧರ್ಮದ ಉದ್ಧಾರಕ್ಕಾಗಿ ಅವತರಿಸಿ, ಅದರ ಅಭ್ಯುದಯಕ್ಕಾಗಿ ತಮ್ಮ ಇಡೀ ಬಾಳನ್ನೇ ಧಾರೆ ಎರೆದರೋ ಅಂತಹ ಧರ್ಮದ ತಿರುಳು ಹುರುಳನ್ನು ಅರಿತುಕೊಂಡು ಆಚರಿಸಿ ಪ್ರಪಂಚದಲ್ಲಿ ನಮ್ಮ ಅಸ್ತಿತ್ವವನ್ನು ದೃಢಪಡಿಸಿಕೊಂಡು ಗತವೈಭವವನ್ನು ಪುನಃ ವಿಜೃಂಭಿಸುವಂತೆ ಮಾಡುವದು ನಮ್ಮ ಕರ್ತವ್ಯವಲ್ಲವೇ. ?

ಪರಿಶುದ್ಧ ನಾಗರಿಕತೆಯ ಮಹರ್ಷಿಗಳು ತಮ್ಮ ಪವಿತ್ರ ಬಾಳಿನಿಂದ ಪಾವನ ಮಾಡಿದ ಉಚ್ಚ ಧರ್ಮವು ಹಿಂದೂ ಧರ್ಮವು. ಹಿಂದೂ ಧರ್ಮದ ತಿರುಳುಹುರುಳನ್ನು ಶ್ರೀ ರಾಮಕೃಷ್ಣ ಪರಮ ಹಂಸರು ತಮ್ಮ ಆತ್ಮಪರೀಕ್ಷೆ ಯಿಂದ ಪರಿಶೋಧನೆಮಾಡಿ, ತಮ್ಮ ಪರಮ ಶಿಷ್ಯ ನರೇಂದ್ರ–ಸ್ವಾಮಿವಿವೇ ಕಾನಂದರ ಮೂಲಕ ಈ ಪರಿಷ್ಕೃತ ಹಿಂದೂ ಧರ್ಮವನ್ನು ಪ್ರಪಂಚದಲ್ಲಿಯೇ ಪ್ರಸಾರಮಾಡಿದ್ದಾರೆ. ಹಿಂದೂ ಧರ್ಮದಲ್ಲಿನ ಸಕಲ ವಿಚಾರಗಳನ್ನು ಪರಿ ಶೋಧನೆಮಾಡಿ ಜನ ಜೀವನಕ್ಕೆ ಅನ್ವಯವಾಗುವಂತೆ ಸಾಂಗೋಪಾಂಗವಾಗಿ ಒರೆಗಿಕ್ಕಿ ಅಪರಂಜಿಯ ಆಭರಣಗಳನ್ನು ಹೊರಗಿನವರೂ ಅಪೇಕ್ಷಿಸುವಂತೆ ಮಾಡಿದ ಧರ್ಮ ಕುಟೀರಗಳು ರಾಮಕೃಷ್ಣಾಶ್ರಮಗಳು ತನ್ನ ಸತ್ಯ ಸ್ವರೂಪ ವನ್ನು ಅರಿತು ಆರ್ಯ ಧರ್ಮವನ್ನು ನಾಡಿನಲ್ಲಿ ಚಿರಸ್ಥಾಯಿಯಾಗಿ ಸ್ಥಾಪಿ ಸಲು ಜಗತ್ತಿನಲ್ಲಿ ಪ್ರಸಾರ ಮಾಡಿದ ಧರ್ಮಾಶ್ರಮಗಳು ರಾಮಕೃಷ್ಣಾಶ್ರಮ ಗಳು ಜಗತ್ತಿನ ಧರ್ಮಕ್ಕೆ ಸರಿಸಾಟಿಯಾಗಿ ಹಿತಮಿತ ಹಾದಿಯಲ್ಲಿ ಹಿಂದೂ ಧರ್ಮವು ಹಾಯ್ದು ಹೋಗುವ ಹದಬೆದೆಯು ಬಸವೇಶ್ವರರಿಂದ ಸುಧಾರಿ ಸಿದ ವೀರಶೈವ ಧರ್ಮದಲ್ಲಿ ಕಾಣಬರುತ್ತದೆ. ಒಳಪಂಗಡಗಳಲ್ಲಿ ಸರಿಸಮಾನ ಧರ್ಮ, ಸ್ತ್ರೀಸ್ವಾತಂತ್ರ್ಯ, ನವೀನ ಬಗೆಯ ಶಾಸ್ತ್ರ ಸಂವಿಧಾನ, ಪರಮತ ಸಹನೆಯು ಹಿಂದೂ ಧರ್ಮದ ಉಚ್ಛ್ರಾಯ ಪರಿಸ್ಥಿತಿಯನ್ನು ತಿಳಿಸುತ್ತದೆ. ಹಿಂದೂ ಧರ್ಮದಲ್ಲಿ ಬಾಳಿನ ಗುರಿಯು ಆತ್ಮಸಾಕ್ಷಾತ್ಕಾರ. ಹಿಂದೂ ಧರ್ಮವು ಭಕ್ತಿಯ ಗೂಡು.

ಅಪಿಚೇದಸಿ ಪಾಪೇಭ್ಯಃ ಸರ್ವೇಭ್ಯಃ ಪಾಪಕೃತ್ತಮಃ |
ಸರ್ವಂ ಜ್ಞಾನಪ್ಲವೇನೈವ ವೃಜಿನಂಸಂತರಿಷ್ಯಸಿ || —ಗೀತೆ

ನಾದಪ್ರಿಯನೆಂಬರು ಶಿವನ, ವೇದಪ್ರಿಯನೆಂಬರು ಶಿವನ. ನಾದವ ಮಾಡಿದ ರಾವಣಂಗೆ ಅರೆಯಾಯುಷ್ಯವಾಯಿತ್ತು. ವೇದವನೋದಿದ ಬ್ರಹ್ಮಂಗೆ ಶಿರಹೋಯಿತ್ತು. ನಾದಪ್ರಿಯನೂ ಅಲ್ಲ, ವೇದಪ್ರಿಯನೂ ಅಲ್ಲ; ಭಕ್ತಿಪ್ರಿಯ ಕೂಡಲಸಂಗಮದೇವ. —ಬಸವಗೀತೆ.

ಸಕಲಮತಗಳ ಸಿದ್ಧಾಂತದ ತಿರುಳುಹುರುಳು ಹಿಂದೂ ಧರ್ಮದಲ್ಲಿ ಅಡಕವಾಗಿದೆ.

"ತಂದೆತಾಯ ಸಲಹೆಬಲ್ಲಾತನೇ ಧಾರ್ಮಿಕಂ, ಭಜಕದಿಂ ದೈವದಿ ಭಕ್ತಿಯುಳ್ಳೊಡೆ ದ್ವಿಜನಾಚಾರತೆಯುಳ್ಳವಂ, ಲೌಕಿಕ ಪಾರಮಾರ್ಥಿಕಗಳ ಸಮನ್ವಯಿಸಿ ನಡೆ, "

ಮಹಾ ಕವಿ ಕಾಳಿದಾಸನು 'ಪುರಾಣ ಮಿತ್ಯೇವನ ಸಾಧುಸರ್ವಂ ನಚಾಪಿಕಾವ್ಯಂ ನವಮಿತ್ಯವದ್ಯಂ ' ಎಂದು ಅಭಿಪ್ರಾಯಪಟ್ಟಿದ್ದಾನೆ. ಹೀಗೆಂದ ಮಾತ್ರಕ್ಕೆ ಸಕಲವನ್ನೂ ಬಿಟ್ಟುಬಿಡಬೇಕೆಂದಾಗಲೀ ಎಂದು ಅರ್ಥವಲ್ಲ. ತನ್ನ ಧರ್ಮವನ್ನು ಹಾಳುಮಾಡಿಕೊಂಡ ಮೇಲೆ ಏನು ತಾನೇ ಪ್ರಯೋಜನ? ಮಾನವನ ಪುರುಷಾರ್ಥಸಾಧನೆಗೆ ಮೂಲವು ಧರ್ಮವು—ಧರ್ಮ, ಅರ್ಥ, ಕಾಮ, ಮೋಕ್ಷ— ರಾಷ್ಟ್ರೀಯತೆಗೆ ಧರ್ಮದ ಸೋಂಕು ಇದ್ದರೆ ಆಗ ರಾಜಕೀಯವು ರಂಜನೆಯಾಗುತ್ತದೆ. ಜಗತ್ತಿನ ಚರಿತ್ರೆಯ ಸಿಂಹಾವಲೋಕನ ಮಾಡಿದರೆ ರಾಜಕೀಯ ಪ್ರಗತಿಯು ಧಾರ್ಮಿಕ ಉಚ್ಛ್ರಾಯತೆಯಿಂದಲೇ ಆಗಿರುವುದು ಕಂಡುಬರುತ್ತದೆ. ಅದು ಕಾರಣ ರಾಷ್ಟ್ರಸೇವೆ ಮಾಡಬೇಕೆಂದವರಾಗಲೀ, ದೇಶ ಸೇವೆಗೆ ನಿಲ್ಲಬೇಕೆಂದವರಾಗಲೀ ಧರ್ಮದ ಕಟ್ಟಿಗೆ ಒಳಪಡಲೇಬೇಕಾಗಿದೆ. ಸಮಸ್ತರಿಗೂ ಹಿತವಾಗುವಂತೆ ನಡೆಯಲು ಅನುಕೂಲಿಕವಾಗುವ ಧರ್ಮವೇ ಶ್ರೇಷ್ಠ. ಧರ್ಮೋತ್ಪಾಟನೆ ಮಾಡುವುದೂ, ಜೀವ ಬಿಡುವುದೂ ಒಂದೇ ಆಗಿದೆ. ಧರ್ಮರಹಿತ ಕ್ರಿಯೆಯು ಆತ್ಮವಿಲ್ಲದ ಶರೀರ. ಸತ್ತ ಹೆಣಕ್ಕೆ ಎಷ್ಟೇ ಅಲಂಕಾರ ಮಾಡಿದರೂ ತಾನೇ ಏನು ಫಲ? ಧರ್ಮಾಧರ್ಮ ನಿರ್ಣಯವು ಪುರಾತನರಿಂದಲೇ ಉಕ್ತವಾಗಿದೆ.

ತಸ್ಮಾಚ್ಛಾಸ್ತ್ರಂ ಪ್ರಮಾಣಂತೇ ಕಾರ್ಯಾಕಾರ್ಯ ವ್ಯವಸ್ಥಿತಾ |
ಜ್ಞಾತ್ವಾ ಶಾಸ್ತ್ರ ವಿಧಾನೋಕ್ತಂ ಕರ್ಮ ಕರ್ತುಮಿಹಾರ್ಹಸಿ ||
—ಗೀತೆ

ವೇದಗಳಲ್ಲಿ ಯಾವುದು ಧರ್ಮವೆಂದು ಹೇಳಲ್ಪಟ್ಟಿದೆಯೋ ಅದೇ ಧರ್ಮವೆಂದು ನಮ್ಮ ಸನಾತನರಂತೆಯೇ ನಾವೂ ಸಹ ಒಪ್ಪಿಕೊಳ್ಳಬೇಕಾಗಿದೆ. ಭಾವೀ ಜನತೆಯನ್ನು ಬಳಲದಂತೆ ಅಧ್ಯಾತ್ಮಿಕ ವೃಕ್ಷದ ನೆರಳಿನಲ್ಲಿಯೇ ಕರೆದುಕೊಂಡು ಹೋಗುವುದು ಇಂದಿನವರ ಆದ್ಯ ಕರ್ತವ್ಯವಾಗಿದೆ. ಸಕಲ ಧರ್ಮಗಳ ಸಮನ್ವಯ ಸಾರಭೂತವಾದ ಪ್ರೇಮ ಧರ್ಮವು ಹಿಂದೂ ಧರ್ಮದಲ್ಲಿ ದಳದಳಿತವಾಗಿರುವುದು ಜಗತ್ತಿನಲ್ಲಿ ವ್ಯಾಪಿಸಬೇಕಾಗಿದೆ. ಇಡೀ ವಿಶ್ವವೇ ಗೊಂದಲಗೋಜಿಗೆ ಸಿಕ್ಕಿರುವ ವೇಳೆಯಲ್ಲಿ ಭಾರತೀಯ ಧರ್ಮ ಧ್ವಜವು ತನ್ನ ಪ್ರಭಾವವನ್ನು ಪ್ರಸರಿಸಿ ಆ ಬಿಕ್ಕಟ್ಟನ್ನು ಬಗೆಹರಿಸುವುದು ಹಿಂದೂ ಧರ್ಮೀಯರ ಹೆಮ್ಮೆಯೇ ಸರಿಯು. ಈ ಅಂತರ್ರಾಷ್ಟ್ರೀಯ ಧರ್ಮದ ಪ್ರಸಾರಣೆಗೆ ನಾವು ಟೊಂಕಕಟ್ಟಿ ನಿಂತು, ಧರ್ಮಕ್ಕೆ ಜಯವಾಗಲಿ ಎಂದು ಹಾಡಿ, ಧರ್ಮವು ಚೆಲುವಾಗಲಿ, ಬಲಿವಾಗಲಿ ಎಂದು ಹಾರೈಸಿ ಧರ್ಮದ ಉನ್ನತಿಗಾಗಿ ಹಿಂದೂಗಳಾದ ನಾವು ದುಡಿಯೋಣ. ನಮ್ಮ ಧರ್ಮವನ್ನು ನಾವು ಪಾಲಿಸಿಕೊಂಡು ಬಂದರೆ ಅದು ನಮ್ಮನ್ನು ಪಾಲಿಸುತ್ತದೆ. ಶ್ರೀರಾಮನು ವನವಾಸದ ಹದಿನಾಲ್ಕು ವರ್ಷದ ಅವಧಿಯನ್ನು ಮುಗಿಸಿಬರಲು ನಾರುಮಡಿಯನ್ನುಟ್ಟು ನಿಂತು ಹೊರಡಲು ಸಿದ್ಧನಾಗಿ ನಿಂತು ಅಂಜಲೀಬದ್ಧನಾಗಿ ತಾಯಿಯಾದ ಕೌಸಲ್ಯೆಯನ್ನು ಅಪ್ಪಣೆ ಬೇಡಿದ ಪುತ್ರನಿಗೆ ತಾಯಿಯು ಆಶಿಷದ ಅಲರಿನ ಸುವಾಸನೆಯು ಸಕಲರನ್ನೂ ಸಾವರಿಸಲಿ.

ಯಂ ಪಾಲಯಸಿ ಧರ್ಮತ್ವಂ । ಧೃತ್ಯಾ ಚ ನಿಯಮೇನಚ ॥
ಸವೈರಾಘವ ಶಾರ್ದೂಲ । ಧರ್ಮಸ್ತ್ವಂ ಅಭಿರಕ್ಷತು ॥

—ರಾಮಾಯಣ.

# ಧಾರ್ಮಿಕ ಮೂಢನಂಬಿಗೆ

(ಬರೆದವರುಃ— ಶ್ರೀಶಿವಾನಂದ ಸ್ವಾಮಿಗಳು, ಗವಿಮಠ ತೆಗ್ಗಿಹಳ್ಳಿ-ತಾ. ಇಂಡಿ)

---

## ಗುರುತ್ವದ ಗುತ್ತಿಗೆಯಿಂದ ಗುದುಮುರಿಗೆ, ಗೋಳಾಟ, ಗದ್ದಲ.

ಹಿಂದೂಧರ್ಮದಲ್ಲಿ ಗುರುಗಳಿಗೆ ಇದ್ದಷ್ಟು ಮಹತ್ವ ಉಳಿದ ಯಾರಲ್ಲಿಯೂ ಇಲ್ಲ. ಅದರಲ್ಲಿ ವೀರಶೈವರಲ್ಲಿಯಂತೂ ಗುರುಗಳಿಗೆ ಅತೀವ ಮಹತ್ವದ ಸ್ಥಾನಮಾನಗಳುಂಟು. ಅದಕ್ಕಾಗಿ ಹರ ಮುನಿದರೆ ಗುರು ಕಾಯುವನು, ಗುರುಬ್ರಹ್ಮಾ ಗುರುರ್ವಿಷ್ಣು, ಗುರು ದೇವೋ ಮಹೇಶ್ವರ: । ಗುರುದೇವ ಪರಂ ಬ್ರಹ್ಮತಸ್ಮೈ ಶ್ರೀಗುರುವೆ ನಮ: ॥

ಧ್ಯಾನಮೂಲೋ ಗುರುಮೂರ್ತಿಂ । ಪೂಜಾಮೂಲೋ ಗುರುಪಾರ್ದಂ।<br>
ಮಂತ್ರಮೂಲೋ ಗುರುರ್ವಾಕ್ಯಂ । ಮುಕ್ತಿಮೂಲೋ ಗುರುಕೃಪಾ ।<br>
ಗುರುದೇವೋ ಮಹಾದೇವೋ । ಮಹಾದೇವೋ ಸದಾಶಿವಃ ।<br>
ಗುರುದೈವಾತ್ ಪರನ್ನಾಸ್ತಿ । ತಸ್ಮೈ ಶ್ರೀಗುರುವೇನಮಃ. ಇನ್ನೂ ಗುರು ವಿನ ಮಹಿಮೆ ಸ್ಥಾನಮಾನಗಳನ್ನು ಚನ್ನಾಗಿ ಬಣ್ಣಿಸುವ ಎಷ್ಟೋ ಪದ ಪದ್ಯಗಳುಂಟು. ಸ್ಥಳದ ಅಭಾವದ ಮೂಲಕ ಇಲ್ಲಿ ಅತಿಸ್ವಲ್ಪ ವಾಕ್ಯಗಳನ್ನೇ ಉದಹರಿಸಲಾಗಿದೆ. ಶಂಕರಾಚಾರ್ಯರ ಗುರುಸ್ತೋತ್ರವು ಬಹು ಮಹತ್ವದ್ದಿರುವುದು. ೧೫ ಪದ್ಯಗಳಿವೆ.

ವಿದ್ಯಾಗುರು, ಶಿಕ್ಷಾಗುರು, ಮೋಕ್ಷಾಗುರು, ಜಾತಿ ಕುಲಗುರು, ಹೀಗೆ ಅನೇಕ ಪ್ರಕಾರದ ಗುರುಗಳುಂಟು. ಹಿಂದಕ್ಕೆ ಇವರೆಲ್ಲ ತಮ್ಮ ತ್ಯಾಗ, ವೈರಾಗ್ಯ, ಸೇವೆ, ಬ್ರಹ್ಮಚರ್ಯ ಪಾಲನ, ಧ್ಯಾನ, ಜಪ, ಭಕ್ತಿ, ಜ್ಞಾನ, ನಿಷ್ಕಾಮಕರ್ಮ, ಮೊದಲಾದ ದಿವ್ಯ ಸ್ಥಾನಗಳಿಂದ ಉಚ್ಚಸ್ಥಿತಿಗೆ ಹೋಗಿ ಗುರುಗಳಾಗುತ್ತಿದ್ದರು. ಆದರೆ ಈಗ ಯಾವ ಸಾಧನವಿರದೆ ಯಾವ ಸ್ಥಿತಿಯನ್ನು ಪಡೆಯದೆ ಯಾವ ಶಿಕ್ಷಣವನ್ನು ಹೊಂದದೆ ಹೆಬ್ಬಟ್ಟಿನವರೂ ಕೂಡ ಒಮ್ಮೆಲೆ ಗುರುತ್ವಕ್ಕೆ ಏರಿ ಮೆರೆಯುವರು. ಗುರುತ್ವವನ್ನು ಒಂದೇ ವರ್ಗಕ್ಕೆ ಗುತ್ತಿಗೆಯಾಗಿ ಕೊಟ್ಟು ಬಿಟ್ಟಿರುವರು. ಇದನ್ನು ಯಾರು ಕೊಟ್ಟರೋ

ತಿಳಿಯದು. ಭಕ್ತರೆನಿಸಿಕೊಳ್ಳುವವರ ಅಜ್ಞತನದ ದುರುಪಯೋಗವನ್ನು ಮಾಡಿಕೊಂಡು ಗುರುಗಳಾಗಿ ಗುರುಗುಡುತ್ತಿರುವರು. ಉಪನಯನ, ಅಯ್ಯಾಚಾರ, ಶಿವದೀಕ್ಷೆ ಮೊದಲಾದವುಗಳನ್ನು ಲನೇ ವರ್ಷಕ್ಕೆ ಮಾಡಿಕೊಂಡ ತರುವಾಯ ಗುರುಗಳೇ ಆಗಿಬಿಟ್ಟರು! ಈಗಿನ ಗುರುತ್ವವು ಬಲು ಸುಲಭ ಸರಳವಾಗಿರುವದು. ಯಾವ ಸಾಧನ ತಪ ತ್ಯಾಗ ಬ್ರಹ್ಮಚರ್ಯ ಪಾಲನ ಸೇವೆ ಮೊದಲಾದವುಗಳ ಅವಶ್ಯಕತೆಯೇ ಇಲ್ಲ. ಆ ಜಾತಿಯಲ್ಲಿ ಹುಟ್ಟಿದರೆ ತೀರಿತು, ಹುಟ್ಟಿದ ದಿನವೇ ಗುರುವೆಂದೇ ತಿಳಿಯಬೇಕು. ಅದಕ್ಕೆ ಎಲ್ಲಿಯೂ ಯಾವ ತರದ್ದೂ ಅಪೀಲಿಯೇ ನಡೆಯುವದಿಲ್ಲ. ಯಾರಾದರೂ ಸುಶಿಕ್ಷಿತರು ಇವನು ಹೇಗೆ ಗುರುವಾಗುವನು? ಯಾವ ಸಾಧನ ಮಾಡಿದನು? ಎಷ್ಟು ವರ್ಷ ತಪ ಮಾಡಿದನು? ಎಲ್ಲಿ ಅಭ್ಯಾಸ ಮಾಡಿದನು? ಯಾವ ಸಿದ್ಧಿ ಪಡೆದನು? ಎಂದು ಕೇಳಿದರೆ ಕೋಪಗೊಂಡು ಅವರಿಗೆ ಬಹಿಷ್ಕಾರ ಇಡಲಿಕ್ಕೆ ಯತ್ನಿಸುವರು. ಜಾತಿಯಿಂದ ಗುರುಗಳಾಗುವದು ಹೇಗೆ? ನೀತಿಯಿಂದ ಗುರುಗಳಾಗುವದಿಲ್ಲವೇನು? ಪ್ರತಿಯೊಬ್ಬರಿಗೂ ಗುರುಲಿಂಗ ಜಂಗಮರಾಗಲಿಕ್ಕೆ ಬರುವದೆಂದು ಶರಣರು ನುಡಿದು ನಡೆದು ಮಾಡಿ ತೋರಿಸಿದ್ದಾರಲ್ಲವೇ? ಇದೊಂದು ನೀವು ಹೊಸದನ್ನೇ ಬೋಧಿಸಿ ಬಳಿಕೆಯಲ್ಲಿ ತಂದು ಬಿಟ್ಟಿರುವರು! ಶರಣರ ತತ್ವಗಳು ಪುಸ್ತಕದಲ್ಲೇ ಹುಳಹತ್ತಿ ಹೋಗುತ್ತಿರುನವು. ಏನೋ, ಶ್ರೀ ಫ. ಗು. ಹಳಕಟ್ಟಿಯವರ ಪುಣ್ಯದಿಂದ ಶರಣರ ಉಚ್ಚ ತತ್ವಗಳು ಜನರಲ್ಲಿ ನಾಡಿನಲ್ಲಿ ದೇಶದಲ್ಲಿ ಪ್ರಚಾರ ಆಗುತ್ತಿರುವವು. ಇದಕ್ಕಾಗಿ ಈ ಗುರುವರ್ಗದವರು ಅವರನ್ನು ಕೂಡ ಸೇರುವದಿಲ್ಲ. ಬರೆದವರನ್ನು ಸೇರುವದಂತೂ ದೂರೇ ಉಳಿಯಿತು. ಇದಕ್ಕಾಗಿ ಹುಯ್ಯಲನ್ನೇ ಎಬ್ಬಿಸುತ್ತಿರುವರು. ಇದನ್ನೆಲ್ಲ ಹೇಳಿದವರಿಗೆ ಧರ್ಮಲಂಡರೆಂದು ಢಣಾ ಡಂಗುರವಾಗಿ ಸಾರುವರು. ಯಾಕಂದರೆ ಇನ್ನೂ ಅಜ್ಞ ಭಕ್ತರನ್ನು ತಮ್ಮ ಬೆಂಗಾವಲಿಗಾಗಿ ಇಟ್ಟುಕೊಂಡು ಕಾದುತ್ತಿರುವರು. ಭಕ್ತರು ಜಾಣರಾಗುವತನಕ ಈ ಗುರುವರ್ಗದವರು ಹೀಗೆ ಮೆರೆಯತಕ್ಕವರೇ ಸರಿ. ಆದರೆ ಹತ್ತಿಪ್ಪತ್ತು ವರ್ಷಗಳಲ್ಲಿ ಬಹಳೇ ಬದಲಾವಣೆಯಾದದ್ದು ಕಂಡು ಬರುವದು. ಶರಣರ ತತ್ವದಂತೆ ಸಂಪೂರ್ಣ ಕ್ರಾಂತಿಯಾಗುವದರಲ್ಲಿ ಸಂದೇಹವಿಲ್ಲ.

ದೇಶದಲ್ಲಿ ಎಲ್ಲ ಜಾತಿಗಳ ನಡುವೆ ನೆಲಸಿದ ಅಸ್ಪೃಶ್ಯತೆ ಎಂಬ ಕಲಂಕವನ್ನು ಜಾತೀಯತೆ ಎಂಬ ಭ್ರಾಂತಿಯನ್ನು ಸರಕಾರದವರು ಸಮಾಜದವರು ಹೊಡೆದೋಡಿಸುತ್ತ ಜಾತಿಜಾತಿಗಳ ನಡುವೆ ಸೌಹಾರ್ದ್ರವನ್ನುಂಟು ಮಾಡುತ್ತಿ

ರುವದು ಕಂಡು ಬರುವದು. ಅದರೆ ಈ ಗುರುವರ್ಗವು ಉಳಿದಭಕ್ತರೆನಿಸಿಕೊಳ್ಳು ವವರನ್ನು ಅಸ್ಪೃಶ್ಯರಂತೆ ಕಾಣುತ್ತಿರುವದು ಸಮಾಜದಲ್ಲಿ ಕಂಡುಬರುತ್ತಿರುವದು ಒಳ್ಳೇ ಶೋಚನೀಯವೇ ಸರಿ. ಪಟ್ಟದವರಿಗೆ ವಿರಕ್ತರನ್ನು ಕಂಡರೆ ಆಗುವದಿಲ್ಲ. ಪಟ್ಟ ವಿರಕ್ತರಿಗೆ ಭಕ್ತರನ್ನು ಕಂಡರೆ ಆಗುವದಿಲ್ಲ ತಾವು ಉಚ್ಚ ಕುಲದವರೆಂದು ಅಂಜದೆ ಇಂಥ ಕಾಲದಲ್ಲಿ ಹೇಳಿಕೊಳ್ಳುತ್ತಿರುವರು. ಹಿಂದುಗಳ ಎಲ್ಲ ಕುಲ ಗಳು ಹೊಳೆ ಸಮುದ್ರಗಳನ್ನು ಸೇರಿ ಮುಳುಗುತ್ತಿರುವಾಗಿ ಇವರು ಇನ್ನೂ ತಮ್ಮ ಉಚ್ಚ ಕುಲವನ್ನು ಉಳಿಸಿಕೊಳ್ಳಲು ಬಲವಾಗಿ ಹೆಣಗುತ್ತಿರುವರು. ಅದಕ್ಕಂತೆ ಪಂಚಾಚಾರ್ಯರನ್ನು ಮೆರಿಸುವದು ಕಂಡು ಉಳಿದವರು ವಿರಕ್ತ ರನ್ನು ಮೆರಿಸುವರು. ಮಂಟಪ, ಅಮರಗಣಂಗಳು, ಅರವತ್ತುಮೂರು ಪುರಾತನರ ಪೂಜೆ ಎಂದು ಐಯ್ಯಗಳನ್ನೇ ಪೂಜಿಸಿ ಮೆರಿಷುವರು. ಪ್ರತಿ ಯೊಬ್ಬರೂ ಭಕ್ತರ ಹಣವನ್ನು ಇದಕ್ಕಾಗಿಯೇ ಹಾಳು ಮಾಡುತ್ತಿರುವ ಅನೇಕ ಉದಾಹರಣೆಗಳುಂಟು. ಜಿದ್ದು, ಈರ್ಷೆ, ಮತ್ಸರಭಾವದಿಂದ ಇವುಗಳನ್ನು ಪ್ರತಿ ವರ್ಷ ಒಂದಿಲ್ಲೊಂದು ಊರುಗಳಲ್ಲಿ ಮಾಡುತ್ತಿರುವದು ಕಂಡುಬರುವದು. ಅವರು ಪೂಜಿಸಿಕೊಳ್ಳುವವರು, ಇವರು ಹಣ ಕಳಕೊಂಡು ಪೂಜೆ ಮಾಡುವವರು. ಆದರೆ ಎಷ್ಟು ಜನ ಗುರುವರ್ಗದವರು ೬೩ ಪುರಾ ಯಿತರಂತೆಯಾಗಲಿ, ೭೭೦ ಅಮರಗಣಂಗಳಂತಾಗಲಿ, ಸ್ಥಿತಿಯನ್ನು ಪಡೆದ ವರು ಇರುವರು? ಪೂಜೆ ಊಟ ಎಂದಕೂಡಲೆ ಆಗಿಂದಾಗ ಅಯ್ಯಾಚಾರ ಮಾಡಿಸಿ ಕ್ಯಾವಿ ಧಾರಣ ಮಾಡಿಕೊಂಡು ಪೂಜೆಯ ಮಂಟಪವನ್ನು ಹತ್ತು ವರು. ಆದರ ಮುನ್ನಾದಿನ ತಿರುಪೆ ಬೇಡುವ ತಿರುಕನಂತೆ ಇರುತ್ತಿದ್ದರೂ ಈ ದಿನ ಮಂಟಪದಲ್ಲಿ ಪೂಜೆಗೆ ಕೂಡುವರು. ಈ ತಿರುಕರಿಗೆ ನಾಲ್ಕು ದುಡ್ಡು ಚಹ ಚುಟ್ಟಕ್ಕೆ ರೊಕ್ಕ ಸಿಗುವದೆಂದು ಈ ಪೂಜೆಗೆ ಕೂಡ್ರುವರು. ಇದೆಲ್ಲ ಪೂಜೆ ಏನು? ಧರ್ಮದ ಅಪಹಾಸ್ಯ ಮಾಡಿದಂತೆಯಾಗುವದು. ಪರಧರ್ಮದವರು ನಗುವರು. ಗುತ್ತಿಗೆಯ ಗುರುತ್ವದ ಹಣೆಯಬರಹವೇ ಹೀಗಾಗುವದರಲ್ಲಿ ಯಾವ ಸಂದೇಹವಿಲ್ಲ.

ಗುರುವಿನ ಗುಲಾಮನಾಗುವತನಕ ದೊರೆಯದಣ್ಣ ಮುಕ್ತಿ ॥ ಗುರುವಿ ನುಪದೇಶವನಾಲಿಸಿದಾಗಳಹುದು ನರರಿಗೆ ಮುಕ್ತಿ ॥ ಬಸವಣ್ಣನು ೧೯೬೦೦೦ ಜಂಗಮರಿಗೆ ನಿತ್ಯ ದಾಸೋಹ ಮಾಡಿಸುತ್ತಿದ್ದನು. ನೀವು ಈಗ ಭಕ್ತರಾಗಿ ನಿತ್ಯ ಒಬ್ಬ, ಇಬ್ಬ, ಮೂವ, ಐವರನ್ನಾದರೂ ಉಣಿಸಬಾರದೇನು? ಐಯ್ಯ ಗಳನ್ನು ಉಣಿಸದಿದ್ದರೆ ಮಹಾಪಾಪ ಬರುವದು. ಹಿಂದಿನ ಭಕ್ತರು ಬೇಡಿ

ದಸರಿಗೆ ಬೇಡಿದ್ದನ್ನು ಜಂಗಮರಿಗೆ ಕೊಟ್ಟರು. ನೀವು ಭಕ್ತಿಹೀನರು· ಐಯ್ಯಗಳಿಗೆ ಏನೂ ಭಕ್ತಿ ಮಾಡುವದಿಲ್ಲ. ಇದರಿಂದ ನೀವು ಧರ್ಮ ಲಂಡರೂ, ಧರ್ಮಭಂಡರೂ, ಧರ್ಮಮೊಂಡರೂ ಆಗಿಹೋಗುವಿರಿ ಎಂದು ಅನ್ನುವರು. ಆದರೆ ಹೀಗೆ ಅನ್ನುವ ಗುರುಗಳು ಅನೀತಿ ಅಧರ್ಮದ ನೆಲೆ ಬೀಡಾಗಿರುವದು ಕಂಡುಬರುವದು. ಸದಾ ತಾವೇ ಹೆಚ್ಚಿನವರು. ಐಯ್ಯಗಳು ಭೂಲೋಕದ ರುದ್ರರು ಅವರ ಶೀಲವನ್ನು ಹೊಳೆಯು ಉಗಮವನ್ನು ಎಂದೂ ಕೇಳಬಾರದು. ಅವರು ಏನು ಮಾಡಿದರೂ ಅವರಿಗೆ ಅದರ ಪಾಪ ಲೇಶವೇ ಹತ್ತುವದಿಲ್ಲ. ಯಾಕಂದರೆ ಹುಟ್ಟುವಾಗಲೇ ಹೆಚ್ಚಿನ ಕುಲದವರಾಗಿ ಜನಿಸಿರುವರು. ಹೆಚ್ಚಿನ ಕುಲದವರು ಮನಬಂದಂತೆ ಬೇಕುಬೇಕಾದುದನ್ನು ಮಾಡಿದರೆ ಯಾವ ದೋಷವೇ ಇಲ್ಲೆಂದು ಢಣಾಡಂಗುರವಾಗಿ ಸಾರಿಸಾರಿ ಹೇಳುವರು. ಇದರಿಂದ ಅಜ್ಞ ಭಕ್ತರು ಮುಗ್ಧರಾಗಿ ಯಾವ ಪ್ರಶ್ನೆ, ಸಂಶಯ ತಕ್ಕೊಳ್ಳದೆ ಮೋಸಹೋಗುತ್ತಿರುವರು. ಐಯ್ಯಗಳ ವಿಪರೀತ ಆಚರಣೆಯಿಂದ ನಡೆಯಹತ್ತಲು ಉಳಿದ ಭಕ್ತರೂ ಅವರ ಹಾದಿಯನ್ನೇ ತುಳಿಯಹತ್ತುವರು. "ಗುರುಗಳು ನಿಂತು.........ಹೊಯ್ದರೆ ಶಿಷ್ಯರು ಓಡಾಡಿ.........ಹೊಯ್ಯುವರು." ಎಂಬ ಗಾದೆಯಂತೆ ಇದರ ಗತಿಯಾಗುವದು. ಶಿಷ್ಯರು ಭಕ್ತರು ತಮ್ಮ ಗುರುವಿನಲ್ಲಿ ಅವಶ್ಯ ಯೋಗ್ಯತೆಯನ್ನು ನೋಡಲೇಬೇಕು. ಅಂದರೇನೇ ಭಕ್ತರಾಗಲಿ ಶಿಷ್ಯರಾಗಲಿ ತಕ್ಕ ಸಾಧನೆಗಳಿಂದ ಹಿಂದುಗಡೆ ಗುರುಗಳಾಗುವರು. ಸೊಸೆ ಇದ್ದಾಕಿ ಹಿಂದಿನಿಂದ ಅತ್ತೆಯಾಗುವಂತೆ ಮಗಳು ತಾಯಿಯಾಗುವಂತೆ ಹುಡುಗನು ತಂದೆಯಾಗುವಂತೆ ಶಿಷ್ಯ ಅಥವಾ ಭಕ್ತ ಗುರುವೇ ಆಗಿಬಿಡುವನು. ಇದು ಪರಮಾತ್ಮನು ವಿಧಿಸಿದ ನಿಯಮವೇ ಆಗಿರುವದು. ಆದರೆ ಈಗ ಗುರುತ್ವದ ಗುತ್ತಿಗೆದಾರರು ಅನ್ಯರಾರಿಗೂ ಗುರುಗಳಾಗಲಿಕ್ಕೆ ಬರುವದಿಲ್ಲೆಂದು ಹೇಳುವರು. ತಾವೇ ಜನಿಸುವಾಗ ಶಿವನಿಂದ ಗುರುತ್ವದ ಸನದನ್ನು ತಕ್ಕೊಂಡೇ ಬಂದಿರುವರು! ಈ ಹೀನ ಪದ್ಧತಿಯು ಹೋಗದಹೊರತು ಸಮಾಜಕ್ಕೆ ನಾಡಿಗೆ ದೇಶಕ್ಕೆ ಕ್ಷೇಮವಿಲ್ಲ. ಸುಖವಿಲ್ಲ, ಶಾಂತಿ ಇಲ್ಲ. ಈ ಆಂತರಿಕ ಜಾತಿ-ಭೇದಗಳು ಅವಶ್ಯ ಹೋಗಲೇಬೇಕು. ಇದು ಹೋಗದಿದ್ದರೆ ಹುತ್ತಿನಲ್ಲಿ ಹಾವನ್ನು ಇಟ್ಟು ಹುತ್ತನ್ನು ಬಡಿದಂತಾಗುವದು. ಇಂದಿಲ್ಲ, ನಾಳೆಯಾದರೂ ಅದು ಕಚ್ಚದೆ ಬಿಡುವದಿಲ್ಲ. ಹೀಗಾದರೆ ಸಮಾಜ ಸುಧಾರಣೆಯು ಎಂದೂ ಶಕ್ಯವಿಲ್ಲ. ಈ ಜಾತಿ ಪದ್ಧತಿ ಹೋಗಿ ಎಲ್ಲರೂ ಸಮಾನಸ್ಕಂದರು. ಆದರೆ ಯೋಗ್ಯ

ಸಾಧನೆ ಮಾಡಿ ತ್ಯಾಗ ವೈರಾಗ್ಯ ಬ್ರಹ್ಮಚರ್ಯ ಪಾಲನೆ ಸೇವೆ ಮೊದಲಾದ ಸದ್ಗುಣಗಳಿಂದ ಹೆಚ್ಚಿನವನು ಪೂಜ್ಯನು ಗುರುಗಳು ಎಂದು ಭಾವಿಸಿ ನಡೆಯಬೇಕು. ಆಗ ಮಾತ್ರ ದೇಶಕ್ಕೆ ಕಲ್ಯಾಣವಾಗುವದು.

" ಶಿವಯೋಗಿಗಳೇ ಆದ ಲಿಂಗನಂತರಲ್ಲಿ ಜಾತಿ ಬೇಧವಿಲ್ಲ. ನೋಟ ಹಾಗೂ ಮುಟ್ಟುವಿಕೆಗಳ ದೋಷವಿಲ್ಲ. ಅವರೆಲ್ಲ ಶಿವಶಕ್ತಿಯರ ರೂಪರೇ ಆಗಿದ್ದಾರೆ. (ಪರಮೇಶ್ವರಾಗಮ) ಲಿಂಗಧಾರಿಗಳಲ್ಲಿ ಬೇಧವಿಲ್ಲದ್ದರಿಂದ ಅವರು ಒಬ್ಬರನ್ನೊಬ್ಬರು ಕಂಡಕೂಡಲೇ ಎದ್ದುನಿಂತು ನಮಸ್ಕರಿಸಬೇಕು. (ಪರಮೇಶ್ವರಾಗಮ) ಶಿವಭಕ್ತರಲ್ಲಿ (ವೀರಶೈವರಲ್ಲಿ)ಪರಸ್ಪರ ಜಾತಿಬೇಧವಿಲ್ಲ. (ಸಿದ್ಧಾಂತ ಶಿಖಾಮಣಿ) ಶಿವಯೋಗಿಗಳಾದ ಲಿಂಗಾಂಗಿಗಳು ಸಹೋದರರು ಜಾತಿ ವರ್ಣ ಆಶ್ರಮ ಪುರುಷ ಸ್ತ್ರೀ ಇತ್ಯಾದಿ ಯಾವ ಬೇಧಗಳೂ ಇಲ್ಲ ಇವೆಲ್ಲವನ್ನು ಮೀರಿದ್ದೇ ವೀರಶೈವ ಧರ್ಮವು (ಪರಮೇಶ್ವರಾಗಮ) ಲಿಂಗ ಜಂಗಮ ಭಕ್ತ ಎಂದು ಮೂರಾಗುವದು. ಒಂದೇ ವಸ್ತು ನೋಡಾ (ಸಿದ್ಧೇಶ್ವರ ವಚನ) ಶಿವಭಕ್ತನ ಅಂಗಣದಲ್ಲಿ ೬೮ ಕೋಟಿ ಕ್ಷೇತ್ರಂಗಳಿಪ್ಪವು ಆತನ ಬಚ್ಚಲಲ್ಲಿ ೬೬ ಕೋಟಿ ತೀರ್ಥಂಗಳಿಪ್ಪವು ಆತನ ಕಾಯವೇ ಕೈಲಾಸ. ಆತನಂಗದ ಮೇಲಿರ್ಪ ಲಿಂಗವೇ ಅನಾದಿ ಪರಶಿವನು (ಅಖಂಡೇಶ್ವರ ವಚನ) ಶಿವಶರಣರೇ ಬಂಧು ಬಳಗವಲ್ಲದೆ ಮತ್ತೆ ಬಳಗವಿಲ್ಲವಯ್ಯಾ ಎನಗೆ. ಶಿವಕುಲವೇ ಮಹಾಕುಲವಲ್ಲದೆ ಮತ್ತೆ ಕುಲವಿಲ್ಲ ಎನಗೆ (ಅಖಂಡೇಶ್ವರ) ನೆರೆ ಭವಿ ಭಕ್ತರೆಂದಿವೆರಡೇಕುಲ ಬೇರೆ ಕುಲಂಗಳಿಲ್ಲ (ಗುರು ಶಂಕರ ಶತಕ) ಲಿಂಗದೇವನ ಪೂಜಿಸಿ ಕುಲವನರಸುವರೇ ? ಲಿಂಗ ಮುಟ್ಟಿಲೊಡನೆ ಶಿವಕುಲವಹುದು ತಪ್ಪದು. ಶಿವಭಕ್ತನೇ ಕುಲಜ ಶಿವಭಕ್ತರನ್ನೆಲ್ಲ ಒಂದೇ ಎಂಬೆ ಭಕ್ತರಲ್ಲಿ ಕುಲವನರಿಸಿದಡೆ ನಿಮ್ಮ ರಾಣಿ ವಾಸದಾಣೆ ಶಿವಲಿಂಗವಿದ್ದವನೇ ಕುಲಜನು. ಕೂಡಲ ಸಂಗನ ಶರಣರೇ ಕುಲಜರು. ಶ್ವಪಚನಾದರೇನು ಲಿಂಗವಿದ್ದವನೆ ಕುಲಜ. ಕೂಡಲ ಸಂಗಯ್ಯನಿದ್ದವನೇ ಕುಲಜನು. ಹೊಲೆಯ ಹೊಲಬಿಗನಾದಡೆ ಅವನ ಹೊರೆಯಲ್ಲಿ ಇಪ್ಪುದು. (ಬಸವಣ್ಣ) ' ತನು ಶುದ್ಧವಾಯಿತ್ತು ಭಕ್ತ ಪ್ರಸಾದವಕೊಂಡು " (ಸಿದ್ಧೇಶ್ವರ ಪುರಾಣ) ಭಕ್ತನ ದೇಹವೇ ಶಿವನ ದೇಹ ಭಕ್ತನ ಆತ್ಮವೇ ಸದಾಶಿವನು. ಭಕ್ತನ ಸಂತೃಪ್ತಿಯಿಂದಲೇ ಶಿವನ ಸಂತುಷ್ಟಿಯು (ಭಕ್ತ ಶತಕ) ಭಕ್ತನು ಉಂಡು ಸಂತುಷ್ಟನಾದರೆ ಲಿಂಗವು (ಪರಮಾತ್ಮನು) ಸಂತುಷ್ಟನಾಗುವನು. ಈ ಮೇಲಿನ ಮಹಾವಾಕ್ಯಗಳ ಅರ್ಥವನ್ನು ಎಲ್ಲರೂ ಅನುಲಕ್ಷಿಸಿ ನೋಡಿದರೆ ವೀರಶೈವರಲ್ಲಿ ಜಾತಿಗಳಿಲ್ಲ, ಎಲ್ಲರೂ

ಸರಿಸಮಾನರು. ಎಂದೂ ತಿಳಿದರೂ ಹೇಳುತ್ತಿದ್ದರೂ ಕೇಳುತ್ತಿದ್ದರೂ ಯಾರೂ ಜಾತಿಯನ್ನೇ ಬಿಟ್ಟಿಲ್ಲ. ಅದರಲ್ಲಿ ಈ ಐಯ್ಯಗಳ ಜಾತಿಯಂಥ ಶ್ರೇಷ್ಠ ಜಾತಿ ಇಲ್ಲೆಂದು ಬಹು ಜನರೂ ಬಗೆದಿರುವರು. ಭಕ್ತರೇ ತಾವಾಗಿ ಅವರನ್ನು ಯಾವ ಯೋಗ್ಯತೆ ಇರದಿದ್ದರೂ ಮೇಲೆ ಮೇಲೆ ಒಯ್ದು ಶ್ರೇಷ್ಠ ಜಾತಿಯ ವರೆಂದು ಹೇಳಿದರೆ ಅವರೇಕೆ ಅದಕ್ಕೆ ತಕರಾರು ಮಾಡಿಯಾರು? " ನಮ್ಮಲ್ಲಿ ನೀತಿ ಇಲ್ಲ, ಜ್ಞಾನವಿಲ್ಲ, ತ್ಯಾಗವಿಲ್ಲ, ನಾವು ಯೋಗ್ಯ ಗುರುಗಳಲ್ಲ ನಮ್ಮನ್ನೇಕೆ ಪೂಜಿಸಿ, ಉಣಿಸಿ, ದಕ್ಷಿಣೆ ಕೊಟ್ಟು ಕಾಲ ಬೀಳುವಿರಿ ಬೇಡೆಂದು ಅವರೇಕೆ ಹೇಳಿಯಾರು ? ಪುಕ್ಕಟ್ಟೆ ಹೊಟ್ಟೆ ಹೊರಕೊಳ್ಳುವದು ಬಂದಾಗು ವದಲ್ಲವೇ ? ಅಂಥ ನಿಸ್ಪೃಹ ಪ್ರಾಮಾಣಿಕ ನಿಷ್ಕಪಟ ಸರಳ ಹೃದಯದ ಐಯ್ಯಗಳು ಸಿಗಬಹುದೇನು ? ಅವರೇ ಆಗ ಗುರುಗಳಾಗಲಿಕ್ಕೆ ಯೋಗ್ಯರಾ ಗುವರು. ಹೀಗಾದರೆ ಜಾತ್ಯಾತೀತ-ರಾಷ್ಟ್ರವಾಗುವದು ಎಷ್ಟು ದೂರ ಉಳ ದಿದೆ ನೋಡಿಕೊಳ್ಳಿರಿ. ಈ ಒಂದೇ ಜಾತಿಯಲ್ಲಿ ಅನೇಕ ಜಾತಿಗಳು ಅವ ರಲ್ಲಿ ನಾಹೆಚ್ಚು ನೀಹೆಚ್ಚು ಎಲ್ಲರಲ್ಲಿ ಐಯ್ಯಗಳು ಹೆಚ್ಚು. ಐಯ್ಯಗಳಲ್ಲಿ ಮಠಪತಿಗಳಿಗಿಂತ ಮಠದವರು ಹಿರೇಮಠದವರು ಹೆಚ್ಚು. ಹಿರೇಮಠದವರಿ ಗಿಂತ ಜಂಗಿನಮಠ ಗವಿಮಠ ವಿರಕ್ತಮಠ ಹೀಗೆ ಅನೇಕ ಮಠಗಳವರು ಹೆಚ್ಚು ಹೆಚ್ಚೆಂದು ಬಡಿದಾಡುವರು. ಮತ್ತೆ ವಿರಕ್ತರಗಿಂತ ಪಟ್ಟ ಹೆಚ್ಚಿನ ಜಾತಿಯವರಂತೆ. ಪಟ್ಟದವರಿಗಿಂತ ಸಿಂಹಾಸನಾಧೀಶರಾದ ಪಂಚ-ಪೀಠದವರು ಹೆಚ್ಚಂತೆ. ಏನಿದು ವೀರಶೈವರಲ್ಲಿಯು ಜಾತಿಯ ಗೊಂದಲ? ಅಳತೆ ಇಲ್ಲ, ಮಾಪು ಇಲ್ಲ, ಇದೆಲ್ಲ ಐಯ್ಯಗಳು ಹೊಟ್ಟೆಗಾಗಿ ಹೂಡಿದ ಚಕ್ಕಂದದ ಆಟವೆಂದೇ ಅನಿಸುವದು. ಐಯ್ಯಗಳ ಜಾತಿಯನ್ನು ತೊಡೆದುಹಾಕಿ ಸಕಲರೂ ಸಮಾನಸ್ಕಂದರು. ಯೋಗ್ಯತೆ ಇದ್ದವರು ಗುರುವರ್ಗಕ್ಕೆ ಏರುವರು ಎಂದು ಶರಣರ ತತ್ವ ಪ್ರಚಾರ ಮಾಡಿದರೆ ಉಳಿದ ಕೆಳದರ್ಜೆಯ ಎಲ್ಲ ಜಾತಿಗಳು ತಾವಾಗಿಯೇ ಕರಗಿ ಹೋಗುವವು. ಈ ಪ್ರಕಾರ ಕೆಲವು ನಿಸ್ಪೃಹ ಐಯ್ಯ ಗಳುಂಟು. ಅವರು ಸದಾ ಸತ್ಯವನ್ನೇ ನಿರಭಿಮಾನದಿಂದ ಹೇಳುತ್ತಿರುವರು. ಅವರನ್ನೂ ಕೂಡ ಈ ದುರಭಿಮಾನಿಗಳಾದ ಐಯ್ಯಗಳು ತಿರಸ್ಕರಿಸುವರು ಬಹಿಷ್ಕಾರ ಸಹ ಇಡಲು ಹೆಣಗುವರು. ಇದು ಬಹು ಶೋಚನೀಯವೇ ಸರಿ. ಈಗಿನ ೨೦ ನೇ ಶತಮಾನದಲ್ಲಿ ಎಲ್ಲರಿಗೂ ಬುದ್ಧಿ ಬರಹತ್ತಿದೆ. ವಿಚಾರ ಶಕ್ತಿ ಬೆಳೆಯಹತ್ತಿದೆ. ಅದಕ್ಕೆ ಯೋಗ್ಯರಿದ್ದ ಬೇಕಾದ ಗುರುಗಳಿಗೆ ಮಾತ್ರ ಇನ್ನು ಮಾನಮನ್ನಣೆ ಸಿಗುವದೆಂದು ಧಾರಳವಾಗಿ ಹೇಳಬಹುದು.

ಈಗಿನ ಐಯ್ಯಗಳಿಗೆ ತ್ಯಾಗ ವೈರಾಗ್ಯ ಮೊದಲಾದ ಯೋಗ್ಯ ಸಾಧನ ಮಾಡಬೇಕೆಂದು ಅವಶ್ಯಕತೆ ಅಡಚಣಿ ಅನಿಸಲಾರದಕ್ಕೆ ಅವರು ಸಾಧನೆ ಮಾಡುವದಿಲ್ಲ. ವೈಮರೆತು ಸಂಸಾರಿಕರಿಗಿಂತ ಹೀನ ಕೃತ್ಯಗಳನ್ನೇ ಮಾಡಿ ಗುರುಗಳಾಗಬೇಕೆನ್ನುವರು. ಅವರು ಹೇಗೆ ಬೇಕಾದಂತೆ ಇದ್ದರೂ ಕೂಡ ಭಕ್ತರು ಅವರಿಗೆ ಯಾವ ಪ್ರಶ್ನೆ ಕೇಳುವದಿಲ್ಲ ಯಾವ ತಕರಾರು ಮಾಡುವದಿಲ್ಲ. ಬೇಕಾದಂತೆ ಇದ್ದರೂ ಅವರ ಪಾದಗಳ ಮೇಲೆ ಸಾಮುಧೂಮು ಅಡ್ಡ ಬೀಳುವರು. ಷೋಡಶೋಪಚಾರಗಳಿಂದ ಅವರನ್ನು ಪೂಜಿಸುವರು. ಮೃಷ್ಟಾನ್ನ ಭೋಜನ ಮಾಡಿಸುವರು. ದಕ್ಷಿಣ ಕೊಡುವರು. ದೇವವಾಣಿ ಆಕಾಶವಾಣಿ ಎಂದು ತಿಳಿದು ಬಾಯಿತೆರೆದು ಕಿವಿತೆರೆದು ಆವರ ಹೇಸಿ ನುಡಿಗಳನ್ನು ಕೈಜೋಡಿಸಿಕೊಂಡು ಕೇಳುವರು. ಮತ್ತು ಅವುಗಳನ್ನು ಶಿರಸಾವಹಿಸಿ ಪಾಲಿಸುವರು. ಅವರ ಪಾದ ತೊಳೆದು ಧೂಳಪಾದವೆಂದು ದೇವರಿಗೂ, ಮನೆಗೂ, ಆಡುಗೆಗೂ ಸಿಂಪಡಿಸುವರು. ಅವರು ಬರಲಿಕ್ಕೆ ಒಲ್ಲಿಂದರೂ ಭಕ್ತರು ಇವುಗಳಿಗಾಗಿ ಆಗ್ರಹ, ಜುಲುಮೆಗಳನ್ನು ಮಾಡಿ ಮೇಲಿನ ಕೆಲಸಗಳನ್ನು ತೀರಿಸುವರು. ಇಷ್ಟು ಈಗ ಗುರುವರ್ಗದವರು ಭಕ್ತರಲ್ಲಿ ಬೇರನ್ನು ಬಿಟ್ಟಿದ್ದಾರೆ. ಇವುಗಳನ್ನು ಕತ್ತರಿಸುವದು ಅದಕ್ಕಾಗಿಯೇ ಬಲ್ಲವರಿಗೆ ಬಹು ಕಠಿಣವಾಗಿದೆ. ಸಾವಧಾನವಾಗಿಯಾದರೂ ಇವು ತಾವಾಗಿಯೇ ಕತ್ತರಿಸುತ್ತ ಸಾಗುವವು. ಅದರ ಕಾಲವು ಸಮೀಪಿಸಹತ್ತಿರುವದು. ಈಗ ಶಿಕ್ಷಣವು ಹೆಚ್ಚಾಗಿ ಬೆಳೆಯುಹತ್ತಿದೆ. ಅದು ಬೆಳೆಬೆಳೆದಂತೆ ಧಾರ್ಮಿಕ ಈ ಮೂಢನಂಬಿಗೆಯು ತಾನಾಗಿಯೇ ಹಾರಿಹೋಗುವದು. ಆಗ ಈ ಗುರುವರ್ಗದವರು ಗಡಬಡಿಸಹತ್ತುವರು. ಆಗ ಮಾತ್ರ ಇವರು ಯೋಗ್ಯಸಾಧನ ಮಾಡಬೇಕು. ಭಕ್ತಿಜ್ಞಾನ ತ್ಯಾಗ ವೈರಾಗ್ಯ ಸೇವೆ ಬ್ರಹ್ಮಚರ್ಯ ಪಾಲನೆ ಶಿಕ್ಷಣ ಮೊದಲಾದ ಗುರುಗಳಾಗುವ ರೀತಿ ನೀತಿಗಳನ್ನು ಕಲಿಯಬೇಕೆಂದು ಅವರಲ್ಲಿ ಹುಟ್ಟುವದು. ಗುರುತ್ವದ ಗುತ್ತಿಗೆ ಇರುವತನಕ ಇವರು ಇಂಥ ಸಾಧನೆಯ ಕಡೆಗೆ ಲಕ್ಷಹಾಕುವದೇ ಇಲ್ಲ.

ಬದಾಮಿ, ಬಾಳಿಹಳ್ಳಿ, ಕಾಶಿ, ಉಜ್ಜನಿ ಮೊದಲಾದ ಕಡೆಗಳಲ್ಲಿ ಬರೇ ವೈದಿಕ ವಿದ್ಯೆಯನ್ನೂ ಸಂಸ್ಕೃತವನ್ನೂ ಶೈವಪದ್ಧತಿಗಳನ್ನೂ ಬರೇ ಗುರುವರ್ಗವೆನಿಸಿದ ಐಯ್ಯಗಳ ಮಕ್ಕಳಿಗೆ ಕಲಿಸುವರು ಇದರಿಂದ ತಾವೇ ಹೆಚ್ಚಿನ ಜಾತಿಯವರೆಂದು ಅತೀವ ದುರಭಿಮಾನ ಇವರಲ್ಲಿ ಉಂಟಾಗಿ ಅಹಂಭಾವದಿಂದ ಮೆರೆಯುವರು. ಉಳಿದವರಿಗೆ ಭಕ್ತವರ್ಗಕ್ಕೆ ಈ ವಿದ್ಯ ಕಲಿಸಬಾರ

ದೆಂದು ಅದು ಅವರ ಕೆಲಸವಲ್ಲೆಂದು ಹೇಳುವರು. ಒಕ್ಕಲತನ, ವ್ಯಾಪಾರ, ನೌಕರಿಗಳೇ ಅವರ ಕೆಲಸಗಳೆಂದು ಧಾರಳವಾಗಿ ತಿಳಿಸುವರು. ಈ ಶಿಕ್ಷಣ ಕೇಂದ್ರಗಳಲ್ಲಿ ವೀರಶೈವ ಪದ್ಧತಿಗಳನ್ನು ಕಲಿಸುವದು ಕಡಿಮೆ. ಅಲ್ಲಿ ಶಿವಶರಣರ ನೀತಿ, ರೀತಿ, ಧರ್ಮ, ವಚನ ಸಾಹಿತ್ಯ ಸಮಾನತೆ ಜಾತೀಯತೆಗಳನ್ನು ಕಲಿಸುವದೇ ಇಲ್ಲ. ಹೀಗೆ ಕಲಿತ ಇವರು ಭಕ್ತರ ಮೇಲೆ ಗುರುಗಳಾಗಿ ಬಂದು ಬರೇ ಊಟ ಪೂಜೆಗಳು ಮಾತ್ರ ತಮ್ಮ ಕಾಯಕವೆಂದು ಬಗೆದು ಸಕಲಕಡೆಗೆ ಸಕಲ ರೀತಿಯಿಂದ ಮೇಯ್ದು ಪುಷ್ಟರಾಗಿ ತಿರುಗುವರು. ಗುರುವಾದರೂ ಕಾಯಕದಿಂದ ಮುಕ್ತ, ಜಂಗಮವಾದರೂ ಕಾಯಕದಿಂದ ಮುಕ್ತ. ಅನ್ಯರ ಬಾಗಿಲಿಗೆ ಹೋಗಿ ಬೇಡಿಕೊಳ್ಳುವವ ಗುರುವಲ್ಲ ಜಂಗಮನಲ್ಲ ಎಂದು ಶಿವಶರಣರು ವಿಧಿಸಿದ ರೀತಿಯನ್ನು ಯಾರಾದರೂ ಹೇಳಿದರೆ ಅದನ್ನು ತಿರಸ್ಕರಿಸುವರು. ಅದನ್ನು ಬರೆದವರ ಗತಿಯನ್ನು ವಿಚಾರಿಸಿರಿ. ಇಷ್ಟೆಲ್ಲ ಬರೆಯುವದು, ಹೇಳುವದು, ಕೇಳುವದು, ತಿಳಿಸುವದು ಈ ಐಯ್ಯಗಳು ನಿಜವಾಗಿ ಯೋಗ್ಯ ಸಾಧನೆಗಳನ್ನು ಮಾಡಿ ಯೋಗ್ಯತೆಯುಳ್ಳವರಾಗಬೇಕೆಂದೇ ಬಯಸಿದ ಹೊರತು ಅವರನ್ನು ತಿರಸ್ಕರಿಸಿ ಅವರ ಪಟ್ಟ ಅಧಿಕಾರ ಗುರುಸ್ಥಾನವನ್ನು ಕಸಿದುಕೊಳ್ಳಲಿಕ್ಕೆ ಅಲ್ಲ. ಅವರು ಸುಧಾರಿಸಿ ಯೋಗ್ಯಸ್ಥಿತಿಯ ಗುರುಗಳಾದರೆ ನಾಡಿಗೆ ಧರ್ಮಕ್ಕೆ ಅತೀವ ಭೂಷಣಪ್ರದವಾಗುವದರಲ್ಲಿ ಸಂದೇಹವಿಲ್ಲ. ಇದಕ್ಕೆ ಯಾರೂ ಸಿಟ್ಟಾಗುವ ಕಾರಣವಿಲ್ಲ.

ಭಕ್ತವರ್ಗದವರು ಮೊದಲು ಯೋಗ್ಯಸಾಧನೆ ತ್ಯಾಗ ಮೊದಲಾದವುಗಳನ್ನು ಮಾಡಿ ಸಿದ್ಧಿಯ ಸ್ಥಿತಿಯನ್ನು ಪಡೆದು ಜ್ಞಾನಿಗಳಾಗಿ- ಜನರ ಮೇಲೆ ಛಾಪ ವಜನುಹಾಕಿ ಅವರನ್ನು ಭಯಭಕ್ತಿಯಿಂದ ಬಾಗುವಂತೆ ಮಾಡಿ ದೊಡ್ಡ ದೊಡ್ಡ ಮಠಗಳನ್ನು ಕಟ್ಟಿಸಿಕೊಂಡು, ಅವುಗಳನ್ನು ಭರಭರಾಟಿಯಿಂದ ನಡಿಸಿಕೊಂಡು ತಾವಿರುವತನಕ ಹೋಗುವರು. ಅಲ್ಲದೆ ಅನೇಕ ಆಸ್ತಿಪಾಸ್ತಿಗಳನ್ನೂ ಸಹ ಆ ಮಠಕ್ಕೆ ಭಕ್ತರಿಂದ ಮಾಡಿಸಿಕೊಂಡು ಬಾಳುವರು. ಅವರು ಸತ್ತಮೇಲೆ ಅಥವಾ ಸಾಯುವಾಗ ಆ ಮಠಕ್ಕೆ ತಾವೇ ಸ್ವತಃ ತಮ್ಮ ಬಲದಿಂದ ಶಿಷ್ಯರನ್ನು ತಯಾರಿಸಿ ಅಧಿಕಾರಿಗಳನ್ನಾಗಿ ಮಾಡದೆಹೋಗಿ ಬಿಡುವರು. ಅಥವಾ ಗುರುವರ್ಗಕ್ಕೆ (ಅಯ್ಯಗಳಿಗೆ) ದಾನಮಾಡಬೇಕೆಂಬ ಭಾವನೆಯಿಂದ ಅವರಿಗೆ ಕೊಟ್ಟುಬಿಡುವರು, ಅಥವಾ ಆ ಮಠದವನು ಸಾಯುವದು ಸಮೀಪಿಸಿದ ಕೂಡಲೆ, ಮುಪ್ಪಾದರೆ ತೀರಿತು, ಆ ಹೊತ್ತನ್ನೇ ಸಾಧಿಸಿ ಐಯ್ಯಗಳು ಆ ಮಠಗಳಲ್ಲಿ ದೀನನಂತೆ ಪ್ರವೇಶಿಸಿ ಹಿಂದಿನಿಂದ ಅದನ್ನೆಲ್ಲವನ್ನು ತನ್ನದ

ನ್ನಾಗಿಯೇ ಮಾಡಿಕೊಳ್ಳುವರು. ಜನರಿಗೆ ಯಾರಾದರೂ ಬಂದು ಮಠ ನಡಿಸಿದರೆ ಸಾಕೆಂದು ಅವರೂ ಕೂಡ ಕಿವಿ ಜೋತುಬಿಡುವರು. ಹೀಗಾಗಿ ಬಹುತರ ಅನೇಕ ಭಕ್ತವರ್ಗದವರಿಂದ ಸ್ಥಾಪಿಸಿದ ಮಠಗಳನ್ನೆಲ್ಲ ಐಯ್ಯಗಳೇ ಆಕ್ರಮಿಸಿಕೊಂಡಿರುವರು. ಇಲ್ಲವೆ ಮೇಲೆ ಹೇಳಿದ ಶಿಕ್ಷಣ ಕೇಂದ್ರಗಳಲ್ಲಿ ಶಿಕ್ಷಣಪಡೆದವರನ್ನು ತಂದು ಅಧಿಕಾರಿಗಳನ್ನಾಗಿ ಮಾಡುವರು. ಹೀಗಾಗಿ ಮೊದಲಿನ ಮಠದ ಮಹತ್ವ ಹೋಗುವದು. ಅನೇಕ ಸನ್ಯಾಸಿ ಮಠಗಳು ಕೂಡ ಸಂಸಾರಿಮಠಗಳಾಗಿ ಮಾರ್ಪಟ್ಟ ಕಥೆಗಳುಂಟು. ಯೋಗ್ಯಸಾಧನೆಯವರು ಸಿಗಲಾರದ್ದಕ್ಕಾಗಿ ಹೀಗೆ ಆಗುತ್ತಿರುವದು. ಹೀಗಾಗಿ ಬರಬರುತ್ತ ಆ ಮಠಗಳು ತ್ಯಾಗ ತಪವಿಲ್ಲದಕ್ಕಾಗಿ ಹಾಳಾಗಿ ಬೀಳಲಾಗುತ್ತಿರುವದು ಕಂಡು ಬಂದಿದೆ. ಇದೆಲ್ಲ ಗುತ್ತಿಗೆಯ ಗುರುತ್ವದ ಗೋಳಾಟ ಗುದುಮುರಿಗೆಯೇ ಹೊರತು ಬೇರೆ ಕಾರಣವಿಲ್ಲ. ಮೀನಕ್ಕೆ ಬಕಪಕ್ಷಿಯು ಕಾದುಕೊಂಡು ಗೂಡ್ರುವಂತೆ ಐಯ್ಯಗಳು ಯಾವ ಮಠವನ್ನು ಹೇಗೆ ಉಡಿಯಲ್ಲಿ ಹಾಕಿಕೊಳ್ಳಬೇಕೆಂಬ ಹೊಂಚಿನಲ್ಲಿ ಕೂಡ್ರುವರು. ಅದನ್ನು ಬಹುತರ ಸಾಧಿಸುವರು. ಯಾಕಂದರೆ ಭಕ್ತರು ಇನ್ನೂ ತಮ್ಮ ಸ್ಥಾನಮಾನ ಯೋಗ್ಯತೆಗಳನ್ನು ಅರಿತಿಲ್ಲ ತ್ಯಾಗ ವೈರಾಗ್ಯಕ್ಕೆ ಅವರು ಮಾನಕೊಟ್ಟಿಲ್ಲ. ಹೀಗಂತೇ ಅವರು ಸಿಕ್ಕ ಅಸೀತಿಯರನ್ನು ಪೂಜಿಸಲಿಕ್ಕೆ ಸಿದ್ಧರಿರುವರು. ಈ ಪದ್ಧತಿಯು ಸುಧಾರಿಸಿದ ಹೊರತು ನಾಡು ಧರ್ಮಗಳಲ್ಲಿ ಜಾಗ್ರತಿಯಾಗುವದು ಶಕ್ಯವಿಲ್ಲ. ಭಕ್ತರನ್ನು ಪಾರತಂತ್ರ್ಯದಲ್ಲಿ ಇರಿಸಬೇಕೆನ್ನುವ ಗುರುವರ್ಗವು ದೇವರನ್ನು ಶರಣರನ್ನು ಧರ್ಮವನ್ನು ವಂಚಿಸುತ್ತಿರುವರೆಂದೇ ಹೇಳಬೇಕು. ಧಾರ್ಮಿಕ ಸ್ವಾತಂತ್ರ್ಯ ನುಡಿಯ ಸ್ವಾತಂತ್ರ್ಯಗಳು ಎಲ್ಲರಿಗಿದ್ದರೂ ಭಕ್ತರಿಗೆ ಗುರುಗಳು ಕೊಟ್ಟಿಲ್ಲ. ಯಾಕಂದರೆ ತಮ್ಮ ಪುಕ್ಕಟ ಗುರುತ್ವವನ್ನು ಭಕ್ತರು ಕಸಿದುಕೊಂಡಾರೆಂದು ಅಂಜಿದ್ದಾರೆ. ಯಾರಾದರೂ ಭಕ್ತರು ಯೋಗ್ಯಸಾಧನೆ ತ್ಯಾಗಗಳಿಂದ ಗುರುತ್ವ ಪಡೆದರೆ, ಅವರನ್ನು ಗುರುವರ್ಗದವರು ಸೇರುವದಿಲ್ಲ. ಅಲ್ಲದೆ ಭಕ್ತರಿಗೂ ಅವರ ಬಗ್ಗೆ ಕುತ್ಸಿತ ಸಂಗತಿಗಳನ್ನು ತಿಳಿಸಿ ಅವರ ವಿರುದ್ಧ ಹೋರಾಡುವಂತೆ ಯತ್ನಿಸುವರು. ಇದು ಭಕ್ತಗುರುತ್ವದ ಗತಿಯಾಗಿರುವದು. ಹೀಗಾದರೆ ಧರ್ಮಜಾಗ್ರತೆ ಹೇಗಾಗಬೇಕು? ಮಾನವ ಕುಟುಂಬಕ್ಕೆ ಮೋಕ್ಷಪಡೆಯಲು ಬರುವದೆಂದು ಹೇಳುವದರ ಇಂಗಿತವಾದರೂ ಏನು?

ಈಗೀಗ ಕೆಲವು ಸುಧಾರಕರು ಈ ಮೇಲಿನ ತಂಟೆಗಳನ್ನು ಎತ್ತಿ ತೋರಿಸುವ ಸಂಘ ಸಂಸ್ಥೆಗಳಾಗಿರುವವು. ಗದುಗಿನಲ್ಲಿ ಶರಣ ಸೇವಕ ಸಂಘ

ಹಾಗು ಶ್ರೀ ಶಿವಾನಂದ ಮಠ, ಧಾರವಾಡದಲ್ಲಿ ನವಕಲ್ಯಾಣ ಮಠ, ಹುಬ್ಬಳ್ಳಿಯಲ್ಲಿ ಸಿದ್ಧಾರೂಢರ ಮಠ ಮೊದಲಾದವುಗಳಲ್ಲಿ ಶರಣರ ತತ್ವಗಳನ್ನೇ ಹೆಚ್ಚಾಗಿ ಪ್ರಚಾರ ಮಾಡುತ್ತಿರುವರು. ಅಲ್ಲದೆ ಗುರುವರ್ಗದವರು ಭಕ್ತವರ್ಗಕ್ಕೆ ಮಾಡುವ ಅನ್ಯಾಯಗಳನ್ನು ಖಡಾಖಡಿಯಾಗಿ ಪ್ರಕಟಿಸುವರು, ಖಂಡಿಸುವರು. ಈಗ ಇದರಿಂದ ಜನರಲ್ಲಿ ಎಷ್ಟೋ ಜಾಗ್ರತಿಯಾಗಿರುವದು ಕಂಡುಬರುವದು. ಇವರು ಪ್ರವಚನ, ಪ್ರಕಟನೆ ಪುಸ್ತಕಗಳ ಮುಖಾಂತರ ಈ ಕಾರ್ಯ ಮಾಡುತ್ತಿರುವದು ಶ್ಲಾಘನೀಯವೇ ಸರಿ. ಭಕ್ತರು ಜಾಗ್ರತರಾಗಹತ್ತಿರುವದು ಆಗುವದು ಸಂಶಯವೇ ಇಲ್ಲ. ಅದಕ್ಕೆ ಗುರುಗಳು ಜಾಗ್ರತರಾಗಿ ಯೋಗ್ಯತೆಪಡೆದು ಸಾಧನೆಮಾಡಿ ನೀವು ಗುರುಗಳಾಗರಿ, ಭಕ್ತರಿಗೂ ಗುರುಗಳಾಗುವಂತೆ ಪ್ರೋತ್ಸಾಹ ನೀಡಿರಿ, ಅಂದರೆ ನಿಮಗೂ ದೇಶಕ್ಕೂ ಕಲ್ಯಾಣವಾಗುವದು. ಹೀಗಾದರೆ ನಮ್ಮ ಧರ್ಮವು ಜಗತ್ತಿನ ತುಂಬ ಪ್ರಸಾರವಾಗುವದರಲ್ಲಿ ಸಂದೇಹವಿಲ್ಲ. ಗುರುವರ್ಗದವರು ತ್ಯಾಗಮಾಡಿ ಧರ್ಮಪ್ರಸಾರ ಅಂದರೆ ಶಿವಶರಣರ ನಿಜತತ್ವಗಳನ್ನು ಸುತ್ತು ದೇಶ ವಿದೇಶಗಳಲ್ಲಿ ಹರಡಿ ಕೀರ್ತಿಶಾಲಿಗಳಾಗಬೇಕೆಂದು ಬೇಡಿಕೊಳ್ಳುವೆವು.

ಸೂಚನೆ:— ಶಿವಾನುಭವವು ಯಾವ ಪಕ್ಷಪಂಗಡಕ್ಕೆ ಸಂಬಂಧಿಸಿದ ಪತ್ರಿಕೆಯಾಗಿರದೆ ಸತ್ಯಾನ್ವೇಷಣೆಯೇ ಅದರ ಮುಖ್ಯ ಧ್ಯೇಯವಾಗಿರುತ್ತದೆ. ಮೇಲ್ಕಂಡ ಲೇಖದಲ್ಲಿಯ ವಿಚಾರಗಳಿಗೆ ಯಾರಿಗಾದರೂ ಸಮ್ಮತಿಯು ಇರದಿದ್ದರೆ ಅವರು ತಮ್ಮ ಅಭಿಪ್ರಾಯಗಳನ್ನು ಕುರಿತು ತಮ್ಮ ಲೇಖವನ್ನು ಕಳಿಸಿದಲ್ಲಿ ಅದಕ್ಕೆ ನಾವು ಪತ್ರಿಕೆಯಲ್ಲಿ ಸ್ಥಾನಕೊಡುವೆವು.

—ಸಂಪಾದಕ.

# ಶ್ರೀ ನಿಜಗುಣ ಶಿವಯೋಗಿಗಳ ನಿಲುಮೆಯ ಚರ್ಚೆ.

-(ಬರೆದವರು- ಶ್ರೀ. ಶಿವಾನಂದಸ್ವಾಮಿಗಳು ಗವಿಮಠ ತೆಗ್ಗಿಹಳ್ಳಿ)-

—≷000≶—

೧೩--೩--೫೬ ನೇ ದಿನಾಂಕ ಮಂಗಳವಾರ ೯ ಘಂಟೆಗೆ ಗದುಗಿನ ಶ್ರೀ ಶಿವಾನಂದ ಮಠದಲ್ಲಿ ಶ್ರೀ ನಿ. ಪ್ರ. ಸದಾಶಿವಾನಂದ ಮಹಾಸ್ವಾಗಳ ಆಜ್ಞೆಯ ಮೇರೆಗೆ ಮೇಲಿನ ವಿಷಯವನ್ನು ಕುರಿತು ಶ್ರೀ ಶಿವಾನಂದಸ್ವಾಮಿ ಗವಿಮಠ ತೆಗ್ಗಿಹಳ್ಳಿ (ಇಂಡಿ) ಇವರ ಅಧ್ಯಕ್ಷತೆಯಲ್ಲಿ ಸಭೆಯು ಜರುಗಿತು.

(೧) ಮೊದಲು ಶ್ರೀ. ಅಂದಾನೆಪ್ಪ ಭರಡಿಯವರು— ನಿಜಗುಣ ಶಿವ ಯೋಗಿಗಳು ಶಕ್ತಿವಿಶಿಷ್ಟಾದ್ವೈತವನ್ನೇ ತಮ್ಮ ಆರೂ ಗ್ರಂಥಗಳಲ್ಲಿ ಪ್ರತಿಪಾ ದಿಸಿದ್ದಾರೆಂದು ಒತ್ತಿ ಹೇಳಿದರು. ಪ್ರತಿಯೊಂದು ಗ್ರಂಥದಲ್ಲಿ ನಿರ್ಗುಣ ಪರಮಾತ್ಮನ ಸ್ತೋತ್ರವನ್ನು ಮಾಡಿದಲ್ಲದೆ ಆದಿಶಕ್ತಿ ಪಾರ್ವತಿಯ ಸಗುಣ ಸೋತ್ರವನ್ನೂ ಮಾಡಿದ್ದಾರೆ. ಆಕೆಯ ಶಕ್ತಿ, ಕಾರ್ಯ, ಗುಣ, ಇರುವಿಕೆ ಮೊದಲಾದವುಗಳನ್ನು ಹೇಳಿದ್ದಾರೆ. ಅಲ್ಲದೆ ಮಾಯಾಶಕ್ತಿಯೋರ್ವಳು ಸತ್ಯ ಅಸತ್ಯಗಳ ಮಧ್ಯದಲ್ಲಿ ನಿಂತಿದ್ದಾಳೆಂದು ಬಣ್ಣಿಸಿದ್ದಾರೆ. ವಿವೇಕ ಚಿಂತಾ ಮಣಿಯಲ್ಲಿ - ಶಿವಶಕ್ತಿ । ಸಗುಣ ನಿರ್ಗುಣ ಬ್ರಹ್ಮಮಾಯೆ । ಸತ್ಯಮಿಥ್ಯ। ನಿತ್ಯಾನಿತ್ಯ । ದೃಗ್ದೃಶ್ಯ । ಎಂದು ವಸ್ತುದ್ವಯಗಳನ್ನು ಹೇಳಿದ್ದಾರೆ. ಮಲ, ಮಾಯಾ, ಕರ್ಮ, ಬಿಂದು, ತಿರೋಧಾನ (ಶಿವಶಕ್ತಿ ವಿಶೇಷ) ಎಂದು ಪಾಳ ಪಂಚಕಗಳನ್ನು ಹೇಳಿದ್ದಾರೆ. ಸದಾತುಷ್ಟಿ, ಸರ್ವಜ್ಞತಾ ನಿತ್ಯಸುಬೋಧತ್ವ, ಸ್ವಾತಂತ್ರ್ಯ, ನಿತ್ಯ ಶಕ್ತಿತ್ವಂ, ಅನಂತ ಶಕ್ತಿತ್ವ ಎಂದು ಷಡಂಗಗಳನ್ನು ಹೇಳಿದ್ದಾರೆ. ಶೈವ, ವೈಷ್ಣವ, ಶಾಕ್ತೇಯ, ಜೈನ, ಬೌದ್ಧ ಸಾಂಖ್ಯ ಎಂದು ಷಣತಗಳನ್ನು ಹೇಳಿದ್ದಾರೆ. ೬ ರಲ್ಲಿ ಶಕ್ತಿಪಾತ ಲಕ್ಷಣವನ್ನು ಹೇಳ ಲಾಗಿದೆ. ಇವೆಲ್ಲ ಶಕ್ತಿಯನ್ನೇ ಬೋಧಿಸುವವು.

೭ರಲ್ಲಿ ಬಿಂದುವಿನ ಪರ್ಯಾಯ ನಾಮಂಗಳು - ಪರಿಪೂರ್ಣ ಪರಂ ಜೋತಿ ಸ್ವರೂಪಮಪ್ಪ ಬಿಂದುವು। ಮಹಾಮಾಯೆ। ಕುಟಿಲೆ। ಕುಂಡಲಿ। ಕ್ರಿಯಾಶಕ್ತಿ। ಪರನಾದ। ಪರಬಿಂದು। ಪರಿಗ್ರಹೆ ಶಕ್ತಿ। ಪರವಿದ್ಯ। ಶಬ್ದ

ತತ್ವ| ಶಬ್ದಬ್ರಹ್ಮ | ಶುದ್ಧಮಾಯೆ| ಶಿವತತ್ವ| ಶಿವಲಿಂಗ ಪೀಠ| ವ್ಯೋಮ ವಿದ್ಯೆ| ವಿದ್ಯಾಶಕ್ತಿ| ವಾಗೀಶ್ವರಿ| ಅನಾಹತೆ| ಅಘೋರ ವಾಕ್ಕು ಬ್ರಹ್ಮ ವೆಂಬವು ಮೊದಲಾದ ಪರ್ಯಾಯ ನಾಮುಗಳುಳ್ಳದ್ದೆನಿಸುವದು; ಆ ಆದಿ ಶಕ್ತಿಯು.

ಇದರಲ್ಲಿ ಸಗುಣತ್ವ ಸಮರ್ಥನವನ್ನು ಅಂದರೆ– ನಿರ್ಗುಣನಾದೀಶ್ವರನಿಂ ಪಂಚಕೃತ್ಯಗಳಾಗಲ್ಕೆ| ನಿತ್ಯ ಜ್ಞಾನ ಕ್ರಿಯಾದಿಗಳುಂಟೆಂಬುದಕೆ ಪರಾಸ್ಯ ಶಕ್ತಿರ್ವಿವಿಧೈವಶ್ರೂಯತೆ ಸ್ವಾಭಾವಿಕೀ ಜ್ಞಾನ ಬಲಕ್ರಿಯಾಚ| ಇಂತೆಂಬುದು ಮೊದಲಾದ ಸತ್ಯಕಾಮಾದಿ ಶ್ರುತಿವಾಕ್ಯಗಳು ಸಗುಣವಂ ಉಪದೇಶಿಪುದಾಗಿ ಶಿವಸಗುಣನೆಂಬುದೇ ಸಿದ್ಧಂ ಹೀಗೆ ಅನೇಕ ಉದಾಹರಣೆಗಳನ್ನು ಕೊಟ್ಟು ನಿಜಗುಣ ಶಿವಯೋಗಿಗಳು ಶಕ್ತಿ ವಿಶಿಷ್ಟಾದ್ವೈತಿಗಳೇ ಇದ್ದರು ಹೊರತು ಮಾಯಾವಾದಿಗಳಲ್ಲ. ಅವರು ಶಂಕರಾಚಾರ್ಯರ ಅದ್ವೈತವನ್ನು ಪ್ರತಿಪಾದಿಸಿಲ್ಲ. ಆದರೆ ಅದ್ವೈತ ಸ್ಥಿತಿಗೆ ಮುಟ್ಟಲಿಕ್ಕೆ ಬರುತ್ತದೆಂದು ಹೇಳಿದ್ದಾರೆ ವಿನಃ ಅಖಂಡ ಅದ್ವೈತವನ್ನು ಅವರು ಪ್ರತಿಪಾದಿಸಿಲ್ಲೆಂದು ಸಮರ್ಥಿಸಿದರು.

(೨) ಬ. ಕ. ಪಾಟೀಲು ಪಿ. ಮಾ. ಬ್ಯಾಹಟ್ಟಿ (ಗದಗ) ಇವರು ಶಕ್ತಿ ಸಮೇತ ಶಿವನೆ ಇರುವನೆಂದು ನಿಜಗುಣರ ಅನೇಕ ಪದ್ಯಗಳನ್ನು ಉದಹರಿಸಿ ಶಕ್ತಿವಿಶಿಷ್ಟಾದ್ವೈತವನೇ ಇವರೂ ಪ್ರತಿಪಾದಿಸಿದರು. ಇವರು ಕೈವಲ್ಯದಲ್ಲಿ ೬ನೇ ೮ನೇ ೯ನೇ ಸೂತ್ರಗಳು ಪಾರ್ವತಿಯವೇ ಇರುವವು, ಶಿವನ ಸಗುಣ ಸ್ತೋತ್ರವನ್ನು ಮಾಡಿದ್ದಾರೆ, ಎಂದು ಹೇಳಿದರು. “ಇಂಗಡಲೊಳಿಂಪು ಬೆಳದಿಂಗಳೊಳು ತಂಪು ಕುಸು| ಮಂಗಳೊಳು ಕಂಪು ಬೆರದಂತೆ ಪರಮನೊಳು| ಪಿಂಗದಗಸುತೆ ನತನಪ್ಪೆ|| ಎಂದು ಶಕ್ತಿವಿಶಿಷ್ಟಾದ್ವೈತವನ್ನು ಪ್ರತಿಪಾದಿಸುವ ಸೋತ್ರವನ್ನು ಶ್ರೀ ನಿಜಗುಣ ಶಿವಯೋಗಿಗಳು ಮಾಡಿದ್ದನ್ನು ಬಹುಮಾರ್ಮಿಕವಾಗಿ ಹೇಳಿದರು

ನಸುಗತ್ತಲಲ್ಲಿ ಹಗ್ಗದಲ್ಲಿ ಹಾವಿನ ಭ್ರಾಂತಿಯಾದಂತೆ ಮೃಗಜಲದಲ್ಲಿ ನೀರಿನ ಭಾಸವಾದಂತೆ, ಸಿಂಪಿಯಲ್ಲಿ ಬೆಳ್ಳಿಯ ಭ್ರಾಂತಿಯಾದಂತೆ ಮಿಂಚುಹರಳಿನಲ್ಲಿ ರತ್ನದ ಭಾಸವಾದಂತೆ ಪರಬ್ರಹ್ಮನಲ್ಲಿ ಈ ಜಗತ್ತಿನ ಭ್ರಾಂತಿ ಇರುವದೆಲ್ಲ ಪರಬ್ರಹ್ಮವೇ ಆಗಿದೆ, ಎಂದು ಕೆಲವರು ಪ್ರತಿಪಾದಿಸುವರು. ಆದರೆ ಇದು ತಪ್ಪೆಂದು ಇವರು ಸಿದ್ಧಮಾಡಿ ತೋರಿಸಿದರು ಏನಂದರೆ— ಇವರು

ಮೊದಲು ಹಾವನ್ನು ನೋಡಿರಲೇ ಬೇಕು. ನೀರನ್ನು ನೋಡಿರಲೇಬೇಕು. ಬೆಳ್ಳಿಯನ್ನು ಕಂಡಿರಬೇಕು. ರತ್ನಗಳನ್ನು ಅರಿತಿರಲೇ ಬೇಕು. ಹೀಗಾದ ಮೂಲಕ ಅವುಗಳ ಭಾಸವಾಗಿರುವದೇ ಹೊರತು ಅವುಗಳನ್ನು ನಿಜವಾಗಿ ಕಾಣದವನು ಅವುಗಳ ಭ್ರಾಂತಿಹೊಂದುವದು ಶಕ್ಯವೇ ಇಲ್ಲ. ಹಗ್ಗ-ಹಾವು, ಮೃಗಜಲ-ನೀರು, ಸಿಂಪಿ-ಬೆಳ್ಳಿ, ಮಿಂಚುಹುಳ-ರತ್ನ ಹೀಗೆ ಇರುವದು ಹೇಗೆ ಸಿದ್ಧವಾಗುವದೋ ಅದರಂತೆ ಶಿವ-ಶಕ್ತಿ ಪುರುಷ-ಪ್ರಕೃತಿಯರು ಇರುವರೆಂದೇ ಸಿದ್ಧವಾಗುವದು, ಎಂದು ಮಾರ್ಮಿಕವಾಗಿ ತಿಳಿಸಿ ಹೇಳಿದರು.

ಸ್ವಪ್ನದಲ್ಲಿ ಏನೂ ಇರದಿದ್ದರೂ ಸರ್ವವೂ ತೋರುವದು. ಅದರಂತೆ ಜಗದಕೂಡ ಮಿಥ್ಯವಿರುವದು ಎಂದು ಕೆಲವರು ಈ ಗ್ರಂಥದಲ್ಲಿ ಹೇಳಿದೆ ಎಂದು ವಾದಿಸುವರು. ಆದರೆ ಇದೂ ಕೂಡ ಸರಿಯೆನಿಸುವದಿಲ್ಲ. ಯಾಕಂದರೆ ಕನಸಿನಲ್ಲಿ ಕಾಣುವದೆಲ್ಲವನ್ನು ನಾವು ಜಾಗ್ರತದಲ್ಲಿ ನೋಡಿ, ಕೇಳಿ, ತರ್ಕಮಾಡಿ, ಮುಟ್ಟಿ, ರುಚಿಸಿ, ಅನುಭವ ಪಡೆದ ವಸ್ತುಗಳೇ ಇರುವವು. ಅಲ್ಲದೆ ಬೇರೆ ಬೇರೆ ವಸ್ತುಗಳ ಬೇರೆ ಬೇರೆ ಭಾಗಗಳು ಕೂಡಿ ಒಂದು ವಸ್ತುವಾಗಿ ತೋರುವದು. ಆನೆಯ ಕಾಲು ಒಂಟೆಯ ಮುಖ ಕುದುರೆಯ ಗೋಣು, ಎತ್ತಿನ ಕೋಡು, ನಾಯಿಯ ಬಾಲ, ಸಿಂಹದ ಆಯಾಲ, ಪಕ್ಷಿಯ ರೆಕ್ಕೆ ಸಾರಂಗದ ಮೈ ಇವೆಲ್ಲ ಕೂಡಿ ಕನಸಿನಲ್ಲಿ ಒಂದು ಪ್ರಾಣಿಯಾಗಿ ತೋರಬಹುದು. ಇದು ಹೊಸದಲ್ಲ. ಮಿಥ್ಯವೂ ಅಲ್ಲ. ಅದರಂತೆ ಜಗತ್ತು ಒಂದು ಸ್ವಪ್ನವೆಂಬುವದು ಸುಳ್ಳು. ಇದಕ್ಕಾದರೂ ಅಸ್ತಿತ್ವವಿರುವದು, ಎಂದು ಸಿದ್ಧಮಾಡಿ ತೋರಿಸಿದರು. ಇದರಂತೆ ಅವರು ಭ್ರಾಂತಿ ಭ್ರಮ, ಅವಿದ್ಯೆ, ಮರವು, ಕಲ್ಪಿತ ಎಂಬ ಬೇರೆ ಶಬ್ದಗಳನ್ನು ಜಗನ್ಮಾತೆಗೆ ಅವರು ಉಪಯೋಗಿಸಿದ್ದರೆಂದು ಒಳ್ಳೇ ಸರಿಯಾದ ರೀತಿಯಲ್ಲಿ ತಿಳಿಸಿದರು.

ಜ್ಞಾನವೆಂದರೆ ಪರಮಾತ್ಮ, ಕ್ರಿಯಾ ಎಂದರೆ ಶಕ್ತಿ. ಆದಕ್ಕೆ ಜ್ಞಾನ ಮತ್ತು ಕ್ರಿಯೆಗಳು ಎಂದರೇನೆ ಭಕ್ತಿ ಪ್ರೀತಿ ಇವೆರಡೂ ಕೂಡಿದಾಗ ಆನಂದವಾಗುವದು. ಮುಕ್ತರಾಗುವತನಕ ಕ್ರಿಯೆಗಳು ಬೇಕಾಗುವವು. ಸ್ಥೂಲ ಸೂಕ್ಷ್ಮ ಕಾರಣಗಳೆಂದು ಕ್ರಿಯೆಗಳಲ್ಲಿ ಭೇದಗಳುಂಟು. ಕಾರಣದಿಂದಲೇ ಕಾರ್ಯ ಹೊರಡುವದೆಂದು ನಿಜಗುಣರು ಹೇಳಿರುವರು. ಆದರೆ ನಿಜಗುಣ ಶಿವಯೋಗಿಗಳು ಅಂತ್ಯದಲ್ಲಿ ಒಂದರೊಳಗೊಂದು ಲೀನವಾಗಿ ಅಖಂಡವಾಗುವದೆಂದು ಅಖಂಡದ ವರ್ಣನೆಯನ್ನು ಮಾಡಿದ್ದಾರೆ ಹೊರತು ಶಕ್ತಿ ಇಲ್ಲ ಮಾಯೆ ಇಲ್ಲ ಜಗತ್ತೇ ಇಲ್ಲ. ಮನಸ್ಸಿನಲ್ಲಿ ಬುದ್ಧಿ ಇಲ್ಲ ಎಂದು

ಹೇಳಿಲ್ಲ. ಇವುಗಳ ಆಚೆಗೆ ಆ ಪರಬ್ರಹ್ಮನು ಮಾತ್ರ ಇರುವನು. ಅದರಲ್ಲಿ ಶಕ್ತಿಯುಂಟು ಎಂದು ಹೇಳಿದ್ದಾರೆಂದು ಬಹು ಚೆನ್ನಾಗಿ ಪ್ರತಿಪಾದಿಸಿದರು. ಶಂಕರಾಚಾರ್ಯರು ಹಿಂದುಸ್ತಾನದಲ್ಲಿ ಅದ್ವೈತವನ್ನು ಸ್ಥಾಪಿಸುತ್ತ ಕಾಶ್ಮೀರಕ್ಕೆ ನಡೆದರು ಅಷ್ಟರಲ್ಲಿ ಅವರ ಸಕಲ ಬಲವೆಲ್ಲ ಕುಂದಿಹೋಗಿ ಅಶಕ್ತರಾಗಿದ್ದರು. ಜಗನ್ಮಾತೆ ಗೌಳಿಯ ರೂಪದಿಂದ ಬಂದು ಮೊಸರನ್ನು ಮಾರುವ ಧ್ವನಿ ಕೇಳಿದರು. ಎದ್ದುಹೋಗಿ ಮೊಸರನ್ನು ಕೊಳ್ಳುವದು ಅವರಿಗೆ ಆಗಲಿಲ್ಲ. ಆಗ ಅವಳು ಗಹಗಹಿಸಿ ನಕ್ಕಳು ಆಗ ಶಂಕರಾಚಾರ್ಯರಿಗೆ ಆದಿಶಕ್ತಿ ಪಾರ್ವತಿಯ ಪ್ರಜ್ಞೆಯಾಯಿತೆಂದು ಹೇಳಿದರು. ಕಾರಣ ಅವರೂ ಕೂಡ ಅಧ್ವೈತವನ್ನು ಸ್ಥಾಪಿಸಲಿಕ್ಕೆ ಹೋಗಿ ಸೋಲನ್ನು ಒಪ್ಪಿಕೊಂಡು ಶಕ್ತಿ ವಿಶಿಷ್ಟಾದ್ವೈತವನ್ನೇ ಹಿಂದುಗಡೆ ಹೇಳಿದ್ದಾರೆಂದು ಬಹು ಸುಂದರವಾಗಿ ಪ್ರತಿಪಾದಿಸಿದರು. ಇವರು ಆಗ ಅನ್ನಪೂರ್ಣಾ ಪಾರ್ವತಿಯ ಸ್ತೋತ್ರವನ್ನು ಬಹು ಅನನ್ಯವಾಗಿ ಮಾಡಿದ್ದಾರೆ.

(೩) ವೇ. ಶ್ರೀ. ನಿ. ಪ್ರ. ಮಲ್ಲಿಕಾರ್ಜುನ ಮಹಾಸ್ವಾಮಿಗಳು ಎದ್ದ ಕೂಡಲೇ ಜನರು ಚಪ್ಪಾಳೆಯನ್ನು ತಟ್ಟಿ ಅವರ ಭಾಷಣವನ್ನು ಸ್ವಾಗತಿಸಿದರು. ಇವರು ಅನೇಕ ಉದಾಹರಣೆಗಳನ್ನು ಕೊಟ್ಟು ಮೊದಲಿನ ವ್ಯಾಖ್ಯಾನಕಾರರಿಗೆ ಬೆಂಬಲ ನೀಡಿದರು.

ಓಂ ಪೂರ್ಣಮದಃ ಪೂರ್ಣಮಿದಂ | ಪೂರ್ಣಾತ್ ಪೂರ್ಣಮುದುಚ್ಯತೆ| ಪೂರ್ಣಸ್ಯ ಪೂರ್ಣ ಮಾದಾಯ | ಪೂರ್ಣವೇವ ಶಿಷ್ಯತೇ || ಎಂಬ ಉಪನಿಷತ್ತಿನ ವಾಕ್ಯವನ್ನು ಮೊದಲು ಉದಹರಿಸಿ ಅದು ಪೂರ್ಣ ಇದು ಪೂರ್ಣ ಪೂರ್ಣದಿಂದಲೇ ಈ ಪೂರ್ಣವು ಹೊರಗೆ ಬಂದಿದೆ. ಪೂರ್ಣದಲ್ಲಿ ಪೂರ್ಣ ಕಳೆದರೆ ಪೂರ್ಣವೇ ಉಳಿಯುವದೆಂದು ಅವರು ಶಕ್ತಿ ವಿಶಿಷ್ಟಾದ್ವೈತವೇ ಇದರಿಂದ ತಿಳಿಯುವದೆಂದು ಹೇಳಿ ನಿಜಗುಣಶಿವಯೋಗಿಗಳ ಗ್ರಂಥದಲ್ಲಿಯ ಆಧಾರಗಳ ಕಡೆಗೆ ಹೊರಳಿದರು. ನಿಜದೊಳು ಸದಸತ್ತಾಗಿಹ ಶಕ್ತಿ | ಆಜೆ ಎನಿಸುವದು ಮಾಯಾಶಕ್ತಿ | ಅದುವೆ ಜಗತ್ಕಾರಣವಾಗಿಹುದು | ಆನಂದಾಚ್ಛಾದಕ-ವಾಗಿಹುದು | ಸದ್ಭಾವವನಿಲ್ಲೆನಿಸುವದು | ಚಿದ್ಭಾವವನದು ಮುಸುಕಿರುತಿಹುದು | ಉಳ್ಳಬ್ರಹ್ಮವ ನಿಲ್ಲೆನಿಸುವದು | ಇಲ್ಲದ ಲೋಕವನುಂಟೆನಿಸುವದು | ಮಾನ್ಯಗೆ ಇದು ನಿನ್ನನು ನೆಮ್ಮಿಹುದು | ಅನ್ಯಾನನ್ಯೇತರ ವಾಗಿಹುದು | ಇದು ಪರಮಾರ್ಥ ಗೀತೆಯಲ್ಲಿ ಬಂದಿರುವದು. ಇದೆಲ್ಲ ಆದಿಶಕ್ತಿಯ ಗುಣವಿಶೇಷವಿರುವದು. ಪರಬ್ರಹ್ಮನೊಡನೆ ಅವಳೂ ಇರುವಳು.

ಎಂದು ಇದರ ಮೇಲಿಂದ ಅನಿಸುವದೆಂದು ಹೇಳಿದರು. ಅನುಭವಸಾರದಲ್ಲಿ— ಶರ್ವಂಗೆ ಸರ್ವೆಶೆ ಸರ್ವಾತ್ಮೆ । ಸರ್ವಶಕ್ತಿತ್ವ ವಹುದಾರ ಬಲದಿನಾ । ಸರ್ವ ಮಂಲಿಗೆನತನಪ್ಪೆ । ಎಂದು ಪಾರ್ವತಿಯ ಸ್ತೋತ್ರಮಾಡಿದ್ದು ಇದನ್ನೆ ಸೂಚಿಸುವದು ಮತ್ತು ಉಂಟೆನಿಸದಿಲ್ಲೆನಿಸ ದುಂಟಿಲ್ಲೆನಿಸದ ಖಿಳ । ಕಂಟಕದ ಬೀಜವೆನಿಪನಾದಿಯ ವಿದ್ಯೆ । ಯುಂಟಾತ್ಮ ಸತ್ತಿಯೊಡಗೂಡಿ ॥೪॥ ಆಧಾರ ವಾಬ್ರಹ್ಮವಾದೇಯ ವೀಮಾಯೆ । ಯಾಧಾರದಲ್ಲಿ ಬೆರಸಿ ಬೇರಿಲ್ಲದಂತಾ ಧೇಯವಿರ್ಪುದೆಲೆ ಪುತ್ರ ॥೫॥ ದೇವಾತ್ಮ ಶಕ್ತಿಯೆಂಬಾ ವಾಕ್ಯದಿಂ ಸಾರು। ವಾವೇವದಲ್ಲಿ ತಿಳಿ ಮಾಯೆ ತತ್ವದೋಳೋಡಿ ಬೇರಿಲ್ಲದಿಹುದೆಂದು ॥೬॥ ಎಂದು ಉದಹರಿಸಿ ಶಕ್ತಿಯ ಅಸ್ತಿತ್ವವನ್ನು ಸಿದ್ಧಮಾಡಿ ತೋರಿಸಿದರು.

ಅದ್ವೈತವು ಕಟ್ಟಕಡೆಯ ಮಾತು ನಿಜಗುಣಶಿವಯೋಗಿಗಳಾಗಿ ಆರೂಢರಾದಾಗ ಅದರ ಅನುಭವವಾಗುವದೇ ಹೊರತು ಅದನ್ನು ಬಣ್ಣಿಸಲಿಕ್ಕೆ ಬರುವದಿಲ್ಲ. ಬಣ್ಣಿಸಲಿಕ್ಕೆ ಶಕ್ತಿಬೇಕು ಅದನ್ನು ಅನುಭವಿಸಲಿಕ್ಕೆ ಶಕ್ತಿಬೇಕು ಶರೀರಬೇಕು ಶಕ್ತಿಇಲ್ಲದೆ ಒಂದು ಹೆಜ್ಜೆ ಇಡಲಾರೆವು. ಒಂದು ನುಡಿಯನ್ನು ನುಡಿಯಲಾರೆವು. ಶಕ್ತಿಇಲ್ಲದೆ ಒಂದು ವಿಚಾರವನ್ನು ವಿಚಾರಿಸಲಾರೆವು. ಯಾವದಕ್ಕೂ ಶಕ್ತಿಬಲಗಳು ಅತಿ ಅವಶ್ಯವಾಗಿರುವದು. ಆ ಬ್ರಹ್ಮಾನಂದವನ್ನು ಭೋಗಿಸಲಿಕ್ಕೆ ಬಲವೇಬೇಕು. ಒಂದು ಸ್ಥಿತಿಯಿಂದ ಒಂದಕ್ಕೆ ಏರಿಹೋಗಬೇಕಾದರೆ ಬಲವೇ ಬೇಕು. ಒಮ್ಮೆಲೆ ಅದರಲ್ಲಿ ಮುಳಗಲಿಕ್ಕೆ ಬರುವದಿಲ್ಲ. ಅದರಲ್ಲಿ ಮುಳುಗುವತನಕ ಶಕ್ತಿಬಲಗಳು ಅತಿಅವಶ್ಯ. ಅದೆಲ್ಲ ಅನಿರ್ವಚನೀಯ ಸ್ಥಿತಿ ಇರುವದು. ಅದಕ್ಕಾಗಿಯೇ ನಿಜಗುಣಶಿವಯೋಗಿಗಳು ಶಿವಕಾರುಣ್ಯಸ್ಥಲವನ್ನು ಮೊದಲು ಇಟ್ಟು। ಅದರಲ್ಲಿ ಶಿವಶಕ್ತಿಯರ ಸ್ತೋತ್ರ ಮಾಡಿದ್ದಾರೆ. ಇದು।ಅವರ ಆರ್ತಭಾವ (ಮೊರೆ ಇಡುವದು) ವನ್ನು ಹೇಳುವದು. ಶಿವನ ಪ್ರಾರ್ಥನೆಯಿಂದ ಶಿವನ ಕಾರುಣ್ಯ ಪಡೆಯಲಿಕ್ಕೆ ಬರುವದೆಂದು ಸಗಣೋಪಾಸನೆಯರೇ ಹೇಳಿದ್ದಾರೆ. ಭಕ್ತಿ ಎಲ್ಲಿ ಇರುವದೋ ಅದೆಲ್ಲ ದ್ವೈತದಿಂದ ಅದ್ವೈತಕ್ಕೆ ಸಾಗುವಂಥ ಶಕ್ತಿ ವಿಶಿಷ್ಟಾದ್ವೈತವನ್ನೇ ಬೋಧಿಸುವದು.

ಆಬಳಿಕ ಜೀವಸಂಬೋಧನಸ್ಥಲ— ಅನಿತ್ಯವಾದ ( ರೂಪಾಂತರ ಹೊಂದುವ ) ಜಗತ್ತಿನ ಧನ ಕನಕ ಸತಿ ಸುತರಿಂದ ಬಿಡುಗಡೆ ಹೊಂದಿ ವೈರಾಗ್ಯ ಪ್ರಾಪ್ತಿಯಾಗುವದು. ನಿತ್ಯವಾದ (ರೂಪಾಂತರ ಹೊಂದದ ) ಪರ

ಮಾತ್ಮನಲ್ಲಿ ಪ್ರೇಮ ವಿಶೇಷ ಪ್ರಾಪ್ತವಾಗುವದೆಂದು ಈ ಸ್ಥಲ ಸೂಚಿಸು ವದು. ಇದರಂತೆ ಕೈವಲ್ಯದಲ್ಲಿ ವೀರಶೈವರ ಷಟ್‌ಸ್ಥಲಗಳನ್ನೇ ಪ್ರತಿಪಾದಿಸಿ ದ್ದಾರೆ. ಇದೆಲ್ಲ ಶಕ್ತಿ ವಿಶಿಷ್ಟಾದ್ವೈತವನ್ನೇ ಪ್ರತಿಪಾದಿಸುವರೆಂದು ತಿಳಿಸಿದರು.

ವೇದಾಂತದಲ್ಲಿ ಶಕ್ತಿಗೆ ವೃತ್ತಿ ಎಂಬ ಹೆಸರುಂಟು. ಆದಕ್ಕೆ ಎಲ್ಲ ಕಡೆಗೂ ಶಕ್ತಿ ಇರುವಳೆಂದೇ ತೋರುವದು. ಅದಕ್ಕೆ ಶಿವಯೋಗಿಗಳು ಶಕ್ತಿವಿಶಿಷ್ಟಾ ದ್ವೈತಿಗಳೆಂದು ಹೇಳಿದರು.

ಶ್ರೀ ರಾಮನ ಗುರುಗಳಾದ ವಸಿಷ್ಠರ ಕಥೆಯನ್ನು ಉದಹರಿಸಿ ಮಾಯೆ ಯನ್ನು ಶಕ್ತಿಯನ್ನು ಸದಾ ಅಲ್ಲಗಳೆಯುತ್ತಿದ್ದ ಇವರಿಗೆ ಆಕೆ ಚೆನ್ನಾಗಿ ಬುದ್ಧಿಗಲಿಸಿ ಮಾಯೆ, ಶಕ್ತಿ ಸತ್ಯನಿತ್ಯವೆಂದು ತಿಳಿಸಿದಳು. ಆಗ ಅವನು ಆಕೆಯನ್ನು ಅವಳ ಬಗೆಯಿಂದ ಸ್ತೋತ್ರಗೈದು ತಪ್ಪು ತಪ್ಪೆಂದು ಒಪ್ಪಿ ಕೊಂಡು ತನ್ನ ಸೋಲನ್ನು ಆಕೆಯ ವಿಜಯವನ್ನು ಜಗಕ್ಕೆ ತೋರಿಸಿದ್ದಾರೆ. ಇದರ ಮೇಲಿಂದಲೂ ಎಲ್ಲಕಡೆಗೂ ಮಾಯೆ ಶಕ್ತಿ ಇರುವಳೆಂದೇ ಸಿದ್ಧವಾ ಗುವದೆಂದು ಬಹು ಮಾರ್ಮಿಕವಾಗಿ ಹೇಳಿದರು.

ಸಮುದ್ರದಲ್ಲಿ ಎದ್ದ ತೆರೆಗಳಂತೆ ಈ ಜಗತ್ತು ಮಿಥ್ಯ ಎಂದು ಅದ ರಲ್ಲಿ ಹೇಳಿರುವರು. ಆ ಉಬ್ಬು ಏರಿಳಿತಗಳು ಹೋದರೆ ಸಮುದ್ರವೇ ಉಳಿ ಯದು. ಅದರಂತೆ ಜಗತ್ತು ಮಿಥ್ಯವೆಂದು ಅನ್ನುವರು. ಆದರೆ ಸಮುದ್ರ ದಲ್ಲಿ ತೆರೆ ಅಥವಾ ಏರಿಳಿತಗಳು ಮೊದಲೇ ಇರುವದರಿಂದ ಅವು ಹೊರಗೆ ಕಾಣಿಸಿಕೊಂಡಂತೆ ಪರಬ್ರಹ್ಮನಲ್ಲಿ ಜಗತ್ತೂ ಕೂಡ ಮೊದಲೇ ಬೀಜರೂಪ ವಾಗಿ ಇರುವದರಿಂದಲೇ ಈಗ ಕಾಣಿಸಿಕೊಂಡಿರುವದೆಂದು ಹೇಳಿದರು. ಬಂಗಾರದಲ್ಲಿ ಮೊದಲೇ ತೊಡಿಗೆಗಳು ಇದ್ದದರಿಂದಲೇ ಅವು ಕೂಡ ಈಗ ಹೊರಗೆ ಕಾಣಿಸಿಕೊಂಡವು. ಅದರಂತೆ ಜಗತ್ತು ಕಾಣಿಸಿಕೊಂಡಿರುವದು ಇದರಿಂದ ನೋಡಲಾಗಿ ಶಕ್ತಿಸಮೇತ ಶಿವನಿರುವನೆಂದೇ ತೋರುವದು. ಎಂದು ಬಹು ಹೃದಯಂಗಮಯವಾಗಿ ಸಿದ್ಧಮಾಡಿ ತೋರಿಸಿದರು.

ಉಳಿದ ಒಬ್ಬಿಬ್ಬರು ನಿಜಗುಣರು ಅದ್ವೈತವನ್ನು ಮಾಯಾವಾದವನ್ನು ಅಖಂಡಬ್ರಹ್ಮವನ್ನು ಪ್ರತಿಪಾದಿಸಿರುವರೆಂದು ಮೇಲಿನ ಸರ್ಪರಜ್ಜು, ಸಮುದ್ರ ತೆರೆ, ಬಂಗಾರ ತೊಡಿಗೆಗಳ ಉದಾಹರಣೆಕೊಟ್ಟು ಸಿದ್ಧಮಾಡಲಿಕ್ಕೆ ಯತ್ನಿಸಿ ದರು ಆದರೆ ಅದು ಕೊನೆಗಾಣಲಿಲ್ಲ. ಅವೇ ಉದಾಹರಣೆಗಳಿಂದಲೇ ಅದನ್ನು ಖಂಡಿಸಿದ್ದನ್ನು ಮೇಲಿನವರಿಂದ ತಿಳಿಯುವದು.

ಅಧ್ಯಕ್ಷರಾಗಿದ್ದ ಶ್ರೀ ಶಿವಾನಂದ ಸ್ವಾಮಿ ಗವಿಮಠ ಇವರು ಸಮಾರೋಪ ಭಾಷಣವನ್ನು ಮಾಡಿದರು. ನಿಜಗುಣ ಶಿವಯೋಗಿಗಳು ಭಕ್ತಿ ಶಕ್ತಿಗಳನ್ನು ಬಿಟ್ಟಿಲ್ಲ. ಅವರ ಕಟ್ಟಕಡೆಯ ಮಾತನ್ನು ನಮ್ಮ ಈಗಿನ ಜನರು ವಿಪರೀತು ಅರ್ಥಮಾಡಿ ಕೆಡುತ್ತಿರುವದು ಪ್ರತಿ ಹಳ್ಳಿಯಲ್ಲಿ ಕಾಣುತ್ತಿರುವದು ಈ ಜಗತ್ತು ಮಿಥ್ಯ ಸುಳ್ಳು ಜಗತ್ತಿನಲ್ಲಿಯ ಪ್ರತಿ ಒಡವೆ ಸುಳ್ಳು. ಪಂಚಭೂತಗಳೂ ಇವುಗಳಿಂದ ಜನಿಸಿದ ಮನ ಬುದ್ಧಿ ಚಿತ್ತ ಅಹಂಕಾರ ಸುಳ್ಳು. ಪರಿಚಜ್ಞಾನೇಂದ್ರಿಯ ಹಾಗೂ ಪಂಚ ವಿಷಯಗಳೂ ಸುಳ್ಳು. ಪಂಚಕರ್ಮೇಂದ್ರಿಯ ಹಾಗೂ ಅವುಗಳ ಕ್ರಿಯೆಗಳೂ ಸುಳ್ಳು. ಈ ಶರೀರ ಸುಳ್ಳು ಈ ಶರೀರ ಮಾಡುವ ಕ್ರಿಯಾದಿಗಳು ಕೂಡ ಸುಳ್ಳು ಎಂದು ನಿಜಗುಣ ಶಿವಯೋಗಿಗಳ ಶಾಸ್ತ್ರಗಳಿಗೆ ವಿಪರೀತ ಅರ್ಥಮಾಡಿ ಜನರು ಕೆಡುತ್ತಿರುವದು ಬಹಳೇ ಹೆಚ್ಚಾಗಿದೆ. ಆತ್ಮನು ನಿರ್ಲೇಪನಿರುವನು. ಅವನಿಗೆ ಸುಳ್ಳು ಶರೀರ, ಸುಳ್ಳು ಇಂದ್ರಿಯಗಳು, ಸುಳ್ಳು ಮಾಡು, ಸುಳ್ಳು ಕ್ರಿಯಾದಿಗಳು, ಹಾಗು ಸುಳ್ಳು ಭೋಗಿಸುವ ಸುಳ್ಳು ವಿಷಾಯಾದಿಗಳು ಲೇಪವಾಗುವದಿಲ್ಲ. ಅವನು ಸದಾ ಶುದ್ಧನಿರುವದರಿಂದ ಸದಾ ಮುಕ್ತನೇ ಇರುವನು. ಬಂಧನವಾಗಿದೆ ಅವನಿಗೆ ಎನ್ನುವ ಭ್ರಾಂತಿಯನ್ನು ತೆಗೆದು ಹಾಕಿದರೆ ನಿನ್ನ ಕೆಲಸ ತೀರಿತು. ಮುಕ್ತನಾಗಿ ಬಿಡುವಿ ಎಂದು ದುರುಳ ಬೋಧೆಯನ್ನು ಮಾಡುವರು. ಹೆಣ್ಣು ಸುಳ್ಳು, ಗಂಡು ಸುಳ್ಳು ಹೆಣ್ಣು ಗಂಡಿನ ವಿಷಯಾದಿಗಳು ಸುಳ್ಳು ಎಂದು ಹೇಳಿ ಸಿಕ್ಕವರ್ತನೆ ವ್ಯವಹಾರಗಳನ್ನು ಜನರು ಮಾಡಿ ನೀಚವೃತ್ತಿಗೆ ಇಳಿದಿದ್ದಾರೆ. ಹೀಗೆ ಉಪದೇಶ ಮಾಡುವ ಗುರುಗಳಿಗೆ ಅಸಂಖ್ಯ ಶಿಷ್ಯವೃಂದವು ಬೆಳೆದು ಅವನು ಐಷಆರಾಮಿಯಲ್ಲಿ ಇರುವನು. ಪಂಚ ಮಕಾರವನ್ನು ಭೋಗಿಸುವ ಚಾರ್ವಕರ ಮತಕ್ಕೆ ಜನರು ಇಂಥ ಉಪದೇಶದಿಂದ ಧಾವಿಸುತ್ತಿರುವರು. ಇದು ಧರ್ಮದ ಅವನತಿಯೇ ಸರಿ. ನೀತಿ ಧರ್ಮದ ನೆಲೆಗಟ್ಟು ಭಕ್ತಿಗೆ ದ್ವೈತದಿಂದ ಅದ್ವೈತಕ್ಕೆ ಹೋಗುವದಕ್ಕೆ (ಶಕ್ತಿವಿಶಿಷ್ಟಾದ್ವೈತಕ್ಕೆ) ನೀತಿ ಬೇಕಾಗುವದು ಸಹಜ ಸ್ವಾಭಾವಿಕವಾಗಿದೆ. ನಿಜಗುಣ ಶಿವಯೋಗಿಗಳು ಸರ್ವಸಂಗಪರಿತ್ಯಾಗ ಮಾಡಿ ಶಿವನ ಮೇಲೆ ಅಪ್ರತಿಮ ಭಕ್ತಿಮಾಡಿ ಶಂಭುಲಿಂಗನನ್ನು ಪ್ರತ್ಯಕ್ಷ ಕಂಡು ಜನಕ್ಕೆ ಉಪಯೋಗವಾಗಲೆಂದು ಈಪ್ರಕಾರ ಶ್ರಮಿಸಿ ಆರು ದಿವ್ಯ ಗ್ರಂಥಗಳನ್ನು ಬರೆದು ಹೋದರು. ಅದನ್ನು ಹೇಳುವ ಕೆಲ ಮೂಲಪೀಠದವರು, ಸನ್ಯಾಸಿಗಳು, ತ್ಯಾಗಿಗಳು ಆದರೆ ಇದನ್ನು ಕೇಳಿದ ಉಳಿದವರು ಹಳ್ಳಿಯಲ್ಲಿ ವಿಪರೀತ ಮೇಲಿನಂತೆ ಅರ್ಥಮಾಡಿ ಹಾಳಾದ ಉದಾಹರಣೆಗಳೇ ಹೆಚ್ಚಾಗಿರುವವು. "ಅಹಂಬ್ರಹ್ಮಾಸ್ಮಿ"

ಎಂದು ಅಹಂಕಾರಿಗಳಾಗಿ ಬಾಯಿಬ್ರಹ್ಮಿಗಳಾಗಿ ಭಕ್ತಿ ಹೀನರಾಗಿ ಪರಸೇವೆಯನ್ನು ತಿರಸ್ಕರಿಸಿ ಬರೇ ವಾಚಾಳಿಗಳಾಗಿದ್ದಾರೆ. ಇಂಥ ದುರುಳ ಶಾಸ್ತ್ರೋಪದೇಶವನ್ನು ಕೇಳಿ ಸಂಸಾರ ಸುಳ್ಳೆಂದು ತಿಳಿದು ದುಡಿಯುವದನ್ನು ಬಿಟ್ಟು ಎದ್ದುಕಾಣುವಂತೆ ವಿಭೂತಿಬಡಕೊಂಡು ರುದ್ರಾಕ್ಷಿ ಹಾಕಿಕೊಂಡು ಅನ್ಯರ ಕೂಳಿಗಾಗಿ ಅವರ ಬಾಗಿಲ ಕಾಯುತ್ತ ಶಾಸ್ತ್ರದ ನೆವಮಾಡಿಕೊಂಡು ಊರೂರ ಮಠ ಮಠ ತಿರುಗುತ್ತ ಸ್ವಾನನಂತೆ ಹೊಟ್ಟೆಹೊರೆಯುವ ಜನ ಸಂಖ್ಯೆ ಹೆಚ್ಚಾಗಿದೆ. ಇದೆಲ್ಲ ನಿಜಗುಣ ಶಿವಯೋಗಿಗಳ ಶಾಸ್ತ್ರದ ಅರ್ಥವನ್ನು ವಿಪರೀತ ಮಾಡಿಕೊಂಡದ್ದರ ಫಲವೇ ಸರಿ. ಮನೆಯಲ್ಲಿ ಹೆಂಡತಿ ಮಕ್ಕಳಗೋಳಾಟವನ್ನು ಸಹ ಭ್ರಮೆ ಭ್ರಾಂತಿಯೆಂದು ಅನ್ಯತ್ರ ದೊಡ್ಡ ವೇದಾಂತಿಗಳಂತೆ ಸೋಗ ಹಾಕಿ ಮನೆಯವರನ್ನು ದುರ್ಲಕ್ಷಿಸಿರುವದು ಕಂಡು ಬರುವದು. ಹೀಗಾಗುವದರಿಂದ ನಾನು ನಿಜಗುಣರ ಶಾಸ್ತ್ರಗಳಿಗೆ ಜಿಗುಪ್ಸೆ ಪಟ್ಟು ತಿರಸ್ಕರಿಸುತ್ತಿದ್ದೆ ಈ ದಿನದ ಎಲ್ಲರ ದಿವ್ಯ ವಿಚಾರಗಳಿಂದು ನನ್ನಲ್ಲಿ ಒಂದು ತರದ ಪ್ರಕಾಶಹೊಳೆದು ಅವುಗಳನ್ನು ಚೆನ್ನಾಗಿ ಅಭ್ಯಾಸ ಮಾಡಿ ಪ್ರಚಾರ ಮಾಡಬೇಕೆಂದು ಈಗ ಹಂಬಲವಾಗಿದೆ. ದ್ವೈತ, ಅದ್ವೈತ, ವಿಶಿಷ್ಟಾದ್ವೈತ, ಶಕ್ತಿವಿಶಿಷ್ಟಾದ್ವೈತ ಮೊದಲಾದ ಯಾರೆ ಆದರೂ ಕೂಡ ಶಕ್ತಿಯನ್ನು ಕಟ್ಟಕಡೆಗೆ ಒಪ್ಪಲೇಬೇಕು. ಶಕ್ತಿಯ ಅಸ್ತಿತ್ವವು ಅಂತ್ಯದಲ್ಲಿ ಎಲ್ಲರಿಗೂ ಗೊತ್ತಾಗುವದು ಒಳ್ಳೇ ಖಚಿತವೇ ಸರಿ ಇದನ್ನು ಶ್ರೀ ರಾಮಕೃಷ್ಣ ಪರಮಹಂಸರು ನಿರ್ವಿಕಲ್ಪ ಪಡೆದ ತೋತಾಪುರಿ ಎಂಬ ನಗ್ನಸನ್ಯಾಸಿಗೆ ಪ್ರಜ್ಞೆ ಮಾಡಿಕೊಟ್ಟರು. ಹಿಂದಿನ ಕಥೆಗಳು ಪೌರಾಣಿಕವಾಗಿದ್ದರೆ ಇದು ಐತಿಹಾಸಿಕ ಕಥೆ ಇರುವದು ಅದನ್ನೆ ಯಾರೂ ಶಕ್ತಿಯನ್ನು ಅಲ್ಲಗಳೆಯುವದು ಶಕ್ಯವಿಲ್ಲ. ಅಲ್ಲಗಳೆದರೆ ನಡೆಯುವದಿಲ್ಲ. ಅವಳು ತನ್ನ ಅಸ್ತಿತ್ವವನ್ನು ಸಿದ್ಧಮಾಡಿ ತೋರಿಸದೆ ಬಿಡುವದಿಲ್ಲ.

"ಶ್ರೀ ಗುರು ವಚನೋಪದೇಶವನಾಲಿಸಿ। ದಾಗಳಹುದು ನರರಿಗೆ ಮುಕುತಿ" ಎಂಬ ಪಲ್ಲ ಕೇಳಿ ಉಪದೇಶಕೊಂಡು ಮುಕ್ತರಾಗುವವರು ಆದರೆ ಅದೇ ಸೂತ್ರದ ಕೆಳಭಾಗವನ್ನು ಯಾರೂ ಲಕ್ಷಿಸುವದಿಲ್ಲ ಅಲ್ಲಿ ಹೃದಯ ಶರೀರ ಬುದ್ಧಿ ಮನ ವಚನ ಆದಿಗಳ ಶುದ್ಧಿಯ ಬಗ್ಗೆ ೫ ಪದ್ಯಗಳನ್ನು ಹಾಡಿದ್ದಾರೆ ಅದನ್ನು ಅವರ ಕೈವಲ್ಯದಲ್ಲಿ ನೋಡಿ ನಡೆಯಿರಿ. ತಮ ತಮಗೆ ಇಷ್ಟ ಬದಂತೆ ಶಾಸ್ತ್ರಗಳನ್ನು ಜಗ್ಗಿ ಅರ್ಥಮಾಡಿ ಮನಬಲ್ಲಂತೆ ಹೇಳಿ ಮನಬಲ್ಲಂತೆ ನಡೆದು ಶ್ರೀ ನಿಜಗುಣ ಶಿವಯೋಗಿಗಳಿಗೆ ಬಹು ಕೆಡನುಂಟು ಮಾಡಿದ್ದು ಬಹು ವಿಷಾದವೆನಿಸುವದು.

ಸಮಾಧಿಯಲ್ಲಿ ಕೂಡ್ರುವತನಕ ಮಾನಸಿಕವಾಗಲಿ, ಶಾರೀರಿಕವಾಗಲಿ, ಬೌದ್ಧಿಕವಾಗಿ ವಾಚಕವಾಗಲಿ, ಕಾಯಕಗಳು ಬೇಕಾಗುವವೆಂದು ಪ್ರತಿಯೊಬ್ಬರಿಗೆ ಈಗ ಅನಿಸಿರಲಿಕ್ಕೆ ಸಾಕು. ಸಮಾಧಿಯಲ್ಲಿಯೂ ಅತಿ ಸೂಕ್ಷ್ಮ ಕ್ರಿಯೆಗಳು ನಡೆದಿರುವವೆಂದು ಸಹ ತೋರುವದು. ಈಗ ದೇಹಬಿಟ್ಟ ಶ್ರೀ ಶಿವಾನಂದ ಸ್ವಾಮಿಗಳು ಸಹ ಸತ್ತಿಲ್ಲೆಂದು ನೀವೇ ಹೇಳುವಿರಿ. ಅವರು ಮಠವ ಹಾಗೂ ಅವರ ಶಿಷ್ಯರ ಬಗ್ಗೆ ಸದಾ ಕಾರ್ಯಗೈಯುತ್ತಿರುವರೆಂದು ನಾವು ಹೇಳುವದರ ತಾತ್ಪರ್ಯವಾದರೂ ಏನು ? ಮುಕ್ತಾತ್ಮರೂ ಕೂಡ ಲೋಕಕಲ್ಯಾಣಕ್ಕಾಗಿ ಸೂಕ್ಷ್ಮವಾಗಿ ದುಡಿಯುತ್ತಿರುವ ಅನುಭವವಾಗುತ್ತಿರುವದು ನಿಜಗುರಣರು ಶಕ್ತಿ ವಿಶಿಷ್ಟಾದ್ವೈತಗಳೆಂದು ಧಾರಾಳವಾಗಿ ಹೇಳುವೆನು.

" ನಾಯಮಾತ್ಮಾ ಬಲಹೀನೇನ " ಬಲಹೀನರಿಗೆ ಆತ್ಮಜ್ಞಾನವಾಗುವದಿಲ್ಲೆಂದು ಉಪನಿಷತ್ತುಗಳಲ್ಲಿ ಹೇಳಿದ್ದಾರೆ. ಅಂದರೆ ಶಕ್ತಿಯ ನೆರವಿಲ್ಲದೆ ಆತ್ಮವನ್ನು ಯಾರೂ ಹೊಂದಲಾರರು. ಅವಳು ಕೃಪೆದೋರಿ ತನ್ನ ಮಾಯೆಯನ್ನು ಓರೆ ಮಾಡಿದಮೇಲೆ ಆತ್ಮನ ದರ್ಶನ ಪರಮಾತ್ಮನ ಕೀಲಿ ಹಾಗೂ ಕೀಲಿ ಕೈಗಳೆರಡೂ ಆದಿಶಕ್ತಿಯ ಕೈಯಲ್ಲಿಯೇ ಇರುವದು. ಇದರಿಂದಲೂ ಶಕ್ತಿ ವಿಶಿಷ್ಟಾದ್ವೈತವೇ ಸಿದ್ಧವಾಗುವದು ಜಗತ್ತೇ ಇದೇ ತತ್ವದಿಂದ ಮುಂದೆ ಸಾಗಿದ್ದರೂ ಕೆಲವರು ಅಜ್ಞಾನಕ್ಕೆ ಆದಿಶಕ್ತಿಯನ್ನು ಅಲ್ಲಗಳೆಯುವರು. ನಮ್ಮ ಲಿಂಗ ತತ್ವವೂ ಕೂಡ ಅದನ್ನೇ ಪ್ರತಿಪಾದಿಸ್ಸುವದು. ಪೀಠ = ಆದಿಶಕ್ತಿ = ಚಿತ್, ಪೆಂಡಿಕೆ = ಪರಮಾತ್ಮ = ಸತ್, ಜಲಹರಿ = ಆನಂದ ಶಿವಶಕ್ತಿಯರ ಮಿಲನವಾದರೆ ಶಿವಯೋಗವಾಗುವದು. ಸಹಸ್ರಾರದಲ್ಲಿಯ ಶಿವನನ್ನು ಮೂಲಾಧಾರದಲ್ಲಿಯ ಕುಂಡಲಿನಿ ಶಕ್ತಿಯು ಆರೂ ಚಕ್ರಗಳನ್ನು ಏರಿಕೂಡಿದರೆ ಶಿವಯೋಗವಾಗುವದೆಂದು ಪ್ರತಿಯೊಂದು ಯೋಗದಲ್ಲಿ ಶಿವಶಕ್ತಿಯರ ಮಿಲನವನ್ನೇ ಸೂಚಿಸುವದರಿಂದ ಬರೇ ನಿಜಗುಣ ಶಿವಯೋಗಿಗಳೇಕೆ ಸಕಲರೂ ಸಕಲ ಧರ್ಮಿಯರೂ ಶಕ್ತಿ ವಿಶಿಷ್ಟಾದ್ವೈತಿಗಳೆಂದು ಧಾರಾಳವಾಗಿ ಹೇಳಬಹುದು.

ನನಗೆ ಈ ಅಧ್ಯಕ್ಷಸ್ಥಾನವನ್ನು ಕೊಟ್ಟು ಮನ್ನಿಸಿದ ಮಠದ ಅಧಿಕಾರಿಗಳಾದ ಶ್ರೀ. ನಿ. ಪ್ರ. ಸದಾಶಿವಾನಂದ ಮಹಾಸ್ವಾಮಿಗಳ ಹಾಗೂ ಸಕಲ ಭಕ್ತಜನರನ್ನು ಅಭಿವಂದಿಸಿ ಆಭಾರಮನ್ನಿಸಿ ಸಭೆಯನ್ನು ಮುಕ್ತಾಯಗೊಳಿಸಿದೆನು.

# ನಿಜದ ಅರಿವು.

—ಸಂಪಾದಕರು



(೧)

||ರಾಗ ದೇಸಿ|| ಹಲವು ಮಾತು|| ಗಳಿಂದ ಲೇನು ಸಾಧನವಹುದು| ನೆಲೆಯರಿದು ನಿಮ್ಮ ನಿಜವನು ಪೇಳಿರಣ್ಣಾ ||ಪಲ್ಲ||

ವಾತಚರ ಯೆನಿಸಿಕೊಂಬುದರ ಪೆಸರೇನು ಖ| ದ್ಯೋತಾಬ್ಜ ಸರಣಿ ಯೆನಿಪುದರ ನೆಲೆಯೇನೂ| ಸಾತಿಶಯದಪಸರ್ಗ ಬಿಂದು ಶಕ್ತಿಗಳೇನು| ರೀತಿ ಯಿಂದಿದರ ಬಗೆಯನು ಪೇಳಿರಣ್ಣಾ ||೧||

ಶಿವ ಬೀಜವೆಂಬೆರಡು ನಿರುತಲಿಹ ನೆಲೆಯಾವು| ದವಿರಳ ತ್ರಿಕೂಟ ದೊಳು ಸುತ್ತಿರುವದೇನು|| ತವೆ ತಾನೆ ಬಿಡದೆ ಪಾಡುತಲಿರ್ಪ ಯುವತಿ ಯುಳ| ಸವಿ ನುಡಿಯ ಸೊಬಗಿನಿರವನು ಪೇಳಿರಣ್ಣಾ ||೨||

ತತ್ವ ಮೂರರ ಮೂಲವೇನು ಮುವತ್ತಾರು| ತತ್ವಗಳ ಲಕ್ಷಿಸುವ ಲಕ್ಷಣವದೇನು| ತತ್ವ ಮಸಿ ಸಾದಾಖ್ಯಂಗಳರ್ಥವದು ತಾನೇನು| ತತ್ವಜ್ಞರು ಗಳೆಂಬುವರು ಪೇಳಿರಣ್ಣಾ ||೩||

ಬುಡ ಮೇಲು ಕೊನೆಯು ಕೆಳಗಾಗಿ ರಾಜಿಸುತಿರ್ಪ| ಬುಡ ಮೊದ ಲೊಳಡಗಿಹನ ಕುರುಹವೇನು| ಬಿಡದೆ ಯೀತನ ಕೈಯ್ಯೊಳಡಗಿರ್ದ ವಸ್ತು ವನು| ನುಡಿ ಜಾಣರುಗಳೆಂಬುವರು ಪೇಳಿರಣ್ಣಾ ||೪||

ಆರಣ್ಯದಾವಲ್ಯ ಸ್ಸೈಲಭ್ರೂಮಧ್ಯದೊಳು | ತೋರಿಯಡಗುತಿರ್ಪ ಮಿಂಚಿನಿರವೇನು। ಘೋರನಿಸುತಾರ್ಭಡಿಸು ತಿಹಗುಡುಗಿನಿರವೇನು| ಮೀರಿ ಸುರಿವುತಲಿರ್ಪ ಮಳೆಯ ಪೆಸರೇನೂ ||೫||

ಈರಾರು ಬೆರಳುಗಳ ಮೇಲೆ ಬೆಳಗುವದೇನು| ಕಾರ್ಮುಗಿಲ ಮಧ್ಯ ದೊಳು ಮಾರ್ಪೊಳೆವದೇನು | ನೀರಬೊಬ್ಬುಳಿಕೆಯೊಳಗುರಿವುತಿಹ ಸೊಡ ರೇನು|| ತಾರಕವನರಿವ ಜಾಣರು ಪೇಳಿರಣ್ಣಾ ||೬||

ಲಿಂಗಾಂಗ ಸಂಯೋಗ ದಿಂಗಿತವದೇನು ಸ | ರ್ವಾಂಗದೊಳ ಹೊರಗೆಲ್ಲ ತುಂಬಿರುವದೇನೂ| ಕಂಗಳಾಗ್ರದೊಳೆ ಶಿವ ಕಮಲನಾಳದೊಳು ಗುರು| ಸಂಗನೊಳ್ಪಿರದಿಹುದೆ ನಿಜಕಾಣಿರಣ್ಣಾ ||೭||

(೨)

||ರಾಗ ದೇಸಿ|| ಜ್ಞಾನ ಮುದ್ರೆಯ ಮರ್ಮವರಿಯೆ ಗುರು ಕೃಪೆಯಿಂದ | ತಾನೆ ಗೋಚರವಹುದು ಪರವಸ್ತುವೂ ||ಪಲ್ಲ||

ಒಳಗೆ ಜೋತಿರ್ಲಿಂಗ ದೊಳ್ಮನವ ನಳವಡಿಸಿ | ಬಳಿಕ ನಾಸಾಗ್ರವೆಂತೆಂಬ ತಾಣದೊಳು| ಥಳ ಥಳನೆ ಹೊಳೆವ ಜ್ಯೋತಿಯು ಕಾಣುತಿಹುದು| ಹೆಳಚದೆವೆಗಳನು ಸ್ಥಿರಗೊಳಿಸಿ ನೋಡುತಿರಲೂ ||೧||

ಪನ್ನೆರಡು ಬೆರಳುಗಳ ಪರಿಪ್ರಮಾಣ ದೊಳಿರ್ಪ | ಚಿನ್ನದುಪ್ಪರಿಗೆಯಾಗ್ರದೊಳು ರಾಜಿಸುವ | ಮುನ್ನೀರ ನಡುವೆ ನೋಡುವದಕತಿಶಯವಾಗಿ| ಚನ್ನೆಸೆವ ಮಡುವಿನೊಳುರಿಯು ಕಾಣುತಿಹುದೂ ||೨||

ವೇದ ವೇದಾಂತ ಪಂಡಿತರಗಸದಳವಾದ | ಮೂದೆರದ ಭುವನಗಳ ಮೀರಿದಭರದಾ | ನಾದಲಯ ದೊಳಗೆಸೆವ ಗುರುಸಂಗಮೇಶ್ವರನ | ಪಾದ ಪಂಕಜ ದೊಳ್ಮಯುವದಹುದೂ ||೩||

(೩)

||ರಾಗ ದೇಸಿ|| ಗುರು ಕರುಣವನು ಪಡೆದು ಬೆರಸ ಬಲ್ಲಡೆ ಯೋಗಿ| ಪರತರಾನಂದಮಯ ಬ್ರಹ್ಮದೊಳು ಮನವಾ ||ಪಲ್ಲ||

ಧರಣಿಯಗ್ರದ ಜಲದ ಮಧ್ಯ ಕೃಷ್ಣಾಶ್ರಯದ | ಪುರದ ದ್ವಾರಾವತಿಯ ಅರಮನೆಯೊಳೂ| ವರದವಾಗೀಶ್ವರಿಯ ಪೀಠಾಗ್ರ ಪ್ರಣವದೊಳು| ನೆರೆದು ರಾಜಿಪನೆತಾರಕ ಯೋಗಿವರನೂ ||೧||

ಮಂಡಲ ತ್ರಯದೆರಡು ಮಂಟಪದೊಳೆಸವುತಿಹ| ಪುಂಡರೀಕಾಗ್ರದೊಳಗಿರ್ಪ ಲಿಂಗವನು|| ಕಂಡು ಕಣ್ಣೆವೆ ಮುಗಿದು ಮನ ಮುಳುಗಿ ಮೈಮರೆದ| ಖಂಡಿತವನಗಲಿರಲು ರಾಜ ಶಿವಯೋಗೀ ||೨||

ನೆಲನಗ್ನಿ ಯಾಗಸಗಳಾರು ತಾಣಗಳಲ್ಲಿ | ಬರಿದು ಕರಶಾಖೆಗಳನು ಕೂಡೆ | ಜಲಜಸಖ ಶಶಿ ಬಿಂಬದೊಲು ಕಾಣ್ಬ ಬೆಳಗಿನೊಳು | ನಲಿದು ಮನವಳಿದವನೆ ಸಂಗಮೇಶ್ವರನೂ ||೩||

(೪)

||ರಾಗ ದೇಸಿ|| ನಾದವನು ಬಿಂದುವನು ಕೇಳಿ ಕಂಡುದೆ ಮುಕ್ತಿ| ನಾದಮಯ ಗುರು ಕರುಣವಾದ ಮಹಿಮಂಗೆ ||ಪಲ್ಲ||

ಮನೆಯ ಕಿಂಡಿಯೊಳೈದಿ ದಿನಕಿರಣದಂತಸ್ತ| ಘನ ದಂಡವನು ಪೊರ್ದಿ ತನು ಮಧ್ಯದಿ || ಅನುನಯು ದೊಳಜರಂಧ್ರ| ಪರಿಯಂತ ರಾಜಿಸಲು| ಘನದಮುಳಬ್ರಹ್ಮದ ಪ್ರಣಮ ಘೋಷವನೂ ||೧||

ರವಿ ಸೋಮ ಶಿಖಿ ಬಿಂಬತ್ರಯುದಷ್ಟದಳದಲ್ಲಿ | ತವೆನಿಖಿಲ ಸ್ವರ ವ್ಯಾಪಕಾಕ್ಷರಾತ್ಮಕದಿ || ಕವಿದು ರುದ್ರರು ಶಕ್ತಿಯರು ಕೂಡಿ ಸೇವಿಸಲು| ಅವರ ಮಧ್ಯದ ಸ್ವರ್ಣಮಯದ ಕರ್ಣಿಕೆಯೂ ||೨||

ಚೌದಳದ ಬತ್ತೀಸ ಕೇಶರಂಗಗಳ ನಡುವೆ | ಮೂದಳದ ವರ್ಣದ ಸೂಕ್ಷ್ಮ ಕರ್ಣಿಕೆಯೊ || ಳಾದರದಿ ನಾದದೊಳು ಬೆರೆದು ಬೇರಿಲ್ಲದಿಹ | ಊದಿ ಹ್ರಿಂಕಾರಿಣಿಯ ಪಾದ ತೇಜವನೂ ||೩||

ಬಲಿದು ಸಿದ್ಧಾಸನವನಿರದೆರಡು ಜ್ಯೋತಿಯನು | ಸುಲಭದೊಳು ಶೃಂಗಾಟ ಕೊಲಿದು ಭಾವದೊಳು || ಚಲಿಸದಡಕಿಲನಿಟ್ಟು ಮನಪವನವನು ನಿಲಿಸಿ| ನಲಿದು ನಾಸಾಗ್ರ ದೃಷ್ಟಿಯೊಳು ಧ್ಯಾನಿಸುತೇ ||೪||

ಇಂತಿದರ ಭೇದವನು ತಿಳಿಯಲಳವಲ್ಲ | ಕಂತುರಿಪು ಸಂಗಮೇಶ್ವರ ದಯದೊಳೆನಗೇ|| ಮುಂತಣದೊಳರುಹೆ ಕಂಡಾನು ಬದುಕಿದೆ ನಿಮ್ಮ| ಅಂತ ಕನ ಭಯವಳಿದು ಶರಣರಾಳಾಗೀ ||೫||

(೫)

||ರಾಗ ಸಾವೇರಿ|| ಏನ ಹೇಳಲಿ ತನ್ನ ತಾನೆ ಬೆಳಗುತಿದೆ ಜ್ಞಾನ ಜ್ಯೋತಿಯ ಫಲ ಬಗೆಗಳಾಗಿ ||ಪಲ್ಲ||

ಅಚ್ಚ ಬೆಳಗೆ ಕಾರ್ಮುಗಿಲ ಮಧ್ಯದೊಳುರೆ | ಸ್ವಚ್ಛವಾಗೆಸೆವ ಮಿಂಚಿನಬಳ್ಳಿಯ || ಮಚ್ಚಿ ಮುಸುಗಿನ ಪೊಗೆದ ಬಗೆಯೊ ನಾನಿದ| ರಚ್ಚ ರಿಯನು ಪೇಳಲಸದಳವೂ ||೧||

ತಾರಾ ಮಂಡಲವೊ ನಿರ್ಮಲ ಕಲಿಗಳೊ ತಿಳಿ| ನೀರೊ ಕಂಗೊಳಿ ಪಕ್ಕದ್ಯೊ ತಂಗಳೊ|| ಸೂರ್ಯನ ಬಿಂಬವೊ ದೀವಿಗೆಯೊ ಶಶಿ| ಕಿರಣವೊ ಮೂರಾರು ರನ್ನಂಗಳಿಂಗಿತವೋ ||೨||

ಕಂಗಳಗ್ರದ ಸುವರ್ಣದ ಕಂಜ ಕಿಂಜಲ್ಕ| ಶೃಂಗಾರ ದಂಡನಾಳಂಗಳಿರವೊ| ಮಂಗಳಾತ್ಮಕ ಗುರು ಸಂಗಮೇಶ್ವರನ ಬೆ| ಡಂಗಿನ ಬೆಳಗಿನ ಮಂಜರಿಯೋ ||೩||

(೬)

||ರಾಗ ಕಲ್ಯಾಣಿ|| ಕಾಣಿಸುತಿದೆ ನೋಡು ಕಂಗಳಾಲಿಯನಡು | ತಾಣದೀವಿಗೆಯು ಮೇಲೆ || ಘ್ರಾಣದಗ್ರದ ಗಂಗಯಮುನೆ ಸರಸ್ವತಿ| ಕೋಣೆಯೊಳಗೆ ಪ್ರಾಣ ಲಿಂಗವೆನಿಪ ಜ್ಯೋತೀ ||ಪಲ್ಲ||

ತಾಲು ಮೂಲದ ದ್ವಾದಶಾಂತವೆನಿಸಿಕೊಂ | ಬಾಲಯದಂಭರದಾ|| ನೀಲಬಿಂದು ವಿನಂತರಾಳದೊಳಗೆ ಸೂಕ್ಷ್ಮ | ಜಾಲಂಧರ ದೊಳ್ಬೆಲು ಬೆಳಗು ಬೀರುತಲಿದೇ ||೧||

ಬಿಳಿದು ಕರಿದು ಕೆಂಪು ನೆರದು ರಂಗಿಪ ಪೂರು | ಬಳಸಿನೊಳಗೆ ವಿರುಪಾ|| ನಳಿನಾಪ್ತ ರಾಜಾಗ್ನಿ ಮಂಡಲ ದೊಳಗೀಗಾ ||೨||

ಮತ್ತದರೊಳಗೇಳು ಸುತ್ತುಗಳಿಹವದ | ರತ್ನ ನಿಲುಕಿ ನೋಡಲೂ|| ಬಿತ್ತರವಾದ ವ ೂನತ್ತೆರಡು ಕುಸುಮಗಳ | ಮೊತ್ತದೊಳಗೆ ಮುದವೆತ್ತು ರಾಜಿಸುತಿದೆ ||೩||

ಪುರ ಬಾಣ ಶಶಿಕಳಾ ಸರಸಿಜಸಖ ನಿಧಿ| ಕರರುತು ಹದನಯನಾ|| ಸುರಚಿರ ದಳಗಳಿಂದೆಸೆವ ಮನೋಂಬುಜ| ವರ ಕರ್ನಿಕಾಗ್ರ ತೇಜೋಮಂಡಲ ದೊಳಗೆ ||೪||

ಬಿಂದುನಾದಾತ್ಮವಿದ್ಯಾವರ್ಣ ಸಚ್ಚಿದಾ | ನಂದ ಮಂಟಪದೊಳಗೆ || ಅಂದವಟ್ಟಿಹ ಶೂನ್ಯ ಸಿಂಹಾಸನದೊಳೊಲ | ವಿಂದೆನೆಲಸಿಹ ಸಂಗಮೇಶನೆನಿಪ ಜ್ಯೋತೀ ||೫||

(೭)

||ರಾಗ ದೇಸಿ|| ಮೂರು ಲಕ್ಷವನು ಬಾಹ್ಯಾಭ್ಯಂತರದೊಳು ಸುವಿ | ಚಾರದಿಂದರಿದು ಲಕ್ಷಿಸರು ಯೋಗಿಗಳೂ ||ಪಲ್ಲ||

ಮೂಲ ಕಂದದಿ ದಂಡವನು ತೊಡರಿ ನಡುನಾಡಿ| ಮೇಲಣಂಬರತನಕ ಬೆಳದು ಪರ್ಬಿಹುದು|| ಅವಲೋಕಿಸಲ್ಕಂತರದಿ ತಾವರೆ ಎಸಳೊಲು | ಹೋಲುವತಿಶಯದ ಮಿಂಚಿನ ಬಳ್ಳಿಯದನೂ ||೧||

ಮತ್ತೆ ನಾಸಿಕದ ತುದಿಯೊಳಗೆ ನಾಲ್ಕಾರೆಂಟು ಪತ್ತು ಪನ್ನೆರಡು ಬೆರಳುಗಳ ಮಿತಿಯೊಳಗೆ। ಬಿತ್ತರದಿ ಬಾಹ್ಯದೊಳು ಕರಿದು ಪೊಗೆ ಕೆಂಪು ಚೆಲು। ವೆತ್ತಿಹೆ ಬಿಳಿದು ಹೊಳದಿಗಳ ಪ್ರಕಾಶವನೂ ॥೨॥

ಬಳಿಕರವಿ ಶಶಿವಿದ್ಯುದನಲ ತಾರಾನಿಕರ। ಕಳೆಗಳೊಳ ಕೊಂಡು ಸ್ಥಲ ನಿಯಮಗಳನುಳಿದು॥ ಪೇಳ್ದಿ ಶ್ರೀ ಗುರು ಸಂಗಮೇಶ್ವರನ ಶ್ರೀಚರಣ। ನಳಿನವನು ಸಂಧಾನದೊಳಗೆ ಮನವೆರೆದೂ ॥೩॥

(೮)

॥ಭೈರವೀ ಏಸ್ತ ತಾಳಾ॥ ಶರಣು ಶರಣು ಗುರುದೇವನೆ ನಿಮ್ಮ ಶ್ರೀ। ಚರಣ ಕಮಲಗಳಿಗನು ದಿನವೂ ॥ಪಲ್ಲ॥

ತತ್ವ ತಾತ್ವಿಕಗಳ ಮೊತ್ತಗಳನು ಪೇಳಿ ಮತ್ತವನತಿಗಳೆವ ಬಗೆಯಾ। ಬಿತ್ತರ ದಿಂದುಪದೇಶವ ಮಾಡಿದ। ಸತ್ತು ಚಿತ್ತಾನಂದಮಯ ಗುರುವೇ ॥೧॥

ನೀಲತೋಯದ ನಿರ್ವಿಕಾರ ಕ್ಷಣಿಕರುಚಿ। ಜಾಲನಿವಾರ ಸುಖಗಳಂದದಾ ॥ ಜಾಲಾಗ್ರ ಕಳೆಯೊಳು ಬೆಳಗುವ ಬ್ರಹ್ಮದ ಮೂಲವ ನೆನಗರುಪಿದ ಗುರುವೇ ॥೨॥

ಕಂಗಳ ಕೊನೆಯ ಮೊನೆಯ ಮೇಲೆ ರಂಗಿಪ। ಸಂಗಮೇಶ್ವರನೆಂದೆನಿಸಿ ಪರಮ॥ ಮಂಗಳಾತ್ಮಕ ದಿವ್ಯ ಲಿಂಗಾನು ಸಂಧಾನ। ರಿಂಗಿತವನು ಪೇಳ್ದ ಘನ ಗುರುವೇ ॥೩॥

# ಜಗಜ್ಯೋತಿ ಬಸವೇಶ್ವರ ನಾಟಕವು.

(ಬರೆದವರುಃ— ಶ್ರೀ. ಶಿವಾನಂದ ಸ್ವಾಮಿಗಳು ಗವಿಮಠ ತೆಗ್ಗಿಹಳ್ಳಿ.)

---

(೧)

ಬೆಳಗಾಂವಿ ಕಲಾವೈಭವ ನಾಟ್ಯಸಂಘದ ಒಡೆಯ ಶ್ರೀ ಏಣಿಗಿ ಬಾಳಪ್ಪನವರು ರಂಗಭೂಮಿಯಲ್ಲಿ ದೊಡ್ಡ ಕ್ರಾಂತಿಯನ್ನೇ ಮಾಡಿರುವರು. ಇದಕ್ಕೆ ಮಹಾತ್ಮಾ ಜಗದಣ್ಣ ಬಸವಣ್ಣನವರ ನಾಟಕವನ್ನು ರಂಗಭೂಮಿಗೆ ತಂದುದೇ ಕಾರಣ. ಅನೇಕರು ಅನೇಕ ನಾಟಕಗಳನ್ನು ಆಡುವರು. ಆದರೂ ಶ್ರೀ. ಬಸವನ ನಾಟಕದಷ್ಟು ಯಾವವೂ ಯಶವನ್ನು ತಂದು ಕೊಟ್ಟಿಲ್ಲೆಂದು ಹೇಳಿದರೂ ಅಡ್ಡಿ ಇಲ್ಲ. ಇದಕ್ಕೆ ಕಾರಣವೂ ಇಲ್ಲದೆ ಇಲ್ಲ. ಬಸವನು ದ್ವಿತಿಯ ಶಂಭು ಎನಿಸಿದವನು. ಯಾರೂ ಇಂಥ ಪದವಿಯನ್ನು ಪಡೆದಿಲ್ಲ. ೮೦೦ ವರ್ಷಗಳ ಹಿಂದೆ ಪಂಚಭೂತಾತ್ಮಕ ಶರೀರ ಬಿಟ್ಟು ಹೋದರೂ ಎಲ್ಲ ಅವತಾರಿಕರಿಗಿಂತಲೂ ಇನ್ನೂ ಅವರು ಚೈತನ್ಯ ಸ್ವರೂಪರಾಗಿಯೇ ಇರುವದರಿಂದಲೇ ಶ್ರೀ. ಬಾಳಪ್ಪನವರು ಬಸವನ ಮೇಲಿನ ಭಕ್ತಿಗೆ ಮೆಚ್ಚಿ ಈತರದ ಜಯವನ್ನು ಅವರಿಗೆ ತಂದುಕೊಟ್ಟಿರುವದೇ ಸಾಕ್ಷಿಯಾಗಿರುವದು.

ಭಾರತದಲ್ಲಿ ಅನೇಕ ಋಷಿಗಳು, ಮುನಿಗಳು, ಯೋಗಿಗಳು ಅವತಾರಿಕರು, ಸಿದ್ಧರು, ಜ್ಞಾನಿಗಳು ಕವಿಗಳು ಮೊದಲಾದವರು ಜನ್ಮವೆತ್ತಿರುವರು. ಇವರೆಲ್ಲರು ಒಂದೇ ಸುಧಾರಣೆ, ಒಂದೇ ಕಾಯ, ಒಂದೇ ರೀತಿಯಲ್ಲಿಯೇ ಸಾಧನ ಮಾಡಿ ದುಡಿದು ಮಡಿದು ಹೋದರು. ಆದರೆ ಬಸವಣ್ಣನವರು ಈ ಎಲ್ಲರೂ ಮಾಡಿದ ಎಲ್ಲ ಕೆಲಸಗಳೆನ್ನು ಇವರೊಬ್ಬರೇ ಎಲ್ಲ ಬಗೆಯಿಂದ ಮಾಡಿದ್ದಾರೆ.

(೧) ಏಕೇಶ್ವರೀ ತತ್ವ, (೨) ಸರ್ವಂ ಖಲ್ವಿದಂ ಬ್ರಹ್ಮ. (೩) ಯಜ್ಞಯಾಗಾದಿಗಳನ್ನು ಮಾಡಬಾರದು. (೪) ಈ ಲೋಕದಲ್ಲಿ ಮತ್ತನಂತಲೋಕ (೫) ನೀನೊಲಿದರೆ ಪುಣ್ಯ. ನೀನೊಲಿದುದೇ ಪಾಪ. (೬) ಕ್ಷೇತ್ರತೀರ್ಥಗಳಿಗೆ ಹೋಗಬಾರದು. (೭) ಜ್ಯೋತಿಷದಲ್ಲಿ ಹುರುಳಿಲ್ಲ. (೮) ಹೋಮಹವನಮಾಡಬಾರದು. (೯) ಜಾತಿಭೇದ ಕುಲಮದ ಅಳಿಯುವದು. (೧೦) ಉದ್ಯೋಗದಲ್ಲಿ ಉಚ್ಚ ನೀಚತ್ವವಿಲ್ಲ. (೧೧) ಅಸ್ಪೃಶ್ಯತೆಯನ್ನು ಹೋಗ

ಲಾಡಿಸುವದು. (೧೩) ಸ್ತ್ರೀಯರಿಗೆ ಸರಿಸಮಾನ ಹಕ್ಕುಬಾಧ್ಯತೆಗಳು. (೧೪) ಅಡಿಯಿಂದ ಮುಡಿಯವರೆಗೆ ಬೇಕಾಗುವ ಎಲ್ಲ ಒಡವೆಗಳನ್ನು ಶಿವ ಭಕ್ತರೇ ತಯಾರಿಸಿದವುಗಳಿರಬೇಕು. (೧೫) ಸತ್ಯ. (೧೫) ನೀತಿ. (೧೬) ನ್ಯಾಯನಿಷ್ಠುರತೆ. (೧೭) ಕಾಯಕವೇ ಕೈಲಾಸ. (೧೮) ಜಂಗಮರಿಗೂ ಕೂಡ ಕಾಯಕದಿಂದಲೇ ಮುಕ್ತಿ. (೧೯) ಬೇಡಿಕೊಳ್ಳಬಾರದು. (೨೦) ಅನುಭವಮಂಟಪದ ಸ್ಥಾಪನೆ. (೨೧) ಧಾರ್ಮಿಕ ಕಾಂಗ್ರೇಸ ಸ್ಥಾಪನೆ. (೨೨) ಆರ್ಥಿಕ ಸರಿಸಮಾನತೆ. (೨೩) ಧಾರ್ಮಿಕ ಸರಿಸಮಾನತೆ. (೨೪) ಶಿವಭಕ್ತರೆಲ್ಲ ಒಂದೇ. (೨೫) ಷಟ್‌ಸ್ಥಲ ಸಿದ್ಧಾಂತ. (೨೬) ವಚನಶಾಸ್ತ್ರದ ರಚನೆ. (೨೭) ಜ್ಞಾನಿಗಳ ಕರಣ ಪ್ರಸಾದ ಕರಣತೀರ್ಥ ಪಾದೋದಕಗಳ ಮಹತ್ವ ತಿಳಿಸಿದ್ದು. (೨೮) ಅಹಿಂಸೆ. (೨೯) ಇಹಪರಗಳೆರಡನ್ನು ನಿಷ್ಕಾಮವಾಗಿ ಸಾಧಿಸುವ ರೀತಿ. (೩೦) ದಯವೇಬೇಕು ಸಕಲಪ್ರಾಣಿಗಳೆಲ್ಲರಲಿ. (೩೧) ಉಂಡುಉಪವಾಸಿ ಬಳಿಸಿಬ್ರಹ್ಮಚಾರಿ. (೩೨) ಬಲವಾದ ಸಾಧನೆ. (೩೩) ಪರಸೇವೆ ಪರರಿಗಾಗಿ ದುಡಿ, ಪರರಿಗಾಗಿ ಮಡಿ, ಪರರಿಗಾಗಿ ನುಡಿ, ಪರರಿಗಾಗಿ ಮಾಡು. (೩೪) ಲಿಂಗಾಂಗಸಾಮರಸ್ಯ. (೩೫) ಸಮಾಜಸತ್ತಾವಾದ. (೩೬) ಸತ್ಯಾಗ್ರಹ. (೩೭) ಅಸಹಕಾರ. (೩೮) (೩೮) ವ್ಯಕ್ತಿಸ್ವಾತಂತ್ರ್ಯ. ಹೀಗೆ ಅನೇಕ ದಿವ್ಯತತ್ವಗಳನ್ನು ಪ್ರಚಾರ ಮಾಡಿದ್ದಾನೆ. ಬಸವೇಶ್ವರರು ಯಾವತ್ತು ಅವತಾರಿಗಳ ಸಾರರೂಪವಾದ ಅವತಾರಿಕರು. ಅದಕ್ಕಾಗಿ ಅವರಲ್ಲಿ ಇನ್ನೂ ಅದ್ಭುತ ಶಕ್ತಿಪ್ರವಹಿಸುತ್ತಿದ್ದು ಬಸವನ ಭಕ್ತಿ ಮಾಡುವ ಶ್ರೀ ಬಾಳಪ್ಪನವರಿಗೆ ಜಯವು ಕಟ್ಟಿಟ್ಟ ಗಂಟಾಗಿರುವದು ಸಹಜವಾಗಿದೆ. ಯಾಕಂದರೆ ನಿತ್ಯ ೨೪ ತಾಸು ಸದಾ ಅವನ ಕಂಪನಿಯವರು ಬಸವನ ಬಗ್ಗೆ ಸದಾ ಧ್ಯಾನ ಚಿಂತೆ ಮನನ, ಸ್ಮರಣೆ, ಪ್ರಜ್ಞೆ ಅರಿವು, ವಿಚಾರ, ಕಾರ್ಯ, ಕ್ರಿಯೆ, ಅನುಭಾವ, ಜಪ, ನೆನಹು, ಕೇಳುವದು, ನೋಡುವದು, ಧ್ಯಾನ, ನಟನೆ, ನಡೆ, ನುಡಿ, ಮಾತು, ಕಥೆ, ಗಾಯನ, ನೃತ್ಯ, ಪೋಷಾಕು ಮಾಡಿಕೊಳ್ಳುವದು, ವಚನ ಹಾಡುವದು, ಈ ಎಲ್ಲವನ್ನು ಅವನ ಬಗೆಗೆ ಮಾಡುವದು ದಿವ್ಯಭಕ್ತಿಯಲ್ಲಿ ಬರುವದು. ಶ್ರೀ ಏಣಗಿ ಬಾಳಪ್ಪನವರ ಕಂಪನಿಯವರು ಸದಾ ಇವುಗಳನ್ನು ಮಾಡುವದರಿಂದ ಅವರೂ ಕೂಡ ಬಸವನ ದಿವ್ಯ ಭಕ್ತರಾಗಿರುವರು. ಅದಕ್ಕಾಗಿ ಸಚೇತನ, ಸಜೀವ, ಅಶರೀರಿ ಬಸವನ ಶಕ್ತಿಯು ಅವರಿಗೆ ಜಯವನ್ನೂ ಕೀರ್ತಿಯನ್ನೂ ಧನವನ್ನೂ ತಂದು ಲಕ್ಷೋಪ ಲಕ್ಷ ಜನರು ಬಸ

ವನ ನಾಟಕ ನೋಡಿ ಭಕ್ತರಾಗಿ ಭಕ್ತಿಮಾಡುವಂತೆ ಶ್ರೀ ಏಣಗಿ ಬಾಳಪ್ಪ ನವರು ಜನರಲ್ಲಿ ಸ್ಫೂರ್ತಿ ತಂದು ಕೊಡುವದೊಂದು ಹಿರಿದಾದ ಭಕ್ತಿಯ ಕೆಲಸವನ್ನು ಮಾಡುತ್ತಿರುವದರಿಂದ- ಶ್ರೀ ಬಸವ ಮಹಾದೇವರು ಅವರಿಗೆ ಈತರದ ಜಯಶ್ರೀಕೀರ್ತಿಗಳನ್ನು ತಂದಿರುವದು ಸಹಜವಿದೆ.

ಇಲ್ಲಿಯ ವರೆಗೆ ಸಾವಿರಾರು ನಾಟಕಗಳನ್ನೂ ಕಾದಂಬರಿಗಳನ್ನೂ ಅಚ್ಚು ಮಾಡಿಸಿದ್ದರೂ ಶ್ರೀ ಜಗಜ್ಯೋತಿ ಬಸವೇಶ್ವರ ನಾಟಕವನ್ನು ಯಾರೂ ಅಚ್ಚುಮಾಡಿಸಿದ್ದಿಲ್ಲ. ಈ ಕಾರ್ಯವನ್ನು ಶ್ರೀ ಬಾಳಪ್ಪನವರು ಪೂರ್ಣಮಾಡಿದ್ದರಿಂದ ಅವರು ಬಸವನ ಭಕ್ತಿಯನ್ನು ಗ್ರಂಥ ಮುಖಾಂತರ ಮಾಡಿದ್ದೂ ಕೂಡ ಈ ನಾಟಕ ಕಂಪನಿಗೆ ಜಯ ಶ್ರೀ ಕೀರ್ತಿಗಳು ಲಭಿಸಲಿಕ್ಕೆ ಕಾರಣವೂ ಆಗಿದೆ. ಹೀಗಾಗಿ ಶ್ರೀ ಬಸವೇಶ್ವರರು ಸಕಳ ಬಗೆಯಿಂದ ಶ್ರೀ ಬಾಳಪ್ಪನವರಿಗೆ ಮಾರ್ಗದರ್ಶನ ಮಾಡುತ್ತಿರುವರೆಂದು ಅವರನ್ನೂ ಅವರ ನಾಟಕವನ್ನೂ ಅವರ ಕಂಪನಿಯ ಜನರನ್ನೂ ಭೆಟ್ಟಿಯಾದವರಿಗೆ ಅನಿಸದೆ ಬಿಡುವದಿಲ್ಲ. ನಾನು ಅಕಸ್ಮಾತ್ತಾಗಿ ಮೊನ್ನೆ ಹುಬ್ಬಳ್ಳಿಗೆ ಬಂದು ಅವರಿಗೆ ಭೆಟ್ಟಿಯಾಗಿ ೯೨ನೇ ಪ್ರಯೋಗವನ್ನು ನೋಡಿದೆನು.

ಬಸವನ ಪಾತ್ರವು ೮೦೦ ವರ್ಷಗಳ ಹಿಂದಿನ ಬಸವನನ್ನೇ ನೆನಪು ತಂದುಕೊಡುವದು. ಆಗಿನ ಅವನ ಭಕ್ತಿ, ವಿನಯ, ನಿರಹಂಕಾರ, ಸತ್ಯ ನ್ಯಾಯನಿಷ್ಠುರತೆ, ಸರಳತೆ ಮೊದಲಾದ ಗುಣಗಳು ಶ್ರೀ ಬಾಳಪ್ಪನವರಲ್ಲಿ ಒಡೆದು ಕಾಣುತ್ತಿದ್ದವು. ಬಿಜ್ಜಳನ ಪಾತ್ರವೂ ಕೂಡ ಆಗಿನ ರಾಜನಂತೆ ಒಪ್ಪುತ್ತಿತ್ತು. ಪ್ರಭುದೇವರು ಚನ್ನಾಗಿ ಕಂಡರು. ಆದರೆ ಅದಕ್ಕೆ ತಕ್ಕಂತೆ ಶೂನ್ಯ ಸಿಂಹಾಸನ ರಚನೆಯಲ್ಲಿ ಕೊರತೆ ಇತ್ತು. ಭಟ್ಟ ಶೆಟ್ಟಿಯರು ತಕ್ಕಂತೆ ನಟಿಸುತ್ತಾರೆ. ಮಧುವರಸನು ಹರಳಯ್ಯನ ಜೋಡನ್ನು ಮೆಟ್ಟಿಕೂಡಲೆ ಮೈ ಉರಿದು ಹೊರಳಾಡಿದನು. ಆದರೆ ಆ ರೋಗ ಹೇಗೆ ಹೋಯಿತೆಂದು ತೋರಿಸಿಲ್ಲ. ಹರಳಯ್ಯನಿಗೆ ಶರಣಾದುದು ಬರಬೇಕಾಗಿತ್ತು. ಮೈ ಉರುಪು ಹೋಗಿ ಪುನಃ ಮಧುವರಸನ ಪಾತ್ರದ ಕೆಲಭಾಗವನ್ನು ನಟಿಸಿದಮೇಲೆ ಹರಳಯ್ಯನ ಮಗನಿಗೆ ತನ್ನ ಮಗಳನ್ನು ಕೊಟ್ಟನು. ಇದರಿಂದ ನಾಟಕದಲ್ಲಿ ಸಂಬಂಧೀಕರಣಕ್ಕೆ ಸ್ವಲ್ಪ ವ್ಯತ್ಯಾಸ ಬರುವದೆಂದು ತೋರುವದು. ನಾಟಕವು ದೊಡ್ಡದಾಗುವದೆಂಬ ಭಯದಿಂದ ಹೀಗೆ ಮಾಡಿರಬೇಕೆಂದು ನಮಗೆ ಅನಿಸಿರುವದು.

ಸಾಧಾರಣ ಬಸವೇಶ್ವರರ ಮೇಲಿನ ೩೪ ತತ್ವಗಳು ಇದರಲ್ಲಿ ಸ್ಥೂಲವಾಗಿಯೂ ಸೂಕ್ಷ್ಮವಾಗಿಯೂ ಅಡಕವಾಗಿವೆಯೆಂದು ಅನಿಸುವದು. ಸಂಪೂರ್ಣ ಬಸವೇಶ್ವರ ನಾಟಕವನ್ನು ಇವರು ಕೈಕೊಂಡರೆ ಇದಕ್ಕೂ ಹೆಚ್ಚಾಗಿ ಅವನ ತತ್ವಗಳು ಪ್ರಕಟವಾಗುವವು. ಅಲ್ಲದೆ ಸಂಪೂರ್ಣ ಬಸವೇಶ್ವರನ ನಾಟಕವು ಹೆಚ್ಚಿನ ಯಶವನ್ನು ತರುವದರಲ್ಲಿ ಸಂದೇಹವಿಲ್ಲ.

ಇವರು ನಾಟಕ ಮುಗಿದ ಕೂಡಲೇ ಶ್ರೀ ಬಾಳಪ್ಪನವರೇ ಸ್ವತಃ ಬಸವನ ಪಾತ್ರ ಧರಿಸಿಕೊಂಡೇ ಕೈಗೆ ಜೋಳಿಗೆ ಹಾಕಿಕೊಂಡು ಬಾಗೇವಾಡಿ ಬಸವನ ಗುಡಿಯ ಜೀರ್ಣೋದ್ಧಾರ ಕಾರ್ಯಕ್ಕೆ ಹಣವನ್ನು ಭಿಕ್ಷೆಬೇಡುವರು. ಆ ಹಣವು ಈಗ ಅಜಮಾಸು ೨೫೦೦ ರೂಪಾಯಿಗಳಷ್ಟು ಜಮೆ ಆಗಿದೆಯೆಂದು ಹೇಳಿದರು. ಈ ಕಾರ್ಯಕ್ಕೂ ಕೂಡ ಶ್ರೀ ಬಸವನು ಮೆಚ್ಚಿ ಶ್ರೀ ಬಾಳಪ್ಪನವರಿಗೆ ಜಯಶ್ರೀ ಕೀರ್ತಿಗಳನ್ನು ತಂದುಕೊಟ್ಟಿದ್ದಾನೆ. ಇದನ್ನು ತಿಳಿದು ನಾನು ನಮ್ಮ ಜನರು ಕಲ್ಲು ಮಣ್ಣಿನಲ್ಲಿ ಹೆಚ್ಚಾಗಿ ದುಡ್ಡನ್ನು ಹಾಕುತ್ತಿರುವದು ಈಗಿನ ಕಾಲದಲ್ಲಿ ಒಳಿತಲ್ಲ. ಶ್ರೀ ಫ. ಗು. ಹಳಕಟ್ಟಿಯವರು ಬಸವನ ಮತ್ತು ಶರಣರ ವಚನಗಳನ್ನು ಮೊದಲು ಬೆಳಕಿಗೆತಂದರು, ಶರಣರನ್ನು ಬದುಕಿಸಿದರು, ವಚನಗಳನ್ನು ಪುನಃ ಪಡೆವರು. ಕನ್ನಡ ನಾಡಿನಲ್ಲಿ ವಚನಕ್ಕೆ ಹಿರಿದಾದ ಸ್ಥಾನವನ್ನು ತಂದುಕೊಟ್ಟರು. ವೀರಶೈವವೇದರೇನು? ಅವರ ತತ್ವಗಳು ಎಂಥವು, ಎಂಬ ಎಲ್ಲ ವಿಷಯಗಳಿಗಾಗಿ ಅಖಂಡ ೩೦ ವರುಷ ಏಕಾಕಿಯಾಗಿ ಯಾರ ನೆರವನ್ನು ಬಯಸದೆ ಸೇವೆಗೈದು ನಮಗೊಂದು ಉಚ್ಚಸ್ಥಾನವನ್ನು ತಂದು ಕೊಟ್ಟರು. ವಚನವೆಂಬ ಆಸ್ತಿಯನ್ನು ದೊರಕಿಸಿದರು. ಅವರಿಗೆ ೪-೫ ಪದವಿಗಳು ಸಹ ಬಂದವು. ಅವರು ಸದಾ ಶರಣ ತತ್ವ, ಶರಣರ ಚರಿತೆ, ವೀರಶೈವ ಧರ್ಮ ಇವುಗಳ ಬಗೆಗೇ ಕುದಿಯುವರು. ಅವರ ಇನ್ನು ಅನೇಕ ಗ್ರಂಥಗಳು ಅಚ್ಚು ಆಗಿಲ್ಲ. ಆದ ಗ್ರಂಥಗಳು ಪುನಃ ಮುದ್ರಣ ಕಂಡಿಲ್ಲ. ಹೀಗಾಗಿ ಇವರ ಎಲ್ಲ ಕಾರ್ಯಕ್ಕೆ ನೀವು ನೆರವಾಗಬೇಕೆಂದು ಶ್ರೀ ಬಾಳಪ್ಪನವರಿಗೆ ಕೇಳಿಕೊಂಡೆನು. ಅವರು ಅತಿ ದಯ ವಿನಯ ಕಳಕಳಿಯಿಂದ ಒಪ್ಪಿಕೊಂಡರು. ಆದರೆ ಅವರ ವಿಷಯ ನಾನುಕೇಳಿಲ್ಲೆಂದು ಹೇಳಿದರು. ಶ್ರೀ ಮುಧೋಳ ಮೃತ್ಯುಂಜಯ ಮಹಾ ಸ್ವಾಮಿಗಳೂ ಕೂಡ ತಮ್ಮಲ್ಲಿಗೆ ಬಂದಾಗ ಇದನ್ನು ತಿಳಿಸಿದ್ದಾರೆಂದು ಹೇಳಿದರು. ಇದಕ್ಕೊಂದು ಯೋಜನೆಯನ್ನು ವಿಚಾರಿಸಿ ಮಾಡುವೆವೆಂದು ವಚನ ಕೊಟ್ಟಿರುವರು. ಶ್ರೀ ಬಾಳಪ್ಪನವರು ತಮ್ಮ ಶೀಲ ಸೌಜನ್ಯ

ಗಳಿಂದಲೂ ಜನಮನವನ್ನು ಆಕರ್ಷಿಸಿದ್ದಾರೆ. ನಾಟಕದಲ್ಲಿ ೭೦-೮೦ ಜನರ ದೊಡ್ಡ ಕುಟುಂಬವಿರುವದು. ಸಂಘದೊಡೆಯರೆಂಬ ಅಭಿಮಾನ ಅಹಂಕಾರ ಗಳು ಇವರಲ್ಲಿ ಇಲ್ಲ. ಎಲ್ಲರೊಡನೆ ಬಾಲಕರಂತೆ ನಿರಭಿಮಾನದಿಂದ ವರ್ತಿ ಸುವರು, ಆಟನಾಟಕದವರೆಲ್ಲ ಕೀಳರೆಂಬ ಭಾವನೆಯನ್ನು ಇವರು ಸಂಪೂರ್ಣ ಕಿತ್ತೊಗೆದು ಕಲಿತವರಲ್ಲಿ ಶಿರಿವಂತರಲ್ಲಿ ಅಧಿಕಾರಿಗಳಲ್ಲಿ ದೇಶಭಕ್ತರಲ್ಲಿ ಎಲ್ಲ ರಲ್ಲಿ ಗೌರವವನ್ನು ಪಡೆದಿದ್ದಾರೆ. ಇವರ ಜಯಶ್ರೀ ಕೀರ್ತಿಗಳಿಗೆ ಇದೂ ಕೂಡ ಒಂದು ಕಾರಣವಾಗಿದೆ ಎಂದು ಹೇಳಬಹುದು. ಇದಕ್ಕಾಗಿ ಅನೇಕ ಸ್ವಾಮಿಗಳು ಪಂಡಿತರು ಕವಿಗಳು ಬಂದು ಶ್ರೀ ಬಾಳಪ್ಪನವರನ್ನೂ ಅವರ ನಾಟಕವನ್ನೂ ಕಂಪನಿಯನ್ನೂ ಮುಕ್ತಕಂಠದಿಂದ ಹೊಗಳಿ ಹೋಗಿದ್ದಾರೆ, ಹೋಗುತ್ತಲೂ ಇದ್ದಾರೆ.

ಈ ನಾಟಕದಲ್ಲಿ ಹೆಚ್ಚಾಗಿ ಸ್ವಾಭಾವಿಕತೆಯ ಪ್ರವೇಶಗಳನ್ನೇ ಹಾಕಿ ದ್ದಾರೆ. ಅವರ ಪವಾಡ ಅದ್ಭುತ ಕೃತ್ಯಗಳನ್ನು ಹಾಕಿರುವದಿಲ್ಲ. ಈಗಿನ ಕಾಲದಲ್ಲಿ ಅವೆಲ್ಲ ಜಾದೂಗಾರರ ಆಟದಂತೆ ಆಗುವದೆಂದು ಬಗೆದು ಅದ್ಭುತ ಗಳನ್ನು ಹಾಕಿಲ್ಲ. ಇದೊಂದು ನಾಟಕದಲ್ಲಿಯ ವೈಶಿಷ್ಟ್ಯವೆಂದೇ ಹೇಳಬೇಕಾ ಗಿದೆ. ಈಗಿನ ಕಾಲದಲ್ಲಿ ಪ್ರಚಲಿತ ಉದಾತ್ತ ತತ್ವಗಳ ಸಾಮಾನ್ಯ ಸ್ವರೂಪ ಗಳನ್ನೇ ನಾಟಕದಲ್ಲಿ ಸೇರಿಸಿದ್ದು ಕೂಡ ಅದರ ಜಯಶ್ರೀ ಕೀರ್ತಿಗೆ ಕಾರಣವಾಗಿದೆ.

ಎಲ್ಲ ನಟ ನಟಿಯರ ಹಾವಭಾವ ಮಾತು ಹಾಡಿಕೆಗಳಲ್ಲಿ ಸರಲತೆ ಸ್ವಾಭಾವಿಕತನಗಳು ಇರುವದರಿಂದ ಜನಪ್ರಿಯವಾಗಿದೆ. ಕತ್ತಲೆಯಲ್ಲಿ ಪಡ ದೆಯ ಮೇಲೆ ನೆರಳಿನ ಛಾಯಾ ಚಿತ್ರಗಳನ್ನು ಕೆಲಸಂದರ್ಭದಲ್ಲಿ ತೋರಿಸುವ ದೊಂದು ಹೊಸ ವಿಚಾರವೇ ಸರಿ. ಜನರಿಗೆ ಇದರಿಂದ ಸಿನೇಮಾಗಳಲ್ಲಿ ಯಂತೆ ಪರಿಣಾಮವಾಗುವದು. ಹುಬ್ಬಳ್ಳಿಯಲ್ಲಿ ೮ ಸಿನೇಮಾ ಮಂದಿರಗ ಳುಂಟು. ನಾಟಕದ ಮುಂಭಾಗದಲ್ಲೆ ಒಂದು ಪ್ರಸಿದ್ಧ ಸಿನೇಮಾ ಮಂದಿರ ವಿದೆ. ಇವೆಲ್ಲವುಗಳ ಆಘಾತ-ಪ್ರತ್ಯಾಘಾತಗಳನ್ನೂ ಪೆಟ್ಟನ್ನೂ ತಡಕೊಂಡು ಈಗಿನ ಸಿನೇಮಾ ಯುಗದಲ್ಲಿಯೂ ಕೂಡ ಶ್ರೀ ಜಗಜ್ಯೋತಿ ಬಸವೇಶ್ವರ ನಾಟಕವು ೧೩೦ ನೇ ಪ್ರಯೋಗವನ್ನು ದಾಟಿದ್ದು ನೋಡಿ ಯಾರಿಗೆ ಹೆಮ್ಮೆ ಅನಿಸಲಿಕ್ಕಿಲ್ಲ ? ಇನ್ನೂ ಸಾವಿರದ ಪ್ರಯೋಗವನ್ನು ಸಹ ಕಾಣಬಹುದೆಂದು ಹೇಳಬಹುದು.

ಈ ನಾಟಕವನ್ನು ಸಿನೇಮಾದಲ್ಲಿ ತುಂಬಬೇಕೆಂದು ಅನೇಕರು ಹರಿಸಿದ್ದಾರೆ. ಶ್ರೀ ಬಾಳಪ್ಪನವರು ಇನ್ನೂ ಉಳಿದ ಶಿವಶರಣರ ಶಿವಶರಣೆಯರ ದಿವ್ಯ ಚರಿತೆಗಳನ್ನು ಹೆಚ್ಚಾಗಿ ನಾಟಕ ಸಿನೇಮಾ ರೂಪದಲ್ಲಿ ರಂಗ ಭೂಮಿಯ ಮೇಲೆ ತರಬೇಕೆಂದು ನಾವು ಹಾರೈಸುವೆವು. ಇದರಿಂದ ನಾಡ ನುಡಿಯ, ಧರ್ಮದ, ನಾಡಿನ, ವಚನದ, ಭಕ್ತಿಯ ಕರ್ಮಯೋಗದ ಸೇವೆಮಾಡಿದಂತೆ ಯಾಗುವದರಲ್ಲಿ ಸಂದೇಹವಿಲ್ಲ. ಇವರ ನಾಟಕದಿಂದ ಅನೇಕರು ನೀತಿಭಕ್ತಿಗಳನ್ನು ಕಲಿತಿದ್ದಾರೆಂದು ಅನಿಸುವದು.

ಬಿಜ್ಜಳನ ರಾಜಧಾನಿಯಾದ ಕಲ್ಯಾಣವನ್ನು ಬಸವನು ತೊರೆದುಹೋಗುವ ದೃಶ್ಯವು ಬಹು ಮನೋಭೇದಕ ಹೃದಯಭೇದಕವಾಗಿತ್ತು. ಜನರು ಅವನಿಗಾಗಿ ಗೋಳಾಡುವದನ್ನು ನೋಡಿದರೆ ನಮ್ಮ ಕಣ್ಣಲ್ಲಿಯೂ ಸ್ವಾಭಾವಿಕ ನೀರು ಹಾರಿದವು, ಮೈ ಜುಮ್ಮೆಂದಿತು. ಆಗಿನ ಬಸವನ ಸ್ಥಿತಿ ರೀತಿ ನೀತಿ ಗತಿಗಳನ್ನು ವರ್ಣಿಸುವದು ಕಠಿಣವಾಗಿ ತೋರಿತು. ಈ ಎಲ್ಲ ಕಾರಣಗಳಿಂದ ಈ ನಾಟಕವು ಹುಬ್ಬಳ್ಳಿಯಲ್ಲಿ ಜಯಶ್ರೀ ಕೀರ್ತಿಗಳನ್ನು ಫಳಿಸಿದೆ.

# ಬಸವೇಶ್ವರನ ಪೂರ್ವದಲ್ಲಿ ವೀರಶೈವ ಧರ್ಮ ವಿದ್ದಬಗ್ಗೆ ಐತಿಹಾಸಿಕ ಆಧಾರಗಳು

(ಲೇಖಕ— ವ್ಹಿ. ಜಿ. ಪಾಟೀಲ ರಿ. ಅ. ಡೆ. ಎ. ಇನ್ಸಪೆಕ್ಟರ ಬೆಳಗಾಂವ)



೧. ವೀರಶೈವ ಧರ್ಮಕ್ಕೆ ಆಗಮಗಳೇ ಆಧಾರ ಗ್ರಂಥಗಳಾಗಿವೆ. ಅಂದರೆ ಸಿದ್ಧಾಂತನಾಮಕ ಆಗಮಗಳ ಉತ್ತರಭಾಗದಲ್ಲಿ ಇದು ಪ್ರತಿಪಾದಿಸಲ್ಪಟ್ಟಿದೆ. ಆಗಮಗಳ ಕಾಲವು ಗೊತ್ತಾಗುವದಿಲ್ಲ. ಅದರಿಂದ ಅನಾದಿ ಎಂದು ಹೇಳುವ ಸಂಪ್ರದಾಯವು ಉಂಟಾಗಿದೆ. ವೇದಗಳಲ್ಲಿ ಆಗಮಧರ್ಮಗಳ ಖಂಡನೆ ಇರುವದರಿಂದಲೂ ಸಾಂಖ್ಯ ಯೋಗ ದರ್ಶನಗಳು ಆಗಮಗಳ ಆಧಾರದ ಮೇಲೆ ರಚಿಸಲ್ಪಟ್ಟಿರುವದರಿಂದಲೂ ಆಗಮಗಳು ವೇದಕ್ಕಿಂತ ಪ್ರಾಚೀನವಾಗಿರುವ ಸಂಗತಿಯು ಸಹಜವದೆ. ಅವುಗಳಲ್ಲಿ ಹೇಳಿದ ವೀರಶೈವ ಧರ್ಮವು, ವೈದಿಕ (ವೇದಗಳಲ್ಲಿ ಹೇಳಿದ) ಧರ್ಮಗಳಿಗಿಂತ ಪ್ರಾಚೀನವಾಗಿದೆ, ಎಂಬದರಲ್ಲಿ ಸಂದೇಹವಿಲ್ಲ. ವೇದಗಳ ಕಾಲವು ಕ್ರಿ. ಪೂ. ೩೦೦೦ ವರ್ಷಗಳೆಂದು ಪ್ರಾಜ್ಞರು ನಿಶ್ಚಯಿಸಿದ್ದಾರೆ. ಅದರಿಂದ ವೀರಶೈವಧರ್ಮದ ಉದ್ಭವದ ಕಾಲವು ಇದಕ್ಕೂ ಪ್ರಾಚೀನವಾಗಿರುವದೆಂಬ ಸಂಗತಿಯನ್ನು ಲಕ್ಷದಲ್ಲಿಡತಕ್ಕದ್ದಾಗಿದೆ.

೨ ಮಾನವ ಸುಧಾರಣೆಯ ನದಿಯ ಸಂಸ್ಕೃತಿಗಳಲ್ಲಿ ಸಿಂಧೂನದಿಯ ಸಂಸ್ಕೃತಿಯು ಕ್ರಿ. ಶ. ಪೂ. ೩೦೦೦ ವರ್ಷದ್ದು, ಅಂದರೆ ಇಂದಿಗೆ ೫೦೦೦ ವರ್ಷಗಳ ಹಿಂದಿನದೆಂದು ಸಂಶೋಧಕರು ಸಿದ್ಧ ಪಡಿಸಿದ್ದಾರೆ. ಅದು ದ್ರವಿಡಿಯನ್ ಸಂಸ್ಕೃತಿ. ಎಂಬ ಸಂಗತಿಯೂ ಸಿದ್ಧವಾಗಿದೆ. ಇಷ್ಟೇ ಅಲ್ಲ. ಕರ್ನಾಟಕದ ಚಿತ್ರದುರ್ಗದ ನೆರೆಯಲ್ಲಿರುವ "ಚಂದ್ರವಳ್ಳಿಯಲ್ಲಿ" ಭೂಗರ್ಭದೊಳಗೆ ದೊರೆಯುವ ಅವಶೇಷಗಳಿಗೂ ಸಿಂಧೂ ನದಿಯ ದಂಡೆಯ ಮೇಲಿರುವ " ಮೋಹೆಂಜೋದಾರೋ " ಎಂಬಲ್ಲಿ ದೊರೆಯುವ ಅವಶೇಷಗಳಿಗೂ ವಿಶೇಷ ಹೋಲಿಕೆಯದೆ. ಅದರಿಂದ ಇವೆರಡರಲ್ಲಿ ಬಾಂಧವ್ಯ ಉಂಟೆಂದು ಹೇಳಿದರೆ ತಪ್ಪಾಗಲಾರದು.

ಮೋಹೆಂಜೋದಾರೋ ನಿವಾಸಿಗಳು ಪಶುಪತಿಯನ್ನು ಪೂಜಿಸುತ್ತಿದ್ದರು. ನಂದಿಯು ಅದರಂಗೆ ಪೂಜ್ಯವಾಗಿತ್ತು. ಲಿಂಗಧಾರಿಗಳು ಅಲ್ಲಿ ಇದ್ದರೆಂದು ಹೇಳಬಹುದಾಗಿದೆ. ಯಾಕಂದರೆ ಈಗ ವೀರಶೈವರು ಕೊರಳೊಳಗೆ ಧರಿಸುವ ಲಿಂಗದಂಥ (ಕಂಥೆ ಧರಿಸಿದ) ಒಂದು ಲಿಂಗವು ಅಲ್ಲಿ ದೊರೆತಿದ್ದು, ಅದನ್ನು ತಂದು ಬೆಂಗಳೂರ ಪ್ರಾಚೀನ ವಸ್ತುಸಂಗ್ರಹಾಲಯದಲ್ಲಿ ಇಟ್ಟಿದ್ದಾರೆ. ಈ ಅವಶೇಷಗಳಿಗೂ ವೀರಶೈವ ಧರ್ಮಕ್ಕೂ ವಿಶೇಷ ಸಾಮ್ಯತೆಯ ಉಂಟು. ಹೇಗಂದರೆ:– ಪಾಶುಪತ ಧರ್ಮವೇ ರೂಪಾಂತರ ಹೊಂದಿ ವೀರಶೈವವಾಗಿದೆ. ನಂದಿಯು ವೀರಶೈವರ ಪೂಜ್ಯದೇವತೆಯಾಗಿದೆ. ಕಂಥೆ ಧರಿಸಿದ ಲಿಂಗವಂತೂ ಇವರದೇ ಎಂದು ಹೇಳುವ ಅವಶ್ಯಕತೆಯೇ ಇಲ್ಲ. ಇವೆಲ್ಲವುಗಳ ಮೇಲಿಂದ ಮೋಹೆಂಜೋದಾರೋದಲ್ಲಿ ವೀರಶೈವ ಸಂಸ್ಕೃತಿ ಅಸ್ತಿತ್ವದಲ್ಲಿ ಇತ್ತೆಂದು ಹೇಳಬಹುದಾಗಿದೆ.

೩ ಉತ್ತರ ಭಾರತದಿಂದ ದಕ್ಷಿಣಾಪಥಕ್ಕೆ ಎಲ್ಲಕ್ಕೂ ಮೊದಲು ಬಂದ ಆರ್ಯ ಮಹಾಪುರುಷನು ಅಗಸ್ತ್ಯ ಋಷಿ ಎಂದು ಹೇಳುತ್ತಾರೆ. ಈತನು ನಾಶಿಕ, ಬದಾಮಿ (ವಾತಾಪಿಪುರ) ಐಹೊಳೆ ಬಾಳೆಹೊನ್ನೂರ (ರಂಭಾರಿಪು) ಇವುಗಳಮೇಲಿಂದ ತಮಿಳದೇಶಕ್ಕೆ ಹೋಗಿ ಅಲ್ಲಿಂದ ಜಾವಾದ್ವೀಪಕ್ಕೆ ಹೋದನು. ಅಲ್ಲಿ ಶೈವ ಧರ್ಮವನ್ನೂ ಸಂಸ್ಕೃತ ಭಾಷೆಯನ್ನೂ ಪ್ರಸಾರಮಾಡಿದನು. ಇವನು ಮಾಡಿದ ಮಹಾತ್ಕಾರ್ಯಗಳ ಉಪಕಾರ ಸ್ಮರಣೆಗಾಗಿ ಅಲ್ಲಿಯ ಜನರು ಇವನದೊಂದು ಪ್ರತಿಮೆಯನ್ನು ಮಾಡಿ ಪ್ರತಿಷ್ಠಾಪನೆಮಾಡಿದರೆಂದು ಕ್ರಿ. ಪೂ. ೭೬೦ರಲ್ಲಿ ಬರೆದ ಒಂದು ಶಿಲಾಶಾಸನವು ಅಲ್ಲಿಯ "ದಿನಯು" ಎಂಬ ಸ್ಥಳದಲ್ಲಿ ದೊರೆತಿದೆ. ಇದರ ಮೇಲಿಂದ ಅಗಸ್ತ್ಯ ಋಷಿಯು ಸುಮಾರು ಕ್ರಿ. ಪೂ. ೮೦೦ ವರ್ಷಗಳ ಹಿಂದೆ ಅಂದರೆ ಇಂದಿಗೆ ೨೮೦೦ ವರ್ಷಗಳ ಹಿಂದೆ ಉತ್ತರ ಭಾರತದಿಂದ ಜಾವಾದ್ವೀಪಕ್ಕೆ ಹೋದ ಸಂಗತಿಯು ಸ್ಪಷ್ಟವಾಗುತ್ತದೆ. ಈ ಅಗಸ್ತ್ಯ ಋಷಿಯು ರೇಣುಕರಿಂದ ವೀರಶೈವ ದೀಕ್ಷೆಯನ್ನು ಹೊಂದಿದರೆಂದು ವೀರಶೈವ ಧರ್ಮ ಗ್ರಂಥಗಳು ಸಾರುತ್ತಿವೆ. ಇದರಮೇಲಿಂದ ವಿಚಾರಿಸಿದರೆ ಇಂದಿಗೆ ೨೮೦೦ ವರ್ಷಗಳಹಿಂದೆ ರೇಣುಕರು ಇದ್ದರೆಂದು ಸಿದ್ಧವಾಗುತ್ತದೆ. ಅಗಸ್ತ್ಯ ಋಷಿಗೆ ಜಿತವಾತಾಪಿ ಎಂಬ ಬೇರೊಂದು ಹೆಸರೂ ಉಂಟು. ಯಾಕಂದರೆ ವಾತಾಪಿ ಎಂಬ ರಾಕ್ಷಸನನ್ನು ವಾತಾಪಿಪುರದಲ್ಲಿಯೂ (ಈಗಿನ ಬದಾಮಿಯಲ್ಲಿ)

ಇಲ್ವಲನೆಂಬ ರಾಕ್ಷಸನನ್ನು ಐಹೊಳೆಯಲ್ಲಿಯೂ ಕೊಂದು ಹಾಕಿದನೆಂದು ಇತಿಹಾಸವು ಹೇಳುತ್ತಿದೆ. ಬಾಳೆಹೊನ್ನೂರಲ್ಲಿ (ರಂಭಾಪುರಿ, ಮೈಸೂರ) ರೇಣುಕ ಅಗಸ್ತ್ಯರ ಆಶ್ರಮಗಳು ಈಗಲೂ ಉಂಟು. ಇಷ್ಟೇ ಅಲ್ಲದೆ ನೀಲ ಗಿರಿಯ ಒಂದು ಶಿಖರಕ್ಕೆ "ಅಗಸ್ತ್ಯಮಲಾಯಿ" ಎಂಬ ಹೆಸರೂ ಅದೆ. ಆದರಿಂದ ಅಗಸ್ತ್ಯ ಋಷಿಯ ಪ್ರವಾಸವು ಐತಿಹಾಸಿಕವಾಗಿದ್ದು ಅದು ಮೇಲಿನ ಸ್ಥಳಗಳಮೇಲಿಂದ ಆಗಿದೆ ಎಂದು ಒಡೆದುಕಾಣುತ್ತದೆ. ಅಂದರೆ ಆಕಾಲದಲ್ಲಿ ಕರ್ನಾಟಕದಲ್ಲಿ ವೀರಶೈವ ಧರ್ಮದ ಅಸ್ತಿತ್ವ ಇತ್ತೆಂದು ಸಿದ್ಧ ವಾಗುತ್ತದೆ.

೪ ರಾಮಾಯಣಕ್ಕೆ ಆಧಾರ ಪುರುಷನಾದ ಕಿಷ್ಕಿಂಧೆಯ ಹನುಮನು ವೀರಭದ್ರನಿಂದ ಲಿಂಗಧಾರಿಯಾಗಿದ್ದಾನೆ. ಈಶ್ವರನ ಆತ್ಮಲಿಂಗವನ್ನು ತಕ್ಕೊಂಡು ಹೋಗುವಾಗ ರಾವಣನು ಅದನ್ನು ಗೋಕರ್ಣದಲ್ಲಿ ಕೆಳಗೆ ಇಟ್ಟ ದ್ದರಿಂದ ಅದು ಅಲ್ಲಯೇ ಉಳಿಯಿತೆಂದು ಗೋಕರ್ಣ ಮಹಾಬಲೇಶ್ವರ ಪುರಾಣವು ಹೇಳುತ್ತದೆ. ಅಂದಮೇಲೆ ರಾಮಾಯಣ ಕಾಲದಲ್ಲಿ ಲಿಂಗಧಾ ರಣ ಮಾಡಿಕೊಳ್ಳುವ ಪರಿಪಾಠವು ಅಥವಾ ವೀರಶೈವ ಧರ್ಮವು ಇತ್ತೆಂದು ಹೇಳಬೇಕಾಗುತ್ತದೆ.

೫ ಧರ್ಮರಾಜನ ಯಜ್ಞಕ್ಕೆ ಬಂದ ಬ್ರಾಹ್ಮಣರಲ್ಲಿ ಲಿಂಗಧಾರಿ ವರ್ಗ ವೊಂದು ಇತ್ತೆಂದು ಮಹಾಭಾರತವು ಹೇಳುತ್ತದೆ. ಆದ ಕಾರಣ ಮಹಾ ಭಾರತ ಕಾಲದಲ್ಲಿಯೂ ಲಿಂಗಧಾರಿಗಳು (ವೀರಶೈವರು) ಇದ್ದರೆಂಬುದನ್ನು ಬೇರೆಹೇಳುವ ಅವಶ್ಯಕತೆ ಇಲ್ಲ.

೬ ಇಂದಿಗೂ ವೀರಶೈವರಿಗೆ ಪರಮ ಪೂಜ್ಯರಾದ ೬೩ ಮಂದಿ ಪುರಾ ತನರು ಕ್ರಿ. ಶ. ೧ನೇ ಶತಮಾನದಿಂದ ಕ್ರಿ. ಶ. ೯ನೆಯ ಶತಮಾನದ ವರೆ ಗಿನ ಕಾಲದವರಾಗಿದ್ದರೆಂದು, ಚಿದಂಬರ ಕ್ಷೇತ್ರ ನಿವಾಸಿಯಾದ ಶೆಕ್ಕಿರರ ಕವಿಯ ಪೆರಿಯ ಪುರಾಣವು ಹೇಳುತ್ತಿದೆ. ಇವರಲ್ಲಿ ಕೇವಲ ೮ ಜನರು ಮಾತ್ರ ವೀರಶೈವರಾಗಿದ್ದರೆಂದು ಇ. ಪಿ. ರೈಸರು ಹೇಳುತ್ತಾರೆ. ಆದರೆ ಕಲ್ಯಾಣದ ಬಸವೇಶ್ವರರೂ ಇತರ ಶಿವಶರಣರೂ ಯೋಗಿಕುಲ ಶಿರೋಮಣಿ ಗಳಾದ ನಿಜಗುಣರೂ ಇವರನ್ನು "ಆದ್ಯರು" "ಪುರಾತನರು" ಎಂಬ ಶಬ್ದ ಗಳಿಂದ ಸಂಬೋಧಿಸಿದ್ದನ್ನು ನೋಡಿದರೆ ಇವರೆಲ್ಲರೂ ವೀರಶೈವರಾಗಿದ್ದರೆಂದು ಘಂಟಾಘೋಷವಾಗಿ ಹೇಳಬಹುದಾಗಿದೆ.

೭ ಮದ್ರಾಸದ ಶಾಸನಖಾತೆಯ ಮುಖ್ಯಾಧಿ ಕಾರಿಗಳಾದ ಡಾ. ಹುಲ್ಟ್ಷ ಪಿ ಎಚ್. ಡಿ. ಇವರು ಕ್ರಿ. ಶ. ೬ ನೆಯ ಶತಮಾನದ ಕಾಂಚಿಯ ಪಲ್ಲವ ಅರಸರು ಲಿಂಗಧಾರಿಗಳಾಗಿದ್ದರೆಂದು ಕ್ರಿ. ಶ. ೧೮೯೦ರಲ್ಲಿ ಕೆಲವು ಶಾಸನಗಳನ್ನು ಇಂಗ್ಲಿಷ ಭಾಷಾಂತರದೊಂದಿಗೆ ಪ್ರಸಿದ್ಧಿಸಿದ್ದಾರೆ. ಅದರಲ್ಲಿ ನಮೂದಿಸಿದ ಶಾಸನು ಕೆಳಗಿನಂತೆ ಅವೆ. "ಸಾಲುವಕುಪ್ಪಂ" "ಮಾಮಲ್ಲಪುರ" ಎಂಬ ಗ್ರಾಮಗಳಲ್ಲಿ "ಅತ್ಯಂತಕಾಮ" ಎಂಬ ಅರಸನು ಬರೆಯಿಸಿದ ಶಾಸನಗಳೂ, "ತ್ರಿಚನಾಪಲ್ಲಿಯಲ್ಲಿ" ದೊರೆತ "ಗುಣಭಂಗ" ಶಾಸನಗಳೂ, "ಕಾಂಚಿ" ಹಾಗು "ವಾಯಲೂರುಗಳಲ್ಲಿಯ" "ರಾಜಸಿಂಹನ" ಶಾಸನಗಳೂ ಉಂಟು. ಇದರಿಂದ ೬ ನೆಯ ಶತಮಾನದಲ್ಲಿ ತಮಿಳನಾಡಿನಲ್ಲಿ ವೀರಶೈವವು ಇತ್ತೆಂದು ಕಂಡುಕೊಳ್ಳ ಬಹುದಾಗಿದೆ.

೮ ಬಸವೇಶ್ವರನಿಗಿಂತ ಸ್ವಲ್ಪೇ ಮೊದಲಿಗನಾದ "ರೇವಣಸಿದ್ಧನು" ವೀರಶೈವ ಧರ್ಮಪ್ರಸಾರ ಮಾಡಿದ ಸಂಗತಿಯು ಜಗಪ್ರಸಿದ್ಧವಾಗಿವೆ. ಈ ಪವಾಡ ಪುರುಷನು ವಾಸಿಸಿದ ಸ್ಥಳಗಳು ಇಂದಿಗೂ ಜಾಗ್ರತ ಕ್ಷೇತ್ರಗಳಾಗಿ ದಕ್ಷಿಣ ಭಾರತದಲ್ಲೆಲ್ಲ ವಿರಾಜಿಸುತ್ತವೆ. ಅವುಗಳಲ್ಲಿ ಕೆಲವು ಕ್ಷೇತ್ರಗಳನ್ನು ಮಾದರಿಗಾಗಿ ಇದರಡಿ ಕೊಡುವೆವು.

೧ ಕೊಲ್ಲಿಪಾಕಿ ( ಹೈದರಾಬಾದ ) ೨ ಕಾಂಚಿ ( ತಮಿಳುನಾಡು ) ೩ ರಂಭಾಪುರಿ (ಮೈಸೂರ) ೪ ಚಿತ್ರದುರ್ಗ (ಮೈಸೂರ) ೫ ಕಲ್ಯಾಣ (ಹೈದರಾಬಾದ) ೬ ಮಾಸೂರ (ಮುಂಬಯಿ) ೭ ರೇಣಾವಿ (ಮುಂಬಯಿ) ೮ ಕೊಲ್ಹಾಪುರ ೯ ಸಿದ್ಧಗಿರಿ (ಕೊಲ್ಹಾಪುರ ಹತ್ತರ) ೧೦ ಮಂಗಳವಾಡ (ಮುಂಬಯಿ)

ಈ ಸಂಗತಿಗಳನ್ನು ವಿಚಾರಿಸಿದರೆ, ಆಗಮ (ಅನಾದಿ) ಕಾಲದಿಂದ, ಬಸವೇಶ್ವರನು ಜನನವಾಗುವವರೆಗೆ " ವೀರಶೈವ ಧರ್ಮವು " ಅಸ್ತಿತ್ವದಲ್ಲಿ ಇತ್ತೆಂದು ಹೇಳಲಿಕ್ಕೆ ಬಾಧೆ ತೋರುವದಿಲ್ಲ.



# ಪ್ರಾರ್ಥನೆ



ಮಾಡು ಶಿವಲಿಂಗ ಪೂಜೆಯನಂತರಂಗದೊಳು ।
ನೋಡಿ ಸುಖಮಯ ಸಾಧನಗಳಿಂದೊಲಿದು ॥ಪ॥
ಹರನೆ ಸಕಲಾಧಾರನೆಂಬುದಾಸನವಖಿಳ ।
ಭರಿತನೀಶ್ವರನೆಂದು ತಿಳಿವುದಾಹ್ವಾನ ॥
ಪರನು ಶಿವಪದವೆ ಜಗವೆಂಬುವದೆ ಪಾದ್ಯವದು ।
ಹರುಷವಾರಿಧಿಯ ಭವನಹುದೆಂಬುದರ್ಘ್ಯ ॥೧॥

ಪಾವನಾತ್ಮಕನೀಶನೆಂಬುದಾಚಮನೀಯ ।
ಪಾವಿಮಳ ಶಮೆಯೆಂಬ ಸಲಿಲದಭಿಷೇಕ ॥
ಭಾವ ಪರಿಪೂರ್ಣವಾದುದೇ ವಸ್ತ್ರ ವಹಿತಕುಲ ।
ವಾವರಿಸದಿಹ ವಿದ್ಯೆಯದು ಯಜ್ಞಸೂತ್ರ ॥೨॥

ಮಿಗೆ ಮಂಗಳೋದಯವಲಂಕಾರವನು ಭವದ ।
ಸೊಗಸೆ ಲೇಪನವಧಿಕ ಕರುಣದಕ್ಷತೆಯು ॥
ಬಗೆಯಲದು ವಿಷಯವಾಸನೆ ವಿಲಯವೆ ಧೂಪ ।
ವಲಗದ ಪರಂಜ್ಯೋತಿಯದು ದೀಪವಹುದು ॥೩॥

ಭೇದವಡಕಿದ ಮತಿಯೆನ್ನೈವೇಧ್ಯ ವಸವರೂ ।
ಪಾದ ಸತ್ವಾದಿಗುಣ ವ್ರತಿ ತಾಂಬೂಲ ॥
ವಾದನೆವ ವರನಾದವಹುದು ಸೋಹಂಭಾವ ।
ದಾದರಣೆ ಯಳಿಯದಿರಲದೆ ಪ್ರದಕ್ಷಿಣವು ॥೪॥

ಬಹುತತ್ವವನು ಮೀರುವದು ನಮಸ್ಕಾರ ।
ವಹುದು ಗುರು ಶಂಭುಲಿಂಗದೊಳು ತನ್ನವನು ॥
ವಹಿತವೆನಿಸುವ ಯೋಗಮಾರ್ಗದಿಂದೊಡವೆರಸಿ ॥
ಸಹಜ ಕೈವಲ್ಯವಡೆಸುವೆ ವಿಸರ್ಜನವು ॥೫॥

– ಕೆ. ಪಿ. ಬಸವರಾಜಯ್ಯ
ಮು. ಚಿಕ್ಕಬಳ್ಳಾಪುರ

ಕಾಯಗುಣಗಳತಂದು ಜೀವದೊಳಗಿರಿಸಿ ಪ್ರಾಣಲಿಂಗಕ್ಕೆ ಸಮಾಧಾನ ಮಾಡಿ। ಆಶ್ರಮವ ಸ್ವೀಕರಿಸಿ ಅನಾಶ್ರಮವ ನೀಕರಿಸ ದ್ವೈತಾದ್ವೈತನಲ್ಲ ಲಿಂಗಸಂಗಿ ॥ ॥

ಕಾಯ ಶೂನ್ಯಲಿಂಗ ಪ್ರಾಣ ಶೂನ್ಯಶರಣ ಭಾವಭೇದಂಗಳಿಲ್ಲವಾಗಿ। ಒಳ ಹೊರಗುವನು ಸರ್ವಾಂಗ ಲಿಂಗದಲ್ಲಿ ಅನುಭವಕೆ ತರಲಿಲ್ಲದನುಪಮನು ॥೨॥

ಕಾರಣವಕಾರಣವು ಕಲ್ಪಿತವಕಲ್ಪಿತವು ಸಂಕಲ್ಪ ವಿಕಲ್ಪನಲ್ಲ ಸುಜ್ಞಾನಿಯಾಗಿ। ಸಾವಯುವ ನಿರವಯುವ ಸಂಗಿ ನಿಸ್ಸಂಗಿ ಪರಮಾತ್ಮ ತಾನಾದ ನಿಬೋರ್ಧ ಬೋಧಿ ॥೩॥

ನಿರ್ಭಾವ ನಿರ್ನಾಮ ನಿರ್ದೇಹ ದೇಹಿ ನಿರ್ಗುಣಕೆ ಅವಯವಾಕಾರ ರೂಪ ಪರತತ್ವ। ನಿಂಬಿಟ್ಟು ಉಭಯವಳಿದುಳಿದಾತ ತ್ರಿವಿಧಸಂಪನ್ನ ನೀತನುಭಯ ಅಂಗಸಂಗಿ ॥೪॥

ಲಿಂಗಭುಕ್ತ ಶೇಷಭುಕ್ತರಚ ಪ್ರಾಣಿನಿರ್ಗಮನಗಮನಿಗೆ ಗಮನವಿಲ್ಲ ಸ್ವತಂತ್ರ। ಕೂಡಲ ಚನ್ನಸಂಗಯ್ಯನಲ್ಲಿ ಅಸಾಧ್ಯ ಸಾಧಕನಾದ ಶ್ರೀಲಿಂಗಸಂಗಿ ॥೫॥

---

## ೫೯. ನಿರ್ದೇಹಾಗಮಸ್ಥಲ.

**ಸೂತ್ರ:**— ಇಂತು ಜೀವಾತ್ಮ ಅಂತರಾತ್ಮವೆಂಬ ತ್ರಿವಿಧ ಸ್ಥಲಂಗಳೇಕಮಾದ ಲಿಂಗವು ಪ್ರಾಣಲಿಂಗಿಯ ನಿರ್ದೇಹದಲ್ಲಿ ಸ್ವಭಾವ ಚರಿತ್ರವನೈದಿದ ಭೇದವೆಂತಿರ್ದುದೆಂದಡೆ ಮುಂದೆ ನಿರ್ದೇಹಾಗಮಸ್ಥಲವಾದುದು.

ಪದ–ರಾಗ–ಭೌಳಿ

ದೇಹ ಗುಣಗಳಳಿದು ನಿರ್ದೇಹಿಯಾದ ಶರಣನು ಬಹಿರಂಗದ। ಬಳಿಕೆ ಮಾಯಾಮೋಹವನ್ನು ಜರಿದನು ನೋಡಾ ॥ಪ॥

ಭಾವ ಬ್ರಹ್ಮವಾದ ಯತಿಗೆ ಇನ್ನಾವ ವೇಷ। ವೇತಕೊ ದೇಹಲಿಂಗವಾದ ಬಳಿಕಿನ್ನಾವ ಪದಗಳೇತಕೋ ॥೧॥

ಮಲವ ತೊಳೆಯಲರಿಯದಮಳ ಜಲಧಿ। ತೊಳೆವೆನೆಂಬೆಯು ಒಳಗೆ ಹೊರಗೆ ಲಿಂಗವಿರಲು ತೊಳಲಿ ಬಳಲಲೇತಕೋ ॥೨॥

ಮುತ್ತು ರತ್ನ ಸಿರತ ಘೃತಕೆ ಮತ್ತೆ ಪೂರ್ವ । ಕ್ರೀಗಳುಂಟೆ ನಿತ್ಯ ಮೂರ್ತಿ ಶರಣಗುಂಟೆ ಮತ್ತೆ ಪೂರ್ವ ಚರಿತವು ॥೪॥

ಬ್ರಹ್ಮ ವಿಷ್ಣು ರುದ್ರ ಪದದ ಪೇರ್ವೊಗಳನುವಾಗಿ । ಎಣಿಸದ ನಿರ್ಮಲದ ಲಿಂಗದಲ್ಲಿ ಸಂಬಂಧಿಸದ ಶ್ರೀ ಶರಣನು ॥೪॥

ಅಪ್ರತಿಮನಗಮ್ಯದಲ್ಲಿ ನಿಷ್ಪತಿಯನೈದಿದ । ಅಪ್ರಮಾಣ ಶ್ರೀ ಗುಹೇಶ್ವರನೊಳಿಪ್ಪಗಮ್ಯ ಶ್ರೀ ಶರಣನು ॥೫॥

---

## ೬೦. ನಿರ್ಭಾವಾಗಮಸ್ಥಲ.

**ಸೂತ್ರ**:— ಇಂತು ನಿರ್ದೇಹ ಚರಿತಾತ್ಮಕವಾದ ಲಿಂಗವು ಪ್ರಾಣಲಿಂಗಿಯಲ್ಲಿ ನಿರ್ಭಾವವಾದ ಚರಿತ್ರವೆಂತಿರ್ದುದೆಂದಡೆ ಮುಂದೆ ನಿರ್ಭಾವಸ್ಥಲವಾದುದು.

ಪದ–ರಾಗ–ನಾಟಿ

ಹೂವಿಲ್ಲ ಕಂಪು ಹೊನ್ನಿಲ್ಲದ ಬಣ್ಣ ಕಳೆಯಿಲ್ಲದ ಚಂದ್ರನ। ಪರಿಯಂತೆ ಪರಶಿವಯೋಗಾ ।ಪ॥

ಕಾಲಿಲ್ಲದ ನಡೆ ಕಣ್ಣಿಲ್ಲದ ನೋಟ ಹಾಲಿಲ್ಲದ ತುಪ್ಪದ ಪರಿಯ ನೊಡಾ । ನಾಲಗೆ ಇಲ್ಲದ ರುಚಿ ಕಿವಿಯಲಿ ಕೇಳದ ಹೇಳುವ ಪರಶಿವ ಯೋಗ ॥೧॥

ಆರಳಿಲ್ಲದ ಗೆಜ್ಜೆ ಹುರುಳಿಲ್ಲದ ಹಯನು ಕಬ್ಬುನವುಂಡ ನೀರಿನ ಪರಿಯಂನೋಡಾ । ವುರಿದಿಟ್ಟ ಬಿತ್ತನು ಮರಳಿ ನಾಟದ ಪರಿಯಂತೆ ಪರಶಿವಯೋಗಾ ॥೨॥

ತನುಗುಣಗಳ ನರಿಯದ ಸಮಾಧಿಯ ಮನವೊಲಿದು ನೆರೆವ ಸುಖ ನಿಮ್ಮ ನೆಲೆಯ । ಲರಿದು ನಿಜಗುಣಯೋಗ ಅನುಪಮ ಸುಖಿ ಶ್ರೀ ಸಿದ್ಧರಾಮೇಶತಂದೆ ॥೪॥

---

## ೬೧. ನಷ್ಟಾಗಮ ಸ್ಥಲ.

**ಸೂತ್ರ:—** ಇಂತು ನಿರ್ಭಾವ ಚರಿತ್ರಾ ಚರಿತ್ರಾತ್ಮಕವಾದ ಲಿಂಗವು ಪ್ರಾಣಲಿಂಗಿಯಲ್ಲಿ ಅವ ಚರಿತ್ರವು ನಷ್ಟವಾಗಿ ಆಗಮ ವಿರಹಿತವಾಡ ಭೇದ ವೆಂತಿರ್ದುದೆಂದಡೆ ಮುಂದೆ ನಷ್ಟಾಗಮಸ್ಥಲವಾದುದು.

ಪದ–ರಾಗ–ಭೂಪಾಳಿ

ಕೃತವ ಸಂಪಾದಿತ ಶರಣನು ಕೊಟ್ಟುಕೊಂಡಾಡುವ ದಂದುಗ ಮನ ವಿಡಿಯ ವೊಂದೆರಡರಾಶೆಯಿಲ್ಲದ ಶರಣನು ॥ ಪ ॥

ಅಚೇತನವ ಚೇತರಿಸಿ ಪೂರ್ವ ಬೀಜವ ಹಿಡಿದು ಆಚರಣೆಯ ನಾಚ ರಿಸೆ ಶರಣನು । ಆಯಿತಾಗದೆಂಬ ಶಂಕೆವಿಡಹಿತನು ಆಗಮುವನಾಗಮನೆ ಶರಣನು ॥ ೧ ॥

ಅಮೂರ್ತಿಯ ಮೂರ್ತಿಸನ ವರದೆಶೆ ವಶನಲ್ಲ ಹುಸಿದೆಶೆಯ ಹಿಡಿ ವನಲ್ಲ ಶರಣನು । ಮುಸಿಹೂಸಿ ಫಲಗಳನು ಹುಸಿದು ಮಾರುವನಲ್ಲ ತರು ನಾಮವಿಡಿದಿಹ ಶರಣನು ॥ ೨ ॥

ಅದರಿಂದ ಹೊರಗೆ ಬೇರೆ ತೋರುವನಲ್ಲ ಬೆರಸಿ ಬಿಚ್ಚುವನಲ್ಲ ಶರ ಣನು । ಆರೂಢಿಯದಲ್ಲಿ ಆಶೆ ದೋರುವನಲ್ಲ ಅಲ್ಲಿಂದತ್ತತ್ತ ಶರಣನು ॥೩॥

ಧಿಗಿಲು ಭುಗಿಲನೆ ಎದ್ದು ಹರಿದು ಹತ್ತುವನಲ್ಲ ನಿರವಯಕೆ ಚೌಪದ ವಿಲ್ಲ ನಾಲ್ಕು । ನೆಂಟಕ್ಕೆ ತಂದು ಎಂಟ ಹದಿನಾರುಮಾಡಿ ಸೃಷ್ಟಿಸಬಾರದ ಘನ ಶರಣಾ ॥ ೪ ॥

ತ್ರಿವಿಧದಲ್ಲಿ ನಿವವನೊಳೊಂದುವ ಕೊಳ್ಳ ಮುಗಿಲಯ್ಯನಾ ಘನ ಶರ ಣನು । ಕಂಪಿಸಲೀಯ ತುಳಕಲೀಯ ನವರೊಳೊಂದುವ ಹುಟ್ಟಿ ಕೂಡಲ ಚನ್ನಸಂಗನಲ್ಲಿ ಲಿಂಗೈಕ್ಯ ನೋಡಾ ॥ ೫ ॥

## ೬೨. ಆದಿಪ್ರಸಾದಿ ಸ್ಥಲ.

**ಸೂತ್ರ:**— ಇಂತು ನಿರ್ದೇಹಾಗಮ ನಿರ್ಭಾವಾಗಮ ನಷ್ಟಾಗಮವೆಂಬ ತ್ರಿವಿಧ ಸ್ಥಲಂಗಳೇಕವಾದ ಲಿಂಗವು ಪ್ರಾಣಲಿಂಗಿಯಲ್ಲಿ ಸುಖ ಪ್ರಸಾದ ಸ್ವರೂಪವನ್ನೈದಿದ ಭೇದ ವೆಂತಿರ್ದುದೆಂದಡೆ, ಮುಂದೆ ಆದಿಪ್ರಸಾದಿಸ್ಥಲವಾದುದು.

ಪದ–ರಾಗ–ಲಲಿತ

ಮಂಗಳವ ಪಾಡುವೆ ಲಿಂಗಕ್ಕೆ ಲಿಂಗ ಪ್ರಸಾದಿಗೆ । ಮಂಗಳ ಲಿಂಗ ಪ್ರಸಾದಿಗೆ ॥ ಪ ॥

ಲಿಂಗದ ಸಂಗದ ಕಾಯದ ಸ್ಥಿತಿಭೋಗಂ ಬಹು ಸ್ಥಾನ ಗ್ರಹಗುಣ ಸಕಲವ ಲಿಂಗದಲ್ಲೈಕ್ಯವ ಮಾಡುವನು॥ ಅಂಗ ಗ್ರಹ ಗುಣ ಲಿಂಗವ ತಂದು ಸಂಗದಿ ಸಂಪರ್ಕವ ಮಾಡಿ ಲಿಂಗದಲ್ಲಿ ಸಿದ್ಧಿಸಿದ ಪ್ರಸಾದದನುಭವಿಯಯ್ಯಾ ॥ ೧ ॥

ಲಿಂಗ ಸ್ಪರ್ಶನ ಮುಟ್ಟಲು ಯೋಗ್ಯವು ಲಿಂಗಕ್ಕೆ ಮುಟ್ಟಲಿತ್ತು ಪ್ರಸಾದ ಸ್ಪರ್ಶನ ಮುಟ್ಟಲು ಯೋಗ್ಯವು ಪ್ರಸಾದಿ ಮುಟ್ಟಿಪನು । ಲಿಂಗ ಮನದಲ್ಲಿ ನೆನೆಯಲು ಯೋಗ್ಯವು ಲಿಂಗಕ್ಕೆ ನೆನೆಯಲಿತ್ತು ಪ್ರಸಾದ ಮನದಲಿ ನೆನೆಯಲು ಯೋಗ್ಯವು ಪ್ರಸಾದಿ ನೆನೆವನು ॥ ೨ ॥

ಲಿಂಗ ಶ್ರೋತ್ರದಿ ಕೇಳಲು ಯೋಗ್ಯವು ಲಿಂಗಕ್ಕೆ ಕೇಳಲಿತ್ತು ಪ್ರಸಾದ ಶ್ರೋತ್ರದಿ ಕೇಳಲು ಯೋಗ್ಯವು ಪ್ರಸಾದಿ ಕೇಳುವನು ॥ ಲಿಂಗನಯನದಿ ನೋಡಲು ಯೋಗ್ಯವು ಲಿಂಗಕ್ಕೆ ನೋಡಲಿತ್ತು ಪ್ರಸಾದ ನಯನದಿ ನೋಡಲು ಯೋಗ್ಯವು ಪ್ರಸಾದಿ ನೋಡುವನು ॥ ೩ ॥

ಲಿಂಗ ಘ್ರಾಣಾದಿ ವಾಸಿಸಲು ಯೋಗ್ಯವು ಲಿಂಗಕ್ಕೆ ವಾಸಿಸಲಿತ್ತು ಪ್ರಸಾದ ಘ್ರಾಣದಿ ವಾಸಿಸಲು ಯೋಗ್ಯವು ಪ್ರಸಾದಿ ವಾಸಿಸುವನು । ಲಿಂಗ ಜಿಹ್ವೆಯೊಳು ರುಚಿಸಲು ಯೋಗ್ಯವು ಲಿಂಗಕ್ಕೆ ರುಚಿಸಲಿತ್ತು ಪ್ರಸಾದ ಜಿಹ್ವೆಯೊಳು ರುಚಿಸಲು ಯೋಗ್ಯವು ಪ್ರಸಾದಿ ರುಚಿಸುವನು ॥ ೪ ॥

ಲಿಂಗ ಸಂಸಾರದ ಜ್ಞಾತೃ ಜ್ಞಾನ ಜ್ಞೇಯವೆಂಬ ಸಕಲ ಪೂರ್ವಾಶ್ರಯವ ನತಿಗಳೆದು ಪ್ರಸಾದಿ ಸಂಸಾರದ ಸಾರವೇ ತಾನಾಗಿಪ್ಪನು ॥ ಕೂಡಲ ಸಂಗ ನಿಮ್ಮ ಜಂಗಮ ಲಿಂಗದಲ್ಲಿಯೆ ಕಂಡು ಭಕ್ತಿಸಂಗ ವಿಶೇಷದ ಲಿಂಗವೆಂದರಿದೆನು ದೇವಾ ॥ ೫ ॥

## ೬೩. ಅಂತ್ಯಪ್ರಸಾದಿ ಸ್ಥಲ.

**ಸೂತ್ರ:—** ಇಂತು ಶುದ್ಧಮುಖದಿಂದ ಆದಿಪ್ರಸಾದವನ್ನೈದಿದ ಲಿಂಗವು ಪ್ರಾಣಲಿಂಗಿಯಲ್ಲಿ ಸಿದ್ಧಮುಖದಿಂದ ಅಂತ್ಯಪ್ರಸಾದವನ್ನೈದಿದ ಭೇದವೆಂತಿರ್ದುದೆಂದಡೆ ಮುಂದೆ ಅಂತ್ಯಪ್ರಸಾದಿ ಸ್ಥಲವಾದುದು.

ಪದ—ರಾಗ — ವರಾಳಿ

ಶರಣನು ಸನ್ನಿಹಿತನು ಅಲ್ಲಲ್ಲಿಗೆ ನಡುಕಡೆಯಿಲ್ಲವಯ್ಯ ಅಚ್ಚ ಶರಣನು॥ಪ॥

ಉಪಮೆವಿಡಿದು ಉಪಾಧಿಕನಲ್ಲ ಉಪಾಯಕನಲ್ಲ ಶರಣನು ಬೆರಸಿ ತೋರಿಸಿ | ಮನ ಹರುಷದಿಂ ಪರುಷವೆ ದೊರೆಕೊಂಡಂತಾಯಿತ್ತಾಗಿ ॥೧॥

ರಚನೆವಿಡಿದು ರಂಜಕನಲ್ಲ. ಬೋಧವಿಡಿದು ಬೋಧಕನಲ್ಲ. ಆದಿ ವಿಡಿದು | ಆಗಮಿಕನಲ್ಲ. ಆಗಮವಿರಹಿತ ಪ್ರಸಾದಿಯಯ್ಯಾ ॥೨॥

ಒಡಲುವಿಡಿದು ನಡೆವವನಲ್ಲ ನುಡಿ ಎರಡರ ಹಂಗಿಗನಲ್ಲವಯ್ಯ ಹುರುಡು| ವಿಡಿದು ಬರಡಹನಲ್ಲ. ಎರಡಾಗಿನಲಾದ ಪ್ರಸಾದಿಯಯ್ಯಾ ॥೩॥

ಭ್ರಾಂತೆಂಬುದ ನೀ ಕರಿಸಿ ಸ್ವೀಕರಿಸನು ಅನ್ಯವಿಷಯಂಗಳೊಳಗೆ ಅಹಂಕರಿಸನು | ಬೇರೆ ಮದವೆಂಬುದಿಲ್ಲವಾಗಿ ನಿಸ್ಸಾರವಾದ ಶರಣನು ॥೪॥

ನಡೆಯು ಪ್ರಸಾದ ನುಡಿಯು ಪ್ರಸಾದ ನೋಟ ಪ್ರಸಾದ ಕೂಟ ಪ್ರಸಾದ | ಪ್ರಸಾದಿಯು ಪ್ರಸಾದದಿಂದ ಕೂಡಲಚನ್ನಸಂಗ ನಿಮ್ಮ ಲಿಂಗೈಕ್ಯನು ॥೫॥

---

## ೬೪. ಸೇವ್ಯ ಪ್ರಸಾದಿಸ್ಥಲ.

**ಸೂತ್ರ:—** ಇಂತು ಸಿದ್ಧ ಮುಖದಿಂದ ಅಂತ್ಯಪ್ರಸಾದ ಸ್ವರೂಪವನ್ನೈದಿದ ಲಿಂಗವು ಪ್ರಾಣಲಿಂಗಿಯಲ್ಲಿ ಪ್ರಸಿದ್ಧ ಮುಖದಿಂದ ತೃಪ್ತಿಯನ್ನೈದಿದ ಭೇದವೆಂತಿರ್ದುದೆಂದಡೆ ಮುಂದೆ ಸ್ಯೆವ್ಯ ಪ್ರಸಾದಿಸ್ಥಲವಾದುದು.

ಪದ-ರಾಗ-ಗುಂಡಕ್ರಿ

ಸಂಗಯೆಂದಂತೆ ಯೆಂದನಾಗಿ ಸಂಗವಾಯಿತ್ತು ಶ್ರೀ ಸಂಗನಬಸವಣ್ಣಂಗೆ ॥ಪ॥

ಸಂಗವಾಯಿತ್ತು ನಯನ ಅಂಗದಲ್ಲಿ ಲೀಯ್ಯವಾಗಿಯು | ಸಂಗವಾಯಿತ್ತು ಶ್ರೋತ್ರ ಅನ್ಯವನಾಲಿಸದೆಯು॥ ಸಂಗವಾಯಿತ್ತು ಘ್ರಾಣಪರಿಮಳವ ತೀವಿತಂದದ್ದು| ಸಂಗವಾಯಿತ್ತು ಮಹಿವಲರ್ಪಿಸಿ ಮಹಾಪ್ರಸಾದಿಯಾದ ॥೧॥

ಸಂಗವಾಯಿತ್ತು ಜಿಹ್ವೆ ಲಿಂಗದ ರುಚಿಯನೆ ಅರಿದು | ಸಂಗವಾಯಿತ್ತು ಲಿಂಗದಲ್ಲಿಯೆ ತಲ್ಲಿಯ್ಯವಾಗಿ || ಸಂಗವಾಯಿತ್ತು ಒಲ್ಲೆನರಿಯೆನೆಂಬ ಸಂದಳಿದು | ಸಂಗವಾಯಿತ್ತು ಮಹದಲರ್ಪಿಸಿ ಮಹಾಪ್ರಸಾದಿಯಾಗಿ ||೨||

ಸಂಗವಾಯಿತ್ತು ಲಿಂಗ ಮನ್ಮನ ಮಸ್ತಕದಲಿ | ಸಂಗವಾಯಿತ್ತು ಸಂದಳಿದು ನಿಜರೂಪಾಗಿ | ಸಂಗವಾಯಿತ್ತು ಭೃಂಗ ಸಂಪಗೆಯ ಗ್ರಹಿಸಿದಂತೆ | ಸಂಗವಾಯಿತ್ತು ಮಹದಲ್ಲಿ ಮಹಾ ಪ್ರಸಾದ ಸಂಯುತವಾಗಿ ||೩||

ಸಂಗವಾಯಿತ್ತು ಸ್ಪರುಶನ ಕ್ರಮುವರಿದು ತೋರಿದ | ಸಂಗವಾಯಿತ್ತು ಸ್ಪರ್ಶದ ಪರಮು ಸಖಿಯಾದೆನು | ಸಂಗವಾಯಿತ್ತು ಭಾವಸ್ಪರ್ಶ ಜೀವಸ್ಪರ್ಶನ ಹಿಂಗಿ | ಸಂಗವಾಯಿತ್ತು ಪ್ರಾಣಸ್ಪರ್ಶನದಿಂ ಪ್ರಸಾದಿಯಾದ ೪

ಸಂಗವಾಯಿತ್ತು ಜ್ಞಾತೃ ಜ್ಞಾನ ಜ್ಞೇಯುವನತಿಗಳೆದು ಸಂಗವಾಯಿತ್ತು ನಿಷ್ಪತಿಪದವೆ ತಾನಾಗಿ ಸಂಗವಾಯಿತ್ತು ಚಿದ್ಘನ ಬೆಳಗಿನೊಳಗೆ | ಸಂಗವಾಯಿತ್ತು ಕೂಡಲ ಚನ್ನಸಂಗನಲ್ಲಿ ಬಸವಣ್ಣಂಗೆ |೫|

ಇಂತೆಂಬಲ್ಲಿಗೆ ಶ್ರೀ ಮದೇಕೋತ್ತರ ಶತಸ್ಥಲಂಗಳಲ್ಲಿ ದೀಕ್ಷಾಗುರುಸ್ಥಲಾದಿಯಾಗಿ ಪರಜಂಗಮ ಸ್ಥಲಾಂತ್ಯಮಾದೊಂಬತ್ತು ಸ್ಥಲಂಗಳು ಒಂದನೆಯದಾದ ಶ್ರೀಮದಾಚಾರ ಲಿಂಗಸ್ಥಲಕ್ಕೆ ಕ್ರಿಯಾಗಮ ಸ್ಥಲಾದಿಯಾಗಿ ಜ್ಞಾನಾಚಾರ ಸ್ಥಲಾಂತಮಾದೊಂಭತ್ತು ಸ್ಥಲಂಗಳು ಎರಡನೆಯದಾದ ಶ್ರೀಮದ್ಗುರು ಲಿಂಗಸ್ಥಳಕ್ಕೆ ಕಾಯಾನುಗ್ರಹ ಸ್ಥಲಾದಿಯಾಗಿ ಸೇವ್ಯ ಸ್ಥಲಾಂತ್ಯಮಾದೊಂಭತ್ತು ಸ್ಥಲಂಗಳು ಮೂರನೆಯದಾದ ಘನಲಿಂಗಸ್ಥಲಕ್ಕೆ ಜೀವಾತ್ಮ ಸ್ಥಲಾದಿಯಾಗಿ ಸೇವ್ಯ ಪ್ರಸಾದಿ ಸ್ಥಲಾಂತ್ಯಮದೊಂಭತ್ತು ಸ್ಥಲಂಗಳು ನಾಲ್ಕನೆಯದಾದ ಜಂಗಮಲಿಂಗ ಸ್ಥಲಕ್ಕೆ ಸಂದು ಅಂತು ಸ್ಥಲಂಗಳು ನಾಲ್ಕು ಮುಗಿದವು.

---

## ೭೫. ದೀಕ್ಷಾಪಾದೋದಕ ಸ್ಥಲ.

**ಸೂತ್ರ:—** ಇಂತು ನವಸ್ಥಲಂಗಳೇ ತ್ರಿವಿಧ ತ್ರಿವಿಧಂಗಳಾಗೇಕವಾದ ಜಂಗಮ ಲಿಂಗವು ಪ್ರಾಣಲಿಂಗಿಯಮಲತ್ರಯ ನಿಗ್ರಹಣಕಾರಣಾರ್ಥವಾಗಿ ಮಹಾ ಶರಣನು ಮಹಾಪ್ರಸಾದ ಲಿಂಗವ ಸಂಬಂಧಿಸುವಲ್ಲಿ ಗುರುಪಾದೋದಕದಿಂದ ಪರವು ಬೇರಿಲ್ಲದ ಭೇದವೆಂತಿರ್ದುದೆಂದಡೆ ಮುಂದೆ ದೀಕ್ಷಾಪಾದೋದಕ ಸ್ಥಲವಾದುದು.

ಪದ-ರಾಗ-ಮಧುಮಾಧವಿ

ಶ್ರೀಗುರು ಪಾದೋದಕದಿಂದ ಪರವು ಬೇರಿಲ್ಲ ಕಾಣಿರೇ ॥ ಪ ॥

ಆಣವಮಲ ಮಾಯಾಮಲದಲ್ಲಿ ಕಾರ್ಮಿಕಪ್ರಾಣ ಮಲಕುಲನನು ತೊಳೆದು । ಪ್ರಾಣವ ನಿರ್ಮಲ ಮಾಡಿದುದೆನ್ನಯ ಪ್ರಾಣನಾಥ ಗುರುಪಾದೋದಕಾ ॥ ೧ ॥

ಗುರುಪಾದಾಂಗುಷ್ಠದಲ್ಲಿ ಅಷ್ಟಾಷಷ್ಠಿ ತೀರ್ಥಂಗಳಡಗಿರು ತಿರ್ಪವು। ಅರಿದು ಗುರುವಿನಡಿಯಲಿ ಪಾದೋದಕ ಪರಮ ರಸವ ಧರಿಸಲು ಮುಕ್ತಿ ॥೨॥

ಪಾದವೆ ಗುರುವಿಂ ಘನಗುರುವಿನೊಳು ಪ್ರಮೋದದೊಳಂದಡವಾಗಿರೆ ಕೂಡಿ । ಭೇದವಿಲ್ಲದೆ ಶಿಷ್ಯನುದಯಿಸಿದನು ಪಾದೋದಕ ರೂಪ ತಾನಾಗಿ ॥೩॥

ಗುರುಶಿಷ್ಯನು ಸಮರಸವಾಗಿ ತಮ್ಮೊಳು ಬೆರಸಿ ಪರಸ್ಪರ ಮರಿಯದೆ । ಗುರು ಕರುಣಾಮೃತ ಪಾದೋದಕದಲಿ ಪರವಶವಾದುದನೇನೆಂಬೆ ॥ ೪ ॥

ನೀರುನೀರಾಗಿ ಬೆರಸಿ ಪಾದೋದಕ ಧಾರೆಯು ಕಡಲೋಕುಳಿಯಲ್ಲಿ । ಪೂರಾಯ ಸನ್ಮತವಾಗಿ ಮುಳುಗಿ ಕೂಡಲ ಸಂಗನ ಕೃಪೆಯಿಂದುಳಿದೆ ॥೫॥

---

## ೬೬. ಶಿಕ್ಷಾಪಾದೋದಕ ಸ್ಥಲ

**ಸೂತ್ರ**:— ಇಂತು ದೀಕ್ಷಾಗುರು ತತ್ವದಲ್ಲಿ ಇಷ್ಟಪಾದೋದಕ ಸ್ವರೂಪವನ್ನೈದಿದ ಲಿಂಗವು ಶರಣನಂಗದಲ್ಲಿ ಶಿಕ್ಷಾಗುರು ಮುಖದಿಂದ ದೃಷ್ಟ ಪಾದೋದಕ ಸ್ವರೂಪವನ್ನೈದಿದ ಭೇದವೆಂತಿರ್ದುದೆಂದಡೆ ಮುಂದೆ ಶಿಕ್ಷಾಪಾದೋದಕ ಸ್ಥಲವಾದುದು.

ಪದ—ರಾಗ— ನಾಟಿ.

ಲಿಂಗೋದಕ ಪಾದೋದಕಮಲ್ಲದೆ ಅಂಗವಿಸಲು ಅನ್ಯೋದಕ ಪಾತಕ ॥ಪ॥

ಶರಣವೊಕ್ಕು ಗುರು ಲಿಂಗ ಜಂಗಮದ ಚರಣವ ತೊಳೆದು ಪಾದೋದಕವಾ। ಧರಿಸಿದಡದು ಪರಮಾಮೃತವಲ್ಲದೆ ಸ್ವೀಕರಿಸಲು ಪ್ರಳಯ ಜಲ ನೋಡಾ ॥೧॥

ಸಂಗವಾಯಿತ್ತು ಜಿಹ್ವೆ ಲಿಂಗದ ರುಚಿಯನೆ ಅರಿದು | ಸಂಗವಾಯಿತ್ತು ಲಿಂಗದಲ್ಲಿಯೆ ತಲ್ಲಿಯ್ಯವಾಗಿ || ಸಂಗವಾಯಿತ್ತು ಒಲ್ಲೆನರಿಯೆನೆಂಬ ಸಂದಳಿದು | ಸಂಗವಾಯಿತ್ತು ಮಹದಲರ್ಪಿಸಿ ಮಹಾಪ್ರಸಾದಿಯಾಗಿ ||೨||

ಸಂಗವಾಯಿತ್ತು ಲಿಂಗ ಮನ್ಮನ ಮಸ್ತಕದಲಿ | ಸಂಗವಾಯಿತ್ತು ಸಂದಳಿದು ನಿಜರೂಪಾಗಿ | ಸಂಗವಾಯಿತ್ತು ಭೃಂಗ ಸಂಪಗೆಯ ಗ್ರಹಿಸಿದಂತೆ | ಸಂಗವಾಯಿತ್ತು ಮಹದಲ್ಲಿ ಮಹಾ ಪ್ರಸಾದ ಸಂಯುತವಾಗಿ ||೩||

ಸಂಗವಾಯಿತ್ತು ಸ್ಪರುಶನ ಕ್ರಮವರಿದು ತೋರಿದ | ಸಂಗವಾಯಿತ್ತು ಸ್ಪರ್ಶದ ಪರಮ ಸಖಿಯಾದೆನು | ಸಂಗವಾಯಿತ್ತು ಭಾವಸ್ಪರ್ಶ ಜೀವಸ್ಪರ್ಶನ ಹಿಂಗಿ | ಸಂಗವಾಯಿತ್ತು ಪ್ರಾಣಸ್ಪರ್ಶನದಿಂ ಪ್ರಸಾದಿಯಾದ ೪

ಸಂಗವಾಯಿತ್ತು ಜ್ಞಾತೃ ಜ್ಞಾನ ಜ್ಞೇಯವನತಿಗಳೆದು ಸಂಗವಾಯಿತ್ತು ನಿಸ್ಪತಿಪದವೆ ತಾನಾಗಿ ಸಂಗವಾಯಿತ್ತು ಚಿದ್ಘನ ಬೆಳಗಿನೊಳಗೆ | ಸಂಗವಾಯಿತ್ತು ಕೂಡಲ ಚನ್ನಸಂಗನಲ್ಲಿ ಬಸವಣ್ಣಂಗೆ |೫|

ಇಂತೆಂಬಲ್ಲಿಗೆ ಶ್ರೀ ಮದೇಕೋತ್ತರ ಶತಸ್ಥಲಂಗಳಲ್ಲಿ ದೀಕ್ಷಾಗುರುಸ್ಥಲಾದಿಯಾಗಿ ಪರಜಂಗಮ ಸ್ಥಲಾಂತ್ಯಮಾದೊಂಬತ್ತು ಸ್ಥಲಂಗಳು ಒಂದನೆಯದಾದ ಶ್ರೀಮದಾಚಾರ ಲಿಂಗಸ್ಥಲಕ್ಕೆ ಕ್ರಿಯಾಗಮ ಸ್ಥಲಾದಿಯಾಗಿ ಜ್ಞಾನಾಚಾರ ಸ್ಥಲಾಂತಮಾದೊಂಭತ್ತು ಸ್ಥಲಂಗಳು ಎರಡನೆಯದಾದ ಶ್ರೀಮದ್ಗುರು ಲಿಂಗಸ್ಥಳಕ್ಕೆ ಕಾಯಾನುಗ್ರಹ ಸ್ಥಲಾದಿಯಾಗಿ ಸೇವ್ಯ ಸ್ಥಲಾಂತ್ಯಮಾದೊಂಭತ್ತು ಸ್ಥಲಂಗಳು ಮೂರನೆಯದಾದ ಘನಲಿಂಗಸ್ಥಲಕ್ಕೆ ಜೀವಾತ್ಮ ಸ್ಥಲಾದಿಯಾಗಿ ಸೇವ್ಯ ಪ್ರಸಾದಿ ಸ್ಥಲಾಂತ್ಯಮದೊಂಭತ್ತು ಸ್ಥಲಂಗಳು ನಾಲ್ಕನೆಯದಾದ ಜಂಗಮಲಿಂಗ ಸ್ಥಲಕ್ಕೆ ಸಂದು ಅಂತು ಸ್ಥಲಂಗಳು ನಾಲ್ಕು ಮುಗಿದವು.

---

## ೭೫. ದೀಕ್ಷಾಪಾದೋದಕ ಸ್ಥಲ.

**ಸೂತ್ರ:**— ಇಂತು ನವಸ್ಥಲಂಗಳೇ ತ್ರಿವಿಧ ತ್ರಿವಿಧಂಗಳಾಗೇಕವಾದ ಜಂಗಮ ಲಿಂಗವು ಪ್ರಾಣಲಿಂಗಿಯಮಲತ್ರಯ ನಿಗ್ರಹಣಕಾರಣಾರ್ಥವಾಗಿ ಮಹಾ ಶರಣನು ಮಹಾಪ್ರಸಾದ ಲಿಂಗವ ಸಂಬಂಧಿಸುವಲ್ಲಿ ಗುರುಪಾದೋದಕದಿಂದ ಪರವು ಬೇರಿಲ್ಲದ ಭೇದವೆಂತಿರ್ದುದೆಂದಡೆ ಮುಂದೆ ದೀಕ್ಷಾಪಾದೋದಕ ಸ್ಥಲವಾದುದು.

ಪದ-ರಾಗ-ಮಧುಮಾಧವಿ

ಶ್ರೀಗುರು ಪಾದೋದಕದಿಂದ ಪರವು ಬೇರಿಲ್ಲ ಕಾಣಿರೇ ॥ ಪ ॥

ಆಣವಮಲ ಮಾಯಾಮಲದಲ್ಲಿ ಕಾರ್ಮಿಕಪ್ರಾಣ ಮಲಕುಲವನು ತೊಳೆದು । ಪ್ರಾಣವ ನಿರ್ಮಲ ಮಾಡಿದುದೆನ್ನಯ ಪ್ರಾಣನಾಥ ಗುರುಪಾದೋದಕಾ ॥ ೧ ॥

ಗುರುಪಾದಾಂಗುಷ್ಠದಲ್ಲಿ ಅಷ್ಟಾಷಷ್ಠಿ ತೀರ್ಥಂಗಳಡಗಿರು ತಿರ್ಪವು। ಅರಿದು ಗುರುವಿನಡಿಯಲಿ ಪಾದೋದಕ ಪರಮ ರಸವ ಧರಿಸಲು ಮುಕ್ತಿ ॥೨॥

ಪಾದವೆ ಗುರುವಿಂ ಘನಗುರುವಿನೊಳು ಪ್ರಮೋದದೊಳಂದಡವಾಗಿರೆ ಕೂಡಿ । ಭೇದವಿಲ್ಲದೆ ಶಿಷ್ಯನುದಯಿಸಿದನು ಪಾದೋದಕ ರೂಪ ತಾನಾಗಿ ॥೩॥

ಗುರುಶಿಷ್ಯನು ಸಮರಸವಾಗಿ ತಮ್ಮೊಳು ಬೆರಸಿ ಪರಸ್ಪರ ಪರಿಯದೆ । ಗುರು ಕರುಣಾಮೃತ ಪಾದೋದಕದಲಿ ಪರವಶವಾದುದನೇನೆಂಬೆ ॥ ೪ ॥

ನೀರುನೀರಾಗಿ ಬೆರಿಸಿ ಪಾದೋದಕ ಧಾರೆಯ ಕಡಲೋಕುಳಿಯಲ್ಲಿ । ಪೂರಾಯ ಸನ್ಮತವಾಗಿ ಮುಳುಗಿ ಕೂಡಲ ಸಂಗನ ಕೃಪೆಯಿಂದುಳಿದೆ ॥೫॥

---

## ೬೬. ಶಿಕ್ಷಾಪಾದೋದಕ ಸ್ಥಲ

**ಸೂತ್ರ:**— ಇಂತು ದೀಕ್ಷಾಗುರು ತತ್ವದಲ್ಲಿ ಇಷ್ಟಪಾದೋದಕ ಸ್ವರೂಪವನೈದಿದ ಲಿಂಗವು ಶರಣನಂಗದಲ್ಲಿ ಶಿಕ್ಷಾಗುರು ಮುಖದಿಂದ ದೃಷ್ಟ ಪಾದೋದಕ ಸ್ವರೂಪವನೈದಿದ ಭೇದವೆಂತಿರ್ದುದೆಂದಡೆ ಮುಂದೆ ಶಿಕ್ಷಾಪಾದೋದಕ ಸ್ಥಲವಾದುದು.

ಪದ—ರಾಗ— ನಾಟಿ.

ಲಿಂಗೋದಕ ಪಾದೋದಕವಲ್ಲದೆ ಅಂಗವಿಸಲು ಅನ್ಯೋದಕ ಪಾತಕ ॥ಪ॥

ಶರಣವೊಕ್ಕು ಗುರು ಲಿಂಗ ಜಂಗಮದ ಚರಣವ ತೊಳೆದು ಪಾದೋದಕವಾ। ಧರಿಸಿದಡದು ಪರಮಾಮೃತವಲ್ಲದೆ ಸ್ವೀಕರಿಸಲು ಪ್ರಳಯ ಜಲ ನೋಡಾ ॥೧॥

ಮನಕರಗಿ ತನುಕೊರಗಿ ಪಾದೋದಕವ ಧರಿಸದೆ ಡಂಭಕತನ ದಿಂದ। ಅನುಕರಿಸಿಕೊಂಡಡೆ ।ಭವಮಲ ಒದ್ಧಮಲ ನಿರ್ಮಲವೆಂತಪ್ಪುದೋ ॥೨॥

ಚಂದ್ರೋದಯವಾಗಲು ಚಂದ್ರಕಾಂತದ ಬಿಂದು ಕರಗಿ ಹರಿವಂದದಲಿ। ಸಂದಳಿದು ಲಿಂಗದೊಳು ತನು ಕರಗಿ ನಿಂದತಾತನೆ ಪಾದೋದಕ ಸಂಬಂಧೀ ॥೩॥

ಆಕಾಶ ಗಂಗೆಯ ನಾಕಾಶದಿಂದ ವಿವೇಕಿಸಿ ಬೇರೆನ್ನಬಪ್ಪುದೆ। ಏಕೀಕರಿಸಿದ ಪಾದೋದಕ ಬೋಧಕರ ರೂಪವಾಗಿಪ್ಪುದು ॥೪॥

ಮಾಯಾ ಸಂಗ್ರಹ ಮಲವ ತೊಳೆದು ನಿರ್ಮಾಯ ಸ್ವರೂಪವ ನೈದಿಸಿ ಕಾಯ್ವುದು। ಹುಲಿಗೆರೆಯ ವರದ ಸೋಮೇಶ್ವರನ ಅಕ್ಷಯವಾನಂದ ಪಾದೋದಕ ॥೫॥

---

## ೬೭. ಜ್ಞಾನಪಾದೋದಕಸ್ಥಲ

**ಸೂತ್ರ:**— ಇಂತು ಶಿಕ್ಷಾಗುರು ತತ್ವದಲ್ಲಿ ದೃಷ್ಟಪಾದೋದಕ ಸ್ವರೂಪವನ್ನೈದಿದ ಲಿಂಗವು ಶರಣನಂಗದಲ್ಲಿ ತ್ರಿಪುಟಿಯು ನಷ್ಟವಾದ ಮಹಾಜ್ಞಾನ ಗುರುಮುಖದಿಂದ ಪರಮಾನಂಮೋದಕವನ್ನೈದಿದ ಭೇದವೆಂತಿರ್ದುದೆಂದಡೆ ಮುಂದೆ ಜ್ಞಾನಪಾದೋದಕ ಸ್ಥಲವಾದುದು.

ಪದ—ರಾಗ—ಶ್ರೀರಾಗ

ಜ್ಞಾನಗುರುವಿನೊಳೈಕ್ಯವಾಗಿ ಸುಜ್ಞಾನಾಮೃತವ ಸೇವಿಸಿದಾತನೇ ಪರಮಸುಖಿ ॥ಪ॥

ಅಮೃತ ಅಮೃತ ಒಂದಾದಂತೆ ಕೇವಲ ಸಮರಸ ರೂಪಾಗಿ ಸಮಹಿತ ಜ್ಞಾನಾನಂದ ಜಲದೊಳಗೆ ವಿಮಲನಾದ ನಿರುಪಮ ಶರಣ ॥೧॥

ಕರಗಿ ತಿಳಿದು ತನ್ನೊಳು ತಾನೆ ಘೃತನೆರೆಗಟ್ಟಿಕೊಂಡು ರೂಪಾದಂತೆ ಪಾವನ ತರ ಸುಜ್ಞಾನ ರಸವೇ ತುಂಬಿ ತುಳುಕುತಿಹ ಪರಮಾನಂದ ಶರಣ ॥೨॥

ಉದಕವನುಂಡ ಕಬ್ಬುನದಲ್ಲಿ ಮತ್ತುದಕವ ಬೇರೆ ತೆಗೆಯಲುಂಟೆ ಕೋಮಲ। ಜ್ಞಾನಪಾದೋದಕದಲ್ಲಿ ತೃಪ್ತಿವಡೆದ ಶರಣ ನಿಜ ಭರಿತನು ॥೩॥

From
*Shivanubhava*
*Office*
BIJAPUR






ಈ ಪತ್ರಿಕೆಯನ್ನು ಇದರ ಸಂಪಾದಕರಾದ ರಾ|| ಬ|| ಪಿ. ಜಿ. ಹಳಕಟ್ಟಿ, ಬಿ. ಎ. ಎಲ್. ಎಲ್. ಬಿ. ಇವರು ವಿಜಾಪೂರ ವಾರ್ಡ ನಂ. ೩. ಮನೆ ನಂ. ೧೩೬೮ ರಲ್ಲಿರುವ ಹಿತಚಿಂತಕ ಪಾವರ ಪ್ರಿಂಟಿಂಗ್ ಪ್ರೆಸ್ಸಿನಲ್ಲಿ ಮುದ್ರಿಸಿ ಅಲ್ಲಿಯೇ ಪ್ರಸಿದ್ಧಿಸಿದರು.

ಸಂಪುಟ ೩೦ ❀ ಸಂಚಿಕೆ ೧೦-

# ಶಿವಾನುಭವ

ಸಂಪಾದಕರು
ರಾ|| ಬ|| ಫ. ಗು. ಹಳಕಟ್ಟಿ,
ಬಿ, ಎ. ಎಲ್. ಎಲ್. ಬಿ.
ವಿಜಾಪುರ.

[ ವಾರ್ಷಿಕ ಚಂದಾ ೫-೧೨-೦ ಅಂಚೆಯ ವೆಚ್ಚ ಬೇರೆ ]

ಅಕ್ಟೋಬರ, ನವ್ಹಂಬರ ೧೯೫೬

# ವಿಷಯಾನುಕ್ರಮಣಿಕೆ

# ಶಿವಾನುಭವ

| ಸಂಪುಟ ೩೦ | ಅಕ್ಟೋಬರ ೧೯೫೬ | ಸಂಚಿಕೆ ೧೦-೧೧ |
| --- | --- | --- |

## ವೀರಶೈವರ ಜೀವಾಳ ಪುರಾಣಗಳೋ? ವಚನಗಳೋ?

(ಲೇಖಕ:— ಸತ್ಯವಾದಿ)



ಶ್ರಾವಣ ಮಾಸದಲ್ಲಿ ಎತ್ತ ನೋಡಿದತ್ತೆಲ್ಲ ಪುರಾಣಗಳ ಸುಗ್ಗಿಯೋ ಸುಗ್ಗಿ. ಒಂದು ಊರಲ್ಲಿ ಪುರಾಣ ಹಚ್ಚಿದರೆ ರೊಕ್ಕದ ಸುರಿಮಳೆಯೋ ಸುರಿಮಳೆ. ಕೆಲ ವೆಡೆಯಲ್ಲಿ ಮೂರು ಮೂರು ತಿಂಗಳು ನಾಲ್ಕು ನಾಲ್ಕು ತಿಂಗಳವರೆಗೆ ಪುರಾಣ ನಡೆಯುವದುಂಟು. ಕನಿಷ್ಠ ಪಕ್ಷಕ್ಕೆ ಒಂದು ತಿಂಗಳಾದರೂ ಪುರಾಣ ಹಚ್ಚೇಹಚ್ಚುತ್ತಾರೆ. ಅದರಿಂದ ಪುರಾಣಿಕರ ಊಟೋಪಚಾರದ ವ್ಯವಸ್ಥೆ, ಅವರಿಗೆ ಸನ್ಮಾನ, ಅವರ ಜೊತೆಯಲ್ಲಿ ಪುರಾಣ ಓದುವವರು, ಪೇಟಿ ತಬಲಾ ಬಾರಿಸುವವರು, ದೀಪದ ವ್ಯವಸ್ಥೆ, ದೊಡ್ಡ ಪ್ರಸ್ತ, ಇತ್ಯಾದಿ ಕಾರ್ಯಗಳಿಗೆ ಕನಿಷ್ಟ ಸಾವಿರ ರೂಪಾಯಿಗಳು ವೆಚ್ಚವಾಗುವವು. ಪುರಾಣದ ಅವಧಿಯು ಬೆಳೆದಂತೆ ಪುರಾಣದ ವೆಚ್ಚವೂ ಹೆಚ್ಚಾಗುತ್ತ ಹೋಗುವದು. ಪುರಾಣಗಳು ಬಹುಶಃ ಪ್ರತಿ ವರ್ಷ ನಡನಡೆಯುತ್ತವೆ. ಆದ್ದರಿಂದ ಹಳ್ಳಿಗರು ಪ್ರತಿವರ್ಷ ಏನಿಲ್ಲೆಂದರೂ ಪುರಾಣಕ್ಕೆ ಸಾವಿರಾರು ರೂಪಾಯಿಗಳನ್ನು ಪಟ್ಟಿಯ ರೂಪದಿಂದ ಕೂಡಿಸುತ್ತಾರೆ. ಇಷ್ಟೇ ಹಣವನ್ನು ಶಾಲಾ ಕಟ್ಟಡಕ್ಕಾಗಲಿ, ರಸ್ತೆಯ ದುರಸ್ತಿಗಾಗಲಿ, ಬಾವಿ ತೋಡಿಸುವದಕ್ಕಾಗಲಿ, ದವಾಖಾನೆಯ ಕಟ್ಟಡಕ್ಕಾಗಲಿ ಇನ್ನಿತರ ಸಾರ್ವಜನಿಕ ಹಿತದ ಕಾರ್ಯಗಳಿಗಾಗಲಿ ಕೂಡಿಸಿಕೊಡಲಿಕ್ಕೆ ಹೇಳಿದರೆ ಜನಗಳು ಜೀವ ಹೋದರೂ, ಅಷ್ಟು ದುಡ್ಡು ಕೂಡಿಸಲು ಶಕ್ಯವಿಲ್ಲ. ಇಷ್ಟು ಹಣವನ್ನು ವೆಚ್ಚಮಾಡಿ ಜನರು ಪಡೆಯುವ ಭಾಗ್ಯವಾಗಲಿ ಪುಣ್ಯವಾಗಲಿ ಏನು? ಎಂದೆನ್ನುತ್ತಾರೆ.

ದಿನಾಲು ಹೊಟ್ಟೆಗೆ ಆಹಾರವು ಬೇಕಾಗುವಂತೆ ನೆತ್ತಿಗೂ ಬೇಕೆಂಬ ಮಾತು ನಿಜ. ಆಹಾರವನ್ನು ನಾವು ಪ್ರತಿದಿನ ಸೇವಿಸುತ್ತೇವೆ. ಆದ ರಿಂದ ಪ್ರಕೃತಿಯು ಚೆನ್ನಾಗಿರುತ್ತದೆ. ಆದರೆ ಪುರಾಣವನ್ನು ವರ್ಷಕ್ಕೊಮ್ಮೆ ಕೇಳುತ್ತೇವೆ. ಒಂದು ವರ್ಷದಲ್ಲಿ ಉಣ್ಣುವಷ್ಟು ಆಹಾರವನ್ನು ನೆತ್ತಿಯು ಒಂದು ತಿಂಗಳಲ್ಲಿ ಉಂಡರೆ ಅದಕ್ಕೆ ಸ್ವಾಭಾವಿಕವಾಗಿ ಅಜೀರ್ಣವಾಗುತ್ತದೆ. ಆದ್ದ ರಿಂದ ನಿತ್ಯಶ್ರವಣದ ಲಾಭವು ಪುರಾಣಕ್ಕಿಲ್ಲ. ಅದು ಅಜೀರ್ಣವಾಗಿ ಹಿತವಾಗುವದರ ಬದಲು ಅಹಿತವೇ ಹೆಚ್ಚಾಗುತ್ತದೆ. ಅಂದಮೇಲೆ ಪುರಾ ಣವನ್ನು ಹಚ್ಚಿ ಪ್ರಯೋಜನವೇನು ?

ಪುರಾಣಕ್ಕೆ ಬರುವ ಜನಗಳಲ್ಲಿ ಮುಕ್ಕಾಲು ಪಾಲು ಜನರು ಶ್ರಾವಣ ಮಾಸದಲ್ಲಿ ಪುರಾಣ ಕೇಳಿದರೆ ಪುಣ್ಯಬರುತ್ತದೆ, ಧನಧಾನ್ಯ ವಸ್ತ್ರ ಸಂಪತ್ತು ಗಳು ಲಭಿಸುತ್ತವೆಂದು ಪುರಾಣದ ಫಲಶ್ರುತಿ ಇರುವದರಿಂದ ತಮಗೂ ಆ ಐಹಿಕ ಸುಖ ಲಭಿಸಲೆಂಬ ಆಶೆಯಿಂದ ಬರುತ್ತಾರೆ. ಆದಾಗ್ಯೂ ಬಹು ಜನರಿಗೆ ಪುರಾಣದ ವಿಷಯಗಳೇ ತಿಳಿಯುವದಿಲ್ಲ. 'ಮುಳ್ಳ ಕಂಡು ಮುಳ್ಳ ಕ್ಯಾಂ ಕ್ಯಾಂ' ಎಂಬಂತೆ ಮೂಢ ಜನರು ಒಬ್ಬರು ಕಂಡು ಒಬ್ಬರ ಬರು ವರೇ ಹೊರತು, ಅದನ್ನು ಕೇಳಿಕೊಂಡು ಅದರಂತೆ ಆಚರಿಸಬೇಕೆಂಬುವ ವರು ಅತಿ ವಿರಳ. ಪುರಾಣ ತಿಳಿಯದ ಅನೇಕರು ತಾಸೆರಡುತಾಸು ತೂಕ ಡಿಸಿ ಹೊರಟುಹೋಗುತ್ತಾರೆ. ಅದನ್ನು ತಪ್ಪಿಸಲು ಪುರಾಣಿಕರು ನಡು ನಡುವೆ ಹಾಸ್ಯ ಕಥೆಗಳನ್ನು ಹೇಳುವ ಪ್ರಸಂಗ ಬರುತ್ತದೆ. ಪುರಾಣ ಕೇಳಲು ಗಂಡಸರೂ ಬರುವಂತೆ ಅನೇಕ ಹೆಂಗಸರೂ ತಮ್ಮ ಮಕ್ಕಳುಮರಿಗಳನ್ನು ಕಟ್ಟಿಕೊಂಡು ಬರುತ್ತಾರೆ. ಅಳುವ ಮಕ್ಕಳನ್ನು ರಮ್ಮಿಸುವದರಲ್ಲಿಯೇ ಪುರಾಣ ಮುಗಿಯುತ್ತದೆ. ಉಳಿದ ಸ್ತ್ರೀಯರು 'ಕವಾ ಕವಾ' ಮಾಡಿ ಜಗಳವಾಗಿ ನಡುನಡುವೆ ಪುರಾಣದ ರಸಭಂಗವಾಗುವದೂ ಉಂಟು. ಕೆಲವು ಹೆಂಗಸರು ಪುರಾಣ ಮುಗಿದಬಳಿಕ ಪುರಾಣಿಕರ ಕಾಲಿಗೆ ಬಿದ್ದು ಪುಣ್ಯಪಡೆಯಬೇಕೆಂಬ ಮೂಢಭಾವನೆಯಿಂದ ಹಾದಿ ಕಾಯ್ದುಕೊಂಡು ಕುಳಿತಿರುತ್ತಾರೆ. ಪುರಾಣಕ್ಕೆ ಬರುವ ಎಷ್ಟೋ ಮಹಾಶಯರು ೫ ನಿಮಿಷ ಕುಳಿತಂತೆ ಮಾಡಿ ತಮ್ಮ ಪಾಳಿ ಮುಟ್ಟಿಸಿ ಥಟ್ಟನೆ ಎದ್ದು ಹೋಗಿಬಿಡು ವರು. ಪುರಾಣವು ಮಠದಲ್ಲಿ ನಡೆದರೆ ಮಠದ ಹೊರಗೆ ಕೆಲವರು ತಂಬಾಕ ಸೇದುತ್ತ, ಕೆಮ್ಮುತ್ತ, ಹರಟೆ ಹೊಡೆಯುತ್ತ ಕುಳಿತು ಪುರಾಣ ಮುಗಿದ ಬಳಿಕ ಬಂದ ದಾರಿಗೆ ಸುಂಕವಿಲ್ಲೆಂಬಂತೆ ತಿರುಗಿಹೋಗುವರು. ಕೆಲವು

ಪ್ರಸಂಗಗಳಲ್ಲಿ ಪುರಾಣದ ಮುಂದೆ ಕುಳಿತವರಿಗೆ ಅದು ತಿಳಿಯುವದಿಲ್ಲ. ಹಿಂದೆ ಕುಳಿತವರಿಗೆ ಕೇಳಿಸುವದಿಲ್ಲ. ಜನರ ಹಿತಕ್ಕಾಗಿ ಪುರಾಣ ಹಚ್ಚಬೇಕೆನ್ನುವ ಮುಂದಾಳುಗಳು ಬಹುಶಃ ಕಾರಭಾರ ಮಾಡುವದರಲ್ಲಿಯೇ ಹೊತ್ತುಗಳೆಯುವದಲ್ಲದೆ ಸಂಪೂರ್ಣ ಪುರಾಣ ಶ್ರವಣವಂತೂ ಅವರಿಗೆ ವರ್ಜ್ಯ. ವಸ್ತುಸ್ಥಿತಿಯು ಹೀಗಿರುವಾಗ ಪುರಾಣ ಹಚ್ಚಿ ಜನರು ಲಾಭಪಡೆಯುವದೇನು?

"ಪುರಾಣ ಪುಂಡರ ಗೋಷ್ಠಿ" ಯೆಂದು ವಚನಕಾರರ ನುಡಿಯುಂಟು. ಮುಗ್ಧ ಜನರ ಕಡೆಯಿಂದ ದುಡ್ಡು ಉಚ್ಚಲು ಅದೊಂದು ಹಾದಿಯಾಗಿದೆ. ಪುರಾಣಿಕರಿಗೊಂದು ಹೊಟ್ಟೆಯ ಉದ್ಯೋಗ. ಎಷ್ಟೋ ಸಲ ಪುರಾಣದ ಶಾಸ್ತ್ರಿಗಳು ದೊಡ್ಡ ದೊಡ್ಡ ಸಂಸ್ಕೃತ ಶ್ಲೋಕಗಳನ್ನು ಹೇಳಿ ತಮ್ಮ ಪಾಂಡಿತ್ಯವನ್ನು ಪ್ರದರ್ಶಿಸುವರು. ಮುಗ್ಧ ಜನರಿಗೆ ಅದು 'ಕೋಣನ ಮುಂದೆ ಕಿನ್ನೂರಿ ಬಾರಿಸಿದಂತೆಯೇ ಸರಿ.' ಪುರಾಣದಲ್ಲಿರುವ ಸಂಗತಿಗಳಾದರೂ ಏನು? ಕಾಲ್ಪನಿಕ ಹಾಗೂ ಮೂಢ ಭಾವನೆಗಳನ್ನು ಕೆರಳಿಸುವ ಪವಾಡಗಳೇ ಹೆಚ್ಚು. ನಿಜಸಂಗತಿಗಳಿಗಿಂತಲೂ ಅಭೂತ ಸುಳ್ಳು ಸಂಗತಿಗಳೇ ಅಧಿಕ. ಯಾರಾದರೂ ಶರಣರ ಇಲ್ಲವೆ ಸ್ವಾಮಿಗಳ ಪುರಾಣ ಬರೆಯಬೇಕಾದರೆ ಅವರು ಕೈಲಾಸದಿಂದ ಪರಮನಪ್ಪಣೆಬಡೆದು ಲೋಕೋದ್ಧಾರಾರ್ಥವಾಗಿ ಮರ್ತ್ಯಕ್ಕೆ ಬಂದು ನಾನಾವಿಧ ಪವಾಡಮಾಡಿ ಕೊನೆಗೆ ಶಿವಲೋಕಕ್ಕೆ ತೆರಳುತ್ತಾರೆ. ಮಕ್ಕಳಿಲ್ಲದವರಿಗೆ ಮಕ್ಕಳನ್ನು ಕೊಡುವರು. ಮಳೆಬಾರದಿದ್ದಲ್ಲಿ ಮಳೆ ತರಿಸುವರು. ಕುರುಡರಿಗೆ ಕಣ್ಣು ತರಿಸುವರು, ಗೊಡ್ಡೆಮ್ಮೆಗೆ ಹಾಲು ತರಿಸುವರು, ಬಡವನನ್ನು ಬಲ್ಲಿದವನನ್ನಾಗಿ ಮಾಡುವರು. ರೋಗಿಷ್ಟನ ರೋಗ ಕಳೆಯುವರು. ಅವರ ಅನುಗ್ರಹ ಪಡೆದ ಮಾನವರಿಗೆ ಒಟ್ಟಿನ ಮೇಲೆ ಬೇಡಿದಿಷ್ಟಾರ್ಥಗಳು ಲಭಿಸುವವು. ಆದರೆ ಅವರು ಸಿಟ್ಟಾಗಿ ಮನನೊಂದು ಅನ್ಯರಿಗೆ ಶಾಪ ಕೊಟ್ಟರೆ ಆ ಶಾಪಕ್ಕೆ ಆಹುತಿಯಾದ ಬಡಪ್ರಾಣಿಗಳ ಸರ್ವಸ್ವೀಘಾತವಾಗುವದು. ದ್ರವ್ಯ ಹಾನಿ ಪ್ರಾಣ ಹಾನಿ, ವಸ್ತುವಾಹನಾದಿಗಳ ನಷ್ಟ ಇತ್ಯಾದಿ ಅನಿಷ್ಟ ಫಲಗಳು ಸಂಭವಿಸುವವು. ಇವು ನಿಜಸಂಗತಿಗಳಿರದೆ ಕೇವಲ ಮೂಢಭಾವನೆಗಳೇ ನಿಜ. ಕಳ್ಳರು ಬದನೇಕಾಯಿ ಕಟ್ಟಿಕೊಂಡು ಬಸವಣ್ಣನ ಮನೆಯನ್ನು ಪ್ರವೇಶಿಸಿದಾಗ ಬಸವಣ್ಣನವರು ಬದನೇಕಾಯಿಗಳನ್ನು ಲಿಂಗಗಳನ್ನಾಗಿ ಮಾಡಿದರಂತೆ. ಬಸವಣ್ಣನವರೇನು ಜಾದುಗಾರರೇ? ಇಂದ್ರಜಾಲಿಗರೇ; ಬದನೇಕಾಯಿ ಕಟ್ಟಿಕೊಂಡು ಬಂದ ಕಳ್ಳರನ್ನು ಸಭ್ಯೋಕ್ತಿಯಿಂದ ಸನ್ಮಾ

ಗಕ್ಕೆ ಹಚ್ಚಿ ಲಿಂಗಧಾರಣ ಮಾಡಿಸಿ ತಮ್ಮ ಬಳಗದೊಳಗೆ ಸೇರಿಸಿಕೊಂಡ ರೆಂಬುದೇ ನಿಜವಾದ ಸಂಗತಿ. ಆದರೆ ನಿಜಸಂಗತಿಗಳು ಮೂಢ ಜನರಿಗೆ ಒಗ್ಗುವದಿಲ್ಲ. ಇಂದ್ರಜಾಲ ಮಹೇಂದ್ರಜಾಲದ ಪವಾಡಗಳು ಒಗ್ಗುತ್ತವೆ. ಆದ್ದರಿಂದ ಅಂಥವರಿಗಾಗಿ ಪುರಾಣಗಳು ರಚಿತವಾಗಿರುತ್ತವೆ. ಆ ಮೂಢ ನಂಬಿಗೆಯಿಂದಲೇ ಮುಂದೆ ಅವರಿಗೆ ಸನ್ಮಾರ್ಗ ದೊರೆಯಬಹುದೆಂದು ಪುರಾಣಕರ್ತರ ಅಭಿಪ್ರಾಯವಿರಬಹುದು. ಆದರಿಂದ ಹಿತವಾಗುವ ಬದಲು ಜನಗಳಿಗೆ ಅಹಿತವೇ ಹೆಚ್ಚಾಗುತ್ತದೆ. ಮೂಢನಂಬಿಗೆಯಿಂದ ಅಜ್ಞಾನಾಂಧಕಾರತೆಯು ಬೆಳೆಯುತ್ತ ಹೋಗುವದು. ಇದು ಸಮಾಜದ ಪ್ರಗತಿಯ ಲಕ್ಷಣವಲ್ಲ, ಅಧೋಗತಿಯ ಲಕ್ಷಣವೇ ಸರಿ.

ಕೆಲವು ಪುರಾಣಗಳಲ್ಲಿ ಚರಿತ್ರನಾಯಕರ ಸಂಪೂರ್ಣಚಾರಿತ್ರ್ಯವಷ್ಟೇ ಇರದೆ ಅನೇಕ ಶರಣರ ಚರಿತ್ರೆಗಳೂ ಉಪಕಥೆಗಳೂ ಅನಾವಶ್ಯಕವಾಗಿ ಅದರಲ್ಲಿ ಸೇರಿಕೊಂಡಿರುತ್ತವೆ. ಇದರಿಂದ ಆದರ್ಶಪುರುಷನ ವ್ಯಕ್ತಿತ್ವವು ಜನಮನದಲ್ಲಿ ಚೆನ್ನಾಗಿ ಪ್ರತಿ ಬಿಂಬಿಸಲಾರವು. ಇದಲ್ಲದೆ ಕಥೆಗೆ ಸಂಬಂಧವಿಲ್ಲದೆ ಪರ್ವತ, ನದಿ, ಉಪವನ, ಯುದ್ಧ ಮುಂತಾದ ಅನೇಕ ಅಸಂಗತವಾದ ಹದಿನೆಂಟು ತರಹದ ವರ್ಣನೆಗಳು ಬಂದು ಚರಿತ್ರನಾಯಕನ ಚಿತ್ರವನ್ನು ಯಂಕು ಮಾಡಿ ಬಿಡುವವು. ಪುರಾಣ ಶ್ರವಣದಿಂದ ಸಮಾಜದ ನಿಜವಾದ ಪ್ರಗತಿ ಸಾಧಿಸದೆ ಮೂಢಭಾವನೆ ಅಜ್ಞಾನಗಳು ಮಾತ್ರ ಬೆಳೆಯುತ್ತ ಹೋಗುವದು ಖಂಡಿತ. ಪುರಾಣಗಳಲ್ಲಿ ಮಾನವನನ್ನು ಹೊಡೆದೆಬ್ಬಿಸುವ ಚೈತನ್ಯವಿಲ್ಲ. ವಿಚಾರ ಶಕ್ತಿಯನ್ನು ಪ್ರಜ್ವಲಗೊಳಿಸುವ ತಂತ್ರವಿಲ್ಲ. ಜೀವನವನ್ನು ಮಾರ್ಪಡಿಸಿ ಸನ್ಮಾರ್ಗದತ್ತ ಒಯ್ಯುವ ಜೀವಕಳೆಯಿಲ್ಲ. ಅಂದಮೇಲೆ ಪುರಾಣಗಳನ್ನು ಹಚ್ಚಿ ದ್ರವ್ಯಹಾನಿ, ಕಾಲಹರಣ, ಮಾಡಿ ಸಮಾಜದವರು ಮೂಢಭಾವನೆ ಅಜ್ಞಾನಗಳನ್ನು ಸಮಾಜದಲ್ಲಿ ಏಕೆ ವ್ಯರ್ಥವಾಗಿ ಬೆಳಿಸಬೇಕು?

ಪುರಾಣಗಳನ್ನು ಬಿಟ್ಟರೆ ಜನರನ್ನು ಸನ್ಮಾರ್ಗಕ್ಕೆ ಹಚ್ಚುವ ಗ್ರಂಥಗಳಿಲ್ಲವೇ? ಇದ್ದರೆ ಅವುಗಳನ್ನು ಜನರಲ್ಲಿ ಪ್ರಸಾರ ಮಾಡುವ ವಿಧಾನಗಳಾವು? ಎಂಬದನ್ನು ವಿಚಾರಿಸುವದು ಅಗತ್ಯ. ನನ್ನ ಅಭಿಪ್ರಾಯದಲ್ಲಿ ಶರಣರ ವಚನಗಳೇ ನಿಜವಾದ ಸಮಾಜೋನ್ನತಿಯ ಸಾಹಿತ್ಯಗಳೆಂದು ಹೇಳಬಹುದು. ವಚನಗಳ ಅಭ್ಯಾಸ ಹಾಗೂ ಶ್ರವಣದಿಂದ ವ್ಯಕ್ತಿ ಮತ್ತು ಸಮಾಜ ಇವುಗಳಲ್ಲಿ ಹೊಸ ಚೈತನ್ಯ, ಉದಾತ್ತಭಾವನೆ, ಉಜ್ವಲ

ಜ್ಞಾನಗಳು ಪ್ರದೀಪ್ತವಾಗಿ ಸಮಾಜದಲ್ಲಿ ಶೀಘ್ರವೇ ಜಾಗ್ರತಿಯಾಗುವ ದೆಂದು ನನ್ನ ದೃಢವಾದ ನಂಬಿಗೆ. ಶಿವಶರಣರ ವಚನಗಳನ್ನು ಅರಗಿಸಿ ಕೊಂಡು ಅವುಗಳನ್ನು ಅರ್ಥಭಾವ ಗರ್ಭಿತವಾಗಿ ವಿವರಿಸಿದರೆ ಬಿದ್ದ ಹೆಣವು ಕೂಡ ಎದ್ದು ಕುಳ್ಳಿರಬಹುದು. ಪಾಪಿಗೆ ಪುಣ್ಯದ ಬೆಳಕು ಕಾಣಬಹುದು. ಅಜ್ಞಾನಿಯಲ್ಲಿ ಜ್ಞಾನದ ಜ್ಯೋತಿಯು ಬೆಳಗಬಹುದು. ಮೂಢಭಾವನೆ ಯಳಿದು ಸೂಕ್ತವಾದ ಜಿಜ್ಞಾಸಾಭಾವವು ಬೆಳೆಯಬಹುದು. ನಮ್ಮ ಆತ್ಮೋ ನ್ನತಿಗೆ ಸಾಧನಗಳಾದ ಸತ್ಕ್ರಿಯೆ, ಸದ್ಭಕ್ತಿ; ಸುಜ್ಞಾನಗಳು ನಮ್ಮಲ್ಲಿ ತೊಳಗಿ ಬೆಳಗಬಹುದು. ವಚನಗಳಿಂದ ಸಮಾಜದಲ್ಲಿ ಹೊಸ ಕ್ರಾಂತಿಯು ನೆಲಿಸುವದು. ಹೊಸ ಬೆಳಕು ಹೊಸ ಕಳೆಗಳು ಎಲ್ಲೆಡೆಯಲ್ಲಿಯೂ ಪಸರಿಸು ವವು ಆದಕಾರಣ ಜನ ಜಾಗ್ರತಿಯ ದೃಷ್ಟಿಯಿಂದ ವಚನಗಳಷ್ಟು ನಮಗೆ ಕಾವ್ಯ ಪುರಾಣಗಳು ಮಹತ್ವವಲ್ಲವೆಂಬದನ್ನು ನಾವು ಮನದಟ್ಟಾಗಿಟ್ಟು ಕೊಳ್ಳಬೇಕು.

ಪುರಾಣವೆಂಬದು ಸಂಸ್ಕೃತ ಶಬ್ದವು. ಅದರ ಅರ್ಥವು ಹಳೆಯದೆಂದಾ ಗುತ್ತದೆ. "ಪುರಾಣಮಿತ್ಯೇವ ನ ಸಾಧು ಸರ್ವಂ" ಅಂದರೆ ಹಳೆಯದಾ ದುದೆಲ್ಲವೂ ಒಳಿತೇ ಆಗಿರುತ್ತದೆಂದು ಹೇಳಕೂಡದು ಎಂದು ಕಾಳಿದಾಸನು ಹೇಳಿದ್ದಾನೆ. ಹಳೆಯದರಲ್ಲಿ ಕೊಳೆಯಿದ್ದರೆ ನಾವು ತೊಳೆದು ಹಾಕಲೇ ಬೇಕು. ಬಹುಕಾಲದಿಂದ ಪುರಾಣಗಳು ಬೆಳೆದು ಬಂದಿರಬಹುದು. ಆದರೆ ಅವುಗಳಲ್ಲಿ ಮೂಢ ಭಾವನೆ, ಅಂಧ ಶ್ರದ್ಧೆಗಳಿಗೆ ಅವಕಾಶವಿರುವದರಿಂದ ಅವುಗಳನ್ನು ನಾವು ಗಂಟುಕಟ್ಟಲೇಬೇಕು. ಹಳೆದಾದುದನ್ನು ತೆಗೆದು ಹಾಕಿ ಹೊಸದನ್ನಂಗೀಕರಿಸುವದು ಮನುಷ್ಯನ ಸ್ವಭಾವ. ವಸ್ತ್ರಗಳು ಹಳೆಯವಾ ದರೆ ನಾವು ಹೊಸ ಬಟ್ಟೆಗಳನ್ನು ಧರಿಸುತ್ತೇವೆ. ನಾವು ಉಪಯೋಗಿಸುವ ಒಡವೆಗಳು ಹಳೆಯವಾದರೆ ಅವನ್ನು ಚಲ್ಲಿಕೊಟ್ಟು ಹೊಸ ಒಡವೆಗಳನ್ನು ಬಳಕೆಯಲ್ಲಿ ತರುತ್ತೇವೆ. ಅದರಂತೆ ಹಳೆಯವೆನಿಸಿದ ಗೊಳ್ಳು ಪುರಾಣ ಗಳನ್ನು ಬದಿಗಿರಿಸಿ ಹೊಸ ವಿಚಾರ, ಹೊಸ ಚೈತನ್ಯ, ಹೊಸ ಸ್ಫೂರ್ತಿ ಗಳಿಗೆ ಇಂಬುಗೊಡುವ ಶಿವಶರಣರ ವಚನಗಳನ್ನೆಂದಿಗೂ ನಾವು ಕೈಬಿಡ ಡಬಾರದು. ಅವುಗಳಿಂದಲೇ ನಮ್ಮ ಸಮಾಜದ ಸರ್ವಾಂಗೀಣ ಉನ್ನತಿ ಯಿದೆ. ಶ್ರೀ ಅಥಣಿ ಶಿವಯೋಗಿಗಳು 'ಅಪ್ಪಾ ಅವರ' ವಚನಗಳೆಂದು ಬಸವಣ್ಣನವರ ವಚನಗಳನ್ನು ಪ್ರತಿ ನಿತ್ಯ ಭಕ್ತಿಯಿಂದ ಓದಿ ತಮ್ಮ ಆತ್ಮೋ ನ್ನತಿಯನ್ನು ಮಾಡಿಕೊಂಡರು. ಅದರಂತೆ ಶ್ರೀ ಚಿತ್ತರಗಿ ಮಹಾಂತ ಸ್ವಾಮಿ

ಗಳು ಹೋದ ಹೋದಲ್ಲಿ ಬಸವಣ್ಣನವರ ವಚನಗಳನ್ನು ಬೆನ್ನಿಗೆ ಕಟ್ಟಿಕೊಂಡೇ ಹೊರಡುತ್ತಿದ್ದರು. ದಿನಾಲು ಆ ವಚನಗಳ ಸೊನೆಯನ್ನೇ ಪಾನ ಮಾಡಿ ಆಧ್ಯಾತ್ಮಿಕತೇಜವನ್ನು ಕಂಡುಕೊಂಡರು. ಪೂಜ್ಯದೆನಿಸಿದ ಮಹಾಸ್ವಾಮಿಗಳಲ್ಲಿ ಅಷ್ಟು ದೃಢವಾದ ಶ್ರಿಷ್ಟೆಯಿರುವಾಗ ಪಾಮರರಾದ ನಮ್ಮಗಳಿಗೇಕಿರಬಾರದು?

ವಚನಗಳ ಸ್ಫೂರ್ತಿಯನ್ನೇ ಅಳವಡಿಸಿಕೊಂಡು ಹರಿಹರ, ರಾಘವಾಂಕ ಸರ್ವಜ್ಞ ಮೊದಲಾದ ಕವಿಗಳು ಕಾವ್ಯ ಪುರಾಣಗಳನ್ನು ರಚಿಸಿದರು ವಿಜಯನಗರದ ೨ನೇ ದೇವರಾಯನ ಕಾಲಕ್ಕೆ ಚಾಮರಸರಾದಿ ೧೦೧ ಜನ ವಿರಕ್ತರು ವಚನ ಭಾವವನ್ನು ಆತ್ಮೀಯವಾಗಿಟ್ಟುಕೊಂಡೇ ಅನೇಕ ಕಾವ್ಯ ಶಾಸ್ತ್ರ ಗ್ರಂಥಗಳನ್ನು ಬರೆದರು. ಅವು ನಮಗೆ ಬೆಳಕನ್ನು ನೀಡಿದರೂ ವಚನ ಭಾನುವಿನ ಮುಂದೆ ಅವು ಕೈದೀಪಗಳಿದ್ದಂತೆ ಪುರಾಣಗಳು ತಿಳಿದುಕೊಳ್ಳಲು ಕಠಿಣ. ವಚನಗಳು ಸರಳ. ಓದಬಲ್ಲವರು ಓದಿ ಚೆನ್ನಾಗಿ ತಿಳಿದುಕೊಂಡು ಅದರಿಂದ ಸ್ಫೂರ್ತಿಗೊಂಡು ತಮ್ಮ ಜಿವನವನ್ನು ಮಾರ್ಪಡಿಸಿಕೊಳ್ಳಲು ಶಕ್ಯ ಆದರೆ ಇತ್ತೀಚಿಗೆ ರಚಿತವಾದ ಪುರಾಣಗಳಲ್ಲಿ ಅಂಥ ಉಜ್ವಲ ಬೆಳಕು ನಮಗೆ ದೊರಕುವದು ಶಕ್ಯವೇ ಇಲ್ಲ. ಆದ್ದರಿಂದ ಗೊಳ್ಳು ಪುರಾಣಗಳಿಗೆ ಶರಣು ಹೊಡೆದು ವಚನಗಳನ್ನು ಪ್ರಚಾರದಲ್ಲಿ ತರುವದೇ ವೀರಶೈವರ ಮುಖ್ಯ ಕರ್ತವ್ಯ.

ಮನೆಮನೆಗೂ ಹಳ್ಳಿ ಹಳ್ಳಿಗೂ ವಚನ ಶ್ರವಣವು ಪ್ರತಿ ನಿತ್ಯ ನಡೆಯಲೇ ಬೇಕು. ಶ್ರಾವಣಮಾಸ ಶಿವರಾತ್ರಿಗಳಿಗಷ್ಟೇ ಅವುಗಳನ್ನು ಮೀಸಲಿಡಬಾರದು. ದಿನಾಲು ಒಂದೆರಡು ವಚನಗಳನ್ನು ಕಲಿತೇ ಲಿಂಗಪೂಜೆಯು ಪ್ರಾರಂಭವಾಗಬೇಕು. ವಚನಗಳನ್ನು ನುಡಿಯುತ್ತಲೇ ಶಿವಪ್ರಸಾದ ಸೇವಿಸಬೇಕು. ಕಲಿತವರು ಮನೆಯಲ್ಲಿ ಕಲಿಯದವರಿಗೆ ವಚನಕಲಿಸಿ ಅವರಲ್ಲಿ ಹೊಸ ಚೈತನ್ಯ ನೆಳವಡುವಂತೆ ಮಾಡಬೇಕು. ಅಂದರೆ ಮನೆಯು ಸೌಭಾಗ್ಯವು ಬೆಳೆಯುತ್ತಿದೆ. ಸಂಸ್ಕೃತಿಯು ವಿಕಾಸಗೊಳ್ಳುತ್ತದೆ. ವೀರಶೈವ ಸಮಾಜವು ಹಿಂದಿನಂತೆ ಉಜ್ವಲವಾಗಿ ಮೆರೆಯುತ್ತದೆ.

ಬಸವಣ್ಣನವರು ತಮ್ಮದೊಂದು ವಚನದಲ್ಲಿ ಮುತ್ತಿನಂತಹ ಮಾತು ಹೇಳಿದ್ದಾರೆ. "ಹಾಲತೊರೆಗೆ ಬೆಲ್ಲದಂತಹ ಕೆಸರು, ಸಕ್ಕರೆಯಂತಹ ಮಳಲು, ಚವರಾಜದಂತಹ ನೊರೆತೆರೆಗಳು, ಇಂತಪ್ಪ ಆದ್ಯರ ವಚನವಿರಲ-

ಬೇರೆ ಬಾವಿಯ ತೋಡಿ ಉಪ್ಪ ನೀರ ಸವಿದಂತಾಯಿತ್ತಯ್ಯಾ ಎನ್ನ ಯುಕ್ತಿ. ನಿಮ್ಮ ವಚನಂಗಳ ಕೇಳದೆ ಅನ್ಯಪುರಾಣಂಗಳ ಕೇಳಿ ಕೆಟ್ಟೆನಯ್ಯಾ ಕೂಡಲಸಂಗಮ ದೇವಾ." ಬಸವಣ್ಣನವರಿಗಿಂತಲೂ ಪೂರ್ವದಲ್ಲಿ ಅನೇಕ ಆದ್ಯರು ವಚನಗಳನ್ನು ರಚಿಸಿ ಅಮರರಾಗಿ ಹೋಗಿದ್ದಾರೆ. ಅವರ ವಚನಗಳು ನಮಗೆ ಉಪಲಬ್ಧವಿಲ್ಲ. ಬಸವಾದಿ ಶರಣರಿಂದ ಮೊದಲ್ಗೊಂಡು ಸಾವಿರಾರು ವಚನಗಳು ರಚಿತವಾಗಿದ್ದು ಅವು ನಮಗೆ ದೊರೆಯುತ್ತವೆ. ಅವುಗಳನ್ನು ಶೋಧಿಸಿ ಸಮಾಜಕ್ಕೂ ಕನ್ನಡ ಸಾಹಿತ್ಯಕ್ಕೂ ರಾ। ಬ। ಹಳಕಟ್ಟಿಯವರು ಅಪಾರ ಸೇವೆಯನ್ನು ಸಲ್ಲಿಸಿದ್ದಾರೆ. ಅವರ ಉಪಕಾರವನ್ನು ಸಮಾಜವು ಎಷ್ಟು ಸ್ಮರಿಸಿದರೂ ಕಡಿಮೆಯೇ.

ಬಸವಣ್ಣನವರ ಮೇಲ್ಕಂಡ ವಚನದಲ್ಲಿ ವೀರಶೈವರಿಗೆ ವಚನಗಳೇ ಜೀವಾಳವಲ್ಲದೆ ಗೊಳ್ಳು ಪುರಾಣಗಳಲ್ಲೆಂಬುದು ಸ್ಪಷ್ಟ ವಿದಿತವಾಗುತ್ತದೆ. ವೀರಶೈವರ ಸಂಸ್ಕೃತಿ ಶ್ರೇಯೋಭಿವೃದ್ಧಿಗಳೆಲ್ಲವೂ ವಚನಗಳನ್ನೇ ಹೆಚ್ಚಾಗಿ ಅವಲಂಬಿಸಿರುತ್ತವೆ. ಆದರೆ ವೇದಶಾಸ್ತ್ರ ಆಗಮಪುರಾಣಗಳನ್ನಲ್ಲ. ಇದು ಕನ್ನಡನಾಡಿನ ವೀರಶೈವರ ವೈಶಿಷ್ಟ್ಯ. ಇದನ್ನು ವೀರಶೈವರು ಮರೆತು ಸಂಸ್ಕೃತದಲ್ಲಿ ತಮ್ಮ ಧರ್ಮವಿದೆ, ಪುರಾಣಗಳಲ್ಲಿ ತಮ್ಮ ಆತ್ಮೋನ್ನತಿಯಿದೆ, ಎಂದು ಭ್ರಾಮಕ ಕಲ್ಪನೆಯನ್ನಿಟ್ಟುಕೊಂಡು ಜನಗಳನ್ನು ಅಜ್ಞಾನ ಅಧೋಗತಿಗಳಿಗೆ ನೂಕುತ್ತಿದ್ದಾರೆ. ಪ್ರಭುಲಿಂಗಲೀಲೆ ಮೊದಲಾದ ಉದಾತ್ತವಾದ ಪುರಾಣಗಳು ಕೂಡ ವಚನಗಳ ಬೆಳಕಿನಿಂದಲೇ ಬೆಳಗಿವೆಯಲ್ಲವೆ ಅವುಗಳಿಗೆ ಸ್ವಪ್ರಕಾಶವಿರುವದಿಲ್ಲ. ಅವು ಮೂಲಭೂತವಿಚಾರಗಳಲ್ಲ. ಆದುಕಾರಣ ಮೂಲಭೂತವಾದ ವಚನಗಳಿಗೆ ನಾವು ಅಂಟಿಕೊಂಡರೆಸಾಕು. ನಮಗೆ ಪುರಾಣ ಪುಣ್ಯಕಥೆಗಳ ಗೊಡವೆಯು ಬೇಡ. ಪುರಾಣಗಳನ್ನೂ ಕಾವ್ಯಗಳನ್ನೂ ಸಾಹಿತಿಗಳ ಪಾಲಿಗೆ ಬಿಟ್ಟುಬಿಡೋಣ. ವಿಮರ್ಶಕರ ವಶಕ್ಕೆ ಒಪ್ಪಿಸಿಬಿಡೋಣ. ಸಂಸ್ಕೃತಶಾಸ್ತ್ರ ಪುರಾಣಗಳು ಶಾಸ್ತ್ರಿ ಪಂಡಿತರ ಪಾಲಿಗಿರಲಿ. ಇಂಗ್ಲೀಷ ಹಿಂದಿಗಳು ರಾಜಕಾರಣಿಗಳ ಸೊತ್ತಾಗಿರಲಿ. ಆದರೆ ಕನ್ನಡ ನಾಡಿನ ವೀರಶೈವರೆನಿಸಿಕೊಳ್ಳುವವರಿಗೆಲ್ಲ ವಚನಗಳು ಪ್ರತಿ ನಿತ್ಯದ ರಸದೂಟವಾಗಿರಲಿ. ವಚನಗಳನ್ನು ಬಿಟ್ಟರೆ ವೀರಶೈವತ್ವವೇ ಇಲ್ಲ. ವಚನಗಳನ್ನು ಬಿಟ್ಟರೆ ನಮ್ಮ ಸಂಸ್ಕೃತಿಯು ಜೀವಾಳವಿಲ್ಲ. ಇದನ್ನು ಚೆನ್ನಾಗಿ ಲಕ್ಷದಲ್ಲಿಟ್ಟು ನಾವು ಇನ್ನು ಮುಂದೆ ಪುರಾಣಗಳಿಗೆ ಮಹತ್ವಕೊಡದೆ ವಚನಗಳಿಗೆ ಮಹತ್ವ ಕೊಡಲೇಬೇಕು.

ಪ್ರತಿ ನಿತ್ಯ ಮನೆ ಮನೆಗಳಲ್ಲಿ ವಚನಪಾಠ ಶ್ರವಣಗಳು ಅವ್ಯಾಹತವಾಗಿ ನಡೆಯಲಿ. ಶಿವಾನುಭವ ಮಂಟಪಗಳಲ್ಲಿ ವಚನಗಳ ಅಭ್ಯಾಸ ಚರ್ಚೆಗಳೇರ್ಪಡಲಿ ಶ್ರಾವಣಮಾಸದಲ್ಲಿ ವಚನ ಶಾಸ್ತ್ರಗಳ ಮೇಲೆಯೇ ಪ್ರವಚನವಾಗಲಿ. ಶರಣರ ತತ್ವಗಳನ್ನು ಅಭ್ಯಾಸಿಸಿ ಅವುಗಳನ್ನು ಪ್ರಚಾರಗೊಳಿಸುವ ಅನೇಕ ಸಂಘ ಸಂಸ್ಥೆಗಳು ಉತ್ಪನ್ನವಾಗಲಿ. ಅಂದರೆ 'ಶರಣಾರು ಬಂದಾರು ಕೇಳಿರಣ್ಣಾ' ಎಂಬ ಕಾಲಜ್ಞಾನದ ವಚನವು ಸತ್ಯವಾದಂತಾಗುವದು. ಶರಣರು ಮೈವೆತ್ತಿ ಬಂದು ಪುನಃ ನೆಲೆಗೊಳ್ಳುವದೆಂಬುದೇ ಶರಣರ ಪುನರಾಗಮನದ ಸೂಚನೆಯು. ಇದನ್ನರಿತು ವೀರಶೈವ ಬಾಂಧವರು ಮಳ್ಳು ಪುರಾಣ, ಗೊಳ್ಳು ವೇದಾಂತಗಳಿಗಿಂಬುಗೊಡದೆ, ತಮ್ಮ ಮತದಲ್ಲೇನಿದೆ ಯೆಂದು ಅನ್ಯಮಂಥ ಪಂಗಡಗಳಿಗೆ ಸೇರಿಕೊಳ್ಳದೆ. ತಮ್ಮ ತಮ್ಮೊಳಗೇ ಹೊಸ ಹೊಸ ಮಠ ಪೀಠಗಳನ್ನು ಹುಟ್ಟಿಸಿಕೊಳ್ಳದೆ ವಚನಗಳಿಗೆ ಮರೆಹೊಕ್ಕು ತಮ್ಮ ಸರ್ವಾಂಗೀಣ ಉನ್ನತಿಯನ್ನು ಮಾಡಿಕೊಳ್ಳುವರೆಂದು ಭಾವಿಸುತ್ತೇನೆ.

# ವೀರಶೈವರ ಮೇಲೆ ಹೊರಗಿನವರ ದಾಳಿಗಳು !!!

( ಬರೆದವರು:- ಶ್ರೀ ಶಿವಾನಂದ ಸ್ವಾಮಿಗಳು ಗವಿಮಠ ತೆಗ್ಗಿಹಳ್ಳಿ ಇಂಡಿ )



ವೀರಶೈವ ಸಂಸ್ಕೃತಿಯು ಪುರಾತನವಾದುದು, ವ್ಯಾಪಕವಾಗುವದು, ಅದು ಶ್ರೇಷ್ಠವಾದದ್ದೆಂದು ಅನೇಕ ವಿದ್ವಾಂಸರೂ ಅನುಭಾವಿಗಳೂ ಒಪ್ಪುತ್ತಾರೆ. ೮೦೦ ವರ್ಷಗಳ ಹಿಂದೆ ಪರ ಧರ್ಮದವರಿಂದ ವೀರಶೈವ ಧರ್ಮಕ್ಕೆ ಅನೇಕ ಆಘಾತ ಪ್ರತ್ಯಾಘಾತಗಳು ಆಗುತ್ತಿರುವಾಗ ಶ್ರೀ ಜಗದಣ್ಣ ಬಸವಣ್ಣನವರು ಅವತರಿಸಿ ಅದನ್ನು ಸರಿಪಡಿಸಿ ಉದ್ಧಾರ ಮಾಡಿ ಒಳ್ಳೇ ಜಾಗ್ರತ ಮಾಡಿ ಹೋದರು. ಈಗ ಅಂಥದೇ ಒಂದು ಹೀನ ದೀನ ಸ್ಥಿತಿಯು ಈ ಧರ್ಮಕ್ಕೆ, ಈ ಸಂಸ್ಕೃತಿಗೆ, ಈ ಸಮಾಜಕ್ಕೆ ಬಂದಿದೆ. ಆದರೂ ವೀರಶೈವ ಸಮಾಜಕ್ಕೆ ಈಗ ಏನು ಬಂದಿದೆ, ಯಾರು ಧರ್ಮ ಆದರ ಸಂಸ್ಕೃತಿ ಸಮಾಜದ ಮೇಲೆ ದಾಳಿ ನಡಿಸಿದ್ದಾರೆ, ಎಂಬುದನ್ನು ತಿಳಿದವರು ಬಹಳ ಸ್ವಲ್ಪ ಜನರು. ಇದೇ ರೀತಿ ದಾಳಿ ಕೆಲ ಕಾಲನಡೆದರೆ ನಮ್ಮ ಸಮಾಜ ಚಲ್ಲಾಪಿಲ್ಲಿಯಾಗಿ, ಚೂರು ಚೂರಾಗಿ ಬಾತಿಗೆ ಬಾರದಂತಾಗಿ, ಹೋಗುವದರಲ್ಲಿ ಸಂಶಯವಿಲ್ಲ. ಅದಕ್ಕೆ ಎಲ್ಲ ಸಮಾಜ ಸುಧಾರಕರು ಧರ್ಮಾಭಿಮಾನಿಗಳು ಸ್ವಾಮಿಗಳು ಎಚ್ಚತ್ತು ಈ ದಾಳಿಗಳನ್ನು ತಡೆದು ನಮ್ಮ ಧರ್ಮವನ್ನು ಉಳಿಸಬೇಕು. ಇಷ್ಟೇ ಅಲ್ಲ. ಅದನ್ನು ಸುತ್ತಲೂ ನಾಡು ನಾಡುಗಳಲ್ಲಿ ದೇಶ ದೇಶಗಳಲ್ಲಿ ಹರಡುವಂತೆ, ಬೆಳೆದು ಬಾಳುವಂತೆ ಸಹ ಯತ್ನಿಸಬೇಕು. ಅಂದರೆ ಮಾತ್ರ ಈಗಿನ ಕಾಲದಲ್ಲಿ ನಾವು ಅನ್ನ ಆಶ್ರಯ ಆಚ್ಛಾದನ ಮೊದಲಾದವುಗಳನ್ನು ಕಾಣಬಹುದು. ಇಲ್ಲವಾದರೆ ಎಲ್ಲಿಯೂ ನಮಗೆ ಸ್ಥಾನವೇ ಇಲ್ಲ. ಹೀಗಾಗಿ ನಮಗೆ ಹೀನ ದೀನ ಸ್ಥಿತಿ ಪ್ರಾಪ್ತವಾಗುವದರಲ್ಲಿ ಸಂದೇಹವಿಲ್ಲ. ಇನ್ನು ಆ ದಾಳಿಗಳನ್ನೂ ದಾಳಿಗಾರರನ್ನೂ ವಿವರಿಸುವೆನು.

ವೀರಶೈವರು ಈಚೆಗೆ ಸದಾ ಪರರ ಸಂಸ್ಕೃತಿಗೆ ಪರರ ಧರ್ಮಕ್ಕೆ ಯಾರು ಹೋಗುತ್ತಿರುವರು, ಇದರ ಕಾರಣವು ಏನಿರಬೇಕೆಂದು ಸಕಲರೂ ವಿಚಾರಿಸಬೇಕು. ಹೊರಗಿನಿಂದ ಹೊಸದನ್ನು ಬೇರೆಯಾಗಿ ಹೇಳುವಂಥ

ಉಪದೇಶಿಸುವಂಥ ಜನರು ಬಂದರೆ ತೀರಿತು, ಅವರಿಗೆ ಎಲ್ಲ ರೀತಿಯಿಂದ ಮೋಕಳೀಕು ಮಾಡಿ ಬಿಡುವರು. ಹೀಗಾಗಿ ಅವರು ಮನ ಬಲ್ಲಂತೆ ನಮ್ಮ ಧರ್ಮದ ಹಿಂಸೆ, ಮಾಡುವರು. ಹಿಂದಿನಿಂದ ನಮ್ಮವರೇ ನಮಗೆ ಕೊಡಲಿ ಯಾಗಿ ಬಿಡುವರು. ಹೀಗಾಗಿ ನಮ್ಮ ಸಮಾಜದಲ್ಲಿ ಅನೇಕ ಪಂಗಡಗ ಳಾಗಿರುವವು. ಈ ಪಂಗಡಗಳಲ್ಲಿ ಈರ್ಷ್ಯೆ, ಮತ್ಸರ, ದ್ವೇಷ ಅಸೂಯೇ ಗಳು ಹೆಚ್ಚಾಗಿ ಸಮಾಜದಲ್ಲಿ ಐಕ್ಯತೆ ಇಲ್ಲ. ಸಂಘಟನೆ ಇಲ್ಲ. ಇದರಿಂದ ಸಮಾಜವು ತಾಳ ಮೇಳವಿಲ್ಲದೆ ಮನ ಬಲ್ಲಂತೆ ಕುಣಯುತ್ತ ನಡೆದಿದೆ. ಹೇಳುವ ಅರಸನಿಲ್ಲ, ಕೇಳುವ ಪ್ರಧಾನಿ ಇಲ್ಲ, ಎಂಬಂತೆ ನಮ್ಮ ಹಣೆಯು ಬರಹವಾಗಿದೆ. ಅದಕ್ಕೆ ನಿಸ್ವಾರ್ಥಿಗಳಾದ ಧರ್ಮಾಭಿಮಾನಿಗಳು ಸರಿಯಾದ ರೀತಿಯಲ್ಲಿ ಪ್ರಯತ್ನಿಸಿದರೆ ಈ ದುರವಸ್ಥೆಯು ಹೋಗುವದು. ಇಲ್ಲವಾ ದರೆ ನಾವು ಸ್ವಲ್ಪ ದಿನಗಳಲ್ಲಿ ಹೇಳ ಹೆಸರಿಲ್ಲದೆ ಹೋಗುವೆವು. ಅದಕ್ಕೆ ಎಲ್ಲರೂ ಜಾಗ್ರತರಾಗಿ ಶರಣರ ಕಾಲ, ಶರಣರ ವಚನ, ಶರಣರ ತತ್ವ, ಶರಣರ ನಡೆ. ನುಡಿ. ಶರಣರ ಆಗು ಹೋಗು, ಶರಣರ ಬಾಳು, ಶರಣರ ವಿತ್ತ ಜೀವನ, ಮೊದಲಾದವುಗಳನ್ನು ಚೆನ್ನಾಗಿ ಹರಡಿದರೆ, ನಾವು ಉಳಿದು, ಬಾಳಿ ಬೆಳೆಯುವೆವು.

ಮೊದಲು ನಮ್ಮಲ್ಲಿಯ ಆತಂಕ ಕಲಹಗಳನ್ನು ನಾವು ಬಿಡಬೇಕು. ಪಟ್ಟ-ವಿರಕ್ತರು; ಪಂಚಾಚಾರ-ಬಸವಣ್ಣ ಈ ಬಣಗಳು ಗುರುವರ್ಗ-ಭಕ್ತ ವರ್ಗ; ಮೊದಲಾದ ಜಾತಿವಾಚಕ ಶ್ರೇಷ್ಠತೆಗಳ ಬಗ್ಗೆ ಜಗಳಗಳು ಹೋಗ ಬೇಕು. ಇದು ಇಪ್ಪತ್ತನೇ ಶತಮಾನ, ಎಲ್ಲರೂ ಸುಧಾರಿಸುತ್ತಿರುವರು. ಕೀಳ ಜಾತಿಯವರನ್ನು ಸಹ ಮೇಲು ಜಾತಿಯವರು ಕೂಡಿಕೊಂಡು ಒಂದಾ ಗುವ ಕಾಲಕ್ಕೆ ನಮ್ಮಲ್ಲಿಯ ಅಂತರಿಕ ಜಾತಿಮತ ಹೋಗಲೇಬೇಕು. ಅದು ಹೋಗದೆ ಸುಖ ಸಿಗುವದಿಲ್ಲ. ಯೋಗ್ಯತೆಗೆ ಸ್ಥಾನ ಕೊಟ್ಟರೆ ಬೆಳೆಯುವದು. ಅಂದರೆ ನಮ್ಮ ಮೇಲೆ ಪರಕೀಯರು ಮಾಡುವ ದಾಳಿ ಗಳನ್ನು ತಡೆಯಲಿಕ್ಕೆ ಸಾಮರ್ಥ್ಯಬರುವದು, ನಮ್ಮಲ್ಲಿ ಐಕ್ಯತೆಯು ಬೇರಾಗಿ ನಮ್ಮ ತತ್ವಗಳು ಚನ್ನಾಗಿ ಪ್ರಚಾರವಾಗಹತ್ತಿದರೆ ಅನ್ಯರ ಆಕ್ರಮಣದ ದಾಳಿಗಳು ತಾವಾಗಿಯೇ ನಿಲ್ಲುವದರಲ್ಲಿ ಸಂದೇಹವಿಲ್ಲ. ಅದಕ್ಕೆ ನಮ್ಮ ಲ್ಲಿಯ ಮೇಲಿನ ಜಾತಿಯ ಅಂತರಿಕ ಜಗಳುಗಳು ಮೊದಲು ಅವಶ್ಯ ಹೋಗಲೇಬೇಕು. ಅದಕ್ಕೆ ಸ್ವತಃ ಯೋಗ್ಯ ಸ್ವಾಮಿಗಳೇ ಮುಂದೆಬಂದು

ಎಲ್ಲರಿಗೂ ಬೋಧಿಸುವಂತಾಗಬೇಕು. ಅಂದರೆ ತಾನೇ ಸುಧಾರಣೆಗಳು ಆಗುವವು. ಯಾರಿಂದ ಇದು ಕೆಟ್ಟಿರುವದೋ ಅವರಿಂದಲೇ ಸುಧಾರಣೆಯಾಗುವದೇ ಹೊರತು ಉಳಿದವರಿಂದ ಆಗಹತ್ತಿದರೆ ಘರ್ಷಣೆಗಳೇ ಏಳಹತ್ತುವವು. ಅದಕ್ಕೆ ಮೊದಲು ಯೋಗ್ಯ ಸ್ವಾಮಿಗಳೇ ಇದಕ್ಕೆ ಟೊಂಕಕಟ್ಟಿದರೆ ಉಳಿದವರು ಅನಾಯಾಸ ಅವರ ಬೆನ್ನುಹತ್ತುವದರಲ್ಲಿ ಸಂದೇಹವಿಲ್ಲ.

ಪರಸಂಸ್ಕೃತಿಯವರು ಅಂದರೆ ಇಂಚಗೇರಿ ಸಮಾಜ, ಮುನಿಸಮಾಜ ಅರವಿಂದಸಮಾಜ, ಅದ್ವೈತ ಸಮಾಜ, ಪಂಢರಪೂರ ಸಂತ ಸಮಾಜ, ಇವರು ತಮ್ಮ ಸಂಸ್ಕೃತಿಯನ್ನೂ, ತಮ್ಮ ಇಷ್ಟದೇವನನ್ನೂ ತಮ್ಮ ಗುರುಗಳನ್ನೂ ಪ್ರಚಾರ ಮಾಡುತ್ತಾರೆ. ನಮ್ಮ ವೀರಶೈವ ಸಮಾಜವು ಅದಕ್ಕೆ ತಿಳಿಯದೆ ಮಾರುಹೋಗುತ್ತಿರುವದು. ಹೀಗಾಗಿ ಶರಣರ ಜಗಮಾನ್ಯ ದಿವ್ಯ ತತ್ವಗಳು ನಶಿಸಹತ್ತಿರುವವು. ಇವರಲ್ಲದೆ ಕ್ರಿಶ್ಚಿಯನ್ ಸಮಾಜ ಮುಹಮ್ಮದೀ ಸಮಾಜಗಳ ದಾಳಿಗಳಿಗೆ ಲೆಕ್ಕವಿಲ್ಲ. ಇಷ್ಟಾದರೂ ಯಾರೂ ಇವುಗಳನ್ನು ತಡೆಯುವದಿಲ್ಲ. ಯಾಕಂದರೆ ನಮ್ಮಲ್ಲಿ ಸಂಘಟನೆಯೇ ಇಲ್ಲ. ಸಮಾಜದಲ್ಲಿ ಧನ ಬೇಕಾದಷ್ಟಿದೆ. ಆದರೆ ಯಾರೂ ಧರ್ಮಕಾರ್ಯಕ್ಕೆ ಕೊಡುವದಿಲ್ಲ. ಆದರೆ ಚಯನಿ, ಐಷಆರಾಮು, ದುಶ್ಚಟ, ದುಂದುಗಾರಿಕೆ ಮೊದಲಾದ ಹುಚ್ಚುತನಗಳಲ್ಲಿಯೇ ಹಾಳು ಮಾಡುತ್ತಿರುವರು. ಧಾರ್ಮಿಕ ಜಾಗ್ರತಿ ಮಾಡಬೇಕೆನ್ನುವವರಿಗೆ ಧನವಿಲ್ಲ. ಕೂಳಿಲ್ಲದೆ ಸಾಲದಲ್ಲಿ ಸದಾ ಸಾಯುತ್ತಿರುವದು ಕಂಡುಬಂದಿರುವದು. ಧನ ಮತ್ತು ಬುದ್ಧಿ ಅಂದರೆ ಲಕ್ಷ್ಮೀ ಮತ್ತು ಸರಸ್ವತೀಯರು ಕೂಡಿದರೆ ಧರ್ಮದಲ್ಲಿ ಅದ್ಭುತ ಜಾಗ್ರತಿ ಯಾಗುವದು. ವಿಚಾರವಂತರು ಇದಕ್ಕಾಗಿ ಯತ್ನಿಸುವರೇನೆಂದು ಅವರಿಗೆ ನಾನು ಕೇಳುವೆನು. ಎಷ್ಟೋ ಜನರು ಧನವಂತರಿದ್ದರೂ ಒಂದೂ ಸರಿಯಾದ ಕಾರ್ಯ ಅವರಿಂದ ಆಗುತ್ತಿರುವದಿಲ್ಲ. ಒಂದು ಸುದ್ದಿಯ ಪತ್ರಿಕೆ ಚನ್ನಾಗಿ ಇಲ್ಲ. ಇದ್ದಾಗ ನಮ್ಮ ಸಮಾಜಕ್ಕಾಗಿ ಅಥವಾ ಸಮಾಜದ ಯೋಗ್ಯ ವ್ಯಕ್ತಿಯ ಬಗೆಗಾಗಲಿ ಹೆಚ್ಚಾಗಿ ಬರೆದು ಪ್ರಚಾರ ಮಾಡುವದಿಲ್ಲ. ಅನ್ಯರ ಅಯೋಗ್ಯ ವ್ಯಕ್ತಿಗಳ ಬಗ್ಗೆ ಅವರ ಕಾರ್ಯದ ಬಗ್ಗೆ ಎಲ್ಲ ಪುಟಗಳನ್ನು ತುಂಬ ಬರೆಯುವರು. ಅವರ ತರತರದ ಚಿತ್ರಗಳನ್ನು ಸಹ ಹಾಕುವರು. ಇದು ನಮ್ಮ ಹೀನತನವೇ ಸರಿ. ಮೊದಲು ಈ ಸುದ್ದಿಗಳ ಪತ್ರಿಕೆಗಳು ಇದನ್ನು ಚನ್ನಾಗಿ ಸುಧಾರಿಸಿಕೊಳ್ಳಬೇಕು. ಅಂದರೆ ನಮ್ಮ

ಸಮಾಜ, ಧರ್ಮ, ಸಂಸ್ಕೃತಿ ತತ್ವಗಳು ಉಳಿಯುವವು. ಇಲ್ಲವಾದರೆ ಇಲ್ಲ. ಶರಣಸಾಹಿತ್ಯವೆಂದು ಹೆಸರಿಟ್ಟುಕೊಂಡರೂ ಒಂದು ಶಬ್ದವೂ ಕೂಡ ಶರಣರ ಬಗ್ಗೆ ಅದರಲ್ಲಿ ಇರುವದಿಲ್ಲ. ಅಂದರೆ ಲಕ್ಷ್ಮಿಪತಿ ಎಂದು ಹೆಸರಿಟ್ಟುಕೊಂಡರೂ ಒಂದು ಬಿಡಿ ಕಾಸು ಸಹ ಅವನ ಹತ್ತರ ಇರದಿದ್ದರೆ ಹೇಗೆ ಆಗುವದು? ಅದರಂತೆ ಇವರದೂ ಆಗುವದು. ಎಲ್ಲ ಪತ್ರಿಕೆಗಳ ಸಂಪಾದಕರು ಇದನ್ನು ಬಹು ಕೂಲಂಕಷವಾಗಿ ವಿಚಾರಿಸಬೇಕು. ಈಗಿನ ಕಾಲಕ್ಕೆ ಪತ್ರಿಕೆಗಳು ಬಹಳಷ್ಟು ಕೆಲಸ, ಕ್ರಾಂತಿ, ಜಾಗ್ರತಿ ಸುಧಾರಣೆಗಳನ್ನೂ, ಮಾಡಲು ಬಹಳ ಶಕ್ಯವಾಗಿರುತ್ತದೆ. ಆದಕ್ಕಾಗಿ ಅವರ ಬಗ್ಗೆ ಹೀಗೆ ಬರೆಯಬೇಕಾಯಿತು.

ಮೇಲೆ ಹೇಳಿದವರು ನಮ್ಮ ಸಮಾಜದ ಮೇಲೆ ದಾಳಿಯನ್ನು ಹೇಗೆ ನಡೆಸಿದ್ದಾರೆಂಬುದನ್ನು ಸ್ವಲ್ಪ ವಿವರಿಸುವೆನು.

ಇಂಚಗೇರಿಯವರು [೧] ಮರಾಠಿ ಸಂಸ್ಕೃತಿಯ ಅನುಕರಣವನ್ನೇ ಮಾಡುವರು. ತುಕಾರಾಮ. ರಾಮದಾಸ. ಜ್ಞಾನದೇವ ಇವರ ಅಭಂಗ ಮೊದಲಾದ ಗ್ರಂಥಗಳನ್ನು ನಿತ್ಯ ಪಾರಾಯಣ ಮಾಡುವರು. ಅದನ್ನೇ ಬೋಧಿಸುವರು. ಕಾಕ ಡಾರತಿ ಮಾಡುವರು. ಕೃಷ್ಣ ಗೋಪಿಯರಂತೆ ರಾಸಲೀಲೆ ಅಟಗಳನ್ನಾಡುವರು. ರಾಮಕೃಷ್ಣರ ಭಜನೆ ಮಾಡುವರು. ಸಪ್ತಾಹದಲ್ಲಿ ಸದಾ ಅವರಲ್ಲಿ ಒಬ್ಬನು ತಂಬೂರಿಯನ್ನು ನೆಲಕ್ಕೆ ಇಡದೆ ಕೊರಳಲ್ಲಿ ಹಾಕಿಕೊಂಡು ನಿಲ್ಲುವನು. ಎಲ್ಲವನ್ನೂ ಮರಾಠಿ ಪದ್ಧತಿಯಂತೆ ಇವರು ಮಾಡುವರು. ಈ ಸಮಾಜವನ್ನು ಹೆಚ್ಚಾಗಿ ಇಲ್ಲಿ ಬೆಳೆಸಿದವರು ವೀರಶೈವರು ಕನ್ನಡಿಗರು ಹೊರತು ಬೇರೆ ಇಲ್ಲ. ನಾನು ಮೊದಲು ಇವರ ಗೆಳೆತನವನ್ನು ಕಟ್ಟಿ ಇವರ ತತ್ವಗಳನ್ನು ಅರಿತುಕೊಂಡೆನು. ಅದರಲ್ಲಿ ಸೇರಿ ನೋಡಿಕೊಂಡೆನು. ಇದು ನನ್ನ ಮನಸ್ಸಿಗೆ ಬರಲಿಲ್ಲ. ಅದನ್ನು ಬಿಟ್ಟು ಬೇರೊಂದು ಯೋಗ್ಯವಾದುದನ್ನು ಆರಿಸಹತ್ತಿದೆನು.

ಆರ್ಯಸಮಾಜದವರ ಕೂಡ ಗೆಳೆತನ ನಡಿಸಿ ಅವರ ತತ್ವಗಳನ್ನು ತಿಳಿದುಕೊಂಡೆನು. ಮೊದಲು ಏನೋ ನನಗೆ ಅದು ಚೆನ್ನಾಗಿ ಕಂಡು ಬಂದಿತು. ಆದರೆ ಹಿಂದಿನಿಂದ ಅವರ ವಿಚಾರಗಳು ನನಗೆ ಬರ ಬರುತ್ತ ಅದರಲ್ಲಿ ಸಂಆಳವಾದ ವಿಚಾರಗಳು ಕಾಣಲಿಲ್ಲ. ಅದನ್ನೂ ಕೂಡ ನಾನು ಹೊರಳಿ ನೋಡಲಿಲ್ಲ.

---

[೧] ಈ ಗ್ರಾಮವು ವಿಜಾಪುರ ಉತ್ತರಕ್ಕೆ ೩೦ ಮೈಲು ದೂರವಿದೆ.

ರಾಮಕೃಷ್ಣ ವಿವೇಕಾನಂದರು. ನನ್ನನ್ನು ತಮ್ಮ ಕಡೆಗೆ ಬಹುವಾಗಿ ಸೆಳೆದುಕೊಂಡರು. ಅವರ ಶುದ್ಧ ಪವಿತ್ರ ಚರಿತ್ರೆ, ತತ್ವಗಳು ನನ್ನ ಮೇಲೆ ಚೆನ್ನಾಗಿ ಪರಿಣಾಮ ಮಾಡಿದವು. ನನಗೆ ಧೈರ್ಯ ಉತ್ಸಾಹ ವೀರತನ ತಂದುಕೊಟ್ಟವು. ಆದರೂ ಇದು ನಮ್ಮ ಸಂಸ್ಕೃತಿಯಾಗಿರದೆ ಅದು ಪೂರ್ಣವಿಲ್ಲೆಂದು ಅಂತರಂಗದಿಂದ ಕಂಡು ಬರಹತ್ತಿತು. ಆದರೂ ಶ್ರೀ ರಾಮಕೃಷ್ಣ ವಿವೇಕಾನಂದರನ್ನು ನಾನು ಮರೆಯುವಂತೆ ಇಲ್ಲ.

ಮುನಿ ಸಮಾಜದವರೊಬ್ಬರನ್ನು ಕಂಡು ಚರ್ಚೆ ನಡಿಸಿದೆನು. ಅವನೇನು ಅನುಭವಿಕನೂ ಅಲ್ಲ. ತಪಸ್ವಿಯೂ ಅಲ್ಲ. ಆ ಸಮಾಜದಲ್ಲಿ ಯಾರಿಂದಲೂ ನನ್ನ ಮನಸ್ಸಿಗೆ ಆಕರ್ಷಣೆಯಾಗಲಿಲ್ಲ. ಉಪದೇಶಕ್ಕೆ ೩ ರೂ ೪ ಆಣೆ ಫೀ ಕೊಡಬೇಕು. ಅಲ್ಲದೆ ಪ್ರತಿ ತಿಂಗಳು ನಾಲ್ಕು ಆಣೆ ಫೀ ಕೊಡಬೇಕೆಂದು ಸಹ ಹೇಳಿದರು. ಆಗ ಕೆಲವು ಆಸನಗಳನ್ನು ನಾವು ಹೇಳಿಕೊಡುವೆವೆಂದು ಹೇಳಿದರು. ಇದಕ್ಕಿಂತಲೂ ನನಗೆ ಹೆಚ್ಚಿಗೆ ಗೊತ್ತಿದೆ ಎಂದು ನಾನು ಹೊರಗೆ ಬಂದು ಬಿಟ್ಟೆನು.

ಇಂಚಗೇರಿ ಶಾಖಾದವರು ನನ್ನ ಎಟ್ಟೆತನಕ್ಕೆ ನನ್ನನ್ನು ಬಗಲಿಗೆ ಹಾಕಿಕೊಳ್ಳಲು ಪುನಃ ದೊಡ್ಡ ವಕೀಲಿಯವರ ಮುಖಾಂತರ ಯತ್ನಿಸಿದರು. ಅನೇಕರು ಗುರುವಿನ ಹಾಗೂ ತತ್ವದ ಮಹಿಮೆಯನ್ನು ಬಣ್ಣಿಸಿ ಹೇಳಹತ್ತಿದರು. ಅವರ ಜುಲುಮೆಗಾಗಿ ಪುನಃ ಅವರೊಡನೆ ಸಂಪರ್ಕ ಬೆಳಿಸಿದೆನು. ಕೆಲ ದಿನಗಳ ತನಕ ಆ ಗುರುವಿನ ಕೂಡ ಚರ್ಚೆ ಮಾಡಿದೆನು. ಚರ್ಚೆಯಲ್ಲಿ ನಾನು ಸೋಲಲಿಲ್ಲ. ಅವರು ಸಿಟ್ಟಿಗೆ ಬಂದರು. ಆಗ ನಾನು ನೀವು ಈಗ ಹೇಳುವದನ್ನು ೧೫ ವರ್ಷಗಳ ಹಿಂದೆ ಕಲಿತ್ತಿದ್ದೇನೆ. ಈಗ ನಿಮಗಿಂತ ಹೆಚ್ಚಿಗೆ ಬಂದೇಬರುತ್ತದೆ. ಆದರೆ ನನಗಿಂತ ಹೆಚ್ಚಿಗೆ ಅನುಭವ ವಿದ್ದರೆ ಹೇಳಿರಿ, ಇಲ್ಲವಾದರೆ ಈ ಬೋಧೆಗಳಿಂದ ನನಗೆ ಏನು ಉಪಯೋಗವೆಂದು ಹೇಳಲು? ಅವರು ನಿರುತ್ತರಾದರು. ಹೀಗಾಗಿ ಇವರನ್ನು ನಾನು ತೊರೆದು ಮತ್ತೆ ಹುಡುಕಲಾರಂಭಿಸಿದೆನು. ಹಳ್ಳಿ ಹಳ್ಳಿಗೆ ಈಗ ಅದ್ವೈತ ಸಮಾಜ ಬೆಳೆಯುತ್ತಿರುವದು. ಅವರನ್ನು ನಾನು ಅನೇಕ ಊರುಗಳಲ್ಲಿ ಕಂಡು ಬಂದೆನು. ಅವರ ಕೂಡ ಚರ್ಚೆ ನಡಿಸಿದೆನು. ಅವರು ಓದುವ ಪುಸ್ತಕಗಳು ವೇದಾಂತ ರತ್ನಾಕರ, ಪಂಚೀಕರಣ, ವಿಚಾರ ಚಂದ್ರೋದಯ. ಆದರೆ ಅವರು ಅವುಗಳಿಗೆ ವಿಪರೀತ ಅರ್ಥ ಮಾಡಿ ಕೆಡುತ್ತಿರುವದೇ

ಎಲ್ಲ ಕಡೆಗೆ ಕ್ಷಂಡಿತು. ಆತ್ಮನ ಭೋಗ ಆತ್ಮನಿಗೆ ಶರೀರ ಭೋಗ ಶರೀರಕ್ಕೆ ಶರೀರ ಮಾಡಿದ್ದು. ಆತ್ಮನಿಗೆ ಲೇಪವಿಲ್ಲ. ಶರೀರ ಸುಳ್ಳು, ಶರೀರದ ಕರ್ಮಾದಿಗಳು ಸುಳ್ಳು, ಬೇಕಾದ ಕರ್ಮ ಮಾಡಿದರೂ ಪಾಪವಿಲ್ಲ, ವಾಸನಗಳು ಭೋಗಿಸದೆ ಉಳಿದರೆ ಪುನಃ ಅವುಗಳನ್ನು ಭೋಗಿಸಲಿಕ್ಕೆ ಹುಟ್ಟಿ ಬರಬೇಕಾಗುವದು. ಇದೆಲ್ಲ ಪಂಚ ಭೂತಗಳಿಂದ ಆದದ್ದು ಅದರಲ್ಲಿ ಏನೂ ಹುರುಳಿಲ್ಲ, ಎಂದು ಶ್ರೀ ನಿಜಗುಣ ಶಿವಯೋಗಿಗಳ ಶಕ್ತಿ ವಿಶಿಷ್ಟಾದ್ವೈತ ಮಾರ್ಗಕ್ಕೆ ಶಂಕರಾಚಾರ್ಯರ ಮಾಯಾವಾದದ ಅರ್ಥವನ್ನು ಹಚ್ಚಿ ಜನರಲ್ಲಿ ಬೋಧಿಸಿ ಎಲ್ಲವನ್ನೂ ವಿಪರೀತ ಮಾಡುತ್ತ ಅನೀತಿ ಬೆಳೆಯಲಿಕ್ಕೆ ಹೆಚ್ಚಾಗಿ ಆಸ್ಪದವಾಗಹತ್ತಿದೆ. ಇವರನ್ನೂ ಬಿಟ್ಟು ಬಿಟ್ಟೆನು.

ಶ್ರೀ ಅರವಿಂದ ಸಮಾಜದ ಬಗ್ಗೆ ಕೇಳಿ ಅದಕ್ಕೆ ಗಂಟುಬಿದ್ದೆನು. ಅವರ ಭಕ್ತರ ಗೆಳೆತನ ಗಳಿಸಿ ಅವರ ದರ್ಶನಕ್ಕೆ ಪರವಾನಿಗಿ ತರಿಸಿಕೊಂಡೆನು. ಮೊದಲು ಅವರಿಗೆ ೨-೩ ಸಲ ಮನಿಆರ್ಡರು ಮಾಡಿ ಹಣ ಕಳಿಸಿದೆ. ಸ್ವಂತ ಅರ್ಜಿ ಹಾಕಿದರೂ ಪರವಾನಿಗಿ ಬರಲಿಲ್ಲ. ಅವರ ಮೊದಲಿನ ಪರಮಭಕ್ತರ ಮುಖಾಂತರ ಅರ್ಜಿ ಹೋದಬಳಿಕ ಅನಾಯಾಸ ಪರವಾನಿಗೆ ಬಂದಿತು. ಆನಂದ, ಮಹಾಆನಂದವಾಗಿ ದರ್ಶನಕ್ಕೆ ಹೋದೆ. ಮೊದಲನೆ ಸಲ ದರ್ಶನದಲ್ಲಿ ನನ್ನ ಮನದಲ್ಲಿ ಕೆಲವು ಸಂಶಯ ಸಂಕಲ್ಪಗಳು ಬಂದವು. ಆದರೂ ನಾನು ಸದಾ ಚಿಕಿತ್ಸಕ ಬುದ್ಧಿಯವನಿದ್ದುದರಿಂದ ನನ್ನಷ್ಟಕ್ಕೆ ನಾನೇ ವಿಚಾರಿಸಿಕೊಂಡು ಮುಂದೆ ಸಾಗುತ್ತಿದ್ದೆ. ಎರಡನೇ ವರ್ಷ ಪುನಃ ನೋಡಿಕೊಳ್ಳಬೇಕೆಂದು ಅವರ ದರ್ಶನಕ್ಕೆ ಹೋದೆ. ಆಸಲ ಅದರ ಬಗ್ಗೆ ನನಗೆ ಮೊದಲಿಗಿಂತ ಹೆಚ್ಚಾಗಿ ಅನುಭವ ಉಂಟಾಯಿತು. ಅವರ ತತ್ವಗಳನ್ನು ತಿಳಿದುಕೊಳ್ಳಲಿಕ್ಕೆ ಯತ್ನಿಸಿದೆ. ತಿಳಿಯುದ ಕಠಿಣ ಇಂಗ್ಲೀಷ ಭಾಷೆಯಲ್ಲಿ ಅವರ ಪುಸ್ತಕಗಳು ಕೆಲವು ಅನುವಾದಗಳನ್ನು ನೋಡಿಕೊಂಡೆನು. ಹೊಸದೇನೂ ಹೇಳಿಲ್ಲ. ಶ್ರೀ ರಾಮ ಕೃಷ್ಣ ವಿವೇಕಾನಂದರಿಗಿಂತ ಬೇರೆ ಏನೂ ಹೇಳಿಲ್ಲ. ಗೀತೆಯಲ್ಲಿ ಹೇಳಿದ್ದಕ್ಕಿಂತ ಬೇರೆ ಏನನ್ನೂ ಹೇಳಿಲ್ಲೆಂದು ಅನಿಸಿತು. ಆದರೆ ಹೇಳುವ ಪದ್ಧತಿಯಲ್ಲಿ ಮಾತ್ರ ಬೇರೆ ಇರುವದೆಂದು ಅನಿಸಿತು. ಆದರೂ ಜನ ಇದಕ್ಕಾಗಿ ಇಷ್ಟು ಧನ ಸೂರೆ ಮಾಡುವರೇಕೆ ಎಂದು ವಿಚಾರಿಸಹತ್ತಿದೆ. ಜನ ಮರುಳೋ, ಜಾತ್ರೆ ಮರುಳೋ, ಬಸವಣ್ಣನ ಮೂಗಿನಲ್ಲಿ ಬೆರಳಿಟ್ಟಂತೆ. ಅಕಬರನ

ಕಾಲಕ್ಕೆ ಜೇಡರವನ ಅರಿವೆಯಲ್ಲಿ ಸಕಲ ದೇವಾದಿ ದೇವತೆಗಳು ಕಂಡರೆಂಬ ಕಥೆಯಂತೆ ಇದು ಇರುವದೆಂದು ಅನಿಸಿತು. ಭೂಲೋಕದಲ್ಲಿ ಸ್ವರ್ಗಲೋಕವನ್ನು ತರುವರೆಂದು ಹೇಳುವರು. ಆದರೆ ಅವರ ಆಶ್ರಮದ ಮಗ್ಗಲಿನಲ್ಲೇ ಕೂಳು ಕೂಳು, ಬಟ್ಟೆ ಬಟ್ಟೆ ಎಂದು ಗೋಳಾಡುವ ಅಸಂಖ್ಯ ಜನರನ್ನು ಕಂಡು ಬಹು ಕೆಡಕೆನಿಸಿತು. ಆಶ್ರಮದಲ್ಲಿ ಮಾತ್ರ ಸ್ವರ್ಗಲೋಕ ಇರುವದು ಕಂಡಿತು. ಬಂದವರು ಪ್ರತಿಯೊಂದಕ್ಕೂ ರೊಕ್ಕ ಕೊಡದೆ ಗತ್ಯಂತರವೇ ಇಲ್ಲ. ಅಲ್ಲಿ ಎಲ್ಲವೂ ವ್ಯಾಪಾರವೆಂದು ಅನಿಸಿತು. ಇದರ ಕಥೆಯು ಬಹು ದೊಡ್ಡದಿದೆ. ಪ್ರಸಂಗಬಂದಾಗ ತಿಳಿಸುವೆನು. ಇದು ಒಂದು ರೀತಿಯ ಪ್ರಚಾರ ನಡಿಸಿದ್ದಾರೆಂದು ತಿಳಿಯಿತು. ಆದರೆ ಪ್ರಚಾರ ಪದ್ಧತಿ ಬೇರೆಯಾಗಿದೆ ಎಂದು ಅನಿಸಿತು. ಇದು ನನ್ನ ಆದರ್ಶವಲ್ಲೆಂದು ಅಂತರಂಗದಲ್ಲಿ ಸದಾ ಕೂಗು ಕೇಳಿಸುತ್ತಿತ್ತು. ಇದರ ಬಗ್ಗೆ ನಮ್ಮವರೇ ಹಳ್ಳಿ ಹಳ್ಳಿಗೆ ಹೋಗಿ ಧನ ಕೊಟ್ಟು ಪ್ರಚಾರ ಮಾಡುತ್ತಿರುವದು ಕಂಡುಬಂದಿತು. ಹೀಗಾಗಿ ವೀರಶೈವ ಧರ್ಮಕ್ಕೆ ಇವರಿಂದಲೂ ಆತಂಕವಾಗುತ್ತಿರುವದು ಕಂಡುಬರುವದು.

ಮಹಮ್ಮದೀ ಹಾಗೂ ಕ್ರಿಶ್ಚಿಯನ್ ಧರ್ಮಗಳು ಸದಾ ನಮ್ಮ ನಾಡಿನಲ್ಲಿ ಬಹುವಾಗಿ ಪ್ರತಿಪಟ್ಟಣ ಹಳ್ಳಿಗಳಲ್ಲಿ ಹೆಚ್ಚಾಗಿ ಬೆಳೆದಿದೆ. ಇಂಗ್ಲೀಷರ ಕಾಲಕ್ಕೆ ಇವುಗಳಿಗೆ ಹೆಚ್ಚು ಪ್ರೋತ್ಸಾಹ ದೊರೆತುದರಿಂದ ಬೆಳೆದು ಬಂದಿವೆ. ಧನ ನೌಕರಿ ಸ್ತ್ರೀಯರ ಆಶೆಗಾಗಿ ಜನ ಅತ್ತ ಕಡೆಗೆ ಹೋದರು. ಅವರ ತತ್ವಗಳು ಸರಳವಾದವುಗಳಿರುವವು. ಅವುಗಳಾದರೂ ಬಹಳ ಇರುವದಿಲ್ಲ. ಆದರೂ ಜನರು ಅವುಗಳ ಕಡೆಗೆ ಒಲಿಯುತ್ತಿರುವರು. ಮೇಲಿನ ಕಾರಣಗಳ ಮೂಲಕ ಈಗ ಸ್ವಾತಂತ್ರ್ಯಸಿಕ್ಕ ಬಳಿಕ ಇದರ ವೇಗವು ಮಾತ್ರ ಸ್ವಲ್ಪ ಕಡಿಮೆಯಾಗಿದೆ ಎಂಥರೂ ಅಡ್ಡಿ ಇಲ್ಲ.

ಆದರೂ ನಮ್ಮ ನಾಡಿನವರು ಮುಖ್ಯವಾಗಿ ವೀರಶೈವರು ಮೇಲ್ಕಂಡ ಸಮಾಜಗಳ ಬಗ್ಗೆ ಜಾಗ್ರತರಾಗಿ ಇರುವದು ಅವಶ್ಯವಾಗಿರುವದು. ಇವರದು ಸಾವಧಾನವಾಗಿ ಸದಾ ಕಾರ್ಯ ನಡೆದಿರುವದು ಕಂಡುಬರುತ್ತಿರುವದು. ಆದ್ದರಿಂದ ವೀರಶೈವರು ಸದಾ ಹಳ್ಳಿಗಳಿಗೆ ವೀರಶೈವ ಧರ್ಮೋಪದೇಶಕರನ್ನು ಕಳಿಸಬೇಕು. ವಚನಸಾಹಿತ್ಯವನ್ನು ಪ್ರಚಾರ ಮಾಡಬೇಕು. ಧರ್ಮ

ಬಿಟ್ಟು ಹೋದವರನ್ನು ಪುನಃ ಖರವಮಾಡಿಕೊಳ್ಳಬೇಕು. ಧರ್ಮದಲ್ಲಿ ಎಲ್ಲರೂ ಸರಿಸಮಾನರು. ಎಲ್ಲರಿಗೂ ಹಕ್ಕುಬಾಧ್ಯತೆಗಳನ್ನು ಕೊಡಬೇಕು. ಹೀಗೆ ಅವರು ಜಾಗ್ರತರಾಗಿರಬೇಕು.

ಪಂಢರಪುರ ಸಂತಸಮಾಜವು ಹಳ್ಳಿಗಳಲ್ಲ ಸದಾ ತಿರುಗಿ ರಾಮ, ಕೃಷ್ಣ, ವಿಠ್ಠಲ ಇವರ ಭಜನೆ ಕೀರ್ತನೆಗಳನ್ನು ಮಾಡುತ್ತಲೂ ಮಾಡಿಸುತ್ತಲೂ ತಿರುಗುವರು. ೫೦೦–೬೦೦ ಜನರ ದೊಡ್ಡ ಗುಂಪು ಹೆಣ್ಣುಗಂಡು ಕೂಡಿ ಪಾದಚಾರಿಗಳಾಗಿ ಪ್ರವಾಸ ಮಾಡುವರು. ಸಪ್ತಾಹ ಮಾಡಿಸುವರು. ಮೊದಲು ೩-೪ ಜನರು ಬರುವರು. ಸ್ವತಃ ೩–೪ ಗ್ಯಾಸುಗಳನ್ನು ಸಂಗಡ ತರುವರು. ಕೀರ್ತನ ಪ್ರಾರಂಭ ಮಾಡುವರು. ನಮ್ಮ ವೀರಶೈವರೇ ಅವರ ಕೂಡ ಬೆರೆತು ಪ್ರಚಾರ ಮಾಡುವರು. ದೊಡ್ಡ ದೊಡ್ಡ ಅದ್ಭುತ ಭಿತ್ತಿಪತ್ರಿಕೆಗಳನ್ನು ಗೋಡೆಗೆ ಅಂಟಿಸುವರು. ಅಘಟಿತ ಘಟನೆ, ಘಟಿಸದಂಥ ಭಯಂಕರ ಘಟನೆ, ಎಂದು ಜಾಹಿರಾತಗಳನ್ನು ಹಂಚುವರು. ಹೀಗಾಗಿ ಮರಾಠಿ ಭಾಷೆಯ ಪ್ರಚಾರವನ್ನು ಸಹ ಮಾಡುವರು. ಇವರಲ್ಲಿ ಪ್ರತಿಯೊಬ್ಬನು ತಮ್ಮ ಸಂಸ್ಕೃತಿ, ಧರ್ಮ, ದೇವನನ್ನು ಪ್ರಚಾರ ಮಾಡುವನು. ಕನ್ನಡಿಗರು ಅದರಲ್ಲಿ ವೀರಶೈವರು ಅವರಿಗೆ ಮರುಳಾಗಿ ದುಡ್ಡನ್ನು ಕೊಟ್ಟು ಅವರಿಗೆ ಪ್ರೋತ್ಸಾಹ ಕೊಡುವರು. ಈ ಸಂತಸಮಾಜವು ನನ್ನ ಜನ್ಮ ಭೂಮಿಗೊಮ್ಮೆ ಬಂದಿತ್ತು. ಅವರ ಕೂಡ ಚರ್ಚೆ ಮಾಡಿದೆನು. ಅವರಲ್ಲಿ ಯಾವ ತತ್ವವೂ ಹೊರಡಲಿಲ್ಲ. ಬರೇ ಪ್ರಚಾರ ಮಾಡಿ ಹೊಟ್ಟೆ ಹೊರಗೆಹಾಕುವದೂ ದುಡ್ಡನ್ನೆಲ್ಲ ಸಂಗ್ರಹ ಮಾಡಿ, ಪಂಢರಪುರದಲ್ಲಿ ಆಸ್ತಿ ಮಾಡುವದೂ ಇವರ ಉದ್ಯೋಗವೆಂದು ಅನುಭವವಾಯಿತು. ಆಗ ಶಕ್ಯವಿದ್ದಷ್ಟು ನಾನು ಪ್ರತಿಕಾರ ಒಡ್ಡಿದರೂ ಜನರು ಕೇಳಲಿಲ್ಲ. ಅವರು ಹೇಳಿದಂತೆ ಕುಣಿದರು. ೭–೮ ದಿನ ಅವರ ಬೆನ್ನ ಹತ್ತಿ ಓಡಾಡಿದರು ನಮ್ಮವರು. ಅವರನ್ನು ನಮ್ಮವರು ಅನೇಕ ಬಗೆಯಾಗಿ ಬಣ್ಣಿಸಿದರು. ಈ ಎಲ್ಲ ಕಾರ್ಯಗಳಿಂದ ನಮ್ಮ ಧರ್ಮ, ಸಂಸ್ಕೃತಿ, ಭಾಷೆ ಮೊದಲಾದವುಗಳು ದಿನ ನಿತ್ಯ ಸೊರಗಿ ಸಾಯುತ್ತಿರುವದು ಕಂಡುಬಂದಿರುವದು. ಇದರಿಂದ ನಮ್ಮ ಜನರು ಪಂಢರಪುರಕ್ಕೆ ಅತಿಯಾಗಿ ಹೋಗಿ ಅಲ್ಲಿ ರೊಕ್ಕ ಸುರುವಿಬರುವದು ಕಂಡುಬರುತ್ತದೆ.

ಈ ಮೇಲಿನ ಸಮಾಜದವರೆಲ್ಲರೂ ಒಂದು ಅದ್ಭುತ ಚರಿತೆಯನ್ನೂ ಪವಾಡಗಳನ್ನೂ ರೀತಿಗಳನ್ನೂ ಅಘಟಿತ ಘಟನೆಗಳನ್ನೂ ತಮ್ಮ ಗುರುಗಳು ದೇವರು ಮಾಡಿರುವರೆಂದು ಹೇಳುತ್ತ ಹೋಗುವರು. ಅದರಂತೆ ಪುಸ್ತಕ ಬರೆದು ಪ್ರಸಿದ್ಧಿಸುವರು. ಅದರಂತೆ ಕೀರ್ತನೆ ಮಾಡುವರು. ಎಲ್ಲ ಬಗೆಯ ಪ್ರಚಾರ ಕಾರ್ಯಗಳನ್ನು ಒಳ್ಳೇ ಸುಸಜ್ಜಿತ ರೀತಿಯಲ್ಲಿ, ಒಳ್ಳೇ ಸಂಘಟನೆಯಿಂದ ಮಾಡುವರು. ಇದರಿಂದ ಅವುಗಳ ಅಂತರಂಗದಲ್ಲಿ ಏನು ಇರುವದೆಂಬುದು ಯಾರಿಗೂ ಗೊತ್ತಾಗುವದಿಲ್ಲ. ಅಂಥ ಪದ್ಧತಿ ರೀತಿ ನಿಯಮಗಳನ್ನು ಹಾಕಿರುವರು.

ಈ ಪ್ರಕಾರ ನಮ್ಮ ಕನ್ನಡನಾಡಿನ ಮೇಲೆ ಸುತ್ತುಕಡೆಯಿಂದ ಪರರ ದಾಳಿಗಳು ಸದಾ ನಡೆದಿರುವವು. ಹೆರವರು ಸಂಪೂರ್ಣ ನಮ್ಮ ಒಳಹೊಕ್ಕು ಕಾರ್ಯ ನಡಿಸಿದ್ದಾರೆ. ಹೀಗಾಗಿ ನಮ್ಮ ನಾಡನ್ನು ನಮ್ಮವರು ಈಗ ಕಳೆದುಕೊಂಡಿರುವರು. ಉಳಿದ ನಾಡಿಗೂ ಮರಾಠಿಗರು ಹೆಣಗುತ್ತಿರುವರು. ಆದರೆ ನಾವು ಕನ್ನಡಿಗರು ವೀರಶೈವರು ನಮ್ಮಲ್ಲಿ ನಾವು ಬಡಿದಾಡುತ್ತ ಅವರಿಗೆ ಪ್ರತೀಕಾರ ಮಾಡದೆ ಇರುವದರಿಂದ ನಮ್ಮ ನಾಡನ್ನು ಮುಂದೆ ಹೆರವರು ತೆಗೆದುಕೊಳ್ಳುವರೆಂದೇ ಧಾರಾಳವಾಗಿ ಹೇಳಬಹುದು. ನಮ್ಮಲ್ಲಿ ಸಂಘಟನೆ ಇಲ್ಲ, ಹೊರಗಿನವರಂತೆ ಪ್ರಯತ್ನ, ಸಾಹಸ, ಧೈರ್ಯಗಳೂ ಇಲ್ಲ. ಅವರಂಥ ತ್ಯಾಗ ನಮ್ಮಲ್ಲಿ ಇಲ್ಲ. ಅವರಂತೆ ಪ್ರಚಾರವನ್ನಂತೂ ಯಾರೂ ಮಾಡುವದೇ ಇಲ್ಲ. ಅವರಂತೆ ಚಿಕ್ಕಬೆಲೆಯಲ್ಲಿ ಪುಸ್ತಕ ಬರೆದು ಎಲ್ಲ ಕಡೆಗೂ ಪ್ರಚಾರ ಮಾಡುವದಿಲ್ಲ. ನಮ್ಮಲ್ಲಿಯ ಬಣ ಜಗಳಗಳ ಉಪಯೋಗವನ್ನು ಬೇರೆಯವರು ಮಾಡಿಕೊಳ್ಳುವರು. ಗುರು-ಭಕ್ತ, ಪಟ್ಟ—ವಿರಕ್ತ, ಪಂಚಾಚಾರ-ಬಸವಣ್ಣ, ಈ ಬಣಗಳು ಹೋಗದ ಹೊರತು ನಮ್ಮ ಧರ್ಮ, ನಾಡು, ಸಂಸ್ಕೃತಿ, ಸಮಾಜ ಇವು ಸುಧಾರಿಸಲಾರವು. ಇವು ಉಳಿದು ಬಾಳಿಬೆಳೆದು ಪ್ರಕಾಶಿಸಲಾರವು.

ನನಗೆ ತಿಳಿದಮಟ್ಟಿಗೆ ಎಲ್ಲರಕೂಡ ಕೆಲವುಕಾಲ ಸಂಪರ್ಕಬೆಳಸಿ ಅವರ ತತ್ವಗಳನ್ನು ಶಕ್ಯವಿದ್ದಷ್ಟು ಅಭ್ಯಸಿಸಿ ನೋಡಿಕೊಂಡು ಅನುಭವಿಸಿ ಬಿಟ್ಟಿದ್ದೇನೆ. ಜಗತ್ತಿನಲ್ಲೇ ಹಿಂದೂ ಧರ್ಮದ ತತ್ವಗಳು ಹೆಚ್ಚೆಂದು ಶ್ರೀ ವಿವೇಕಾನಂದರು ಚಿಕಾಗೋ ಸರ್ವಧರ್ಮ ಸಮ್ಮೇಳನದಲ್ಲಿ ಸಿದ್ಧಮಾಡಿ ತೋರಿಸಿದ್ದಾರೆ. ಈ ಹಿಂದೂ ಧರ್ಮದಲ್ಲಿ ಅನೇಕ ಬೇರೆ ಬೇರೆ ಸಮಾಜಗಳ ಧರ್ಮತತ್ವಗಳುಂಟು. ಆ ಎಲ್ಲವುಗಳಲ್ಲಿ ವೀರಶೈವ ಧರ್ಮವು ಹೆಚ್ಚು ವಿಶಾಲ,

ಉದಾತ್ತ, ಯೋಗ್ಯ, ಪರಿಪೂರ್ಣ ಸಮತಾಭಾವದ್ದೆಂದೂ ಭೇದರಹಿತವೆಂದೂ ಈಗಿನ ಕೆಲವರಿಗೆ ತಿಳಿದುಬರಹತ್ತಿದೆ. ಇದರಲ್ಲಿಯ ಅಷ್ಟಾವರಣ, ಪಂಚಾಚಾರ ಷಟ್—ಸ್ಥಲಗಳೂ ಇಷ್ಟಲಿಂಗ ಪ್ರಾಣಲಿಂಗ ಭಾವಲಿಂಗ ತತ್ವಗಳೂ ಲಿಂಗಾಂಗ ಸಮರಸ, ಉಂಡುಉಪವಾಸಿ, ಬಳಿಸಿಬಹ್ಮಚಾರಿ, ಲಿಂಗ ಭೋಗೋಪಭೋಗ, ಕಾಯಕ, ಕಾಯಕಗಳು ಗುರುಲಿಂಗ ಜಂಗಮುಕ್ಕೂ ಬೇಕು, ದಯವೇ ಬೇಕು ಸಕಲಪ್ರಾಣಿಗಳೆಲ್ಲರಲ್ಲಿ, ತ್ಯಾಗವೇ ಧರ್ಮದ ಮೂಲ, ದಾಸೋಹಭಾವ, ವೀರವೃತ್ತಿ, ಸತ್ಯಾಗ್ರಹ, ಅನುಭವ ಮಂಟಪ, ಶಿವಾನುಭವ, ಶಿವಯೋಗ, ಕರಣಪ್ರಸಾದ, ಪಾದೋದಕ ಪ್ರಸಾದ, ಶಕ್ತಿ ವಿಶಿಷ್ಟಾದ್ವೈತ, ಶಿವಶಕ್ತಿಯರು ಈ ಎಲ್ಲ ಅನೇಕ ತತ್ವಗಳ ವಿಚಾರವನ್ನು ಕೂಲಂಕಷವಾಗಿ ವಿಚಾರಿಸಿದರೆ, ಇವುಗಳ ಅಂತರಿಕ ಅರ್ಥಗಳನ್ನು ತಿಳಿದುಕೊಂಡರೆ, ಎಂಥ ತತ್ವಗಳನ್ನು ನಮ್ಮ ಶರಣರೂ ಪುರಾತನರೂ ಕಂಡುಂಡು ನಮಗಾಗಿ ಬರೆದು ಹೇಳಿಹೋದರೆಂದು ಅನಿಸದೆ ಇರಲಾರದು.

ಇದಕ್ಕಾಗಿಯೇ ಒಬ್ಬ ಜರ್ಮನ ಪಂಡಿತನೂ ಹಾಗೆಯೇ ಕೆಲವು ಸಮಾಜಗಳ ಪಂಡಿತರೂ ವೀರಶೈವ ಧರ್ಮವನ್ನು ತಿಳಿದುಕೊಂಡು ಸ್ವೀಕರಿಸಿದ್ದು ಕಂಡು ಬರುತ್ತದೆ. ಇದು ಯಾರಿಗೆ ಅಭಿಮಾನವೆನಿಸಲಿಕ್ಕಿಲ್ಲ ? ಈ ಪ್ರಕಾರ ನಮ್ಮ ಸ್ವಾಮಿಗಳೂ ಧರ್ಮಾಭಿಮಾನಿಗಳೂ ಸಮಾಜ ಹಿತ ಚಿಂತಕರೂ ಹೆಚ್ಚಿಗೆ ಕಲಿತು ಅನುಭವ ಪಡೆದುಕೊಂಡು ಧರ್ಮದ ದಿವ್ಯತತ್ವಗಳನ್ನು ದೇಶ ವಿದೇಶಗಳಲ್ಲಿ ಧರ್ಮ ಪರಧರ್ಮಗಳ ರಂಗದಲ್ಲಿ ಯೋಗ್ಯರೀತಿಯ ಪ್ರಚಾರ ಕಾರ್ಯಗಳನ್ನು ಒಳ್ಳೇ ಸಂಘಟನೆಯಿಂದ ಮಾಡಿದ್ದಾದರೆ, ಇಡೀ ಅರ್ಥಗೋಲದಲ್ಲಿಯೇ ವೀರಶೈವ ಧರ್ಮವು ಬೆಳೆದು ನಿಲ್ಲುವದರಲ್ಲಿ ಸಂಶಯವಿಲ್ಲ.

ಕುಮಾರ ಸ್ವಾಮಿಗಳು ಧರ್ಮದ ಬಗ್ಗೆ ಇಂಗ್ಲೀಷ ಹಿಂದೀ ಮರಾಠಿಗಳಲ್ಲಿ ಮದ್ರಾಸ, ಅಲೀಗಡ, ಮುಂಬಯಿ, ದಿಲ್ಲಿ, ಕಲಕತ್ತಾ ಯುನಿವರ್ಸಿಟಿಗಳಲ್ಲಿ ವೀರಶೈವದ ಬಗ್ಗೆ ಭಾಷಣಮಾಡಿದ್ದಾರೆ. ಹೀಗಿದ್ದ ನಮ್ಮ ಧರ್ಮವು ಇಷ್ಟು ಹಾಳಾಗಲಿಕ್ಕೆ ಕೇವಲ ನಮ್ಮ ಸ್ವಾರ್ಥ ಒಳಜಗಳಗಳೇ ಕಾರಣವಾಗಿರುವವು. ಯೋಗ್ಯತೆಯುಳ್ಳವರಿಗೆ ನಮ್ಮವರು ಸ್ಥಾನಮಾನಕೊಡದೆ ಇರುವದೇ ಮುಖ್ಯ ಕಾರಣವು. ಗುರುವಿನ ಗುತ್ತಿಗೆಯು ಒಂದೇ ಜಾತಿಗೆ ಇದ್ದುದೇ ಕಾರಣ. ಇವೆಲ್ಲ ಹೋಗದ ಹೊರತು ನಮ್ಮ ಧರ್ಮ ಉಳಿಯಲಾರದು, ಬಾಳಲಾರದು, ಬೆಳೆಯಲಾರದು.

ಮೇಲೆ ಕಾಣಿಸಿದ ಕುಮಾರ ಸ್ವಾಮಿಗಳನ್ನು ನಮ್ಮ ಸಮಾಜದವರು ಮನ್ನಿಸ ಪಡಿಲ್ಲ. ಬರೇ ವಿಚಾರವಂತರು ಮಾತ್ರ ಅವರನ್ನು ಮನ್ನಿಸುವರು. ಅಲ್ಲದೆ ವಿಜಾಪುರದ ಶ್ರೀ ಫ ಗು. ಹಳಕಟ್ಟಿಯವರು ಸತತ ೩೦ ವರ್ಷಗಳಿಂದಲೂ ಏಕ್ಕೈಕವಾಗಿ ಯಾರ ನೆರವು ಇಲ್ಲದೆ ವೀರಶೈವ ಧರ್ಮದ ಬಗ್ಗೆ ಅನೇಕ ಮುಖವಾಗಿ ದುಡಿದರು, ಅನೇಕ ಗ್ರಂಥಗಳನ್ನು ಪ್ರಸಿದ್ಧಿಸಿದರು. ವೀರಶೈವವೆಂದರೆ ಯಾರಿಗ ಗೊತ್ತಿತ್ತು ? ಶರಣರನ್ನು ಯಾರು ಬದುಕಿಸಿ ಜೀವ ದಾನಮಾಡಿದರು ? ವಚನಗಳನ್ನು ಪುನಃ ಯಾರು ಹಡೆದರು ? ಷಟ್-ಸ್ಥಲಗಳನ್ನು ಯಾರು ಪ್ರಚಾರ ಮಾಡಿದರು ? ಅಷ್ಟಾವರಣಗಳ ಇಂಗಿತವನ್ನು ಯಾರು ತಿಳಿಸಿದರು ? ಬಸವನನ್ನು ಪ್ರಕಟಗೊಳಿಸಿ ಪ್ರಕಾಶಕ್ಕೆ ತಂದವರಾರು ? ಅಕ್ಕನ ಬಗ್ಗೆ ಯಾರಿಗೆ ಗೊತ್ತಿತ್ತು ? ಅಕ್ಕನ ಬಳಗ, ಬಸವನ ಬಳಗ, ಶರಣರ ಬಳಗಗಳನ್ನು ಯಾರು ಪ್ರಚಾರಮಾಡಿದರು ? ಅಲ್ಲಮಪ್ರಭು, ಸಿದ್ಧರಾಮರನ್ನು ಯಾರು ಬೆಳಕಿಗೆ ತಂದರು ? ಆದರೆ ನಮ್ಮ ಸಮಾಜದವರು ಕಣ್ಣುಮುಚ್ಚಿ ಮೆಲಕು ಹಾಕುತ್ತಿರುವರು. ಇದು ಬಹು ಶೋಚನೀಯವೇ ಸರಿ. ಸಿದ್ಧೇಶ್ವರ ಸಂಸ್ಥೆ ವೀರಶೈವವಿದ್ಯಾಸಂಸ್ಥೆಗಳು ಯಾರಿಂದ ಪೋಷಿಸಲ್ಪಟ್ಟಿರುವವೋ ಅವರೇ ಈಗ ಕೊಳೆಯುತ್ತಿರುವರು. ಇದು ನಮ್ಮ ವೀರಶೈವರು ಅವರ ಬಗ್ಗೆ ತೋರುತ್ತಿರುವ ಕೃತಘ್ನತೆಯಲ್ಲದೆ ಮತ್ತೇನು? ನ್ಯಾಯ ನಿಷ್ಠುರವಾದ ಸನಾತನವಾದ ನಮ್ಮ ಸಮಾಜವನ್ನು ಎದುರಿಸಿ ನಿಲ್ಲಬೇಕಾಗಿರುವದು. ಆದರೂ ಸತ್ಯವಾದುದನ್ನೇ ಮಾತ್ರ ನಿಷ್ಠುರವಾಗಿ ಜನರಮುಂದಿಡುವದು ಅವಶ್ಯವು. ಅವು ಕೆಲವರಿಗೆ ಮಾತ್ರ ಕಹಿಯಾಗಿ ಕಠೋರವಾಗಿ ಪರಿಣಮಿಸುತ್ತಿರುವವೆಂದು ತೋರಿರುವದು. ಆದರೂ ಇಂದಿಲ್ಲ ನಾಳೆಯಾದರೂ ಇದು ಎಲ್ಲರಿಗೂ ಸರಿಯಾಗುವದೆಂದು ಆಶೆ ಇರುವದು. ಶ್ರೀ ಹಳಕಟ್ಟಿಯವರಿಗೆ ಅನೇಕ ಬಿರುದುಗಳುಂಟು. ಈಗ ೭೬ ವರ್ಷಗಳಾಗಿವೆ. ಅವರಿಗೆ ಯಾರ ನೆರವೂ ಸಹಕಾರವೂ ಇಲ್ಲ. ಸಹಾಯವಂತೂ ಇಲ್ಲವೇ ಇಲ್ಲ. ಆದರೂ ಅವರು ವೀರಶೈವವನ್ನು ಪೋಷಿಸುತ್ತ ಅದಕ್ಕೆ ನೀರೆರಿಯುತ್ತ, ಅದಕ್ಕೆ ಹತ್ತಿದ ಕ್ರಿಮಿಕೀಟಕಗಳನ್ನು ತೆಗೆಯುತ್ತ ಹೊರಟಿದ್ದಾರೆ. ಆದರೂ ಯಾರದೂ ಇವರ ಕಡೆಗೆ ಲಕ್ಷವಿಲ್ಲ. ಈಗೀಗ ಮಾತ್ರ ಅವರಿಗೆ ನಿಧಿ ಕೂಡಿಸಿಕೊಡಬೇಕೆಂದು ಎತ್ತುಗಡೆ ನಡೆದದೆ.

ಬೆಳಗಾಂವಿಯಲ್ಲಿ ಅದರಂತೆ ನಿಧಿ ಕೂಡಿಸುವ ಕೆಲಸ ನಡೆದದ್ದು ಕಂಡು ಬರುತ್ತದೆ. ಶ್ರೀ ಮ. ನಿ. ಪ್ರ. ಸ್ವರೂಪಿಗಳಾಗಿದ್ದ ನಾಗನೂರ ಸ್ವಾಮಿಗಳು

ಪ್ರಯತ್ನಿಸುತ್ತಿದ್ದಾರೆ. ಅದರಂತೆ ನಾಡಿನಲ್ಲಿ ಸಿಧಿ ಕೂಡಿಸಲಿಕ್ಕೆ ಎಲ್ಲ ಸ್ವಾಮಿಗಳೂ ಯತ್ನಿಸಬೇಕು. ಅಲ್ಲದೆ ಮೊನ್ನೆ ಮೊನ್ನೆ ಶ್ರೀ ಸಿದ್ಧೇಶ್ವರ ಸಂಸ್ಥೆಯವರು ಶ್ರೀ ಮ. ನಿ. ಪ್ರ. ಸ್ವರೂಪಿಗಳಾದ ಬಂಥನಾಳ ಮಹಾಶಿವ ಯೋಗಿಗಳ ಆಶ್ರಯದಲ್ಲಿ ನಿಧಿಕೂಡಿಸಬೇಕೆಂದು ನಿರ್ಣಯಮಾಡಿ ಅದ ರಂತೆ ಪ್ರಕಟನೆ ಹೊರಟಿದೆಯೆಂದು ನನಗೆ ತಿಳಿದು ಆನಂದ ಮಹಾನಂದ ಅತ್ಯಾನಂದವಾಗಿದೆ. ಇಷ್ಟು ದಿವಸಗಳಾದಮೇಲೆ ವಿಜಾಪುರದವರು ಅವರ ಕಡೆಗೆ ದಯಾದೃಷ್ಟಿಯನ್ನು ಬೀರಿದರಲ್ಲಾ ಎಂದು ಆನಂದವಾಯಿತು. ಹೀಗೆ ನಮ್ಮಲ್ಲಿಯ ಯೋಗ್ಯ ವೀರಶೈವ ಧರ್ಮಾಭಿಮಾನಿಗಳಿಗೆ ನಮ್ಮ ಸಮಾಜದವರು ನೆರವಾದರೆ ಪರರಿಂದ ಆಗುವ ದಾಳಿಗಳು ತಾವಾಗಿಯೇ ನಾಶವಾಗಿ ಹೋಗುವವು. ಅಲ್ಲದೆ ಸುತ್ತಲಿನ ದೇಶ ವಿದೇಶಗಳಲ್ಲಿಯೂ ನಮ್ಮ ಧರ್ಮ ಬೆಳೆದು ವಿಶ್ವಧರ್ಮವಾಗುವದರಲ್ಲಿ ಸಂದೇಹವೇ ಇಲ್ಲ.

ನಾನು ಎಲ್ಲ ಕಡೆಗೆ ಅಲೆದು ಎಲ್ಲರ ಬಗ್ಗೆ ಅನುಭವ ತಕ್ಕೊಂಡು ಶರಣರ ತತ್ವಕ್ಕೆ ಶರಣರ ಚರಿತೆಗಳಿಗೆ ಸಂಪೂರ್ಣ ಮಾರುಹೋಗಿದ್ದೇನೆ. ಶ್ರೀ ಬಸವಣ್ಣನು, ಅಕ್ಕ ಮಹಾದೇವಿ, ಚನ್ನ ಬಸವ, ಸಿದ್ಧರಾಮ, ಅಲ್ಲಮ ಪ್ರಭುಗಳು ನನ್ನ ಉಸುರಾಗಿದ್ದಾರೆ. ಹರಳಯ್ಯಾ, ಅಂಬಿಗರ ಚವಡಯ್ಯಾ, ಮಡಿವಾಳ ಮಾಚಯ್ಯಾ, ದೇವರ ದಾಸಿಮಯ್ಯಾ ಮೊದಲಾದ ಅಸಂಖ್ಯಾತ ಶರಣರು ನಮ್ಮ ನರನಾಡಿ ರೋಮ ರೋಮಗಳಲ್ಲಿ ವಿಹರಿಸಹತ್ತಬೇಕು. ಸಕಲ ಶರಣೆಯರು ಮನ, ನಯನ, ಕರಣ ವಚನಗಳಲ್ಲಿ ತುಂಬ ಬೆಳಗ ಬೇಕು.

ನಾನು ಪಂಡಿತನಲ್ಲ, ನೌಕರಿಯಲ್ಲಿ ೧೫ ವರ್ಷ ಪುಸ್ತಕಗಳನ್ನು ತೆರೆದು ಓದಿಲ್ಲ. ಏನೋ ಶರಣ ಶರಣೆಯರ ಪ್ರೇರಣೆಯಿಂದ ಶ್ರೀ ಫ. ಗು. ಹಳ ಕಟ್ಟಿಯವರ ಆಗ್ರಹದ ಮೇರೆಗೆ ಈಚೆಗೆ ಬರೆಯುತ್ತಿರುವೆನು. ನುಡಿಯು ತ್ತಿರುವೆನು. ಮೊದಲು ನನಗೂ ಅವರಿಗೂ ಪರಿಚಯವಿತ್ತು. ಈ ೧೫-೨೦ ವರ್ಷ ಅವರನ್ನು ನಾನು ಸಂಪೂರ್ಣ ಮರೆತಿದ್ದೆ. ಅಜಮಾಸು ಮೂರ್ರು ವರ್ಷಗಳ ಹಿಂದೆ ನನ್ನನ್ನು ಅವರು ಕರಿಸಿ ಸಮಾಜದ ಸದ್ಯದ ಸ್ಥಿತಿ ಯನ್ನು ನನ್ನ ಮುಂದೆ ನಿವೇದಿಸಿದರು. ಆಗ ಶಿವಾನುಭವಕ್ಕಾಗಿ ಶರಣರ ವಾಙ್ಮಯಕ್ಕಾಗಿ ಕಾರ್ಯ ಮಾಡಲು ತಿಳಿಸಿದರು. ಆಗ ಕೆಲಸ ಮಾಡು ವೆನೆಂದು ನಾನು ಹೇಳಿ ಈಗ ಏನೋ ಅಲ್ಪ ಸ್ವಲ್ಪ ಕಾರ್ಯಕ್ಕೆ ತೊಡ

ಗಿದ್ದೇನೆ. ಆದರೆ ಇನ್ನೂ ಸಾಧಿಸಬೇಕಾದದ್ದು ಬಹಳ ಇರುವದು; ಅದಕ್ಕೆಲ್ಲ ದುಡ್ಡು ಬೇಕು, ಧನಬೇಕು, ನಿಷ್ಠೆಬೇಕು. ಅಂದರೆ ವೀರಶೈವರ ಮೇಲೆ ಆಗುತ್ತಿರುವ ದಾಳಿಗಳಿಗೆ ತಡೆಹಾಕಲಿಕ್ಕೆ ಬರುವದು. ಸಕಲ ನಾಡ ಹಿರಿಯರು ಕಿರಿಯರು ಇದನ್ನು ವಿಚಾರಿಸಿ ಮುಂದೆ ಬಂದು ಪ್ರತಿ ಹಳ್ಳಿ, ಪ್ರತಿ ತಾಲೂಕು, ಪ್ರತಿ ಜಿಲ್ಹೆಗಳಲ್ಲಿ ನಿಧಿ ಕೂಡಿಸುವ ಎತ್ತುಗಡೆ ನಡೆದು ದೊಡ್ಡ ನಿಧಿ ಕೂಡಿಸಿ ಯೊಗ್ಯ ರೀತಿಯ ಪ್ರಚಾರ ನಡೆಯಬೇಕು. ಈ ಮೇಲ್ತರದ ವಚನಸಾಹಿತ್ಯವು ಅಗ್ಗವಾಗಿ ಮನೆಮನೆಗೆ ಓದಲು ಸಿಗುವಂತೆ ಆಗಬೇಕು. ಆಗ ನಾವು ಶ್ರೀ. ಫ. ಗು. ಹಳಕಟ್ಟಿಯವರು ಮಾಡಿದ ಉಪಕಾರವನ್ನು ತೀರಿಸುವದು ಆಗುವದಿಲ್ಲ. ಆದರೂ ಅಳಿಲ ಸೇವೆಯೆಂದು ಅವರ ನಿಧಿ ಕೂಡಿಸುವದು ನಡೆಯಬೇಕು. ನಿಧಿ ಕೂಡಿಸುವ ಎಲ್ಲ ಮುಖಂಡರು ಮುಂದಾಳುಗಳು ಧರ್ಮಾಭಿಮಾನಿಗಳು ನಿಧಿ ಕೂಡಿಸುತ್ತಿರುವ ಈ ಎಲ್ಲ ಮಹಾನುಭಾವರನ್ನು ನಾನು ವಂದಿಸಿ ಅನಂತ ಧನ್ಯವಾದಗಳನ್ನು ಅರ್ಪಿಸದೆ ಇರಲಾರೆನು.

# ಶ್ರೀ ಮದ್ವೀರಶೈವವು
## ಶಿವಾದ್ವೈತವೋ ಶಕ್ತಿವಿಶಿಷ್ಟಾದ್ವೈತವೋ?
(ಲೇಖಕಃ— ಶ್ರೀ ಸಿ. ನಾ. ಮಹಾಂತಣ್ಣವರ)



ವಿಚಾರಶೀಲನು ತನ್ನ ವಿಮರ್ಶಾತ್ಮಕ ಶಕ್ತಿಯಿಂದ ಈ ತೋರುವ ವಿಶ್ವವನ್ನೂ ಅದರೊಳಗಾದ ಸೂಕ್ಷ್ಮವಿಶ್ವದ ಪ್ರತಿಭಾ ಶಕ್ತಿಯನ್ನೂ ಮನ ದಂದರೆ, ಸೂರ್ಯಚಂದ್ರ ಗ್ರಹ ನಕ್ಷತ್ರಾದಿಗಳ ಪ್ರಕಾಶಕಿರಣಗಳ ಕಿರಣ ಶಕ್ತಿ, ಪ್ರಕಾಶಶಕ್ತಿ, ಉಷ್ಣಶಕ್ತಿ, ಆಕಲನಶಕ್ತಿ, ವಿದೂರ ಶಕ್ತಿಗಳೂ, ಆಕಾಶ ತತ್ವದ ನಾದಶಕ್ತಿ, ಮೋಹಕಶಕ್ತಿ, ಮಂದಶಕ್ತಿ, ಅತಿಮಂದಶಕ್ತಿ, ಉಗ್ರ ಶಕ್ತಿ, ಅತ್ಯುಗ್ರಶಕ್ತಿಗಳೂ, ವಾಯುತತ್ವದ ಪ್ರಸರಣಶೀಲತ್ವ, ಒತ್ತು ವಿಕೆಯ ಮಂದಶಕ್ತಿ, ಅತಿಮಂದಶಕ್ತಿ, ಸ್ಥಿರೀಕರಣಶಕ್ತಿ, ವೇಗ ಅತಿವೇ ಗಾಕ್ರಾಂತ ಭಯಂಕರ ಶಕ್ತಿಗಳೂ ತೇಜ ತತ್ವದ ಪ್ರಕಾಶ ಶಕ್ತಿ, ಕಿರಣಶಕ್ತಿ ಮಂದಶಕ್ತಿ, ಗುಪ್ತಶಕ್ತಿ, ಜ್ವಲನ ಪ್ರಜ್ವಲನಶಕ್ತಿಗಳೂ, ಜಲತತ್ವದ ಪ್ರವಾಹ ಶಕ್ತಿ, ಉಷ್ಣಶಕ್ತಿ, ಶೀತಶಕ್ತಿ. ಅತಿಶೀತಶಕ್ತಿ, ಕಣಗಳು ಅಂಟಿಕೊಂಡು ಘನಪ್ರವಾಹಿ ವಾಯುರೂಪಗಳನ್ನು ಹೊಂದುವ ಶಕ್ತಿಗಳೂ, ಪೃಥ್ವಿಯ ಘನಶಕ್ತಿಯಿಂದ ತನ್ನ ಉದರದೊಳಗಿಟ್ಟ ಕಾದರಸದಿಂದ ಪಂಚಲೋಹಗಳ ತರತರದ ಕಲ್ಲುಗಳ ಪರ್ವತ ಶಿಖರ ಮೊದಲಾದ ಸೃಷ್ಟಪದಾರ್ಥಗಳ ಜನನ ಶಕ್ತಿಯೂ ಇದಲ್ಲದೆ ಅಂಡಜ, ಪಿಂಡಜ, ಉದ್ಭಿಜ ಜರಾಯುಜ ಪ್ರಾಣಿಗಳ ಪ್ರಾದುರ್ಭಾವ ಶಕ್ತಿಯೂ, ಅಂತು ಒಟ್ಟಿನಲ್ಲಿ ಚರಾಚರಾತ್ಮಕಗಳನ್ನು ತೋರ್ಪ ಡಿಸಲು ಪಂಚಭೂತಶಕ್ತಿಗಳು ಒಂದರೊಳಗೊಂದು ಬೆರೆದು ಅಷ್ಟತನುಮುಕ್ತ ವಾದ ಬ್ರಹ್ಮಾಂಡವು ಒಡಮೂಡಿ, ಪ್ರಾಣಿಗಳ ಜನನ ಮರಣಚಕ್ರವು ಯಥಾ ವತ್ತಾಗಿ ಸಾಗಿದೆಯೆಂದೂ, ಇಂಥ ಅದ್ಭುತವಾದ ಶಕ್ತಿಯಿಂದೊಡಗೂಡಿದ ಮಹಾತತ್ವವೊಂದು ಇರಲೇಬೇಕೆಂಬ ಸಿದ್ಧಾಂತವು ಬುದ್ಧಿಗತವಾಗುತ್ತದೆ.

ಈ ಯಾವತ್ತು ಸೃಷ್ಟಿಯೊಳು ಮೂಲ ತತ್ವಗಳನ್ನು ಕಂಡುಹಿಡಿದು, ಪದಾರ್ಥ ವಿಜ್ಞಾನಶಾಸ್ತ್ರ, ರಸಾಯಾನಶಾಸ್ತ್ರ, ವಿದ್ಯುಚ್ಛಾಸ್ತ್ರ, ಪ್ರಕಾಶಶಾಸ್ತ್ರ, ಪ್ರಾಣಿಶಾಸ್ತ್ರ ವೈದ್ಯಶಾಸ್ತ್ರ, ಶಾರೀರಿಕ ಮಾನಸಿಕ ನೈತಿಕಶಾಸ್ತ್ರ, ನಾದಶಾಸ್ತ್ರ

ಮುಂತಾದವುಗಳು ಈಗಿನ ಮುಂದರಿದ ದೇಶಗಳ ತತ್ವಶಾಸ್ತ್ರಜ್ಞರು ವಿಮಾನ, ರೇಡಿಯೋ, ಫೋನ, ಇಲೆಕ್ಟ್ರಿಕ್ ಲ್ಯಾಂಪ ಮುಂತಾದ ತರತರದ ಎಂಜನಗಳಿಂದ ಹಡಗು, ರೇಲ್ವೆ, ಮೋಟಾರ, ಸಾಯಕಲ್, ಸಿನೇಮಾ, ಇನ್ನೂ ಎಷ್ಟೋ ಮಾನವನಿಗೆ ಅಸಾಧ್ಯವೆಂದು ತೋರುವ ಅನೇಕ ತರದ ಯುದ್ಧೋಪಯೋಗಿ ಸಾಮಾನುಗಳನ್ನು ರಚಿಸಿದ್ದನ್ನು ನೋಡಿ ಅಟಂಬಾಂಬದ ಮಹಾಶಕ್ತಿಯನ್ನು ವಿಚಾರಿಸಿದರಂತೂ ದಂಗಾಗಿ ನಿಂತು, "ಅಣೋರಣಿಯಾನ್ ಮಹತೋ ಮಹಿಯಾನ್" ಎಂಬ ಶ್ರುತಿಯ ಬೆಳಗು ಬಹಿರಂಗವಾಗಿ ಹೊರಬಿದ್ದು ಹೊರಸೂಸಿ, ಮಾನವನ ಪ್ರತಿಭಾಶಕ್ತಿಯು ಇನ್ನೂ ವಿಕಸಿತವಾಗಿ ಎಷ್ಟುದೂರ ಹೋಗಬಹುದೋ ಏನೋ ಎಂಬ ಸವಿಕಲ್ಪ ಸಮಾಧಿಯನ್ನು ಹೊಂದಲು ಆತುರ ಪಡುತ್ತದೆ.

ಇಷ್ಟು ದೂರವೇಕೆ? ಹುಟ್ಟಿದ ಕರುಳು ತಾಯಿಯೆಂಬ ಭಾವನೆಯ ಬೆಳಕು ಸಹ ಇರದಿದ್ದರೂ, ತನ್ನ ಆದಿಶಕ್ತಿಯಿಂದಲೂ ಇಚ್ಛಾಶಕ್ತಿಯಿಂದಲೂ ತಾಯಿಯ ಮೊಲೆಯನ್ನು ಸೀಪಿ, ಸ್ವತಂತ್ರ ಶಕ್ತಿಯಿಂದ ಸ್ಪರ್ಶಜ್ಞಾನವನ್ನು ಮಾಡಿಕೊಂಡದ್ದನ್ನೂ, ಈಲಾದ ಆಕಳು ಗುಡ್ಡಕ್ಕೆ ಮೇಯಲಿಕ್ಕೆ ಹೋದಾಗ ಈದು, ತನ್ನ ಹಿಂಭಾಗದಲ್ಲಿ ಕರುವಿನೊಡನೆ ಮನೆಗೆ ಬರುವ ಎಷ್ಟೋ ಉದಾಹರಣೆಗಳನ್ನೂ ನೋಡುತ್ತೇವೆ. ಇದರಂತೆ ಪ್ರೌಢ ವಿವಾಹವನ್ನು ವಿಚಾರಿಸಿದರೆ, ವರನಲ್ಲಿಯವನೋ ಕನ್ಯೆಯಲ್ಲಿಯವಳೋ ಇದ್ದರೂ, ಅವರ ಪ್ರೇಮಾಂಕುರ ಶಕ್ತಿಯೂ ಆದಿಶಕ್ತಿಯ ಮೂಲವೆಂದೇ ಹೇಳಬಹುದು. ಇದರಿಂದ ಬೇರೆ ಬೇರೆ ಪದಾರ್ಥಗಳ ರಸಾಯನ ಪ್ರೀತಿಗನುಸರಿಸಿ, ಹೊಸ ಪದಾರ್ಥಗಳು ಹುಟ್ಟಲು ಆದಿಶಕ್ತಿ, ಇಚ್ಛಾಶಕ್ತಿ, ಜ್ಞಾನಶಕ್ತಿ, ಕ್ರಿಯಾಶಕ್ತಿಗಳು ಮುಂದರಿದು ಪರಾಶಕ್ತಿಯುತವಾಗಿ ಚಿಚ್ಛಕ್ತಿಯು ತನ್ನ ಕರ್ತವ್ಯವಾದ ಜಗತ್ತನ್ನು ಒಡಮೂಡಿಸುವದೆಂಬದು ಗೊತ್ತಾಗದೆ ಇರದು.

ಈ ಚಿಚ್ಛಕ್ತಿ ರೂಪಾದ ಕನ್ಯೆಯೂ ಪರಮೇಶ್ವರ ರೂಪಾದ ವರನೂ ಒಂದಾಗಿ ಸಂದಿಲ್ಲದ ಪ್ರೇಮಿಗಳಾಗಿರುವಂತೆ, ಶಿವಲಿಂಗಾಂಗಗಳೈಕ್ಯವಾದ ಶಿವಲಿಂಗ ಸ್ಥಳದ ಅನುಭಾವವನ್ನು ವ್ಯಕ್ತಪಡಿಸಿದ ಶ್ರೀ ಅಲ್ಲಮ ಪ್ರಭುಗಳು ಕಾಯಾನುಗ್ರಹ ಸ್ಥಲದಲ್ಲಿ "ಎತ್ತಣ ಮಾಮರವು ಎತ್ತಣಕೋಗಿಲೆಯು ಎತ್ತಣಿಂದೆತ್ತ ಸಂಬಧವಯ್ಯಾ, ಬೆಟ್ಟದ ಮೇಲಿನ ನೆಲ್ಲಿಕಾಯಿಯು ಸಾಗರದೊಳಗಿನ ಲವಣವು, ಎತ್ತಣಿಂದೆತ್ತ ಸಂಬಂಧವಯ್ಯಾ ಗುಹೇಶ್ವರಾ! ಲಿಂಗಕ್ಕೆಯೂ ಎನಗೆಯೂ ಎತ್ತಣಿಂದೆತ್ತ ಸಂಬಂಧವಯ್ಯಾ"

ಇದೇ ಅನುಭಾವವನ್ನು ಶ್ರೀಮದ್ರೇಣುಕ ಶಿವಾಚಾರ್ಯರು:—

"ಸತ್ತಾಪ್ರಾಣಮಯೀ ಶಕ್ತಿ ಸದ್ರೂಪಂ ಪ್ರಾಣಲಿಂಗಕಂ। ತತ್ಸ್ವಮರಸ್ಯ ವಿಜ್ಞಾನಾತ್ ಪ್ರಾಣಲಿಂಗೀತಿಕಥ್ಯತೇ" ಎಂಬದಾಗಿ ವ್ಯಕ್ತಗೊಳಿಸಿದ್ದಾರೆ.

ಪುರುಷ ಪ್ರಕೃತಿಗಳಿಗೆ ಹೇಗೆ ಅಭೇದವೋ, ಹಾಗೆ ಶಿವಶಕ್ತಿಯರು ಅನುಸ್ಯೂತವಾಗಿರುತ್ತಾರಷ್ಟೇ; ವೇದಾಂತಿಗಳು ಇಪ್ಪತ್ತೈದು ತತ್ವಗಳನ್ನನುಸರಿಸಿ, ಆ ಇಪ್ಪತ್ತೈದು ತತ್ವಗಳಿಂದ ಜಗತ್ತಿನ ಆವಿರ್ಭಾವವನ್ನು ಸ್ಪಷ್ಟಗೊಳಿಸುವಂತೆ, ಈ ತತ್ವಗಳ ಆಚೆಗಿರುವ ಹನ್ನೊಂದು ತತ್ವಗಳನ್ನೊಳಗೊಂಡು ಮೂವತ್ತಾರು ತತ್ವಗಳನ್ನು ಷಟ್‌ಸ್ಥಲ ಸಿದ್ಧಾಂತಿಗಳು ನಿರ್ಧರಿಸಿದ್ದಾರೆ. ಸಚ್ಚಿದಾನಂದ ಸ್ವರೂಪವಾದ ಪರಬ್ರಹ್ಮದಲ್ಲಿ ಅವಿನಾಭಾವ ಸಂಬಂಧದಿಂದಿರುವ ವಿಮರ್ಶಶಕ್ತಿಯ ಸ್ಫುರಣವೇ ಶಿವ, ಶಕ್ತಿ, ಸದಾಶಿವ, ಈಶ್ವರ, ಶುದ್ಧವಿದ್ಯಾ, ಮಾಯಾ, ಕಲಾ, ವಿದ್ಯಾ, ರಾಗ, ಕಾಲ, ನಿಯತಿಗಳೆಂಬ ಹನ್ನೊಂದು ತತ್ವಗಳೂ ಮಾನಸಾದ್ಯಂತಃಕರಣತ್ರಯಗುಣ, ಪ್ರಕೃತಿ, ಪುರುಷ ಜ್ಞಾನೇಂದ್ರಿಯ ಪಂಚಕ, ಕರ್ಮೇಂದ್ರಿಯ ಪಂಚಕ, ತನ್ಮಾತ್ರೆಗಳ ಪಂಚಕ, ಭೂತಪಂಚಕ, ಇಪ್ಪತ್ತೈದು ಕೂಡಿ, ಅಂತೂ ೩೬ ತತ್ವಗಳು ಶಕ್ತಿವಿಶಿಷ್ಟ ಪರಬ್ರಹ್ಮವು "ಬಹುಸ್ಯಾಂ ಪ್ರಜಾಯೇಯ" ಎಂಬ ಛಾಂದೋಗ್ಯ ಶ್ರುತಿವಾಕ್ಯಾನುಸಾರವಾಗಿ ಸೃಷ್ಟಿಗುನ್ಮುಖವಾಗಲು, ತನ್ನ ಇಷ್ಟವಾದ ವಿಮರ್ಶಶಕ್ತಿಯೇ ಇಚ್ಛಾಶಕ್ತಿರೂಪವಾಗಿ ಪರಿಣಮಿಸುವದು. ಶಿವಾಗಮ ಪ್ರಮಾಣಾನುಸಾರವಾಗಿ ಉತ್ಪತ್ತಿ ನಾಶರಹಿತವೂ ಪರಮಕಾರಣವೂ ಶಾಂತವೂ ಆದಪರಶಿವಬ್ರಹ್ಮದಿಂದ ಮೊದಲು ಇಚ್ಛಾಶಕ್ತಿಯೂ, ಇಚ್ಛಾಶಕ್ತ್ಯಂತರವಾದ ಜ್ಞಾನಶಕ್ತಿಯೂ, ಬಹಿರಂಗವಾದ ಕ್ರಿಯಾಶಕ್ತಿಯೂ ಕೂಡಿ, ನಾನು ಸರ್ವಜ್ಞನು, ಎಂಬ ಅಭಿಮಾನ ಪಡೆಯಲು, ಶಿವತತ್ವವೆನಿಸುವದು. 'ಕರ್ತೃವು ಎಂಬ ಅಭಿಮಾನ ತಾಳಲು ಶಕ್ತಿತತ್ವವೆನಿಸುವದು. ಈ ಶಕ್ತಿತತ್ವವಿಶಿಷ್ಟವಾದ ಪರಬ್ರಹ್ಮವೇ ಕ್ರಿಯಾವಿಶಿಷ್ಟತೆಯಿಂದ ಭಾವೀ ಪ್ರಪಂಚಕ್ಕೆ ಕಾರಣವಾಗಿದೆ. ಹೇಗಂದರೆ—

ಒಬ್ಬ ರಾಜನು ಅಂತಃಪುರದಲ್ಲಿ ತನ್ನ ಚಿಚ್ಛಕ್ತಿರೂಪಾದ ರಾಣಿಯೊಡನಿರುವಾಗ ತನ್ನ ಮಂತ್ರಿಗಳ ಮುಖಾಂತರ ಅಧಿಕಾರವನ್ನು ಹೇಗೆ ನಡೆಯಿಸುವನೋ ಹಾಗೆ, ತನ್ನ ಸ್ವರೂಪರಾದ ಮಂತ್ರಿಗಳಿಂದ ಪಂಚಮಹಾ ಕೃತ್ಯಗಳನ್ನು ನಡೆಯಿಸಲು ಅವರು ತಮ್ಮ ತಮ್ಮ ಶಕ್ತಿಗಳೊಡನೆ ಆಯಾ ಕೃತ್ಯಗಳನ್ನು ಬಿಡದಲೇ ನಡೆಯಿಸುವರು.

ಆಕಾಶಾದಿ ಭೂತಂಗಳಲ್ಲಿ ವರ್ತಿಸುವ ದೇವತಾ ಮೂರ್ತಿಭೇದವೆಂತೆನೆ– ಶಾಂತ್ಯಾತೀತ ಕಲಾತೀತ ವ್ಯಾಪ್ತವಾದ ಆಕಾಶತತ್ವದಲ್ಲಿ ದಿವ್ಯ ತೇಜೋ ರೂಪನಾದ ಮನೋನ್ಮನಿಯೆಂಬ ಶಕ್ತಿಸಹಿತನಾದ ಸದಾಶಿವನೇ ಅನುಗ್ರಹ ಕೃತ್ಯಕರ್ತೃವಾಗಿಹನು. ಆ ಸದಾಶಿವನಿಂ ಸ್ವರೂಪಿಸಲ್ಪಟ್ಟ ಮಹೇಶ್ವರನೇ ಮಾಯಾಶಕ್ತಿ ಸಮನ್ವಿತನಾಗಿ ಶಾಂತಿ ಕಲಾ ವ್ಯಾಪ್ತವಾದ ವಾಯುತತ್ವ ದಲ್ಲಿ ತಿರೋಧಾನ ಕೃತ್ಯ ಕರ್ತೃವಾಗಿಹನು. ಆ ಮಹೇಶ್ವರನಿಂದಾದ ಶ್ರೀಕಂಠ ರುದ್ರನೇ ರುದ್ರಾಣಿಯೆಂಬ ಶಕ್ತಿಯೊಡಗೂಡಿ ವಿದ್ಯಾ ಕಲಾ ವ್ಯಾಪ್ತವಾದ ಅಗ್ನಿತತ್ವದಲ್ಲಿ ಸಂಹಾರ ಕೃತ್ಯ ಕರ್ತೃವಾಗಿಹನು. ಆ ಶ್ರೀಕಂಠರುದ್ರನಿಂದಾದ ನಾರಾಯಣನೇ ಲಕ್ಷ್ಮಿಯೆಂಬ ಶಕ್ತಿಯುಳೊಂದಿಗೆ ಪ್ರತಿಷ್ಠಾ ಕಲಾವ್ಯಾಪ್ತ ವಾದ ಅಪ್ಪು ತತ್ವದಲ್ಲಿ ಸ್ಥಿತಿಕೃತ್ಯ ಕರ್ತೃವಾಗಿಹನು. ಆ ನಾರಾಯಣನಿಂ ಜನಿಸಿದ ಬ್ರಹ್ಮಾಣಿಯೆಂಬ ಶಕ್ತಿಯೊಳ್ಬೆರೆದು ನಿವೃತ್ತಿಕಲಾ ವ್ಯಾಪ್ತವಾದ ಪೃಥ್ವೀ ತತ್ವದಲ್ಲಿ ಸೃಷ್ಟಿಕರ್ತೃವಾಗಿಹನು. ಈ ಪ್ರಕಾರ ಸಕಲ ತತ್ವದ್ವಾರಂಗ ಳಾದ ನಿವೃತ್ಯಾದಿ ಕಲೆಗಳ ಅಧಿಷ್ಠಿರ್ದ ಪರಶಿವ ಶಕ್ತಿಯಿಂದೀ ಬ್ರಹ್ಮಾದಿ ಮೂರ್ತಿಗಳು ಸೃಷ್ಟ್ಯಾದಿ ಕೃತ್ಯಂಗಳಂ ಮಾಳ್ಪ ಸಾಮರ್ಥ್ಯಮುಳ್ಳವರಾಗಿ ವರ್ತಿಸುತ್ತಿರ್ಕುಂ.

ಈ ಎಲ್ಲ ಸಂಗತಿಗಳಿಂದಲೂ "ಶಕ್ತ್ಯಾಧಾರ ಮಹಾದೇವೋ ಶಕ್ತಿಸಾ ತ್ಮೇನವೈ ನಮಃ ಶಕ್ತಿ ಕರ್ಮಸ್ಯ ಕರ್ತಾಚ ಮುಕ್ತಾತ್ಮಶಕ್ತಿ ನಮೋ ನಮಃ" ಎಂದುದಾಗಿಯೂ "ಸ್ವಶಕ್ತಿ ಪ್ರಚಯೋಸ್ಯ ವಿಶ್ವಂ" ಎಂಬ ಶಿವಸೂತ್ರದ ಲ್ಲಿಯೂ "ಶಕ್ತಿಶ್ಚ ಶಕ್ತಿಮಾಂಶ್ಚ ಪದಾರ್ಥದ್ವಯಮುಚ್ಯತೇ। ಶಕ್ತಿಯೋಸ್ಯ ಜಗತ್ಕೃತ್ಸ್ನಂ ಶಕ್ತಿಮಾಂಸ್ತು ಮಹೇಶ್ವರಃ॥" ಎಂಬ ಸರ್ವ ಮಂಗಲಾ ಸೂತ್ರದಲ್ಲಿಯೂ ಮತ್ತು ಪಿಂಡಜ್ಞಾನದ ಸ್ಥಲದ "ಶಕ್ತಿಯೊಳು ಶಿವಾತ್ಮ ವಡಗಿ ಶಕ್ತಿ ರಹಿತನೆಂಬ ಬೆಡಗ। ಶಕ್ತಿಮುಖದೊಳರಿದು ಶಕ್ತಿ ಸಂಗ ಭಂಗ ವಿರಕ್ತಿಯಿಂದ ಗೆಲಿದು, ಪರಮ ಶಕ್ತಿ ಸುಖವ ಕಂಡ ಸುಖಿಯು ಚಿತ್ತದರಿವು ಜಗವ ನುಂಗಿಯುಗಳದಿರ್ದುದು॥" ಎನ್ನುವಂತೆಯೂ "ಬಿಂದು ಸ್ವರೂಪಂ ನಿಜಮೂಲ ಪೀಠಂ॥ ಕಲಾತ್ಮತಿರ್ಯಗ್ಗತ ಗೋಮುಖಾಢ್ಯಂ, ಚಿದ್ರೂಪ ಲಿಂಗಂ ಹೃದಯಾಬ್ಜ ಸಂಸ್ಥಂ॥" ಎಂದು ಉಸುರಿದ್ದಾಗಿದೆ.

ಇದೇ ಅನುಭಾವವನ್ನು ಶ್ರೀ ನುದ್ರೇಣುಕ ಶಿವಾಚಾರ್ಯರು ಅಂಗ ಸ್ಥಲದ ಪ್ರಾಣಲಿಂಗ ಸ್ಥಲದಲ್ಲಿ "ಉಮಾಖ್ಯಯಾ ಮಹಾಶಕ್ತ್ಯಾದೀಪಿತಂ

ಚಿತ್ಸರೂಪಯಾ । ಹಂಸರೂಪಂ ಪರಾತ್ಮಾನಂ ಸೋऽಹಂಭಾವೇನ ಭಾವಯೇತ್ ॥ ತದೇಕತಾನತಾಸಿದ್ಧಿಃ ಸಮಾಧಿಃ ಪರಮೋಮತಃ ॥ ಎಂಬುದಾಗಿ ನಿರ್ಧರಿಸಿದ್ದಾರೆ. ಈ ಶ್ಲೋಕದ ಮೇಲಿಂದ ಸದ್ರೂಪನಾದ ಶಿವತತ್ವದಲ್ಲಿ ಚಿತ್‌ಸ್ವರೂಪವಾದ ಉಮಾಶಕ್ತಿಯು ಅನುಸೂತ್ಯವಾಗಿರುತ್ತದೆಂಬ ಸಿದ್ಧಾಂತವು ಸಹಜವಾಗಿ ಹೊಳೆಯುವದು. ಇವೇ ಭಾವವನ್ನನುಸರಿಸಿ ಇದೇ ಪ್ರಾಣಲಿಂಗಸ್ಥಲದ ಸಿದ್ಧಾಂತಶಿಖಾಮಣಿಯಲ್ಲಿ—

ಜ್ಞಾನಿನಾಂ ಯೋಗಯುಕ್ತಾನಾಮಂತಃ ಸ್ಫುರತಿ ದೀಪವತ್
ಚಿದಾಕಾರಂ ಪರಬ್ರಹ್ಮಲಿಂಗಮಜ್ಞೈರ್ನಭಾವ್ಯತೇ ॥
ಮಾಯಾ ವಿಕಲ್ಪಜಂ ವಿಶ್ವಂ ಹೇಯಂಸಂಚಿತ್ಯ ನಿತ್ಯಶಃ ।
ಚಿದಾನಂದಮಯೇ ಲಿಂಗೇ ವಿಲೀನಃ ಪ್ರಾಣಲಿಂಗವಾನ್ ॥

ಅಂತರ್ಗತಂ ಚಿದಾಕಾರಂ ಲಿಂಗಂ ಶಿವಮಯಂ ಪರಂ ।
ಪೂಜ್ಯತೇಭಾವ ಪುಷ್ಪೈರ್ಯತ್ಪ್ರಾಣಲಿಂಗಾರ್ಚನಂ ಹಿತತ್ ॥
ಬದ್ಧೇಂದ್ರಿಯ ನವದ್ವಾರೇ ಬೋಧದೀಪೇಹೃದಾಲಯೇ ।
ಪದ್ಮಪೀಠೇ ಸಮಾಸೀನಂ ಚಿಲ್ಲಿಂಗಂಶಿವವಿಗ್ರಹಂ ॥
ಭಾವಯಿತ್ವಾ ಸದಾಕಾಲಂ ಪೂಜಯೇದ್ಭಾವ ವಸ್ತುಭಿಃ ।
ಸರ್ವತತ್ವೋಪರಿಗತಂ ಸಚ್ಚಿದಾನಂದ ಭಾಸುರಂ ॥

ಚಿದಾನಂದಮಯಃ ಸಾಕ್ಷಾತ್‌ಶಿವಏವ ನಿರಂಜನಂ ।
ಲಿಂಗಮಿತ್ಯುಚ್ಯತೇ ನಾನ್ಯದ್ಯತಃ ಸ್ಯಾದ್ವಿಶ್ವಸಂಭವಃ ॥
ಬಹುನಾತ್ರಕಿಮುಕ್ತೇನ ಲಿಂಗಮಿತ್ಯುಚ್ಯತೇಬುಧೈಃ ।
ಶಿವಾಭಿದಂ ಪರಂಬ್ರಹ್ಮ ಚಿದ್ರೂಪಂ ಜಗದಾಸ್ಪದಂ ॥

ಸಿದ್ಧಾಂತಶಿಖಾಮಣಿಯ ಅಂಗ ಲಿಂಗ ಸ್ಥಳಗಳಲ್ಲಿಯೂ ಕಡೆಯ ಐಕ್ಯಸ್ಥಳದ ಅಂಗಲಿಂಗ ಸ್ಥಳಗಳಲ್ಲಿ ಸಹ ಶಕ್ತಿ ಪ್ರಭಾವವನ್ನೂ ಬೀರುವ ಶಿವಶಕ್ತಿವಾಚಕ ಶಬ್ದಗಳು ಅನಂತವಾಗಿವೆ.

ಶ್ರೀ ನಿರಂಜನ ಸ್ವಾಮಿಗಳಾದ ಪ್ರಭುದೇವರ ಮಂತ್ರಗೋಪ್ಯದಲ್ಲಿ—
ಉದಯಾಸ್ತಮಾನವೆಂಬೆರಡಳಿದ ಶಿವಯೋಗಿ ।
" ಸದಮಲಜ್ಞಾನದ ಬೆಳಗಿನೊಳಗೆ ॥
ಪದಫಲವನೊಡೆದು ನಿಜದಲ್ಲಿ ನಿರ್ವಯಲಾದ ।

ಚಿದ್ರೂಪ ಚಿನ್ಮಯ ಚಿತ್‌ಪ್ರಕಾಶ" ॥ ಎಂಬುದಾಗಿ ಬೋಧಿಸುವರು. ಇದರಂತೆ "ಏಕೋತ್ತರ ಶತಸ್ಥಲದ ಕರ್ತೃಗಳಾದರೂ ಶಕ್ತಿವಿಶಿಷ್ಟತೆಯನ್ನು ತೋರ್ಪಡಿಸುವರು.

ಉದಾಹರಣೆ:— ಶಾರ್ದೂಲವೃತ್ತ.

ಕೈಲಾಸಾಹ್ವಯದಿಂದೆರಂಜಿಪ ಮಹಾತದ್ಬ್ರಹ್ಮರಂಧ್ರಾಗಮೆ ।
ಮೂಲಸ್ಥಾನಮದಾಗಿತೋರ್ಪ ಘನತೇಜೋ ಲಿಂಗದೊಳೊಂದಿ ಚಿ ॥
ತ್ಕಾಲಿಂಘತ್ಸ್ವಪೆ ತತ್ತ್ರಿಶೀಯ ವರ ಚಿತ್ತಾನಂದ ತತ್ಸೌಖ್ಯದಿಂ ।
ಮೇಲಿಂದೇನದು ತಾನೆ ಶಾಶ್ವತಸುಖಂ ಶ್ರೀ ಸಿದ್ಧಲಿಂಗೇಶ್ವರಾ ॥ ೧ ॥

ಮತ್ತೇಭ:— ಪರಮಜ್ಞಾನ ವಿಶಿಷ್ಟತೇಜವಮಿತಾಖಂಡಾತ್ಮಕಂ ಮತ್ತಮಾ ।
ಪರಶಕ್ತ್ಯಾಸಮುದಂ ಷಡಧ್ವಮಯ ವಿಶ್ವಾಧಾರಭೂತಂ ಪರಾ ॥
ತ್ಪರಮಾತ್ಮಸ್ಥಮನಾಮಯಂ ಸಕಲಂಭಾಂತಂ ಸರ್ವಗಂ ಪಂಚಮೋ ।
ತ್ಕರ ಸಂಜ್ಞಾಂಕಿತವಾದ ಲಿಂಗವದೇ ನೀಂ ಶ್ರೀಸಿದ್ಧಲಿಂಗೇಶ್ವರಾ ॥ ೨ ॥

ಮತ್ತೇಭ:— ಪ್ರಿಯವಸ್ತುಪ್ರಕರಂಗಳೊಳ್ಮನವದುಂ ತಾನೆಯ್ದಿದರ್ಥಂಗಳಾ ।
ಶ್ರಯವಾದಿಂದ್ರಿಯ ಮೇಳಸತ್ವದ ಮಹಾಸಾಮರ್ಥ್ಯದಿಂಲಿಂಗದೊಳ ॥
ನಿಯತಂತತ್ಪರಮಾದೊಡಾತನೆ ತದಾನಂದತ್ವದಿಂದೀಶನೆ ।
ಸ್ವಯಮಂತಾತನೆ ಸುಪ್ರಸಾದಿಯೆನಿಪಂ ಶ್ರೀಸಿದ್ಧಲಿಂಗೇಶ್ವರಾ ॥ ೩ ॥

ಶಾರ್ದೂಲ:—ಧ್ಯಾನಂತಾಂ ಕಡೆಯಾದೊಡನ್ನೆವರಮಕ್ಕಂ ಶೋಭಿಸುತ್ತಲ್ಲಿಯಾ
ಜ್ಞಾನಂತಾನದೆ ತೃಪ್ತಿಯಪ್ಪುದು ಬಳಿಕ್ಕಾತೃಪ್ತಿಯುಳ್ಳಾತನೇ ॥
ಜ್ಞಾನರೂಢನನಾದಿ ಯುಕ್ತನಮಲ ಪ್ರಾಣಪ್ರಸನ್ನಾತ್ಮಕಂ ।
ನೀನೇನಿಶ್ಚಯವಂತವಂ ಪೆರನೆ ಪೇಳ್ ಶ್ರೀಸಿದ್ಧಲಿಂಗೇಶ್ವರಾ ॥ ೪ ॥

ಇದರಂತೆ ಭಗವದ್ಗೀತೆಯಾದರೂ ಶಕ್ತಿಪ್ರತಿಷ್ಠತೆಯನ್ನು ಮಾಡಿದ್ದು ಆಯಾ ಯೋಗಗಳಲ್ಲಿ ಕಂಡುಬರುವದು. ಅದರಲ್ಲಿ ಆತ್ಮಸಂಯಮನ ಶಕ್ತಿಯವಿಷಯವಾಗಿ ಕಂಡುಬರುವ ಶ್ಲೋಕಗಳು—

ಶ್ರೋತ್ರಾದೀನಿಂದ್ರಿಯಾಣ್ಯನ್ಯೇ ಸಂಯಮಾಗ್ನಿಷು ಜುಹ್ವತಿ ।
ಶಬ್ದಾದೀನ್ವಿಷಯಾನನ್ಯ ಇಂದ್ರಿಯಾಗ್ನಿಷು ಜುಹ್ವತಿ ॥ ೧ ॥
ಸರ್ವಾಣೀಂದ್ರಿಯ ಕರ್ಮಾಣಿ ಪ್ರಾಣ ಕರ್ಮಾಣಿ ಚಾಪರೇ ।
ಆತ್ಮಸಂಯಮಯೋಗಾಗ್ನೌ ಜುಹ್ವತಿ ಜ್ಞಾನದೀಪಿತೇ ॥ ೨ ॥
ದ್ರವ್ಯಯಜ್ಞಾಸ್ತಪೋಯಜ್ಞಾ ಯೋಗಯಜ್ಞಾಸ್ತಥಾಪರೇ ।
ಸ್ವಾಧ್ಯಾಯ ಜ್ಞಾನಯಜ್ಞಾಶ್ಚ ಯತಯಃ ಸಂಶ್ರಿತವ್ರತಾಃ ॥ ೩ ॥

ಅಪಾನೇಜುಹ್ವತಿಪ್ರಾಣಂ ಪ್ರಾಣೇಽಪಾನಂತಥಾಪರೇ ।
ಪ್ರಾಣಾಪಾನಗತೀರುಧ್ವಾ ಪ್ರಾಣಾಯಾಮ ಪರಾಯಣಃ ॥ ೪ ॥
ಅಪರೇ ನಿಯತಾಹಾರಾಃ ಪ್ರಾಣಾನ್‌ಪ್ರಾಣೇಷು ಜುಹ್ವತಿ ।
ಸರ್ವೇಽಪ್ಯೇತೇಯಜ್ಞವಿದೋ ಯಜ್ಞಕ್ಷಪಿತಕಲ್ಮಷಾಃ ॥ ೫ ॥
ಯಜ್ಞಶಿಷ್ಟಾಮೃತಭುಜೋಯಾಂತಿ ಬ್ರಹ್ಮಸನಾತನಂ ।
ನಾಯಲೋಕೋಽಸ್ತ್ಯಯಜ್ಞಸ್ಯಕುತೋಽನ್ಯ ಕುರುಸತ್ತಮ ॥ ೬ ॥
ಯಥೈಧಾಂಶಿ ಸಮಿದ್ಧೋಽಗ್ನಿರ್ಭಸ್ಮಸಾತ್ಕುರುತೇಽರ್ಜುನ ।
ಜ್ಞಾನಾಗ್ನಿ:ಸರ್ವಕರ್ಮಾಣಿ ಭಸ್ಮಾತ್ಕುರುತೇತಥಾ ॥ ೭ ॥
ನಹಿ ಜ್ಞಾನೇನಸದೃಶಂ ಪವಿತ್ರಾಮಿಹ ವಿದ್ಯತೇ ।
ತತ್ಸ್ವಯಂ ಯೋಗಸಂಶಿದ್ಧ: ಕಾಲೇನಾತ್ಮನಿವಿಂದತಿ ॥ ೮ ॥
ಶ್ರದ್ಧಾವಾನ್ ಲಭತೇಜ್ಞಾನಂ ತತ್ಪರ: ಸಂಯತೇಂದ್ರಿಯ: ।
ಜ್ಞಾನಂಲಭ್ದ್ವಾ ಪರಾಂ ಶಾಂತಿಮಚಿರೇಣಾಧಿಗಚ್ಛತಿ ॥ ೯ ॥

ಈ ಶ್ಲೋಕಂಗಳಲ್ಲಿ ಚಿಚ್ಛಕ್ತಿಯ ಉಪಾಂಗಗಳಾದ ಕ್ರಿಯಾ ಜ್ಞಾನಾದಿ ಪರಾ ಶಕ್ತಿಗಳು ವ್ಯಕ್ತವಾಗುವವು.

ಪಾರಮಾರ್ಥ ಪ್ರಕಾಶಿಕೆಯ ಲಯಯೋಗ ಸಾಧನಕ್ರಮದಲ್ಲಿ :— ವಾಯುವಿಂಗೆ ಆಕಾಶವೇ ಲಯಸ್ಥಾನಮಪ್ಪುದರಿಂ ಶಬ್ದಕ್ಕೆ ಸುಷುಮ್ನೆಯೇ ಲಯಭೂಮಿಯಪ್ಪುದರಿಂದ ತ್ರಿಕೂಟ ಸ್ಥಾನದಲ್ಲಿ ಮನೋಮಾರುತಂಗಳ ನೆಯ್ದಿಸಿ, ಯೋಗಮಂ ಸಾಧಿಸುವದೆಂತೆನೆ— ರೇಚಕ ಪೂರಕಂಗಳಂ ಮಾಡು ತ್ತಿರ್ದ ಮಂತ್ರ ಸಂಸ್ಕಾರಮಾದ ಪ್ರಾಣವಾಯುವಿನೊಡನೆ ವಿಷಯ ವಿಮು ಖನಾದ ಮನಸ್ಸಿನೊಡನೆ ಕೂಡಿ, ತ್ರಿಕೂಟಸ್ಥಾನದಲ್ಲಿ ಸಂಸ್ಥಿರನಾಗಿ, ಸುಷು ಮ್ನೆಯೆಂಬ ಪೆಸರುಳ್ಳ ನಾಸಿಕೋರ್ಧ್ವದ ತ್ರಿಕೋಣಮಾರ್ಗವನ್ನೈದಿಸ ಲ್ವೇಳ್ಕುಂ.

ಮತ್ತಮಾಮನೋ ಮಾರುತಂಗಳು ತ್ರಿಕೋಣಮಾರ್ಗ ನೈದುದಕ್ಕು ಪಾಯಮೆಂತೆನೆ— ಪ್ರಾಣವಾಯುವಿನ ರೇಚಕದಿಂದ ಪೊರಸೂಸುವ ತನುವ ಜಾಳ್ವ ಜಾಳಾಂಧರ ಬಂಧದಿಂ ತಡೆಯಲಾಗಿ ಅತಿ ಸೂಕ್ಷ್ಮವಾದ ಊರ್ಧ್ವ ಕುಂಡಲಿಯ ಶಕ್ತಿಯ ಅಧೋಮುಖಮಪ್ಪುದರಿಂದ ಆಧ್ಯಾನಕೆ ಅಭಿಮುಖ ವಹುದು. ಆಪ್ರಾಣವಾಯು ತಿರುಗಿ ತನ್ನ ಸ್ಥಾನವನ್ನೈದಲಾಗಿ, ಮಧ್ಯ ಕುಂಡಲಿಶಕ್ತಿ ತನ್ನ ಕುಟಿಲತೆಯಂ ಬಿಟ್ಟು ನೇರಿತ್ತಹುದರಿಂದ ಪ್ರಾಣ ವಾಯು, ಮೂಲಾಧಾರ ಮುಖವಾದ ಅಧಃಕುಂಡಲಿನೀ ಶಕ್ತಿ ಸಂಕೋಚ

ಮಾಗುತ್ತಿಹುದು. ಅದು ಕಾರಣವಾಗಿ ಯೋಗೀಶ್ವರರುಗಳು ಈ ತ್ರಿಸ್ಥಾನದಲ್ಲಿ ಊರ್ಧ್ವಕುಂಡಲಿನೀ ಮಧ್ಯಕುಂಡಲಿನೀ ಅಧಃ ಕುಂಡಲಿನೀ ಎಂಬ ಮೂರು ಪ್ರಕಾರವಾದ ಶಕ್ತಿಗಳ ಕ್ರಮದಿಂದ ಅಭಿಮುಖತ್ವ, ರಜತ್ವ, ಸಂಕೋಚಂಗಳಂ ತ್ರಿಕೂಟವೆಂಬ ಪರಮಪದವನೆಯ್ದುತಿಹುದೆಂಬುದೇ ಸಿದ್ಧಮಕ್ಕುಂ.

ಅನಂತರದೊಳ್ ಆ ಮೂರನೇ ಹಠಯೋಗವೆನಿಸುವ ಕೇವಲ ಕುಂಭಕದ ಲಕ್ಷಣಮೆಂತೆ— ಪೂರ್ವೋಕ್ತವಾದ ಲಯಯೋಗದಿಂದಾದ ಪ್ರಣವ ನಾದಜೊಡನೆ, ವಾಯುವೇ ಕೇವಲ ಕುಂಭಕವೆನಿಸುವದಾಗಿ ಹಠಯೋಗಂಗಳೊಳಗೆ ಅತಿಶ್ರೇಷ್ಠವಾದ ಅತ್ಯಾಶ್ಚರ್ಯವಾದ, ಅತಿ ರಹಸ್ಯವಾದ ಕೇವಲ ಕುಂಭಕದಿಂ ಪ್ರಾಣವಾಯುವಂ ನಿಲಿಸಿದಾತಂಗೆ ಜನನ ಮರಣಾದಿಗಳಿಲ್ಲವೆಂಬುದೇ ಸತ್ಯಮಕ್ಕುಂ ||

ಲಯಯೋಗವು ಹಠಯೊಗಕ್ಕೆ ಸಹಾಯಕಾರಿಯಾದುದರಿಂದ ಶ್ರೀ ಸರ್ಪಭೂಷಣ ಶಿವಯೋಗಿಗಳು ಹಠಯೋಗವನ್ನು ವಿವರಿಸುವ ಪದಗಳಲ್ಲಿ ಒಂದಾದ ಪದವು:—

ರಾಗ ಸಾವೇರಿ ಮೂರವಿ

ಬರಿಯ ಬಯಲೇ ಬಯಲಾಗೋ। ಸ್ಥೂಲ। ಶರೀರದಿ ಚರಿಸುವ ಮರುತನನೀಗೋ ॥ಪಲ್ಲವಿ॥

ಧರೆಯಿಂದೆ ಭುವನಕ್ಕೆ ಹಾರಿ। ರಕ್ತ ತುರಗವಿಡಿದು ಲೋಕಪ್ರಾಣವನೇರಿ। ಸುರರ ಪದವಿಯನೆ ಮೀರಿ। ತನ್ನ ಪುರುಷನ ಸೇರದೆ ಪರವನೆ ಸೇರಿ ॥೧॥

ಪಿಂಡಾಂಡದೊಳು ಹೊಕ್ಕ ನೋಡಿ। ಅಲ್ಲಿ ಪುಂಡರೀಕಗಳೊಂಭತ್ತರೊಳಾಡಿ॥ ಕುಂಡಲಿಯನು ಮೇಲುಮಾಡಿ। ಮೇಲೆ ಮಂಡಲಯತ್ರಯದ ಚಿಜ್ಜ್ಯೋತಿಯೊಳ್ಕೂಡಿ ॥೨॥

ಅರಿದಿರ್ದಮರವೆಯ ಕಳೆದು। ತಾನು ಮರೆದಿರ್ದ ಮೊದಲ ತನ್ನರಿವೆಯ ತಳೆದು। ಮರವರಿವೆಯ ಮೀರಿ ಹೊಳೆದು। ನಮ್ಮ ಗುರುಸಿದ್ಧನೊಳ್ಕೂಡಿ ಪೂರ್ಣನಾಗುಳಿದು ॥೩॥

ಇದೇ ಹಠಯೋಗವನ್ನು ಕುರಿತು ಹಠಯೋಗದ ಮೂಲಸಿದ್ಧಾಂತವನ್ನು ಪ್ರತಿಪಾದಿಸುವ ಆಧುನಿಕನ ಅನುಭಾವವನ್ನಷ್ಟು ವಿವರಿಸುವಾ:—

ನಮ್ಮ ಶರೀರದಲ್ಲಿ ಎರಡು ನಾಡಿಗಳಿವೆ, ಒಂದು ಈಡೆ, ಒಂದು ಪಿಂಗಳ. ನಮ್ಮ ಗುದದ ಕೆಳಗೆ ಒಂದು ಕುಂಡಲಿ ಚಕ್ರ ಅದೆ. ಅದು ಶರೀರದ ಸಂಪೂರ್ಣ ಶಕ್ತಿಯ ಕೇಂದ್ರವೆಂದು ಹೇಳಲ್ಪಡುತ್ತದೆ. ಇದರಂತೆ ತಲೆಯಲ್ಲಿ ಒಂದು ಸಹಸ್ರದಲವುಳ್ಳ ಕಮಲವದೆ, ವಾಸ್ತವಿಕವಾಗಿ ಅದಕ್ಕೆ ನಾಲ್ಕು ದಿಕ್ಕಿನಿಂದ ಬರುವ ನಾಡಿಗಳ ಬಲೆ (ಶಿರಾಜಾಲ) ಎಂಬ ಹೆಸರು ಅದೆ, ಸದ್ಯದ ವಿಜ್ಞಾನಿಗಳು ಗೊತ್ತು ಮಾಡಿದ್ದೇನೆಂದರೆ, ಈ ಜಗತ್ತು ನಮ್ಮ ಭಾವನೆಯಂತೆ ಜನ್ಮಕೊಡುತ್ತದೆ. ಮತ್ತು ಅದರ ಪ್ರಚಲನವನ್ನು ಮಾಡುತ್ತದೆ. ಸಾಂಶ ಒಮ್ಮೆಮ್ಮೆ ಈಡೆಯಿಂದಲೂ ಒಮ್ಮೊಮ್ಮೆ ಪಿಂಗಲೆಯಿಂದಲೂ ಶ್ವಾಸವನ್ನು ತೆಗೆದುಕೊಳ್ಳುತ್ತೇವೆ. ಈ ಎರಡು ನಾಡಿಗಳ ಸಂಬಂಧವು ಕುಂಡಲಿ ಚಕ್ರದಲ್ಲಿ ಇರುತ್ತದೆ. ಈ ಕುಂಡಲಿ ಚಕ್ರದ ಸಂಬಂಧವು ಒಂದು ಭಾವನೆಯ ಕಡೆ ಆಗುತ್ತದೆ. ಮತ್ತು ಎರಡನೆಯದು ನಮ್ಮ ಜ್ಞಾನೇಂದ್ರಿಯಗಳಿಂದ ಬಾಹ್ಯ ಜ್ಞಾನದ ಪರಿಚಯವನ್ನುಂಟು ಮಾಡುತ್ತದೆ.

ಹಠಯೋಗ ಕ್ರಿಯೆಯಲ್ಲಿ ವ್ಯಕ್ತಿ ಶ್ವಾಸವನ್ನು ಬಂಧಿಸಿ ಕುಂಡಲಿಚಕ್ರದ ಸಹಾಯದಿಂದ ಬಹಿರ್ಮುಖಕ್ಕೆ ಹೋಗುವ ಭಾವನೆಯ ಸ್ವಯಂ ಏಕೋಭಾವನೆಯನ್ನುಂಟು ಮಾಡುತ್ತದೆ ಇದರಿಂದ ನಾವು ನಮ್ಮ ಶಕ್ತಿಯ ಶ್ವಾಸದ್ವಾರ ಭಾವನೆಯ ಕೇಂದ್ರೀಕರಿಸಿ ಒಂದೇ ಒಂದಾದ ಅಲೌಕಾನಂದಾವಸ್ಥೆಯನ್ನುಂಟು ಮಾಡಿಕೊಳ್ಳುತ್ತೇವೆ.

ಈ ಎಲ್ಲ ಉದಾಹರಣೆಗಳಿಂದ ೩೬ ತತ್ವಗಳಲ್ಲಿಯೂ ನೂರಾವಂದು ಸ್ಥಲ ಸಹಿತವಾದ ಷಟ್‌ಸ್ಥಲಗಳ ಆಚರಣೆಗಳಲ್ಲಿಯೂ ವಿಶ್ವದ ಬಹಿರಾಂಗಾಂತರಂಗಗಳಲ್ಲಿಯೂ, ಭಕ್ತಿ ಜ್ಞಾನ ವೈರಾಗ್ಯಗಳಲ್ಲಿಯೂ, ವೀರಶೈವ ಅಷ್ಟಾವರಣಗಳಲ್ಲಿಯೂ, ಪಂಚಾಚಾರಗಳಲ್ಲಿಯೂ, ಶಿವ, ವಿಷ್ಣು, ಬ್ರಹ್ಮರ ವಾಹನಗಳಲ್ಲಿಯೂ ಶಕ್ತಿಯು ಮುಂದರಿದು ಆಯಾ ಮೂರ್ತಿಗಳ ಮುಂಭಾಗದಲ್ಲಿ ಕ್ರಿಯಾಜ್ಞಾನಗಳನ್ನು ಸೂಚಿಸಿ, ಚಿತ್ಪ್ರಕಾಶವನ್ನು ಬೆಳಗುತ್ತವೆ. ಸಮಷ್ಟಿರೂಪಾದ ಪ್ರತಿಗ್ರಾಮಗಳ ಈಶ್ವರ ದೇವಾಲಯಗಳಲ್ಲಿ ಈಶ್ವರ ದೇವನ ಮುಂಭಾಗದಲ್ಲಿ ಕ್ರಿಯಾಚರ್ಯೆ, ಯೋಗ, ಜ್ಞಾನಗಳನ್ನು ನಷ್ಟಗೊಳಿಸುವ ಬಸವಣ್ಣನ ನಾಲ್ಕು ಪಾದಗಳು ಹಾಗು ಅಂಗಲಿಂಗಗಳನ್ನು ತೋರ್ಪಡಿಸುವ ಎರಡು ಕೋಡುಗಳು ಸುಶೋಭಿತವಾಗಿರುತ್ತವೆ. ಹಾಗು ಲಿಂಗ ಮೂರ್ತಿಯು ತನ್ನ ಶಕ್ತಿಯಾದ ಮೂಲ ಪೀಠದೊಡನೆ ಶಾಂತಿ ಸಾಮ್ರಾಜ

ವನ್ನು ಭಕ್ತರಲ್ಲಿ ಬೀರಿ, ಪ್ರತಿವರ್ಷದ ಮಹೋತ್ಸವಗಳಲ್ಲಿ ಮುಂದಿನ ಭಾವೀ ಪ್ರಜೆಗಳಿಗೂ ಸದ್ಯದ ಸದ್ಭಕ್ತರಿಗೂ ಸದ್ಗುಣಗಳ ಸಂಸ್ಕೃತಿಗಳನ್ನು ಸ್ಥಿರವಾಗಿ ನೆಲೆಗೊಳಿಸುತ್ತದೆ. ಹಾಗು ಶಿವಲಿಂಗವಿದ್ದ ದೇವಾಲಯದ ಸಮೀಪದಲ್ಲಿ ಶಕ್ತಿರೂಪಾದ ಶೈವವಾಚಕ ಪಾರ್ವತಿ, ಮಹಾದೇವಿ, ಶಂಕರಿ ಮುಂತಾದ ಶಕ್ತಿದೇವಿಯ ಗುಡಿಗಳೂ ಬಹುಶಃ ಪ್ರತಿಯೊಂದು ಗ್ರಾಮದಲ್ಲಿ ಸ್ಥಾನಾಪನ್ನವಾಗಿರುತ್ತವೆ.

ನಮ್ಮ ಭಾರತದಲ್ಲಿ ಹನ್ನೆರಡು ಜ್ಯೋತಿರ್ಲಿಂಗಗಳಿರುವಂತೆ ಹದಿನೆಂಟು ಯೋಗ ಪೀಠಗಳಾದ ಶಕ್ತಿದೇವಿಯ ಗುಡಿಗಳನ್ನು ಕಾಣಬಹುದು. ಓಂ. ಕೊಲ್ಹಾಪುರದ ಮಹಾಲಕ್ಷ್ಮಿ, ಜಾಳಂದರದ ಮಹಾದೇವಿ, ಕನ್ಯಾಕುಬ್ಜೆ ಕುಬ್ಜೆ, ಚಕ್ರವಾಪಿ, ಮಣಿಕರ್ಣ ಕೇಸರಿ, ಪೂರ್ಣ ಕ್ಷೇತ್ರದ ಪೂರ್ಣಿಕಾದೇವಿ, ಪರ್ವತದ ಪಾರ್ವತಿ, ವಿಂಧ್ಯಾದ್ರಿ ವಿಂಧ್ಯವಾಸಿನಿ, ಶೃಂಗಪುರದ ಶಾರದೆ, ಲಂಬಿಕೆಯ ಲಲಿತೆ, ಓಂ ಜ್ವಾಲಾಮುಖಿ ದಹನ ಶಕ್ತಿ, ಉಜ್ಜಯಿನಿಯ ಕಾಳಿಶಕ್ತಿ, ಧರ್ಮಸ್ಥಳೀ ರಾಹುಶಕ್ತಿ, ಓಂ ಶಕ್ತಿತ್ರಯ ನಮಾಮಿ ಓಂ ಕಾಶೀ ವಿಶಾಲಾಕ್ಷಿ, ಮಧುರೇ ಮೀನಾಕ್ಷಿ, ಕಂಚೀ ಕಾಮಾಕ್ಷಿ, ಓಂ ಅಕ್ಷಿತ್ರಯನಮಾಮಿ, ಓಂ ಶ್ರೀಶೈಲ ಭ್ರಮರಾಂಬೆ, ಶಂಬರದ ಜೋಗುಳಾಂಬೆ, ಶಿವಗಂಗೆ ಹೊನ್ನಾಂಬೆ, ಓಂ ಅಂಬಾತ್ರಯನಮಾಮಿ. ಓಂ ಇಂತೆಂಬ ಅಷ್ಟದಶ ಶಕ್ತಿಯೋಗ ಪೀಠಾಯ ನಮಃ

ಯೋಗಾಭ್ಯಾಸಕ್ಕೆ ಮುಖ್ಯವಾಗಿ ಮೂಲ ಪೀಠಗಳು ಶಕ್ತಿಮಯವಾಗಿರುವದಲ್ಲದೆ ಬಂಧ, ಮುದ್ರೆ, ಆಸನ, ಚಕ್ರ, ಮಂತ್ರ, ಅಷ್ಟಾಂಗಗಳಗೆಲ್ಲ ಶಕ್ತಿ ಸಾಮರ್ಥ್ಯಗಳ ಅವಶ್ಯಕತೆಯು ಎಷ್ಟೆಂಬದು ಇಹಪರ ಸೌಖ್ಯಾನುಭವಿಗಳಿಗೆ ಗೊತ್ತಾಗದೆ ಇರದು.

ಮನುಷ್ಯನು ಅಲ್ಪಶಕ್ತಿಯುಳ್ಳವನಾದರೂ ತನ್ನ ಇಚ್ಛಾಶಕ್ತಿಯ ಬಲದಿಂದ ಅಮಾನುಷ ಕೃತಿಗಳನ್ನು ಮಾಡಬಹುದು. ಇದಕ್ಕೆ ವೇದಾಗಮಗಳ ಕರ್ತರ, ಪುರಾಣೇತಿಹಾಸ ಕರ್ತರ, ಶಿವಶರಣರ, ಸಾಧುಸಂತರ ಉದಾಹರಣೆಗಳು ಅನಂತವಾಗಿವೆ. ನಮ್ಮ ಷಟ್‌ಸ್ಥಲ ಸಿದ್ಧಾಂತಶಿಖಾಮಣಿ ಕರ್ತರಾದ ಶ್ರೀಮದ್ರೇಣುಕಾಚಾರ್ಯರೂ ಶ್ರೀ ಶಂಕರಾಚಾರ್ಯರೂ ಶ್ರೀ ಬುದ್ಧ ಪ್ರಭೃತಿಗಳೂ ಶ್ರೀ ಏಸೋಕ್ರೈಸ್ತರೂ ಶ್ರೀ ಬಸವೇಶ್ವರರೂ ಶ್ರೀ ಮಧ್ವಾಚಾರ್ಯರೂ ಇನ್ನೂ ಎಷ್ಟೋ ಅವತಾರಿ ಪುರುಷರಲ್ಲದೆ, ನೇಪೋಲಿಯನ್

ಬೋನಾಪಾರ್ಟ ಶ್ರೀ ಗಾಂಧಿ ಮಹಾತ್ಮರು ಶ್ರೀ ಶಿವಾಜಿ ಛತ್ರಪತಿಗಳೂ ತಕ್ಕ ಮಹಾಪುರುಷರಾಗಿದ್ದಾರೆ. ಇವರೆಲ್ಲರಲ್ಲಿ ಇಚ್ಛಾಶಕ್ತಿಯ ಬಲವೇ ಬಲವು.

ನೂರೊಂದು ಸ್ಥಲಾಂತರ್ಗತವಾದ ಷಟ್‌ಸ್ಥಲಗಳಲ್ಲಿ ಮೂವತ್ತಾರು ತತ್ವಗಳು ಒಡಮೂಡಿ ಶಕ್ತಿ ಸಾಮರ್ಥ್ಯವನ್ನು ಸ್ಪಷ್ಟೀಕರಿಸುವಂತೆ ನಮ್ಮ ಶಿವಶರಣರು ೩೬ ತತ್ವಕ್ಕತೀತವಾದ ನಿರವಯಲ ಸ್ಥಳಗಳನ್ನು ಕಾಣುತ್ತ ಸೃಷ್ಟಿಯ ಉಗಮವನ್ನು ವಿವರಿಸುವಾಗ ಶಕ್ತಿತತ್ವವು ಯಾವಾಗ್ಗೆ ತಲೆದೋರಿದೆಯೆಂಬದನ್ನು ಶಿವಾನುಭವಿಗಳಿಗೆ ತೋರಿಸಲು:—

"। ಅಷ್ಟತನುಯುಕ್ತವಾದ ಬ್ರಹ್ಮಾಂಡಾದಿ ಚರಾಚರ ಪ್ರಾಣಿಗಳು ತೋರುವ ತೋರಿಕೆ ಏನೇನೂ ಇಲ್ಲದಂದು ಸರ್ವಶೂನ್ಯ ನಿರಾಲಂಬ ಬ್ರಹ್ಮವು ತಾನೊಂದೇ ಒಪ್ಪುತ್ತಿದ್ದಿತು. ಅಂತಿರ್ದ ಪರಬ್ರಹ್ಮವು ತಾನೊಂದೇ ಘೃತಕಾಠಿಣ್ಯವನ್ಮೂರ್ತಿ [ಸಚ್ಚಿದಾನಂದ ಲಕ್ಷಣವೆಂದು ಹೇಳುತ್ತಿಹುದಾದ ಕಾರಣ ಒಂದಾನೊಂದು ತಿಳಿದುಪ್ಪವೇ ಗಟ್ಟಿಗೊಂಡು ಹೆರೆದುಪ್ಪವಾದ ಹಾಗೆ ನಿರಂಜನ ಬ್ರಹ್ಮವಾಯಿತ್ತು. ಆ ನಿರಂಜನ ಬ್ರಹ್ಮವು ನೆನೆದ ನೆನಹೇ ನಿರಂಜೋಂಕಾರ ಶಕ್ತಿ, ಆ ನಿರಂಜೋಂಕಾರ ಶಕ್ತಿಯ ನೆನಹು ಮಾತ್ರದಿಂದ ವಾಚ್ಯ ಪ್ರಣಮ ಸ್ವರೂಪವಾದ ಶೂನ್ಯ ಲಿಂಗವು ಪುಟ್ಟಿತ್ತು. ಆ ಶೂನ್ಯ ಲಿಂಗಕ್ಕಂಗವಾಗಿರುವಂಥಾದ್ದೇ ಮಹಾಜ್ಞಾನ ಚಿತ್ತು. ಆ ಮಹಾಜ್ಞಾನ ಚಿತ್ತುವಿನ ನೆನಹು ಮಾತ್ರದಿಂದ ಕಲಾಪ್ರಣವ ಸ್ವರೂಪವಾದ ನಿಃಕಲ ಬ್ರಹ್ಮವು ಪುಟ್ಟಿತ್ತು. ಆ ನಿಃಕಲ ಬ್ರಹ್ಮಕ್ಕಂಗವಾಗಿರುವಂಥಾದ್ದೇ ಜ್ಞಾನ ಚಿತ್ತು. ಆ ಚಿತ್ತಿನ ಚಿನ್ನಾದವೇ ಬಕಾರ, ಚಿದ್ಬಿಂದುವೇ ಸಕಾರ, ಚಿತ್ಕಳೆಯೇ ವಕಾರ. ಈ ಚಿನ್ನಾದ ಚಿದ್ಬಿಂದು ಚಿತ್ಕಳೆ ಮೂಲ ಚಿತ್ತೆಂಬ ಚತುರ್ವಿಧವು ಗಟ್ಟಿಗೊಂಡ ಗೋಳಕಾಕಾರ ತೇಜೋಮೂರ್ತಿಯಪ್ಪ ಮಹಾಲಿಂಗವಾಯಿತ್ತು.

ಇದರಿಂದ ಮಹಾಲಿಂಗವು ಒಡಮೂಡುವ ಮೊದಲು ವಾಚ್ಯಪ್ರಣವು ಅವಾಚ್ಯ ಪ್ರಣಮಶಕ್ತಿಯ ಪ್ರಕಾಶವು ತಲೆದೋರಿದ ಸಂಗತಿಯನ್ನು ವಿಚಾರಿಸಿದರೆ ಶ್ರೀ ವೀರಶೈವವು ಶಕ್ತಿವಿಶಿಷ್ಟಾದ್ವೈತವೆಂಬ ಸಿದ್ಧಾಂತವು ತಕ್ಕದೆಂಬದು ಬದ್ಧವಾಯಿತು.

ಶೈವ ಮತದಲ್ಲಿ ೭ ಪ್ರಕಾರಗಳಿರುವವಷ್ಟೇ; ಇಂದಿಗೆರಡು ಸಾವಿರ ವರ್ಷಗಳ ಪೂರ್ವದಲ್ಲಿ ಬಹುಶಃ ಎಲ್ಲ ಶೈವರಲ್ಲಿ ಶಿವಾದ್ವೈತವನ್ನೇ ಬೋಧಿಸುವ

ಶಾಸ್ತ್ರಗಳು ಇರಬಹುದು. ಅದೇ ಸಾಂಪ್ರದಾಯಕ್ಕನುಸರಿಸಿ ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥಕರ್ತರು ಶಿವಾದ್ವೈತ ಶಬ್ದವನ್ನೇ ಮೇಲಿಂದ ಮೇಲೆ ಉಪಯೋಗಿಸಿದ್ದರೂ ಶಕ್ತಿವಾಚಕ ಚಿತ್‌ಶಬ್ದವನ್ನು ಶಿವಾರ್ಥವಾಗುವ ಯೌಗಿಕ ಶಬ್ದವಾಗಿ ಉಪಯೋಗಿಸಿರುವರು. ಈ ಯೌಗಿಕ ಶಬ್ದಗಳಿಂದ ಶಕ್ತಿಯು ಶಿವನೊಡನೆ ಅನುಸ್ಯೂತವಾಗಿರುವದಾಗಿ ಜ್ಞಾನವಾಗುವದು ಸಹಜ.

ಇನ್ನು ವೀರಶೈವ ಇಷ್ಟೇ ಶಬ್ದದಲ್ಲಿ "ವೀರ" ಶಕ್ತಿಸೂಚಕವಾಗಿಯೂ, "ಶೈವ" ಶಿವಮಯ ಜಗತ್ತೆಂಬ ಶಿವಾದ್ವೈತ ಸೂಚಕವಾಗಿಯೂ ಅರ್ಥವೆಂದು ತಿಳಿಯುವವರಿಗೆ ಶಬ್ದಾಭಿಮಾನವೇ ಹುಟ್ಟಲಾರದು.

ಇನ್ನು ಶಿವಾನುಭವದ ಪದಪದ್ಯ ವಚನಗಳ ಕಡೆಗೆ ಗಮಿಸುವಾ—

ಕಂದಃ— ಭಕ್ತಂ ಬಹು ಬಲವಂತಂ ।
ರಕ್ತಂ ಶಿವಶಕ್ತಿಭಕ್ತಿ ಭಾವಾಂಗದೊಳಂ ॥

ಸಕ್ತಂ ಸತ್ಕಾಯಕದೊಳ್ ।
ತ್ಯಕ್ತಂ ತನುಮನ ಧನಾದಿ ತೃಷೆಮೃಷೆ ಕಸಮಂ ॥೧॥

ಭಕ್ತರ ದೇಹಿಕ ದೇವಂ ।
ಸೂಕ್ತ ಶಿವಜ್ಞಾನ ಬೋಧ ಮಾಳ್ಪ ಮಹೇಶಂ ॥

ರಿಕ್ತಂ ಪೂರ್ವಾಶ್ರಯವಂ ।
ವ್ಯಕ್ತಂ ಷಟ್ಸ್ಥಲ ವಿಚಾರ ಸಾರಂ ವೀರಂ ॥೨॥

ಲಿಂಗತ್ರಯುಮಂ ಪೂಜಿಸಿ ।
ಲಿಂಗಾಂಗತ್ರಯಗಳೆಲ್ಲ ಸಮರಸಗೆಯ್ಯಲ್ ॥

ಲಿಂಗಾನಂದದ ಸೌಖ್ಯಂ ।
ಹಿಂಗದ ಸಂಗಿ ಶಿವಯೋಗಿ ಸತ್ಯಂ ನಿತ್ಯಂ ॥೩॥

ಶರಣಂ ಶಕ್ತಿವಿಶಿಷ್ಟಂ । ಮರಣಜನನಗಳ ಜಯಿಸಿ ನಿರಾಶಾವಾಸಂ ॥
ನಿರುತಂ ನಿಜದೊಳ್ ನಿಷ್ಠಂ । ಭರಿತಂ ಶಿವಭಕ್ತಿಭಾವ ಸೌಭಾಗ್ಯದೊಳಂ ॥೪॥

ಶಕ್ತಿಯು ಭಕ್ತಿಗೆ ಮೂಲಂ ।
ಭಕ್ತಿಯು ಶ್ರೀವೀರಶೈವಕಾಧಾರವು . ಕೇಳ್ ॥

ಮುಕ್ತಿಗೆ ಮೂಲಂ ಜ್ಞಾನಂ ।
ಯುಕ್ತಂ ವೈರಾಗ್ಯ ಸಂಪದಾಚಾರಕ್ಕಂ ॥೫॥

ವಚನ।— ತನುವಿಕಾರ ವಿದೂರಿಸಿತ್ತು ಗುರುಸೇವೆಯಿಂದ. ಮನ ವಿಕಾರ ಮರೆಯಾಗಿತ್ತು ಲಿಂಗಪೂಜೆಯಿಂದ. ಧನವಿಕಾರ ದೂರವೋಡಿತ್ತು ಜಂಗಮಾರಾಧನೆಯಿಂದ. ಪಂಚವಿಷಯಗಳ ಸಂಚಲವಡಗಿತ್ತು ಪಂಚ ಪ್ರಸಾದಗಳಿಂದ. ಅದುಕಾರಣ ಸದುಹೃದಯನಾದೆನಯ್ಯಾ ಸಿದ್ಧೇಶ್ವರಾ ॥೧॥

೨. ಲಿಂಗಾರ್ಚನೆ ವೈಗೊಳದೆ, ಪೂಜೆ ಪೂರ್ಣಗೊಳ್ಳದೆ, ಅಜ ಪೆಯು ಒಗ್ಗೂಡದೆ, ಸಮತೆ ಸಫಲವಾಗದೆ, ಸವಿಕಲ್ಪ ಸಂಧಾನವಾಗದೆ, ಶಬ್ದಾಬ್ಧಿಯಲ್ಲಿ ವಿಮುಗ್ಧರಾದ ವಿವಾದಿಗಳಿಗೆ ಭಾವಾಚಾರದ ಸುದ್ದಿಯೆಲ್ಲಿ ಯದೆಂದ ನಮ್ಮ ಸಿದ್ಧೇಶ್ವರಾ.

೩. ಮೂರುಲಿಂಗದ ಮೂಲವರಿಯದೆ, ಆರು ಲಿಂಗಗಳ ಅರುಹುಗೊ ಳ್ಳದೆ, ನವಲಿಂಗಗಳ ಸಕೀಲ ಸಾಧಿಸದೆ, ಕೇವಲ ಶಬ್ದಾಗ್ನಿಯೊಳು ವಿದ ಗ್ಧರಾಗುವ ವಿದ್ವಾಂಸರಿಗೆ ಏನೆಂಜೆನಯ್ಯಾ ಸಿದ್ಧೇಶ್ವರಾ.

೪. ಸದ್ವಸ್ತುವಿನ ಸತ್ಕ್ರಿಯೆವಿಡಿದು, ಜ್ಞಾನದೇವನ ಅನುಗ್ರಹ ಪಡೆದು, ಸುಜ್ಞಾನಯೋಗದ ದಾರಿಯು ಹಡೆದು, ಮಹಾಜ್ಞಾನಾನಂದ ಮಂದಿರದ ಚಿಚ್ಛಕ್ತಿವಿಶಿಷ್ಟನಾದ ಮಹಾದೇವನೊಳು ಬೆರೆದೇಕಮಯನಾ ಗೆಂದ ನಮ್ಮ ಸಿದ್ಧೇಶ್ವರಾ.

೫. ಧ್ಯಾನಂಗೆಯ್ಯುವ ಸ್ಥಳಗಳನರಿಯದೆ ಆಸನುಗಳ ಶಾಸನ ಸಮ ನಿಸದೆ, ಯೋಗಂಗಳ ಹೊಲಬದೋರದೆ, ಮನದ ಕೊನೆಯ ಮೂರ್ತಿಯ ತಿಳಿಯದೆ, ಪ್ರಾಣಾಪಾನಗಳ ಉದಯಗಾಣದೆ, ಜೀವಪರಮರ ಭೇದ ಬಲ್ಲ ವನಾಗದೆ, ಲಿಂಗಾಂಗಗಳ ಸಮರಸದ ಸುದ್ದಿಯಾಕೆಂದ ನಮ್ಮ ಸಿದ್ಧೇ ಶ್ವರಾ.

॥ ಪದ ॥

ದ್ವಿಪದಿ:— ಭಾವ ಬ್ರಹ್ಮವಾದ ಯತಿಗೆ ಇನ್ನಾವ ಪದಗಳೇತಕೋ ।
ಜೀವ ಪರವು ಬೆರೆದ ಬಳಿಕ ಶಿವೈಕ್ಯ ಚಿಂತೆಯೇತಕೋ ॥೧॥

ಲಿಂಗಸಂಗಿಯಾದವಂಗೆ ಜಗದ ಹಂಗವೇತಕೋ ॥
ಮಂಗಲಾಂಗ ಮಹಾತ್ಮಂಗೆ ಅಂಗಸಂಗವೇತಕೋ ॥೨॥

ಕರುಣ ಮಥನವಿಲ್ಲದವಗೆ ಮರಣ ಚಿಂತೆಯೇತಕೋ ॥
ಶರಣಪದವಿಪೊಂದಿದವಗೆ ಭಿನ್ನಭೇದವೇತಕೋ ॥೩॥

ನಾಮ ಸೀಮೆ ದಾಟಿದವಗೆ ಶಬ್ದಕ್ಷುಬ್ಧವೇತಕೋ ॥
ಕಾಮ ಕ್ರೋಧವಿಲ್ಲದವಗೆ ಆಶಿರೋಷವೇತಕೋ ॥೪॥

ಆಗಮೋಕ್ತ ಸುಚರಿತಂಗೆ ವಾದನಾದವೇತಕೋ ॥
ಭೋಗ ತ್ಯಾಗಗೈದವಂಗೆ ಸ್ವಾದ ಭೇದವೇತಕೋ ॥೫॥

ವಿಶ್ವ ವೀರಶೈವನಲ್ಲಿ ಶಕ್ತಿ ಶ್ರೇಷ್ಠಳಿಲ್ಲವೇ ॥
ವಿಶ್ವಭರಿತ ದೇವನಲ್ಲಿ ವಿಶಾಲಾಕ್ಷಿಯಿಲ್ಲವೇ ॥೬॥

# ಬ ಕಾರದಲ್ಲಿ ಭಕ್ತಿಭಾಂಡಾರಿ ಬಸವಣ್ಣನು.

( ಬರೆದವರುಃ— ಶ್ರೀ ಶಿವಾನಂದ ಸ್ವಾಮಿಗಳು ಗವಿಮಠ, ತೆಗ್ಗಿಹಳ್ಳಿ ಇಂಡಿ. )



ಭಾರತದಲ್ಲಿ ಬಹುದಿನಗಳಿಂದ ಭವಬಿಡಿಸುವ ಬಲವಂತರು ಬಂದರ ಬರುತ್ತಿರುವರು, ಬರುವರೆಂಬ ಭಾವವು ಬಲವಾಗಿ ಬೇರೂರಿರುವದು. ಭಾರತದಲ್ಲಿ ಬಡತನವು ಬಂದಾಗ ಬಟ್ಟೆ, ಬರೆ, ಬಕ್ಕರೆಗಳೆಂಬ ಬಡತನದ ಭೂತ ಬಡಿದಾಗ, ಭಾರತೀಯರ ಭಕ್ತಿಭಾವಗಳಡಗಿ ಬಲಹೀನರಾದಾಗ, ಬಡಿದಾಡಿ ಬಾಧೆಗೊಳುವಾಗ, ಭಾಂಡವಲದಾರರು ಬಡವರನ್ನು ಬಂಡೆಬ್ಬಿಸಿ ಬಾಧಿಸುವಾಗ, ಬಡಬಗ್ಗರ ಬಡಪಾಯಿಗಳ ಬಡನುಡಿಗೆ ಬಲವಂತರು ಬಧಿರರಾಗಿದ್ದಾಗ, ಬಡವರು ಬಡಕಾಗಿ ಬೆನ್ನುಬಾಗಿ ಬಟ್ಟೆಗೆಟ್ಟು ಬಿದ್ದಾಗ, ಬಲ ಬಟ್ಟೆಗಳೆಂಬು ಬಾನಿನಕಡೆ ಬಲಗೈ ಬಿಟ್ಟು ಬಾಯಮಾಡಿ ಬೊಬ್ಬೆಯು ನಿಡುವಾಗ, ಭೂತೇಶನು ಬಸವಂಣನಾಗಿ ಭೂಮಿಗೆ ಬಂದನು. ಬಿಜಾಪುರ ದಲ್ಲಿಯು ಬಾಗೇವಾಡಿಯು ಬಡಬ್ರಾಹ್ಮಣರ ಭಕ್ತಿಭಾವಕ್ಕೆ ಭಗವಂತನು ಬಾಲನಾಗಿ ಬಡವರಿಗಾಗಿ ಬಸುರಿನಿಂದ ಬಂದನು. ಭಾರತದ ಭಾಗ್ಯ ವಿಧಾತನೇ ಬಂದನೆಂದು ಬಹುವಾಗಿ ಬಗೆದರು. ಭಾವಭಕ್ತಿಯಿಂದ ಬಸವ ಬಾಲನ ಕಡೆಗೆ ಬಂದು ಭವಬಾಧೆ ಬಿಡಿಸುವನೆಂದು ಬಗೆದರು. ಬಸವನು ಬಾಳುವೆಯಲ್ಲಿ ಬೆಳಕನ್ನೂ ಬಲವನ್ನೂ ಭಾಗ್ಯವನ್ನೂ ಬರಿಸುವನೆಂದು ಭರವಸೆ ಬಂದಿತು.

ಬಸವನು ಬಾಲಚಂದ್ರನಂತೆ ಬೆಳೆದನು. ಬಾಲಕನಲ್ಲಿ ಭಕ್ತಿಭಾವ ಬಹುವಾಗಿದ್ದವು. ಬಲು ಬುದ್ಧಿವಂತನಿದ್ದನು. ಬಾಲಕರಲ್ಲಿ ಭೇಧಮಾಡದೆ ಬೆರೆದು ಭಕ್ತಿ ಭಾವ ಬೀರುತ್ತಿದ್ದನು. ಬಸವನು ಬಾಲಲೀಲೆಗಳನ್ನು ಬಹುವಾಗಿ ಬೀರಿದನು. ಬಾವಿಯಲ್ಲಿ ಬಿದ್ದ ಬಾಲಕನನ್ನು ಬದುಕಿಸಿದನು. ಬಾಲಕರಿಗೆ ಬೇಕಾದಾಗ ಬೇಡಿದಾಗ ಬೇಕಾದುದನ್ನು ಬಾಯ್ಗಿರಿಸಿದನು. ಬ್ರಹ್ಮಪ್ರತಿಷ್ಠೆಯ ಬ್ರಹ್ಮಸೂತ್ರವನ್ನೂ ಬ್ರಹ್ಮಯಜ್ಞ ಬ್ರಾಹ್ಮಣ್ಯಗಳನ್ನೆಲ್ಲ ಬೆದರದೆ ಬೆಚ್ಚದೆ ಬಿಟ್ಟುಬಿಟ್ಟನು. ಬ್ರಾಹ್ಮಣರು ಬೇಕಾದಷ್ಟು ಬೇಡಿಕೊಂಡರೂ ಬ್ರಹ್ಮಮುಹೂರ್ತದಲೆದ್ದು ಬಾಗೇವಾಡಿ ಬಿಟ್ಟುಬಂದನು. ಬಳಗದವರು ಬೇಡ

ಬೇಡೆಂದರೂ ಬಿಡಲಿಲ್ಲ. ಬಲ ಬೆಳಕಿಗಾಗಿ ಬೋಧೆಗೊಳ್ಳಲು, ಬಾಗೇವಾಡಿ ಬಿಟ್ಟು ಬರಿಗಾಲಿನಿಂದ ಬಟ್ಟೆಗೆಡದೆ ಬನಸಿರಿಯ ಬಣ್ಣಿಸುತ ಬಂದು ಬೆರೆದನು. ಬುದ್ಧಿವಂತ ಬೋಧಿಯನು (ಜಾತವೇದ ಮುನಿ) ಬಸವನು ಬೋಧೆಗೊಂಡು ಬುದ್ಧಿವಂತನಾಗಿ ಬಗವಂತನ ಭಕ್ತಿ ಭಜನೆಗಳನ್ನು ಬಹುವಾಗಿ ಬೆಳೆಸಿದನು.

ಬಸವನು ಬ್ರಾಹ್ಮೀಮುಹೂರ್ತದಲ್ಲೆದ್ದು ಬಹಿರ್ದೆಶೆಯ ಬಾಧೆಯನು ಬಗೆಹರಿಸಿಕೊಂಡು ಬ್ರಹ್ಮಚಾರಿಯಾಗಿ ಬೈಗೂ ಬೆಳಗೂ ಭಸಿತ ಬಳಿದುಕೊಂಡು, ಬೇಸರಿಕೆಯ ಬಿಟ್ಟು, ಭವಾನಿ ಶಂಕರನನ್ನು ಬಲವಾದ ಭಕ್ತಿಭಾವದಿಂದ ಬಿಟ್ಟು ಬಿಡದೆ ಭಜಿಸಿದನು. ಭೋಜನ ಬಿಟ್ಟನು. ಭೋಗಗಳನೆಲ್ಲ ಬಿಸುಟಿದನು. ಬರಿವೈಯಿಂದ ಬಿಡಾರ ಬಿಟ್ಟು ಬನದಲ್ಲಿ ಬಂದು ಭೂತೇಶನನ್ನು ಬಾಯ್ದುಂಬಿ ಭಜಿಸುವನು. ಬಂದವರಿಗೆ ಬೊಗಸೆಯೊಡ್ಡಿ ಬೇಡನು. ಭವ ಬಾಧೆಯ ಬಗೆಹರಿಸುವ ಬಲವನ್ನು ಬರೆಸೆಳೆದನು. ಬಯಲಿಗನಾಗದೆ (ಜೊಳ್ಳ ವೇದಾಂತಿಯಾಗದೆ ವೀರಶೈವನಾಗಿ) ಭವಿಯಾಗದೆ ಭಾವಲಿಂಗಗಳನೆಲ್ಲವುಗಳನು ಬಲವಾಗಿ ಭಜಿಸಿ, ಭಕ್ತಸ್ಥಲಾದಿಗಳನೆಲ್ಲವುಗಳನು ಬೇಸರಿಸದೆ ಬಿನ್ನಾಣದಿ ಬಿಂಬಿಸಿಕೊಂಡನು. ಬಾಹ್ಯಾಷ್ಟಾವರಣ, ಭಾವಾಷ್ಟಾವರಣಗಳ ಭೇದಗಳ ಬಗೆಯರಿತನು. ಬ್ರಾಹ್ಮಣ ಬಾಹಿರನಾಗಿ ಭೇದರಹಿತ ಬಲವುಳ್ಳ ಬಹಾದ್ದೂರ ವೀರಶೈವವನ್ನು ಬೆಳೆಸಲನುವಾದನು. ಬಸವನಿದ್ದೆಡೆಗೆ ಬಸವನ ಭಗಿನಿಯೊಬ್ಬಳು ಬಂದು ಬೆರೆದಳು. ಬಸವನ ಭಾವನಾದ ಬೀಗನೂ ಬಸವನ ಭಗಿನಿಯೊಡನೆ ಬಂದನು. ಭಗಿನಿಯ ಬಸುರಿನಿಂದ ಬಾಲ ಬಸವಣ್ಣನು ಬಂದನು. ಬಸವಣ್ಣನಿಂದ ಬೋಧೆಗೊಂಡು ಬಲು ಬುದ್ಧಿವಂತನಾದನು. ಬೇರೆ ಬೇರೆ ಭಾಗಗಳಿಂದ ಬಂದವರಿಗೆ ಭೇದ ಭಾವ ಬಿಟ್ಟು, ಬೋಧಿಸಿ ವೀರಶೈವರನೆನಿಸಿದನು. ಬಲದೇವನು ಬಸವನೆಡೆಗೆ ಬಂದು ಬೋಧೆಗೊಂಡನು. ಬಸವನು ಬಿಜ್ಜಳ ಭೂಪನ ಬಳಿಗೆ ಬಂದು ಬಲದೇವನ ಬಸುರಿನಿಂದ ಬಂದವಳನ್ನು ಭಾರ್ಯೆಯಾಗಿಸಿ ಬಾಸಿಂಗ ಬಿಗಿದುಕೊಂಡು, ಬೀಗತನದೊಳು ಬಿದ್ದನು. ಬಲದೇವನು ವೀರಶೈವನಾದನು- ಬಸವನು ಬಿಜ್ಜಳನ ಬಳಿಯಲ್ಲಿ ಬರವಣಿಗನಾದನು. ಬಿಜ್ಜಳನಲ್ಲಿರುವ ಬುಧರ, ಭಾಂಡವಲದಾರರ ಬೊಜ್ಜ ಬಹುವಾಗಿ ಬೆಳೆದಿತ್ತು. ಬಡವರು ಭಿಕಾರಿಗಳಾಗಿ ಬಟ್ಟೆಬರೆಗೆ ಬಾಯಿಬಿಡುತ್ತಿದ್ದರು. ಬಡವರನ್ನು ಬಿಟ್ಟುಬಿಡದೆ ಬಲವಂತರು ಬಾಧಿಸುತ್ತಿದ್ದರು. ಬಡವರ ಬೊಬ್ಬೆಯನ್ನು ಬಸವನಾಲಿಸಿದನು.

ಬಿಜ್ಜಳನೂ ಬುಧರೂ ಬೆರೆದಾಗ ಬಾನಿನಿಂದ ಭೂಮಿಗೊಂದು ಬರಹ ಬಿತ್ತು. ಬೇರಾವ ಬುಧರಿಗೆ ಬಗೆಹರಿಯದ ಬರಹವನ್ನು ಬಸವನೋದಿ ಬಹುವಾದ ಬದುಕು ಬಂಗಾರ ಬೆಳ್ಳಿ ಭಾಗ್ಯಗಳನ್ನು ಬರಿಸಿದನು. ಬರ ಬಿದ್ದು ಬಡವರು ಬಿಜ್ಜಳನ ಭೂಮಿಯಲಿ ಬಾಯಿ ಬಿಡುತ್ತಿದ್ದುದಕೆ ಬಸವನಾ ಬದುಕನೆಲ್ಲ ಭಿಕಾರಿಗಳಿಗೆ ಬಿಡದಿತ್ತು ಬರದ ಬಾಧೆ ಬಗೆಹರಿಸಿದನು. ಬಿಜ್ಜಳನು ಬಸವನಿಗೆ ಬಹು ಬಲವಾದ ಬದುಗನೆಂದು ಬುದ್ಧಿವಂತನೆಂದು ಬಗೆದು ಬಹುಮಾನಿಸಿ ಬಹುಬೆಲೆಯ ಬಾಳನ್ನೂ ಬಿರುದು ಬಾವುಲಿಗಳನ್ನೂ ಬಕ್ಷೀಸನ್ನಿತ್ತು ಬಣ್ಣಿಸಿದನು. ಬಲದೇವನಂತೆ ಬಿಜ್ಜಳನ ಬಲಗೈಯಾಗಿ ಭೂದೇವಿಯಾದ ಭುವನೇಶ್ವರಿಯ ಬಾವುಟದ ಬುಡದಲ್ಲಿ ಬಗಬಗೆಯ ಬೇಹಾರದಲ್ಲಿ ಭಾಗಿಯಾಗಿ ವೀರಶೈವವನ್ನು ಬಹುವಾಗಿ ಬೆಳಸಿದನು. ಬಿಜ್ಜಳನು ಬಸವನಿಗೆ ಬಹುವಾಗಿ ಬಾಗಿದ್ದನು. ಬಸವನ ಬಾಯಿಂದ ಬಂದ ಬೋಧೆಯನಾಲಿಸುತ್ತಿದ್ದನು. ಬಸವನು ಬಲುಮೆಯಿಂದ ಬೋಧಿಸಲಿಲ್ಲ. ವೀರಶೈವವನ್ನು ಬಲುಮೆ ಭೀತಿ ಬೆದರಿಕೆಗಳಿಂದ ಬೆಳಸಲಿಲ್ಲ. ಭಾವ ಭಕ್ತಿಯಿಂದಲೇ ಬೇರೆ ಬೇರೆ ಭಾಗಗಳಿಂದ ಭಕ್ತರಾಗಲಿಕ್ಕೆ ಬಂದೇ ಬಂದರು. ಬಂದವರೆಲ್ಲ ಬಸವನಿಗೆ ಬೆಂಬಲವಿತ್ತು ವೀರಶೈವವನ್ನು ಬೆಳಸಿ, ಬಲಿಸಿ, ಬಾಳನಲಿಯುವಂತೆ ಬಹುವಾಗಿ ಭೂತೇಶನ ಭಕ್ತರಾದರು. ಬಡವರಲ್ಲಿ ಬಲ್ಲವರಲ್ಲಿ ಬಿದ್ದವರಲ್ಲಿ ಬುಧರಲ್ಲಿ ಬುದ್ಧಿವಂತರಲ್ಲಿ ಬೇಕಾದವರಲ್ಲಿ ಭಗವಂತನ ಭಕ್ತರುದಿಸಿ ಬಂದು ಬಸವನ ಬಳಗದಲ್ಲಿ ಬಂದು ಬೆರೆತರು. ಭಕ್ತರಲಿ ಬಿರುಕಾಗದಂತೆ ಭೇದ ಬಿಡುವಂತೆ ಬೋಧಿಸಿದನು.

ಭಗವಂತನ ಭಕ್ತರನೊಂದೆಂದು ಬಿನ್ನವಿಸಿದನು. ಬಲಿ ಬೇಳು (ಯಜ್ಞ ಹೋಮ) ಗಳನೆಲ್ಲ ಬಿಡಿಸಿದನು. ಬಿಟ್ಟು ಬಿಡದೆ ಬೇಹಾರವ ಬೆಳಸಲು ಬೋಧಿಸಿದನು. ಬೇಹಾರಗಳಲ್ಲಿ ಭೇದವಿಲ್ಲೆಂದನು. ಬೇಹಾರದಿಂದ ಬಂದುದೆಲ್ಲ ಬಡವರ ಭಾಗ್ಯಕ್ಕಾಗೆಂದನು. ಭೋಳಾಶಂಕರನು ಬಡವರಲ್ಲಿ ಹನೆಂದು ಬೆಸಸಿದನು. ಭೋಳಾಶಂಕರನಂತೆ ಬೋಳ ಬಾಳಿರಬೇಕೆಂದನು. ಭ್ರಾಂತಿ ಭ್ರಮೆ ಬಿಟ್ಟು ಬಾಂಧವರಂತೆ ಬಳಗದವರಂತೆ ಬೀಗರಂತೆ ಬಾಳಬೇಕೆಂದನು. ಬೈರಾಗಿಯಾಗಿ ಭಿಕ್ಷೆ ಬೇಡಬಾರದೆಂದನು. ಬೇಕಾದವರಿಗಾದರೂ ಭೇದವಿಲ್ಲದೆ ಬೇಕಾದ ಬೇಹಾರದಿಂದಲೇ ಬಹುವಾದ ಭಕ್ತಿ ಭುಕ್ತಿಗಳೆಂದನು. ಭವಿಯು ಬಳಸದಿರೆಂದನು. ಭವಿಯು ಬಳಸಿದರೆ ಭವರೋಗ ಬಿಡದೆಂದನು.

ಬಲ್ಲಿದ ಪ್ರಭು ಬಂದು ಬಸವನ ಬಳಗದವರಿಗೇ ಬೋಧಿಯಾದನು. ಭಗವತಾ ಭಗಿನಿಯು ಬತ್ತಲೆಯಾಗಿ ಬಂದು ಬಸವನ ಬಳಗವನ್ನು ಬೆರೆದಳು. ಬಸವನೇ ಭಗವಂತನೆಂದು ಬಗೆಬಗೆಯಾಗಿ ಬಂಣಿಸಿದಳು. ಬೇರೆ ಬೇರೆ ಭಕ್ತರು ಬಗೆಬಗೆಯಿಂದ ಬೇಕಾದಂತೆ ಬೆಸಸಿದರೂ ಬೆದರಲಿಲ್ಲ, ಬೆದಕಲಿಲ್ಲ. ಬಹುವಾದ ಬೆಳಕು ಬೀರುವಂತೆ ಬೀಳುಗಳೆಯದಂತೆ ಬ್ರಹ್ಮಚಾರಿಣಿಯು ಬೋಧೆಗೈದಳು. ಬಸವನ ಬಳಗದವರೆಲ್ಲ ಬಾಯ್ದೆರದು ಬಿಟ್ಟುಬಿಡದೆ ಬಲೆ ಬಹಾದ್ದೂರಿ ಬ್ರಹ್ಮಚಾರಿಣಿ ಬಕ್ತೆ ಬುವಿಯಲ್ಲೇ ಬಲ್ಲಿದಳೆಂದರು" ಭಗವಂತನ ನುಭವ ಬೋಧಿಸುವ ಭವನದಲ್ಲಿಯ ಭಕ್ತರನ್ನು ಬೆರೆದಳು. ಬೊಂತಾದೇವಿ ಭೂಸುರನ ಬಸುರಿನಿಂದ ಬಂದವಳು. ಬಸವನ ಬಳಗದವರನ್ನು ಬೆರೆಯಲು ಬಂಧುಗಳನ್ನು ಬಿಟ್ಟುಬಂದಳು. ಬಟ್ಟೆಯಲ್ಲಿ ಭೂತೇಶನು ಬೆಂಬತ್ತಿಬಂದು ಬೀಗತನದಿಂದ ಬೆರೆಯೋಣ ಬಾ ಎಂದು ಬೇಡಿದಾಗ ಬೈದುಬಿಟ್ಟಳು. ಬೊಂತೆಯಲ್ಲಿ ಬಾಳೆಂದು ಭಗವಂತನು ಬೋಧಿಸಿದನು ಕಂತೆಯೊಂದಿಗೆ ಬೊಂತಾದೇವಿ ಬಂದು ಬಸವನ ಬಳಗವನ್ನು ಬೆರಿಸಿದಳು. ಬೀಗನಾದ ಬಾಲ ಬಸವಂಣನು ಬುದ್ಧಿಯಲ್ಲಿ ಬಲ್ಲಿದನೆಂದು ಭಕ್ತರೆಲ್ಲ ಬಾಯಿಂದು ಸುರಿದರು. ಬಸವನ ಬಳಗ ಬಹುವಾಗಿ ಬೆಳೆದು ಬಲಶಾಲಿಯಾಯಿತು.

ಬುಧರಾದ ಭಟ್ಟಬಚ್ಚಂಣರು ಬೇಪಾರಿಯೊಬ್ಬನು ಬಿಜ್ಜಳ ಭೂಪನಿಗೆ ಬಸವನ ಭಗ್ಗೆ ಭೇದವಾಗುವಂತೆ ಬುದ್ಧಿಗೆಡುವಂತೆ ಬೆದರುವಂತೆ ಬಿಡುಗಡೆಯಾಗುವಂತೆ ಬೆಸಸುತ್ತಿದ್ದರು. ಬಿಜ್ಜಳನು ಬಸವನನ್ನು ಬಗೆ ಬಗೆಯಾಗಿ ಬೆಸಗೊಂಡು ಬಗ್ನಮನೋರಥದವನಾಗುತ್ತಿದ್ದನು. ಬಲ್ಲಿದ ಬಸವನು ಬಿಜ್ಜಳನನ್ನು ಬೀರನಂತೆ ಬುದ್ಧಿವಂತಿಕೆಯಿಂದ ಬುಜ್ಜಯಿಸುತ್ತಿದ್ದನು(ಸಂತೈಸು) ಬಸವನ ಬಗೆಗೆ ಬುಧರು ಬೊಗಳುವದನೆಲ್ಲ ಬಿಜ್ಜಳನು ಬುಡಮುಟ್ಟ ಬುರಡಿಯೆಂದು ಬಗೆಯುತ್ತಿದ್ದನು. ಬಸವನು ಬೂಟಾಟಿಕೆಯ ಬುಧರನೆಲ್ಲ ಬೆದರಿಸಿಬಿಡುತ್ತಿದ್ದನು.

ಬಸವನು ಬಗವಂತನಂತೆ ಬಹುಬಗೆಯಾಗಿ ಬೋಧೆಗೈಯುತ ಬಲ್ಲವರಿಗೆ ಬೇಕಾದನು. ಬಡವರಿಗೆ ಬೇಕಾದನು, ಬಿಂಕದ ಬುಧರಿಗೆ ಬಗೆ ಬಗೆಯ ಬಿಂಕುಬಿಂಗಿಗಳನ್ನು ಬಿಡದೆ ಬಸವನಿಗೆ ಬೀರುತ್ತಿದ್ದರು. ಬಳಗಾರ ಬಣಜಿಗ, ಬೇಡ, ಬ್ರಾಹ್ಮಣ, ಭಿಲ್ಲ, ಭೀರ, ಬೆಸ್ತರವ, ಬೇಪಾರಿ, ಬೇಸಾಯಗಾರ ಬೆವಹಾರಿ, ಬಣಗಾರ, ಬೇಟೆಗಾರ, ಭಿಕಾರಿ, ಬುರುಡ, ಬುಧ, ಬಡವ ಬಲ್ಲಿದವರೆಲ್ಲ ಬಿಡದೆ ಬೇಧವಿಲ್ಲದೆ ಬಂದು ಬಸವನ ಬಳಗದಲಿ,

ಬೆರೆದರು. ಬಂಗಾಲ ಬಿಹಾರ ಬ್ರಹ್ಮದೇಶ ಬನವಾಸಿ ಭಾರತದ ಬೇರೆಬೇರೆ ಭಾಗಗಳಿಂದ ಭಕ್ತರು ಬಂದು ವೀರಶೈವರಾಗಿ ಭವಾನಿಶಂಕರನ ಭಕ್ತರಾಗಿ ಬಸವನ ಬಳಗದಲ್ಲಿ ಬೇಧಮಾಡದೆ ಬೆರೆತು ಬಲಿಸಿದರು.

ಬೆಳೆದು ಬಲಿತ ಬಸವನ ಬಳಗಕ್ಕೆ ಬಿಂಕದ ಬುಧರೆಲ್ಲ ಬೈದು ಬಿಜ್ಜಳನಿಗೆ ಬಸವನ ಬಗೆಗೆ ಬಲವಾಗೆ ಬಿಂಬಿಸುವಂತೆ ಬೊಗಳ ಹತ್ತಲು. ಬಿಜ್ಜಳನ ಭಾವವು ಬಸವನ ಬಳಗದ ಬಗ್ಗೆ ಭೀಕರವಾಯಿತು, ಬಿಜ್ಜಳನ ಬುದ್ಧಿಭ್ರಂಶವಾಯಿತು. ಭೇಧ ಬಗೆಯಹತ್ತಿದನು, ಬಿಗುವಿನಿಂದಿದ್ದು ಬಸವನನ್ನು ಬೀಳುಗಳೆಯಬೇಕೆಂದನು. ಬಿಜ್ಜಳನ ಭೇದವನ್ನು ಬಿಂಕನ್ನು ಬಡಿವಾರವನ್ನು ಬಗೆಯದೆ ಬಸವನು ಬೇಹಾರದಲ್ಲಿ ಭಕ್ತಿಬಾವವನ್ನೇ ಬೀರುತ್ತಿದ್ದನು. ಬಂಢಾರವೆತ್ತಿದನೆಂದರು. ಬುಧರು ಬಸವಂಣನಿಗೆ ಬೊಗಳಿದರು.

ಬಸವನು ಬಿಜ್ಜಳನ ಬಾಂಡಾರವೇಕೆ ಬಗವಂತನಿರಲೆಂದನು. ಬೇವು ಬೆಲ್ಲವಾಗುವಾಗ, ಬೆನಕ ಬಂಗಾರವಾಗುವಾಗ, ಬಿಜ್ಜಳನ ಬಾಂಢಾರವೇಕೆಂದ ಬಸವನು ಬಸವಳಿಯದೆ ಬಸ್ಸಬಡಿಸಿದೆ ಬಂದುದು ಬರಲಿ, ಭಗವಂತನ ಬಲವೊಂದಿರಲೆಂದನು.

ಬಸವನ ಬಳಗದವರು ಬ್ರಹ್ಮಪದವಿಯನೊಲ್ಲರು, ಭಕ್ತರ ಬಕ್ತರಾಗಿ ಬಿಡದೆ ಭಜಿಪರು. ಭವಿಯೊಡನೆ ಬೆರೆಸುವದು ಬ್ರೂಣಹತ್ಯ ಬ್ರಹ್ಮಹತ್ಯಗಳಿಗಿಂತ ಬಲವಾದ ಬಿಕ್ಕಟ್ಟಿನದೆಂದರು. ಬಾಧಿಸುವದು ಬಾಯುವಿಕಾರ ಭಕ್ತರಿಗೆ. ಭವಹರನ ಬಿಡದೆ ಬಲವಾಗಿ ಬಜಿಸುವ ಬಕ್ತನ ಬಕ್ತರಿಗೆಂದನು. ಬಕ್ತಪ್ರಿಯ ಬವಹರ ಬೂತೇಶನು ಬೃತ್ಯನಾಗಿ ಬಕ್ತಿಮಾಡಿದರೆ ಬೂಮಿಶನಾಗುವನು. ಬಕ್ತರ ಬಕ್ತನಾಗಿ ಬದುಕೆಂದನು. ಬಕ್ತಿ ಬಲಿದು ಬಾವಲಿಂಗದಲ್ಲಿ ಬಯಲಾಗುವದೇ ಭವ್ಯಬಕ್ತಿ. ಬಲ್ಲಿದ ಬಕ್ತ ಬಳಲುವದಿಲ್ಲ. ಬಡಿವಾರದ ಬಕ್ತ ಬಳಲಿ ಬೆಂದು ಬೆಂಡಾಗುವನು. ಬಾವುಲ ಬಾಳುವೆಯುಂತಾಗಿ ಬಕ್ತಿಯು ಬಯಿಸಿದರೆಂಮೂ ಬಾರದು. ಬೈಗು ಬೆಳಗು ಬಕ್ತಿಯಿಂದ ಬಜಿಸಿದರೆ ಬೂತೇಶನು ಬೆರೆಯುವರು. ಬೇತಾಳ ಬಡಿದಾಗ, ಬೇನೆ ಬಿದ್ದಾಗ, ಬಿಕ್ಕಟ್ಟಿನಲ್ಲಿ ಬಾಯಿ ಬೆಸ್ಸು ಬಿರಿದು ಬೀಳುವಾಗ, ಭಕ್ತಿಯಿಂದ ಭಗವಂತನ ಬಾಯ್ತುಂಬಿ ಭಜಿಸಬೇಕು. ಬೇಡದೆ ಬಯಸದೆ ಭಕ್ತಿ ಬೀರಿದರೆ ಭಗವಂತನು ಬಹುವಾದ ಬಲವನ್ನು ಬರಿಸುವನು. ಭಾಂಡವ ಬಾಹ್ಯಾಂತರಂಗದಲಿ ಬೆಳಗದೆ ಭೇದವಡಗದು. ಭಗವಂತನು ಬಂದು ಭೆಟ್ಟಿಯಾಗನು. ಭಾನದಲಿ ಭೇದ ಬಳಸಿದರೆ ಭವ

ದಲ್ಲಿ ಬಪ್ಪರು. ಬೂದಿಯು ಬಡಕೊಂಡು ಬಣ್ಣದರಿವೆಯು ಬಿಗಿದುಕೊಂಡು ಬಲ್ಲಿದ ಭಕ್ತನೆಂದು ಬಾಯಿಯಿಂದ ಬೊಗಳುವ ಬಡಿವಾಳದ ಭಕ್ತನಾದರೆ ಭಗವಂತನು ಬೈಯುವನು. ಬೈದ ಬೈಗಳನು ಭೋಗಿಸದೆ ಬಿಡಲಿಕ್ಕಾಗದು. ಭಕ್ತನಾಗಿ ಭಕ್ತರಿಗೆ ಬಾಗಿ, ಭೋಗವ ತೊರೆದು ಬಹುವಾಗಿ ಭಗವಂತನ ಭಜಿಸಿದರೆ ಬೇಡಿದನೀವನು. ಭಕ್ತಿಗೊಲಿಯುವನಲ್ಲದೆ ಬರಿಯುದಕದಲೊಲಿಯನು. ಬಾಯಿಂದ ಬುದ್ಧಿ ಬೆಸಸಲಿಕ್ಕೆ ಬರುವದಲ್ಲದೆ, ಭಾವದಿಂದ ಬಲವಾಗಿ ಬಾಳಲಿಕ್ಕೆ ಬಾರದಿದ್ದರೆ ಭವಹರನ ಬಾಧೆ ಬಿಡದು. ಭಕ್ತರು ಬಳಸಿ ಬ್ರಹ್ಮಚಾರಿಗಳು, ಬೇಕು ಬೇಡೆಂಬ ಭಾವ ಬಯಲಾಗದೆ ಭಗವಂತ ಬಾರನು. "ಭೂಲೋಕ ಭವರ್ಲೋಕ ಬೇರಿಲ್ಲ. ಭೋ। ಬೂಲೋಕದಲ್ಲೇ ಭುವರ್ಲೋಕವೈಯ್ಯ. ಬಸವನ ಬೋಧೆಯು ಬೆಡಗಿದು ಬಲ್ಲವರು ಬೆಸಸಿರಿ.

ಬೇಸಾಯ ಬೇಪಾರ ಬೇಹಾರ ಬೆಳಸಲು ಬೇಕಾದಂಥ ಬೋಧೆಯನ್ನು ಬೋಧಿಸಿದನು. ಬಸವನು ಬಳಲುವ ಬಡಬಂಧುಗಳಿಗೆ ಬರವಸೆಯ ಬಾಂಡಾರವಾದನು. ಬುದ್ಧಿಹೀನರಿಗೆ ಬುದ್ಧಿ ಬರಿಸಿದನು. ಬಂಡವಲದಾರರಿಗೆ ಬಹುವಾದ ಬಡಿತ ಬಿತ್ತು. ಬಸವಿಯರನ್ನು ಬಿಡುವದು ಬಂದಾಯಿತು. ಬಸವನ ಬಲದಿಂದ ಬೂಮಿಯು ಬಲು ಭಾಗ್ಯಶಾಲಿಯಾಯಿತು. ಬಡವರು ಬಲ್ಲಿದರೆಂಬ ಭೇದ ಬಯಲಾಯಿತು. ಬಡತನದ ಭೂತ ಬಿಟ್ಟು ಬಿಟ್ಟಿತು. ಬಲವಾದ ಬುದ್ಧಿ ಬಹುವಾದ ಬಲ ಬಂದು ಬಲ್ಲಿದರಾದರೆಲ್ಲರು. ಬಸವನ ಬಳಗದವರಿದ್ದಲ್ಲೆಲ್ಲ ಬುವಲೋಕವೆನಿಸಿತು. ಭಕ್ತಿ ಭಾವಗಳು ಬಲವಾಗಿ ಬೆಳೆದವು. ಬಟ್ಟೆ ಬರೆಯು ಬೊಟ್ಟೆ ಬಯಲಾಯಿತು. ಬೋಧಿಗೂ ಬೇಹಾರ ಬೇಕು. ಬುಕ್ತರಿಗೂ ಬೇಹಾರವೇ ಬೇಕು. ಬೇಹಾರವಿಲ್ಲದೆ ಬಗೆಹರಿಯದು. ಬಸವನ ಬಳಗದವರಾದ ಭಕ್ತರಿಗೆ ಬೇಕಾಗುವದನೆಲ್ಲ ಬೇರೆಯವರಿಂದ ಬಂದಿರಬಾರದು. ಭಕ್ತರಿಂದಲೇ ಬಂದಿರಬೇಕೆಂದನು. ಭಗವಂತನಲ್ಲಿ ಭಯ ಭೀತಿಯುಳ್ಳವರಾಗಬೇಕು. ಬೂತದಯ ಬೇಕು. ಬಾವ ಬತ್ತಲೆಯಾಗಬೇಕೆಂದನು. ಬೇರೆ ಬಗವಂತನಿಗೆ ಬಾಗಬೇಡ. ಭ್ರಮೆ ಬರಿದಾಗಬೇಕು. ಬಕ್ತಿಯನು ಬಣ್ಣಿಸಲು ಬಾರದು. ಬಸವಣ್ಣನೇ ಬಲ್ಲನದರ ಬಿನ್ನಾಣವನು. ಬಕ್ತ ಭಕ್ತನನು ಬಾಧಿಸಿ, ಬಳಲಿಸಿ, ಬೇಯಿಸುವದು ಬೇಡ. ಬೂತೇಶನ ಬಕ್ತಿ ಬೀರುವಾಗ ಬಕ್ತನಿಗೆ ಬಾಧೆ, ಬಳಲಿಕೆ ಬೇಯಿಕೆಗಳಾಗಿ ಬೇದು ಬೆಂಡಾಗುವಂತೆಸಗುವನು. ಬೆಚ್ಚದೆ ಬೆದರದಿದ್ದರೆ ಬೂತೇಶ

ನಂದು ಭಿಟ್ಟಿಯಾಗಿಬಿಡುವನು. ಬೂತೇಶನಿಗಾಗಿ ಬಿಟ್ಟು ಬಿಡದೆ ಬಕ್ತನಾಗಿ ಬಾಯಿ ಬಿಡುತ ಬಾಯ್ದೆರೆದು ಬಾ ಬಾ ಎಂದರೆ ಬಂದೇ ಬರುವನು. ಬಡವರಿಗೆ ಬಡಿದು ಬಾಧಿಸಿದ ಬಾಧೆ ಬಿಡದೆಂದು ಭೋಗಿಸಿದನ್ನಕ್ಷರ. ಬೆನ್ನು ಬಾಗುವದರೊಳಗೆ, ಬಧಿರನಾಗುವದರೊಳಗೆ, ಬಾತು ಬಾದಾಗುವದರೊಳಗೆ ಬೋಧೆಗೊಂಡು ಬವ ಬಾದೆಯು ಖಡಿಸುವ ಬಗವಂತನ ಬಕ್ತಿಯು ಬೇಡು. ಬಾಲನಾಗಿದ್ದಾಗ ಭೋಗಿಯಾಗದೆ ಬಕ್ತನಾಗುವದು ಬಲು ಬೇಸಿ. ಬಸವನ ಬೇಗ ಬಾಲ ಬಸವಣ್ಣನು ಬಾಲನಿದ್ದಾಗ ಬಕ್ತನಾಗಿದ್ದನು. ಬಸವನೂ ಬಾಲನಿದ್ದಾಗ ಬಕ್ತನಾಗಿದ್ದನು. ಬಾಲ ಬಸವಣ್ಣನ ಬಲವಾದ ಬುದ್ಧಿ ಬಾವಗಳನ್ನು ಬಣ್ಣಿಸಲಾರರು. ಬಲು ಬಲ್ಲಿದನಿದ್ದನು. ಬಕ್ತ ಬಕ್ತನ ಬಾಗಿಲಿಗೆ ಬಂದಾಗ ಬೃತ್ಯಾಚಾರ ಬಿಡಬಾರದು. ಬುವಿಯೊಳಗೆ ಭಕ್ತರಾರೆನಲು 'ಬಸವನೇ ಬಕ್ತನೆಂದನು' ಬಸವನು ಬಕ್ತರೆಲ್ಲರಿದಕೆ ಬಹುವಾಗಿ ಬೆಂದು ಬೇಗುದಿಗೊಂಡರು. ಬಸವನ ಬಳಗದವರೆಲ್ಲ ಬಗವಂತನೆಂದೆನಲು ಬಸವನ ಬಳಗದವರೆಲ್ಲ ಬಾಯ್ದೆರೆದು "ಭಲೆ ಬಾದ್ದೂರ ಬಸವನೆಂದರು." ಬುವಿಯನ್ನು ಬ್ರಮೆ ಬವಬಾಧೆಯೆಂದು ಬಗೆಯದೆ ಬುವಿಯನ್ನು ಬಲವಾದ ಬುವಲೋಕವನ್ನಾಗಿ ಬದಲಿಸಬೇಕು. ಬಾಗ್ಯದ ಬನವಾಗಿ, ಬಕ್ತಿಯು ಬೀಡಾಗಿ ಬುಕ್ತಿಯು ಬುವಿಯಾಗಿ ಬಗಳಾಂಬೆಯು ಬಾಲಕರಾಗಿ ಜಾಳಬೇಕೆಂದನು.

ಬಂದ ಬಕ್ತರಲ್ಲಿ "ಬವವನು ಭೇದಿಸಿ ಭುವಲೋಕದಲ್ಲಿ ಬವಾನಿ ಶಂಕರನೊಡನೆ ಬೆರೆಯುವವರಾರೆಂದು" ಬೆಸಸಲು ಬಂದ ಬಕ್ತರೆಲ್ಲ ಬಾಯಿ ಮುಚ್ಚಿ ಬೆಪ್ಪಾದರು. ಬಕ್ತಿ ಭಾಂಡಾರಿ ಬಸವನು ನಾ ಭೇಧಿಸಿದರೆ ಬೇಧಿಸಿ ಬವಾನಿ ಶಂಕರನಲ್ಲಿ ಬೆರೆಯುವರೆಂದನು. ಬಕ್ತರೆಲ್ಲ ಬಡಬಡ ಬಾಯ್ಬಿಡುತ ಬುದ್ಧಿ ಬೆಂದವರಂತೆ ಬೆಪ್ಪಾಗಿ ಬಿಟ್ಟರು. ಬಸವನು ನಾ– (ಅಹಂಕಾರ) ಬಿಟ್ಟರೆ ಬೇಕಾದದ್ದು ಬರುವದೆಂದು ಬೋಧಿಸಲು ಬಾಯ್ದೆರದು ಬಲೆ ಬಾದ್ದೂರ ಬಸವನೆಂದು ಬಗವಂತನೇ ಬಸವನಾಗಿ ಬಂದನೆಂದರು.

ಬಸವನ ಬೆಳವಣಿಗೆ ಬೆಳಕು ಬಲು ಭಕ್ತಿ ಬುಕ್ತಿಗಳಿಗೆ ಬಗೆಬಗೆಯ ಬಾದೆ ಬರುವಂತೆ ಬುಧರು ಬಿಜ್ಜಳನಿಗೆ ಬೆಸಗೊಳ್ಳುತ್ತಲಿದ್ದರು. ಬ್ರಾಹ್ಮಣನ ಬಸುರಿನಿಂದ ಬಂದ ಬಗಿನಿಯನ್ನು ಬಳಿಕಗೇಡಿ ಬಾದ ಬೇಳ್ಕಲದ ಬಾಲಕನಿಗೆ ಬೀಗತನದಿ ಬಾಸಿಂಗ ಬಿಗಿದರು. ಭೇದ ಬಿಟ್ಟು ಬೆರೆವ ಬೀಗತನದ ಬಗ್ಗೆ ಬಿಂಕದ ಬುಧರನೇಕರು ಬಿಜ್ಜಳನಿಗೆ ಬಗೆಬಗೆಯಾಗಿ ಬೊಗಳಿದರು.

ಬಿಜ್ಜಳನು ಬಾಯಿಯಲ್ಲಿ ಬೆರಳಿಟ್ಟು ಬಾಯ್ದೆರದು ಬೆಚ್ಚಿಬಿದ್ದು ಬೀಗರನ್ನು ಬರಿಸಿ ಬಗೆಬಗೆಯಿಂದ ಬಾಧಿಸಿ ಬಳಲಿಸಿ ಬೆಂದು ಬೇಯುವಂತೆ ಬಡಿಸಿ ಬೆನ್ನ ಬಾರನ್ನೆತ್ತಿ ಬೂಮಿಗೆ ಬೀಳುವಂತೆ ಬಿಲ್ಲು ಬಾಣ ಬರ್ಚಿಗಳಿಂದ ಬಸುರಿನಲ್ಲಿ ಬಡಿಸಿದನು. ಬಸವನು ಬದಿರನಾಗಿ ಬೆಂದು ಬೇಗುದಿಗೊಂಡು ಬೇಯುತ್ತ ಬಿಜ್ಜಳ ಬೂಪನ ಬಿಟ್ಟು ಬರಿಗಾಲಿನಿಂದ ಬೋದಿಯ ಬಳಿಗೆ ಬಂದು ಬಿಟ್ಟನು. ಬಸವನ ಬಳಗದವರೆಲ್ಲ ಬಹುವಾಗಿ ಬೆಂದು ಬೆಂಡಾಗಿ ಬಳಲಿ ಬವಿ ಬಿಜ್ಜಳನ ಬಾಧಿಸಿ ಬಲವನ್ನೇ ಬಿಡಿಸಿದರು. ಬಸವನು ಬಾವ ಲಿಂಗದಲಿ ಬಯಲಾದನು. ಬಗವತಿ ಬಗಿನಿ ಬಲ್ಲಿದಪ್ರಬು ಬಗವಂತನ ಬೆಟ್ಟಕ್ಕೆ ಬಂದು ಬಯಲಾದರು. ಬೊಂತಾದೇವಿ ಬದುಕಿ ಬಕ್ತಳಾಗಿ ಬಡವರ ಬಾಗ್ಯ ದೇವಿಯಾಗಿ ಬದುಕಿ ಬಹುದಿನದ ಬಳಿಕ ಬೊಂತೆಯೊಡನೆ ಬಯಲಲ್ಲಿ ಬೆರೆದಳು. ಬಾಲಬಸವಣ್ಣನು ಬಸವನ ಬಳಗಕ್ಕೆ ಬೆಂಬತ್ತಿದ ಬಿಜ್ಜಳನ ಬಾಳಧಾರೆಯ ಬಲವನ್ನು ಬಳದಿಂದಲೇ ಬಡಿಯುತ್ತ ಬನದಲ್ಲಿ ಬಂದು ಬಟ್ಟೆಗೆಟ್ಟು ಬನ್ನು ತೋರವೆ ಬಿಜ್ಜಳನ ಬಲವನ್ನು ಬೀಳಿಸುತ ಬಾಳಲು ಬಾಳೂರಿಗೆ ಬಂದು ಬಯಲಾದನು.

ಬಸವನ ಬಾನ ಬೆಳಕನ್ನು ಬೆಳಗಾಂವಿಯ ಬಾಳಪ್ಪನು ಬಹುವಾಗಿ ಬೆಳೆದು ಬೆಳಗುವಂತೆ ಬೋದಿಸುವಾಟಗಳನ್ನು ಬಿಡದಾಡುವನು. ಬಾಗೇವಾಡಿಯಲ್ಲಿ ಬಸವನ ಭವನ ಬೆಳಗುವಂತೆ ಬಲ್ಲಿದರು ಬಿಡದೆದ್ದರು.

ವಿಜಾಪುರದ ಬುದ್ಧಿವಂತ ಹಳಕಟ್ಟಿಯವರು ಬಸವನ ಬಗ್ಗೆ ಬಸವನ ಬಳಗದ ಬಗೆಗೆ ಬಹುವಾದ ಬೆಳಕುಬೀಳುವಂತೆ ಬರೆಬರೆದು ಬೋಧಿಸಿದರು. ವೀರಶೈವವನು ಬದುಕಿಸಿದರು. ಬಸವನನ್ನು ಬಸವನ ಬಳಗವನ್ನು ಬದುಕಿಸಿದ ಭಂಟನೆಂದೇ ಬಗೆಯಬೇಕು. ಬಸವನ ಬರಹ ಬಸವನ ಬಳಗದವರ ಬರಹಗಳನ್ನು ಬಯಲಿಗೆ ತಂದು ಬದುಕಿಸಿ ಬೆಳಗುವಂತೆಸಗಿದ ಭಂಟ ಬುದ್ಧಿವಂತನವನೆಂದು ಬಗೆದರು. ಬಗೆಬಗೆಯ ಬಿರುದು ಬಾವಲಿಗಳನ್ನಿತ್ತರು. ಬೆಳಗಾಂವಿಯವರು ಬಾಂಡವಲನ್ನಿತ್ತು ಬಿಡಬೇಕೆಂದು ಬಗೆದಿದ್ದಾರೆ. ಬಲ್ಲ ಮೃತ್ಯುಂಜಯ ಬಾದ್ದೂರ ಹಳಕಟ್ಟಿಯವರಿಗೆ ಬಹಳಷ್ಟು ಭಾಂಡವಲನ್ನೀಯಬೇಕೆಂದು ಬಿಡದೆ ಬಂದುಭಾಂದವರಿಗೆ ಬಾಥರಿಗೆ ಬಲ್ಲಿದರಿಗೆ ಬಡವರಿಗೆ ಬೇಕಾದವರಿಗೆ ಬೆಸಸುತ್ತಿರುವರು.

ಬಡವನಾವಿ ಬಸವ ಬಾಲನ ಬರಹವನ್ನು ಬಿಡದೋದಿ ಬಸವನ ಬಗೆಗೆ ಭೇದಭಾವ ಬಿಟ್ಟು ಬಕ್ತಿಭಾವದಿಂದವನನ್ನು ಬಜಿಸಿ ಬಿಡದೆ ಬೇರೆಬೇರೆ ಭಾಗಗಳಲ್ಲಿ ಬಸವನ ಬೆಳಕನ್ನು ಬೀರಬೇಕೆಂದು ಬೇಡುವೆನು.

ಹರಿಹರ ಮಹಾ ಕವಿಯು ಚಿತ್ರಿಸಿರುವ

# ಮಹಾಭಕ್ತ ತಿರುನೀಲಕಂಠರ್

( ಲೇಖಕರು:- ' ಉದಯ ರವಿ ' ತಿಪಟೂರು. )



ವೀರಶೈವ ಪುರಾಣಗಳಲ್ಲಿ ಅರುವತ್ತು ಮೂರು ಪುರಾತನರ ಕಥೆಗಳು ಬಹು ಜನಪ್ರಿಯವಾಗಿವೆ. ಇದೇ ಪುರಾತನರ ವಿಷಯವನ್ನು ತಿಳಿಸುವ ಉದ್ಗ್ರಂಥವೊಂದು "ಪೆರಿಯ ಪುರಾಣಂ" ಎಂಬ ಹೆಸರಿನಿಂದ ತಮಿಳುಬಾಷೆ ಯಲ್ಲಿದೆ. ರಮಣ ಮಹರ್ಷಿಗಳು ತಮ್ಮ ಜೀವನದಲ್ಲಿ ಮೊಟ್ಟ ಮೊದಲ ನೆಯದಾಗಿ ಈ ಪೆರಿಯ ಪುರಾಣವನ್ನು ಮನನ ಮಾಡಿ, ಮನೆಮಠಗಳನ್ನು ತೊರೆದು ಅಧ್ಯಾತ್ಮ ಜ್ಞಾನಾಸಕ್ತರೆಂದಮೇಲೆ ಆ ಕೃತಿಯ ಮೇಲ್ಮೆ ಎಷ್ಟೆಂದು ವಿವರಿಸುವ ಅಗತ್ಯವಿಲ್ಲ.

ಹರಿಹರನು ರಚಿಸಿದ ನೂರಿಪ್ಪತ್ತಕ್ಕೂ ಮೇಲ್ಪಟ್ಟ ರಗಳೆಗಳಲ್ಲಿ ಈ ಪುರಾತನರ ವಿಷಯ ಬರುತ್ತದೆ. ಇವನು ವರ್ಣಿಸಿರುವ ಪುರಾತನರೆಲ್ಲರೂ ಹರಿಹರ ಕವಿಗಿಂತ ಹಿಂದಿನವರೆಂಬ ವಿಷಯ ಸರ್ವ ವಿದಿತ. ಆದರೆ ಎಷ್ಟು ಕಾಲ ಹಿಂದಿನವರು ಎಂಬ ವಿಚಾರ ನಿರ್ಧಾರವಾಗಿಲ್ಲ. ಇವರಲ್ಲಿ ತಿರುನೀಲ ಕಂಠರು ಬಹು ಪ್ರಸಿದ್ಧರು. ಇವರೇ ಮೊದಲಿನ ಪುರಾತನರಿರಬಹುದೇ ? "ನೆರೆಸಂದರುವತ್ತುಮೂವರೊಳ್ಮೊದಲ್ ತಿರುನೀಲಕಂಠರ ಚರಿತವನವಧಾರು ಹಂಪೆಯ ವಿರೂಪಾಕ್ಷ" ಎಂಬ ಕವಿಯ ಪ್ರಸ್ತಾವನೆ ಅದೇ ಅರ್ಥ ಬರು ವಂತಿದೆ. ನೀಲಕಂಠರು ಕರ್ಮದಿಂದ ಕುಂಬಾರರು. ತಾವು ಕೈಕೊಂಡ ಸತ್ಯ ವ್ರತ ಪಾಲನೆಗಾಗಿ ಎಷ್ಟೆಂದು ದಂದುಗಕ್ಕೆ ಪಕ್ಕಾಗಿ ಕೊನೆಗೆ ಈಶ್ವ ರಾನುಗ್ರಹವನ್ನು ಪಡೆದರೆಂಬ ವಿಷಯವೇ ತಿರುನೀಲಕಂಠ ರಗಳೆಯ ಕಥಾ ವಸ್ತು.

"ಲೋಕ ಪಾವನವೆನಿಸಿ ಪರಿವ ಕಾವೇರಿಯಿಂದಲೂ, ನಾಕಮಂ ನಗುವ ನಗರುಗಳಿಪ್ಪೋಜೆಯಿಂ, ಎವೆಯಿಕ್ಕಲಿಂಬಿಲ್ಲದಿಲ್ಲದಿಪ್ಪ ಶಿವಭವನಂಗಳಿಂದಲೂ ಶ್ರೀ ಚೋಳದೇಶಮೊಪ್ಪಿತ್ತು." ಆ ದೇಶವು ಸಕಲ ಸಂಪತ್ತಿನಿಂದ ಭೂಯಿಷ್ಟ

ವಾಗಿ ಸುಭಿಕ್ಷ ತಾಂಡವವಾಡುತ್ತಿತ್ತು. ಈ ದೇಶದಲ್ಲಿ ಶಿವಪುರವೋ ಎಂಬಂತೆ ಶಿವಪೂಜಾ ಧುರಂಧರರಿಗೆ ಆಶ್ರಯ ಸ್ಥಾನದಿಂದ ಪೊನ್ನಾಂಬಲ ದೇಶ ಸೊಗಯಿಸಿತ್ತು. ಅದು ಕಾಪಾಲಿಯ ನೆಲೆವೀಡು. ' ಆ ಪುರಕೆ ಶಿವನ ನಿಷ್ಠೆಯೆ ಕೋಂಟೆ; ಭವನ ಬಕ್ತಿಯು ಸಂದ ಕಾಹು; ಶಿವಪುರಾಣವೇ ಸವೆದ ಬಾಗಿಲ್ಗಳು; ಪಂಚಾಕ್ಷರಿಯೆ ಪರಮನರಮನೆ. ದೇಶವೆಲ್ಲ ' ಹರಮಯಂ ಶಿವಮಯಂ ' ಆಗಿ ಶೋಭಿಸುತ್ತಿತ್ತು. ಎಲ್ಲೆಲ್ಲಿ ನೋಡಿದರೂ ಶಿವಭಕ್ತರೇ ಭಕ್ತರು. ಕಿವಿಗೆ ಬೀಳುವುದೆಲ್ಲಾ ಶಿವಶಬ್ದವೇ ನಡೆನುಡಿ, ಭಾವನೆ ಸರ್ವವಿಷಯಗಳಲ್ಲಿಯೂ ಶಿವನೇ ತುಂಬಿಹೋಗಿದ್ದನು.

ಇಷ್ಟೊಂದು ಮಹಿಮಾನ್ವಿತ ಶಿವಪುರವೇ ತಿರುನೀಲಕಂಠರ ವಾಸಸ್ಥಳ. ಅವರ ಪತ್ನಿ ಮುತ್ತೈದೆ ಎಂಬಾಕೆ. ಅವರೀರ್ವರೂ ತುಂಬು ಹರೆಯದಲ್ಲಿರುತ್ತಾ ' ಶಿವಭಕ್ತಿ ಮನದೊಳ್ಬಲಿತು ' ಈತ ' ಆ ಪುರಕ್ಕೆ ನಡೆನುಡಿಯ ಭವನೆಂದೂ ಮೃಡಮೂರ್ತಿಯೆಂದೂ ' ಹೆಸರಾಂತಿದ್ದನು.

ಶಿವಭಕ್ತ ನೀಲಕಂಠರು ಒಂದುದಿನ ನಿತ್ಯದಂತೆ ಹರನಾಲಯಕ್ಕೈತಂದು ' ಪೂವಿನಿಂದೊಮ್ಮೆ, ಪೊಸ ಪುಳಕದಿಂದೊಮ್ಮೊಮ್ಮೆ, ಬಾವ, ಭರಿತಾಶ್ರು, ಮುದಮುಗ್ಧತೆ ' ಗಳಿಂದ ಶಿವನನ್ನರ್ಚಿಸುತ್ತಿದ್ದರು. ಭಕ್ತಿಯೇ ಸಾಕಾರವಾದಂತೆ ಸಂಗನ ಧ್ಯಾನ ಪೂಜೆಗಳಲ್ಲಿ ಮುಳುಗಿ ಹೋಗಿದ್ದರು. ' ಏನಯ್ಯಾ, ಏನಬವಾ, ಏನೆನ್ನ ಮನದೊಲಿವೆ, ಪೊನ್ನಾಂಬಲದ ನಲಿವೆ ' ಎಂಬುದಾಗಿ ಶಿವನನರ್ಚಿಪುದ್ಯೋಗದಲ್ಲಿ ನಿರತರಾಗಿದ್ದರು ಮಧ್ಯರಾತ್ರಿಯವರೆಗೆ ಪೂಜಾಸಮುದ್ರದಲ್ಲಿ ಮಿಂದು ಅನಂತರ ' ತನ್ನರಮನೆಗೆ ' ಬರುತ್ತಿದ್ದರು. ಆ ಸಮಯದಲ್ಲಿ ' ಹರನೋಲಗದ ನಾಯಕಿ ವಿಳಾಸಿನಿ ಪರಿಯಣದುದಕವನಲ್ಲಿ ಚಲ್ಲುತಿರೆ ' ಅದು ನೀಲಕಂಠರ ಮೇಲೆ ಚಿಮ್ಮಿತು. ತಿರುನೀಲಕಂಠರೆಂಬ ಸರ ಕೇಳ್ದ ನಾಯಕಿ ತಪ್ಪಂತಿಳಿದು, ಕ್ಷಮಿಸಬೇಕೆಂದು ಕಾಲ್ಪಿಡಿದು ಬೇಡಿದಳು. ಮನೆಗ ಕರೆದೊಯ್ದು ಮಜ್ಜನಕ್ಕೆರೆದು, ವರದುಕೂಲವನುಡಿಸಿ ತಪ್ಪಂಮರೆವುದೆಂದು ಮತ್ತೆ ಮತ್ತೆ ಬೇಡಿದಳು. ತಿರುನೀಲಕಂಠರು ಸಂತಸಂಬಟ್ಟು ಆಕೆಯ ತಪ್ಪಂ ಕ್ಷಮಿಸಿ ಮನೆಗೆ ಬಂದರು.

ಆದರೆ ಅಂದಿನ ಮನೆಯ ಅಂದವೇ ಬೇರೆಯಾಗಿತ್ತು. ಅವರ ಪತ್ನಿ ಮುತ್ತೈದೆ ' ಮನದೊಳಗೆ ಚಿಂತೆಯಂ, ನೇಹದೊಳು ಕೋಪವಂ, ನೆನಹಿ

ನೊಳು ಬೆರಸುತ, ತನುವಿನೊಳು ಬಿಸುಪನುಂ ಬಯ್ತಿಡುತ್ತಿದ್ದಳು. ವೇಳೆ ಮೀರಿದ್ದಕ್ಕೆ ಕಾರಣ ಕೇಳಲು ತಿರುನೀಲಕಂಠರು ನಡೆದ ಪ್ರಸಂಗವನ್ನು ತಿಳಿಸಿದರು.

ನಾಯಕಿಯ ಮನೆಗೆ ಹೋಗಿ ಆಕೆಯ ಆದರಾತಿಥ್ಯ ಸ್ವೀಕರಿಸಿದ ಪತಿಯ ಬಗ್ಗೆ ಆಕೆಗೆ ಸಂಶಯ, ದ್ವೇಷ ಮೂಡಿದವು. ಏನೂ ತೋರದೆ, ಬಾಡಿರ್ದ ಲತೆಯಂತೆ ಅವರನ್ನುಪಚರಿಸಿ ಬೆಂಬಿಡುತ ಮಲಗಿದಳು. ನೀಲ ಕಂಠರು ಕಾಮಾನುರಾಗದಿಂದ ತಮ್ಮರಸಿಯ ಮೇಲೆ ನೇಮಕ್ಕೆ ಕೈಯಿಡಲು, ಆಕೆ ಸಿಡಿಮಿಡಿಗೊಂಡು "ಮುಟ್ಟಿದೊಡೆ ಶಿವನಾಣೆ" ಎಂದು ಬಿಟ್ಟಳು. 'ಶಿವನಾಣೆ' ಎಂಬ ಕೂರಲಗಿಂದ ನೀಲಕಂಠರು 'ಬೆದೆ ಬೆದೆ ಬೆಂದು, "ಈ ದಿನಂ ಮೊದಲಾಗಿ ತಮ್ಮೊಳೊರ್ಬೊರ್ಬರೇನಾದೊಡಂ ಸೋಂಕದು. ಈ ಧರೆಗೆ ತಾವಿರ್ಬರೇ ಈ ನುಡಿವನರಿವ, ಈಶ್ವರನರಿವ'' ಮತ್ತೆ ಈ ನೆಲದೊ ಳಾರುಮಂಯರು ಭಕ್ತರಿಪ್ಪಿರವ" ಎಂದು ಶಿವನಾಣೆಯಿಟ್ಟು ಪ್ರತಿಜ್ಞೆ ಮಾಡಿ ಕೊಂಡರು. ತಮ್ಮ ಹೊಸ ಹುರುಪಿನ ಯೌವ್ವನವನ್ನೂ ಮರೆತು ಪರಸ್ಪರ ಮುಟ್ಟಬಾರದೆಂದು ಆಣೆಯಿಟ್ಟುಕೊಂಡರು.

ಸಂಸಾರದಲ್ಲಿ ರಾಗಭಾವಕ್ಕೆಡೆಗೊಟ್ಟಿದ್ದ ಮನದ ಬಾಗಿಲು ಮುಚ್ಚಿ ವಿರಾಗದ ಬಾಗಿಲು ತೆರೆಯಿತು. ವಿರಾಗದ ಅನುರಾಗವು ಭಕ್ತಿಯಾಗಿ ಬಲಿಯಿತು. ಶಿವನನರ್ಚಿಪುದೇ ಹರಣವಾಯಿತು. 'ಅವರಿರವಿಗಿಂತ ಬೇರೆ ಜಪತಪವೇಕೆ? ' ಭಕ್ತರನ್ನು ತಂದೆತಾಯ್ಗಳೆಂದೂ, ಲಿಂಗವೇ ಪ್ರಾಣವೆಂದೂ ಪೂಜಿಸಿ ಶಿವಚಿಂತೆಯಲ್ಲೆ ಮುಪ್ಪಾದರು. 'ಶಿವನಲ್ಲದಾರು ಇಲ್ಲೆಂಬಂತೆ ತಲೆ ನಡುಗಿತು. ಭವಿಗಳಂ ನೋಡೆನೆಂಬಂತೆ ಕಂಗಳು ಮುಗಿಯುತ್ತ' ಬಂದವು. ತೊಂಭತ್ತು ವರ್ಷಗಳು ಉರುಳಿಹೋದವು.

ಕೈಲಾಸಪತಿಗೆ ಭಕ್ತರನೊರೆದು ಕೊರೆದು ನೋಡುವ ಚಿಂತೆಯಲ್ಲದೆ ಬೇರಾವ ಚಿಂತೆ? ಈ ದಂಪತಿಗಳ ಮನವನೊರೆದು ಪರೀಕ್ಷಿಸಬೇಕೆನಿಸಿತು. ನಿಜರೂಪನ್ನು ಮರೆಸಿ "ಹೂಸಿದ ವಿಭೂತಿ, ಕೈಯ್ಯೊಳು ಪಾತ್ರೆ, ಎಸೆವ ಜಡೆ, ಭಾಸುರದ ಪುಲಿದೊಗಲು' ಮುಂತಾಗಿ ಧರಿಸಿ 'ಎಸೆವ ಭಿಕ್ಷುಕ' ನಾಗಿ ತಿರುನೀಲಕಂಠರ ಮನೆಗೆ ಬಂದನು. ನೀಲಕಂಠರ್ ಬಂದ ಜಂಗಮ್ಮ ರನ್ನು 'ಪಿಡಿದಪ್ಪಿ ಪದವಂ ಸುಖಾಶ್ರುವಿಂದ ತೊಳೆದು ಅಂಕರತೆಯಂ ತಳೆದು, ಸಿರಿ, ಪರುಷ ಕಲ್ಪತರು ಸುರಧೇನುಗಳೇ ಬಂದ ಹರ್ಷವೇ' ಅವರನ್ನುಪಚರಿಸಿದರು. ಅಭೀಷ್ಟವೇನೆಂದು ಕೇಳಿದರು. ಅದಕ್ಕೆ ಆ ಮಾಯಾ

ಜಂಗಮನು—"ಕೊಡಬೇಡ ನೀವೆಮಗವೇನುವಂ. ಈ ಪಾತ್ರೆಯಂ ಕೆಡದಂತೆ ಬಯ್ತಿಟ್ಟು ಕೊಡುವುದು. ಇದು ಎಮ್ಮ ಭಕ್ತರು ಕೊಟ್ಟ ಪದವಿ ಕಾಪಾಲಿಯಾದರೂ ಬಯಸುವಂಥದು, ಬೇಡಿದುದ ನೀವ ಮಹಾ ಸಿದ್ಧಿಯುಳ್ಳದು" ಎಂದು ಮಹಂತಾಗಿ ಹೇಳಿ ನೀಲಕಂಠರಿಗೆ ಪಾತ್ರೆಯನ್ನು ಕೊಟ್ಟು ತಾವು ಮತ್ತೆ ಬರುವುದಾಗಿ ತಿಳಿಸಿ ಹೊರಟುಹೋದನು.

ತಿರುನೀಲಕಂಠರು ಅದನ್ನು ಭದ್ರವಾದ ಪೆಟ್ಟಿಯೊಳಿಕ್ಕಿ ಮುದ್ರಿಸಿ, ತಾವೆ ಕಾಹಾಗಿ ನಿಂತರು. ಎಂದೋ ಒಂದು ದಿನ ಹೋದ ಜಂಗಮ ಮತ್ತೆ ಬಂದು "ಕುಡು ಕುಡೆನ್ನಯ ಪಾತ್ರೆಯ" ಎಂದನು. ನೀಲಕಂಠರು ಮುಚ್ಚಳ ತೆಗೆದರೆ ಪಾತ್ರೆಯೇ ಇಲ್ಲ!' ಅವರಿಗೆ ಅಚ್ಚರಿಯಾಯಿತು. ಇಲ್ಲವೆಂದರೆ ನಡೆದೀತೆ ? 'ನುಡಿಯಲರಿಯದೆ ಕರಗಿ ಕೊರಗಿ ಕಡುಭೀತಿಯಿಂದ' ತಲ್ಲಣಿಸಿದರು. ಅವರ ಮನ ಈ ಅವಮಾನ ತಾಳಲಾರದೆ 'ನೆಲನಂ ಬಗಿದು ಹುಗಲು ಬಯಸಿತು.'

ಪಾತ್ರೆ ಬಾರದ್ದರಿಂದ ಪಾತ್ರೆಯೊಡೆಯ ಕಡುಮುಳಿದು ನಿಂತ. "ಭಕ್ತರೆಂದೆನಿಸಿದರೆ ನೀವೀಪರಿಯ ಮಾಡುವರೆ ?" "ಏನು ಮಾಡಲಿ ಒಬ್ಬರೂ ಸಾಕ್ಷಿಯಿಲ್ಲ. ಏನು, ಪಾತ್ರೆಯನ್ನು ಪೆಟ್ಟಿಗೆ ತಿಂದುದೋ ? ನೆಗಳು ನುಂಗಿತೋ ?" ಎಂದು ಅಬ್ಬರಿಸಿ ಬಂಗೋಪಮಂ ತಾಳಿದನು. ದಂಪತಿಗಳು ಕಗ್ಗತ್ತಲಲ್ಲಿ ಅಡವಿಯ ಹೊಕ್ಕಂತಾದರು. ಮುಂಗಾಣದೆ ಕಲ್ಲು ಬೊಂಬೆಗಳಂತೆ ನಿಂತರು.

ಆದರೆ ನಿಷ್ಕರುಣಿ ಪಾತ್ರೆಯೊಡೆಯನಿಗೆ ಇದೇನು ಬೇಕು ? "ಪೊನ್ನಾಂಬಲದ ಹಿರಿಯರಿಹ ಮಠಕೆ ನಡೆಯಿರಿ" ಎಂದು ಪಂಚಾಯಿತರೆದುರಿಗೆ ತಂದನು. ಅದು "ಶಿವಮೂರ್ತಿ ಕಂಗಳೊಳು ಬರೆದಂತೆ, ಹರಪೂಜೆ ಹಸ್ತದೊಳು ಹಬ್ಬಿ ಬೆಳೆದಂತೆ" ಇದ್ದ ಶಿವಭಕ್ತರೋಲಗವಾಗಿತ್ತು.

'ಮಾಯಾವಿ ಗೊರವ'ನು ಅಲ್ಲಿ ಬಂದು "ಎಮ್ಮ ಭಕ್ತಕೊಟ್ಟ ಪಾತ್ರೆಯಂ ಇವಠ ವಶದಲ್ಲಿ ಬೈತಿಟ್ಟುಕೊಂಡಿರೆನಲ್ಕೆ ಅದಂ ಕೊಂಡು ಮೋಸದಿಂದಿರ್ಪರು. ಪಿರಿಯರು ಆ ಪಾತ್ರೆಯ ಕುಡಿಸಿ ಕೊಡುವುದು" ಎಂದರು. ತಿರುನೀಲಕಂಠರು ಇಂತಹ ತಸ್ಕರರೆ? ಎಂದು ಅವರಿಗೂ ಆಶ್ಚರ್ಯ. ಮಹಾ ಸತ್ಯಸಂಧನೂ ಶಿವಭಕ್ತನೂ ಆದ ಇವನೇಕೆ ಆ ಪಾತ್ರೆಯಂ ಕದ್ದನೋ ಎಂದು, ಪಾತ್ರೆಯನ್ನು ಕೊಡುವಂತೆ ಕೇಳಿದರು. ನೀಲಕಂಠರು

ಏನು ಹೇಳಬೇಕು ? ಹೇಳಿದರೆ ನಂಬುವಂತಹ ಮಾತೇನಿದೆ ? ಅವರಿಗೆ ಬೇರೆ ದಾರಿ ತೋರದೆ ಹರಕರುಣವೇ ತಮಗೆ ಹರಣವೆಂದು ।ಮೌನವೇ ಶರಣೆಂದು' ಸುಮ್ಮನಿದ್ದರು.

ಮೊದಲಿನಿಂದಲೂ ನೀಲಕಂಠರನ್ನು ತಿಳಿದಿದ್ದ ಆ ಮಂಟಪದ ಹಿರಿಯರಿಗೆ ಕರುಣೆಯುಂದಿಸಿತು. ಕಳೆದ ಪಾತ್ರೆಗೆ ಬದಲಾಗಿ 'ಮುಚ್ಚಾಸಿರದೊಂದು ಹೊಸ ಹೊನ್ನ ಪಾತ್ರೆಯಂ ಪಾತ್ರೆಯಯ್ಯಂಗೆ ಕೊಡಹೋದರು." ಆದರೆ ಜೇರೊಂದನರಸಬಂದವಗೆ ಪಾತ್ರೆ ಬೇಕೆ ? ಮತ್ತೆ ಮೊಂಡಾಟ ಹೂಡಿದರು. "ಆ ಪಾತ್ರೆ ಎನಗೆ ಒಡಲಪ್ಪುದು; ಉಸುರಪ್ಪುದು; ತೊಡವಪ್ಪುದು; ತವನಿಧಿಯಪ್ಪುದು; ನುಡಿದುದಂ ಕೊಡುವುದು. ಅದಕ್ಕೆ ನೀವೀವ ಹೊನ್ನುಗಿನ್ನುಂ, ಪರುಸ ಗಿರುಸಂ ಸರಿಯಲ್ಲ, ಮೇರುವೂ ಸರಿಯಲ್ಲ. ಶಿವ ಶಿವೇಕಾಮಾತು" ಎಂದು ಮಹಾ ಕೋಪವಂ ತಾಳಿದರು. ಐಶ್ವರ್ಯ ಸಮಸ್ತವನ್ನೂ ಕಳೆದುಕೊಂಡ ಕಡುಲೋಭಿಯಂತೆ "ಪಾತ್ರೆ, ಪಾತ್ರೆ, ಓ ಎನ್ನ ಪಾತ್ರೆ" ಎಂದು ಕೂಗಿ ಕರೆದರು. ನೀಲಕಂಠರಿಗೆ ಕೋಪಿಸಿ, ಕೊಲ್ವಂತೆ ಘೂರ್ಣಿಸಿ ಕೆಕ್ಕಳಿಸಿ ನೋಡಿದರು. ತಮ್ಮಲ್ಲಿಯೇ ಪಾತ್ರೆಯಿದ್ದೂ ಇಲ್ಲವೆಂದು ಹಲುಬಿದರು.

ಈ ಮಧ್ಯೆ ಮಂಟಪದ ಹಿರಿಯರಿಗೆ ಏನೂ ತೋರದಾಯಿತು. ವಿಶ್ವಾಮಿತ್ರ ವಶಿಷ್ಟರಿಗೆ ಬಿರುಸಿನ ವಾದ ನಡೆದಾಗ ಮೂಕುವಡೆದಿರ್ದ ದೇವನಿಕರದಂತೆ ತಾಟಸ್ಥ್ಯರಾದರು. ಕಡುಮೌನಿಗಳಾದ ನೀಲಕಂಠ ದಂಪತಿಗಳನ್ನು ಮತ್ತೇನೂ ಮಾಡಲಾಗುವುದಿಲ್ಲವೆಂದು ತಿಳಿದು ಮಾಯಾವಿ ಗೊರವನು 'ಕೊಯ್ದರೂ ಕೊರೆದರೂ ಕೊಂಡೆವೆನ್ನದರಿವರೆಂದು' ಮತ್ತೊಂದು ಸಂಚನ್ನು ಹೊಂಚಿದನು. 'ನೀಲಕಂಠರು ತಮ್ಮರಸಿಯ ಕೈವಿಡಿದು ಕೊಂಡ ದೊಳ್ಮುಳುಗಿ ಬರಲಿ. ಅಷ್ಟೇ ಸಾಕು, ನನ್ನ ಪಾತ್ರೆ ಬಂದಿತು ಅನ್ನುತ್ತೇನೆ' ಎಂದನು.

ಇದನ್ನು ಕೇಳಿ ನೀಲಕಂಠರಿಗೆ ಅನಿರೀಕ್ಷಿತವಾಗಿ ಕಾಣದತ್ತಣಿಂದ ಸಿಡಿಲೆರಗಿದಂತಾಯಿತು. ಅಲಗಿಂ ಸೀಳ್ದ ತೆರನಾಯಿತು. ಶಿವನಾಣೆ ಒಬ್ಬರನ್ನೊಬ್ಬರು ಮುಟ್ಟುವದಿಲ್ಲವೆಂದು ಸತ್ಯವಾಡಿ ಈಗ ಅದಕ್ಕೆ ತಪ್ಪುವುದೆ ಎಂದು ಆವರ ಮನ ಕುದಿಯಿತು, ಯೋಚಿಸಿ ಯೋಚಿಸಿ ಸಾಕಾಗಿ ಕೊನೆಗೆ ಕಳ್ಳನಿವನೆಂದೆನಲಿ, ಕಡುಪಾಪಿ ಎಂದೆನಲಿ, ಬಳ್ಳಿಹುಸಿಕನೆಂದನಲಿ ಶಿವಭಕ್ತಡಂಭ

ನೆಂದೆನಿಸಲಾರೆ ಎಂದು ನಿರ್ಧರಿಸಿದರು. ಜನರನ್ನು ಮೆಚ್ಚಿಸುವದಕ್ಕಿಂತ ಆತ್ಮಶಿವನನ್ನು ಒಲಿಸಲು ಮುಂದಾದರು. ಅದಕೇನು ಮಾರ್ಗ? ಮೌನ ವೊಂದೇ ಅವರಿಗಿದ್ದ ಮಾರ್ಗ.

ಮಂಟಪದ ಹಿರಿಯರಿಗೆ ಇದೀಗ ಸಮಸ್ಯೆ ಪರಿಹಾರವಾದಂತೆನಿಸಿ ಸಂತಸ ಗೊಂಡರು. "ಕರವಂ ಪಿಡಿದು ಈ ಕೊಂಡದೊಳ್ಮುಳುಗಿ, ಇವರ ತೊಡಕು ತೀರ್ದಪುದು" ಎಂದರು. ಇಬ್ಬರೊಳಗಿನ ಪ್ರತಿಜ್ಞೆ ಅವರಿಗೇನು ಗೊತ್ತು? ತಿರುನೀಲಕಂಠರು 'ಹೇಳಬಾರದು, ಹೇಳದಿರಬಾರದು' ಎಂಬ ಧರ್ಮಸಂಕ ಟಕ್ಕೆ ಸಿಕ್ಕಿನೊಂದರು. "ಪಿಡಿಯೆನೆನ್ನ ಸತಿಯ ಕೈಯ್ಯನೇನಾದೊಡಂ, ಈ ಧರೆಮೇಲೆ ಕೆಡೆದೊಡಂ ಪಿಡಿಯೆ" ಎಂಬ ದೃಢವಾಣಿಗೆ ಸಭೆ ನಡುಗಿತು. ಗುರುಗಳ್ಳಕ್ಕರು. ಅಟ್ಟಹಾಸದಿಂದ ತಲೆದೂಗಿ "ಬಂದುದೆನ್ನಯ ಪಾತ್ರೆ. "ಪಾತ್ರೆಯಂ ಕೊಟ್ಟಪರು ಚಿಂತೆ ಏಕೆನ್ನೆನಗೆ" ಎಂದು ಅಣಕವಾಡಿದರು. "ನೀವು ಪಾತ್ರೆಗಳ್ಳರಲ್ಲದ ಮೇಲೆ ಕೈಯ್ಯಪಿಡಿಯಲೇನು ಶಂಕೆ? ಅತ್ಯಾಸೆ ಯಿಂದ ಕವಿಲೆಯಾಚಾರದ ಚರಿತವಾಚರಿಸಬೇಡಿ" ಎಂದು ಕಟಿಕಿ ನುಡಿ ದರು. ಬೈಯ್ಯುತ್ತಾ ಹೊಡೆಯುತ್ತ, ನಾನಾ ಪ್ರಕಾರಗಳಿಂದ ನಿಂದಿಸಿ ಪರಿ ಭವಿಸಿದರು. ಏನಾದರೂ ನೀಲಕಂಠ ದಂಪತಿಗಳ ಚಿತ್ತಕದಡಲಿಲ್ಲ. ನೆನ ಹಿನ ನೇಮ ಕೆಡಲಿಲ್ಲ. ಜೈಮಿನಿಭಾರತದ ಮರುತ್ತ ರಾಜನು ಸಂವರ್ತ ಮುನಿಯಿಂದ ಬೈಸಿ ಉಗುಳಿಸಿಕೊಂಡು, ಕಾಲಲೊದೆಸಿಕೊಂಡು ಕೊಲುವೆ ನೆಂದು ಹೆದರಿಸಿದರೂ ನಿಶ್ಚಲನಾಗಿ ಋಷಿಯ ಮನವೊಲಿಸಿದಂತೆ ನೀಲ ಕಂಠರು ಎಲ್ಲಾ ಪರಿಭವಗಳನ್ನೂ ಸಹಿಸಿ ಶಿವನ ಮನವೊಲಿಸಿದರು.

"ಮಾಯಾವಿಗೊರವ" ಇನ್ನೆಷ್ಟು ಪರೀಕ್ಷಿಸಿಯಾನು? 'ಇವರ್ನಿಷ್ಠೆ ಯುಳ್ಳವರ್. ಸೋಲ್ಪರಲ್ಲೆಂದರಿತನು. ಕೊನೆಗೆ ಆತ ಕೋಲೊಂದನ್ನು ತಂದು ಇದರ "ಎರಡುಂ ದೆಸೆಯೊಳೆರ್ಬರುಂ ಕೋಲತುದಿಯಂ ಪಿಡಿದು ಕೂಡಿ ದರೆ ಪಾತ್ರೆ ಬಂದಂತೆ ಎಂದನು. ವ್ರತಭಂಗವಾಗದೆ ಮಾನವುಳಿಯುವ ಪ್ರಸಂಗ ಬಂದದ್ದಕ್ಕಾಗಿ ನೀಲಕಂಠರಿಗೆ ಪರಮಾನಂದವಾಯಿತು. ಕಂತು ಹರ ಶರ ಣೆನುತ' "ಇವರಿರಿಸಿದ ಪಾತ್ರೆ ಯಾವುದಂ ಕೊಳ್ಳೆವು" ಎಂದು ಕೋಲ ತುದಿ ಪಿಡಿದು ನುಡಿದರು. ಕೊಂಡದೊಳ್ಪಳಿಲನೆ ಮುಳುಗಿದರು. ಹರನ ಅಜ್ಞೆಯಂತೆ. 'ಶಿವನೊಲಿದವಗೆ ಕೊರಡು ಕೊನರಿ ಬರಡು ಹಯನಾಗುವುದ ಕಲ್ಲ' ಸಂದೇಹವೇನು? ಕೊಂಡದಲ್ಲಿ ಮುಳುಗಿ ತಮ್ಮ ಮುಪ್ಪನ್ನು ಕಳೆದು ಹದಿನಾರರ ಹರೆಯುವಂ ತಾಳಿದರು. ಮಾಯಾವಿ ಗೊರವ ಮರೆಯಾಗಿ

ಜಡೆ, ಚಂದ್ರ ಕಳೆ, ನೊಸಲ ಕಣ್, ನಾಗ ಕುಂಡಲ, ಮಿಸುಪ ಮುಖ ಮಂಡಲದಿಂದೊಪ್ಪುವ ಚಂದ್ರಶೇಖರ ಮೈದೋರಿದ. ದಂಪತಿಗಳಿಗೆ ವಿವರಿಸ ಲಾಗದಷ್ಟು ಹರ್ಷವಾಯಿತು. ಬಹುದಿನದ ಬಯಕೆಯ ಹರಚರಣಂಗಳಂ ಬಿಗಿದಪ್ಪಿದರು. "ನಮ್ಮನ್ನು ನುಡಿ ನುಡಿದು ಬಾಯ್ನೊಂದು"ದೆಂದರು. "ಮುಟ್ಟಿ ಮುಟ್ಟಿ ನಿನ್ನ ಕೈ ನೊಂದುದೇ" ಎಂದು ಮರುಗಿದರು. ಅನಂತರ ಅಭವ ನಾಜ್ಞೆಯಂತೆ ಬಹುಕಾಲ ಇಳೆಯಲ್ಲಿ ಸುಖಿಸಿದರು. ಮರಣಾನಂತರ ಶಂಕ ರನು ಅವರನ್ನು ಕೈಲಾಸಕ್ಕೊಯ್ದು ಗಣಪದವಿಯನ್ನಿತ್ತನು.

# ವಿನಂತಿ.

## ಶ್ರೀ ಹಳಕಟ್ಟಿಯವರಿಗೆ ಸನ್ಮಾನ ನಿಧಿ.

**ಶ್ರೀಸಿದ್ಧೇಶ್ವರ ಸಂಸ್ಥೆ ಮು. ವಿಜಾಪೂರ ಇವರು ಸಾರ್ವಜನಿಕರಿಗೆ ವಿನಂತಿಮಾಡಿಕೊಳ್ಳುವದೇನೆಂದರೆ:—**

ರಾ|| ಬ|| ಪಿ. ಜಿ. ಹಳಕಟ್ಟಿಯವರು ಹೋದ ೩೦–೪೦ ವರ್ಷಗಳ ಅವಧಿಯಲ್ಲಿ ಕನ್ನಡ ನಾಡಿಗೆ ಮತ್ತು ವೀರಶೈವ ಸಮಾಜಕ್ಕೆ ಅನೇಕ ರೀತಿಯಿಂದ ಮಾಡಿದ ಸೇವೆಯು ಎಲ್ಲರಿಗೂ ವಿದಿತವೇ ಇದೆ. ಆದರೂ ಅದನ್ನು ನಾವು ಸಂಕ್ಷಿಪ್ತವಾಗಿ ಇಲ್ಲಿ ವಿವರಿಸುತ್ತೇವೆ.

(೧) ಅವರು ಮೊದಲು ಶ್ರೀಸಿದ್ಧೇಶ್ವರ ದೇವಸ್ಥಾನ ಸಂಸ್ಥೆಯ ಪ್ರೆಸಿಡೆಂಟರಾಗಿ ಅನೇಕ ವರ್ಷ ಕೆಲಸ ಮಾಡಿದರು. ಅವರ ಕಾಲಕ್ಕೆಯೇ ಶ್ರೀಸಿದ್ಧರಾಮೇಶ್ವರ ದೇವರ ಸ್ಥಾಪನೆಯಾಗಿ ಮುಂದೆ ಜಾತ್ರೆಯ ಕಾರ್ಯಗಳು ಪ್ರಾರಂಭವಾದವು. ಆರಂಭದಲ್ಲಿ ಜಾತ್ರೆಗೆ ಬಹಳ ಸ್ವಲ್ಪ ಜನರು ನೆರೆಯುತ್ತಿದ್ದರು. ಆವರೆ ಶ್ರೀ ಹಳಕಟ್ಟಿಯವರು ಈ ಕಾಲಕ್ಕೆ ಒಕ್ಕಲುತನ ಸಂಘದ ಸೆಕ್ರೆಟರಿಗಳಾಗಿ ಕಾರ್ಯ ಮಾಡುತ್ತಿದ್ದು, ಅವರು ಒಕ್ಕಲುತನ ಪ್ರದರ್ಶನವನ್ನು ನೆರವೇರಿಸಿದರು. ಆಗ ದನಗಳ ಪ್ರದರ್ಶನವನ್ನೂ ಏರ್ಪಡಿಸಿದರು. ಅದು ಬಹು ಜನರನ್ನು ಆಕರ್ಷಿಸಿದ್ದನ್ನು ನೋಡಿ ಅವರು ಶ್ರೀಸಿದ್ಧೇಶ್ವರ ಜಾತ್ರೆಯ ಕಾಲದಲ್ಲಿಯೂ ದನಗಳ ಪ್ರದರ್ಶನವನ್ನು ಪ್ರತಿ ವರ್ಷ ಜರುಗಿಸುತ್ತ ಬಂದರು. ಅದರಿಂದ ಜಾತ್ರೆಯು ಬರಬರುತ್ತ ಬಹಳ ಬೆಳೆಯುತ್ತ ಬಂದಿತು. ಈಗ ಅದು ದೊಡ್ಡ ಸ್ವರೂಪವನ್ನು ಹೊಂದಿದೆ. ಇದು ಶ್ರೀ ಹಳಕಟ್ಟಿಯವರ ಪ್ರಯತ್ನಗಳ ಫಲವಾಗಿದೆ.

(೨) ಮುಂದೆ ದೇವಸ್ಥಾನಕ್ಕೆ ಸಂಬಂಧಿಸಿ ವೀರಶೈವರು ಸಭಾ ಕಾರ್ಯಗಳನ್ನು ನೆರವೇರಿಸಲಿಕ್ಕೆ ಒಂದು ಮಂದಿರವನ್ನು 'ಶೆಪರ್ಡ ಹಾಲ್' (ಶ್ರೀ ಸಿದ್ಧೇಶ್ವರ ಮಂದಿರ) ಎಂಬ ಹೆಸರಿನಿಂದ ಕಟ್ಟಿಸಲಿಕ್ಕೆ ಅವರು ಪ್ರಾರಂಭಿಸಿದರು. ಅದು ಇವರ ನೀರಿಕ್ಷಣೆಯಲ್ಲಿಯೇ ಕೊನೆಗಂಡಿತು. ಇದು ಈಗ ಪಟ್ಟಣದಲ್ಲಿ ಒಂದು ಉಪಯುಕ್ತ ಸುಂದರ ಮಂದಿರವಾಗಿದೆ.

(೩) ರಾ|| ಬ|| ಹಳಕಟ್ಟಿಯವರು ಮುಂದೆ ಶ್ರೀ ಸಿದ್ಧೇಶ್ವರ ಹಾಯಸ್ಕೂಲನ್ನು ಸ್ಥಾಪಿಸಿದರು. ಈ ಹಾಯಸ್ಕೂಲಿನ ಕಟ್ಟಡಕ್ಕಾಗಿ ೮ ಎಕರೆ ಬೈಲುಜಾಗೆಯನ್ನು ಪಟ್ಟಣದ ಸಮೀಪದಲ್ಲಿಯೇ ಸರಕಾರದಿಂದ ದೊರಕಿಸಿ ಅಲ್ಲಿ ಹೈಸ್ಕೂಲಿನ ಕಟ್ಟಡವನ್ನು ಪ್ರಾರಂಭಿಸಿದರು. ಈ ಕಟ್ಟಡಕ್ಕೆ ಮತ್ತು ಶಾಲೆಯ ಖರ್ಚಿಗೆ ಹಣವು ಕಡಿಮೆ ಬೀಳಲಾಗಿ ಅವರು 'ಧರ್ಮಾದಾಯ ನಿಧಿ' ಯನ್ನು ವಿಜಾಪುರ ವ್ಯಾಪಾರಸ್ಥರಲ್ಲಿ ಏರ್ಪಡಿಸಿದರು. ಈ ನಿಧಿಯ ಸಹಾಯದಿಂದಲೇ ಶ್ರೀ ಸಿದ್ಧೇಶ್ವರ ಹೈಸ್ಕೂಲಿನ ಇಮಾರತನ್ನು ಕಟ್ಟುವ ಕಾರ್ಯವನ್ನು ಪ್ರಾರಂಭಿಸಿದರು. ಈ ನಿಧಿಯ ಸಹಾಯದಿಂದ ಅದರ ಆಡಳಿತೆಯೂ ಕೂಡ ನಡಿಸಲ್ಪಟ್ಟಿತು.

(೪) ಮುಂದೆ ಶ್ರೀಸಿದ್ಧೇಶ್ವರ ಹಾಯಸ್ಕೂಲಿನ ಆಡಳಿತೆಯಲ್ಲಿ ಆತಂಕಗಳುಂಟಾದವು. ಆಗ ಹಾಯಸ್ಕೂಲು ನಡಿಸಲಿಕ್ಕೆ ರಾ. ಬ. ಹಳಕಟ್ಟಿಯವರು ಸರ್ವಾಧಿಕಾರಿಗಳಾಗಿ ಸಂಘದಿಂದ ನೇಮಿಸಲ್ಪಟ್ಟರು. ಅವರು ಈ ಪ್ರಕಾರ ೭-೮ ವರ್ಷ ಕೆಲಸ ಮಾಡಲಾಗಿ ಅದು ಸ್ವಾವಲಂಬಿಯಾಯಿತು. ಮತ್ತು ಅದು ಒಂದು ಶ್ರೇಷ್ಠ ಪ್ರತಿಯ ಶಾಲೆ ಎಂದೆನಿಸಿಕೊಂಡಿತು. ಇದು ಮುಂದೆ ವಿಜಾಪುರ ವಿಜಯ ಕಾಲೇಜವನ್ನು ಸ್ಥಾಪಿಸಲು ತಳಹದಿಯಾಯಿತು.

(೫) ಶ್ರೀ ಹಳಕಟ್ಟಿಯವರು ಶ್ರೀ ಸಿದ್ಧೇಶ್ವರ ಕೋ. ಆಪರೇಟಿವ್ಹ ಸೋಸಾಯುಟಿಯನ್ನು ಸ್ಥಾಪಿಸಿದರು. ಮತ್ತು ೧೦-೧೧ ವರ್ಷ ಅದರ ಚೇರಮನ್ನರಾಗಿ ಕೆಲಸ ಮಾಡಿದರು. ಈ ದೀರ್ಘ ಅವಧಿಯಲ್ಲಿ ಅದು ನಿರಾತಂಕವಾಗಿ ನಡೆಯಿತು. ಮತ್ತು ಪಟ್ಟಣದಲ್ಲಿ ಅದು ಈಗ ಒಂದು ಉಚ್ಚ ಸ್ಥಾನವನ್ನು ಪಡೆದಿರುತ್ತದೆ.

(೬) ಶ್ರೀ ಹಳಕಟ್ಟಿಯವರು ಬರಗಾಲ ನಿವಾರಕ ಸಂಘದ ಸೆಕ್ರೆಟರಿಗಳಾಗಿ ೧೫ ವರ್ಷ ಒಕ್ಕಲುತನ ಅಭಿವೃದ್ಧಿಯ ಅನೇಕ ತರದ ಕಾರ್ಯಗಳನ್ನು ಮಾಡುತ್ತ ಬಂದರು. ಅವರು ಮುಖ್ಯವಾಗಿ ಜಿಲ್ಹೆಯಲ್ಲಿ ಕಬ್ಬಿಣ ನೇಗಿಲೆಗಳ ಪ್ರಸಾರ, ಬಂಡಿಂಗ, ಮತ್ತು ಇನ್ನೂ ಅನೇಕ ಮಹತ್ವದ ಕಾರ್ಯಗಳನ್ನು ಮಾಡುತ್ತ ಬಂದರು.

(೭) ರಾ॥ ಬ॥ ಹಳಕಟ್ಟಿಯವರು ಹಿತಚಿಂತಕ ಪ್ರಿಂಟಿಂಗ ಪ್ರೆಸ್ಸನ್ನು ಸ್ಥಾಪಿಸಿ ಅದರಲ್ಲಿ ಅವರು ಶಿವಾನುಭವ ಪತ್ರಿಕೆಯನ್ನು ಹೋದ ೩೦ ವರ್ಷಗಳಿಂದ ನಡಿಸುತ್ತ ಬಂದಿದ್ದಾರೆ. ಈ ಪತ್ರಿಕೆಯು ಈಗಲೂ ಮಹತ್ವದ ವಾಙ್ಮಯ ಸೇವೆಯನ್ನು ಮಾಡುತ್ತ ಬಂದಿದೆ.

(೮) ಶ್ರೀ ಹಳಕಟ್ಟಿಯವರು ವೀರಶೈವ ವಾಙ್ಮಯದಲ್ಲಿ ಮಹತ್ವದ ವಾಙ್ಮಯವಾದ ವಚನಗ್ರಂಥಗಳು, ಮಹಾಕವಿ ಹರಿಹರನ ರಗಳೆಗಳು, ನೂರಾರು ಶಿವಶರಣರ ಚರಿತ್ರೆಗಳು ಇವಲ್ಲದೆ ಶೂನ್ಯ ಸಂಪಾದನೆ, ಬಸವೇಶ್ವರ ಸಿದ್ಧರಾಮೇಶ್ವರ, ಅಲ್ಲಮಪ್ರಭು ಮೊದಲಾದ ಅನೇಕ ಶಿವಶರಣರ ವಚನ ಗ್ರಂಥಗಳು ಮತ್ತು ಅನೇಕ ಕಾವ್ಯಗಳು ಇವುಗಳನ್ನು ಪ್ರಕಟಿಸಿದ್ದಾರೆ. ಹೀಗೆ ಅವರು ಈ ವರೆಗೆ ೮೬ ಗ್ರಂಥಗಳನ್ನು ಪ್ರಸಿದ್ಧಿಸಿದ್ದಾರೆ. ಈ ಎಲ್ಲ ಗ್ರಂಥಗಳು ಮೂಲ ಗ್ರಂಥಗಳು, ಇಲ್ಲವೆ ಕ್ರಮಗೊಳಿಸಲ್ಪಟ್ಟ ಪುರಾತನ ಸಂಗ್ರಹ ಗ್ರಂಥಗಳು. ಈ ವಾಙ್ಮಯವು ಮೊದಲು ಯಾರಿಗೂ ಗೊತ್ತಿರಲಿಲ್ಲ. ಇದನ್ನು ಇವರು ಮೊದಲು ಹೊರಗೆಡವಿದ್ದರಿಂದ ಕನ್ನಡ ವಾಙ್ಮಯದಲ್ಲಿ ಮತ್ತು ಸಮಾಜದಲ್ಲಿ ಒಂದು ಅಪೂರ್ವ ಜಾಗ್ರತಿಯಾಗಿರುತ್ತದೆ.

(೯) ಶ್ರೀ ಹಳಕಟ್ಟಿಯವರು ಮುನಸಿಪಾಲಿಟಿಯ ಸ್ಕೂಲಬೋರ್ಡ ಚೇರಮನ್ನರಾಗಿ ೬ ವರ್ಷ ಕೆಲಸ ಮಾಡಿದರು. ಮತ್ತು ಪಟ್ಟಣದಲ್ಲಿ ಅನೇಕ ವಿಧದ ಶಿಕ್ಷಣದ ಕಾರ್ಯಗಳನ್ನು ಮಾಡುತ್ತ ಬಂದರು. ಅವರು ಶಾಲೆಗಳ ಸಂಖ್ಯೆ ಬೆಳೆಸಿದ್ದು, ಶಾಲೆಗಳಲ್ಲಿ ಹೊಲಿಗೆ, ನೇಕಾರಿಕೆ, ಸ್ಕೌಟ ಶಿಕ್ಷಣ, ಇಂಗ್ಲೀಷ ಶಿಕ್ಷಣ, ವ್ಯಾಯಾಮ ಶಿಕ್ಷಣ ಈ ಶಿಕ್ಷಣಗಳನ್ನು ಪ್ರಾರಂಭಿಸಿದ್ದು ಮಹತ್ವದವಿರುತ್ತವೆ. ಅವರು ಶಾಲೆಗಳಲ್ಲಿ ವಚನಗಾಯನವನ್ನು ಸಹ ಮೊದಲು ಪ್ರಾರಂಭಿಸಿದರು.

(೧೦) ಶ್ರೀ ಹಳಕಟ್ಟಿಯವರು ಮಾಡುತ್ತ ಬಂದ ವಾಙ್ಮಯ ಸೇವೆಯನ್ನು ಕರ್ನಾಟಕ ವಿಶ್ವವಿದ್ಯಾಲಯದವರು ಲಕ್ಷಿಸಿ ಅವರಿಗೆ ಡಿ. ಲಿಟ್. ಎಂಬ ಡಾಕ್ಟರ ಪದವಿಯನ್ನು ಈಚೆಗೆ ದಯಪಾಲಿಸಿದ್ದಾರೆ.

(೧೧) ಇದಲ್ಲದೆ ಅವರು ಮಾಡುತ್ತ ಬಂದ ವಾಙ್ಮಯ ಕಾರ್ಯಗಳಿಗೋಸ್ಕರ ಬೆಂಗಳೂರು ಸಾಹಿತ್ಯಪರಿಷತ್ತಿನವರು ಅವರಿಗೆ ಮಾನಪತ್ರವನ್ನು ಸಮರ್ಪಿಸಿದರು ಮತ್ತು ಅವರ ಭಾವಚಿತ್ರದ ಅನಾವರಣವನ್ನು ತಮ ಮಂದಿರದಲ್ಲಿ ಮಾಡಿರುವರು.

(೧೨) ಈಚೆಗೆ ಶ್ರೀ ಹಳಕಟ್ಟಿಯವರು ಮಾಡುತ್ತ ಬಂದ ಅನೇಕ ಬಗೆಯ ಮಹತ್ವದ ಪ್ರಯತ್ನಗಳಿಗೋಸ್ಕರ ಅವರಿಗೆ ಒಂದು ನಿಧಿಯನ್ನು ಸಮರ್ಪಿಸುವ ಕಾರ್ಯವು ಕರ್ನಾಟಕದಲ್ಲಿಯ ಅನೇಕ ಪಟ್ಟಣಗಳಲ್ಲಿ ನಡೆದಿರುತ್ತದೆ. ಆದರಂತೆಯೇ ವಿಜಾಪುರ ನಾಗರಿಕರೂ ಪ್ರಯತ್ನಿಸುವದು ಅವರಿಗೆ ಶ್ರೇಯಸ್ಕರವೆಂದು ತೋರಿದ್ದರಿಂದ ಈ ಕಾರ್ಯದ ಸಲುವಾಗಿ ಎಲ್ಲರೂ ಅದರಲ್ಲಿ ವಿಶೇಷವಾಗಿ ವೀರಶೈವರು, ಒಂದು ಯೋಗ್ಯ ನಿಧಿಯನ್ನು ಅವರಿಗೆ ಸಮರ್ಪಿಸಿ ತಮ್ಮ ಕೃತಜ್ಞತೆಯನ್ನು ತೋರಿಸಬೇಕೆಂದು ಈ ಸಂಸ್ಥೆಯವರು ಕನ್ನಡಿಗರೆಲ್ಲರಿಗೆ ವಿನಂತಿ ಮಾಡಿಕೊಳ್ಳುತ್ತಾರೆ. ಈ ವಾಙ್ಮಯ ಕಾರ್ಯಗಳಿಂದ ಸ್ವಾಭಾವಿಕವಾಗಿ ರಾ॥ ಬ॥ ಹಳಕಟ್ಟಿಯವರಿಗೆ ಹಾನಿಯಾಗಿರುವದು. ಈ ನಿಧಿಯಿಂದ ಅವರಿಗೆ ಸಹಾಯವಾಗಬಹುದು. ಆದ್ದರಂದ ಈ ನಿಧಿಗೆ ಎಲ್ಲರೂ ಮುಕ್ತಹಸ್ತದಿಂದ ಸಹಾಯ ಮಾಡಬೇಕು. ಸಹಾಯ ಮಾಡಬೇಕೆನ್ನುವರು ತಮ್ಮ ಹಣವನ್ನು ಶ್ರೀ ಸಿದ್ಧೇಶ್ವರ ಸಂಸ್ಥೆಯ ಸೆಕ್ರೆಟರಿಗಳ ಕಡೆಗೆ ಕಳಿಸಬೇಕಂದು ನಮ್ಮ ಸವಿನಯ ವಿನಂತಿ ಅದೆ.

(೧೩) ಮೇಲಿನ ಕಾರ್ಯಕ್ಕೋಸ್ಕರ ಶ್ರೀ ಬಂಥನಾಳ ಶಿವಯೋಗಿಗಳವರ ಪೂರ್ಣ ಬೆಂಬಲವು ಇರುತ್ತದೆ. ಇದರಲ್ಲಿ ಎಲ್ಲರೂ ಸಹಾಯ ಮಾಡಬೇಕೆಂದು ಅವರ ಅಭಿಪ್ರಾಯವಿದ್ದು ಅವರ ಅಪ್ಪಣೆಯ ಪ್ರಕಾರ ನಾವು ಈ ಪ್ರಕಟನೆಯನ್ನು ಪ್ರಕಟಿಸಿದ್ದೇವೆ.

(೧೪) ಈ ಕಾರ್ಯದಲ್ಲಿ ಸಹಾಯ ಮಾಡಬೇಕೆನ್ನುವವರು ತಮ್ಮ ಗ್ರಾಮಗಳಲ್ಲಿ ಸ್ವತಂತ್ರ ವ್ಯವಸ್ಥೆ ಮಾಡಬಹುದು. ಇಲ್ಲವೆ ತಾವು ಕೊಡತಕ್ಕ ಹಣವನ್ನು ಅವರು ವಿಜಾಪುರ ಶ್ರೀ ಸಿದ್ಧೇಶ್ವರ ದೇವಸ್ಥಾನ ಸಂಸ್ಥೆಯ ಕಾರ್ಯದರ್ಶಿಗಳ ಕಡೆಗೆ ಕಳಿಸಬೇಕು.

ತಮ್ಮ ವಿಧೇಯ

**ಕಲ್ಲಪ್ಪ ಭೀಮಪ್ಪ ಯಲಗೊಂಡ,**

ಕಾರ್ಯದರ್ಶಿ

**ಶ್ರೀ ಸಿದ್ಧೇಶ್ವರ ಸಂಸ್ಥೆ, ವಿಜಾಪುರ.**

ವಿಜಾಪುರ

ತಾ। ೨೬—೯—೧೯೫೬

# ಶಿಶುನಾಳ ಶರೀಫರು ಮತ್ತು ಪ್ರಭುಲಿಂಗಲೀಲೆ.

( ಲೇಖಕ:— ಎಸ್. ಆರ್. ಗುಂಜಾಳ, ಕೋಳಿವಾಡ. )



ಕರ್ನಾಟಕದಲ್ಲಿ ಅನುಭಾವ ಮಾರ್ಗ ( School of mystic expérience ) ಆರಂಭವಾದುದು ಬಸವಾದಿ ಶರಣರಿಂದಲೇ ಸರಿ. ಅವರಿಗಿಂತ ಪೂರ್ವದಲ್ಲಿ ಅಂದರೆ ಹನ್ನೆರಡನೆಯ ಶತಮಾನದ ಮಧ್ಯಕಾಲದ ಮೊದಲು ನಮ್ಮ ನಾಡಿನ ಜನರು ಧರ್ಮದ ಒಳತಿರುಳಾದ ಜ್ಞಾನಕ್ಕೆ ಮಹತ್ವ ಕೊಡದೆ ಅದರ ಮೇಲುರೂಪವಾದ ಕರ್ಮಕ್ಕೆ ಅತಿಯಾಗಿ ಮಹತ್ವಕೊಟ್ಟಿರುವ ದಾಗಿ ತಿಳಿದುಬರುತ್ತದೆ. ಕೆಲವು ಜನರು ಜ್ಞಾನಕ್ಕೆ ಪ್ರಾಧಾನ್ಯತೆಯನ್ನು ಕೊಟ್ಟಿದ್ದರೂ ಕಾರ್ಯಕ್ಕೆ-ಕ್ರಿಯೆಗೆ ಎಳ್ಳಷ್ಟು ಮನ್ನಣೆಕೊಡದೆ ಸಂಸಾರ ವೆಂದರೆ ಭಯಂಕರವಾದ ಅಗ್ನಿಕುಂಡವೆಂದೋ, ಇಲ್ಲವೆ ಕೆಲಸಕ್ಕೆಬಾರದ ಮಾಯೆಯೆಂದೋ, ಉಪದೇಶಿಸಿ, ಜನತೆಯ ಬುದ್ಧಿಗೆ ಬೂದಿಯನ್ನೆರಚಿದ್ದರೆನ್ನ ಬಹುದು. ಶರಣರ ಪೂರ್ವದ ಕನ್ನಡ ಇತಿಹಾಸವನ್ನವಲೋಕಿಸಿದರೆ ಅರಿವು ಸದಾಚಾರಗಳು ಇಲ್ಲದಿದ್ದರೂ ಸರಿ, ಪಂಡಿತನಾಗಿದ್ದರೆ ಸಾಕು; ಅವನೇ ಅನುಭಾವಿ, ಅವನೇ ಗುರು, ಅವನು ಹೇಳಿದ್ದೆ ಮಾರ್ಗವಾಗಿತ್ತೆಂಬುದು ತಿಳಿದುಬರುತ್ತದೆ. ಆದರೆ ವೀರಶೈವ ಶರಣರು ನಡೆದಂತೆ ನುಡಿದರಲ್ಲದೆ ಅವರ ನಡೆಯೇ ಉಚ್ಚಮಾರ್ಗವನ್ನುಪದೇಶಿಸುವ ಬೃಹದ್ಗ್ರಂಥವಾಯಿತು. ಅವರ ನಡೆ ನಮ್ಮ ನಾಡಿನ, ಅತಿಕೀಳೆಂದು ಗಣಿಸಲ್ಪಟ್ಟ ಜನರ ನರನಾಡಿ ಗಳಲ್ಲಿ ಅಳವಟ್ಟು ಸಮಾಜವು ಸರ್ವಾಂಗಸುಂದರವಾಯಿತು. ಈಗ ತಿಳಿದ ಮಟ್ಟಿಗೆ ಸು. ೩೦೦ ಕ್ಕಿಂತಲೂ ಹೆಚ್ಚು ಜನ ಶರಣರು ಸಾಹಿತ್ಯ ರಚಿಸಿ ದಂತೆ ತಿಳಿಯುತ್ತದೆ. ಸಾಹಿತ್ಯರಚಿಸದೆ ಅನುಭಾವವನ್ನು ಅಳವಡಿಸಿಕೊಂಡ ಶರಣರೆಷ್ಟಿದ್ದರೋ ತಿಳಿಯದು !

ಶರಣರ ಕ್ರಾಂತಿಯ ತರುವಾಯ ಸಮಾಜವು ಮತ್ತೆ ಅಧೋಗತಿಗಿಳಿ ಯಿತು. ಆದರೂ ಶರಣರ ಅನುಭಾವರಸದ ಹೊಳೆಯು, ಒಡ್ಡುಕಟ್ಟಿಕೊಂಡು ಉಪಯೋಗಿಸಿದವರ ಮಲಿನ ಹೃದಯಗಳನ್ನು ಹಸನುಮಾಡಿ ಹುಲುಸಾದ ಬೆಳೆಯನ್ನು ಕೊಟ್ಟಿದೆ. ಹರಿಹರ, ರಾಘವಾಂಕ, ಭೀಮ, ನೂರೊಂದು

ವಿರಕ್ತರು, ಸರ್ವಜ್ಞ, ತೋಂಟದ ಸಿದ್ಧಲಿಂಗಯತಿ, ಮತ್ತು ಅವರ ಶಿಷ್ಯರು ಅಲ್ಲದೆ ಇತ್ತೀಚಿನ ಅನೇಕ ಶಿವಯೋಗಿಗಳು ಶರಣರ ಅನುಭಾವದ ತನಿರಸ ವನ್ನೀಂಟಿ ಆನಂದಿಸಿದ್ದಾರೆ. ಹೀಗೆ ಶಿವಶರಣರ ಪ್ರಭಾವಕ್ಕೊಳಗಾಗಿ, ಅವರು ಕಂಡಬೆಳಕಿನಲ್ಲಿ ನಡೆದ ಇತ್ತೀಚಿನ ಅನೇಕರಲ್ಲಿ ಶಿಶುನಾಳ ಶರೀಫ ಸಾಹೇಬರೊಬ್ಬರಿದ್ದರು.

ಸ್ಥಳಃ— ಶರೀಫ ಸಾಹೇಬರು ಧಾರವಾಡ ಜಿಲ್ಲೆಯ ಶಿಶುನಾಳ ಗ್ರಾಮದವರು. ಈ ಊರು ಗುಡಗೇರಿ ಸ್ಟೇಶನ್ನಿನಿಂದ ಮೂರು ಮೈಲುಗಳ ಅಂತರದ ಮೇಲಿದೆ. ಅವರದೊಂದು ಗದ್ದುಗೆಯನ್ನು ಅಲ್ಲಿಕಟ್ಟಿಸಲಾಗಿದೆ. ಅವರ ಮನೆತನದವರು ಇಂದಿಗೂ ಜೀವಿಸಿದ್ದಾರೆ. ಅಲ್ಲದೆ ವರ್ಷಕೊಮ್ಮೆ ಶರೀಫರ ಉತ್ಸವವು ವೈಭವದಿಂದ ಜರುಗುತ್ತದೆ. ಇವರ ವಿಷಯದಲ್ಲಿ ಕವಿ ಚರಿತೆಕಾರರು " ಈತನು ಪದ್ಯಗಳನ್ನು ಬರೆದಿದ್ದಾನೆ. ಇವನು ಮುಸಲ್ಮಾನನು. ಹಿಂದೂ ಮನದೀಕ್ಷೆಯನ್ನು ತೆಗೆದುಕೊಂಡಂತೆ ತೋರುತ್ತದೆ. ಈತನ ಗುರುಗೋವಿಂದ. ಸ್ಥಳ ಧಾರವಾಡ ಜಿಲ್ಲೆಗೆ ಸೇರಿದ ಶಿಶುನಾಳ. ಇವನು ಸುಮಾರು ೭೦, ೮೦, ವರ್ಷಗಳಿಂದ ಹಿಂದೆ (ಸು ೧೮೪೦) ಇದ್ದನೆಂದು ಹೇಳುತ್ತಾರೆ, " ಎಂದು ಬರೆದಿದ್ದಾರೆ. (ಕರ್ನಾಟಕ ಕವಿಚರಿತೆ ಭಾಗ ೩, ಪುಟ ೪೬೧) ಆದರೆ ಇತ್ತೀಚಿನ ಕೆಲವು ಸಂಶೋಧನೆಗಳಿಂದ ಶರೀಫರ ಕ್ರಿ. ಶ. ೧೮೮೮ ರಲ್ಲಿ ಐಕ್ಯರಾದರೆಂದು ತಿಳಿದುಬಂದಿದೆ.

೧. ಶರೀಫರು ಗೋವಿಂದರ ಶಿಷ್ಯವೃಂದದಲ್ಲೊಬ್ಬರಾಗಿದ್ದರು. ಒಮ್ಮೆ ಗೋವಿಂದರು ತಮ್ಮ ಶಿಷ್ಯರಲ್ಲಿಯ ಭಕ್ತಿ, ನಿಷ್ಠೆ, ಪ್ರೇಮಗಳನ್ನು ಪರೀಕ್ಷಿಸ ಲೋಸುಗ ಒಂದು ಪಾತ್ರೆಯಲ್ಲಿ ತಾವು ಉಂಡ ಆಹಾರವನ್ನು ವಾಂತಿಮಾಡಿ ಕೊಂಡು ಶಿಷ್ಯರಿಗೆ ಅದನ್ನು ಕುಡಿಯ ಹೇಳಿದರು. ಮಡಿವೈಲಿಗೆಯಲ್ಲಿ ನಂಬಿಗೆ ಯುಳ್ಳ ಕುಲೀನರಾದ ಆ ಶಿಷ್ಯರೆಲ್ಲ ಕುಡಿಯಲು ಒಪ್ಪಲಿಲ್ಲ. ಆಗ ಮ್ಲೇಚ್ಛ ನೆಂದು ತುಚ್ಛೀಕರಿಸಲ್ಪಟ್ಟ ಶರೀಫರು ಭಕ್ತಿಯಿಂದ ಬಂದು ಹಿಂದು ಮುಂದ ನೋಡದೆ ಅದನ್ನು ಕುಡಿಯಲು, ಗೋವಿಂದರು ಹರ್ಷಗೊಂಡು ಕೃಪೆದೋ ರಿದರು. ಕೂಡಲೇ ಶರೀಫರಿಗೆ ಜ್ಞಾನೋದಯುವಾಯಿತು. ಅಂದಿನಿಂದ ತತ್ವಪದಗಳನ್ನು ಹಾಡುತ್ತ ನಾಡನ್ನು ಉದ್ಧರಿಸಿದರು.

೨. ಒಮ್ಮೆ ಗೋವಿಂದ ಯೋಗಿಗಳು ಗುಡಗೇರಿಗೆ ಬಂದಾಗ ಶರೀಫರು ಅವರ ದರ್ಶನಾರ್ಥಿಯಾಗಿ ಶಿಶುನಾಳದಿಂದ ಅಲ್ಲಿಗೆ ಹೋದರು. ಇವರು ಅನ್ಯ ಮತದವರೆಂದು ಗೋವಿಂದರ ಭಕ್ತರು ಶರೀಫರಿಗೆ ಅಡ್ಡಿಯನ್ನುಂಟುಮಾಡಿ

ದರ್ಶನವಾಗದಂತೆ ನೋಡಿಕೊಂಡರು. ಇದನ್ನರಿದ ವಿಶಾಲ ಹೃದಯದ ಯೋಗಿಗಳು ತಾವೇ ಶರೀಫರಲ್ಲಿಗೆ ಎದ್ದು ಬಂದು ಅಪ್ಪಿ ಆಶೀರ್ವದಿಸಿದರು. 'ನೀನು ಕರ್ನಾಟಕದ ಕಬೀರನಿದ್ದೀ' ಎಂದು ಹರಿಸಿದರು. ಗೋವಿಂದರ ಕೃಪಾಶೀರ್ವಾದ ಪಡೆದ ಶರೀಫರಿಗೆ ಜ್ಞಾನೋದಯವಾಗಿ ತಮ್ಮ ಅನುಭಾವ ಗೀತೆಗಳಿಂದ ಜನತೆಯನ್ನು ತಿದ್ದುತ್ತ ಸಂಚರಿಸಿದರು.

ಇಂತಹ ಕಥೆಗಳಲ್ಲಿ ಕಲ್ಪನೆಗೆ ಅನುಕೂಲತೆ ಹೆಚ್ಚಿದೆಯಾದರೂ ಅವೆಲ್ಲವುಗಳು ಗೋವಿಂದ ಯತಿಗಳು ಶರೀಫರ ಆತ್ಮೋನ್ನತಿಗೆ ಕಾರಣರೆಂದು ಹೇಳುತ್ತವೆ; ಗುರುವೆಂದು ಖಚಿತಪಡಿಸುತ್ತವೆ. ಅಲ್ಲದೆ ಅವರ ತತ್ವಪದಗಳಲ್ಲಿ ಇದಕ್ಕೆ ಅನೇಕ ಆಧಾರಗಳು ದೊರೆಯುತ್ತವೆ.

ಧರ್ಮ:— ಇವರು ಮುಹಮ್ಮದೀಯರು. ಅವರ ಬಂಧುಗಳಿನ್ನೂ ಬದುಕಿದ್ದಾರೆಂದು ಹಿಂದೆ ಹೇಳಿದ್ದೇವೆ. "ಶರೀಫ ಸಾಹೇಬ" ಎಂಬ ಅವರ ಹೆಸರೇ ಅವರ ಹುಟ್ಟು ಧರ್ಮವನ್ನು ಎತ್ತಿ ತೋರಿಸುತ್ತದೆ. ಆದರೆ ಮುಸಲ್ಮಾನರಾದ ಇವರು ಹಿಂದೂ ಧರ್ಮವನ್ನು ಅಳವಡಿಸಿಕೊಂಡುದು ತುಂಬಾ ಆಶ್ಚರ್ಯಕರವಾದ ಸಂಗತಿ. ಯಾವ ಧರ್ಮವಾದರೇನು, ಸತ್ಯವನ್ನು ಎಲ್ಲಿದ್ದರೂ ಆದನ್ನು ಎತ್ತಿ ಹಿಡಿದು ಅಪ್ಪಿಕೊಂಡ ಶರೀಫರ ಜೀವನ ಆಶ್ಚರ್ಯಕರವೆನ್ನುವದಕ್ಕಿಂತ ಆದರ್ಶವೂ ಅನುಕರಣೀಯವೂ ಎನ್ನುವದು ಒಳಿತು.

ಶರೀಫರ ತತ್ವ ಪದಗಳನ್ನು ಕೂಲಂಕಷವಾಗಿ ಅಭ್ಯಾಸಿಸಿದಾಗ ಅವರ ಜೀವನದ ಮೇಲೆ ಬಸವಾದಿ ಶರಣರ ತತ್ವಗಳು ಬಹುವಾಗಿ ಪ್ರಭಾವ ಬೀರಿದುದಾಗಿ ಕಂಡುಬರುತ್ತದೆ. ಅಲ್ಲದೆ ಅವರ ಪದಗಳಲ್ಲಿ ಎಲ್ಲ ಜಾತಿ ಮತಗಳಲ್ಲಿಯ ಡಾಂಭಿಕಾಚಾರಗಳನ್ನು ಕಟುವಾಗಿ ಟೀಕಿಸಿದ್ದನ್ನು ನೋಡಿದರೆ ಅವರಿಗೆ ಅನೇಕ ಧರ್ಮಗಳ ಆಳವಾದ ಅನುಭವವಿತ್ತೆಂಬುದು ತಿಳಿದು ಬರುತ್ತದೆ. ಸರ್ವ ಧರ್ಮಗಳ ಅರಿವುಳ್ಳ ಶರೀಫರಿಗೆ ಚಾಮರಸ ಕವಿಯ 'ಪ್ರಭುಲಿಂಗ ಲೀಲೆ' ಯು ನಿತ್ಯ ಪಠಿಸುವ ಗ್ರಂಥವಾಗಿತ್ತೆಂಬ ವಿಷಯವನ್ನು ಮುಂದೆ ವಿವೇಚಿಸುತ್ತೇನೆ.

ಪ್ರಭುಲಿಂಗಲೀಲೆ ಮತ್ತು ಶರೀಫರು:— 'ಶರೀಫ ಸಾಹೇಬರು ಕೋಳಿ ಕೂಗದ ಮುನ್ನ ಎದ್ದು ನಿತ್ಯ ಕರ್ಮಂಗಳ ತರುವಾಯ ಶುಚಿರ್ಭೂತರಾಗಿ ಭಕ್ತಿಯಿಂದ ಭಾವ ಪರವಶರಾಗಿ ಪ್ರಭುಲಿಂಗಲೀಲೆಯ ಒಂದು ಗತಿಯನ್ನು ಸುಶ್ರಾವ್ಯವಾಗಿ ಹಾಡುತ್ತಿದ್ದರು. ಅದರಂತೆ ರಾತ್ರಿ ಮಲಗುವ ಮೊದಲು

ಮತ್ತೊಂದು ಗತಿಯನ್ನು ಹಾಡಿ ಮುಗಿಸುತ್ತಿದ್ದರು. ಪ್ರಭುಲಿಂಗಲೀಲೆ ಅವರಿಗೆ ಮುಖೋದ್ಗತವಾಗಿತ್ತು. ಇದಕ್ಕೆ ನಿದರ್ಶನವಾಗಿ ಕೆಲವು ಊರುಗಳಲ್ಲಿ ಶರೀಫರ ಸ್ವಹಸ್ತದಿಂದ ಬರೆದಿಟ್ಟ ಪ್ರಭುಲಿಂಗಲೀಲೆ ಪ್ರತಿಗಳು ಸಿಕ್ಕಿವೆ. * ನಾನು ಇವರ ವಿಷಯದಲ್ಲಿ ಅನೇಕ ಹಳ್ಳಿಗಳಲ್ಲಿಯು ವೃದ್ಧರನ್ನು ವಿಚಾರಿಸಿದಾಗ ಅವರು "ಎಲ್ಲಾ ಪುರಾಣ ಬಗಲಾಗ, ಪ್ರಭುಲಂಗ ಲೀಲಾ ತಲಿವ್ಯಾಗ" ಎಂದು ಶರೀಫರು ಪದೇ ಪದೇ ನುಡಿಯುತ್ತಿದ್ದರೆಂದು ಹೇಳಿದರು. ನವಲಗುಂದ, ಹುಬ್ಬಳ್ಳಿ, ಗರಗ, ಗುಲಗಂಜಿಕೊಪ್ಪ, ಮುಳಗುಂದ, ವ್ಯಾಗೇರಿ, ಎಲಿಗಿರಿ, ಹುಲಗೂರು, ಉಳವಿ, ಶಿಗ್ಗಲಿ, ಸಂಶಿ, ಗುಡಗೇರಿ ಮುಂತಾದ ಊರುಗಳನ್ನು ಸಂದರ್ಶಿಸಿದಂತೆ ಅವರ ತತ್ವಪದಗಳಿಂದಲೇ ತಿಳಿಯುತ್ತದೆ. ಆ ಆ ಊರುಗಳಲ್ಲಿಯು ವೃದ್ಧರನ್ನು ವಿಚಾರಿಸಿದರೆ ಪ್ರಭುಲಿಂಗಲೀಲೆಯ ಮೇಲೆ ಶರೀಫರಿಗಿದ್ದ ಆತ್ಮೀಯತೆಯೂ ವ್ಯಕ್ತವಾಗುತ್ತದೆ. ಈ ಬಾಹ್ಯ ಪ್ರಮಾಣಗಳಲ್ಲದೆ ಶರೀಫರು ತಾವು ಹೋದ ಹೋದಲ್ಲೆಲ್ಲ ಈ ಕಾವ್ಯದ ಮೇಲೆ ಪ್ರವಚನಗಳನ್ನು ಮಾಡುತ್ತಿದ್ದರೆಂಬುವದಕ್ಕೆ ಅವರ ಪದ್ಯಗಳಲ್ಲಿಯೇ ಪ್ರಬಲವಾದ ಆಧಾರಗಳು ಸಿಗುತ್ತವೆ. ಇಲ್ಲಿ ಅವುಗಳನ್ನು ಒಂದೊಂದಾಗಿ ತೆಗೆದುಕೊಂಡು ಚರ್ಚಿಸಲಾಗಿದೆ.

ಓದುವವಗೆಚ್ಚರವು ಇರಬೇಕೋ । ಪ್ರಭುಲಿಂಗಲೀಲೆಯ ॥ಪಲ್ಲ॥
ಅಭವ ಮುಚ್ಚುವ ತೆರದೊಳರ್ಥವ। ಶುಭದಿ ಕೆಡಿಸದೆ ಓದಲವನಿಗೆ।
ಲುಭಯ ಭೇದವ ಕಳದು ಸ್ವರ್ಗದ । ಸಭೆಯವರು ಹೌದೆನ್ನುತಿರುವರು
॥೧॥

ಭಕ್ತಿ ಭೂಮಿಯ ಬೆಳಿಯ ಬೆಳೆದರ್ಗೆ। ಬಹು ಮುಕ್ತಿಯಿಂದಲಿ ।
ಮುಕ್ತಿಲಲನೆಯ ವಲಿಸಿ ತಿಳಿದರ್ಗೆ ॥
ವ್ಯಕ್ತವಾದ ವಿರಕ್ತ ಮಾರ್ಗದಿ । ತತ್ವಜ್ಞಾನದಿ ಮೆರೆವ ಮಹಿಮರ।
ಐಕ್ಯವುಳ್ಳರಿಗೈಕ್ಯಭಾವದಿ । ಲಕ್ಷದೊಳು ನಿಜಲಕ್ಷವಿಡುತಲಿ
॥೨॥

* ಈ ವಿಷಯವನ್ನು ಡಾ॥ ಆರ್. ಸಿ. ಹಿರೇಮಠರು ತಮ್ಮ ಇತ್ತೀಚಿನ ಸಂಶೋಧನೆಯಿಂದ ನನಗೆ ತಿಳಿಸಿಹುದಕ್ಕಾಗಿ ನಾನವರಿಗೆ ಋಣಿಯಾಗಿರುವೆ.

ಸಾಧುಗಳು ಸೈಯೆಂಬ ಪರಿಯಿಂದಾ । ಸದ್ಗುರು ಕಟಾಕ್ಷದ ।
ನಾದ ಸ್ವರ ಸಂಗೀತ ಹಿತದಿಂದ ॥
ಮೇದಿನಿಗೆ ಶಿಶುನಾಳಧೀಶನ । ಆದಿ ಸಿಂಹಾಸನದ ವಿಸ್ತರ ।
ಓದಿ ಅಲ್ಲಮ ಪಾದ ಸ್ಮರಿಸುತ । ಮೋದದಿಂದಲಿ ಹಾದಿ ಹಿಡಿದೂ
॥೩॥

ಪ್ರಭುಲಿಂಗಲೀಲೆ ೧೫ ನೆಯ ಶತಮಾನದ ಆದಿ ಭಾಗದಲ್ಲಿ ನೂರೊಂದು ವಿರಕ್ತರ ಭಕ್ತಿಯ ಮಥನದಿಂದ ಹೊರಟ ನವನೀತದ್ದ ಉಂಡೆಗಳಲ್ಲೊಂದು. ಅದರ ಕರ್ತೃ ಮಹಾನುಭಾವಿಯಾದ ಕಾವ್ಯರ್ಷಿ ಚಾಮರಸ ಬಸವಾದಿ ಪ್ರಮಥರ ಹೃದಯಾಂತರಾಳದಿಂದ ಹೊರಟ ವಚನಗಳಲ್ಲಿಯ ಭಕ್ತಿರಸ ವನ್ನು ತನ್ನ ಕಾವ್ಯದಲ್ಲಿ ಹೊನಲಾಗಿ ಹರಿಸಿದ ಮಹಾ ಕವಿ ಈತ. ಕನ್ನಡ ಸಾಹಿತ್ಯದಲ್ಲಿ ಅತ್ಯಮೂಲ್ಯವಾದ ಗ್ರಂಥ 'ಪ್ರಭುಲಿಂಗ ಲೀಲೆ.' ಈ ಪವಿತ್ರ ಗ್ರಂಥದಲ್ಲಿ ಭಕ್ತಿರಸವನ್ನೀಂಟಿ ಆನಂದಿಸದವರೆ ಅಪರೂಪ. ಇಂತು ಆನಂದಿ ಸಿದವರಲ್ಲಿ ಶರೀಫರೂ ಒಬ್ಬರು. ಶರೀಫರು ಇದನ್ನು ಓದಿ ಸಂತೋಷಪಟ್ಟು ಯಾವದೋ ಮೂಲೆಯಲ್ಲಿ ಇಟ್ಟುಬಿಡಲಿಲ್ಲ. ತಮ್ಮ ಜೀವನ ಸಂಗಾತಿಯ ನ್ನಾಗ ಮಾಡಿಕೊಂಡರು. ಕೂತಾಗ, ನಿಂತಾಗ, ಅಡ್ಡಾಡುವಾಗ, ಮಲಗಿ ದಾಗ ಇವರೊಡನಿದ್ದು ಇವರ ಬಾಳಿಗೆ ಬೆಳಕು ತೋರಿತು. ಇದರ ಸಂಗ ದಿಂದ ಶರೀಫರೇ ಒಂದು ಬೆಳಕಾದರು. ಆ ಬೆಳಕಿನಲ್ಲಿ ಸಾಮಾನ್ಯರೂ ಸಹ ತಮ್ಮ ಬಾಳನ್ನು ಹಸನುಮಾಡಿಕೊಳ್ಳುವಂತಾಗಬೇಕೆಂಬುದು ಶರೀಫರ ಮಹದಾಶೆ. ಇಂತಹ ಪವಿತ್ರ ಭಾವನೆಯಿಂದ ಪ್ರಭುಲಿಂಗಲೀಲೆಯ ಬಗ್ಗೆ ತಮಗಿರುವ ಗೌರವವನ್ನೂ, ತಮಗಾದ ಅನುಭವವನ್ನೂ ಮೇಲಿನ ಪದ್ಯದಲ್ಲಿ ವ್ಯಕ್ತಪಡಿಸಿದ್ದಾರೆ. ಅದನ್ನು ಓದುವಾತ ಸದ್ಭಕ್ತನಿರಬೇಕು. 'ಅಭವ ಮೆಚ್ಚುವ ಕೃತಿರದೊಳರ್ಥವ ಶುಧದಿ ಕೆಡಿಸದೆ' ಓದಬೇಕು. 'ನಾದ ಸ್ವರ ಸಂಗೀತ ಹಿತದಿಂದ' ಓದಬೇಕು. ಓದಿನೊಡಲನರಿಯಬೇಕು. ಭಾವವನ್ನು ತಿಳಿಯಬೇಕು. ಅದರಲ್ಲಿಯ ಭಕ್ತಿರಸವನ್ನು ಸವಿದು 'ಮುಕ್ತಿಲಲನೆಯೊಡನೆ ಕೂಡುವದೇ ಪ್ರಭುಲಿಂಗಲೀಲೆಯ ಅಭ್ಯಾಸದ ಫಲವೆಂದು ಶರೀಫರ ಮತ.

# ಷಟ್‌ಸ್ಥಲಗಳ ಸಂಕ್ಷಿಪ್ತ ವಿವರಣೆ.

[ ಲೇಖಕರು:- ಶ್ರೀಯುತ ಶೇಖರಯ್ಯ ಶಿ. ಮಠ, ಜೋಳಚಗುಡ್ಡ ]



ವೀರಶೈವ ಧರ್ಮದ ವೈಶಿಷ್ಟ್ಯವೆಂದರೆ ಷಟ್‌ಸ್ಥಲಗಳು. ಭವದಿಂದ ಮುಕ್ತನಾಗ ಬಯಸುವವನು ಈ ಆರು ಸ್ಥಲಗಳನ್ನಳವಡಿಸಿಕೊಳ್ಳಬೇಕು. ಮಾನವನ ಪ್ರಗತಿಗೆ ಇವು ಮುಖ್ಯವಿವೆ. ಮಾನವನು ತನ್ನ ಜೀವನದಲ್ಲಿ ಒಂದೊಂದಾಗಿ ಈ ಆರು ಸೋಪಾನಗಳನ್ನೇರಿ ನಿಂತಾಗಲೇ ಲಿಂಗಾಂಗ ಸಾಮರಸ್ಯವು ಅಥವಾ ಶಿವಜೀವರ ಐಕ್ಯವು. ಸತ್ಯ, ಸರಳ ಮಾರ್ಗದತ್ತ ಜೀವನವನ್ನು ಸಾಗಿಸುವದೇ ಷಟ್‌ಸ್ಥಲ ಧರ್ಮ. ಇದನ್ನು ಸಾಧಿಸುವದೇ ವೀರಶೈವ ಧರ್ಮದ ಗುರಿ.

ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ ಮತ್ತು ಐಕ್ಯ ಹೀಗೆ ಆರು ಸ್ಥಲಗಳಲ್ಲಿ ಷಟ್‌ಸ್ಥಲ ಬ್ರಹ್ಮಿಗಳು ಸಾಮಾನ್ಯವಾಗಿ ಎರಡು ಭಾಗ ಮಾಡುವರು. ಮೊದಲಿನ ಭಕ್ತ, ಮಹೇಶ ಮತ್ತು ಪ್ರಸಾದಿ ಇವು ಮೂರು ಮಾರ್ಗ ಕ್ರಿಯೆಗಳು. ಪ್ರಾಣಲಿಂಗಿ, ಶರಣ ಮತ್ತು ಐಕ್ಯ ಇವು ಮೂರು ಮೀರಿದ ಕ್ರಿಯೆಗಳು. ಅಂದರೆ ಜ್ಞಾನ ಕ್ರಿಯೆಗಳು, ಕ್ರಿಯಾಜ್ಞಾನಗಳ ಸಮುಚ್ಚಯವೇ ವೀರಶೈವ ಧರ್ಮದ ತಿರುಳು. ಈ ತಿರುಳನ್ನು ತಿಳಿದಾಚರಿಸಲು ಮಾನವನು ತನ್ನ ಶರೀರದಲ್ಲಿಯೇ ಮೂರು ಲೋಕಗಳನ್ನು ಕಂಡರಿಯಬೇಕು. ಸ್ವರ್ಗ, ಮರ್ತ್ಯ, ಪಾತಾಳಗಳೆಂಬ ಮೂರು ಲೋಕಗಳು ವಿಶ್ವದಲ್ಲಿರದೆ ತನ್ನಲ್ಲಿಯೇ ಇವೆ. ಸ್ಥೂಲ, ಸೂಕ್ಷ್ಮ, ಕಾರಣಗಳೆಂಬ ಮೂರು ತನುಗಳೇ ಮೂರು ಲೋಕಗಳು. ಭಕ್ತ, ಮಹೇಶ ಮತ್ತು ಪ್ರಸಾದಿ ಇವು ಕ್ರಿಯಾಚರಣೆಗಳು. ಇವು ಸ್ಥೂಲ ತನುವಿಗೆ ಸಂಬಂಧವುಳ್ಳವು. ಪ್ರಾಣಲಿಂಗಿ ಮತ್ತು ಶರಣ ಇವು ಜ್ಞಾನಾಚರಣೆಗಳು ಸೂಕ್ಷ್ಮ ತನುವಿಗೆ ಸಂಬಂಧವುಳ್ಳವು ಮತ್ತು ಕ್ರಿಯಾ ಜ್ಞಾನ ಸಮುಚ್ಚಯವಾದ ಐಕ್ಯಸ್ಥಲವು ಕಾರಣ ತನುವಿಗೆ ಸಂಬಂಧ. ಬ್ರಹ್ಮಸಾಕ್ಷಾತ್ಕಾರಕ್ಕೆ ಈ ಲೋಕ (ತನು) ಗಳನ್ನು ಹದಗೊಳಿಸುವದೇ ಷಟ್‌ಸ್ಥಲಗಳ ಉದ್ದೇಶ.

ಒಂದೊಂದು ಸ್ಥಲಗಳನ್ನು ಸಂಕ್ಷಿಪ್ತವಾಗಿ ವಿವೇಚಿಸುವಾ—

**ಭಕ್ತಸ್ಥಲ:—** ಈ ಸ್ಥಲವು ಆರು ಸ್ಥಲಗಳಲ್ಲಿ ಮೊದಲನೆಯದು. ಭಕ್ತನಾದವನು ನಿರ್ವಂಚಕ ಭಾವವುಳ್ಳವನಾಗಿ ತ್ರಿವಿಧಕ್ಕೆ ತ್ರಿವಿಧವನರ್ಪಿಸಬೇಕು. ಅಂದರೆ ಭಕ್ತನಾದವನು ತನ್ನ ತನುವನ್ನು ಗುರುವಿಗೂ, ಮನವನ್ನು ಲಿಂಗಕ್ಕೆ ಮತ್ತು ಧನವನ್ನು ಜಂಗಮಕ್ಕರ್ಪಿಸಬೇಕು. ತನುವಿನಿಂದ ಲೋಕಕಲ್ಯಾಣ, ಮನದಿಂದ ಪರಹಿತ ಚಿಂತನೆ, ಧನದಿಂದ ಜನಸೇವೆ ಗೈಯ್ಯುತ್ತಿರಬೇಕು. ಶರಣರ ಕಿಂಕರನೆಂಬ ಭಾವವು ಬಲಿದು ಸದಾ ತಾನು ವಿನೀತನಾಗಿರಬೇಕು.

**ಮಹೇಶಸ್ಥಲ:—** ಮಹೇಶನಾದಡೆ ತ್ರಿವಿಧಕ್ಕೆ ಬಯಸದಿರಬೇಕು. ಅಂದರೆ ಹೊನ್ನು, ಹೆಣ್ಣು ಮತ್ತು ಮಣ್ಣು ಇವುಗಳ ಆಶೆಯನ್ನು ಅಳಿದಿರಬೇಕು. ಪರಧನ, ಪರಸ್ತ್ರೀ ಇವುಗಳನ್ನು ಕನಸು ಮನಸಿನಲ್ಲಿಯೂ ಅಪೇಕ್ಷಿಸಬಾರದು. ವ್ರತ ನೇಮಾದಿಗಳ ಆಚರಣೆಯಲ್ಲಿ ಪರ್ವತದಂತೆ ಅಚಲನಾಗಿರಬೇಕು.

**ಪ್ರಸಾದಿ ಸ್ಥಲ:—** ಪ್ರಸಾದಿಯಾದೊಡೆ ಹಲ್ಲುಕಡ್ಡಿ ಅರ್ಪಣ ಮೊದಲಾದ ಸಕಲ ಪದಾರ್ಥಂಗಳನು ಲಿಂಗಕ್ಕೆ ಕೊಟ್ಟಲ್ಲದೆ ಕೊಳ್ಳದಿರಬೇಕು. ತನುಕರಣೇಂದ್ರಿಯಾದಿಗಳಿಂದ ತಿಂದುಂಡು ಭೋಗಿಸುವ ಸಕಲ ಪದಾರ್ಥಗಳನ್ನು ಬಹು ಎಚ್ಚರಿಕೆಯಿಂದ ಲಿಂಗಕ್ಕರ್ಪಿಸಿ, ಆ ಲಿಂಗ 'ಪ್ರಸಾದವನ್ನೇ ಸ್ವೀಕರಿಸಬೇಕು. ಹಾಗೆ ಭೋಗಿಸದಿದ್ದರೆ ಜೀವಿ ಎನಿಸುವ ಪ್ರಸಾದಿಯಲ್ಲ.

**ಪ್ರಾಣಲಿಂಗಿ ಸ್ಥಲ:—** ಪ್ರಾಣಲಿಂಗಿಯಾದೊಡೆ ಪ್ರಪಂಚನಾಸ್ತಿಯಾಗಿರಬೇಕು. ಲೋಕದಲ್ಲಿದ್ದರೂ ಲೋಕದ ವ್ಯವಹಾರ ಹೊದ್ದದಿರಬೇಕು. ಜನರ ಆಗು ಹೋಗುಗಳನ್ನೂ ಸುಖದುಃಖಗಳನ್ನೂ ಭೋಗ ಭಾಗ್ಯಗಳನ್ನು ನಿರೀಕ್ಷಕನಂತೆ ನೋಡಿ ನಡೆಯಬೇಕಲ್ಲದೆ ಅವುಗಳ ವಶನಾಗಬಾರದು. ಬೇಕು ಬೇಡೆಂಬ ಭವಬೀಜವಳಿದು ಸಹಜ ಸ್ಥಿತಿಯಲ್ಲಿರಬೇಕು. ಲಿಂಗಪ್ರಾಣಿಯಾಗಿರಬೇಕು. ಮನವು ಸದಾ ಲಿಂಗ ಧ್ಯಾನದಲ್ಲಿ ಬೆರೆತು ಏನೊಂದನ್ನು ಬಯಸದಿರಬೇಕು. ದೃಷ್ಟಿಯಲ್ಲಿ ಲಿಂಗವಲ್ಲದೇ ಬೇರೊಂದು ತೋರದಿರಬೇಕು. ಪ್ರಾಣದ ಶ್ವಾಸೋಚ್ಛ್ವಾಸವು ಶಿವಮಂತ್ರಮಯವಾಗಬೇಕು. ಸದಾ ಲಿಂಗಾನುಸಂಧಾನಿಯಾಗಿರಬೇಕು.

ಈ ಸ್ಥಲವು ಅಳವಡುವದು ಕಠಿಣ. ಈ ಸ್ಥಲದಲ್ಲಿ ಪರಿಪೂರ್ಣಾವಸ್ಥೆ ಹೊಂದದಿದ್ದರೆ ಮುಂದಿನ ಉಳಿದೆರಡು ಸ್ಥಲಗಳು ಸಾಧಿಸವು. ಮೀರಿದ

(ಜ್ಞಾನ) ಕ್ರಿಯೆಗೆ ಹೋಗಲು ಇದು ಮಹಾ ದ್ವಾರ. ಇದರ ಮಹತ್ವವು ಅಷ್ಟಿಷ್ಟೆಂದು ಹೇಳಲು ಸಾಧ್ಯವಿಲ್ಲ. ವೀರಶೈವ ಧರ್ಮದಲ್ಲಿ ಇದಕ್ಕೆ ಪ್ರಾಮುಖ್ಯ ಸ್ಥಾನ. ಆದ್ದರಿಂದ ಶರಣರ ವಚನ ಸಾಹಿತ್ಯದಲ್ಲಿ ಎಲ್ಲ ಸ್ಥಲಗಳಿಗಿಂತ ಇದಕ್ಕೆ ಹೆಚ್ಚು ಮಹತ್ವವಿದ್ದು ಅದು ವಿಸ್ತೃತ ರೀತಿಯಿಂದ ಪ್ರತಿಪಾದಿಸಲ್ಪಡುವದು. ಇದರ ರಹಸ್ಯವು ಗುರುಮುಖದಿಂದಲ್ಲದೆ ಗ್ರಂಥ ಜ್ಞಾನದಿಂದ ತಿಳಿಯುವದು ಕಷ್ಟ.

**ಶರಣಸ್ಥಲಃ—** ಶರಣನಾದೊಡೆ ಸಕಲ ಭೋಗೋಪಭೋಗಂಗಳನು ಲಿಂಗಕ್ಕರ್ಪಿಸದೆ ಕೊಳಲಾಗದು. ಲಿಂಗ ಭೋಗೋಪಭೋಗಿಯಾಗಬೇಕು. ಜಗದ ಜಂಜಡದಿಂದ ದೂರನಾಗಿ ಇಂದ್ರಿಯಂಗಳ ವಿಕಾರದಲ್ಲಿ ಹರಿದಾಡದಿರಬೇಕು. ಶರಣ ಸತಿ, ಲಿಂಗ ಪತಿ ಎಂಬ ಭಾವ ಬಲಿದು ಲಿಂಗದ ಬೆಳಗಿನೊಳಗೆ ಬೆರೆಯಬೇಕು. ಜಗತ್ತಿನಲ್ಲಿ ತನ್ನದೆನ್ನುವದು ಯಾವದೂ ಇರದೆ ಎಲ್ಲವೂ ಲಿಂಗದ ಸೊಮ್ಮು ಎಂಬ ಭಾವ ದೃಢಗೊಳ್ಳಬೇಕು. ಸೂಕ್ಷ್ಮ ಅಹಂಕಾರಕ್ಕೂ ಸಹ ಒಳಗಾಗದೇ ಉರಿಬರಲಿ, ಸಿರಿಬರಲಿ, ಯಾವದಕ್ಕೂ ತಗ್ಗದೆ ಹಿಗ್ಗದೆ ಯಾವಾಗಲೂ ಲಿಂಗಾನಂದದಲ್ಲಿಯೇ ಲೀನನಾಗುವದು. ಇದುವೇ ಶರಣನ ಇರುವಿಕೆ.

**ಐಕ್ಯಸ್ಥಲಃ—** ಐಕ್ಯನಾದಡೆ ಸರ್ವವೂ ತನ್ನೊಳಗೆಂದರಿದು ಸರ್ವರೊಳಗೆ ತನ್ನನ್ನೇ ಕಾಣಬೇಕು. ಹಸಿವು, ತೃಷೆ, ಶೋಕ, ಮೋಹ, ಜನನ, ಮರಣವೆಂಬ ಷಡೂರ್ಮಿಗಳನ್ನು ಸುಟ್ಟು, ಅರಿಷಡ್ವರ್ಗಂಗಳ ಬೇರು ಸಹಿತ ಕಿತ್ತು ಬಿಸುಟಬೇಕು. ಇಡೀ ವಿಶ್ವವೇ ಶಿವಸ್ವರೂಪವಾಗಿ ಕಾಣಬೇಕು. ಭೇದ ಬಯಲಾಗಿ ಉರಿಕರ್ಪುರದಂತೆ ಅವಿರಳ ಸಮರಸವಾಗಿರ್ಪಾತನೆ ನಿಜೈಕ್ಯನು.

ಈ ಪ್ರಕಾರ ಷಟ್‌ಸ್ಥಲ ಮಾರ್ಗವನ್ನಾಚರಿಸಿ ಸಚ್ಚಾರಿತರಾಗಿ ಬೆಳೆದು ಬಾಳಿ ವ್ಯಕ್ತಿಜೀವದಿಂದ ವಿಶ್ವ ಜೀವನಕ್ಕೆ ಹೋಗಿ ನಿಲ್ಲಬೇಕು. ಭಕ್ತಿ ಭಾವನೆಯಿಂದ ವಿರಕ್ತಿ ಭಾವನೆಗೆ ನೆಲೆಯಾಗಬೇಕು. ಮಾನವ ಮೃತ್ಯುಂಜಯನಾಗಬೇಕು. ಇದುವೇ ಮಾನವನ ಪರಿಪೂರ್ಣತೆ. ಇದನ್ನು ಸಾಧಿಸಲೇಬೇಕೆಂದು ಬೋಧಿಸುವದೇ ಷಟ್‌ಸ್ಥಲ ಧರ್ಮದ ಉಚ್ಚತಮ ಗುರಿ. ಇದೇ ವೀರಶೈವನ ಅಂತಿಮ ಧ್ಯೇಯ.

---

# ಸಗಣಿಯಲ್ಲಿ ಸಾಸಿರ ಹುಳಗಳು ಹುಟ್ಟಿದಂತೆ

(ಲೇಖಕಃ — ಶ್ರೀ ಬಸವಪ್ಪ ಚನ್ನಪ್ಪ ಪಟ್ಟೇದ ಮು. ವಂಟಮುರಿ)



ಸಗಣಿಯಲ್ಲಿ, ಅದು ಕೊಳೆತ ಮೇಲೆ ಸಾವಿರಾರು ಹುಳಗಳು ಉದ್ಭವಿಸುತ್ತವೆ. ಆ ಹುಳಗಳೆಲ್ಲ ಆ ಸಗಣಿಯನ್ನೇ ತಿಂದು ಅದರಲ್ಲಿಯೇ ವಾಸಿಸಿ ಕಡೆಗೆ ಅದರಲ್ಲಿಯೇ ಸತ್ತು ಬಿಡುವವು. ಅವುಗಳ ಇಚ್ಛೆಯು ಬರೀ ಆ ಸಗಣಿಯನ್ನು ತಿನ್ನುವದಷ್ಟೇ ಇರುತ್ತದೆಯೇ ಹೊರತು ಮತ್ತೊಂದೇನೂ ಇರುವದಿಲ್ಲ. ಈ ಶಿರೋಬರಹದ ಮಾತು. ಶ್ರೀ ಬಸವೇಶ್ವರದೇವರು ತಮ್ಮ ವಚನದಲ್ಲಿ ಹೇಳಿದುದಿರುತ್ತದೆ.

ಮನುಷ್ಯರು ಈ ಜಗತ್ತಿನಲ್ಲಿಯೇ ಜನ್ಮಿಸಿ, ಬರೀ ಜಗತ್ತಿನೊಳಗಿನ ವಿಷಯಗಳನ್ನೇ ಮಾತ್ರ ತಿಂದು, ಕೆಲವು ಕಾಲ ಅದರಲ್ಲಿ ವಾಸಿಸಿ ಕೊನೆಗೆ ಸತ್ತು ಹೋದರೆ, ಆ ಹುಳಗಳಿಗೂ ಈ ಮನುಷ್ಯರಿಗೂ ಏನು ಭೇದ? ಅವು ಅಜ್ಞಾನಿಗಳಾಗಿದ್ದು ಹಾಗೆ ಮಾಡಿದರೆ, ಅದು ಕ್ಷಮ್ಯವಾಗಬಹುದು. ಜ್ಞಾನಿಯಾದ ಮನುಷ್ಯನು ಹಾಗೆ ನಡೆದರೆ ಅದು ಅಕ್ಷಮ್ಯ ದೋಷವಾಗಲಾರದೇ?

ಲಿಂಗಧಾರಿಗಳು ಬರೀ ಶೈವರಲ್ಲ. ಅವರು ವೀರಶೈವರು. ಲಿಂಗವು ಶಿವನು ಸರಿ! "ನಮಃ ಶಿವಾಯ" ಪಂಚಾಕ್ಷರಗಳಲ್ಲಿ ನಡುವಿನವು "ಶಿವ" ಎಂದಿವೆ. ಶಿವನೆಂದರೆ ಮಹಾ ಜ್ಞಾನವು. (ಇಲ್ಲವೆ ಶಿವಚಿತ್ಕಳೆಯು.) ನಾವು ಪಂಚಾಕ್ಷರೀ ಜಪ ಮಾಡುವಾಗ ನಮಃ ಶಿವಾಯ = ಶಿವನಿಗೆ ನಮಸ್ಕಾರವು, ಶಿವನಿಗೆ ಬಾಗಿ ನಡೆಯುವೆನು ಎಂದು ಪಠಣ ಮಾಡುತ್ತೇವೆ. ಹೀಗೆ ನಿರಂತರ ಪಠಿಸುವವರು ತಮ್ಮ ಆಯುಷ್ಯದಲ್ಲೆಲ್ಲ ಆ ಮಹಾ ಜ್ಞಾನಕ್ಕೆ ಒಳಗಾಗಿ ನಡೆಯುವದನ್ನೇ ಸ್ಥಿರಪಡಿಸಿಕೊಳ್ಳುತ್ತಾರೆ. ಹಾಗೆ ನಡೆಯುವ ಉದ್ದೇಶವನ್ನೇ ಇಟ್ಟುಕೊಂಡು ಅದನ್ನು ಪಠಿಸುವನಲ್ಲವೇ! ಲಿಂಗವನ್ನು ಕೈಯ್ಯಲ್ಲಿ ಹಿಡಿದು ಅದರ ಮುಂದೆ ಪಠಿಸಿದ ಮೇಲೆ ಲಿಂಗವನ್ನು ಶಿವನೆಂದು ಹೇಳಿದಂತಾಯಿತು.

ಶಿವನನ್ನು ಪೂಜಿಸುವವರು ಶೈವರು. ನಾವು ಬರೇ ಶೈವರಲ್ಲ, ವೀರ ಶೈವರು. ಅಂದರೆ ವಿದ್ಯೆಯಲ್ಲಿ ರಮಿಸುವಂತಹ ಶಿವಭಕ್ತರು. ಆತ್ಮವಿದ್ಯೆಯೇ ತಾನಾರೆಂಬುದನ್ನು ತಿಳಿಯುವ ವಿದ್ಯೆಯೇ ವೀರಶೈವರ ಮುಖ್ಯ ಕರ್ತವ್ಯವು. ಹೀಗಿದ್ದು ನಾವು ವೀರರಾಗದೆ ಬರೀ ಶೈವರಂತೆ ಯಾವಜ್ಜೀವನ ವರ್ತಿಸಿ, ಸತ್ತು ಹೋದರೆ ವೀರಶೈವರೆಂಬ ಹೆಸರು ಹೇಳಲಿಕ್ಕೆ ನಮಗೆ ಅಧಿಕಾರ ಬರುವದೇ ?

ಬರೇ ದೇಹದ ಮೇಲೆ ಲಿಂಗವನ್ನು ಧರಿಸಿ, ಹಣೆಗೆ ವಿಭೂತಿ ಧರಿಸಿದರೆ ಲಿಂಗವಂತರಾಗುವೆವೇ ? ಹಾಗೆ ಮಾಡಿದವರನ್ನು ಶ್ರೀ ಬಸವೇಶ್ವರರು " ........ಕೂಡಲಸಂಗಾ ಅವರನ್ನು ನೀನೇ ಎಂದು ನಂಬುವುದೆನ್ನ ಮನ ! " ಎಂದು ವಚನದಲ್ಲಿ ಹೇಳಿದ್ದಾರೆ. ಇದು ಧರ್ಮ ಪ್ರಸಾರ ಮಾಡುವ ಕಾಲಕ್ಕೆ ಜನರಲ್ಲಿ ಲಿಂಗಧಾರಿಗಳಾಗಲು ಶ್ರದ್ಧೆಯನ್ನು ಹುಟ್ಟಿಸುವ ಉದ್ದೇಶವೇ ಇರುವದು. ಅಥವಾ ಪೂರ್ಣ ಜ್ಞಾನ ಸಂಪನ್ನರಾದವರಿಗೆ, (ಶರಣರಿಗೆ) ಎಲ್ಲರೂ ಕೂಡಲಸಂಗನಂತೆಯೇ ಕಾಣುವರು. ಅದೇ ಬಸವೇಶ್ವರರು, " ಬಿದಿರ ಬೆಟ್ಟಕ್ಕೆ ಕಲ್ಲೊಗೆದು ಸಿಕ್ಕಿಸಿದರೆ, ಕಲ್ಲೊಗೆದವನು ಗುರುವಲ್ಲ, ಬಿದಿರ ಬೆಟ್ಟವೇನೂ ಭಕ್ತನಲ್ಲ, ಕಲ್ಲೇನೂ ಲಿಂಗವಲ್ಲ.... " ಎಂದು ಹೇಳಿದುದನ್ನು ನೆನೆಸಬೇಕು.

ಭಕ್ತ ಶಬ್ದವು ' ಭಜ್ ' ( = ಭಜಿಸು) ಧಾತುವಿನಿಂದ ಹುಟ್ಟಿರುತ್ತದೆ. ಈ ಭಜಿಸುವವನು ನಿಷ್ಠಾಪೂರ್ವಕವಾಗಿಯೇ ಇರತಕ್ಕದ್ದಲ್ಲದೆ, ಬಾಯ ಬಾಹ್ಯಾಡಂಬರವುಳ್ಳವನಿರಬಾರದು. ಈ ಶಿವಭಕ್ತಿಯು, " ಅಂಗ ಲಿಂಗ ಸಂಗವುಳ್ಳದ್ದಾದರೆ ಅದು ವೀರಶೈವತ್ವದಲ್ಲಿ ಪರಿಣಮಿಸುವದು. ಇವೇ ವೀರ ಶಿವಭಕ್ತರ ಮುಖ್ಯ ಕರ್ತವ್ಯವು ಇಂತಹ ವೀರಶೈವರೇ ಮಾಹೇಶ್ವರರಾಗುವರು.

ಮಹೇಶ್ವರರು " ಇಹಲೋಕ ವೀರ, ಪರಲೋಕ ವೀರ, ಸಹಜವೀರ " ಎಂದು ಮೂರು ಬಗೆಯಾಗಿರುವರು. ಇಹಲೋಕದ ವಿದ್ಯೆಯಲ್ಲಿ ರಮಿಸುವವರೆಂದರೆ, ಈ ಭೂಲೋಕವು ಅಸ್ಥಿರ, ಅನಿತ್ಯವಾದುದು. ಅದು ಕನಸಿನಂತಿರುವದು ಎಂದು ಮನಗಂಡವರು. ಪರಲೋಕ ವೀರರೆಂದರೆ, ಪರಲೋಕ ಶಿವಲೋಕ ಇಲ್ಲವೆ ಕೈಲಾಸವು ಸಂಪೂರ್ಣವಾಗಿ, ಅವಗತವಾಗಿ ಶಿವಮಾರ್ಗದ ಎಲ್ಲ ಸಂಗತಿಯನ್ನು ಅರಿತವನಾಗಿರಬೇಕು. ಸಹಜ ವೀರನೆಂದರೆ, ಹಕಾರದಿಂದ ಸಹಿತವಾಗಿ, ಜನಿಸಿದವನೆಂಬ ! ತಿಳುವಳಿಕೆಯು

ಷಟ್‌ಸ್ಥಲ ಮೂಲಕವಾಗಿ, ಪೂರ್ಣಬಲ್ಲವನಾಗಿ, ಅಂತಹ ಸ್ವರೂಪವನ್ನು ತನ್ನ ಶಿಷ್ಯರಿಗೆ ಉಂಟುಮಾಡಿ ಕೊಡಲು, ಸಮರ್ಥನಾಗಿರಬೇಕು. ಇವರೇ ಕ್ರಮವಾಗಿ ದೀಕ್ಷಾಗುರು, ಶಿಕ್ಷಾಗುರು, ಜ್ಞಾನಗುರುವೆಂದು ಪ್ರಸಿದ್ಧರಾಗಿ ರುವರು. ವಿರಕ್ತಮೂರ್ತಿಗಳೇ (ಶರಣರೇ) ಈ ಜ್ಞಾನ ಗುರುಗಳು. ತಾವು ನಿರಂಜನ ಪ್ರಣವ ಅಂದರೆ ಹ ಕಾರ ಪ್ರಣವಸ್ವರೂಪಿಗಳೆಂದು ಹೇಳಿಕೊಳ್ಳು ವರು.

ಶಿವಭಕ್ತರು ಅಲಿಪ್ತ ಸಂಸಾರಿಗಳೂ ಲಿಂಗಭೋಗಿಗಳೂ ಆಗಬೇಕು. ಇವರೇ ಬಳಸಿದ ಬ್ರಹ್ಮಚಾರಿ, 'ಉಂಡುಪವಾಸಿ' ಎನಿಸುವರು. ಈ ಮೇರೆಗೆ ಭಕ್ತರೆಲ್ಲರೂ ಪ್ರಗತಿಯನ್ನು ಹೊಂದಿ, ಜನ್ಮಸಾಂಪತ್ಯವುಳ್ಳವರಾಗಬೇಕು. ಲಿಂಗ ಪೂಜೆಯಿಂದ ಜನ್ಮ ಜರಾ ಮೃತಿ ಅಂದರೆ ಉತ್ಪತ್ತಿ ಸ್ಥಿತಿ ಲಯ ಗಳ ಭಯವನ್ನು ಕಳೆದುಕೊಳ್ಳಬೇಕು. ಇದೇ ಜೀವನೋದ್ಧಾರವು. ಇದನ್ನು ಪಡೆಯದಿದ್ದರೆ, ನಾವು ನರಜನ್ಮಕ್ಕೆ ಬಂದು ನರಗುರಿಗಳಾಗುವೆವು. ಜನ್ಮವು ವ್ಯರ್ಥವಾಗುವದು. ಈ ವಿಧದ ಆಚರಣೆ ಏನೂ ಇಲ್ಲದೆ ನಾವು ವೀರಶೈವ ರೆಂದು ಹೇಳಲಿಕ್ಕೆ ತುಸುವಾದರೂ ನಾಚಿಕೆಬಾರದೇ !

# ಬಸವೇಶ್ವರರು

( ಲೇಖಕಃ— ಶ್ರೀ ಎನ್. ಎಮ್. ಬಸವರಾಜ, ನಾಗರಹಾಳು )

—೧೦—

ಕಾಗೆ ಒಂದಗುಳ ಕಂಡರೆ, ಕರೆಯದೆ ತನ್ನ ಬಳಗವೆಲ್ಲವನು !
ಕೋಳಿ ಒಂದು ಗುಟುಕ ಕಂಡಡೇ, ಕರೆಯದೇ ತನ್ನ ಕುಲವನೆಲ್ಲವನು !
ಶಿವಭಕ್ತನಾಗಿ ಭಕ್ತಿಪಕ್ಷವಿಲ್ಲದಿರ್ದೊಡೆ, ಕಾಗಿ ಕೋಳಿಗಿಂತ
ಕರಕಷ್ಟ ಕೂಡಲಸಂಗಮದೇವ — ಶ್ರೀ ಬಸವೇಶ್ವರ.

ಎನ್ನುವಂತೆ ೧೨ ನೆಯ ಶತಮಾನದಲ್ಲಿ ದುರ್ದೆಶೆಗೀಡಾಗಿ ಅಳಿದು ಹೋಗುತ್ತಿದ್ದ ವೀರಶೈವ ಸಮಾಜವನ್ನು ಒಂದುಗೊಡಿಸಿ, ನವಚೈತನ್ಯವನ್ನು ತುಂಬಿದನೋ ವೇದಾಂಗಮೋಕ್ತವೂ ವಿಶಾಲವೂ ಆದ ವೀರಶೈವ ಧರ್ಮದ ಮಹಾದ್ವಾರವು ಸಾಂಪ್ರದಾಯಿಕ ಜಾತಿವಾದಿಗಳಿಂದ ಮುಚ್ಚುತ್ತಿದ್ದಾಗ ಯಾವ ಪುಣ್ಯಾತ್ಮನು ಜನ್ಮ ತಾಳಿ, ದೀನರಿಗೂ ದಲಿತರಿಗೂ ಎಲ್ಲರಿಗೂ ಪ್ರವೇಶವುಂಟೆಂದು ಸಾರಿ, ಅದನ್ನು ತೆರೆದು ಶಾಸ್ತ್ರ ಮರ್ಯಾದೆಯನ್ನು ಪಾಲಿಸಿ ಮಾನವತೆಯನ್ನು ಉದ್ಧರಿಸಿದನೋ. ಯಾವ ಮಹಾತ್ಮನ ಕ್ರಾಂತಿಯ ಫಲವಾಗಿ ಅಮೃತ ಸಮಾನವಾದ ನುಡಿಗಡಣದಿಂದ ಕನ್ನಡ ಸಾಹಿತ್ಯವು ಸಮೃದ್ಧವಾಯಿತೋ ಆ ಅಗಾಧ ಮಹಿಮಾಶಾಲಿ, ಭಕ್ತಿ ಭಾಂಡಾರಿ, ಕಲ್ಯಾಣದ ಶ್ರೀ ಭಗವಾನ್ ಬಸವೇಶ್ವರರು ಅಪ್ರತಿಮಾಶಾಲಿಗಳೂ, ಮಹಾತ್ಮರೂ, ಕ್ರಾಂತಿಪುರುಷರೂ ಹೌದು. ಇಂಥವರ ಪಾದಧೂಳಿಯಿಂದ ಭರತದೇಶವು ಪುಣ್ಯಕ್ಷೇತ್ರವೆನಿಸಿತು. ಮಹಾತ್ಮರು ಜನಿಸುವುದು ಕಾಲಕ್ಕೆ ತಕ್ಕಂತೆ ಧರ್ಮವು ಅಳಿದು ಹೋಗುವಾಗ, ಅಧರ್ಮ ಹೆಚ್ಚುವಾಗ. ಅವರು ಜನಿಸಿ, ನಮ್ಮನ್ನು ಪುನೀತರನ್ನಾಗಿ ಮಾಡುತ್ತಾರೆ. ಶ್ರೀಕೃಷ್ಣನು ಅರ್ಜುನನಿಗೆ ಹೀಗೆ ಹೇಳಿದ್ದಾನೆ:—

ಯದಾ ಯದಾಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ |
ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಾಂ ಸೃಜಾಮ್ಯಹಂ |

— ಗೀತೆ.

ಎಂಬ ಗೀತೋಕ್ತಿಯಂತೆ ನಮ್ಮ ಬಸವೇಶ್ವರನು ಕೂಡಾ ೧೨ ನೇ ಶತಮಾನದಲ್ಲಿ ಜನಿಸಿದನು. ಈತನು ವೀರಶೈವಮತ ಸ್ಥಾಪಕನೆನ್ನಬಹುದು. ಆದರೆ ಸ್ಥಾಪಕನಲ್ಲ, ಮತೋದ್ಧಾರಕನು. ಕ್ರಿಸ್ತ ಮತವು ಕ್ರೈಸ್ತನಿಂದ, ಬೌದ್ಧ ಮತ ಬುದ್ಧನಿಂದ, ಜೈನ ಮತ ವರ್ಧಮಾನ ಮಹಾವೀರರಿಂದ, ಮುಸಲ್ಮಾನ ಮತವು ಮಹಮ್ಮದ ಪೈಗಂಬರರಿಂದ ಜನ್ಮತಾಳಿದವು. ಆದರೆ ವೀರಶೈವ ಮತಸ್ಥಾಪಕರಾರೆಂದು ಕೇಳಿದರೆ, ಇದು ಅನಾದಿಯಿಂದ ಬಂದದ್ದು; ಇದಕ್ಕೆ ಸ್ಥಾಪಕರಿಲ್ಲ. ಜಗದೊಡೆಯನಾದ ಶಿವನೇ ಈ ಮತಸ್ಥಾಪಕನು. ಬಹಳ ಕಾಲದ ವರೆಗೆ ಈ ಮತವು ಅಷ್ಟು ಪ್ರಚಾರವಾಗಿದ್ದಿಲ್ಲ. ಯಾವಾಗ ಈ ಮತವು ಅಳಿದು ಹೋಗುವ ಸಮಯ ಬಂದಾಗ ( ೧೨ನೇ ಶತಮಾನ ) ಶ್ರೀ ಬಸವೇಶ್ವರರು ಕೈಹಿಡಿದರು. ವೀರಶೈವರೆಂದರೆ ಯಾರು ?

ವಿದ್ಯಾಯಾಂ ಶಿವರೂಪಾಯಾಂ ರಮಂತೇಯೇ ವಿಶೇಷತಃ।
ತಸ್ಮಾದೇತೇ ಮಹಾ ಭಾಗಾ ವೀರಶೈವಾ ಇತಿಸ್ಮೃತಾಃ ।

ಎನ್ನುವಂತೆ ವಿದ್ಯೆಯಲ್ಲಿ ವಿಶೇಷವಾಗಿ ಯಾರು ಪ್ರೀತಿಯನ್ನಿಡುವರೋ ಅವರೇ ವೀರಶೈವರೆಂದು ಹೇಳಿಸಿಕೊಳ್ಳುವವರು. ವೀರಶೈವರು ತಮ್ಮ ತತ್ವಗಳನ್ನು ಚನ್ನಾಗಿ ತಿಳಿದು ಅವುಗಳನ್ನು ಆಚರಣೆಗೆ ತರಬೇಕು. ಶಿವಭಕ್ತರು ಯಾವ ಪದಾರ್ಥವನ್ನೇ ಸೇವಿಸಲಿ, ಮೊದಲು ಆ ಅಪಾರ ತೇಜಸ್ಸುಳ್ಳ ಜಗತ್ಕರ್ತೃವಿಗೆ ಅರ್ಪಿಸಿ ತಾವು ಸೇವಿಸಬೇಕು.

ಗುರುತ್ವಾತ್ಸರ್ವಲೋಕಾನಾಂ ಶಂಭೋ ರಮಿತ ತೇಜಸಃ ।
ತಸ್ಮೈ ನಿವೇದಿತಂ ಸರ್ವಂ ಸ್ವೀಕಾರ್ಯಂ ತತ್ಪರಾಯಣೈಃ।
—ಸಿ. ಶಿಖಾಮಣಿ

ವೀರಶೈವರಲ್ಲಿದ್ದ ತತ್ವಗಳು ಬಹು ಅಚ್ಚುಕಟ್ಟಾಗಿವೆ. ಅಷ್ಟಾವರಣ ಪಂಚಾಚಾರ ಷಟ್ಸ್ಥಳ ಎಂಬುದಾಗಿ ಸಾಮಾಜಿಕ, ಧಾರ್ಮಿಕ, ಅಷ್ಟಾವರಣವು, ನೈತಿಕ ವಿಚಾರವನ್ನು ಪಂಚಾಚಾರ, ತಾತ್ವಿಕ ವಿಚಾರವನ್ನು ಷಟ್ಸ್ಥಳ, ಹೀಗೆ ಮೂರೆನಾಗಿ ವಿಂಗಡಿಸಿದ್ದಾರೆ. ಈ ರೀತಿ ಬೇರೆ ಇನ್ನಾವ ಮತಗಳಲ್ಲಿ ಇಲ್ಲ. ಬಸವನಿಗೂ ಇತರ ಮತಸ್ಥಾಪಕರಿಗೆ ಹೋಲಿಸಿದರೆ, (ಕ್ರೈಸ್ತನಿಗೂ) ಸಂಬಂಧವಿಲ್ಲ. ಬಸವೇಶ್ವರನಿಗೂ ಬುದ್ಧನಿಗೂ ಹೋಲಿಸಿದರೆ ಅದೂ ಸಹಿತ ಅಷ್ಟೆ! ಬೌದ್ಧರ ನಾಲ್ಕು ತತ್ವಗಳು:—

(೧) ದುಃಖ (೨) ಆಯತನ (೩) ಸಮುಪಯ (೪) ಮಾರ್ಗ. ಹೀಗೆ ಪ್ರತಿಪಾದಿಸುತ್ತಾರೆ. ಆದರೂ ಸರಿಹೋಗುವುದಿಲ್ಲ. ಬಸವೇಶ್ವರನಿಗೂ ಮಹಾತ್ಮಾ ಗಾಂಧಿಯವರಿಗೂ ಹೋಲಿಸಿದರೆ ಇಬ್ಬರ ತತ್ವಗಳು ಒಂದೇ ಯಾಗುತ್ತವೆ. ಇನ್ನು ಬಸವೇಶ್ವರನಲ್ಲಿದ್ದ ವಿಶೇಷವೇನೆಂದರೆ ಭಕ್ತಿಯೇ ಪ್ರಧಾನ್ಯವಾಗಿರುತ್ತದೆ. ಈತನಲ್ಲಿದ್ದ ಭಕ್ತಿಯ ಆಳವನ್ನು ಯಾರಿಗೂ ಅರಿಯಲು ಸಾಧ್ಯವಿಲ್ಲ. ಸಂಗಮೇಶ್ವರನೊಬ್ಬನಿಗೇ ಸಾಧ್ಯ. "ಭಗವಂತನನ್ನು ಕುರಿತು ಭಕ್ತನು ತಳೆದ ಪರಮ ಪ್ರೇಮವೆ ಭಕ್ತಿಯು. ಅದು ಅಮೃತದಂತೆ ರುಚಿಕರವೂ ಆನಂದದಾಯಕವೂ ಇರುವದು. ಭಕ್ತಿಯು ನಿಷ್ಕಾಮವಿರುವದು." ಬಸವೇಶ್ವರನಲ್ಲಿದ್ದ ಭಕ್ತಿಯೂ ಹಾಗೆ. ಬಸವೇಶ್ವರನೆಂದರೆ ಭಕ್ತಿಭಾಂಡಾರಿ. ಶ್ರೀ ಬಸವೇಶ್ವರನು ಪ್ರತಿನಿತ್ಯ ಸಂಗಮೇಶ್ವರನಿಗೆ ಅರುಣೋದಯವಾದೊಡನೆ ತ್ರಿಕರಣಶುದ್ಧಿ ಪೂರ್ವಕವಾಗಿ ಪೂಜಿಸುತ್ತಿದ್ದನು.

ತಂದೆ ನೀನು, ತಾಯಿ ನೀನು,
ಬಂಧು ನೀನು, ಬಳಗ ನೀನು,
ನೀನಲ್ಲದೆ ಮತ್ತಾರೂ ಇಲ್ಲವಯ್ಯಾ !
ಕೂಡಲಸಂಗಮದೇವಾ.

ಇದೇ ಆತನ ದಿನನಿತ್ಯದ ಪ್ರಾರ್ಥನೆಯಾಗಿತ್ತು. ಪ್ರತಿದಿನ ಅರುಣೋದಯಕ್ಕೆದ್ದು ಸಂಗಮೇಶ್ವರನ ಅರ್ಚನೆಗೆ ಬೇಕಾದ ಸಕಲ ಸಾಹಿತ್ಯಗಳನ್ನು ಒದಗಿಸಿಕೊಂಡು ತ್ರಿಕರಣಶುದ್ಧ ಭಕ್ತಿಯಿಂದ ಶಿವಪೂಜೆಯನ್ನು ಮಾಡಿ, ಶಿವಪ್ರಸಾದದಿಂದ ಸಂತುಷ್ಟರಾಗಿ ಕಾಲವನ್ನು ಕಳೆಯುತ್ತಿದ್ದರು.

ಒಮ್ಮೆ ಕನಸಿನೊಳಗೆ ಸಂಗಮೇಶ್ವರನು ಬಂದು "ಎಲೆ ಮಗನೆ ಬಸವಣ್ಣ ನಿನ್ನನ್ನು ಮಹೀತಳದೊಳು ಮೆರೆಯುಸುವೆ. ನೀನು ಬಿಜ್ಜಳರಾಯನ ಮಂಗಳವಾಡಕ್ಕೆ ಪೋಗು, ನಮ್ಮನ್ನು ಅರ್ಚಿಸುತ್ತ ಭಕ್ತರ ಬಂಧುವಾಗಿ ಶರಣರ ಪರುಷದ ಕಣಿಯಾಗಿ, ನಿತ್ಯ ಸುಖಿಯಾಗಿ ಬಾಳು" ಎಂದು ಅಪ್ಪಣೆ ಕೊಡಲು, ಅರುಣೋದಯವಾದೊಡನೆ ನಿದ್ರೆ ತಿಳಿದೆದ್ದು ಎಲ್ಲ ಸರಿಪಡಿಸಿಕೊಂಡು, ಏಕನಿಷ್ಠೆಯ ವಜ್ರಾಂಗಿಯಂ ತೊಡುವಂತೆ ಭಸಿತೋದ್ಧೂಳನಂ ಮಾಡಿ, ಸುಕೃತ ಮನಪ್ಪುವಂತೆ ಧವಳವಸ್ತ್ರಮನುಟ್ಟು ಹೊದೆದು, ಪುಣ್ಯದ ಫಲಂಗಳನಲಂಕರಿಸಿಕೊಂಬಂತೆ ರುದ್ರಾಕ್ಷಿಗಳಂ ತೊಟ್ಟು, ಸಂಗಮೇಶ್ವರಂಗೆ ಮಜ್ಜನ ಪೂಜೆ ಆರೋಗಣೆಗಳನೇಕ ಚಿತ್ತದೊಳು ಕೈಕೊಳಿಸಿ ಪೊಡವೊಟ್ಟು

ನಡೆತಂದು, ಸಂಗನನ್ನು ಪೂಜಿಸುವಾಗ ಆತನಲ್ಲಿ ಈ ಅಷ್ಟಾವಸ್ಥೆಗಳು ತೋರಿದವು.

ಬಗೆ ಮೀರಿ ಲೋಚನದೊಳೊಗೆವ ಸುಖಜಲ ಮೆಯ್ಯೊ
ಳೊಗೆವ ಪುಳಕಂ ಕಯ್ಯೊಳೊಗೆವ ಕಂಪನ ನುಡಿಯೊ
ಳೊಗೆವ ತೊದಳ ಮಳ ಕದಪಿನೊಳಗೆವ ಬೆಮರು ಕಂಠದೊಳೊಗೆವ
ಹೊಸ ಗದ್ಗದ ।
ಮಿಗೆ ಮೊಗದೊಳೊಗೆವ ನಸುನಗೆ ಘನಮನೋಮತಿಯೊ
ಳೊಗೆವ ಪರವಶವೆರಸಿ ಮೆರೆವ ಭೂರಮಣಂ
ಮೊಗವೆತ್ತಿ ಕುಳ್ಳಿರಿಸಿ ಮೆಯ್ದಡವಿ ಬೋಳೈಸಿ ಮುನಿನಾಥನಿಂತೆಂದನು ॥
(ಹರಿಶ್ಚಂದ್ರ ಕಾವ್ಯ)

ಈ ರೀತಿಯಾಗಿ ಸಂಗಮೇಶ್ವರನನ್ನು ಪೂಜಿಸಿ ಹೊರಡಲನುವಾದನು. ಅಲ್ಲಿನ ಸನ್ನಿವೇಶವು ಬಸವರಾಜದೇವರ ರಗಳೆಯಲ್ಲಿ ಐದನೆಯ ಸ್ಥಲದಲ್ಲಿ ಕಾಣಬಹುದು. ಹರೀಶ್ವರನು ಭಕ್ತಿಯ ಕವಿ. ಹರೀಶ್ವರನ ಭಕ್ತಿಯನ್ನರಿಯ ಬೇಕೆಂದವರು ಬಸವರಾಜದೇವರ ರಗಳೆಯನ್ನು ನೋಡಬೇಕು. ಹರಿಹರನೇ ಆಗಿನ ಸಮಯದಲ್ಲಿ ಅಲ್ಲಿದ್ದರೇನೋ ಎಂಬ ಶಂಕೆ ಮೂಡುವಂತಿದೆ. ಹರಿ ಹರನನ್ನು ಷಡಕ್ಷರದೇವನು ತನ್ನ ಕವಿಕರ್ಣ ರಸಾಯನಂ ಎಂಬ ಕಾವ್ಯ ದಲ್ಲಿ ಸ್ತುತಿಸಿದ್ದಾರೆ. ಷಡಕ್ಷರದೇವನು ಸಾಮಾನ್ಯ ಕವಿಗಳಲ್ಲ, ವರಕವಿ.

ಶಿವಸ್ಯ ತದ್ಭಕ್ತ ತತೇರ್ವಿಥಾಯ ಕೃತೀರನೇಕಾಃ ಸುಕಪುಣಾತ್ಯಾಃ ।
ಶಿವಸ್ಯ ಸಾಯುಜ್ಯಮಿಹ ಪ್ರಪನ್ನೋ ಹರೀಶ್ವರ ಸ್ತೇನಸಮಃ ಕವಿಃ ಕಃ ॥

ಹರೀಶ್ವರನು ವೀರಶೈವರಲ್ಲಿ ಅಗ್ರಗಣ್ಯನು. ಈತನು ಹುಟ್ಟುವಾಗಲೇ ಭಕ್ತಿಯರಸವನ್ನೊಡಗೂಡಿದ್ದಾನೆ. ಬಸವನು ವಿಶ್ವದ ಬಸವನು ವೀರಶೈವ ಮತವು ವಿಶ್ವಸಮ್ಮತವು.

" ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯಾ
ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರಯ್ಯಾ "
" ಎನಗಿಂತ ಕಿರಿಯರಿಲ್ಲ ಶಿವಭಕ್ತರಿಗಿಂತ ಹಿರಿಯರಿಲ್ಲ "
" ದಯವಿಲ್ಲದಾ ಧರ್ಮವಾವುದಯ್ಯಾ ದಯೆವೇ ಧರ್ಮದಮೂಲ
ವಯ್ಯಾ " ಎಂದು ಹೇಳಿದ್ದಾರೆ.

# ಶ್ರೀ ಶಿವಯೋಗಿ ಕ್ಷೇತ್ರದ ಮುನ್ನೋಟ.

(ಲೇಖಕರು:— ಮ. ಮಲ್ಲಪ್ಪ ಜ್ಞಾನಮಂದಿರ ಹುಲಗೂರ.)



ನಿರ್ಧರಿಸಲ್ಪಟ್ಟಿದಂತೆಯೇ ಗೆಳೆಯರಗುಂಪಿನಲ್ಲಿ ಕೂಡಿ ನಾನು ತೋಪಿನ ಮಠದ ಶಿವಯೋಗಿ ಕ್ಷೇತ್ರಕ್ಕೆ ತೆರಳಿದೆನು. ಚಿಲಿಪಿಲಿಗುಟ್ಟುವ ಪಕ್ಷಿ ಸಂಕುಲ, ಹೊಲಗದ್ದೆ, ಕಾಲುವೆ ಕಟ್ಟೆ ಇವುಗಳ ನಡುವೆ ಹೋಗುತ್ತಿದ್ದರೆ ಒಂದು ತೆರನ ಆನಂದ. ವರ್ಷಾಕಾಲವು ಪ್ರೀತಿದಾಯಕವು. ಹಾದಿ ಬೀದಿಯು ಲಲ್ಲೆ ಲಲನೆಯರ ಸಂದರ್ಶನವಾಗುತ್ತಿರಲು ಈ ಸಂಸ್ಕೃತ ಶ್ಲೋಕದ ನೆನಪಾಯಿತು.

ಅಲಕೇಷು ಚೂರ್ಣಭಾಸಃ ಸ್ವೇದಲವಾಭಾವಕಪೋಲ ಫಲಕೇಷು ॥
ನವ ಘನ ಕೌತುಕಿ ನೀನಾಂವಾರಿಕಣಾನ್ ಪಶ್ಯತಿ ಕೃತಾರ್ಥಃ ॥

ಹೋಗು ಹೋಗುತ್ತಿದ್ದಂತೆಮನವೋತ್ಸಾಹವೊಂದುನವೆಯೇರಿತು. ನಿಮಗೆಲ್ಲರಿಗೂ ಮಂಗಳವಾಗಲಿ ಎಂದು ಆಶಿಷವನ್ನು ನೀಡಿ, ತನ್ನ ಹಸನ್ಮುಖವನ್ನು ತೋರಿಸಿ, ನೇಸರು ತನ್ನ ಪ್ರಭೆಯನ್ನು ಜಗತ್ತಿಗೆ ಹರಡಿಸಿದನು. ಕಾಕಾ ಎಂದು ಕಾಕ ಸಂಕಲನವು ಬಾನ ಬೀದಿಯಲಿ ಚರಿಸುತಿರಲು, ಪ್ರಕೃತಿಯ ಬಾಳರಹಸ್ಯವನ್ನು ಅರಿತು ಜನತೆಯು ನೈಜಚಿತ್ರವನ್ನು ಚಿತ್ರಿಸುವ ಕುಶಲಿಯೇ ಕವಿಯು ಎಂಬುದನ್ನು ನಿದರ್ಶಿಸಿದ ಭೀಮ ಕವಿಯು ಪದ್ಯವು ಸ್ಮೃತಿಪಟಲದಲ್ಲಿ ಮಿಂಚಿತು.

ಚಕ್ಕವಕ್ಕಿಗಳಕ್ಕೆಗೊಂಡವು ।
ಪಕ್ಕಿಗಳು ಗಗನಕ್ಕೆ ನೆಗೆದವು ।
ಸಿಕ್ಕಿದಳಿಹೊರವಂಟುವಬ್ಜಂಗಳ ಬಸುರೊಳಿರ್ದು ।
ಉಕ್ಕಿಬರಕುದು ಚಂದ್ರಮನ ಮುಸು ।
ಕಿಕ್ಕಿದವು ನೆಯ್ದಿಲೆಗಳುರುಗಳು ।
ವಿಕ್ಕುಗೆಟ್ಟುವುದೆಸೆದೆಸೆಗೆ ಪದ್ಮಂಗಳರಳಿದವು ॥

ಕಾವೇರಿ ಕಪಿಲಾಸಂಗಮದ ಸನಿಹಕ್ಕೆ ಸೇರಿದೆನು. ಪ್ರಕೃತಿದೇವಿಯು ಗರ್ಭದಲ್ಲಿ ಚರಾಚರ ವಸ್ತುವು ಅಡಗಿಕೊಂಡು, ಮಾನವನ ಪ್ರತಿಕೃತಿ ಯನ್ನೇ ಪ್ರತಿಬಿಂಬಿಸುತ್ತಿತ್ತು. ರಸ್ತೆಯ ಪಕ್ಕದಲ್ಲಿ ಕಿರಿದಾದ ಒಂದು ಮನೆ ಶಿಥಿಲಶೈತ್ಯದಿಂದ ಕೂಡಿದ್ದ ಮನೆಯ ಒಳಗಡೆ ಮಿತ್ರರ ಸಂಗಡ ಪ್ರವೇಶಿ ಸಿದೆನು.

ಮನೆಯ ಒಳಗಡೆಯ ಸನ್ನಿವೇಶವು ಜೀವವನ್ನು ಜುಮ್ಮ ಎನ್ನಿಸು ತ್ತಿತ್ತು. ಕೆಲಸಕ್ಕೆ ಬಾರದ—ಲೌಕಿಕ ದೃಷ್ಟಿಯಲ್ಲಿ—ವಸ್ತುವೊಂದು ಕೈಯ್ಯ ಲ್ಲಿದ್ದ ಸ್ವಾಮಿಗಳ ಸಂದರ್ಶನವು ಲಭಿಸಿತು. ಉಕ್ಕಿಮುಕ್ಕಿ ಹರಿಯು ತ್ತಿರುವ ದಿವ್ಯ ತೇಜಸ್ಸು ಓಜಸ್ಸು ಏನು ಕಾಯ! ಎಂಥ ಚಲುವು, ಅದೆಂತಹ ಬ್ರಹ್ಮಚರ್ಯದ ವರ್ಚಸ್ಸು! ಆಹಾ! ಪ್ರಫುಲ್ಲಕಾಂತಿಯ ವಿಸ್ಫುರಣೆಯೋ ವಿಸ್ಫುರಣೆಯು! ಎಂತಹ ಭೋಗಿಯನ್ನಾದರೂ ಮನಸ್ಸನ್ನು ಇಳಿಯಬಿಟ್ಟು ವಿರಾಗಿಯನ್ನಾಗಿ ಮಾಡುವಂತಹ ಪ್ರಶಾಂತ ಮೂರ್ತತ್ವವು ಈ ತ್ರಿಪುಂಡ್ರ ಧಾರಿ ಸನ್ಯಾಸಿಗಳದು! ಇವರೇ ತೋಪಿನ ಮಠಾಧೀಶ್ವರರು, ಪರಾಪರ ನಿರಂಜನ ಮೂರ್ತಿಸ್ವರೂಪರಾದ ಷಡಕ್ಷರದೇಶಿಕೇಂದ್ರ ಸ್ವಾಮಿಯವರು. ಎಲ್ಲರ ಜೊತೆಯಲ್ಲಿ ನಾನೂ ಕೂಡ ಸ್ವಾಮಿಗಳಿಗೆ ದೀರ್ಘದಂಡ ನಮಸ್ಕಾರ ಮಾಡಿದೆನು.

ಶ್ರೀ ಗುರುವೆ ಮಹಾ ಗುರುವೆ ಶಾಂತಿಕಳಾ ಗುರುವೆ ಶಿವಾತ್ಮ ವಿ।
ದ್ಯಾ ಗುರುವೆ ಪರಾಗುರುಡ ವಿಶ್ವ ಜಗದ್ಗುರುವೆ ವಿಶುದ್ಧ ಜೀ।
ಷ್ಟಾ ಗುರುವೆ ಸುಧೀ ಗುರುವೆ ಭಕ್ತಿ ಯಶೋ ಗುರುವೆ ಪ್ರಸಾದ ತೇ।
ಜೋ ಗುರುವೆ ಕೃಪಾ ಗುರುವೆ ಮದ್ಗುರುವೇ ಶಿವಾಧವಾ ॥

ಬಂದಿದ್ದ ಮಂದಿಯ ಸಂಪೂರ್ಣ ವಿಚಾರವನ್ನು ಸ್ವಾಮಿಯವರು ತಿಳಿದುಕೊಂಡರು. ಸ್ವಾಮಿಯವರ ಆಧ್ಯಾತ್ಮಿಕತೆ ಮತ್ತು ಧರ್ಮನಿಷ್ಠೆಗೆ ಅಂಜಿ ಅಳುಕಿ, ಪಾಪ ಭೀತಿಗೆ ಬಿರುಕುಚಿತ್ತರಾಗಿ ಅಲ್ಲಿನ ಊಟ ಉಪಾ ಹಾರಕ್ಕೆ ನಾವೆಲ್ಲರೂ ಅಸಮ್ಮತಿಯನ್ನು ನೀಡಿದೆವು. ಗುರುವಿನ ಸಾನ್ನಿಧ್ಯ ದಲ್ಲಿ ಇದ್ದುದರಲ್ಲಿಯೇ ಸ್ನಾನ ಪೂಜೆ ಪುರಸ್ಕಾರವನ್ನು ತಪ್ಪದೆ ಯಥಾ ಮತಿಯಾಗ ಮುಗಿಸಿಕೊಂಡು ಊಟ ಉಪಹಾರವನ್ನು ಮುಗಿಸುವುದರಲ್ಲಿ ಪುಣ್ಯದ ಪುನುಗು ಪೊಟ್ಟಣವಾಗಿ ಸಿಕ್ಕುವುದರಲ್ಲಿ ಯಾವ ಸಂದೇಹವೂ

ಇಲ್ಲವು ಎಂದು ಸ್ವಾಮಿಯವರು ಅಪ್ಪಣೆ ಕೊಡಿಸಲು, ತದಾನುಸಾರವಾಗಿ ಕೆಲಸವು ಸ್ವಾಮಿಯವರ ಸನ್ನಿಧಿಯಲ್ಲಿ ಸಾಗಿತು. ಎಲ್ಲರಿಗೂ ವಿಶ್ರಾಂತಿಯಲ್ಲಿ ಕೊಂಚ ಕಾಲ ಕಳೆಯಿತು.

ಸ್ವಾಮಿಯವರ ಅಮೃತ ವಾಣಿಯನ್ನು ಕೇಳಲು ಕುತೂಹಲವು ಎಲ್ಲರಿಗೂ ಕೆರಳುತ್ತಿತ್ತು. ನಮ್ಮೆಲ್ಲರ ಮುಖಚರ್ಯೆಯನ್ನು ನೋಡುತ್ತಿದ್ದಂತೆಯೇ ಸ್ವಾಮಿಯವರಿಗೆ ಬಂದವರ ಬಗೆಯು ಗೋಚರಿಸಿದ.

ಸ್ವಾಮಿ:— ಅಪ್ಪಾಜಿ ! ಸಂಸಾರದ ಕೆಸರಿನ ಕಮರಿಗೆ ಸಿಕ್ಕಿಲ್ಲ. ಸಲ್ಲದ ಕರ್ಮಂಗಳ ಮಾಡಿ, ಕೋಟಲೆಯ ಕೋಟೆಯಲ್ಲಿ ಬಂಧಿತರಾಗಿರುವಿರಿ. ಒಂದು ಅರೆಗಳಿಗೆಯ ಸುಖವನ್ನು ಕೊಡುವ ಅಸ್ಥಿರ ಭೋಗದಲ್ಲಿಯೇ ಗೋಡೆ ಗಂಟಿದ ಉಡು ಆಗಿರುವಿರಲ್ಲಾ ! ಭವನ ಭಜಿಸಿ, ಭವವನ್ನು ಭಸ್ಮೀಭೂತ ಮಾಡಿ ಬ್ರಹ್ಮಾನಂದವನ್ನು ಕೊಡುವ ಯೋಗದ ಸೌಭಾಗ್ಯದಿಂದ ಸಾವರಿಸಿ ಕೊಳ್ಳಿ. ಸಂಸಾರ ತಲ್ಲೀನತೆಯೇ ಕೇವಲ ಕಮನೀಯವಾಗದೆ ಇರಲಿ.

ಲೇಖಕ:— ಗುರುವೆ ! ಈ ಕಿರಿಯ ಭಕ್ತನ ಒಂದೆರಡು ತೊದಲ್ನುಡಿಗೆ ಏನಾದರೂ ಜಾಗವಿದೆಯೇ ?

ಶ್ರೀಗುರು:— ಅಗತ್ಯವಾಗಿ ಅಪ್ಪಾಜಿ.

ಲೇಖಕ:— ಶ್ರೀಗುರುವೇ, ಗುರುವಿನ ಸಂಗಡ ಮಾತನಾಡುವಾಗ ತಪ್ಪು ನೆಪ್ಪುಗಳು ಏನಾದರೂ ಬಂದು ಪಾಪಾರ್ಜನೆಗೆ ಪಕ್ಕಾಗಬೇಕಾಗುತ್ತದೆ ಎಂಬ ಭೀತಿ ಅಷ್ಟೆ !

ಶ್ರೀಗುರು:— ಒಂಬತ್ತು ತಿಂಗಳು ಹೊತ್ತು, ಹೆರುವಾಗ ಹಲವಾರು ಕಾವು ನೋವುಗಳನ್ನು ಅನುಭವಿಸಿದ ತಾಯಿಯು ಅದೇ ಮಗುವು ತಾಯಿಯ ತೊಡೆಯ ಮೇಲೆ ಗಲೀಜು ಮಾಡುವುದು, ತಾಯಿಯ ಸಂಗಡ ತಂಟೆ ಮಾಡುವುದು ಇದೆಲ್ಲವೂ ಮಗುವಿಗೆ ಪಾಪವು ಬರುತ್ತದೆ ಎಂದು ತಾಯಿಯು ಮಗುವನ್ನೇ ಬಿಡುವಳೇ ? ತಾಯಿಯೇ ದೇವರೆಂದು ವೇದಾಗಮ ಸ್ಮೃತಿಯು ಹೇಳುತ್ತಿದೆ. ಕಾಣದೆ ಮಗುವು ತಪ್ಪು ಹೆಜ್ಜೆ ಹಾಕಿದರೆ ಅದು ಸರಿಯಾಗಿ ಹೆಜ್ಜೆ ಹಾಕಿ, ಯೋಗ್ಯ ಹಾದಿಯಲ್ಲಿ ನಡೆಯುವಂತೆ ತಾಯಿಯು ಮಾಡುತ್ತಾಳೆ. ನಡೆಯುವವರು ಎಡವುವರಲ್ಲದೆ ಕುಳಿತವರಲ್ಲ ಎಂಬುದು ತಾಯಿಗೆ ಪರಿಪೂರ್ಣವಾಗಿ ಗೊತ್ತಿದೆ. ಅಂತೆಯೇ ಶಿಷ್ಯನ ಎಡರು ತೊಡರು ಗುರುವಿಗೆ ಗೊತ್ತಿದೆ. ಶಿಷ್ಯನ ಸಂದೇಹ ಪರಿಹಾರವು ಗುರುವಿನ ಕರ್ತವ್ಯವಾಗಿದೆ.

ಲೇಖಕ:— ಸನ್ಯಾಸಕ್ಕೆ ಸ್ಥಾನವನ್ನು ಕೊಟ್ಟು ಸಂಸಾರದ ಸ್ಥಾನಕ್ಕೆ ಸೋನೆಯ ಸೊರಗನ್ನು ಸೇರಿಸಿದಿರಿ. ಇದಕ್ಕೋಸ್ಕರವೇ ಪ್ರಸ್ತಾಪವನ್ನು ಎತ್ತಬೇಕಾಗಿದೆ. ಮಾನವನು ಸಮಾಜ ಜೀವಿಯು. ಸಮಾಜ ಜೀವನವು ಪ್ರಾಣಿಗಳಲ್ಲಿಯೂ ಕಂಡು ಬರುತ್ತದೆ. ಮಾನವನು ಸಂಘ ಜೀವಿಯು ಎಂಬುದರಲ್ಲಿ ಸಂದೇಹವೇನಿದೆ ? ಮಾನವನ ಬಾಳಿಗೆ ನಿಕಟ ಸಂಬಂಧವನ್ನು ಪಡೆದ ಜನದ ಪರಿಮಿತಿಯು ಬಹು ಕಡಿಮೆಯಾಗಿದೆ. ಆ ಪರಿಮಾಣದ ಜನಸಮೂಹವು ಸಂಸಾರ ಪಡೆಯುವಿಕೆಗೆ ಮದುವೆಯು ಬೇಕಾಗಿದೆ. ಮದುವೆಯು ಮಾನವ ಬಾಳಿನ ಒಂದು ಪ್ರಧಾನ ಸಂಸ್ಕಾರ, ಕುಟುಂಬದ ಮೂಲ ಸ್ತಂಭ. ಜನಜೀವನದಲ್ಲಿ ಐಕ್ಯತೆಯು ಸ್ಥಾಪನೆಯಾಗಿ ಜನಜೀವನದ ಕುಡಿಯನ್ನು ಕೊನರಿಸುವ ವಸಂತರಾಜನು ದಾಂಪತ್ಯ ಧರ್ಮದ ಸಹಜ ಸ್ವರೂಪನು. ಪ್ರಪಂಚದಲ್ಲಿ ಸಾರ್ವಜನಿಕ ನಿಮಿತ್ತಗಳನ್ನು ಮಾಡಿ ಸತಿಪತಿಗಳ ಅನುಭವದ ಸ್ನೇಹಮಯದ ಮನೋವಿಕಾರದ ಬೀಜಗಳನ್ನು ಜಗತ್ತಿನ ಹೃದಯದಲ್ಲಿ ಬಿತ್ತುವುದು. ಮತ್ತು ಮಾನವ ಬಾಳಿನ ಸಕಲ ಸುಖದುಃಖಗಳ ನಿವಾರಣೆಯು ತತ್ವದ ತಿರುಳು ಹುರುಳನ್ನು ಕಂಡು ಉಂಡು ತಿಂದು ಪಡೆದ ಆನಂದವನ್ನು ನೀಡುವುದೇ ದಾಂಪತ್ಯ ಜೀವನದ ಕರ್ತವ್ಯವು. ಸಂತಾನಾಭಿವೃದ್ಧಿಯಾಗಿ ಜಗದ ಜನತೆಯು ಜಡವನ್ನು ಸಡಲಿಸಿ, ಜಾಗ್ರತರನ್ನು ದಾಂಪತ್ಯ ಜೀವನವು ಮಾಡುತ್ತದೆ. ಕಾಮ ಜೀವನವೇ ಮದುವೆಯ ಪ್ರಧಾನ ಗುರಿಯು ಎಂಬುದು ತೀರಾ ಹುಚ್ಚೇ ಸರಿಯು. ಎರಡು ಮನೆತನದ ಕೀರ್ತಿವೃಕ್ಷದ ಸಂಪತ್ತನ್ನು ಹೆಚ್ಚಿಸುವ ಸೌರಭಾ ಲತಾಕುಂಜವು ಮದುವೆಯು. ಮಾನವನ ಬುದ್ಧಿ ಚಾತುರ್ಯದಿಂದ ಮಾನವನಿಗೂ ಪ್ರಾಣಿಗೂ ಸಾಮಾನ್ಯವಾಗಿ ಇರುವ ಕಾಮುವನ್ನು ಕ್ರಮಪಡಿಸಿ, ಸಿದ್ಧಪಡಿಸುವುದು ಮದುವೆಯು. ಹೆಂಡರಿಲ್ಲದ ಮನೆ ದಂಡು. ಗಂಡರಿಲ್ಲದ ಮನೆ ಬಂಡು ಎಂಬ ನಾಣ್ಣುಡಿಯನ್ನು ನೋಡಿದರೆ ಮನೆಗೆ ಹೆಂಗಸಿನ ಅವಶ್ಯವು ಬೇಕು ಎಂಬುದು ಗೊತ್ತಾಗುತ್ತದೆ.

ನಾರಿ ಪರರುಪಕಾರಿ ನಾರಿ ಸ್ವರ್ಗಕೆ ದಾರಿ ।
ನಾರಿ ಸಕಲರಿಗೆ ಹಿತಕಾರಿ ಮುನಿದರಾ ।
ನಾರಿಯೇ ಮಾರಿ। ಸರ್ವಜ್ಞ ॥

ನಾರಿಯು ಸಹಕಾರ ಸಹಾಯದಿಂದ ಸಂಸಾರ ಸೊಡರು ಮನೆ ಬೆಳಗನ್ನು ಪ್ರಕಾಶಿಸಬೇಕಾಗಿದೆ.

ಹೆಣ್ಣಿನಿಂದಲಿ ಇಹವು ಹೆಣ್ಣಿನಿಂದಲೆ ಪರವು |
ಹೆಣ್ಣಿನಿಂದಲೆ ಸಕಲಸಂಪದವು ಹೆಣ್ಣೊಲ್ಲ |
ದಣ್ಣಗಳು ಯಾರೊ ಸರ್ವಜ್ಞ ||

ಹೆಂಡತಿಯಿಲ್ಲದ ಬಾಳು ಹಾಳುಹೋಳೀ ಸರಿಯು. ಸಾಮರಸ್ಯದ ಸಂಸಾರದಿಂದ ಇಹಲೋಕವೇನಾಕವಾಗುತ್ತದೆ-

ಬೆಚ್ಚನಾಮನೆಯಾಗಿ ವೆಚ್ಚಕ್ಕೆ ಹೊನ್ನಾಗಿ |
ಇಚ್ಛೆಯನರಿವ ಸತಿಯಾಗೆ ಸ್ವರ್ಗಕ್ಕೆ |
ಕಿಚ್ಚು ಹಚ್ಚೆಂದ ಸರ್ವಜ್ಞ ||

ರೀತಿಯರಿದಾಸತಿಯು ಜಗದೊಳು ಜ್ಯೋತಿಯಿದ್ದಂತೆ ಎಂಬುದನ್ನು ಅರಿತುಕೊಂಡು ಸದ್ವರ್ತನೆಯಿಂದ ಸಾಗುವ ನಾರಿಯೇ ವಂಶಕ್ಕೆ ಭೂಷಣವು. ಸ್ತ್ರೀಯು ಬರಿಯ ಉಪಭೋಗ ವಸ್ತುವಲ್ಲ, ಆಕೆಯೂ ಸಹ ಒಬ್ಬ ಆತ್ಮಜೀವಿಯು. ಸತಿಗೆ ಯೋಗ್ಯ ಸಲಕರಣೆ ಸಾಮಗ್ರಿಗಳನ್ನು ಒದಗಿಸಿದರೆ ಆಕೆಯು ಹೂಡಿದ ಜೀವನವೇ ಪರಿಪೂರ್ಣತೆಯಿಂದ ಪ್ರಜ್ವಲಿಸುತ್ತದೆ. ಕಮಲಪತ್ರ ಜಲದಂತೆ ಸಂಸಾರವನ್ನು ಸಾಗಿಸುತ್ತಿದ್ದು ತ್ಯಾಗಿ, ಭೋಗಿ, ಯೋಗಿಯಾಗಿ ಬಾಳುವುದು ಇಂದಿನ ಯುಗಧರ್ಮದ ಸಹಜ ಸ್ವರೂಪವು. ಎಲ್ಲಿಯೋ ಒಂದು ಕಾಡಿನಲ್ಲಿ ಏಕಾಂತವಾಗಿ ವಾಸಿಸಿ ಧ್ಯಾನಿಸಿ ಭವನನ್ನು ಪಡೆಯುತ್ತೇನೆ ಎಂಬುದು ಬರೀ ಭ್ರಾಂತಿಯೇ ಸರಿಯು. ಸನ್ಯಾಸದ ಮಹತ್ವವು ಇಂತಿದೆ.

ಕಾಮ್ಯಾನಾಂ ಕರ್ಮಣಾಂ ನ್ಯಾಸಂ ಸನ್ಯಾಸಂ ಕವಯೋವಿದುಃ |
ಸರ್ವ ಕರ್ಮ ಫಲತ್ಯಾಗಂ ಪ್ರಾಹುಸ್ತ್ಯಾಗಂ ವಿಚಕ್ಷಣಾಃ || —ಗೀತೆ.

ಇದೇ ಗೀತೆಯು ಸಂಸಾರದ ಗುರುತ್ವವನ್ನು ಇಂತು ಶೃತಪಡಿಸಿದೆ.

ಊರ್ಧ್ವ ಮೂಲ ಮಧಶ್ಶಾಖಂ ಅಶ್ವತ್ಥಂ ಪ್ರಾಹುರವ್ಯಯಮ್ |
ಸಂದಾಸಿಯಸ್ಯ ಪರ್ಣಾನಿಯಸ್ತಂ ವೇದಸವೇದವಿತ್ ||

ಹೆಣ್ಣೆಂದರೆ ವಲ್ಲರಿಗೂ ಜೀವಜಿನುಗುತ್ತದೆ, ಕಾಯವು ಕರಗುತ್ತದೆ. ಇಲ್ಲಿ ಯುವತಿಗೆ ಕಾಮಿನಿಗೆ ಕರಗದವರು, ಹೆಂಗಸಿಗೆ ಹೆದರದವರು, ಆಕೆಗೆ ಅಳುಕದವರು ಎಲ್ಲಿಯೋ ಮೂರಾರು ಮಂದಿ ಮಾತ್ರ. ಸೈನ್ಯಕ್ಕೆ ಸರದಾರ ಮನೆಯು ಹೆಂಡತಿಗೆ ಕಾಸ್ತಾರ ಎಂಬ ನಾಣ್ಣುಡಿಯೇ ಇದನ್ನು ನಿಹರ್ಶಿಸುತ್ತದೆ. ಸ್ತ್ರೀಗೆ ಮನಸ್ಸನ್ನು ಇಳಿಯ ಬಿಟ್ಟವರು ಮಾನವರಲ್ಲಿ ಮಾತ್ರ

ವಲ್ಲವೆ ಇಡೀ ಅಮರ ಸಂಕುಲದಲ್ಲಿಯೂ ಸಿಗುತ್ತಾರೆ. ಬ್ರಹ್ಮನು ತಾನು ಸೃಜಿಸಿದ ಹೆಣ್ಣಿನ ಸೌಂದರ್ಯಕ್ಕೆ ಸೊರಗಿ ಸೊಪ್ಪಾಗಿ ಆಕೆಯನ್ನು ಮದುವೆಯಾಗಿರುತ್ತಾನೆ. ಮುರಳೀಗಾನಪ್ರಿಯನು ಪಟ್ಟದ ಅರಸಿಯರನ್ನೂ ಅಲ್ಲದೆ ಭೋಗದ ಅರಸಿಯರನ್ನೂ ಪಡೆದಿರುತ್ತಾನೆ. ಸ್ತ್ರೀ ಶಕ್ತಿಗೆ ಸಮಪಾಲು ನೀಡಿ ಪರಮೇಶ್ವರನು ಪಾರ್ವತಿಯನ್ನು ಮದುವೆಯಾಗಿ, ಅರ್ಧನಾರೀಶ್ವರನಾಗಿ ಭುವನ ಮೋಹನನಾಗಿ ಮೆರೆದಿರುತ್ತಾನೆ. ವಿಶ್ವಾಮಿತ್ರಾದಿ ಋಷಿಗಳು ಹೆಂಗಸರ ಬೆಡಗಿನ ಬೇಟಕ್ಕೆ ಬೆರಗಾಗಿ ಸ್ತ್ರೀ ವಶರಾಗಿದ್ದಾರೆ. ಪರಿಸ್ಥಿತಿಯು ಹೀಗಿರುವಲ್ಲಿ ಹುಲು ಮಾನವರಾದ ನಮ್ಮ ಪಾಡನ್ನು ಹೇಳುವುದೇನಿದೆ? ಸಾಹಿತ್ಯ ಸಿಂಹಾವಲೋಕನ ಮಾಡಿದರೆ ಅಲ್ಲಿಯೂ ಸಹ ಸತಿಯರ ವರ್ಣನಾ ವೈಖರಿಯು ಕಾಣಬರುತ್ತದೆ.

ಸೂಕ್ತಿಮುಕ್ತಾವಳಿಯು ಸೂಚಿಸಿರುವುದು ಇಂತು ಇದೆ.

ಸ್ತ್ರೀತಿ ಶ್ರುತೇಗತಂ ಧೈರ್ಯಂ ಸುರೂಪೇತಿ ಕಿಮುಚ್ಯತೇ ।
ಕಷ್ಟಂ ಸಹೃದಯಾಸಾಚೇ ತ್ಸಸ್ಪೃಹೇ ತ್ಯತಿದುಃಸ್ಸಹಂ ॥

ಸ್ತ್ರೀಯರ ನೋಟದ ಮಹಿಮೆಯನ್ನು ಸುಭಾಷಿತಾವಳಿಯು ಇಂತು ವರ್ಣಿಸಿದೆ:—

ದೃಶಾದಗ್ಧಂ ಮನಸಿಜಂ ಜೀವಯಂತಿ ದೃಶೈವಯಾ ।
ವಿರೂಪಾಕ್ಷಸ್ಯ ಜಯನೀಸ್ತಾಃಸ್ತುವೇ ವಾಮಲೋಚನಾಃ॥

ಗೃಹಸ್ಥ ಧರ್ಮದ ವಿಚಾರವಾಗಿ ಶಾರ್ಙಧರನು ಹೀಗೆ ಹೇಳಿದ್ದಾನೆ:—

ಅಹಿಂಸಾ ಸತ್ಯ ವಚನಂ ಸರ್ವಭೂತಾನು ಕಂಪನಂ ।
ಶಮೋದಾನಂ ಯಥಾ ಶಕ್ತಿಗಾರ್ಹಸ್ಥೋ ಧರ್ಮ ಉಚ್ಯತೇ॥

ಮಹಾ ಕವಿ ಕಾಳಿದಾಸನು ಮರ್ತ್ಯ ಸ್ವರ್ಗಗಳ ಸಾರ ಸಮ್ಮಿಲನವಾಗಿರುವ ಶಾಕುಂತಲವನ್ನು ಜನತೆಗೆ ನೀಡಿ ಎರಡು ಹೃದಯಗಳನ್ನು ಒಂದುಗೂಡಿಸಿ, ಗಾಢ ಪ್ರೇಮದ ಅಸಾಮಾನ್ಯ ಶಕ್ತಿಯನ್ನು ಉದಹರಿಸಿದ್ದಾನೆ. ಅರಿವಿಗೆ ನಿಲುಕದಿದ್ದರೂ ಸಂಸ್ಕಾರ ರೂಪದಲ್ಲಿ ನೆಲೆಯಾಗಿರುವ ಭವಾಂತರದ ಗೆಳೆತನವೊಂದನ್ನು ಹೃದಯವು ಸ್ಮರಿಸುತ್ತಿರುವುದನ್ನು ಸಾಂಗೋಪಾಂಗವಾಗಿ ನೋಡಬಹುದಾಗಿದೆ. ರಘುವಂಶ, ಕುಮಾರ ಸಂಭವ ಈ ಕಾವ್ಯಗಳಲ್ಲಿಯೂ ಸಹ ಸಂಸಾರದ ಆಗುಹೋಗುಗಳನ್ನೂ, ಭೋಗ ತ್ಯಾಗಗಳನ್ನೂ ಕವಿಯು ಭವ್ಯತೆಯಿಂದ ಬಣ್ಣಿಸಿದ್ದಾನೆ. ಆದರ್ಶ ದಾಂಪತ್ಯವು ಸುಖ

ದುಃಖಗಳಲ್ಲಿ ಏಕ ರೀತಿಯಾಗಿ ಸಕಲಾವಸ್ಥೆಗಳಲ್ಲಿಯೂ ಚಿತ್ತವು ವಿರಾಮದ ಅನುಭವವನ್ನು ಹೊಂದಿ, ಮುದಿತನದಲ್ಲಿಯೂ ಪಣ್ಣೆ ಕುಂದದೆ, ಕಾಲಕ್ಕೆ ಅನುಗುಣವಾಗಿ ಬೆಳೆದಾಗ ಅಲ್ಲಿನ ಮುಸುಕು ಮೂಲೆಗೆ ಬಿದ್ದು, ಪ್ರೇಮ ಫಲಿತವಾಗಿ ನಿಲ್ಲುವುದರಲ್ಲಿದೆ ಎಂದು ಭವಭೂತಿಯು ನುಡಿದಿದ್ದಾನೆ. ಯಾವ ಕವಿಗಳೇ ಆಗಲಿ, ಸಾಹಿತಿಗಳೇ ಆಗಲಿ ಸ್ತ್ರೀಯರ ವರ್ಣನೆಯನ್ನು ಬಿಟ್ಟು ದಾಟಿಲ್ಲ. ಭಕ್ತಿಯ ಮೂರ್ತಿ ಹರಿಹರ ಮಹಾ ಕವಿಯೇ ಗಿರಿಜಾ ಕಲ್ಯಾಣದಲ್ಲಿ ದಾಂಪತ್ಯ ಚಿತ್ರವನ್ನು ರಸವತ್ತಾಗಿ ಚಿತ್ರಿಸಿದ್ದಾನೆ. ಶಿವಯೋಗಿಯ ಜೀವನ ಚರಿತ್ರೆಯನ್ನು ಬರೆಯಲಿಕ್ಕೆ ತೊಡಗಿದ ಚಾಮರಸನೂ ಸಹ ರತಿ ಪ್ರಲಾಪ ವರ್ಣನೆಗೆ ಪಕ್ಕಾಗಿದ್ದಾನೆ. ರತ್ನಾಕರ ವರ್ಣಿಯು ಪ್ರೇಮ ಕಾವ್ಯವೊಂದನ್ನು ಹಿಗ್ಗಲಿಸಿ ಹಿರಿದಾಗಿ ರಚಿಸಿ, ತ್ಯಾಗ ಯೋಗ ಭೋಗ ಸಮ್ಮಿಲನದಿಂದ ಕೂಡಿದ ಸಂಸಾರಿಯ ಚಿತ್ರವನ್ನು ಚಿತ್ತರಂಜಕವಾಗಿ ಚಿತ್ರಿಸಿದ್ದಾನೆ. ಕೆಸರಿನಲ್ಲಿ ಜನಿಸಿದ ಕಮಲವು ಊರ್ಧ್ವ ಮುಖವಾಗಿರುವ ಹಾಗೆ ಸಂಸಾರಿಯಾಗಿಯೇ ರಾಜಯೋಗವನ್ನು ಕಾಣಬಲ್ಲ ಎಂಬುದನ್ನು 'ಭರತೇಶ ವೈಭವ' ದಲ್ಲಿ ಕಾಣಬಹುದಾಗಿದೆ. ಪೆಣ್ಗಳ್ಗೆ ಸೋಲದವರಾರ್ ಎಂದು ಲಕ್ಷ್ಮೀಶ ಕವಿ ಹೇಳಿದಂತೆಯೇ ಹೆಣ್ಣಿಗೆ ಆಸೆಪಡದವರಿಲ್ಲ ಎಂದು ಸರ್ವಜ್ಞ ಕವಿಯು ಹೇಳಿದ್ದಾನೆ. ಪರಮ ಪುರುಷನಾದ ರಾಮನಿಗಿಂತ ಪ್ರಕೃತಿ ಸ್ವರೂಪಿಣಿಯಾದ ಜಾನಕಿಯು ಹೆಚ್ಚಿಗೆ ಪ್ರಭಾವಶಾಲಿನಿ ಎಂಬುದನ್ನು ಮುದ್ದಣ ಕವಿಯು ತೋರಿಸಿದ್ದಾನೆ. ಉಮರ್ ಖಯ್ಯಾಮನು ಹೀಗೆ ಇಂತು ಹಾಡಿದ್ದಾನೆ.

ಹಾ ಪ್ರಿಯಳೆ, ಬಿದಿಯೊಡನೆ ಸೇರಿ ನಾಮಿರ್ವರುಂ
ದುಃಖಮಯದೀ ಜಗದ ಬಾಳ ಮರುಮಗಳ
ಕಾಣುವಂತಾದೊಡಾಗಳಿದೆಲ್ಲಮಂ ಮುರಿದು
ಮನಕೊಪ್ಪುವಂತಿದನು ನಿರವಿಸಮಲ್ತೆ

'ಸೂಕ್ತಿ ಸುಧೆ' ಕರ್ತನು ಇಂತು ಸಾರಿದ್ದಾನೆ:—

ಹೆಣ್ಣಿಂಗೆ ಜಿಹ್ವೆಯನು
ಹೆಣ್ಣಿಂಗೆ ವಸುವನ್ನು ।
ಮಣ್ಣಿಂಗೆ ಮನವನು ಗಂಧಕ್ಕೆ ನಾಸೆಯನು ।
ಕಣ್ಣೆ ದೂಡುವುದು ಸರ್ವೇಶ ॥

ಇಷ್ಟಕ್ಕೆ ನಿಲ್ಲದೆ 'ಸೂಕ್ತಿ ಸುಧೆ'ಯ ಕರ್ತನು 'ಸತಿಯಿಂದಲೇ ವಸತಿ' ಎಂದು ಹೆಣ್ಣಿನ ಮಹತ್ವವನು ಹೊರಗೆಡಹಿದ್ದಾನೆ. ಅಂತೂ ಹೆಣ್ಣು ಬಿಟ್ಟು ಯಾರೂ ಗಿರಿಯನ್ನು ಏರಿದಿಲ್ಲ, ಗಡಿಯನ್ನು ದಾಟಿಲ್ಲ ಎಂಬುದು ವಿದಿತ ಗೋಚರವಾಗುತ್ತದೆ.

ಮಹಾ ಶಿವಯೋಗಿನಿ ಅಕ್ಕ ಮಹಾದೇವಿಯೂ ಕೂಡ 'ಸಂಸಾರ ಬಿಡದೆ ಕಾಯುತ್ತಿದೆಯಯ್ಯಾ' ಎಂದು ಉದ್ಗರಿಸಿದ್ದಾಳೆ. ಮಾಯೆಯು ಅಜಾತ ಶತ್ರುವು. ಆಕೆಗೆ ಸರ್ವರೂ ಪರಾಜಿತರು.

ಹರಿಯ ನುಂಗಿತ್ತು ಮಾಯೆ
ಅಜನ ನುಂಗಿತ್ತು ಮಾಯೆ
ಇಂದ್ರನ ನುಂಗಿತ್ತು ಮಾಯೆ
ಚಂದ್ರನ ನುಂಗಿತ್ತು ಮಾಯೆ
ಬಲ್ಲನೆಂಬ ಬಲುಗಯ್ಯರ ನುಂಗಿತ್ತು ಮಾಯೆ
ಅರಿಯನೆಂಬ ಅಜ್ಞಾನಿಗಳ ನುಂಗಿತ್ತು ಮಾಯೆ
ಈರೇಳು ಭುವನಗಳನಾರಡಿಗೊಂಡಿತ್ತು ಮಾಯೆ
ಚೆನ್ನ ಮಲ್ಲಿಕಾರ್ಜುನಾ ಎನ್ನ ಮಾಯೆಯ ಮಾಣಿಸಾ ಕರುಣಿ.

ಈ ಬಗೆಯಾಗಿ ಅಕ್ಕ ಮಹಾದೇವಿಯು ಮಾಯೆಯನ್ನು ಹೇಳಿದುದಲ್ಲದೆ 'ಚನ್ನ ಮಲ್ಲಿಕಾರ್ಜುನ ನೀನೊಡ್ಡಿದ್ದ ಮಾಯೆಯನಾರೂ ಗೆಲಲಾರರು' ಎಂದು ಒಂದು ಕಡೆಯೂ 'ಲೋಕವೆಂಬ ಮಾಯೆಗೆ ಶರಣ ಚಾರಿತ್ರ ಮರು ಳಾಗಿ ತೋರುವುದು' ಎಂದು ಮತ್ತೊಂದು ಕಡೆಯೂ ಮಾರ್ಮಿಕವಾಗಿ ನುಡಿದಿದ್ದಾರೆ. ಜಗತ್ತು ಮಾಯಾಪೂರಿತವೆನ್ನುವುದರಲ್ಲಿ ಯಾವ ಸಂದೇ ಹವೂ ಇಲ್ಲ. ದೇಹವೂ ಇಂದ್ರಿಯಗಳೂ ಮಾಯಾಬಲದಿಂದಲೇ ಆಗಿವೆ ಎಂಬುದು ಗೀತೋಕ್ತಿ ಇದೆ. ಮಾಯೆ, ಶಕ್ತಿ ಇವೆಲ್ಲವೂ ಒಂದೇ ಆಗಿದೆ.

ಜನಿತಕ್ಕೆ ತಾಯಾಗಿ ಹೆತ್ತಳು ಮಾಯೆ
ಮೋಹಕ್ಕೆ ಮಗುವಾಗಿ ಹುಟ್ಟಿದಳು ಮಾಯೆ
ಕೂಟಕ್ಕೆ ಸ್ತ್ರೀಯಾಗಿ ಕೂಡಿಹಳು ಮಾಯೆ
ಇದಾವ ಪರಿಯಲ್ಲಿ ಕಾಡಿಸಿತ್ತು ಮಾಯೆ
ಈ ಮಾಯೆಯು ಕಳೆವರ ಎನ್ನಳವಲ್ಲ
ನೀವೇ ಬಲ್ಲರಿ ಕೂಡಲಸಂಗಮದೇವಾ.

ಜಗಜ್ಯೋತಿ ಬಸವಣ್ಣನವರ ನೋಟಕ್ಕೆ ನಿಲುಕಿದ ಮಾಯೆಯ ವರ್ಣನೆಯಿದು. ಹರಿದಾಸರೂ ಸಹ "ಸಂಸಾರದಂತಹ ಭಾಗ್ಯ ಕಂಸಾರಿಯ ನೆನೆಯುವಂತಹ ಭಾಗ್ಯವಿರಲಿ" ಎಂದುದಲ್ಲದೆ "ಈಸಬೇಕು ಇದ್ದು ಜೈಸಬೇಕು." ಎಂದು ಮುಂದೆ ಹೋಗಿದ್ದಾರೆ. ಕಾಮಿನಿಕಾಂಚನ ತ್ಯಾಗ ಮಾಡಿ ಸಂಸಾರವನ್ನು ನಿರ್ವಹಿಸು ಎಂದು ರಾಮಕೃಷ್ಣ ಪರಮಹಂಸರು ಹೇಳಿದ್ದಾರೆ. ಎಂದರೆ ಸಂಸಾರವನ್ನು ಕಾಮದ ಕೆಸರಿನಿಂದ ಎತ್ತಿ, ವೈರಾಗ್ಯದ ತಳಹದಿಯ ಮೇಲೆ ನಿಲ್ಲಿಸಿ ಸಹಜ ಪ್ರೇಮ, ಸಧರ್ಮಯುತವಾಗಿ ಮಾಡಿ ಅರ್ಥವೆಂಬ ಅಂಟುರೋಗಕ್ಕೆ ಸಿಲುಕಿ ಅಧಃಪತನರಾಗದಂತೆ ಮಾಡಿ ಆಳಬಾಳನ್ನು ಬೆಳಗುವುದು. ಸ್ವಾಮಿ ವಿವೇಕಾನಂದರು ಇಂತು ನುಡಿದಿದ್ದಾರೆ.

"ಗೃಹಸ್ಥನಾಗು: ತಂದೆತಾಯಿಗಳ ಸೇವೆ ಮಾಡು; ನೀನಿದ್ದಲ್ಲಿಯೇ ನಾಕವು ನೆಲಸುತ್ತದೆ."

ಮಹಾಭಾರತಕ್ಕೆ ದ್ರೌಪದಿ ಪಾತ್ರದಿಂದ ತೇಜಸ್ಸು ಓಜಸ್ಸು ಬಂದಿದೆ. ಸೀತೆಯಿಂದ ರಾಮಾಯಣಕ್ಕೆ ಪ್ರಾಶಸ್ತ್ಯವು ಒದಗಿದೆ. ಚಂದ್ರಮತಿಯಿಂದ ಹರಿಶ್ಚಂದ್ರ ಕಾವ್ಯಕ್ಕೆ ಕಳೆಯು ಬಂದಿದೆ. ದಾಂಪತ್ಯ ಜೀವನವನ್ನು ವೈರಾಗ್ಯದಿಂದ ಹದಮಾಡಿದ ದಿವ್ಯ ವ್ಯಕ್ತಿಗಳು ದ್ರೌಪದಿ, ಸೀತಾ, ಚಂದ್ರಮತಿ, ದಮಯಂತಿ, ಸಾವಿತ್ರಿ. ಬಂಗಾಳದ ಸನ್ಯಾಸಿ ದರಿಗೆಯಲ್ಲಿ ಹೆಂಗಸರೂ ಏಕೀ ಭಾವನೆಯಿಂದ ಸಹಕರಿಸಿದ್ದರಿಂದಲೇ ಅಲ್ಲಿ ಜಯದ ಲಭ್ಯ. ಅನೇಕ ಅವಸ್ಥಾ ಕಾಲಗಳಲ್ಲಿ ಹೆಂಗಸರು ಗಂಡಸರಿಗೆ ಸಹಾಯ ಮಾಡಿ, ಆತ್ಮಯಜ್ಞಕ್ಕೂ ಸಿದ್ಧರಾಗಿ ಉದ್ಯೋಗಶೀಲರಾದದ್ದು ಬಂಗಾಳದ ಸನ್ಯಾಸಿಯ ದಂಗೆಯ ಕಥೆಯಿಂದ ತಿಳಿದು ಬರುತ್ತದೆ. ಭಾರತ ಸ್ವಾತಂತ್ರ್ಯ ಜನಕರಲ್ಲೊಬ್ಬರಾದ ಬಾಲ ಗಂಗಾಧರ ತಿಲಕರು "ನನ್ನ ಅರ್ಧ ಕಾವ್ಯವು ಮುಗಿಯಿತು. ಇನ್ನುಳಿದ ಅರ್ಧ ಹಾಗೆಯೇ ಇದೆ." ಎಂದು ಪತ್ನಿವಿಯೋಗದ ಸಂಗತಿಯನ್ನು ಕೇಳಿದಾಗ ಹೇಳಿದ್ದಾರೆ. ಪಂಡಿತ ಜವಾಹರಲಾಲ ನೆಹರು ಅವರು ಸತಿ ಕಮಲಾ ನೆಹರೂರ ವಿಚಾರದಲ್ಲಿ ಪ್ರಶಂಸನೀಯ ನುಡಿಗಳನ್ನು ನುಡಿದಿದ್ದಾರೆ. ಮಹಾತ್ಮಾ ಗಾಂಧೀಜಿಯವರು ಹೆಣ್ಣಿಗೆ ಉತ್ತಮ ಸ್ಥಾನವನ್ನು ಕೊಟ್ಟುದುದಲ್ಲದೆ ಗಂಡು ಹೆಣ್ಣು ಪರಸ್ಪರ ಪೂರಕ ಸೃಷ್ಟಿ ಎಂದಿದ್ದಾರೆ. ಗಂಡನ ಸತ್ಯ ಶೋಧನೆಯಲ್ಲಿ ಸಂತೋಷದಿಂದ ಸಮಪಾಲುಗಾರ್ತಿಯಾಗಿ ಇಡೀ ಗಾಂಧಿಯ ಬಾಳಿನಲ್ಲಿಯೇ ಭಾಗ ವಹಿಸಿ ಆಳ ಬಾಳನ್ನು

ಬೆಳಗಿಸಿದ ಧನ್ಯೆ ಕಸ್ತೂರಿಬಾಯಿಯೇ ಜಗನ್ಮಾನ್ಯಳು. ಅಂತು ಸಂಸಾರವು ಸಕಲರನ್ನೂ ಸಾವರಿಸಿಕೊಂಡಿದೆ.

ಸಂಸಾರದಲ್ಲಿ ಸೌಲಭ್ಯ ಸದವಕಾಶಗಳನ್ನು ಮಾನವನು ನಿರ್ಮಿಸಿಕೊಂಡು ಅದನ್ನು ಇಹಪರದಲ್ಲಿಯೂ ಸಾರ್ಥಕಪಡಿಸಿಕೊಳ್ಳಬೇಕು. ಸಂಸಾರದಲ್ಲಿ ಸಿಹಿಕಹಿಗಳಿವೆ; ಆದರೆ ಅವುಗಳನ್ನು ಉಚಿತವರಿತು ಉಪಯೋಗಪಡಿಸಿಕೊಂಡು ಕಾರ್ಯ ಸಾಧನೆ ಮಾಡಿದರೆ ಅಂದೇ ಪುರುಷಾರ್ಥವು ಸಿಗುತ್ತದೆ. ಸನ್ಯಾಸಿಗೂ ಸಂಸಾರಿಗೂ ಭೇದವನ್ನು ತರದಾತನೇ ಸಹಜ ಸನ್ಯಾಸಿಯು. ಸನ್ಯಾಸಿಗೆ ಜಗತ್ತೇ ನೆಂಟರಿಷ್ಟರು.

ಊರೆಲ್ಲ ನೆಂಟರು ಕೇರಿಯೆಲ್ಲವು ಬಳಗ ।
ಧಾರುಣಿಯು ಎಲ್ಲ ಕುಲದೈವವಾಗಿನ್ನು ।
ಯಾರನ್ನು ಬಿಡಲಿ ಸರ್ವಜ್ಞ ॥

ಇದು ಸನ್ಯಾಸಿಗೆ ಜೀವವು, ಉಸಿರು ಎಂಬುದನ್ನು ನಾಡಿಗೆ ನಾಡೀ ವ್ಯಕ್ತಗೊಳಿಸುತ್ತದೆ. ಸನ್ಯಾಸಿಯೇ ವಿಶ್ವ ಪ್ರೇಮಿಯು. ಸಹಜ ಮಾರ್ಗವನ್ನು ಹಿಡಿದು ಕಳೆಕಿತ್ತುಹಾಕಿ, ಹೊಲವನ್ನು ಹಸನು ಮಾಡಿ, ಹೊಸ ಹುಲುಸು ಬೆಳೆಯನ್ನು ಕೊಡುವಾತನೇ ಸನ್ಯಾಸಿಯು.

ಆಶೆ ಎಲ್ಲವ ಬಿಟ್ಟು, ರಾಶಿ ಕರ್ಮವನು ಸುಟ್ಟು ।
ದೋಷವನು ಕಳೆದು ನಿಂದವನು ಅವಗಂ ।
ಲೇಸಾಗಿ ಇರುವ ಸರ್ವಜ್ಞ ॥

ಇದರಿಂದಲೇ ಇವರು ಸಾಮಾನ್ಯ ಮನುಷ್ಯರಿಗಿಂತ ಒಂದು ಅಂತಸ್ತು ಮೇಲಿರುತ್ತಾರೆ. ಮಾನವರ ಮನವು ಚಂಚಲವು. ಚಂಚಲ ಚಿತ್ತವನ್ನು ಏಕಾಗ್ರತೆಯಿಂದಿರಿಸು ಎಂದು ಬೇಡುವುದೇ ನಮ್ಮ ಕರ್ತವ್ಯ.

ಕೊಂಬೆಯ ಮೇಲಣ ಮರ್ಕಟನಂತೆ ಲಂಘಿಸುವುದೆನ್ನ ಮನ.
ನಿಂದಲ್ಲಿ ನಿಲಲೀಯದೆನ್ನ ಮನ.
ಹೊಂದಲ್ಲಿ ಹೊಂದಲೀಯದೆನ್ನ ಮನ.
ನಿಮ್ಮ ಚರಣ ಕಮಲದಲ್ಲಿ ಭ್ರಮರನಾಗಿರಿಸು ನಿಮ್ಮ ಧರ್ಮ
ಕೂಡಲಸಂಗಮದೇವಾ.

ಈ ನವನೀತವನ್ನು ಕನ್ನಡಿಗರ ಕುಲಗುರು ಬಸವಣ್ಣನವರು ಅನುಭವದ ಕಡಲಿನಿಂದ ಕಡೆದು ತಂದು ಜಗತ್ತಿಗೆ ನೀಡಿದ್ದಾರೆ. ಜಗತ್ತು ವಿಷಯ ಪೂರಿತವೂ, ವಿಷಯಜನಿತವೂ ಆಗಿದೆ.

ವಿಷಯವೆಂಬ ಹಸುರನೆನ್ನ ಮುಂದೆ ಪಸರಿಸಿದೆಯಯ್ಯಾ
ಪಶುವೇನಬಲ್ಲುದು ? ಹಸುರೆಂದೆಳಸುವುದಯ್ಯಾ
ವಿಷಯ ರಹಿತನಾಗಿ ಮಾಡಿ ಭಕ್ತಿರಸವ ದಣಿಯೆ
ಮೇಯಿಸಿ ಸುಬುದ್ಧಿಯೆಂಬ ಉದಕವನೆರೆದು
ನೋಡಿ ಸಲಹಯ್ಯಾ ಕೂಡಲಸಂಗಮದೇವಾ.

ಪರಿಸ್ಥಿತಿಯು ಹೀಗಿರುವಲ್ಲಿ ವಿಷಯವನ್ನು ದೂರ ಮಾಡಿ ವಾಸಿಸುವುದು ಕಷ್ಟತರವೇ ಸರಿಯು. ಆದ ಕಾರಣ ಸನ್ನಿಹಿತವಾಗಿರುವ ಸನ್ನಿವೇಶದಿಂದ ಸಂಸಾರದಲ್ಲಿನ ಸಾರಭೂತ ಸೌರಭದಿಂದಲೇ ನಾನು ಪುನೀತನಾಗುವಂತೆ ಮಾಡು ಮಹೇಶ ಎಂದು ಹಂಬಲಿಸಿ ಪ್ರತಿಯೊಬ್ಬನೂ ಹಾಡಿ ಧ್ಯಾನಿಸಿದರೆ ನರನಾರಾಯಣನೂ, ಭಕ್ತಭವನೂ ಆಗುವುದರಲ್ಲಿ ಯಾವ ಸಂಶಯವೂ ಇರಲಾರದು. ಬಾಳ ಪಯಣವನ್ನು ಅಡ್ಡ ಹಾಯ್ದು ಅಡ್ಡಿ ಆತಂಕಗಳನ್ನೆಲ್ಲವನ್ನೂ ಅಳಿಸಿ, ಅಳಲನ್ನು ಸಹಿಸಿಕೊಂಡು ಮುಂಬರಿದರೆ ಅಂದೇ ಭವನು ಭಕ್ತನಿಗೆ ಅಭೀಷ್ಟವನ್ನು ನೀಡುತ್ತಾನೆ. ಆಗ ಭವನ ಪಾದವನ್ನು ಹಿಡಿದು ಆತನನ್ನೇ ಹಿಂಬಾಲಿಸಿ, ಪರಮ ಪುರುಷಾರ್ಥವನ್ನು ಸಾಧಿಸಬಹುದಾಗಿದೆ. ಮೋಕ್ಷದ ಮೂಲವು ಧರ್ಮಾಚರಣೆ. ಪ್ರತಿಯೊಬ್ಬರಿಗೂ ತಪ್ಪದೆ ಧರ್ಮ ಪರಿಪಾಲನೆಯು ಪರಿಪೂರ್ಣವಾಗಲೇ ಬೇಕು. ಯಾವ ಜಯ ಸಿದ್ಧಿಯೇ ಆಗಲಿ ಶ್ರೀ ಗುರುವಿನ ಕೃಪಾವಪೆಯಿಂದ ಮಾತ್ರ ಸಾಧ್ಯವಾಗುತ್ತದೆ.

ಶ್ರೀಗುರುಃ— ಮಾನವನು ವಿಶ್ವ ಕುಟುಂಬಿಯಾಗಿ, ವಿಶಾಲ ದೇಹದಲ್ಲಿ ವಾಸಿಸಿ, ಕಾಮದ ಕೆಸರಿನಲ್ಲಿ ಪ್ರೇಮ ಕಮಲವನ್ನು ಬೆಳೆಯಿಸಿ ಜಗದೊಡೆಯ ಪರಮೇಶ್ವರನಿಗೆ ಸಮರ್ಪಿಸಿದರೆ ಅಂದೇ ಜೀವನದ ಗುರಿಯನ್ನು ಸಾಧಿಸಿದಂತಾಗುತ್ತದೆ. ಪುರಾತನರೇ ನಾರಿಯನ್ನು 'ಪ್ರತ್ಯಕ್ಷ ಕಪಿಲಸಿದ್ಧ ಮಲ್ಲಿಕಾರ್ಜುನಾ.' ಎಂದಿದ್ದಾರೆ. ಆದರೆ ನನಗೆ ಮಾತ್ರ ಸ್ತ್ರೀ ಸಂದರ್ಶನವು ಸಗ್ಗದು. ಮತ್ತು ಸ್ತ್ರೀಗೆ ನನ್ನ ದರ್ಶನವನ್ನು ಕೊಡಲು ಮನಸ್ಸು ಒಪ್ಪದು.

ನನ್ನ ಮನದೇಚ್ಛೆಯು ಹಾಗೆ ಇವೆ. ಗರುಡ ಪಾದದ ಗುರುತಿನವರಿಗೆ ಇಲ್ಲವೇ ಗಾರುಡಿಗರಿಗೆ ಮಾತ್ರ ನಾಗರ ಹಾವಿನ ಭಯವಿಲ್ಲ. ಎಂದಿದ್ದರೂ ಒಂದಲ್ಲ ಒಂದು ದಿನ ನಾಗರಹಾವಿನಿಂದ ಮಾತ್ರ ತಪ್ಪದೆ ತೊಂದರೆಯಾಗುವದು ಸತ್ಯ ಸಿದ್ಧವೇ ಸರಿ. ಹಾವಿನ ಹಲ್ಲನ್ನು ಕೀಳದೆ ಹಾವನ್ನು ಆಡಿಸುವಂತಿಲ್ಲ. ಎಂದೋ ಒಂದು ಸಾರಿ ಮೈಮರೆತಾಗ ಹಲ್ಲನ್ನು ಕೀಳಲು ಕೈಹಾಕಿ ಅದರಿಂದ ಸಾವು ಸಾವರಿಸಿಕೊಳ್ಳುತ್ತದೆ. ಅದರ ಗೋಜಿಗೆ ಹೋಗಬೇಡ ಎಂದು ಹೇಳುತ್ತೇನೆ. ನಾನು ಗಾರುಡಿಗನಾಗಿದ್ದೇನೆ. ಆದರಿಂದ ಯಾವ ತೊಂದರೆಯೂ ಇಲ್ಲವೆಂದು, ಅದರ ಸಹಾಯದಿಂದ ನನ್ನ ಉದರ ಪಾಲನೆಯನ್ನು ನೋಡಿಕೊಂಡು ಬಾಳಬೇಕಾಗಿದೆ ಎಂಬ ಬಯಕೆಯು ನಿನ್ನದು. ಗಾರುಡಿಗನಾಗಿದ್ದರೂ ಬಂದ ಒಟ್ಟಿಯ ಬವಣೆಯನ್ನು ಅರಿತು ನಿನ್ನ ಬಾಳಿನ ಗುರಿಯನ್ನು ಎಚ್ಚರಿಕೆಯಿಂದ ನಡೆಯಿಸು. ಎಂತಹ ಅಸಮ ಶೂರರೂ ಕೂಡ ಹೆಂಗಸಿಗೆ ಜೋತು ಬಿದ್ದು ಅನಂತರ ಪಶ್ಚಾತ್ತಾಪ ಪಟ್ಟಿರುವದು ಮನಸ್ಸಿಗೆ ಬರಲಿ. ಸಂಸಾರಿಯಾಗಿದ್ದರೂ ಅಂಟಿ ಅಂಟದಂತೆ, ಅಂಟದೆ ಅಂಟಿದಂತೆ ಜನರ ನೋಟಕ್ಕೆ ನಿಲುಕಿಸು. ಸಂಸಾರ ವ್ಯಾಪ್ತಿಯೇ ಬಾಳ ಗುರಿ ಸಿದ್ಧಿಯಲ್ಲ. ನೀನು ಲಿಂಗ ಪತಿ ಶರಣ ಸತಿ ಎಂಬುದನ್ನು ನೆನಪಿನಲ್ಲಿಟ್ಟು ನಡೆ. ಬ್ರಹ್ಮಾನಂದವನ್ನು ನೀಡಲು ಇದು ಸಹಾಯವಾಗುತ್ತದೆ. ಅನಿತ್ಯದ ವಿಚಾರವು ಮಂಪಟ್ಟಾಗಿರಲಿ. ಜಳ್ಳನ್ನೇ ತಿರುಳೆಂದು ಮರುಳಾಗಬೇಡ.

ಅಮೇಧ್ಯದ ಹಡಿಕೆ, ಮೂತ್ರದ ಕುಡಿಕೆ, ಎಲುವಿನ ಕಡಿಕೆ, ಕೀವಿನಗಡಿಗೆ ಒಡಲವಿಡಿದು ನಂಬಿ ಕೆಡದಿರು. ಚೆನ್ನಮಲ್ಲಿಕಾರ್ಜುನನ ಅರಿಮರುಳೇ.

ಕೈವಲ್ಯ ಕಲ್ಪಸಾಧನೆಯನ್ನಾಗಿ ಸಂಸಾರವು ಸಾಗುವಂತೆ ಮಾಡು. ಸಂಸಾರವನ್ನು ಸಾಧನೆಂದು ನಂಬದೆ, ಹೆಂಗಸನ್ನೇ ಹೊನ್ನೆನ್ನದೆ ಜೀವನವನ್ನು ಸಾಗಿಸು.

ಹೊನ್ನು ಮಾಯೆಯೆಂಬರು ಹೊನ್ನು ಮಾಯೆಯಲ್ಲ
ಹೆಣ್ಣು ಮಾಯೆಯೆಂಬರು ಮಣ್ಣು ಮಾಯೆಯಲ್ಲ.
ಮಣ್ಣು ಮಾಯೆಯೆಂಬರು ಮಣ್ಣು ಮಾಯೆಯಲ್ಲ
ಮನದ ಮುಂದಣ ಆಸೆಯೇ ಮಾಯೆ ಕಾಣಾ ಗುಹೇಶ್ವರಾ.

ಮಿತಬಯಕೆಗಳಿಂದ ತೃಪ್ತಿಪಡು. ಐಹಿಕ ಆಮುಷ್ಮಿಕ ಜೀವನಗುರಿಯನ್ನು ಸಲೆಸಾಧಿಸು. ಆಹಾರ ವಿಹಾರವು ಸಾತ್ವಿಕವಾಗಿರಲಿ. ಇಂದ್ರಿಯದ

ಚಪಲಕ್ಕೆ ಕಡಿವಾಣಹಾಕು. ಹತೋಟಿಯಿಂದ ಹಾಯುವ ಕುದುರೆಯು ತನಗೂ, ಪರರಿಗೂ ಪ್ರಯೋಜನಕಾರಿಯಾಗಿರುತ್ತದೆ. ಇಂದ್ರಿಯದ ಹತೋಟಿಗೆ ಪರಮಸಾಧನವು ಲಿಂಗನಿಷ್ಠೆಯಾಗಿರುತ್ತದೆ ಎಂಬುದನ್ನು ಅರಿತು ಆಚರಿಸಿದರೆ ಮರ್ಕಟ ಮನಸ್ಸು ಅಚಲಿತವಾಗಿ ನಿಲ್ಲುತ್ತದೆ. ಬಂದ ಬಟ್ಟೆಯ ಬಗೆಯನ್ನು ತಿಳಿದು ಭವನ ಭಜಿಸು. ಭವರೋಗ ವೈದ್ಯನ ಕಟ್ಟಪ್ಪಣೆಯಂತೆ ನಡೆದರೆ ಯಾವ ರೋಗವೂ ಇರುವದಿಲ್ಲ. ಪುರಾತನರ ಸೂಳ್ನುಡಿಯು ನಮ್ಮ ಜೀವನವನ್ನು ಪಟುತ್ವ ಮಾಡದೆ ಇರದು. ಹಿರಿಯರ ಪಯಣದ ಹಾದಿಯೇ ನಮ್ಮನ್ನು ಸರಿಯಾದ ಮಾರ್ಗದಲ್ಲಿ ಹೋಗಲು ಅವಕಾಶವನ್ನು ಕೊಡುತ್ತದೆ. ಜೀವನ ಬೇಸಾಯದಿಂದಲೇ ಕೈವಲ್ಯಕಲ್ಪವಲ್ಲರಿಯು.

ತನುವ ತೋಂಟವ ಮಾಡಿ ಮನವ ಗುದ್ದಲಿಯ ಮಾಡಿ ಅಗೆದು ಕಳೆದೆನಯ್ಯ ಭ್ರಾಂತಿಯ ಬೇರ ಒಡೆದು ಸಂಸಾರದ ಹೆಂಟೆಯ ಬಗೆದು ಬಿತ್ತಿದೆನಯ್ಯ ಬ್ರಹ್ಮಬೀಜವ. ಅಖಂಡಲ ಮಂಡಲವೆಂಬ ಬಾವಿ ಪವನವೇ ರಾಟಾಳ, ಸುಷುಮ್ನದಿಂದುದಕವ ತಿದ್ದಿ ಬಸವಗಳೈವರು ಹಸಗೆಡಿಸಿಹವೆಂದು ಸಮತೆ ಸೈರಣೆಯೆಂಬ ಬೇಲಿಯನಿಕ್ಕಿ ಆವಾಗಳೂ ಈ ತೋಂಟದಲ್ಲಿ ಜಾಗರವಿದ್ದು ಸಸಿಯ ಸಲಹಿದೆ. ಈಗ ಪ್ರಪಂಚ ಅಟಮಟ, ಕಟಮಟ, ಅನ್ಯಾಯ, ಅಸೂಯೆ, ಅಹಂಕಾರ, ಅನಾದರ, ಆಲಸ್ಯ— ಇವುಗಳತ್ತ ಗಮನವನ್ನು ಕೊಟ್ಟು ಹಾಯುತ್ತಿದೆ. ಏನೇ ಆದರೂ ಸತ್ಯಕೆ ನಿತ್ಯವೇ ಆಶ್ರಯ. ಬರಿಯದಾಗಿ ಬಂದಂಥವರು ಇಳೆ ಬಿಟ್ಟು ಹೋಗುವ ವೇಳೆಯಲ್ಲಿ ಹೊರೆಯನ್ನು ಹೊತ್ತು ಹೋಗಬೇಕಾಗುತ್ತದೆ. ಪುಣ್ಯದ ಹೊರೆಯನ್ನು ಹೊತ್ತುಕೊಂಡು ಹೋಗಲು, ಸಾಧನೆಯನ್ನು ಮಾಡು ಭಕ್ತಿಯೆಂಬ ಬೇರು ಭದ್ರವಾಗಿರಲಿ. ಬೇರು ಭದ್ರವಾಗಿದ್ದರೆ ವೃಕ್ಷಕ್ಕೆ ತೊಂದರೆಯಿರುವುದಿಲ್ಲ. ಸ್ವಾಮಿಯವರ ಉಪದೇಶವಾಣಿಯನ್ನು ಕೇಳಿ ಅದೇ ರಾತ್ರಿ ಅಲ್ಲಿಯೇ ನಿಂತು ರಾತ್ರಿಯ ಊಟವನ್ನು ಮುಗಿಸಿದ ಮೇಲೆ ಸಂದೇಹ ಪರಿಹಾರಕ್ಕೆ ಸಕಲರೂ ಸರದಿಯ ಪ್ರಕಾರ ಸ್ವಾಮಿಗಳಲ್ಲಿ ಪ್ರಶ್ನೆಗಳನ್ನು ಕೇಳಿ, ಸದುತ್ತರವು ಸಿಕ್ಕಿ, ಶ್ರೀಗುರು ವಚನೋಪದೇಶವನಾಲಿಸಿದಾಗಲೆ ನರರಿಗೆ ಮುಕುತಿ ಎಂದು ನಿಜಗುಣರು ನುಡಿದಿದ್ದುದು ಸತ್ಯವೇ ಸರಿ ಎನಿಸಿತು. ಮಲಗುವ ಮೊದಲು ಸ್ವಾಮಿಯವರಿಗೆ ದೀರ್ಘದಂಡ ನಮಸ್ಕಾರ ಮಾಡಿದೆವು.

ಒಳಗೆ ಶೋಧಿಸಿ, ಹೊರಗೆ ಶುದ್ಧವಿಸಿ, ಒಳಹೊರಗೆಂಬ ಶಂಕೆಯ ಕಳೆದು ಸ್ಫಟಿಕದ ಶಲಾಕೆಯಂತೆ ತಳವೆಳಗು ಮಾಡಿ, ಸುಕ್ಷೇತ್ರವನರಿದು ಬೀಜವ ಬಿತ್ತುವಂತೆ ಶಿಷ್ಯನ ಸರ್ವಪ್ರಪಂಚ ನಿವೃತ್ತಿಯಂ ಮಾಡಿ ನಿಜೋಪದೇಶವನ್ನಿತ್ತು ಆ ಶಿಷ್ಯನ ನಿಜದಾದಿಯನ್ನೈದಿಸುವನೀಗ ಜ್ಞಾನಗುರು. ಆ ಸಹಜ ಗುರುವೀಗ ಜಗದಾರಾಧ್ಯರು. ಅವರ ಶ್ರೀಪಾದಕ್ಕೆ ನಮೋ ನಮೋ ಎಂಬೆ ಕಾಣಾ ಚೆನ್ನಮಲ್ಲಿಕಾರ್ಜುನಾ.

ಶ್ರೀ ಸ್ವಾಮಿಯವರ ಪುಣ್ಯ ಸಂದರ್ಶನದಿಂದ, ಪಾವನಾನುಗ್ರಹ ನುಡಿಯಿಂದ ನೊಂದ ಎದೆಗೆ ತಂಪಿನ ಸುಧೆಯು ಲಭಿಸಿತು. ಅಳಲಿ ಬಳಲಿಕೆಗೊಂಡ ಮನವು ಸುಮುಪ್ತ ಪ್ರಗಾಢ ಶಾಂತಿಯಲ್ಲಿ ತಲ್ಲೀನವಾಯಿತು. ಲೌಕಿಕ ವ್ಯವಹಾರದಿಂದ ಅಶುದ್ಧಿಯಾಗಿದ್ದ ಪಂಚೇಂದ್ರಿಯಗಳು ಪರಿಶುದ್ಧವಾದವು, ಕಂದಿದ ಕಾಯವು ಕೋಮಲವಾಯಿತು.

> ಕೋಟ್ಯಾನುಕೋಟಿ ಜಪವ ಮಾಡಿ ಕೋಟಲೆಗೊಳ್ಳಲದೇಕೆ ?
> ಕಿಂಚಿತ್ತು ಗೀತ ಒಂದನಂತ ಕೋಟಿ ಜಪ. ಜಪವೆಂಬುದೇಕೆ
> ಮನವೇ ?

ಕೂಡಲ ಸಂಗನ ಶರಣರ ಕಂಡು ಆಡಿ ಹಾಡಿ ಬದುಕೆಲೆ ಮನವೇ ? ಜಪವನ್ನು ಮಾಡಲು ಏಕಾಗ್ರತೆಯ ಚಿತ್ತವು ನಮಗೆ ಇಲ್ಲವು. ಕೊನೆಯ ಪಕ್ಷ ಇಂತಹ ಶರಣರನ್ನಾದರೂ ಸಂದರ್ಶಿಸಿ, ಮಾತುಕತೆಗಳನ್ನು ನಡೆಯಿಸಿ ಹಿತೋಪದೇಶವನ್ನು ಕಿವಿಯಾರೆ ಕೇಳಿ ಪುಣ್ಯ ಪುನೀತರಾಗದೆ ಇದ್ದರೆ ನಾವು ಎಂತಹ ಕ್ಷುಲ್ಲಕ ಮಾನವರಾಗುತ್ತೇವೆ. ಈ ಬಗೆಯ ಮಹಾ ಶರಣರ ನಿವಾಸವೇ ಪುಣ್ಯ ಕ್ಷೇತ್ರವು ಎಂದು ಆ ಕ್ಷೇತ್ರದಿಂದ ಹೆಜ್ಜೆ ಹಾಕಿದೆವು. ಗದ್ದಲ, ಸಂಶಯ, ಆತುರ, ಅಸಹನೆ ಯಾದಿಯು ತುಂಬಿ ತುಳುಕುತ್ತಿರುವ ಇಂದಿನ ಜನಜೀವನದ ಮಧ್ಯದಲ್ಲಿ ಶಿವಯೋಗಿಗಳ ಅವತಾರವು ಸಾಧ್ಯವೇ ಎನ್ನಬಹುದು. ಭಾರತೀಯ ಆಧ್ಯಾತ್ಮಿಕ ಸಂಸ್ಕೃತಿಯನ್ನೂ, ಇತಿಹಾಸವನ್ನೂ ಒಳಹೊಕ್ಕು ನೋಡಿದರೆ ಈ ಸಂಶಯವು ಸರಕ್ಕನೆ ಜಾರಿ ಹೋಗದೆ ಇರದು! ಹಲವು ಪ್ರಕಾರಗಳ ಹಾಗೂ ಪ್ರಣಾಳಿಕೆಗಳ ಮೂಲಕ ವಿಭೂತಿತ್ವವು ದಿನವೂ ಪ್ರಕಟಗೊಳ್ಳುತ್ತಿರುತ್ತದೆ. ಎಂದೋ ಒಂದು ಬಾರಿ ಅದು ನಮ್ಮ ದೃಷ್ಟಿಗೆ ಗೋಚರನಾಗುತ್ತದೆ. ನಮ್ಮ ಅಪರಿಪೂರ್ಣ ದೃಷ್ಟಿಗೆ ಕಾಣದ

ಮಾತ್ರಕ್ಕೆ ಅದು ಇಲ್ಲ ಎನ್ನುವಂತಿಲ್ಲ. ಆದ ಕಾರಣವೇ ಸ್ವಾಮಿ ವಿವೇಕಾನಂದರು "ದಿನವೂ ಎಷ್ಟೋ ಮಂದಿ ಬುದ್ಧರಾಗಿ ಹೋಗುತ್ತಿದ್ದಾರೆ. ನಾವು ನೋಡಿರುವುದು ಒಬ್ಬ ಬುದ್ಧನನ್ನು ಮಾತ್ರ." ಎಂದು ಹೇಳಿದ್ದು ಇವರ ಸಂದರ್ಶನವು ಮುಗಿದ ಮೇಲೆ ನನ್ನ ನೆನಪಿಗೆ ಬಂದು, ಸಾಧುಸಂತರು, ಭಾಗವತ ದಾಸರು, ಶರಣ ಶಿವಯೋಗಿಗಳು ಆಗಾಗ್ಗೆ ಜನಿಸಿ, ಜನದ ಮಧ್ಯದಲ್ಲಿಯೇ ಇರುವುದು ಅನುಭವಕ್ಕೆ ಬಂದಿತು. ಸ್ವಸ್ಥಾನಕ್ಕೆ ಬರುತ್ತಿದ್ದಂತೆಯೇ ದಿವ್ಯ ನೆನಹುಗಳು ತಂಬೆಲರು ಸೂಸುತ್ತಿರುವುದು. ಪಶ್ಚಿಮಾದ್ರಿಗೆ ಮಹಾ ಮಾರ್ತಾಂಡನ ಆಗಮನವು ಬೆಳ್ಳನೆಯ ಬೆಳಕು ಬರಬರುತ್ತ ಕಡಿಮೆಯಾಗುತ್ತಿರಲು ಹಕ್ಕಿಗಳ ಚಿಲಿಪಿಲಿ ನಾದವು ನಿರ್ನಾಮವಾಗುತ್ತಲಿತ್ತು. ಮಧುರಮಯ ರಾಗದ ಆಲಾಪನೆಯು ಅಂತೆಯೇ ಕೇಳಿಬರುತ್ತಿತ್ತು. ನಿಸರ್ಗ ಸೌಂದರ್ಯ ರೂಪ ರಾಶಿಯಿಂದ ಮುಗ್ಧ ಮೋಹಿತರಾದೆವು. ಮನೋಹರ ಮನರಂಜಿತ ಬೆಳದಿಂಗಳು ಹೊರಜಗತ್ತಿಗೆ ಇಳಿಯುವಂತೆ ಆಗುತ್ತಲಿತ್ತು.

"ಸಾಯಂಕಾಲೇ ವನಾಂತ ಕುಸುಮಿತ ಸುಮಯೋ ಸೈಕತೇ ಚಂದ್ರಿಕಾಯಾಂ"

---

# ಮಾಡಬಾರದ್ದು ಮಾಡಿದರೆ ಆಗಬಾರದ್ದು ಆಗುವದು.

[ಲೇಖಕರುಃ- ಶ್ರೀಯುತ ಗುರುಸಿದ್ದಪ್ಪ ಬಸವಪ್ಪ ಬಳ್ಳಾರಿ, ಗದಗ]

'ಶಿವಾನುಭವ' ಪತ್ರಿಕೆಯ ಸಪ್ಟಂಬರ ಸಂಚಿಕೆಯಲ್ಲಿ 'ಧಾರ್ಮಿಕ ಮೂಢ ನಂಬಿಗೆ' ಎಂಬ ಲೇಖವೊಂದು ಪ್ರಕಟವಾಗಿದೆ. ಆ ಲೇಖದ ಕೆಳಗೆ ಸಂಪಾದಕರು ಮಾಡಿದ ಸೂಚನೆಯಲ್ಲಿ 'ಶಿವಾನುಭವ'ವು ಯಾವ ಪಕ್ಷ ಪಂಗಡಕ್ಕೆ ಸಂಬಂಧಿಸಿದ ಪತ್ರಿಕೆಯಾಗಿರದೆ ಸತ್ಯಾನ್ವೇಷಣವೇ ಅದರ ಮುಖ್ಯ ಧ್ಯೇಯವಾಗಿರುತ್ತದೆ. ಮೇಲ್ಕಂಡ ಲೇಖದಲ್ಲಿಯ ವಿಚಾರಗಳಿಗೆ ಯಾರಿಗಾದರೂ ಸಮ್ಮತಿಯು ಇರದಿದ್ದರೆ ಅವರು ತಮ್ಮ ಅಭಿಪ್ರಾಯವನ್ನು ಕುರಿತು ತಮ್ಮ ಲೇಖವನ್ನು ಕಳಿಸಿದಲ್ಲಿ ಅದಕ್ಕೆ ನಾವು ಪತ್ರಿಕೆಯಲ್ಲಿ ಸ್ಥಳ ಕೊಡುವೆವು." ಎಂದಿದೆ.

ಈ ಲೇಖದ ಬಗ್ಗೆ ಹೇಳಬೇಕೆಂದರೆ, ಈ ಲೇಖವು ಕೃಶಾನುವಿನಂತೆ ಗುರುವರ್ಗದಲ್ಲಿಯ ಬರೇ ದೋಷಗಳನ್ನೇ ಎತ್ತಿ ತೋರಿಸುವದಾಗಿದೆ. ವಿಶ್ವಾಸುವಿನಂತೆ ಗುಣಗಳನ್ನೂ ಹೇಳಬೇಕಾಗಿತ್ತು; ಹೇಳಿಲ್ಲ. ಇನ್ನುಳಿದ ಪಂಗಡದವರಾದರೂ 'ಶರಣ ಮಾರ್ಗ'ದಂತೆ ನಡೆಯುತ್ತಿರುವರೇ ? 'ತಮಗೊಂದು ಬಟ್ಟೆ, ಶಾಸ್ತ್ರಕ್ಕೊಂದು ಬಟ್ಟೆ' ಎಂಬಂತೆ ಸಮಾಜದ ನಡವಳಿಕೆ ನಡೆವಿಲ್ಲವೇ ? ಹೀಗಿದೆಯೆಂದು ಇಡೀ ಸಮಾಜವನ್ನೇ ಹೀಗೆಳೆಯಬೇಕೆ ?

ನಮ್ಮ ಸಮಾಜದ ಆಚಾರ ವಿಚಾರಗಳಲ್ಲಿ ಈಗ ಏನಾದರೂ ಅಲ್ಪ ಸ್ವಲ್ಪ ಕ್ರಾಂತಿಯಾಗಿದ್ದರೆ ಅದು ಹಿರಿಯರಾದ ಹಳಕಟ್ಟಿಯವರ ಅವಿಶ್ರಾಂತ ಪರಿಶ್ರಮದ ಫಲವಾಗಿ. ಪ್ರಕಟವಾದ ಶರಣ ಸಾಹಿತ್ಯದ ಪ್ರಭಾವದಿಂದ, ಅದರ ಪ್ರಚಾರದಿಂದಲ್ಲದೆ, ಇಂತಹ ಲೇಖನಗಳಿಂದಲ್ಲವೆಂದು ಹೇಳಬಲ್ಲೆ. ಮುಂದಾದರೂ ಸಮಾಜದಲ್ಲಿ ನವಚೈತನ್ಯವುಂಟಾಗಬೇಕಾದರೆ ಈ ಶರಣ ಸಾಹಿತ್ಯದಿಂದಲೇ ಆಗಬೇಕು. ಇಂಥ ಸರಳ ಸಮಂಜಸ ಸರ್ವಸಮ್ಮತ ಮಾರ್ಗವನ್ನು ಬಿಟ್ಟು ಕೊಟ್ಟು 'ಶಿವಾನುಭವ'ದಲ್ಲಿ ಇಂಥ ಲೇಖಗಳಿಗೆ ಎಡೆ ಕೊಟ್ಟಿದ್ದಾದರೆ ಅದೊಂದು ವಾದದ ಕಣವಾಗಿ, ಒಮ್ಮನವಾಗದೆ ಇಮ್ಮನವಾಗಿ ' ಎಲ್ಲಿದೆಯೋ ಸಂಗಯ್ಯ ಅಂದರೆ ಇದ್ದಲ್ಲೇ ಇರುವೆನು ' ಎಂಬಂತೆ

ಸಮಾಜದ ಸ್ಥಿತಿಯಾಗಲಿಕ್ಕಿಲ್ಲವೇ ? ಅದಕಾಗಿ 'ಶಿವಾನುಭವ'ವು ಹಿಂದಿನಂತೆ ಮುಂದಾದರೂ ಪ್ರಾಚೀನ ಪ್ರಕಟನೆಗಾಗಿಯೇ ಮುಖ್ಯವಾಗಿ ಮೀಸಲಾಗಿರಬೇಕೆಂದು ನನ್ನ ಅಭಿಪ್ರಾಯ.

ಈ ಶರಣ ಸಾಹಿತ್ಯವು ಜೀವಂತವಿರುವವರೆಗೆ ಜಾತಿವಾದಿಗಳಿಗೆ ಯಾರೂ ಬೆದರಬೇಕಾಗಿಲ್ಲ. ಈ ಜಾತಿಯ ಭೂತವು ಇಂಥ ಖಂಡನಾತ್ಮಕ ಲೇಖಗಳಿಂದ ಹೆದರಿ ಹೋದೀತೆಂದು ಹೇಳಲು ಬರುವಂತಿಲ್ಲ. ಬರೀ ಟೀಕಿಸುವದರಿಂದ ಅದರ ಶಕ್ತಿಯು ದ್ವಿಗುಣಿತವಾಗುವದು. ಈ ವಾದವು ಹಿಂದೆಯೂ ಇತ್ತು. ಇಂದೂ ಅದೆ. ಮುಂದೆಯೂ ಉಳಿಯುವದು. ಇಲ್ಲಿ ನೋಡಿರಿ.

"ಜಾತಿವಿಡಿದು ಜಂಗಮವ ಮಾಡಬೇಕೆಂಬ ಪಾತಕರು ನೀವು ಕೇಳಿರೋ ಜಾತಿ ಘನವೋ ? ಗುರುದೀಕ್ಷೆ ಘನವೋ ? ಜಾತಿ ಘನವಾದ ಬಳಿಕ ಆ ಜಾತಿಯೇ ಗುರುವಾಗಿರಬೇಕಲ್ಲದೆ ಗುರುದೀಕ್ಷೆ ಪಡೆದು ಗುರುಕರಜಾತರಾಗಿ ಜಾತಕವ ಕಳೆದು ಪುನರ್ಜಾತರಾದೆವೆಂಬುದ ಏತಕ್ಕೆ ಬೊಗಳುವಿರೋ ? ಜಾತಿವಿಡಿದು ಕಳೆಯಿತ್ತೆ ಜಾತಿ ತಮವು ? ಅಜಾತಂಗೆ ಅವುದು ಕುಲ ? ಆವ ಕುಲವಾದಡಡೇನು ದೇವನೊಲಿದಾತನೇ ಕುಲಜನು"

—ಶ್ರೀ ಚನ್ನಬಸವಣ್ಣನವರು

ಈ ವಚನದಿಂದ ಕಂಡುಬರುವದೇನು ? ಆಗ ಕೂಡ ಇಂಥ ಜಾತಿಯ ಬಡಿದಾಟವಿದ್ದಿತಂತಲ್ಲವೇ !

ಇನ್ನು ಈ ಮಠಗಳಿಗೆ ಬರೀ ಅಯ್ಯಗಳೇ ಅಧಿಕಾರಿಗಳಾಗುತ್ತಿರುವದೇಕೆಂದು ಲೇಖಕರ ಪ್ರಶ್ನೆ. ಇಂಥ ಮಠಗಳಿಗೆ ಸ್ವಾಮಿಗಳನ್ನು ಆರಿಸುವವರು ಯಾರು ? ಭಕ್ತರಲ್ಲವೇ ? ಶಾಸನ ಸಭೆಗಳಿಗೆ ನಾವೇ ನಮ್ಮ ಪ್ರತಿನಿಧಿಗಳನ್ನು ವಿಚಾರಿಸದೆ ಆರಿಸಿ ಕೊಟ್ಟು— ತಿರುಗಿ ನಾವೇ ಅವರನ್ನು ಟೀಕಿಸುತ್ತಿರುವಂತೆ— ಈ ಸ್ವಾಮಿಗಳನ್ನು ಭಕ್ತರೇ ಆರಿಸಿ ತಿರುಗಿ ಅವರನ್ನು ಟೀಕಿಸುವದರಲ್ಲಿ ಯಾರದು ತಪ್ಪು ? ಭಕ್ತರಿಗೆ ಸಮ್ಮತವಲ್ಲದ ಯಾವ ವಟುವನ್ನು ಯಾವ ಸ್ವಾಮಿಯೂ ಬಲಾತ್ಕಾರದಿಂದ ಪೀಠದ ಮೇಲೆ ತಂದು ಕುಳ್ಳಿರಿಸಲಾರರು. ಈಗಂತೂ ಎಲ್ಲ ಮಠಗಳು ಸರಕಾರದಿಂದ ನೇಮಿಸಲ್ಪಟ್ಟ ಚಾರಿಟಿ ಕಮಿಶನರರ ಮೇಲ್ವಿಚಾರಣೆಗೊಳಪಟ್ಟು ಮಠಗಳೆಲ್ಲ ಆಯಾ ಸಮಾಜದವರ ಸಾರ್ವಜನಿಕ ಸೊತ್ತೆಂದು ಸಾರಲ್ಪಟ್ಟಿವೆ. ಧರ್ಮಾಧಿಕಾರಿಗಳು

ಅನಾಚಾರದಿಂದ ನಡೆದಲ್ಲಿ— ಮಠದ ಹಣದ ಅಪವ್ಯಯ ಮಾಡಿದಲ್ಲಿ ಅಂಥವರನ್ನು ಪೀಠದಿಂದ ಕೆಳಗಿಳಿಸುವ ಅಧಿಕಾರವು ಭಕ್ತರಿಗೆ ಯಾವಾಗಲೂ ಅದೆ. ಅದನ್ನು ಭಕ್ತರು ಸರಿಯಾಗಿ ತಿಳಿದುಕೊಂಡು ಸಮಯುವರಿತು ಸದುಪಯೋಗ ಮಾಡಿಕೊಳ್ಳದಿದ್ದರೆ ಆದಾರ ತಪ್ಪು ?

ತಪ್ಪು ಯಾರಲ್ಲಿಲ್ಲ ? ಪ್ರತಿಯೊಂದರಲ್ಲಿಯೂ, ಪ್ರತಿಯೊಬ್ಬರಲ್ಲಿಯೂ ಚಲೋ, ಕೆಟ್ಟ ಗುಣಗಳು ಇದ್ದೇ ಇರುವವು. ಕೆಟ್ಟದ್ದನ್ನು ಬೊಟ್ಟಿಟ್ಟು ತೋರಿಸಿ ಇಡೀ ಮಠಾಧಿಪತಿಗಳನ್ನೆಲ್ಲ ಒಂದೇ ಪಂಕ್ತಿಗೆಳೆಯುವದು ಸರ್ವಸಮ್ಮತವಲ್ಲ. ನಮ್ಮ ಸಮಾಜದಲ್ಲಿಯು ಎಷ್ಟೋ ಮಂದಿ ಸ್ವಾಮಿಗಳು ವಿದ್ಯಾಪ್ರಸಾರಕ್ಕಾಗಿ ಬಹು ಮುಖವಾಗಿ ಶ್ರಮಿಸಿದ್ದಾರೆ, ಶ್ರಮಿಸುತ್ತಿದ್ದಾರೆ. ಅವರಿಂದ ತೆರೆಯಲ್ಪಟ್ಟ ಶಾಲೆ ಕಾಲೇಜುಗಳಲ್ಲಿ, ಪ್ರಖ್ಯಾತ ಪ್ರಸಾದ ನಿಲಯಗಳಲ್ಲಿ ಬರೀ ಅಯ್ಯಗಳ ವಿದ್ಯಾರ್ಥಿಗಳೇ ಇರುವರೇ ? ಭಕ್ತರ ವಿದ್ಯಾರ್ಥಿಗಳೂ ಇರುವರೇ ? ಯಾರು ಅಧಿಕ ಸಂಖ್ಯೆಯಲ್ಲಿರುವರು ? ಇವುಗಳ ಪ್ರಯೋಜನವೂ ಯಾರಿಗೆ ಹೆಚ್ಚಾಗಿ ತಟ್ಟಿದೆ ? ತಟ್ಟುತ್ತಿದೆ ? ಟೀಕಿಸುವದು ಸುಲಭ. ಕೆಲಸ ಮಾಡಿ ತೋರಿಸುವದು ಕಠಿಣವಲ್ಲವೇ ?

ನಮ್ಮ ಸಮಾಜದಲ್ಲಿ ಮೇಲೆ ಹೇಳಿದ ದೋಷಗಳನ್ನು ಎತ್ತಿ ತೋರಿಸಲಿಕ್ಕೆ "ಗದುಗಿನಲ್ಲಿ ಶರಣ ಸೇವಕ ಸಂಘ ಹಾಗು ಶ್ರೀ ಶಿವಾನಂದ ಮಠ; ಧಾರವಾಡದಲ್ಲಿ ನವಕಲ್ಯಾಣಮಠ, ಹುಬ್ಬಳ್ಳಿಯಲ್ಲಿ ಸಿದ್ಧಾರೂಢರ ಮಠ ಮೊದಲಾದವುಗಳಲ್ಲಿ ಶರಣರ ತತ್ವಗಳನ್ನೇ ಹೆಚ್ಚಾಗಿ ಪ್ರಚಾರ ಮಾಡುತ್ತಿರುವರು. ಅಲ್ಲದೆ ಗುರುವರ್ಗದವರು ಭಕ್ತವರ್ಗಕ್ಕೆ ಮಾಡುವ ಅನ್ಯಾಯಗಳನ್ನು ಖಡಾಖಡಿಯಾಗಿ ಪ್ರಕಟಿಸುವರು, ಖಂಡಿಸುವರು. ಈಗ ಇದರಿಂದ ಜನರಲ್ಲಿ ಎಷ್ಟೋ ಜಾಗ್ರತಿಯಾಗಿರುವದು ಕಂಡುಬರುವದು. ಇವರು ಪ್ರವಚನ, ಪ್ರಕಟನೆ ಪುಸ್ತಕಗಳ ಮುಖಾಂತರ ಈ ಕಾರ್ಯ ಮಾಡುತ್ತಿರುವದು ಶ್ಲಾಘನೀಯವೇ ಸರಿ" ಎಂದು ಲೇಖಕರು ಹೇಳುತ್ತಾರೆ.

ಲೇಖಕರ ಅಂಬೋಣದಂತೆ ಈ ಮಠದ ಸ್ವಾಮಿಗಳ ವಿರುದ್ಧವಾಗಿಯೇ ಪ್ರಚಾರ ಮಾಡುವ ಉದ್ದೇಶದಿಂದ ಮೇಲ್ಕಂಡ ಸಂಸ್ಥೆಗಳು ಕೆಲಸ ಮಾಡುತ್ತಿದ್ದರೆ ನಿಜವಾಗಿಯೂ ಖಂಡನೀಯವಾಗಿದೆ. ಇಲ್ಲಿ ಈ ಮೂರು ಮಠಗಳ ಹೆಸರು ತೆಗೆದುಕೊಂಡದ್ದು ಅನಾವಶ್ಯಕವಾಗಿದೆ. ಕೆಲ ವಿಷಯಗಳಲ್ಲಿ ಮತಭೇದವಿದ್ದರೂ ನವಕಲ್ಯಾಣಮಠದ ಸ್ವಾಮಿಗಳು ತಮ್ಮ ಅಗಾಧ

ವಾದ ಪಾಂಡಿತ್ಯದಿಂದ ಪರಮತದವರನ್ನೂ ತಲೆದೂಗಿಸಿ ಬೆಳಗುತ್ತಿದ್ದಾರೆ. ಗದಗಿನ ಶಿವಾನಂದ ಮಠದ ಈಗಿನ ಸ್ವಾಮಿಗಳು ಪಂಡಿತರಿದ್ದಾರೆ. ಅಭಿಪ್ರಾಯ ಭೇದವಾದರೂ, ಗುಣಕ್ಕೆ ಭೇದವಿಲ್ಲವಷ್ಟೇ? ಸಿದ್ಧಾರೂಢರ ಮಠವು ವೀರಶೈವರ ಮಠವೇ? ಅಲ್ಲಿ ಎಷ್ಟರಮಟ್ಟಿಗೆ ವೀರಶೈವರ ಆಚಾರ ವಿಚಾರಗಳು ನಡೆಯುತ್ತಿವೆ? ಲೇಖಕರು ಇವುಗಳ ಹೆಸರೆತ್ತಿದ್ದರಿಂದ ಅನಿವಾರ್ಯವಾಗಿ ಇಲ್ಲಿ ಲೇಖಕರಿಗೊಂದು ಪ್ರಶ್ನೆ ಕೇಳಬೇಕಾಗಿ ಬಂದುದಕ್ಕೆ ವಿಷಾದವೆನಿಸುತ್ತದೆ. ಇದಕ್ಕೆ ಕಾರಣರು ಹೊಣೆಗಾರರು ಲೇಖಕರು.

ಸಮಾಜದ ಬಂಧುರತೆಗಾಗಿ ಸಂಸ್ಕೃತಿ ಸಾಂಪ್ರದಾಯಗಳನ್ನು ಕಾಪಾಡಬೇಕಾಗಿಲ್ಲವೇ? ಜ್ಞಾನದೇವಾದಿಗಳು ಕರ್ಮಠ ವೈದಿಕರು ತಮ್ಮ ಉಪನಯನ ಮಾಡಲು ತಿರಸ್ಕರಿಸದಾಗ್ಗೆ, ನಿವೃತ್ತಿನಾಥ ಮೊದಲಾದವರು ಉಪನಯನ ಸಂಸ್ಕಾರವನ್ನೇ ಬಿಟ್ಟುಕೊಡಲು ಸಲಹೆ ಕೊಟ್ಟರೂ, ಜ್ಞಾನದೇವಾದಿಗಳು ತಾವು ಸ್ವಯಂ ಸಮರ್ಥರೂ ಪರಿಪೂರ್ಣ ಜ್ಞಾನಿಗಳಿದ್ದರೂ ಅದಕ್ಕೊಪ್ಪದೆ, ಸಮಾಜದ ಕಟ್ಟು ಮುರಿಯಬಾರದೆಂದು ಸ್ವೇಚ್ಛಾಚಾರದಿಂದ ಸಮಾಜದಲ್ಲಿ ಅನಾಯಕತ್ವವುಂಟಾಗಿ ಸಮಾಜವು ಶಿಥಿಲವಾಗುವದೆಂದು ಹೇಳಿ ಜ್ಞಾನದೇವನು ತನ್ನ ಕರ್ತೃತ್ವ ಶಕ್ತಿಯಿಂದ ವಿರೋಧಿಗಳಾದ ಕರ್ಮಠ ವೈದಿಕರನ್ನೆಲ್ಲ ಒಪ್ಪಿಸಿ ಅವರಿಂದಲೇ ಉಪನಯನ ಸಂಸ್ಕಾರ ಹೊಂದಿದರೆಂದು ಅವರ ಚರಿತ್ರೆಯಿಂದ ತಿಳಿಯುವದಿಲ್ಲವೇ? ಲೇಖಕರು ಸೂಚಿಸಿದವರಲ್ಲಿ ಯಾರು ಈ ಸೂತ್ರದಂತೆ ನಡಕೊಂಡಿರುವರು? ಯಾರಿಗೆ ಯಾರಿಂದ ಎಂದು ಅಧಿಕಾರವಾಯಿತು? ಸಮಾಜದಲ್ಲಿಯ ಪಂಗಡಗಳಲ್ಲಿ ಇವರವು ಹೊಸ ಪಂಗಡಗಳಾಗಿರುವದಿಲ್ಲವೇ? ಇದಕ್ಕೆ ಇವರ ಸಮಾಧಾನವೇನು?

ಲೇಖಕರ ನಚ್ಚಿನ–ಮೆಚ್ಚಿನ 'ಶರಣಸೇವಕಸಂಘ'ದ ಬಗ್ಗೆ ಲೇಖಕರಿಗೇನು ವಿಶೇಷ ಗೊತ್ತಿದೆ? ಬರಡಿ–ಬಾಗೂರ ಮತ್ತು ಏ. ಎಮ್. ಪಾಟೀಲ ಮಾಸ್ತರ ಈ ತ್ರಿಮೂರ್ತಿಗಳದೊಂದು ಗುಂಪು. 'ಬ. ಬಾ. ಆ್ಯಂಡ ಕಂಪನಿ' ಎಂಬುದು ಇದರ ಸಂಕ್ಷಿಪ್ತ ಹೆಸರು. ಈ ತಮ್ಮ ಗುಂಪಿಗೆ 'ಶರಣ ಸೇವಕ ಸಂಘ'ವೆಂಬ ಘನವಾದ| ಹೆಸರಿಟ್ಟುಕೊಂಡಿರುವರು. 'ತಮ್ಮ ವಿಚಾರಿಸದೆ ಎದುರು ವಿಚಾರಿಸುವ' ಇವರೆಷ್ಟರ ಮಟ್ಟಿಗೆ ಶರಣ ಮಾರ್ಗದಂತೆ ನಡೆಯುತ್ತಿರುವರು? ಬರೇ ನಾಲ್ಕು ವಾದದ ಪ್ರಕಟನೆ, ಒಂದೆರಡು ಪುಸ್ತಕಗಳನ್ನು ಬರೆದು ಮುಂದಿಯ ರೊಕ್ಕದಿಂದ ತಮ್ಮ ಮನದ ಒಳತೀಟಿಯನ್ನು ತೀರಿಸಿಕೊಳ್ಳುವದಕ್ಕಾಗಿ ಪ್ರಕಟಿಸಿದಾಕ್ಷಣಕ್ಕೆ ಮತಸುಧಾರಕರಾಗುತ್ತಿದ್ದರೆ

ಹಾಗೆ ಲೇಖಕರು ತಿಳಕೊಂಡಿದ್ದರೆ ಅದು ತಪ್ಪೆಂದು ವಿಧಿಯಿಲ್ಲದೆ ಅವರಿಗೆ
ಹೇಳಬೇಕಾಗಿದೆ. ಹೆಸರಿನ ಹೊರಹೊದಿಕೆಯಿಂದ ಯಾರಾದರೂ ದೊಡ್ಡವ
ರಾಗುತ್ತಿದ್ದರೆ ಹುಲಿಯ ಚರ್ಮವನ್ನು ಹೊತ್ತ ಪ್ರಾಣಿಯೂ ಹುಲಿಏಕಾಗ
ಬಾರದು ? ಹೊರದೋಷದಿಂದ ಕೆಲವರು ಕೆಲಕಾಲ ಮೋಸ ಹೋಗಬ
ಹುದಾದರೂ ವೇಷವು ತಾನೇ ಅದೆಷ್ಟು ಕಾಲ ಸ್ಥಿರವಾಗಿ ನಿಲ್ಲಬಲ್ಲದು ?
ವೇಷವು ಬಯಲಾದರೆ ಎಲ್ಲವೂ ಬಟಾ ಬಯಲು. ಆಗ ವೇಷಧಾರಿಗಳು
ಮಾತ್ರ 'ನಗುವವರ ಮುಂದೆ ಎಡವಿ ಬಿದ್ದಂತೆ' ಆಗುವದಿಲ್ಲವೇ ? ಸಂಘ
ದವರ ಈ ಹರಕು ಮುರಕು ಸಮಾಜ ವಿಘಾತಕ ಪ್ರಕಟನೆಗಳು ಲೇಖಕರಿಗೆ
ಮಹತ್ತರವಾಗಿ ಕಂಡು ಸಮಾಜದ ಮಹಾ ಸ್ವಾಮಿಗಳ ಮಹತ್ಕಾರ್ಯಗ
ಳಾವೂ ಇವರ ದಿವ್ಯ ದೃಷ್ಟಿಯಲ್ಲಿ ಕಾಣದಿರುವದು ಪಕ್ಷಾಂಧತೆಯಲ್ಲದೆ
ಮತ್ತೇನು ?

"ಸತ್ಯಕ್ಕೆ ಜಯವು. ಅಸತ್ಯಕ್ಕಲ್ಲ"

# ಶಿವಶರಣರ ಕಾಯಕದ ಮಹತ್ವ.

(ಲೇಖಕರುಃ— ಶ್ರೀ ಜಿ. ಎಂ. ಕಟಗೇರಿ)



ಸ್ವತಂತ್ರಭಾರತದಲ್ಲಿ ಪವಿತ್ರವೂ ಪುಣ್ಯತಮವೂ ಆದ ಕಾಯಕ ತತ್ವದಿಂದ ಜನರು ಸ್ವಾವಲಂಬಿಗಳಾಗಿ ಆರ್ಥಿಕ ಸಮಾನತೆ ಆಧ್ಯಾತ್ಮಿಕ ಸುಖ ಶಾಂತಿ ಯಿಂದ ಬಾಳಬೇಕಾದರೆ "ಶಿವಶರಣರ ಕಾಯಕದ ಮಹತ್ವ"ವನ್ನು ಅರಿಯು ವದು ನಮ್ಮ ನಿಮ್ಮಗಳೆಲ್ಲರ ಆದ್ಯಕರ್ತವ್ಯ.

ಅಂದಿನ ಆರ್ಥಿಕ ಸ್ಥಿತಿಯು ಸುಧಾರಿಸಲು ಕಾರಣಃ— ಮೋಹನದಾಸ ಗಾಂಧೀಜೀ (ಮಹತ್ಮಾಜಿ) ಯ ಸುಧಾರಣೆಗಳನ್ನು ನಿರೀಕ್ಷಿಸುವಾಗ ನಮಗೆ ಹನ್ನೆರಡನೆಯ ಶತಮಾನದ ನೆನಪಾಗುತ್ತದೆ. ಇಂದು ಮಹಾತ್ಮಾಜಿಯು ಸಾರಿದ ತತ್ವಗಳನ್ನೇ ೧೨ ನೇ ಶತಮಾನದಲ್ಲಿ ಬಸವಾದಿ ಪ್ರಮಥರು ಸಿದ್ಧ ಮಾಡಿ ಸಾರಿದ್ದುಂಟು. ಇದೇ ಕಾರ್ಯವನ್ನು ಕ್ರಿ. ಶ. ಪೂರ್ವದಲ್ಲಿ ಬುದ್ಧ ದೇವನೂ ಕೈಕೊಂಡಿದ್ದ. ಆದರೆ ಬೌದ್ಧ ಧರ್ಮವು ಮುರಕಳಿಯು ಪರಿಸ್ಥಿತಿಗೆ ಬರಬೇಕಾದರೆ ಒಂದೇ ಒಂದು ಮುಖ್ಯ ಕಾರಣ. ಆರ್ಥಿಕಪರಿಸ್ಥಿತಿ. ಎಲ್ಲರೂ ಬೌದ್ಧ ಭಿಕ್ಷುಗಳಾಗಿ ಕಾಯಕಕ್ಕೆ ಮಹತ್ವ ಕೊಡದೆ ಹೋದರ ವರು. ಅದನ್ನರಿತು ಬಸವಾದಿ ಪ್ರಮಥರು "ಕಾಯಕವೇ ಕೈಲಾಸವೆಂದೂ" "ಸತ್ಕ್ರಿಯೆಯೇ ಜ್ಞಾನಕ್ಕೆ ಮೂಲ ಸಾಧನ"ವೆಂದೂ "ಕರ್ಮ ಯೋಗವ ಮಾಡದೆ ನಿರ್ಮಲ ಸುಚಿತ್ತವನರಿವದು ಸಾಧ್ಯವಿಲ್ಲೆಂದೂ" ಆಚರಿಸಿ ಸಾರಿದರು.

## ದೇಶದ ಪ್ರಗತಿಗೆ ಕಾಯಕವೇ ಕಾರಣ.

ಯಾವದೇ ದೇಶದ ಪ್ರಗತಿಯು ಆ ದೇಶದ ಆರ್ಥಿಕ ಪರಿಸ್ಥಿತಿಯನ್ನ ವಲಂಬಿಸಿರುತ್ತದೆ. ಆ ಆರ್ಥಿಕ ಪರಿಸ್ಥಿತಿಯು ಆ ದೇಶದ ಉದ್ಯೋಗಗ ಳನ್ನು ಅವಲಂಬಿಸಿರುತ್ತದೆ. ಅಂದಮೇಲೆ ದೇಶದ ಪ್ರಗತಿಯು ಆ ದೇಶದ ಔದ್ಯೋಗಿಕ ಪರಿಸ್ಥಿತಿಯನ್ನು ಅವಲಂಬಿಸಿರುತ್ತದೆ.

## ಕಾಯಕದಲ್ಲಿ ಜಾತೀಯತೆ ಇಲ್ಲ.

ಕಾಯಕವು ಯಾವದೇ ಇರಬಹುದು. ಹೆಚ್ಚುಕಡಿಮೆ ಎಂಬ ಭೇದ ವಿಲ್ಲದರಲ್ಲಿ. "ಕಾಯಕ ಮಾಡದೆ ಉಣ್ಣಲೇಬಾರದು." ಎಂದು ಮಹಾತ್ಮಾಜಿ ಯವರು ಮೊನ್ನೆ ಮೊನ್ನೆ ಸಾರಿದ್ದಾರೆ.

ಪುರಾಣಗಳು, ವೇದಗಳು, ಸೂತ್ರಗಳು, ಆಗಮ ಮುಂತಾದವುಗಳು ಕೈಲಾಸವು ಹಾಗೆ ಇದೆ, ಹೀಗೆ ಇದೆ ಎಂದು ಹೇಳಿವೆ. ಆದರೆ ಅದೆಲ್ಲ ಗೊಳ್ಳು ಪುರಾಣ. ನಾವು ಕಾಯಕದಲ್ಲಿಯೇ ಕೈಲಾಸವನ್ನು ಕಾಣಬಲ್ಲೆವು. ಇದಲ್ಲದೆ ಮತ್ತೆ ಬೇರೆ ಕೈಲಾಸವಿಲ್ಲವೆಂಬುದು ಕೆಳಗಿನ ವಚನದಿಂದ ಕಂಡು ಬರುವದು.

"ಕಾಯಕದಲ್ಲಿ ನಿರುತನಾದಡೆ ಗುರುದರ್ಶನವಾದಡೂ ಮರೆಯಬೇಕು,
ಲಿಂಗ ಪೂಜೆಯಾದಡೂ ಮರೆಯಬೇಕು, ಜಂಗಮ ಮುಂದಿದ್ದಡೆಯೂ
ಹಂಗು ಹರಿಯಬೇಕು. ಕಾಯಕವೇ ಕೈಲಾಸವಾದ ಕಾರಣ, ಅಮರೇ
ಶ್ವರ ಲಿಂಗವಾಯಿತ್ತಾದರೂ ಕಾಯಕದೊಳು."

ಎಂದು ಆಯ್ದಕ್ಕಿ ಮಾರಯ್ಯ ಶರಣರು ಹೇಳುವರು. ಹೀಗೆ ಕರ್ಮದ ಸ್ವರೂಪವನ್ನೂ, ಪೂಜೆಯ ಸ್ವರೂಪವನ್ನೂ ಹಾಗೂ ಭಕ್ತಿಯ ಸ್ವರೂಪವನ್ನೂ ತಿಳಿದು ನೋಡಿ ಬಾಹ್ಯವನ್ನು ಮರೆತು ಅಲ್ಲಿಯೇ ಈಶನನ್ನು ಅರಿಯಬೇಕು. ಇದೂ ಅಲ್ಲದೆ " ಜನಸೇವೆಯೇ ಜನಾರ್ದನನ ಸೇವೆ " ಯೆಂದು ನಾಣ್ಣುಡಿ ಸಾರುತ್ತಿದೆ. ಸೇವೆಯೂ ಒಂದು ಕಾಯಕ. ಅದರಲ್ಲಿಯೂ ಪರಮಾತ್ಮನ ಸಾಕ್ಷಾತ್ಕಾರವನ್ನು ನಾವು ಕಾಣಬಹುದು. "ಅಬುಬೆನ್ ಆದಮನು" ಪರಮಾತ್ಮನ ಮೆಚ್ಚುಗೆಗೆ ಪಾತ್ರನಾದದ್ದು ಜನತಾಸೇವೆಯಿಂದಲ್ಲವೇ ? ಇನ್ನು ಇಂದು ಶ್ರೀ ಗುರು ಬಸವಾರ್ಯರು ಮಠಮಾಸ್ತರ ಹುನಗುಂದ ಅವರು ಕೈಕೊಂಡ ಪ್ರಸಾದ ನಿಲಯದ ಸೇವೆಯೂ ನಿಜವಾದ ಸೇವೆಯು, ಜನತಾ ಸೇವೆಯು; ಜನಾರ್ದನ ಸೇವೆ. ಅದೂ ಕಾಯಕ.

ಕಾಯಕವು ಜಾತೀಯತೆಯನ್ನು ಕಿತ್ತೊಗೆಯಲು ಒಂದು ಮಹಾ ಸಾಧನ. ಸಮಭಾವನೆಯತ್ತ ಕಳಿಸುವ ಹೆದ್ದಾರಿ ಸತ್ಯದ ಮಾರ್ಗವನ್ನು ತೋರಿಸುವ ಕೈಗಂಬ. ಕಾಯಕವು ೧೨ನೆಯ ಶತಮಾನದಲ್ಲಿ ಸಾರ್ವಜನಿಕ ಜೀವನದಲ್ಲಿ ಹಾಸು ಹೊಕ್ಕಾಗಿ ಬಂದಿತ್ತು.

ಕಾಸಿ ಕಮ್ಮಾರನಾದ, ಬೀಸಿ ಮಡಿವಾಳನಾದ,
ಹಾಸನಿಕ್ಕಿ ಸಾಲಿಗನಾದ, ವೇದವನೋದಿ ಹಾರುವನಾದ.
ಇದು ಕಾರಣ ಕರ್ಣದಲ್ಲಿ ಜನಿಸಿದವರುಂಟೇ ?

ಈ ಎಲ್ಲ ಕಾಯಕಗಳು ಸನ್ಮಾನ್ಯವಾದುವೇ. ಹಿರಿಯನಾಗಲಿ-ಕಿರಿಯನಾಗಲಿ, ಬಡವನಾಗಲಿ-ಬಲ್ಲಿದನಾಗಲಿ, ಜಾಣನಾಗಲಿ-ಕೋಣನಾಗಲಿ, ಎಲ್ಲರೂ

ಕಾಯಕ ಮಾಡಲೇ ಬೇಕು. ತಾವು ಸ್ವತಂತ್ರರಾಗಿ ಜೀವನ ಸಾಗಿಸ ಬೇಕು. ಅನ್ಯರ ಮೇಲೆ ಅವಲಂಬಿಸಕೂಡದೆಂಬ ಭಾವನೆ ಅಂದಿತ್ತು.

## ಕಾಯಕದ ಮಹತ್ವ

ಕಾಯಕಕ್ಕೆ ಶರಣ (ವಚನ) ಸಾಹಿತ್ಯದಲ್ಲಿ ವಿಶಿಷ್ಟವಾದ ಅರ್ಥವಿದೆ. ತನ್ನದೇ ಆದ ಗುರಿ ಇದೆ. ಕಾಯಕವು ಬರಿ ಉದರ ನಿಮಿತ್ತಕ್ಕಾಗಿ ಇಲ್ಲ. ಇದೇ ಅದರ ಗುರಿಯಲ್ಲ. ಕಾಯಕವು ಪಾರಮಾರ್ಥವನ್ನು ಸಾಧಿಸುವ ಒಂದು ಮಹಾ ಸಾಧನ. ಇದರಿಂದ ಮನುಷ್ಯನು ಸೋಮಾರಿಯಾಗುವ ಹಾಗಿಲ್ಲ. ತನ್ನ ಕಾಲ ಮೇಲೆ ತಾನು ನಿಲ್ಲಬೇಕು. ಪ್ರತ್ಯಕ್ಷ ಜಂಗಮ ಬಂದರೂ "ನೀವಾವ ಕಾಯಕವ ಮಾಡುವಿರಿ ಎಂದು ಕೇಳದೆ ಅನ್ನವನ್ನಿಕ್ಕಿ ದಡೆ ಅದು ಏಳನೆಯ ಪಾತಕ." ಎಂದು ಬಸವಣ್ಣನವರು ಸಾರಿದ್ದುಂಟು.

ಕಾಯಕವು ಐಹಿಕಕ್ಕೆ ಮಾತ್ರ ಬೇಕಾಗುವದೆಂದು ಬಸವಾದಿ ಪ್ರಮಥರು ಹೇಳಲಿಲ್ಲ. ಅದು ಮುಕ್ತಿಗೂ ಸಾಧನವೆಂದು ಹೇಳಿದರು. ನಮ್ಮ (ವೀರಶೈವ) ಸಮಾಜದಲ್ಲಿ ಲಿಂಗವಿಲ್ಲದವನು ಹೇಗೆ ಹೊರಗೋ ಹಾಗೆಯೇ ಕಾಯಕವಿಲ್ಲದವನೂ ಹೊರಗು. ಅಂತೆಯೇ ಅನುಭವ ಮಂಟಪದಲ್ಲಿ ಭಾಗ ವಹಿಸಿದ ಶರಣ ಶರಣೆಯರು ಕಾಯಕ ಕೈಕೊಂಡಿದ್ದರೆಂದು ಬೇರೆ ಹೇಳಬೇಕಾಗಿಲ್ಲ. ಲಿಂಗಧಾರಿಗೆ ಹೇಗೆ ಮುಕ್ತಿಯು ನಿಶ್ಚಯವೋ ಹಾಗೆಯೇ ಕಾಯಕ ಉಳ್ಳವನಿಗೂ ಮೋಕ್ಷವು ನಿಶ್ಚಯ. ಇಷ್ಟು ಇದೆ ಕಾಯಕದ ಮಹತ್ವ. ಅಂದ ಮೇಲೆ ಕಾಯಕವು ಕೈಲಾಸವಾಗದೇ ?

ಒಟ್ಟಿನ ಮೇಲೆ ವಿಶಾಲ ವಿಶ್ವದಲ್ಲಿ ವಿಶ್ವೇಶ್ವರನ ವಿಶ್ವಾಸಕ್ಕೆ ಪಾತ್ರರಾಗಬೇಕಾದರೆ ಚಿತ್ತಶುದ್ಧಿಯಿಂದಲೂ, ನಿಷ್ಕಾಮದಿಂದಲೂ, ನಿರಭಿಮಾನದಿಂದಲೂ ಕಾಯಕ ಮಾಡಿದ್ದೇ ಆದರೆ ಮಾತ್ರ ಜಗದಲ್ಲಿ ಮನ್ನಣೆಯುಂಟು. ನಾವು ಕೇವಲ ಖ್ಯಾತಿ ಪಡೆಯಬೇಕೆಂದು ಬಾಹ್ಯಾಡಂಬರಕ್ಕೆ ಸಿಲುಕಿ ಕಾಯಕ ಮಾಡುವೆನೆಂದು ಹೆಮ್ಮೆಪಟ್ಟದ್ದಾದರೆ ಹೆಡ್ಡತನವೇ ಸರಿ. ಅಂತೆಯೇ " ಶಿವಶರಣರ ಕಾಯಕದ ಅಗ್ಗಳಿಕೆಯನ್ನು ಉಗ್ಗಡಿಸಿ ತೋರಿಸಿ. " ಗುರು ಕುಮಾರೇಶ್ವರನ ಪ್ರೀತಿಗೆ ಪಾತ್ರರಾಗಬೇಕೆಂಬುದೇ ಈ ಲೇಖನದ ಉದ್ದೇಶ.

---

# ಪ್ರಕಟನೆ

## (ಶ್ರೀ ಹಳಕಟ್ಟಿಯವರಿಗೆ ಸನ್ಮಾನನಿಧಿ ಅರ್ಪಿಸುವ ಬಗ್ಗೆ)

ಬದಾಮಿ ತಾಲೂಕಿನ ಜೋಳಚಗುಡ್ಡ ವೀರಶೈವ ತರುಣ ಸಂಘದವರು ಸಾರ್ವಜನಿಕರಿಗೆ ವಿನಯಪೂರ್ವಕವಾಗಿ ವಿನಂತಿ ಮಾಡಿಕೊಳ್ಳುವದೇನಂದರೆಃ-



**ರಾ|| ಬ|| ಫ. ಗು. ಹಳಕಟ್ಟಿ ಮು. ವಿಜಾಪುರ** ಇವರು ಸುಮಾರು ೪೦-೫೦ ವರ್ಷಗಳಿಂದ ನಮ್ಮ ಕನ್ನಡ ನಾಡಿಗೆ ಮತ್ತು ವೀರಶೈವ ಸಮಾಜಕ್ಕೆ ಅನೇಕ ರೀತಿಯಿಂದ ಮಾಡಿದ ಸೇವೆಯು ಎಲ್ಲ ಕನ್ನಡಿಗರಿಗೆ ಗೊತ್ತಿರಲು ಸಾಕು! ವೀರಶೈವ ಸಮಾಜದಲ್ಲಿಯಂತೂ ಅವರ ಹೆಸರನ್ನು ಕೇಳದವರೇ ವಿರಳ. ಇವರು ನಮ್ಮ ವಿಜಾಪುರ ಜಿಲ್ಹೆಯಲ್ಲಿ ರಾಜಕೀಯ, ಸಾಮಾಜಿಕ, ಶೈಕ್ಷಣಿಕ, ಮತ್ತು ಸಾಹಿತ್ಯ ಮೊದಲಾದ ಕಾರ್ಯಕ್ಷೇತ್ರಗಳಲ್ಲಿ ಅನೇಕ ರೀತಿಯಿಂದ ಸೇವೆ ಸಲ್ಲಿಸಿ ಜನಾನುರಾಗಿಗಳಾಗಿರುವರೆಂಬ ಬಗ್ಗೆ ಈಗ ವಿಜಾಪುರ ಮೊದಲಾದ ಕರ್ನಾಟಕ ಭಾಗಗಳಲ್ಲಿ ಇವರಿಗೆ ನಿಧಿಯನ್ನು ಅರ್ಪಿಸುವ ಪ್ರಯತ್ನಗಳು ನಡೆದಿರುವದೇ ತಕ್ಕ ಉದಾಹರಣೆ.

ಕಳೆದ ೩೦ ವರ್ಷಗಳಿಂದ ಶಿವಾನುಭವವೆಂಬ ಮಾಸಪತ್ರಿಕೆಯನ್ನು ಇವರು ನಡಿಸುತ್ತಾ ಬಂದಿದ್ದು ಈಗಲೂ ಸಹ ಈ ಮಾಸ ಪತ್ರಿಕೆಯ ಮುಖಾಂತರ ಮಹತ್ವದ ವಾಙ್ಮಯ ಸೇವೆಯನ್ನು ಸಲ್ಲಿಸುತ್ತಿದ್ದಾರೆ. ಶ್ರೀ ಬಸವಣ್ಣನವರ ಕಾಲದಲ್ಲಿ ಒಳ್ಳೇ ಪ್ರಗತಿಯನ್ನು ಹೊಂದಿ ವೀರಶೈವ ಸಮಾಜವನ್ನು ಅತ್ತ್ಯುನ್ನತ ಸ್ಥಿತಿಗೆ ಒಯ್ಯಲು ಕಾರಣೀ ಭೂತವಾದ ಶಿವಶರಣರ ವಚನ ವಾಙ್ಮಯವು ಅನೇಕ ವರ್ಷಗಳ ವರೆಗೆ ನಶಿಸಿ ಹೋಗಿತ್ತು. ಅನೇಕ ಮಠ ಮಾನ್ಯಗಳ ಸಂದಿಗೊಂದಿಗಳಲ್ಲಿ ಬಿದ್ದು ಹುಳುಹುಪ್ಪಡಿಗಳಿಗೆ ತುತ್ತಾಗುತ್ತಲಿತ್ತು. ಶರಣರ ವಚನ ಸಾಹಿತ್ಯವನ್ನು ಜನರು ಅರಿಯದವರಾಗಿದ್ದರು. ವಚನ ವಾಙ್ಮಯವು ಮರೆತುಹೋಗಿತ್ತೆಂದರೂ ಅತಿಶಯೋಕ್ತಿಯಲ್ಲ. ಸಾಮಾನ್ಯವಾಗಿ ವಚನ ಸಾಹಿತ್ಯವನ್ನು ಬೆಳಕಿಗೆ ತಂದು ವೀರಶೈವ ಜನಾಂಗಕ್ಕೆ ಮಹದುಪಕಾರವನ್ನು ಮಾಡಿದವರು ಯಾರೆಂಬದನ್ನು ಅರಿಯಬೇಕು, ತಿಳಿ

ಯಬೇಕು. ಅತಿ ಪುರಾತನ ವಚನ ಸಾಹಿತ್ಯವನ್ನು ಬಸವಣ್ಣನವರು ತಮ್ಮ ಕಾಲದಲ್ಲಿ ಅತಿ ಉನ್ನತ ಸ್ಥಿತಿಗೆ ತಂದರು. ಅವರು ಲಿಂಗೈಕ್ಯರಾದ ನಂತರ ಈ ಭಾಂಡಾರವು ಅಸ್ತವ್ಯಸ್ತವಾಗಿ ಮಾಯವಾಗಿತ್ತು. ಆದರೆ ವಿಜಯನಗರದ ಪ್ರೌಢ ದೇವರಾಯನ ಕಾಲದಲ್ಲಿ ಅನೇಕ ವೀರಶೈವ ಪಂಡಿತರು ಜನಿಸಿ ಶರಣ ಸಾಹಿತ್ಯದ ಸಂಶೋಧನೆಮಾಡಿದ್ದು ಕಂಡುಬರುತ್ತದೆ. ಈ ಬಗ್ಗೆ ಯೆಡೆಯೂರ ತೋಂಟದ ಶ್ರೀ ಶಿದ್ದಲಿಂಗಯತಿಗಳೇ ಮುಖ್ಯ ಕಾರಣೀಭೂತರಾಗಿದ್ದರೆಂಬದು ತಿಳಿದು ಬರುವದು. ಆನಂತರ ಈ ಕಾರ್ಯಮಾಡಿದವರು ರಾ|| ಬ|| ಹಳಕಟ್ಟಿಯವರೇ ಎಂದು ಹೇಳಲಡ್ಡಿಯಿಲ್ಲ. ಬಸವಣ್ಣನವರ ಕಾಲದ ವಚನ ಸಾಹಿತ್ಯ, ಪ್ರೌಢದೇವರಾಯನ ಕಾಲದ ವಚನಸಾಹಿತ್ಯ, ಮತ್ತು ಹಳಕಟ್ಟಿಯವರ ಕಾಲದ ವಚನಸಾಹಿತ್ಯ ಎಂದು ಹೀಗೆ ಸಾಮಾನ್ಯವಾಗಿ ಮೂರು ಕಾಲಗಳಲ್ಲಿ ವಿಂಗಡಿಸಬಹುದು. ಹಿಂದಿನ ಎರಡು ಕಾಲಗಳಲ್ಲಿ ವಚನಸಾಹಿತ್ಯ ಅಷ್ಟೊಂದು ಸುಸಂಬದ್ಧವಾಗಿ ಮಾರ್ಪಾಟು ಹೊಂದಿದ್ದು ಕಂಡು ಬರುವದಿಲ್ಲ. ಆದರೆ ಹಳಕಟ್ಟಿಯವರ ಕಾಲದಲ್ಲಿ ಈ ಸಾಹಿತ್ಯಕ್ಕೆ ಒಳ್ಳೇ ಸುಂದರ ಹೊಸಸ್ವರೂಪು ಪ್ರಾಪ್ತವಾದದ್ದು ವೀರಶೈವರಿಗೆ ಹೆಮ್ಮೆಯ ವಿಷಯ. ಬೇರೆ ಬೇರೆ ಅನೇಕ ಶರಣರ ಮಹತ್ವದ ವಚನಗಳನ್ನು ಒತ್ತಟ್ಟಿಗೆ ಕ್ರೋಡೀಕರಿಸಿ ಹೊಸಪದ್ಧತಿಯಿಂದ ವಚನಶಾಸ್ತ್ರಸಾರ ಎಂಬ ಗ್ರಂಥಗಳು ಇವರಿಂದ ರಚಿಸಲ್ಪಟ್ಟು ಪ್ರಕಟಿಸಲ್ಪಟ್ಟಿವೆ. ವಚನಶಾಸ್ತ್ರಸಾರದ ಭಾಗಗಳು ೧, ೨, ಮತ್ತು ೩ ಇವುಗಳಲ್ಲಿ ವೀರಶೈವ ಧರ್ಮದ ವೈಶಿಷ್ಟ್ಯವು ತುಂಬಿತುಳುಕುತ್ತದೆ. ಇವುಗಳಲ್ಲಿ ವಿವರಿಸಲ್ಪಡುವ ವಿಷಯುಗಳ ಜೋಡಣೆಯು ಇವರ ಅಗಾಧ ಬುದ್ಧಿ ಮತ್ತೆ ಮತ್ತು ಅನುಭವದ ದ್ಯೋತಕವಾಗಿದೆ. ಸ್ವತಂತ್ರವಾಗಿ ಇವರು ಬರೆದ 'ಶಿವಾನುಭವ ಶಬ್ದಕೋಶ'ವು ವಚನ ಸಾಹಿತ್ಯ ಅಭ್ಯಾಸಿಗಳಿಗೆ ಕೈದೀಪವಾಗಿದೆ. ಪವಿತ್ರ ಮತ್ತು ಮಹತ್ವವಾದ ಶಿವಶರಣರ ವಚನಸಾಹಿತ್ಯವು ಇವರ ಕಾಲದಲ್ಲಿ ಹೊಸ ಮೂರ್ತ ಸ್ವರೂಪವನ್ನು ತಾಳಿಬೆಳಕಿಗೆ ಬಂದಿತೆಂದು ಕೈಎತ್ತಿ ಹೇಳಬಹುದು.

ಸಮಾಜ ಬಂಧುಗಳೇ, ಇವರು ಸಮಾಜಕ್ಕೆ ಮಾಡಿದ್ದ ಉಪಕಾರವು ಆಚಂದ್ರಾರ್ಕವಾಗಿ ಮರೆಯಲಾರದ್ದು. ಇವರು ಪ್ರಕಟಿಸಿದ ಶಿವಾನುಭವ ಗ್ರಂಥಮಾಲೆಯು ಅತ್ಯಂತ ಮಹತ್ವದ ಪುಸ್ತಕಗಳಾದ ವಚನಶಾಸ್ತ್ರಸಾರ ಭಾಗ ೧, ಮತ್ತು ೨ ಇವಲ್ಲದೆ ಶೂನ್ಯ ಸಂಪಾದನೆ, ಪ್ರಭುದೇವರ ವಚನ

ಹೀಗೆ ಅನೇಕ ಗ್ರಂಥಗಳು ಪುನಃ ಮುದ್ರಣಕಾಣದೆ ಉಪಲಬ್ಧವಿಲ್ಲದಿರುವದೂ ಇದ್ದಬಿದ್ದ ಹಲಕೆಲವು ಪುಸ್ತಕಗಳು ಮಾರಾಟವಾಗವೇ ಬಿದ್ದಿರುವದೂ ಅತಿ ವಿಷಾದದ ಸಂಗತಿಯು. ಇದಕ್ಕೆ ಸಮಾಜದ ಅಲಕ್ಷತನ ಮತ್ತು ಉದಾಸೀನವೇ ಕಾರಣ. ಆದ್ದರಿಂದ ಇದನ್ನೆಲ್ಲ ಮನದಂದು ಪ್ರತಿಯೊಬ್ಬ ವೀರಶೈವನು ಮುಕ್ತಹಸ್ತದಿಂದ ತಮ್ಮ ತಮ್ಮ ಶಕ್ತ್ಯಾನುಸಾರ ನಾ ಮುಂದೆ ನೀ ಮುಂದೆ ಎಂದು ಹಳ್ಳಿಪಟ್ಟಣಗಳ ಜನರು ಮುಂದೆ ಬಂದು ಶ್ರೀಮಾನ್ ಹಳಕಟ್ಟಿಯವರಿಗೆ ಸನ್ಮಾನ ನಿಧಿಯನ್ನು ಅರ್ಪಿಸಬೇಕೆಂದು ನಮ್ಮ ಸವಿನಯ ವಿನಂತಿ ಅದೆ.

ಈ ನಿಧಿಗೆ ಸಹಾಯ ಮಾಡಬೇಕೆನ್ನುವವರು ಸೆಕ್ರೆಟರಿ ವೀರಶೈವ ತರುಣ ಸಂಘ ಚೋಳಚಗುಡ್ಡ ತಾಲೂಕ ಬದಾಮಿ ಇವರ ಕಡೆಗೆ ಕಳಿಸಬೇಕು. ರಕಮು ಮುಟ್ಟಿದ ಬಗ್ಗೆ ಪಾವತಿ ಕೊಡಲ್ಪಡುವದು. ಅಥವಾ ತಮ್ಮ ಗ್ರಾಮಗಳಲ್ಲಿಯೇ ನಿಧಿಯನ್ನು ಕೂಡಿಸಿ ಪರಭಾರೆ ರಾ|| ಬ|| ಹಳಕಟ್ಟಿಯವರು ವಿಜಾಪುರ ಇವರ ಕಡಿಗೆ ಕಳಿಸಿದರೂ ಅಡ್ಡಿಯಿಲ್ಲ. ಆದರೆ ಹೀಗೆ ಮಾಡಿದ್ದನ್ನು ಸೆಕ್ರೆಟರಿ ತರುಣ ಸಂಘ ಇವರಿಗೆ ಅವರು ತಿಳಿಸತಕ್ಕದ್ದು. ಅಂತು ಯಾವ ಮುಖದಿಂದಾದರೂ ಶ್ರೀ ಹಳಕಟ್ಟಿಯವರಿಗೆ ನಿಧಿ ಸಲ್ಲಿಸಿದರೆ ಸಾಕು ಎಂಬುದೇ ನಮ್ಮ ಮನೀಷೆ.

## ಬದಾಮಿ ತಾಲೂಕಿನ ಚೊಳಚಗುಡ್ಡ ಗ್ರಾಮಸ್ಥರು

## ರಾ|| ಬ|| ಶ್ರೀ ಹಳಕಟ್ಟಿಯವರ ಸನ್ಮಾನ ನಿಧಿಗೆ ಹಣ ಕೊಟ್ಟಿದ್ದು.

(೧) ಬಸಪ್ಪ ವೀರಪ್ಪ ಗಡ್ಡಿ ೫೧ ರೂ. (೨) ಚಿನ್ನಪ್ಪಾ ಶಿವಪ್ಪಾ ಗಂಗಾಲ ೧೧ ರೂ. (೩) ಮಹಾರುದ್ರಪ್ಪ ಬಸವಪ್ಪ ಪಟ್ಟಣಶೆಟ್ಟಿ ೫ ರೂ. (೪) ಶಿವಸಂಗಪ್ಪ ಕರಿಸಂಗಪ್ಪ ನರೇಗಲ್ಲು ೫ ರೂ. (೫) ಲಿಂಗಪ್ಪ ರಂಗಪ್ಪ ಬಾಣದ ಅಸಿಸ್ಟಂಟ ಮಾಸ್ತರ ೫ ರೂ. (೬) ಸಿದ್ದಯ್ಯಾ ಮಾಸ್ತರ ಸಾವಳಗಿ ಮಠ ೨ ರೂ. (೭) ಕಂಟೆಪ್ಪಗೌಡ ಬಸನಗೌಡ ಹೊಸಗೌಡ್ರ ೫ ರೂ. (೮) ನಾಗಪ್ಪ ಪರ್ಲಾಪುರ ೨ ರೂ. (೯) ವೀರಯ್ಯಾ ವೀರಭದ್ರಯ್ಯಾ ಗಣಾಚಾರಿ ೨ ರೂ. (೧೦) ಜೋತಪ್ಪ ಮಾಸ್ತರ ಸಾವಂತ ೨ ರೂ.

(೧೧) ಚನವೀರಯ್ಯ ಮಾಸ್ತರ ರುದ್ರಸ್ವಾಮಿಮಠ ೨ ರೂ. (೧೨) ರುದ್ರಗೌಡ ವೀರನಗೌಡ ಪಾಟೀಲ ೨ ರೂ. (೧೩) ಬಸಪ್ಪ ಮಂಟಪ್ಪ ಬಾರಿ ೨ ರೂ. (೧೪) ವೀರಪ್ಪ ದಾನಪ್ಪ ಪಟ್ಟಣಶೆಟ್ಟಿ ೨ ರೂ.

ಮೇಲ್ಕಂಡ ಜನರಲ್ಲದೆ ಇನ್ನೂ ಕೊಡುವವರು ಇದ್ದರೆ, ಕೆಳಗೆ ಕಾಣಿಸಿದ ಮಹನೀಯರಲ್ಲಿಗೆ ನಿಧಿಯನ್ನು ಸಮರ್ಪಿಸಬಹುದು.

ಚೊಳಚಗುಡ್ಡ
ತಾ|| ಬದಾಮಿ
ತಾ|| ೯-೧೦-೫೬

**ಮಹಾರುದ್ರಪ್ಪ ಬಸವಪ್ರಭಪ್ಪ ಪಟ್ಟಣಶೆಟ್ಟಿ**
ಚೇರಮನ್ ವೀರಶೈವ ತರುಣ ಸಂಘ ಮತ್ತು ವಿಜಾಪುರ ಜಿಲ್ಹಾ ಸ್ಕೂಲಬೋರ್ಡ ಮೆಂಬರ

**ಬಸಪ್ಪ ವೀರಪ್ಪ ಗಡ್ಡಿ**
ಚೇರಮನ್ ಶೇತಕಿ ಸಹಕಾರಿ ಸಂಘ ಚೊಳಚಗುಡ್ಡ

**ಚಿನ್ನಪ್ಪ ಶಿವಪ್ಪ ಗಂಗಾಲ**
ಮಾಜಿ ಶೇತಕಿ ಸಂಘ ಚೇರಮನ್

**ಚಂದ್ರಶೇಖರಯ್ಯಾ ಶಿವರುದ್ರಯ್ಯಾ ಮಠ**
ಸೆಕ್ರೆಟರಿ ಚೊಳಚಗುಡ್ಡ ವೀರಶೈವ ತರುಣ ಸಂಘ

---

# ಗುರುಮಹಾತ್ಮೆ

[ ಲೇಖಕರು:- ಶ್ರೀಯುತ ರೇವಣಸಿದ್ಧಪ್ಪ ಶೀಲವಂತ ]

"ಗುರವೇ ಸರ್ವ ಲೋಕಾನಾಂ । ಭಿಷಜೇ ಭವರೋಗಿಣಾಂ ।
ನಿಧಯೇ ಸರ್ವ ವಿದ್ಯಾನಾಂ । ದಕ್ಷಿಣಾಮೂರ್ತಯೇ ನಮಃ ।
ಗುರುದೇವೋ ಮಹಾದೇವೋ । ಗುರು ಬ್ರಹ್ಮಗುರು ಸಾಕ್ಷಾತ್
ಪರಬ್ರಹ್ಮಣೇ ।
ವಿಶ್ವೇನ್ ಶ್ರೀ ಗುರವೇ ಹುಚ್ಚೇಶಾಯನಮಃ ॥"

ಶ್ರೀ ಗುರುವಿನ ಮಹತ್ವವು ಇಂದಿನ ಬೌದ್ಧಿಕ ಯುಗದಲ್ಲಿ ಅಜ್ಞ ಮಾನವರಿಗೆ ತಿಳಿಯದೇ ಹೋದದ್ದು ಬಹು ವಿಷಾದವಾಗುತ್ತಿದೆ. ಹಡಗವನ್ನು ಸಾಗರದಲ್ಲಿ ನಡೆಸಿಕೊಂಡು ಹೋಗುವ ಕಪ್ತಾನನಂತೆಯೂ ಮತ್ತು ವಿಶ್ವ ಪ್ರಪಂಚ ಸಾಗರದಲ್ಲಿ ಭಾರತವೆಂಬ ಹಡಗವನ್ನು ನಿರ್ವಿಘ್ನತೆಯಿಂದ ನಡೆಸಿಕೊಂಡು ಹೋಗುವ ಮುಖ್ಯ ಮಂತ್ರಿಗಿಂತಲೂ ಅಧಿಕ ಸ್ಥಾನ ಆಧ್ಯಾತ್ಮಿಕ ಕ್ಷೇತ್ರದಲ್ಲಿ ಶ್ರೀಗುರುವಿಗಿರುತ್ತದೆ. ಸಕಲ ರಾಜ್ಯಗಳ ಸೂತ್ರ, ಅವುಗಳ ರಚನೆ, ಕಾರ್ಯ, ಕಾರ್ಯ ವಿಧಾನ, ರಾಜ್ಯಗಳ ಚಲನೆ ಮುಂತಾದವುಗಳ ಅರಿವಿರುವಂತೆ ಶ್ರೀಗುರುವಿಗೆ ಜೀವ, ಜಗತ್ತು, ಈಶ್ವರ ಇವುಗಳ ಸಂಬಂಧ ವ್ಯಕ್ತಾ ವ್ಯಕ್ತ ವಿಶ್ವದ ರಚನೆಯ ಮೂಲಗಳೆಲ್ಲವೂ ಕರತಲಾಮಲಕವಾಗಿರುವ ಪಿಂಡ, ಬ್ರಹ್ಮಾಂಡ, ಚಿದ್‌ಬ್ರಹ್ಮಾಂಡಗಳನ್ನೊಳಗೊಂಡ ಇರವೇ ಆತನ ನಿಲವು ಆಗಿರುವದು. ಶ್ರೀಗುರು ಸಂಸಾರ ವ್ಯಾಮೋಹವಳಿದು, ವಿಷಯುಗಳ ನಳಿದು, ಅನಂತ ದಿನ ಸಾಧನೆ ಮಾಡಿ ಪರಶಿವಲಿಂಗದ ಪರಮ ಜ್ಞಾನವನ್ನು ಪಡೆದವನಿರುವನು. ಸ್ಪೃಶ್ಯದಿಂದ, ನೋಟದಿಂದ, ಭಾವನೆಯಿಂದ, ತನ್ನ ಬಳಿ ಸಾರಿದ ಭಕ್ತರನ್ನು ಸಂಸಾರ ಸಾಗರದಿಂದ ಎತ್ತಿ ಉದ್ಧರಿಸುವ ಸಾಮರ್ಥ್ಯ ಪಡೆದವನಿರುವನು. ಇಂಥ ಯೋಗ್ಯತೆ ಸ್ಥಾನಗಳುಳ್ಳ ಶ್ರೀಗುರುದೇವನ ಚರಣ ತಲವನ್ನಪ್ಪಿ, ಶ್ರೀಗುರುವೆ ! " ಭವ ಬಂಧನ ಭವಪಾಶಗಳಾದ ಕಾರಣ ವೇನು! " "ಮಾಯಾಪಾಶವನ್ನು ಹರಿದು ಕಾಯೋ ನೀನು" ಮಲದ ಮರವೆ ಯನು ಮಾಯಾ ಮೋಹಗಳನಳಿಸಿ ರಕ್ಷಿಸಯ್ಯಾ ! " "ಶ್ರೀಗುರುವೇ ನೀನೇ

ಎನಗೆ ಶರಣಾಗು !" ಎಂದು ಶ್ರೀಗುರುವಿಗೆ ಶರಣಾಗತನಾಗುವನು. ಈ ಕಾರಣವಾಗಿ ಶ್ರೀಗುರುವಿನನ್ನು ಅನನ್ಯ ಭಕ್ತಿಯಿಂದ ಭಜಿಸಿ, ಪೂಜಿಸಿ, ಅವನ ಹೃದಯಕಮಲವರಳಿ, ಅನುಭವಾಮೃತವು ಅಂತಃಕರಣದಿಂದ ಉಕ್ಕಿ ಬರುವಂತೆ ಮಾಡಿಕೊಳ್ಳುವನು. ವಿದ್ಯುತ್ಪ್ರವಾಹದಂತೆ ಕರಚರಣಗಳಲ್ಲಿ ಓತಪ್ರೋತವಾಗಿ ಹರಿಯುವ ಅನುಭವವನ್ನು ಚರಣ ಪೂಜೆಯ ಮುಖಾಂತರ ಮಜ್ಜನ ಮಾಡಿ ಸೇವಿಸುವನು.

ಹೀಗೆ ವೀರಶೈವರ ಗುರುಪಾದೋದಕ ವಿಧಾನವನ್ನು ಪಾಶ್ಚಾತ್ಯರು ತಿರಸ್ಕೃತ ಭಾವದಿಂದ ನೋಡುತ್ತಿರಬಹುದು. ಶ್ರೀಗುರುವು ಮನುಷ್ಯನೇ ಆಗಿದ್ದರೂ ಅವನು ಅನಂತ ಕಾಲ ಲಿಂಗಭಕ್ತಿಯನ್ನು ಆಚರಿಸಿ, ಭಕ್ತಿಮಾರ್ಗದಲ್ಲಿ ಬರುವ ಎಡರು ತೊಡರು ಸಾಧನ ಕ್ರಮದಲ್ಲಿ ಮನ-ಭಾವಗಳ ಮೇಲೆ ಉಂಟಾಗುವ ಅಂತರ್-ಬಾಹ್ಯ ಪರಿಣಾಮಗಳನ್ನು ನಿವಾರಿಸುವ ರೀತಿಗಳನ್ನು ತಿಳಿದವನಿರುತ್ತಾನೆ. ಇಂಥ ದಿವ್ಯ ಜ್ಞಾನಿಯಾದ ಶ್ರೀಗುರುವನ್ನು ಶ್ರೀಮನ್ನಿರಂಜನ ಮೂರ್ತಿ ಅಲ್ಲಮ ಪ್ರಭುದೇವರ "ಅರಿವಿನ ಹೃದಯ ಕಂದೆರೆಯಲೆಂದು ಗುರುವೆಂದು ಕಲ್ಪಿಸಿದರಲ್ಲದೇ ಬೇರುಂಟೇ ? " ಎಂಬ ವಚನದಂತೆ ಭಕ್ತರು ತಮ್ಮ ಅರಿವಿನ ಬಾಗಿಲು ತೆರೆಯಬೇಕೆಂದು, ಆ ಅರಿವಿನ ಸಾಕಾರ ಮೂರ್ತಿಯೇ ಆದ ಗುರುವನ್ನೇ ಪೂಜಿಸಿ, ತಮ್ಮ ಗುರುತ್ವ ನೆಲಗೊಳ್ಳುವಂತೆ ಪ್ರಯತ್ನಿಸುವದೇ ಭಕ್ತರು ಗುರುವನ್ನು ಪೂಜಿಸುವ ಉದ್ದೇಶ !

ಇದರಿಂದ "ಅರಿವೇ" ಗುರುವೆಂದು ಸಿದ್ಧವಾಯಿತು. ನಮ್ಮಲ್ಲಿ ಗುರುತ್ವವು ಅರಿವು ಅನುಭಾವಗಳ ಮಾರ್ಗವಿಡಿದು ಸಾಗದೆ ರಕ್ತದ ಬೆನ್ನುಹತ್ತಿ ನಡೆಯುತ್ತಲಿದೆ. ಇದರಿಂದ ಆ ಮನೆತನದಲ್ಲಿ ಹುಟ್ಟಿದವರೆಲ್ಲ " ತಾವು ಪೂಜ್ಯರು. ಗುರುಗಳು ಜಂಗಮರು ಶ್ರೇಷ್ಠರು " ಎಂದು ತಿಳಿದುಕೊಳ್ಳುವದರಿಂದ ಇವರಲ್ಲಿ ಅಹಂಕಾರದ ಮೊಳಕೆಯು ಸಹಜವಾಗಿ ಬೆಳೆಯಲನುವಾಗಿದೆ. ಹೀಗಾಗಿ ಗುರು ಜಂಗಮರಲ್ಲಿ ದುರಾಶೆ ಫಲಾಪೇಕ್ಷೆಗಳು ಜಾಗ್ರತವಾಗಿ ಕಾರ್ಯ ಮಾಡುತ್ತಲಿವೆ. ಹೀಗಾಗಲಿಕ್ಕೆ ಕಾರಣ ! ಮೊದಲು ವಿದ್ಯಾರ್ಥಿಯಾಗದೇ ವಿದ್ಯಾಗುರುವಾಗಲು ಹೇಗೆ ಬರುವದಿಲ್ಲವೋ ಹಾಗೇ ಮೊದಲು ಭಕ್ತರಾಗದೇ ಗುರುವಾಗಲು ಬರಬಾರದು. ಗುರುವಾಗಲಿಕ್ಕೆ ಒಂದು ವಿಶಿಷ್ಟ ಮನೆತನಕ್ಕೆ ಸಂಬಂಧಪಡದೇ, ಜ್ಞಾನಾನುಭವಗಳಿಂದ ಅರುವೆಂಬ ಜ್ಯೋತಿಯಾಗಿ ಪ್ರಕಾಶಿಸುವ ಭಕ್ತನೇ ಇರಲಿ, ಜಂಗಮನೇ ಇರಲಿ,

ಅವನು ಗುರುವೆಂದು ಭಾವಿಸಿ, ಅವನಿಂದ ದೀಕ್ಷಾ, ಉಪನಯನ ಮುಂತಾದ ಅವರವರ ಧರ್ಮಾನುಸಾರವಾಗಿ ಸಂಸ್ಕಾರ ಹೊಂದಲು ಶಾಸ್ತ್ರ ಸಮ್ಮತವಾದ ಅಭಿಪ್ರಾಯವಾಗಿದೆ. ಹೀಗಿದ್ದೂ ಅಜ್ಞ ಸಮಾಜವು ಇನ್ನೂ ಜ್ಞಾನಾನುಭವದಿಂದ ಗುರುತ್ವವನ್ನು ಸಂಪಾದಿಸಿದವನನ್ನು ಬಿಟ್ಟು, ಜ್ಞಾನ ಹೀನನಿದ್ದು, ಅವನು ಒಂದು ವಿಶಿಷ್ಟ ಮನೆತನಕ್ಕೆ ಸಂಬಂಧಪಟ್ಟವನಿದ್ದರೆ, ಅವನನ್ನೇ ಗುರುವೆಂದು ನಂಬಿ ದೀಕ್ಷಾ, ಉಪನಯನ ಮುಂತಾದ ಸಂಸ್ಕಾರಾದಿ ಕ್ರಿಯೆಯನ್ನು ಹೊಂದುವವರೇ ವಿಶೇಷವಾಗಿದ್ದಾರೆ. ಇದರ ಬಗ್ಗೆ ವೀರಶೈವ ಸಿದ್ಧಾಂತದ ಸ್ಮೃತಿಯಲ್ಲಿ ಹೀಗೆ ಹೇಳಿದೆ:—

"ಜ್ಞಾನಹೀನ ಗುರುಂ ಪ್ರಾಪ್ತೇ ಕುತೋ ಮುಕ್ತಿ । ಮವಾಪ್ನುಯಾತ್ ।
ಛಿನ್ನ ನೌಕಾಗತ ಸಿಂಧು ಯಥಾ ಪಾರಂ ನಗಚ್ಛತಿ ॥"

ಈ ಪ್ರಕಾರವಾಗಿ ತೂತು ಬಿದ್ದ ಹಡಗಿನಲ್ಲಿ (ನೌಕೆಯಲ್ಲಿ) ಕೂತು ಆಚೆಯ ದಡವನ್ನು ಸೇರಲು ಹೋದರೆ, ಹೇಗಾಗುವದೋ ಹಾಗೆಯೇ ಅಜ್ಞ ಗುರುವಿನಿಂದ ದೀಕ್ಷೆ, ಉಪನಯನ ಮುಂತಾದ ಸಂಸ್ಕಾರವನ್ನು ಹೊಂದಲು ಹೋದರೆ, ಮೋಕ್ಷವನ್ನು ಪಡೆಯದೇ ಭವಸಾಗರದಲ್ಲಿ ಮುಳುಗಿ ಜನನಮರಣಕ್ಕೆ ಬದ್ಧನಾಗಿ ಅನಂತ ಕಾಲ ಹೇಸಿಕೆಯಲ್ಲಿ ಕೊಳೆಯಬೇಕಾಗುತ್ತದೆ.

ಜ್ಞಾನಾನುಭವಗಳಿಂದ ಕೂಡಿ "ಶ್ರೀ ಸದ್ಗುರುವು ಭಕ್ತನನ್ನು ಮುಟ್ಟಲಾಗಿ, ಭಕ್ತನು ಪರಮ ಗುರುವೇ ಆಗುವನು." ಸ್ಪರ್ಶದಿಂದ ಅಂಡಗಳೊಡೆದು ಪಕ್ಷಿಯಂತೆ ಗುರುವಿನ ಹಸ್ತ ಸ್ಪರ್ಶದಿಂದ ಶಿಷ್ಯನೇ ಗುರುವಾಗುತ್ತಾನೆಂದು ಸಕಲ ಶಾಸ್ತ್ರಗಳೂ ಸಾರುತ್ತವೆ. ಇದರ ಬಗ್ಗೆ ಶ್ರೀ ಪ್ರಭುದೇವರು ಹೀಗೆ ಹೇಳಿದ್ದಾರೆ:—

"ಗುರು–ಶಿಷ್ಯ ಸಂಬಂಧವನರಸಲೆಂದು ಹೋದರೆ ।
ತಾನೇ ಗುರುವಾದ । ತಾನೇ ಶಿಷ್ಯನಾದ ।
ತಾನೇ ಲಿಂಗವಾದ................ ಗುಹೇಶ್ವರಾ ॥"

"ಒಂದೆಂಬೆನೆ ? ಎರಡಾಗಿದೆ। ಎರಡೆಂಬೆನೆ ? ಒಂದಾಗಿದೆ ।
ಅಗಲಲಿಲ್ಲದ ಕೂಟಕ್ಕೆ ಬಿಚ್ಚಿ ಬೇರಾಗದ ಉಪದೇಶ ।
ಗುರು–ಶಿಷ್ಯರೆಂಬ ಭಾವಕ್ಕೆ ಬೇಧಉಂಟೇ ಗುಹೇಶ್ವರಾ ॥"

ಹೀಗೆ ಒಳಹೊರಗೆಂಬ ಉಭಯ ಸಂದೇಹವಳಿದು, ಜೀವ-ಪರಮರೆಂಬ ಉಭಯವೂ, ಪರಮನೊಬ್ಬನೇ ಎಂದು ತಿಳಿದರೆ ಗುರುವೇ ಶಿಷ್ಯ, ಶಿಷ್ಯನೇ ಗುರುವು ಎಂದು ಸ್ಪಷ್ಟವಾಗಿ ಇದರಿಂದ ಹೊಳೆಯುತ್ತದೆ. ಹೀಗಾಗಬೇಕಾದರ ಮೊದಲು ಸದ್ಭಕ್ತನಾಗಬೇಕು. ಇಂಥ ಭಕ್ತನೇ ಶಿಷ್ಯನಾಗಲಿಕ್ಕೆ ಯೋಗ್ಯನು. ಶಿಷ್ಯಂಗೆ ಭಯ-ಭಕ್ತಿ, ಕಿಂಕರ್ವಾಣತೆ ಬೇಕು. ಈ ಗುಣವುಳ್ಳವನೇ ಶಿಷ್ಯ. ಈ ಗುಣವುಳ್ಳ ಶಿಷ್ಯನೇ (ಭಕ್ತ) ಗುರುವಾಗುವನೆನ್ನುವದು ಸಿದ್ಧವಾಯಿತು. ಭಕ್ತನೇ ಗುರುವಾಗುವನೆನ್ನುವದು ಯುಕ್ತಿ-ತರ್ಕ ಪಾಂಡಿತ್ಯ ಅಭಿಪ್ರಾಯವಲ್ಲ. ಅದಕ್ಕೆ ಲೌಕಿಕ ಪಾರಮಾರ್ಥಿಕದೊಂದಿಗೆ, ಶಿವಶರಣರ ಅನುಭಾವದ ಭದ್ರ ಶಾಶ್ವತ ತಾತ್ವಿಕ ತಳಹದಿ ಇದೆ." ಎನ್ನುವದು ಮೇಲಿನ ಆಧಾರಗಳಿಂದ ಸ್ಪಷ್ಟವಾಗಿ ತಿಳಿದುಕೊಳ್ಳಬಹುದು. ಈ ಮಹತ್ವಪೂರ್ಣ ತತ್ತ್ವವು ವಿಮರ್ಶಕರು, ತತ್ವಾಭ್ಯಾಸಿಗಳು, ವಿದ್ವನ್ಮಣಿಗಳು ಉಳ್ಳ ಭಕ್ತ ಸಮಾಜಕ್ಕೆ ಹೊಳೆಯದಿದ್ದುದು ಆಶ್ಚರ್ಯಕರ! ಜಗದ ಮುಮುಕ್ಷುಗಳೆಲ್ಲರೂ ಈ ತಾತ್ವಿಕಾಂಶವನ್ನು ಸರಿಯಾಗಿ ತಿಳಕೊಂಡು ನಡೆಯಬೇಕಾದುದು ಜಗದ ಪ್ರತಿಜೀವಿಗಳ ಮುಖ್ಯ ಕರ್ತವ್ಯವಾಗಿದೆ. ಈ ಬಗ್ಗೆ ಶ್ರೀಮತ್ ಶಂಕರಾನಂದ ಸ್ವಾಮಿಗಳು ಹೀಗೆ ಹೇಳಿದ್ದಾರೆ:—

"ಗುರುವು ಭಕ್ತನನ್ನು ಮುಟ್ಟುವದರಿಂದಷ್ಟೇ ಅಲ್ಲ; ನೋಟಮಾತ್ರದಿಂದ, ನೆನಹು ಮಾತ್ರದಿಂದ, ಗುರುವನ್ನಾಗಿ ಮಾಡುತ್ತಾನೆ." ಎಂದು ಉಪದೇಶಿಸಿದ್ದಾರೆ. ಇದು ಒಳ್ಳೇ ಗಹನವಾದ ವಿಷಯ. ಅವರಿವರಿಗೆ ತಿಳಿಯಲಾರದ ವಿಷಯ, ಕೇವಲ ಸಾಕ್ಷಾತ್ ಶಿವಶರಣರಿಗಷ್ಟೇ (ಮುಮುಕ್ಷುಗಳಿಗಷ್ಟೇ) ತಿಳಿಯುವ ಮಹತ್ವದ ವಿಷಯವಾಗಿದೆ. ಜಗದ ಎಲ್ಲಜೀವಿಗಳಲ್ಲಿ ಮೋಕ್ಷಾಪೇಕ್ಷೆಯುಳ್ಳ ಎಲ್ಲ ಭಕ್ತವೃಂದವೂ, ತಮ್ಮ ತಮ್ಮ ಧರ್ಮಾನುಸಂಬಂಧವಾಗಿ ಜ್ಞಾನಾನುಭವಗಳನ್ನು ಪಡೆದ ಸದ್ಗುರುವಿನಿಂದ ಸಂಸ್ಕಾರವನ್ನು ಹೊಂದಬೇಕು. ಅಂದರೇನೆ ನಿಜಜ್ಞಾನ ಉತ್ಪನ್ನವಾಗಿ ನಿಜಾನಂದದ ಸ್ಥಿತಿಯಲ್ಲಿ ಲೀನಗೊಳ್ಳುತ್ತಾನೆ. ಅಥವಾ ಲೀನಗೊಳ್ಳಲಿಕ್ಕೆ ಮಾರ್ಗ ದೊರೆಯುತ್ತದೆ.

ಈ ಹಿಂದೆ ಗುರುತ್ವದ ಬಗ್ಗೆ ಶಿವಶರಣರು, ಸಾಧು ಸಂತರು, ಮತ್ತು ಸತ್ಪುರುಷರು ಹೇಗೆ ಆಚರಿಸಿದರೆಂಬುದನ್ನು ಸ್ವಲ್ಪ ವಿಚಾರಿಸಿ ನೋಡೋಣ :—

ಶ್ರೀ ಶಂಕರಾಚಾರ್ಯರ ಗುರುಗಳು ಶ್ರೀ ಗೌಡಪಾದರು. ಈ ವಂಶವೇ ಗುರುತ್ವಸಾಗಿಸಿಲ್ಲ. ಶ್ರೀ ಶಂಕರಾಚಾರ್ಯರೇ ಅನೇಕರಿಗೆ ಗುರುಗಳಾದರು. ಶ್ರೀ ಮಧ್ವಾಚಾರ್ಯರ ಮಕ್ಕಳೇ ಅಮತದ ಗುರುಗಳಾಗಲಿಲ್ಲ. ೧೨ ನೇ ಶತಮಾನದಲ್ಲಿ ಶ್ರೀ ಅನಿಮಿಷಯ್ಯನವರು ಶ್ರೀ ಪ್ರಭುದೇವರಿಗೆ ಗುರುಗಳಾದರು. ಶ್ರೀ ಪ್ರಭುದೇವರು ಅನೇಕರಿಗೆ ಗುರುಗಳಾದರು. ಶ್ರೀ ಬಸವಂಣನವರು ಚನ್ನಬಸವಂಣನವರಿಗೆ ಗುರುಗಳಾದರು. ಶ್ರೀ ಚನ್ನ ಬಸವಂಣನವರು ಶ್ರೀ ಸಿದ್ಧರಾಮ ಶಿವಯೋಗಿಗಳಿಗೆ ಗುರುಗಳಾದರು. ಮಹಾರಾಷ್ಟ್ರದಲ್ಲಿಯ ಸಾಧು ಸಂತರಲ್ಲಿಯಂತೂ ಗುರುತ್ವವಿರುವದು ಜ್ಞಾನವಿದ್ದಲ್ಲಿ ಮಾತ್ರ. ಆಧುನಿಕ ಕಾಲದ ಶ್ರೀ ರಾಮಕೃಷ್ಣ ಪರಮಹಂಸರು, ಸ್ವಾಮಿ ವಿವೇಕಾನಂದರು ಶ್ರೀ ರಮಣಮಹರ್ಷಿಗಳು, ಶ್ರೀ ಅರವಿಂದರು, ಇವರಲ್ಲಿ ಗುರು ಪರಂಪರೆಯು ಶಿಷ್ಯ ಪರಂಪರೆಯಾಗಿ ಸಾಗಿದೆಯೇ ವಿನಾ, ವಂಶಪರಂಪರವಾಗಿ ಸಾಗಿರುವದಿಲ್ಲ. ಇದರಿಂದ ಗುರುತ್ವವು ರಕ್ತವನ್ನು ಹಿಡಿದುಕೊಂಡು ಸಾಗದೇ ಭಕ್ತಿ ಅನುಭವಗಳ ಅನುಸರಣಿಯಿಂದ ಶಿಷ್ಯಪರಂಪರವಾಗಿ ಸಾಗುವದೆನ್ನುವದು ಸ್ಪಷ್ಟವಾಯಿತು. ಇದನ್ನು ಜಗದ ಎಲ್ಲ ಮುಮುಕ್ಷುಗಳು ಗುರುಮಹತ್ವವನ್ನು ಸಂಪೂರ್ಣವಾಗಿ ವಿಚಾರಿಸಿಕೊಂಡು ಜ್ಞಾನಾನುಭವಗಳನ್ನು ಪಡೆದು ನಿಜಾನಂದದಲ್ಲಿ ವಿರಮಿಸಿ ಧನ್ಯರಾಗುವಿರೆಂದು ಆಶಿಸುತ್ತೇವೆ ಇಷ್ಟಕ್ಕೆ ಈ ವಿಷಯ ಸಮಾಪ್ತಗೊಳಿಸಿದೆ.

# ಪರೀಕ್ಷಾ ನಿಲಯ



ವಿಶ್ವವಿದೊಂದು ಪರೀಕ್ಷಾ ನಿಲಯವು
ಉಮೇದವಾರನು ನೀನಣ್ಣಾ
ದೇವ ಪರೀಕ್ಷಕ ಕಾಯುತಲಿರುವನು
ಜೀವನ ಪ್ರಶ್ನೆಯ ಬಿಡಿಸಣ್ಣಾ
ಕಾಯುತ ದೇವನು ಅವಿತಿಹನಲ್ಲಿ
ಹೊರಳೀ ಹೊರಳೀ ನೋಡದಿರಲ್ಲಿ
ಹೇಳದಿರಣ್ಣಾ "ದೇವನು ಎಲ್ಲಿ?"
ಬಂದುದ ಗೀಚಣ್ಣಾ
ಅವಿತಿಹ ದೇವನ ಅರಿಯದೆ ಮೋಸಕೆ
ಗುರಿಯಾಗದಿರಣ್ಣಾ !
ಜೀವನದಲ್ಲಿದು ಸುಸಂಧಿಯಣ್ಣಾ !
ಕಳಕೊಳ್ಳದಿರಣ್ಣಾ !
ತೇರ್ಗಡೆ ಹೊಂದಲು ಮೋಸಮಾಡದಿರು
ವಿಶ್ವವ್ಯಾಪಿಯೆಲೆ ಆ ಪರೀಕ್ಷಕನು !
ದೇವನ ಕಣ್ಣೊಳು ಮಣ್ಣನೆರಚದಿರು !
ಸರ್ವಜ್ಞನೋ ಅಣ್ಣಾ !
ಮಣ್ಣನೆರಚಿದೊಡೆ—ಹೊರದೂಡುವನೈ
ಜೀವನ ಹಾಳಣ್ಣಾ !
ಸತ್ಯದಿ ಬರೆಯೈ ಬಂದುದ ಗೀಚೈ
ನೋಡುವಿಯೇಕಣ್ಣಾ ?
ಸತ್ಯಕೆ ಸಾವಿಲ್ಲೆಲವೋ ಅಣ್ಣಾ!
ಸತ್ಯದಿ ತೇರ್ಗಡೆ ಹೊಂದೋ ಅಣ್ಣಾ !
ಚಾಕರಿ ದೊರೆವುದು ಸಗ್ಗದೊಳಣ್ಣಾ !
ಸತ್ಯದಿ ಬರೆಯಣ್ಣಾ
ಬಂದುದ ಗೀಚೈ—ಸತ್ಯವಮರವೈ !
ತೇರ್ಗಡೆ ಹೊಂದಣ್ಣಾ

— ಚಂದ್ರಶೇಖರ ಕಂಬಾರ
ಗೋಕಾಕ

# ಕಲ್ಯಾಣ ದಾರಿ



ಕಲ್ಯಾಣದಾರಿ ಕಾಣುತಿದೆ ನೋಡಿರಿ
ಒಲ್ಲಿದರು ಬಾಂಧವರು ಬೇಗನೆ ಏಳಿರಿ ||ಪಲ್ಲ||
ಅಕ್ಕತಂಗಿಯರೆ। ಅಣ್ಣ ತಮ್ಮಂದಿರೇಳಿರಿ
ಮಮತೆಯಿಂ ಕಾಯಕವ ಮೋದದಿಂ ಕೊಳ್ಳಿರಿ
ಹಗಲಿರಳು ಎನ್ನದಲೆ ಹರುಷದಿಂ ದುಡಿಯಿರಿ
ಕರುನಾಡ ಉದ್ಧಾರ ಮಂತ್ರವಿದು ಕೇಳಿರಿ !
ಓಹೋ ! ಭಾರತದ ಏಳ್ಗೆಯಾ ಮಂತ್ರವಿದು ಕೇಳಿರಿ
ನನ್ನಿಯಿಂ ದುಡಿದುಡಿದು ಸಂಪದವಗಳಿಸಿರಿ
ಪುಣ್ಯಾತ್ಮ ಬಸವಣ್ಣ ತೋರಿಹನು ದಾರಿ
ಅಣ್ಣವರು ಅಕ್ಕವರು ಬೇಗನೇ ಏಳಿರಿ
ಎಡಬಿಡದೆ ಕಾಯಕವ ಮೋದದಿಂ ಮಾಡಿರಿ
ಬಡವರಿಗೆ ನೆರವಾಗಿ ಪುಣ್ಯವಂ ಪಡೆಯಿರಿ
ಅಕ್ಕ ಮಹಾದೇವಿಯು ಕೃಪೆಯನ್ನು ಮಾಳ್ಪಳು
ಚಿಕ್ಕವರು ದೊಡ್ಡವರು ಕಾಯಕವ ಗೈಯ್ಯಿರಿ
ಲಕ್ಕಮ್ಮ ಬರುತಿಹಳು ಬಾಗಿಲಕೆ ಓಡಿ !
ಚಿತ್ತ ಶುದ್ಧಿಯಲಿ ಕಾಯಕವ ಕೈಕೊಳ್ಳಿರಿ
ನನ್ನಿಯಿಂ ಕರ್ನಾಟ ಉದ್ಧಾರ ಗೈಯ್ಯುವಾ
ಮುನ್ನಿನೊಲು ಸಂಪದದಿ ನಾವಿಂದು ಬಾಳುವಾ
ಪಾಲು ಪಣ್ಣುಗಳಂ ಪಿರಿದಾಗಿ ಬೆಳಸಿರಿ
ಸಮತೆಯಿಂ ಪಲಿಸುತ್ತ ದೃಢಕಾಯರಾಗಿರಿ
ಬಾಲ ಬಾಲಕಿಯರೇ ಸುಗುಣಮಂ ಕಲಿಯಿರಿ
ಓರಣದಿ ಒಂದಾಗಿ ನೈಜದಿಂ ನಡೆಯಿರಿ
ಹಳ್ಳಿಗಳ ಆರೋಗ್ಯ ಸಂಪದವ ಬೆಳಸಿರಿ
ದಿಲ್ಲಿಗದು ಸಹಜ ಮುಟ್ಟುವದು ಕೇಳಿರಿ

## ಶಿವಾನುಭವ.

ಪುಣ್ಯ ಪುರಾಣ ಶಾಸ್ತ್ರಂಗಳು ಸಾಗಲಿ
ಶರಣರಾ ನಡೆನುಡಿಯು ನಾಡೆಲ್ಲ ಹಬ್ಬಲಿ.
"ಶಿವಾನುಭವ ಸಂಘ'' ಊರೂರಿಗಿರಲಿ.
ಕಲ್ಯಾಣ ದಾರಿಯಿದು ಕಣ್ದೆರೆದು ನೋಡಿರಿ.
ಸಕಲರೂ ಮಮತೆಯಂ ಮಾಡಲ್ಕೆ ಕಲಿಯಿರಿ
ವಿಶ್ವಶಾಂತಿಯ ದಾರಿಯಿದು ನಿಜವಾಗಿ ನೋಡಿರಿ.
ವಿಜಯ ಭುವನೇಶ್ವರಿಯ ಚರಣಕ್ಕೆ ಎರಗಿರಿ
ಜಯ! ಜಯತು! ಕರ್ನಾಟ ಬಾವುಟವ ಮೆರೆಸಿರಿ.

—ಶ್ರೀ. ಆನಂದಕವಿಗಳು- ಕುರಗುಂದ.

From
*Shivanubhava*
*Office*
**BIJAPUR**

ಶ್ರೀ. ಚನಮಲ್ಲಪ್ಪ ಸಿದ್ದಪ್ಪ ಒಡೇವಿ
ಮು— ಬನ್ನಟ್ಟಿ
ತಾ— ಜಮಖಂಡಿ

**R. N. B. 2554**




ಈ ಪತ್ರಿಕೆಯನ್ನು ಇದರ ಸಂಪಾದಕರಾದ ರಾ|| ಬ|| [illegible] ಕಟ್ಟಿ, ಬಿ. ಎ. ಎಲ್. ಎಲ್. ಬಿ. ಇವರು ವಿಜಾಪೂರ ವಾರ್ಡ ನಂ. ೨. ಮನೆ ನಂ. ೧೩೬೮ ರಲ್ಲಿರುವ ಹಿತಚಿಂತಕ ಪಾವರ ಪ್ರಿಂಟಿಂಗ್ ಪ್ರೆಸ್ಸಿನಲ್ಲಿ ಮುದ್ರಿಸಿ ಅಲ್ಲಿಯೇ ಪ್ರಸಿದ್ಧಿಸಿದರು.

ಸಂಪುಟ ೩೦  ಶ್ರೀ ಸಂಚಿಕೆ ೧೨

# ಶಿವಾನುಭವ

ಸಂಪಾದಕರು

ರಾ|| ಬ|| ಫ. ಗು. ಹಳಕಟ್ಟಿ,
ಬಿ. ಎ. ಎಲ್. ಎಲ್. ಬಿ.
ವಿಜಾಪುರ.

[ ವಾರ್ಷಿಕ ಚಂದಾ ೫-೧೨-೦ ಅಂಚೆಯ ವೆಚ್ಚ ಬೇರೆ ]

ಡಿಶಂಬರ ೧೯೫೬

# ವಿಷಯಾನುಕ್ರಮಣಿಕೆ

# ಶಿವಾನುಭವ

ಸಂಪುಟ ೩೦ | ಡಿಶಂಬರ ೧೯೫೬ | ಸಂಚಿಕೆ ೧೨

## ಗುರುಲಿಂಗಜಂಗಮವೆಂದರೇನು ?

[ಲೇಖಕ:- ಸತ್ಯವಾದಿ]

ಗುರು ಲಿಂಗ ಜಂಗಮ ಈ ಮೂರು ಆಧ್ಯಾತ್ಮಿಕ ಜೀವನದ ತಳಹದಿಗಳು. ಇವು ಹೊರಗಿಲ್ಲ; ನಮ್ಮೊಳಗೇ ಇವೆ. ಪ್ರತಿಯೊಬ್ಬನು ಗುರುವಾಗಬಲ್ಲ, ಲಿಂಗವಾಗಬಲ್ಲ, ಜಂಗಮವಾಗಬಲ್ಲ. ಅಂಥ ಕ್ರಿಯಾ ಜ್ಞಾನವು ಮಾತ್ರ ಅವನಲ್ಲಿ ಅಳವಡಬೇಕು. ತನುವೇ ಗುರುವು, ಮನವೇ ಲಿಂಗ, ಭಾವವೇ ಜಂಗಮ. ತನು ಮನ ಭಾವ ಸಂಸ್ಕೃತಿಯನ್ನು ನಾವು ಮಾಡಿಕೊಂಡರೆ ಗುರುಲಿಂಗಜಂಗಮರು ನಾವೇ ಆದಂತಾಗುವದು. ಅಂದಮೇಲೆ ಬಾಹ್ಯ ಗುರುಲಿಂಗಜಂಗಮದ ಹಂಗೇನು ? ಆದ್ದರಿಂದ ವೀರಶೈವ ಸಮಾಜವು ಮೂಢ ಭಾವನೆಯಿಂದ ಬಾಹ್ಯ ಗುರುಲಿಂಗಜಂಗಮಗಳ ಕಡೆಗೆ ಅಷ್ಟು ಮಹತ್ವ ಕೊಡದೆ, ಅಂತರಂಗದ ಗುರುಲಿಂಗ ಜಂಗಮದ ಕಡೆಗೆ ವಿಶೇಷ ಲಕ್ಷಗೊಟ್ಟು ನಡೆದದ್ದಾದರೆ ಸಮಾಜದಲ್ಲಿ ತೀವ್ರವೇ ದೊಡ್ಡ ಕ್ರಾಂತಿಯಾಗುವದು. ಇದೇ ನಿಜವಾದ ಶರಣ ಮಾರ್ಗ.

ಬಾಹ್ಯಕ್ಕೆ ನಾವು ಅಂಟಿಕೊಂಡರೆ ನಮಗೆ ನಿಜವಾದ ಗುರುಗಳು ಸಿಗುವದಿಲ್ಲ. ನಿಜವಾದ ಲಿಂಗದ ಅರಿವು ನಮಗಾಗುವದಿಲ್ಲ. ನಿಜವಾದ ಜಂಗಮವು ನಮಗೆ ಗುರುತಾಗುವದಿಲ್ಲ. ನಾವು ಕೇವಲ ಮೂಢ ಭಾವನೆ ಹಾಗು ಯಾಂತ್ರಿಕ ಕ್ರಿಯೆಗಳ ದಾಸರಾಗಿಬಿಡುತ್ತೇವೆ. ನಮ್ಮ ಆಗಮಗಳೇನೋ " ಏಕೋದೇವ ಸ್ತ್ರಯೋಭಾಗಾಃ ಗುರುಲಿಂಗಂತು ಜಂಗಮಃ " ಅಂದರೆ ಒಬ್ಬನೇ ದೇವರು ಕ್ರಿಯಾಭೇದದಿಂದ ಗುರು, ಲಿಂಗ, ಜಂಗಮ

ವೆಂದು ಮೂರು ತೆರನಾಗಿರುವನೆಂದು ಹೇಳುತ್ತವೆ. ಅಂದ ಮೇಲೆ ಒಬ್ಬ ದೇವನ ಸ್ವರೂಪಿಗಳಾದ ಗುರುಲಿಂಗ ಜಂಗಮಗಳು ಸಂಸವಾನವಾದವು ಗಳು. ಅವುಗಳಲ್ಲಿ ತಾರತಮ್ಯಗಳಿಲ್ಲವೆಂಬುದು ಸ್ಪಷ್ಟವು. ಹೀಗಿದ್ದು ನಮ್ಮ ಸಮಾಜದಲ್ಲಿ ಗುರುಜಂಗಮರು ನಾ ಹೆಚ್ಚು ತಾ ಹೆಚ್ಚು ಎಂದು ಗಲಭೆ ಯೆಬ್ಬಿಸಿ ಸಮಾಜಕ್ಕೆ ಕಲಂಕ ತಂದಿರುವದರಿಂದ ಇಂಥ ಗುರುಜಂಗಮರನ್ನು ಭಕ್ತರು ಆಶ್ರಯಿಸುವದರಿಂದ ಪ್ರಯೋಜನವೇನು ?

ಪರಸ್ಪರ ಹೊಡೆದಾಡುವ ಗುರುಜಂಗಮರಲ್ಲಿ ಆಧ್ಯಾತ್ಮಿಕ ಕಳೆಯಾ ದರೂ ಹೇಗೆ ಇರುವದು ? ಇಂಥವರು ಭಕ್ತರನ್ನು ಹೇಗೆ ಉದ್ಧರಿಸುವರು ? ತಮ್ಮ ಉದ್ಧಾರವನ್ನೇ ತಾವು ಮಾಡಿಕೊಳ್ಳದವರು ಅನ್ಯರನ್ನುದ್ಧರಿಸಬ ಲ್ಲರೇ ? ನಿಜವಾದ ಧರ್ಮಜ್ಞಾನವು ತಮಗೆ ಇಲ್ಲದಿರುವಾಗ ಅದನ್ನು ಅನ್ಯರಿಗೆ ನೀಡಬಲ್ಲರೇ ? ತ್ಯಾಗ ಮಾರ್ಗವನ್ನು ಬಿಟ್ಟು ಭೋಗ ಸ್ವಾರ್ಥ ಲಾಲಸೆಯಿಂದ ಉಭಯರು ಹೋರಾಡುವಾಗ ಸಮಾಜವು ಪ್ರಗತಿ ಹೊಂದಬಹುದೇ ? ಭಕ್ತರು ಇಂಥ ಗುರು ಜಂಗಮರನ್ನು ಅಂಧ ಶ್ರದ್ಧೆ ಯಿಂದ ನಂಬಿ ಕುಳಿತರೆ ಯಾವ ಗತಿಯೂ ಇಲ್ಲ. ಭಕ್ತರು ಸಹ ಒಂದ ಲ್ಲೊಂದು ಪಂಗಡಕ್ಕೆ ಅಂಟಿಕೊಂಡು ಸಮಾಜವನ್ನು ಮತ್ತಷ್ಟು ಹದಗೆಡಿಸ ಬೇಕಾದೀತೇ ವಿನಾಃ ಅದನ್ನು ಬೆಳಕಿಗೆ ತರಲು ಎಂದಿಗೂ ಶಕ್ಯವಿಲ್ಲ.

ಗುರುಲಿಂಗ ಜಂಗಮದ ಬಾಹ್ಯ ವ್ಯವಸ್ಥೆಯು ಸಮಾಜದ ಬಂಧುರತೆ ಗಾಗಿ ಹಿಂದಕ್ಕೆ ನೇರ್ಪಟ್ಟಿದ್ದು ನಿಜ. ಅದರಿಂದ ಸಮಾಜದಲ್ಲಿ ಪ್ರೇಮ ಸಹಕಾರ ಒಕ್ಕಟ್ಟುಗಳು ಬೆಳೆದದ್ದೂ ನಿಜ. ಆದರೆ ಈಗ ಆ ಬಾಹ್ಯ ವ್ಯವಸ್ಥೆಗೆ ಕೊಳೆಯು ಅಂಟಿಕೊಂಡಿದೆ. ಈ ಕೊಳೆಯು ಸಮಾಜಕ್ಕೆ ನಿಜ ವಾಗಿಯೂ ವಿಘಾತಕವಾದುದು. ಈಗಿನ ಮಠಮಾನ್ಯಗಳು ಆಸ್ತಿ ಪಾಸ್ತಿ ಗಳ ನೆಲೆವೀಡಾಗಿವೆ. ಸ್ವಾರ್ಥ ಭೋಗಗಳ ತವರ್ಮನೆಯಾಗಿವೆ. ಆಧ್ಯಾ ತ್ಮಿಕ ತೇಜವನ್ನು ಕಳೆದುಕೊಂಡು ಮಸಣದಂತಾಗಿವೆ. ಜೀವವಿಲ್ಲದ ಹೆಣಕೆ ಮಾಡಿದ ಸಿಂಗಾರದಂತೆ ಕಂಗೊಳಿಸುತ್ತವೆ. ಇದನ್ನು ಸುಧಾರಿಸುವದು ಯಾರಿಗೂ ಶಕ್ಯವಿಲ್ಲದಂತಾಗಿದೆ. ಕಿರಿಯರು ಕಚ್ಚಾಡಿದರೆ ಹಿರಿಯರು ಬುದ್ಧಿ ಹೇಳಿ ಸನ್ಮಾರ್ಗಕ್ಕೆ ಹಚ್ಚಬಹುದು. ಹಿರಿಯರೇ ಕಚ್ಚಾಡಹತ್ತಿದರೆ ಕಿರಿ ಯರು ಅವರಿಗೆ ಬುದ್ಧಿ ಹೇಳಬೇಕೇ ? ತಮ್ಮ ತಮ್ಮೊಳಗೆ ಪ್ರೇಮೈಕ್ಯತೆ ಗಳನ್ನು ಬೆಳೆಯಿಸಿಕೊಂಡು ಸಮಾಜೋದ್ಧಾರ ಮಾಡುವದು ಅವರ ಕೆಲಸ.

ಅವರಿಗೆ ಬುದ್ಧಿ ಹೇಳಲು ಕಿರಿಯರಿಗೆ ಯಾವ ಅಧಿಕಾರ ? ಒಂದು ವೇಳೆ ಬುದ್ಧಿ ಹೇಳಿದರೂ ಕೇಳುವವರಾರು ? ಆದ್ದರಿಂದ ಇಂಥ ಗುರುಜಂಗಮರ ಹಾದಿಯನ್ನೇ ಬಿಟ್ಟು, ಭಕ್ತರು ಸ್ವತಂತ್ರ ಸಂಸ್ಥೆಗಳನ್ನೇರ್ಪಡಿಸಿಕೊಂಡು ಜನಗಳ ಲಕ್ಷವನ್ನು ನಿಜವಾದ ಆಂತರಿಕ ಗುರುಲಿಂಗ ಜಂಗಮದತ್ತ ಹೊರಳಿಸುವದು ಉತ್ತಮೋಪಾಯವು. ಅದೇ ಸಮಾಜೋನ್ನತಿಯ ಲಕ್ಷಣ.

ಬಾಹ್ಯ ಗುರುಲಿಂಗ ಜಂಗಮರ ಸಹಾಯವಿಲ್ಲದೆ ಕೇವಲ ಆಂತರಿಕ ಗುರುಲಿಂಗ ಜಂಗಮದಿಂದ ಆಧ್ಯಾತ್ಮಿಕ ಪ್ರಗತಿಯು ಶಕ್ಯವಿಲ್ಲೆಂದು ಕೆಲವರು ಪ್ರತಿಪಾದಿಸಬಹುದು. ಹಾಗಾದರೆ ಈಗಿನ ಯಾವ ಗುರುಜಂಗಮರು ಎಷ್ಟೆಷ್ಟು ಆಧ್ಯಾತ್ಮಿಕ ಪ್ರಗತಿಯನ್ನು ಹೊಂದಿದ್ದಾರೆಂಬುದನ್ನು ಸಮಾಜವು ತಿಳಿದುಕೊಳ್ಳಲಿ. ಯಾರು ಯಾರಿಗೆ ಅಷ್ಟಾವರಣ, ಪಂಚಾಚಾರ, ಷಟ್‌ಸ್ಥಲಗಳ ಪರಿಪೂರ್ಣ ಜ್ಞಾನವು ಆಳವಟ್ಟಿದೆ ಹೇಳಲಿ ? ಯಾರು ಗೂಢವಾದ ಸಕೀಲ ಸಂಬಂಧಗಳನ್ನು ಪ್ರತಿಪಾದಿಸಬಲ್ಲರು ಹೇಳಲಿ; ಅಂಥವರಿಗೆ ಗುರುವೆನ್ನಬಹುದು. ಜಂಗಮವೆನ್ನಬಹುದು. ನಿಜವಾಗಿ ನೋಡಿದರೆ ಅಂಥ ಗುರುಜಂಗಮರು ಸಮಾಜದಲ್ಲಿ ಕಾಣದಿರುವದು ಬಹು ವಿಷಾದದ ಸಂಗತಿ. ನಾಟಕದ ಪಾತ್ರಗಳಂತೆ ನಟಿಸುವ ಕೇವಲ ಲಾಂಛನಧಾರಿಗಳಾದ ಗುರುಜಂಗಮರಿಗೆ ಸಮಾಜವು ಸಿರ ಬಾಗಬೇಕೇ ಹೇಗೆ ? ಇದು ಮೂಢ ಭಾವನೆಯ ಪರಾಕಾಷ್ಠೆಯಲ್ಲವೇ ? ಈ ಮೂಢ ಭಾವನೆಯ ದುರುಪಯೋಗವನ್ನು ಈಗಿನ ಗುರುಜಂಗಮರು ಇನ್ನೆಷ್ಟು ದಿವಸ ಹೊಂದುವರು ? ಭಕ್ತರು ಮೊದಲು ಜಾಣರಾದರೆ ಗುರುಜಂಗಮರೂ ಜಾಣರಾಗುತ್ತಾರೆ. ಆದ್ದರಿಂದ ಅವರು ಇಂಥ ಗುರುಜಂಗಮರಗೊಡವೆಯನ್ನೇ ಬಿಟ್ಟು ಸ್ವತಂತ್ರವಾಗಿ ತಮ್ಮ ಉದ್ಧಾರ ತಾವೇ ಮಾಡಿಕೊಳ್ಳಬೇಕು.

ಭಕ್ತರು ಗುರುಜಂಗಮರ ದೋಷಗಳನ್ನೆಣಿಸಕೂಡದು. ಅದು ಮಹಾ ಪಾಪವೆಂದು ಅಜ್ಞಜನರ ಬಾಯಿಬಡೆದು ಭೋಗ ವಿಲಾಸದಲ್ಲಿ ನಲಿದಾಡುವ ಅನೇಕ ಸ್ವಾಮಿಗಳನ್ನು ನಾವು ಕಾಣುತ್ತೇವೆ. ಅವರೇನೋ ತಮ್ಮ ಸ್ವಾರ್ಥಸಾಧನೆಗಾಗಿ ಭಕ್ತರನ್ನು ಬೆದರಿಸಬಹುದು. ಆದರೆ ಅರಿವುಳ್ಳ ಭಕ್ತರು ಸಮಾಜ ಹಿತದೃಷ್ಟಿಯಿಂದ ಅಂಥವರನ್ನು ಬೈಲಿಗೆಳೆಯದೆ ಸುಮ್ಮನೆ ಬಿಡುವದೂ ಅಧೋಗತಿಯ ಲಕ್ಷಣವೇ. ಅವರಿಂದ ಸಮಾಜವು ಶಿಥಿಲವಾಗಿ ಅನೈತಿಕ ವ್ಯವಹಾರಗಳು ಉಚ್ಛೃಂಖಲವೃತ್ತಿಯಿಂದ ನಡೆಯಲು

ಆಸ್ಪದಕೊಟ್ಟಂತಾಗುತ್ತದೆ. ಅದಕ್ಕಾಗಿಯೇ ಬಸವಣ್ಣನವರು "ಲಾಂಛನಕ್ಕೆ ಶರಣೆಂಬೆ, ಲಾಂಛನಕ್ಕೆ ತಕ್ಕ ಆಚರಣೆಯಿಲ್ಲದಿದ್ದರೆ ಕೂಡಲಸಂಗಮದೇವರ ಸಾಕ್ಷಿಯಾಗಿ ಛೀಯೆಂಬೆ" ಎಂದು ಹೇಳಿದ್ದಾರೆ.

ಇದು ವೈಜ್ಞಾನಿಕ ಯುಗ. ಈ ಯುಗದಲ್ಲಿ ಅಂಧಶ್ರದ್ಧೆ ಮೂಢಭಾವನೆಗಳಿಗೆ ಎಡೆಯಿಲ್ಲ. ಅವು ನಷ್ಟವಾಗೇ ತೀರುತ್ತವೆ. ಭಕ್ತರು ಜಾಣರಾಗಹತ್ತಿದ್ದಾರೆ. ಇಂಥ ಸ್ಥಿತಿಯಲ್ಲಿ ಉಚ್ಚ ಪೀಠಾಧಿಕಾರಿಗಳು ತಮ್ಮ ವೃತ್ತಿಯನ್ನು ಕಾಯ್ದುಕೊಂಡು ಆಧ್ಯಾತ್ಮ ತತ್ವವನ್ನಳವಡಿಸಿಕೊಂಡು ತಮ್ಮೊಳಗೆ ಐಕ್ಯವನ್ನು ಬೆಳೆಯಿಸಿಕೊಂಡು ಸಮಾಜ ಕಾರ್ಯವನ್ನು ಮಾಡಿದರೆ ಒಳಿತು. ಇಲ್ಲದಿದ್ದರೆ ಅವರ ಸ್ಥಾನಮಾನಗಳಿಗೆ ಚ್ಯುತಿಯಾಗುವ ದುರ್ಧರ ಪ್ರಸಂಗಬರಬಹುದು. ಬಂದೇಬರುತ್ತದೆ. ಮಠಮಾನ್ಯಗಳು ಟ್ರಸ್ಟಿಗಳ ಸೊತ್ತಾಗುವವು. ಭಕ್ತರು ಟ್ರಸ್ಟಿಗಳಾಗುವರು. ಅವರು ಗುರುಜಂಗಮರ ಬಾಹ್ಯಾಡಂಬರವನ್ನು ನಿರ್ಮೂಲ ಮಾಡುವರು. ಅವರ ಯೋಗ್ಯತೆ ಅಂತರಂಗ ಪರಿಶುದ್ಧತೆಗಳನ್ನು ಪರೀಕ್ಷಿಸಿ ಭಕ್ತಮಾಹೇಶ ಎಂಬ ಸಂಕುಚಿತಭಾವನೆಗೆ ಇಂಬುಗೊಡದೆ ಸತ್ಪಾತ್ರರನ್ನು ಮಠಮಾನ್ಯಗಳಿಗೆ ಗುರುಜಂಗಮರನ್ನಾಗಿ ಆರಿಸುವರು. ಅದೇ ಸಮಾಜದ ಶುಭಚಿಹ್ನವು. ಅಂಥ ಸುಸಂಧಿಯು ತೀವ್ರವೇ ಬರುತ್ತದೆನ್ನಲಿಕ್ಕೆ ಸಂದೇಹವಿಲ್ಲ. ಭಕ್ತರು ಅಲಕ್ಷ ಮಾಡಿದರೂ ಸರಕಾರವು ಅಲಕ್ಷ ಮಾಡುವಂತಿಲ್ಲ.

ಲಿಂಗಧಾರಿಗಳೆಲ್ಲರೂ ಸರಿಸಮಾನರೆಂಬ ಉದಾತ್ತ ಹಾಗೂ ಉದಾರ ವಿಚಾರವನ್ನು ಶಿವಶರಣರು ಬೋಧಿಸಿ ಪ್ರಚಾರದಲ್ಲಿ ತಂದರು. ಆದರೆ ಈಗಿನ ಜಾತ್ಯತೀತ ವಾತಾವರಣದಲ್ಲಿ ಕೂಡ ವೀರಶೈವರಲ್ಲಿ ಜಾತಿಭೇದವನ್ನೆಣಿಸುವ ಸಂಕುಚಿತ ವೃತ್ತಿಯು ಕಂಡುಬರುತ್ತಿರುವದು ದುರ್ದೈವದ ಸಂಗತಿ. ಭಕ್ತಭಕ್ತರಲ್ಲಿ ಭೇದ, ಭಕ್ತಮಾಹೇಶ್ವರರಲ್ಲಿ ಭೇದ, ಹೀಗೇಕೆ ಮಧ್ಯಂತರದಲ್ಲಿ ತಾರತಮ್ಯಗಳು ನೆಲೆಸಿದವೋ ತಿಳಿಯದು. ಅಯ್ಯನವರೆಂಬ ಜಾತಿಯವರು ತಾವು ಹೆಚ್ಚಿನ ಕುಲದವರೆಂದು ಸಾಧಿಸಿ ಮಠಪೀಠಾಧಿಕಾರಗಳನ್ನೆಲ್ಲ ತಾವೇ ಆಶ್ರಯಿಸಹತ್ತಿದ್ದಾರೆ. ಅಯ್ಯನವರೇ ಗುರುವಿರಕ್ತರಾಗಬೇಕೆಂದು ಯಾವ ಶಾಸ್ತ್ರದಲ್ಲಿ ಹೇಳಿದೆ? ಭಕ್ತರಿಗೇಕೆ ಬರುವದಿಲ್ಲ? ಎಂಥ ಕ್ಷುದ್ರ ವಿಚಾರವಿದು? ಜಾತ್ಯತೀತರಾದ ವೀರಶೈವರಿಗೆ ಪುನಃ ಜಾತಿಭೇದವನ್ನಂಟಿಸಿ ಗುರುತರವಾದ ವೀರಶೈವ ಮತಕ್ಕೆ ಲಾಂಛನವ

ನ್ನುಂಟು ಮಾಡಬಹುದೇ? ಈ ಸಂಕುಚಿತಭಾವವು ನಮ್ಮಲ್ಲಿ ಉದ್ಭವಿಸಿದರೆ— ನಮ್ಮ ಶರಣರ ತತ್ವಗಳನ್ನು ಮನವಾರೆ ಹೊಗಳಿ ಈ ಮತವನ್ನಂಗೀಕರಿಸಬೇಕೆಂಬ ಅನ್ಯಮತೀಯರು ಅದನ್ನು ಹೇಗೆ ಸ್ವೀಕರಿಸಬೇಕು? ಬಿಟ್ಟರೆ ಬಿಟ್ಟರು, ನಮ್ಮ ಜಾತ್ಯಂಧತೆಯನ್ನು ನಾವೇಕೆ ಬಿಡೋಣವೆಂದರೆ ನಮ್ಮ ಮತವು ಕರ್ಮಠವಾಗಿದ್ದು ಉದಾರವಲ್ಲೆಂದು ಜಗತ್ತಿಗೆ ನಾವು ಸಾರಿ ಹೇಳಬೇಕಾದೀತು. ನಮ್ಮದು ಉದಾರ ಹಾಗೂ ವಿಶಾಲ ಧರ್ಮವೆಂದು ಕೈಯೆತ್ತಿ ಹೇಳಿ ಅದರಲ್ಲಿದ್ದವರಿಗೂ ಹೊಸದಾಗಿ ಪ್ರವೇಶ ಮಾಡುವವರಿಗೂ ಭಿನ್ನಭೇದವನ್ನು ಕಲ್ಪಿಸಹತ್ತಿದರೆ ಧರ್ಮದ ಪ್ರಗತಿಯು ಹೇಗಾಗಬೇಕು? ಶರಣರ ತತ್ವಗಳ ವಿರುದ್ಧ ಹೋಗುವದೆಂದರೆ ಶರಣರಿಗೆ ದ್ರೋಹ ಮಾಡಿದಂತೆಯೇ ಸರಿ.

ಎಲ್ಲಿಯ ವರೆಗೆ ಜಾತಿಮತವಾದಿಗಳು ತಮ್ಮ ಜಾತ್ಯಂಧತೆಯನು ತೊರೆದು ಲಿಂಗಧಾರಿಗಳೆಲ್ಲರೂ ಸರಿಸಮಾನವೆಂದು ತಿಳಿದು ಆಚರಿಸುವದಿಲ್ಲವೋ ಅಲ್ಲಿಯ ವರೆಗೂ ಅಂಥವರನ್ನು ದೂರೀಕರಿಸಿ ಪ್ರಗತಿಶೀಲರು ಮುಂದೆಬರಬೇಕು. ಪ್ರಗತಿಶೀಲರಲ್ಲಿ ಸಂಘಟನೆಯಾಗಬೇಕು. ಶಿವಭಕ್ತರೆಂಬದೊಂದೇ ವೀರಶೈವರ ಜಾತಿಯು. ಶಿವಭಕ್ತರಲ್ಲದವರೇ ಭವಿಗಳು. ಆಗಂತುಕ ಲಿಂಗಧಾರಿಗಳೆಲ್ಲ ಭಕ್ತರೇ. ಅಯ್ಯನವರೆನಿಸಿಕೊಳ್ಳುವವರೂ ಭಕ್ತರೇ. ಗುರು ಜಂಗಮರೆನಿಸಿಕೊಳ್ಳುವವರೂ ಭಕ್ತರ ಕುಲದಲ್ಲಿಯೇ ಹುಟ್ಟಿರುತ್ತಾರೆ. ಗುರು ಜಂಗಮರು ಅವಿವಾಹಿತರಾದ್ದರಿಂದ ಇವರಿಗೆ ಬೇರೆ ವಂಶವೆಂಬುದಿಲ್ಲ. ತಾವು ಮಾಹೇಶ್ವರ ಜಾತಿಯೆಂಬುದು ಹುಸಿ. ಕಾರಣ ಜನ್ಮತಃ ಲಿಂಗಧಾರಿಗಳಿರಲಿ ಅಥವಾ ಆಗಂತುಕ ಲಿಂಗಧಾರಿಗಳಿರಲಿ ಅವರೆಲ್ಲರೂ ಭಕ್ತರೇ. ಅಂಥ ಭಕ್ತರಲ್ಲಿ ಯಾರು ಷಟ್‌ಸ್ಥಲ ಜ್ಞಾನಸಂಪನ್ನರಾಗಿ ಆಧ್ಯಾತ್ಮ ಬಲವನ್ನು ಪಡಕೊಳ್ಳುವರೋ ಅವರಿಗೆ ಗುರುತ್ವವು ಸಲ್ಲಬೇಕು. ಅವರಿಗೇ ಜಂಗಮತ್ವವು ಸಲ್ಲಬೇಕು. ಕೇವಲ ಅಯ್ಯನವರೆನಿಸಿಕೊಳ್ಳುವವರಿಗೆ ಮಾತ್ರ ಅವು ಮೀಸಲಾಗಿರಬೇಕೆಂಬ ಸಂಕುಚಿತ ಭಾವವನ್ನು ತೊಡೆದುಹಾಕಬೇಕು. ಅದಕ್ಕಾಗಿ ನವಜಾಗ್ರತಿಯನ್ನುಂಟು ಮಾಡುವ ಧಾರ್ಮಿಕ ಸಂಸ್ಥೆಗಳು ಸ್ಥಾಪಿಸಲ್ಪಟ್ಟು ಅವುಗಳಲ್ಲಿ ಎಲ್ಲ ಒಳಪಂಗಡದವರ ಮಕ್ಕಳಿಗೂ ಪ್ರವೇಶವಿರಬೇಕು. ಅಂಥ ಧಾರ್ಮಿಕ ಸಂಸ್ಥೆಗಳಲ್ಲಿ ಕೆಲಸ ಮಾಡುವ ಅಧ್ಯಾಪಕರು ಬರೇ ಮಾಹೇಶ್ವರರಿರದೆ ವೀರಶೈವ ಮತತತ್ವಗಳನ್ನು ಚೆನ್ನಾಗಿ ಅಭ್ಯಾಸ ಮಾಡಿಕೊಂಡು ತಜ್ಞತೆಯನ್ನು ಪಡೆದ ಸದ್ಭಕ್ತರೂ ಇರಬೇಕು. ಈ ಕಾರ್ಯವು ಯಶಸ್ವಿಯಾದ ಹೊರತು ವೀರಶೈವ ಸಮಾಜಕ್ಕೆ ಅರಿಷ್ಟತನವು ತಪ್ಪಿದ್ದಲ್ಲ.

ಸಮಾಜ ಮುಖಂಡರ ಲಕ್ಷವು ನವಜಾಗ್ರತಿಯ ಇಂಥ ನೂತನ ಸಂಸ್ಥೆಗಳ ಸ್ಥಾಪನೆಯ ಕಡೆಗೆ ಹೊರಳದಿರುವದು ಬಹು ವಿಷಾದದ ಸಂಗತಿ. ಸದ್ಯಕ್ಕೆ ಇಂಥ ಒಂದಾದರೂ ಸಂಸ್ಥೆಯುದಿಸಿದರೆ ಸಮಾಜಕ್ಕೆ ಕ್ಷೇಮ. ಇಲ್ಲದಿದ್ದರೆ ನಮ್ಮ ಸಮಾಜವು ಭಿನ್ನ ಭಿನ್ನ ಸಮಾಜ ಪಂಥಗಳಲ್ಲಿ ಹಂದು ಹಂಚಿ ಹೋಗಿ ನಮ್ಮ ಸಂಸ್ಕೃತಿಯು ಕ್ರಮೇಣ ಲೋಪ ಹೊಂದುವ ದುರ್ದೆಶೆಯು ನಮಗೆ ಪ್ರಾಪ್ತವಾಗುವದರಲ್ಲಿ ಸಂದೇಹವಿಲ್ಲ. ಇದಲ್ಲದೆ ಅನ್ಯ ಮತೀಯರು ನಮ್ಮ ಮತವನ್ನಂಗೀಕರಿಸಲೊಪ್ಪಿದರೆ ಅವರನ್ನು ಕೂಡಲೇ ತೆಗೆದುಕೊಂಡು ಸುಸಂಸ್ಕೃತರನ್ನಾಗಿ ಮಾಡಬೇಕು. ಅವರ ನಡೆನುಡಿ ನೋಡಿಕೊಂಡು ಹಿಂದುಗಡೆ ಸೇರಿಸಿಕೊಳ್ಳಬಹುದೆಂಬ ವಿಲಂಬನ ವೃತ್ತಿಯ ನ್ನನುಸರಿಸಕೂಡದು. ಭವಿಗಳೆಂದು ಅವರನ್ನು ಜರೆಯಕೂಡದು. ಹುಟ್ಟು ಭವಿಗಳಿಗಿಂತಲೂ ಕೆಟ್ಟ ಭವಿಗಳು ನಮ್ಮಲ್ಲಿ ಎಷ್ಟು ಜನರಿಲ್ಲ ? ಸಣ್ಣ ದೊಡ್ಡವರಲ್ಲಿ ಸಹ ಭವಿತನವು ಈಗ ತಲೆದೋರಹತ್ತಿದೆ. ಅಂಥವರನ್ನು ನಾವು ಬಹಿಷ್ಕಾರ ಹಾಕಿದ್ದೇವೆಯೋ ? ಕೆಟ್ಟವರನ್ನು ಸುಧಾರಿಸುವ ಜಾಣ್ಮೆಯು ನಮ್ಮಲ್ಲಿಲ್ಲ. ಪರಮತೀಯರನ್ನು ಶುದ್ಧೀಕರಣದಿಂದ ನಮ್ಮೊಳಗೆ ಸೇರಿಸಿ ಕೊಳ್ಳುವ ಜಾಣ್ಮೆಯು ನಮಗಿಲ್ಲ. ಅದಕ್ಕಾಗಿ ಹಳೆ ಸಾಂಪ್ರದಾಯದ ಮತ ಮಾನ್ಯಗಳನ್ನು ಬದಿಗಿರಿಸಿ ಹೊಸ ಸಂಘ ಸಂಸ್ಥೆಗಳನ್ನು ಕಟ್ಟಿ ಅವುಗಳ ಮುಖಾಂತರ ಮುಖಂಡರು ಕಾರ್ಯ ಮಾಡಹತ್ತಿದರೆ ಸಮಾಜದಲ್ಲಿ ದೊಡ್ಡ ಪ್ರಗತಿಯನ್ನು ಸಾಧಿಸಿದಂತಾಗುವದು.

ಇಂಥ ಪವಿತ್ರ ಕಾರ್ಯಗಳನ್ನು ಕೈಕೊಳ್ಳಲು ಸಮಾಜವು ವಿಲಂಬ ಮಾಡುತ್ತಿರುವದರಿಂದ ಶಿವಶರಣರ ಮಾರ್ಗಕ್ಕೆ ದೊಡ್ಡ ಆತಂಕವನ್ನೊಡ್ಡಿ ದಂತಾಗಿದೆ. ಆಧುನಿಕ ಪದ್ಧತಿಯ ಪ್ರಕಾರ ಊರೂರಿಗೊಂದು ಅಂಥ ವೀರ ಶೈವ ಸಂಘವನ್ನು ಸ್ಥಾಪಿಸಿ ಅದಕ್ಕೆ ಪ್ರೆಸಿಡೆಂಟ ಸೆಕ್ರೆಟರಿಗಳನ್ನು ನೇಮಿಸಿ ಧಾರ್ಮಿಕ ವಿಧಾನ, ಧಾರ್ಮಿಕ ಶಿಕ್ಷಣ, ಶುದ್ಧೀಕರಣ ಕಾರ್ಯಗಳನ್ನು ಪ್ರಚುರಗೊಳಿಸುವದು ಮಹತ್ವದ್ದಾಗಿದೆ. ಈಗ ಸಮಾಜದಲ್ಲಿ ಅಂಥ ಸಂಘ ಗಳು ನಡೆದಿಲ್ಲವೆಂತಲ್ಲ. ಉದಾಹರಣಾರ್ಥ ಕೆಲವು ಭಕ್ತರು ಸುಸಂಘಟಿತ ರಾಗಿ ನವಕಲ್ಯಾಣ ಮಠದ ಶ್ರೀ ಕುಮಾರ ಸ್ವಾಮಿಗಳ ನೇತೃತ್ವದಲ್ಲಿ ತಮ್ಮ ಚಟುವಟಿಕೆಗಳನ್ನು ಸಾಗಿಸುತ್ತಿದ್ದಾರೆ. ಅದು ಇನ್ನೂ ವಿಸ್ತೃತ ರೂಪ ವನ್ನು ತಾಳಬೇಕು. ಸಾಂಪ್ರದಾಯ ಪಕ್ಷವು ಸ್ವಾರ್ಥ ದುರಾಶೆಗಳ ಮೂಲಕ

ಇಲ್ಲವೆ ಅನೀತಿ ದುರಾಚಾರಗಳ ಮೂಲಕ ದುರ್ಬಲವಾದಾಗ ಅವುಗಳನ್ನು ಎದುರಿಸುವ ವಿರೋಧಿ ಪಕ್ಷಗಳು ಹೊರಡಲೇ ಬೇಕು. ಜಗತ್ತಿನ ಇತಿಹಾಸ ದಲ್ಲಿ ಇದು ಹೊಸ ಮಾತಲ್ಲ. ವೀರಶೈವ ಮತವು ಜಾತ್ಯಂಧತೆಯ ಮೂಲಕ ಶಿಥಿಲವಾದಾಗ ಬಸವಾದಿ ಶರಣರು ಹುಟ್ಟಿ ಕ್ರಾಂತಿಯನ್ನೆಬ್ಬಿಸಲಿಲ್ಲವೇ ?

ಲಿಂಗಧಾರಿಗಳೆಲ್ಲರೂ ಸರಿಸಮಾನರೆಂದಬಳಿಕ ಅಯ್ಯನವರ ಪಾದವು ಅಧಿಕವೇಕೆ ? ಭಕ್ತನ ಪಾದವು ಕನಿಷ್ಟವೇಕೆ ? ಬಸವಾದಿ ಪ್ರಮಥರು ಭಕ್ತರೇ ಆಗಿದ್ದರು. ಆದಾಗ್ಯೂ ಅವರ ಶ್ರೀಪಾದಕ್ಕೆ ಮಹಾಮಹಾ ಯೋಗಿಗಳು ಕೂಡ ವಂದಿಸಿದರು. ಗುರುವೆನಿಸಿಕೊಳ್ಳುವವನು ಭಕ್ತನಿಗಿಂತ ಕೀಳಾಗಿ ಕಂಡಾಗ ಆ ಭಕ್ತನ ಪಾದವೇ ಅಧಿಕವಾದೀತಲ್ಲದೆ "ಗುರುವಿನ ಪಾದವು ನಮಗೆ ಗತಿಕೊಡಲಾರದು. ಆದ್ದರಿಂದ ಭಕ್ತರು ಸಂಘಟಿತರಾಗಿ ಸಂಸ್ಥೆಗಳನ್ನು ಸ್ಥಾಪಿಸಿ ತಮ್ಮ ಗುರುಜಂಗಮರನ್ನು ತಾವೇ ಆರಿಸಿಕೊಂಡು ಶರಣರ ಮಾರ್ಗ ಹಿಡಿದು ಸಾಗಬೇಕು. ಈ ಮಾದರಿಯ ಸಂಸ್ಥೆಯು ಮೊದಲು ಒಂದು ಹುಟ್ಟಿದರೆ ಸಾಕು. ಹಿಂದುಗಡೆ ಅಂಥ ಸಂಸ್ಥೆಗಳು ನಾಯಿ ಕೊಡೆಗಳಂತೆ ಅಸಂಖ್ಯವಾಗುವವು. ಸಾಂಪ್ರದಾಯದ ಮಠಗಳು ಕೂಡ ಆ ರೀತಿಯಾಗಿ ಮಾರ್ಪಾಟು ಹೊಂದುವವು. ನಾವು ಸಾಧಿಸಬೇಕಾದ ಸುಧಾರಣಾ ಕ್ರಾಂತಿಯು ಇದೇ.

ರಾಜಕೀಯ ಕ್ಷೇತ್ರದಲ್ಲಿ ಕಾಂಗ್ರೆಸ್ಸು ತನ್ನ ಕೈಯಲ್ಲಿಯೇ ಎಲ್ಲ ರಾಜಕೀಯ ಕ್ಷೇತ್ರಗಳನ್ನಿಟ್ಟುಕೊಳ್ಳಬೇಕು, ಉಳಿದ ಪಕ್ಷಗಳಿಗೆ ಆಸ್ಪದ ಕೊಡಬಾರದು ಎಂದು ಚಟುವಡಿಸುತ್ತಿರುವಂತೆ ಈಗಿನ ಅಯ್ಯನವರೂ ಸಹ ಮಠಮಾನ್ಯಗಳ ಅಧಿಕಾರವು ತಮಗೇ ಸಲ್ಲಬೇಕು- ಭಕ್ತಾದಿಗಳಿಗೆ ಸಲ್ಲ ಕೂಡದೆಂದು ಸಂಕುಚಿತ ಭಾವವನ್ನು ತಾಳಿದ್ದಾರೆ. ಇದು ಶಾಸ್ತ್ರ ದೃಷ್ಟಿ ಯಿಂದ ಅಸಮಂಜಸವಾದ ಮಾತು. ಆದ್ದರಿಂದ ಭಕ್ತರೊಂದಾಗಿ ಗುರು ವಿರಕ್ತರು ಮಾಡುವ ಕಾರ್ಯಗಳನ್ನು ಸಂಘಟಿತ ರೂಪದಿಂದ ನಡೆಯಿಸ ಲಾರಂಭಿಸಿದರೆ ದೋಷಯುಕ್ತವಾದ ಸಾಂಪ್ರದಾಯ ಶರಣತ್ವವಳಿದು ನಿಜ ವಾದ ತತ್ವದ ಕಡೆಗ ಜನರ ದೃಷ್ಟಿಯು ತಿರುಗುವದು. ಸಮಾಜಕ್ಕೆ ಅದೇ ಮುಖ್ಯವಾಗಿ ಬೇಕಾದದ್ದು. ಬ್ರಾಹ್ಮಣರಲ್ಲಿ ವಿಧವಾ ವಿವಾಹಕ್ಕೆ ಆಸ್ಪದವೇ ಇಲ್ಲ. ಈ ಶರಣ ಸಾಂಪ್ರದಾಯದಿಂದ ಎಷ್ಟೋ ಜನ ಪುನರ್ವಿವಾಹವಾಗ ಲಿಚ್ಛಿಸುವ ವಿಧವೆಯರಿಗೆ ದ್ರೋಹ ಮಾಡಿದಂತಾಗುತ್ತವೆ. ಇದನ್ನರಿತೇ

ಪುಣೆಯಲ್ಲಿ ಡಾ॥ ಕರ್ವೆಯವರು ವಿಧವಾ ಮಂದಿರ (Widow Home) ವನ್ನು ಸ್ಥಾಪಿಸಿ ಲಗ್ನವಾಗಲಿಚ್ಛಿಸುವ ವಿಧವೆಯರಿಗೆ ಲಗ್ನವಾಗಲು ಅವಕಾಶ ನೀಡಿದ್ದರಿಂದ ಅವರು ಸಕೇಶಿಗಳಾಗಿ ಮದುವೆ ಮಾಡಿಕೊಂಡು ಮಕ್ಕಳನ್ನು ಹಡೆದು ಸುಖದಿಂದ ಬಾಳ್ವೆ ಮಾಡುತ್ತಿದ್ದಾರೆ. ಬೇರೆ ಕಡೆಗೆ ಅವರ ಅನುಕರಣವನ್ನು ವಿಧವೆಯರು ಅನುಸರಿಸುತ್ತಿರುವರು. ಇದೇ ಕ್ರಾಂತಿಯ ಲಕ್ಷಣ.

ವೀರಶೈವ ಧರ್ಮವು ಅಯ್ಯನವರ ಸೊತ್ತಷ್ಟೇ ಅಲ್ಲ. ಭಕ್ತರ ಸೊತ್ತೂ ಆಗಿದೆ. ಮಠಮಾನ್ಯಗಳ ಆಸ್ತಿಯು ನಿಜವಾಗಿ ಸ್ವಾಮಿಗಳದಲ್ಲ, ಭಕ್ತರು ಕೊಟ್ಟದ್ದಾಗಿದೆ. ಹಿಂದಕ್ಕೆ ಎಷ್ಟೋ ಮಠಮಾನ್ಯಗಳಿಗೆ ಭಕ್ತರ ಮಕ್ಕಳೇ ಸ್ವಾಮಿಗಳಾಗುತ್ತಿದ್ದರು. ಆದರೆ ಮಧ್ಯಂತರದಲ್ಲಿ ಅಯ್ಯನವರ ತಂಡೊಂದು ಸಮಾಜದಲ್ಲಿ ಪ್ರತಿಷ್ಠತೆಯನ್ನು ಪಡೆದು ಮಠಮಾನ್ಯಗಳ ಸೊತ್ತನ್ನು ತಾವೇ ಆಶ್ರಯಿಸತೊಡಗಿದೆ. ಇಷ್ಟೇ ಇಲ್ಲ ಭಕ್ತರಿಗೆ ಆ ಅಧಿಕಾರವಿಲ್ಲೆಂದು ಸಾರಹತ್ತಿದೆ. ಭಕ್ತರ ಆಸ್ತಿಗೆ ಭಕ್ತರೇ ಅಧಿಕಾರಿಗಳಾಗುವದು ನ್ಯಾಯವಾದುದು. ಆದ್ದರಿಂದ ಭಕ್ತರು ಜಾಣರಾಗಿ ಸಂಘ ಸಂಸ್ಥೆಗಳನ್ನೇರ್ಪಡಿಸಿಕೊಂಡು ಸಾರ್ವಜನಿಕ ಮಠಗಳಿಗೆ ಯೋಗ್ಯರಾದ ಭಕ್ತರನ್ನೇ ಆರಿಸಿ ಸಮಾಜಕ್ಕೆ ಹೊಸಕಳೆಯನ್ನುಂಟು ಮಾಡುವರೆಂದು ಹಾರೈಸುತ್ತೇವೆ.

# ವೀರಶೈವ ಮತವೂ, ಲಿಂಗಧಾರಣೆಯೂ

[ ಲೇಖಕರು:– ಶ್ರೀಯುತ ಬಿ. ಪುಟ್ಟಮಲ್ಲಪ್ಪ ಮಾಸ್ತರ, ದೊಡ್ಡಿಂದುವಾಡಿ ]

ವೀರಶೈವ ಮತವು ಒಂದು ಉನ್ನತವಾದ ಮತ. ಇದರ ಆಚರಣೆಯ ಮಾರ್ಗದಲ್ಲಿ ಉದಾತ್ತ ಉದ್ದೇಶಗಳ ಮೂಲಕ ಉನ್ನತ ಸ್ಥಾನವಿರುತ್ತದೆ. ಕುರುಡಿ ಕುಠಾರದಂತೆ ಅನ್ಯ ವಸ್ತುವನ್ನು ತನ್ನಂತೆ ಮಾಡಿಕೊಳ್ಳುವುದು ವೀರಶೈವರಲ್ಲಿ ಈ ಕೀರ್ತಿಯು ಯಥೇಚ್ಛವಾಗಿ ಸಲ್ಲುತ್ತದೆ. ಶರಣರಲ್ಲಿ ಕುಲದ ಛಲವಿಲ್ಲ. ಜಾತಿಯ ಸೂತಕವಿಲ್ಲ. ತನ್ನ ವಿಶ್ವವ್ಯಾಪಕ ದೃಷ್ಟಿಯಿಂದ ಉನ್ನತ ವಿಚಾರವನ್ನು ಕೈಕೊಂಡು ಪಕ್ಷಪಂಥಗಳ ಕೋಲಾಹಲವಿಲ್ಲದೆ ಏಕೀಕರಣತೆಯಿಂದೊಡಗೂಡುವರು. ವಿಶ್ವದಲ್ಲಿ ಜಾತಿ ಮತಗಳ ದ್ವಂದ್ವದ ಹೋರಾಟದಲ್ಲಿ ಸಿಲ್ಕಿ ನುಚ್ಚಾಗದೆ ಘರ್ಷಣದ ದಾವಾಲವನ್ನು ತಗ್ಗಿಸಿ, ಆಧ್ಯಾತ್ಮಿಕದ ಅನುಭವದ ಮಕರಂದವು ಹೊರಸೂಸಿ, ಮಾನವರಲ್ಲಿನ ಕಗ್ಗತ್ತಲೆಯನ್ನು ಹರಿದೋಡಿಸುವ ಬೆಳ್ದಿಂಗಳನ್ನಿತ್ತು, ಜಾತಿ ವೈಷಮ್ಯವನ್ನು ಹೊಡೆದೋಡಿಸುವ ಶಾಂತಿಪರ್ವದಲ್ಲಿ ನಿಲ್ಲುವದನ್ನು ನೋಡಿದರ ಅನುಭವ ಮಂಟಪದ ಜ್ಞಾನಸೂರ್ಯನ ಪ್ರಭೆ ಎಂತಿರುವದೆಂಬುದನ್ನು ಊಹಿಸಬಹುದು. ನಮ್ಮವರಲ್ಲಿ ಗುರುವರ್ಯರು, ಪೀಠಾಚಾರ್ಯರು ಲಿಂಗಧಾರಣೆಯೆಂಬ ಸಾಹಸದ ಪ್ರವಾಹ ಸಮರ್ಪಕವಾದ ಪಾತ್ರದಲ್ಲಿ ಮುನ್ನುಗ್ಗಿದರೆ ನಾಡಿನಲ್ಲಿ ಹಲವು ವರ್ಗಗಳ ಹಿಂದೆ ಇದ್ದ ವೀರಶೈವರಷ್ಟು ಜನಾಂಗವನ್ನು ಹೆಚ್ಚಿಸಬಹುದು. ವೀರಶೈವರಲ್ಲಿ ಲಿಂಗವನ್ನು ಕಳೆದುಕೊಂಡು ಅಲಿಂಗಿ ಧರ್ಮಕ್ಕೆ ಸೇರಿ, ಹೀನತ್ವ ವಹಿಸುವದಕ್ಕಿಂತ ಅಲಿಂಗಿಗಳಿಗೆ ಲಿಂಗ ಧಾರಣಮಾಡಿ, ವೀರಶೈವ ಪಂಥಕ್ಕೆ ಸೇರ್ಪಡೆ ಮಾಡುವುದು ಅತ್ಯುತ್ತಮ ಹಾದಿ. ಕೆಟ್ಟ ಭವಿಯನ್ನು ಸೇರಿಸಿಕೊಳ್ಳುವುದಕ್ಕಿಂತ ಹುಟ್ಟು ಭವಿಯನ್ನು ಮತಕ್ಕೆ ಸೇರಿಸಿಕೊಳ್ಳುವುದು ಶ್ರೇಷ್ಠ.

ವೀರಶೈವರಲ್ಲನೇಕರು ಶರಣಸಾಹಿತ್ಯನೆಂಬ ಹೊನ್ನೊಳಿಯಿಂ ಹಾಯದೆ ವಚನ ವಾಙ್ಮಯದ ಗುಂಪಿನೊಳ್ನುಗ್ಗದೆ ಇತರರಿಗೆ ಲಂಗಧಾರಣೆ ಮಾಡಬಾರದೆಂಬ "ಮಂಡೂಕ ಕೂಪ"ದೊಳ್ಮುಳುಗಿರುತ್ತಾರೆ. ವೀರಶೈವ ಧರ್ಮ

ಜಗತ್ತಿನ ಧರ್ಮ. ಕ್ರೈಸ್ತ, ಮಹಮ್ಮದ, ಬುದ್ಧ ಮೊದಲಾದವರು ಆದರ ಅನುಯಾಯಿಗಳು. ಶತ್ರು ದೀವಟಿಗೆಗಳಿಂ ಹಿಡಿದು ಅನೇಕ ಕಡೆಗಳಲ್ಲಿ ಕತ್ತಲೆಯಿಂ ಕಳೆದು ಬಂದಂತೆ ಯುಗಗಳಲ್ಲಿಯೂ ಪಂಚಾಚಾರ್ಯರು, ಬಸವಣ್ಣನವರು ಲಿಂಗಧಾರಣ ವಿಚಾರದಲ್ಲಿ ಹೆಚ್ಚು ಶ್ರದ್ಧೆವಹಿಸಿ ಬಂದಿರುವರು. ಈಗಲೂ ನಮ್ಮಾಚಾರ್ಯರು ಎಷ್ಟೋ ಜನಕ್ಕೆ ಲಿಂಗಧಾರಣ ಮಾಡಿ, ವೀರಶೈವರಾಗಿ ಮಾಡಿರುವುದು ತುಂಬಾ ಶ್ಲಾಘನೀಯವಾಗಿರುತ್ತೆ. ಲಿಂಗ ಕಳೆದುಕೊಂಡಿರುವವರು ಕೂಡ ಗುರುಗಳಿಂದ ಲಿಂಗಧಾರಣೆ ಮಾಡಿಸಿ ಕೊಳ್ಳುವರು.

ಹಿಂದೂ ದೇಶವು ಅನೇಕ ಮತಗಳಿಗೆ ತವರ್ಮನೆಯಾಗಿರುತ್ತೆ. ಆದರೆ ಪ್ರತಿಯೊಂದು ಮತವನ್ನು ಆಯಾ ಮತದ ಉಪಾಸ್ಯ ವಸ್ತುವಿನಿಂದಲೂ ಅವರವರ ತಾತ್ವಿಕ ವಿವೇಚನದಿಂದಲೂ ವರ್ಗ ಮಾಡಬಹುದು.

ಉಪಾಸ್ಯತು:— ಭರತಖಂಡದಲ್ಲಿ ವೇದಗಳ ಆಧಾರದ ಮೇಲೆ ಹಿಂದು ಧರ್ಮವು ಹಲವು ಶಾಖೆಗಳಾಗಿರುತ್ತವೆ. ಹಲವರು ಹಲವು ದೇವರುಗಳ ಉಪಾಸ್ಯಕರಾಗಿರುವಂತೆ ವೈಷ್ಣವರು ವಿಷ್ಣುವನ್ನು ಆರಾಧ್ಯ ದೇವತೆಯಾಗಿಯೂ, ಶೈವರು ಶಿವನನ್ನು ಆರಾಧ್ಯದೇವತೆಯನ್ನಾಗಿಯೂ, ಜೈನಮತವು ಜಿನನನ್ನೂ, ಬೌದ್ಧರು ಬುದ್ಧನನ್ನೂ, ಮಹಮ್ಮದೀಯರು ಅಲ್ಲಾನನ್ನೂ ಇಟ್ಟುಕೊಂಡಿರುವಂತೆ ಆಯಾ ಮತಗಳ ಅವಾಂತರ ಭೇದಗಳು ಅಂತರ್ಗತವಾಗಿಹವು.

ವೀರಶೈವ:— ಈ ಮತವು ಯಜ್ಞಯಾಗಾದಿಗಳನ್ನು ನಿಷಿದ್ಧವೆಂದು ತಿಳಿದು ಧಾರ್ಮಿಕ. ಸಾಮಾಜಿಕ ನಿಧಿಗಳಲ್ಲಿಯೂ ಅಲಿಂಗಿಗಳಿಂದ ಕಾರ್ಯಭಾಗಗಳನ್ನು ಮಾಡಿಸದೆ ಮಠಾಧಿಕಾರಿಗಳು, ಗುರುಗಳು, ಜಂಗಮರು ಇವರುಗಳಿಂದ ಮಾಡಿಸುತ್ತಾರೆ. ಭವಿಗಳಿಂದ ಅನ್ನೋದಕ ವ್ಯವಹಾರವನ್ನು ನಿಷಿದ್ಧವಾಗಿ ಕಂಡು ಗುರೂಪದೇಶದಿಂದಲೂ ವೀರಶೈವ ದೀಕ್ಷೆಯಿಂದಲೂ ಹಿಂದಣ ಜನ್ಮವು ನೀಗಿ ಇದೇ ಕಡೆ ಜನ್ಮವೆಂದು ನಂಬಿರುವರು. ಶಿವಾಲಯಗಳ ಪ್ರವೇಶ ವಿಗ್ರಹಾರಾಧನೆ, ಮಾರಿ. ಮಸಣಿ, ದುರ್ಗಿ, ಚೌಡಿಯರೆಂಬ ಇತರ ಸ್ಥಾವರ ಲಿಂಗಗಳನ್ನು ಭಜಿಸುವದಿಲ್ಲ, ತಲೆದೋಳಿಸುವ, ಬಾಯಿ ಚುಚ್ಚಿಸಿಕೊಳ್ಳುವ, ಹುರುಳು ಸೇವೆ ಮಾಡುವ ಕರ್ಮಾಂತರಗಳನ್ನು ಮಾಡುವದಿಲ್ಲ. "ಏಕಮೂರ್ತಿ ಸ್ತ್ರೀಯೋಭಾಗಂ ಗುರೋರ್ಲಿಂಗಂತು ಜಂಗಮ"

ಎಂಬ ಪ್ರಮಾಣದಂತೆ ಗುರು, ಲಿಂಗ, ಜಂಗಮ ಇವೇ ಇವರ ಉಪಾಸ್ಯ ದೇವತೆಗಳು. ಲಿಂಗೈಕ್ಯರಾದ ಮೇಲೆ ಶ್ರಾದ್ಧಾದಿ ಕಾರ್ಯಗಳನ್ನೂ ಮದುವೆಗಳಲ್ಲಿ ದೇವತಾರಾಧನೆಯನ್ನೂ ಪರರ ಅನುಕರಣೆಗಳಿಂದ ಇವರು ಮಾಡುವರೇ ಹೊರತು ಈ ಕಾರ್ಯಗಳು ತತ್ವಕ್ಕೆ ಸಂಬಂಧಿಸಿದುವಲ್ಲ.

ದೇವರ ವಿಚಾರದಲ್ಲಿ:— ಕಲ್ಲುದೇವರು ದೇವರಲ್ಲ. ಮರದೇವರಲ್ಲ. ಪಂಚಲೋಹದಲ್ಲಿ ಮಾಡುವ ದೇವರು ದೇವರಲ್ಲ. ಸೇತುಬಂಧ, ರಾಮೇಶ್ವರ, ಗೋಕರ್ಣ, ಕಾಶಿ, ಕೇದಾರ ಮೊದಲಾದ ಅಷ್ಟಾಷಷ್ಟಿ ಪುಣ್ಯಕ್ಷೇತ್ರಂಗಳಲ್ಲಿಹ ದೇವರು ದೇವರಲ್ಲ. ತನ್ನ ತಾನರಿದು ತಾನಾರೆಂದು ತಿಳಿದಡೆ ತಾನೇ ದೇವ ನೋಡಾ ಅಪ್ರಮಾಣ ಕೂಡಲಸಂಗಮದೇವ,

ದೇವರ ವಿಚಾರದಲ್ಲಿ ಬಸವಣ್ಣನವರ ಅಮೃತವಾಣಿ ಹೀಗಿರುತ್ತದೆ. ವಚನವಾಙ್ಮಯದಲ್ಲಿ ಶರಣರು ಏಕೋದೈವಾರಾಧನೆಯೇ ಶ್ರೇಯಸ್ಕರವೆಂದು ಸಾರಿರುವರು. ತನ್ನ ತಾನಾರೆಂದು ತಿಳಿದಡೆ ತಾನೇ ದೈವವೆಂದು ಇವರ ಮತ. ತಾನು ದೈವವಾಗಬೇಕಾದರೆ ಶಿವನ ಕರುಣೆ ಪಡೆಯಲು ಸಾಹಸ ಪಡಬೇಕು. ಆಗ ತಾನೆ ಆತನ ಹೃದಯವು ತುಮುಲ ವಿಪ್ಲವ ಏಳಲು ತೊಡಗುತ್ತದೆ. ಭಕ್ತಿಯೆಂಬ ಸಾಧನದಲ್ಲಿ ನಿಂತು, ಒಂದೆಡೆ ಮನಸ್ಸನ್ನು ನಿಲ್ಲಿಸಿ, ತ್ರಿಕರಣಗಳನ್ನು ಶುದ್ಧಮಾಡಿ ಮಟ್ಟ ಮೊದಲು ಗುರುವನ್ನು ಅರಸುತ್ತಾನೆ. ಆ ಶ್ರೀಗುರುವಿನಿಂದ ಶಿವಕಳೆಯು ಭಕ್ತನಲ್ಲಿ ಸೇರುತ್ತದೆ. ಆ ಕಳೆಯೇ ಇಷ್ಟಲಿಂಗ. ಆ ಇಷ್ಟಲಿಂಗ ಸಂಯೋಗದಿಂದ ಸೂಕ್ಷ್ಮ ಕಾರಣಗಳಲ್ಲಿ ಪ್ರಾಣಲಿಂಗ, ಭಾವಲಿಂಗ ಸ್ಥಾಪಿಸಲ್ಪಡುತ್ತದೆ. ಇದರಿಂದ ಲಿಂಗವೂ, ಅಂಗನೂ ಉಪಾಸಕ ಉಪಾಸ್ಯತ್ವದಿಂದ ಒಂದರಲ್ಲೊಂದು ಬೆರೆತು ಲಿಂಗಾಂಗ ಸಾಮರಸ್ಯವು ಅಳವಡುತ್ತದೆ. ಆಗ ತಾನೇ ತಾನೇ ದೈವವೆಂಬ ನಂಬಿಗೆ ತಲೆದೋರುತ್ತೆ.

ಗುರುವು ಭಕ್ತನಿಗೆ ಕೊಡುವ ಲಿಂಗ:—

ಎನ್ನ ಕರಸ್ಥಳ ಮಧ್ಯದಲ್ಲಿ ಪರಮ ನಿರಂಜನ ಕುರುಹು ತೋರಿದ
ಆ ಕುರುಹಿನ ಮಧ್ಯದಲ್ಲಿ ಅರುಹಿನ ಕಳೆಯ ತೋರಿದ
ಆ ಕಳೆಯ ಮಧ್ಯದಲ್ಲಿ ಮಹಾಜ್ಞಾನದ ಬೆಳಗ ತೋರಿದ
ಆ ಬೆಳಗಿನ ನಿಲುವಿನೊಳಗೆ ಎನ್ನ ತೋರಿದ. ಎನ್ನೊಳಗೆ ತನ್ನ ತೋರಿದ
ತನ್ನೊಳಗೆ ಎನ್ನ ಇಂಬಿಟ್ಟುಕೊಂಡ ಮಹಾ ಗುರುವಿಗೆ
ನಮೋ ನಮೋ ಎನುತಿರ್ದೆನಯ್ಯ ಅಖಂಡೇಶ್ವರಾ.

ಗುರುವು ತೋರಿದ ಈ ಪರವಸ್ತುವನ್ನು ಸತ್ಯದ ಘನೀಭೂತವೆಂದು ವೀರಶೈವನು ನಂಬುತ್ತಾನೆ. ದೇವರಿಲ್ಲವೆಂಬ ನಾಸ್ತಿಕನ ಮತವನ್ನೂ, ಹಲವು ದೇವರಿರುವರೆಂಬ ಸಂದೇಹಿಗಳ ಮತವನ್ನೂ ಖಂಡಿಸಿ, ಆಲಿಂಗ ಮೂರ್ತಿಯನ್ನೇ ನಂಬುತ್ತಾನೆ- ಗುರುವು ಇಷ್ಟಲಿಂಗವನ್ನು ಹೃದಯದಿಂದ ಚಿದ್ಬೆಳಗನ್ನು ತಂದು ರೂಪುಗೊಳಿಸುವನು ಮಾಡುತ್ತಾನೆ.

ಇದಕ್ಕೆ ಬಸವಣ್ಣನವರು:—

"ಅಯ್ಯಾ ಎನ್ನ ಹೃದಯದಲ್ಲಿ ನ್ಯಸ್ತವಾಗಿಹ ಪರಮ ಚಿದ್ಬೆಳಗೇ ಹಸ್ತ ಮಸ್ತಕ ಸಂಯೋಗದಿಂದ ಒಂದುಗೂಡಿ ಮಹಾ ಚಿದ್ಬೆಳಗು ಮಾಡಿದಿರಲ್ಲಾ ಅಯ್ಯಾ ಎನ್ನ ಮಸ್ತಕದೊಳಗೊಂದುಗೂಡಿದ ಮಹಾಬೆಳಗ ತಂದು ಭಾವದೊಳಗೆ ಇಂಬಿಟ್ಟಿರಲ್ಲಾ. ಅಯ್ಯಾ ಭಾವದೊಳಗೆ ಕೂಡಿದ ಮಹಾಬೆಳಗ ತಂದು ಮನಸ್ಸಿನೊಳಗೆ ಇಂಬಿಟ್ಟಿರಲ್ಲಾ. ಅಯ್ಯಾ ಎನ್ನ ಮನಸ್ಸಿನೊಳಗೆ ಕೂಡಿದ ಮಹಾಬೆಳಗ ತಂದು ಕಂಗಳೊಳಗಿಂಬಿಟ್ಟಿರಲ್ಲಾ. ಅಯ್ಯಾ ಎನ್ನ ಮಸ್ತಕದೊಳಗೊಂದುಗೂಡಿದ ಮಹಾಬೆಳಗ ತಂದು ಭಾವದೊಳಗೆ ಇಂಬಿಟ್ಟಿರಲ್ಲಾ. ಅಯ್ಯಾ ಭಾವದೊಳಗೆ ಕೂಡಿದ ಮಹಾ ಬೆಳಗ ತಂದು ಮನಸ್ಸಿನೊಳಗೆ ಇಂಬಿಟ್ಟಿರಲ್ಲಾ. ಅಯ್ಯಾ ಎನ್ನ ಮನಸ್ಸಿನೊಳಗೆ ಕೂಡಿದ ಮಹಾ ಬೆಳಗ ತಂದು ಕಂಗಳೊಳಗಿಂಬಿಟ್ಟಿರಲ್ಲಾ. ಅಯ್ಯಾ ಎನ್ನ ಕಂಗಳೊಳಗೆ ಕೂಡಿದ ಮಹಾ ಬೆಳಕ ತಂದು ಕರಸ್ಥಲದೊಳಗಿಂಬಿಟ್ಟಿರಲ್ಲಾ. ಅಯ್ಯಾ ಎನ್ನ ಕರಸ್ಥಲದೆ ಥಳಥಳಿಸಿ ಬೆಳಗಿ ಕೊಳೆಯುತ್ತಿಪ್ಪ ಅಖಂಡ ತೇಜವನೆ ಇಷ್ಟಲಿಂಗವೆಂಬ ದೃಷ್ಟವತೋರಿ ಶಿಷ್ಯಯವ ಶ್ರೋತ್ರದಲ್ಲಿ ಸೃಜಿಸಿದಿರಲ್ಲಾ. ಅಯ್ಯಾ ಎನ್ನ ಶ್ರೋತ್ರದಲ್ಲಿ ಸೃಜಿಸಿದ ಮಂತ್ರದೊಳಗೆ ನೀವು ನಿಂದು ಮಹತ್ವವ ಹುದುಗಿದಿರಲ್ಲಾ! ಅಯ್ಯಾ ಎನ್ನ ಆರಾಧ್ಯ ಕೂಡಲ ಸಂಗಮದೇವಾ ಎನ್ನೊಳಗೆ ನಿಮ್ಮಿರವ ಈ ಪರಿಯಲ್ಲಿ ಕಾಣಿಸುತ್ತಿರ್ದಿರಲ್ಲಾ. ಎಂಬದಾಗಿ ನುಡಿದಿರುವರು.

ಆಳು ತನ್ನ ಒಡೆಯನ ಕಾಣುವಂತೆ ಮಗನು ತಂದೆಯನ್ನು ಕಾಣುವಂತೆ, ದೇವರನ್ನು ಭಕ್ತನು ಕಾಣುವನು. ದೇವರನ್ನು ನೋಡಲು ಗುರುವಿನಿಂದಲ್ಲದೆ ಅನ್ಯರಿಂದ ಕಾಣಲು ದುಸ್ಸಾಧ್ಯವಾಗುವುದು, ಏಕನಿಷ್ಠಾ ಗರಿಷ್ಠನಾದ ಭಕ್ತನನ್ನು ದೇವರು ಕೈಬಿಡಲಾರನು. ತನ್ನ ದೇಹವೇ ದೇಗುಲವಾಗಿ ಆ ಇಷ್ಟಲಿಂಗಮೂರ್ತಿಯೇ ದೇವನಾಗಿ ಅಗಲದೆ ಇರುವನು. ಈ

ಭಕ್ತನ ನಿಷ್ಕಳಂಕ ಪ್ರೇಮಕ್ಕೆ ಮಹಾದೇವನು ಸೆರೆಯಾಗಿದ್ದಾನೆ. ಅಹರ್ನಿಶಿಯೂ ಪರಮಾತ್ಮನು ಹತ್ತಿರಿರುವುದರಿಂದ ಆ ಬೆಳಗಿನೊಳಗೆ ತಾನೂ ಬೆಳಕಿನಲ್ಲಿ ಸೇರಿಹೋಗುತ್ತಾನೆ.

ಮಹಾದೇವನನ್ನು ಭಕ್ತನು ಮೂರು ರೂಪದಲ್ಲಿ ಹುಡುಕುವನು. ಮಹಾದೇವನು ಒಬ್ಬನು ಇದ್ದಾನೆ, ಮಹಾದೇವನು ಒಬ್ಬನು ಇದ್ದಾನೆ, ಎಂಬುದು ಬರಿಯ ತಿಳುವಳಿಕೆಯು. ಇದಕ್ಕೆ "ತಸ್ಯೈವಾಹಂ" ಎಂದು ಹೇಳುತ್ತಾರೆ, ಇದು ಭಕ್ತಿಯ ಅಂಕುರ. ಈಶ್ವರನು ದೂರದಲ್ಲಿ ಎಲ್ಲಿಯೋ ಇದ್ದಾನೆ, ಎಂದು ದೇವರನ್ನು ಹುಡುಕಲಿಕ್ಕೆ ಹತ್ತುತ್ತಾನೆ. ಗುಡ್ಡಬೆಟ್ಟಗಳನ್ನು ಹತ್ತುತ್ತಾನೆ. ನಾನು ಅವನಿಂದ ಇದ್ದೇನೆ ಎಂದು ತಿಳಿಯುತ್ತಾನೆ. ಇದೇ ಮಕ್ಕಳ ತರಗತಿ. ಇನ್ನು ಮುಂದಿನ ತರಗತಿಯಲ್ಲಿ ನಿರಾಕಾರನಾದ ಪರಶಿವನು ನನ್ನಲ್ಲಿಯೂ ಇದ್ದಾನೆ ಎಂದು ತಿಳಿಯುತ್ತಾನೆ. ಇದಕ್ಕೆ "ತವೈವಾಹಂ" ಎಂದು ಹೇಳುತ್ತಾರೆ. ಮಾನವನು ದೇವರನ್ನು ಹುಡುಕಲು ತಿರುತಿರುಗಿ ಸಾಕಾಗಿ ಈ ಅವಸ್ಥೆಯಲ್ಲಿ ಈಶ್ವರನು ದೂರದಲ್ಲಿಲ್ಲ, ಆತನು ತನ್ನ ಸಮೀಪದಲ್ಲಿಯೇ ಇದ್ದಾನೆ. ಒಂದನೇ ತರಗತಿಯಲ್ಲಿ ಎಲ್ಲೋ ದೂರದಲ್ಲಿದ್ದಾನೆಂಗು ತಿರುಗಿ ಎರಡನೇ ತರಗತಿಯಲ್ಲಿ ಪರಮಾತ್ಮನು ತನ್ನಲ್ಲಿಯೇ ಇದ್ದಾನೆ, ಎಂಬ ತಿಳುವಳಿಕೆ ತಲೆದೋರಿ ಮೂರನೇ ತರಗತಿಯಲ್ಲಿ ನಾನೂ, ಪರಮಾತ್ಮನೂ ಏಕರೂಪವಾಗಿದ್ದೇನೆ ಎಂದು ತಿಳಿದು "ತ್ವಮೇವಾಹಂ" ಎಂದು ಅರಿಯುತ್ತಾನೆ. ಆಗ ಭಕ್ತನು ಪರಮಾತ್ಮನಲ್ಲಿ ಬೆರೆಯುತ್ತಾನೆ. ಸಕ್ಕರೆ ನೀರಿನ ಸಂಗ ಸೇರಿ ನೀರಾಗುವಂತೆ ಪರಮಾತ್ಮನು ತನ್ನೊಳು ಕೂಡಿ ಪರಮಾತ್ಮನೇ ತಾನಾಗುತ್ತಾನೆ. ಆ ಪರಮಾತ್ಮನು ತಾನಾಗಬೇಕಾದರೆ ನಿರಾಕಾರ ಮೂರ್ತಿ ಅಂದರೆ ಬಯಲು ಮೂರ್ತಿಯನ್ನು ಸಾಕಾರಕ್ಕೆ ತಂದು ಅದರಿಂದ ಸರ್ವ "ಸುಖತ್ವವನ್ನು ಹೊಂದುತ್ತಾನೆ.

ಸಾಕ್ಷಿ—

ಬಯಲು ಮೂರ್ತಿಯ ಮಾಡಿ ಎನ್ನ ಕರಸ್ಥಲಕ್ಕೆ
ಕೊಟ್ಟನಯ್ಯಾ ಶ್ರೀಗುರು
ಬಯಲು ಮೂರ್ತಿಯ ಅಮೂರ್ತಿಯ ಮಾಡಿ ಎನ್ನ
ಪ್ರಾಣದೊಳಗಿರಿಸಿದನಯ್ಯಾ ಶ್ರೀಗುರು
ಬಯಲು ಬಯಲನೇ ಬೆರಸಿ ಬಯಲೆಂದೆನಿಸಿ ಎನ್ನ
ಭಾವದಲ್ಲಿರಿಸಿದನಯ್ಯ ಶ್ರೀಗುರು

ಇದು ಕಾರಣ ಎನ್ನ ಕರಸ್ಥಲ ಮನಸ್ಥಲ ಭಾವಸ್ಥಲ
ದಲ್ಲಿ ಧರಿಸಿ, ನಾನು ಅಂಗ ಲಿಂಗ ಸಂಬಂಧಿಯಾದೆ
ನಯ್ಯಾ ಮಹಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೇ.

ಇದೇ ಕೊನೆಯ ಅನುಭವ. ಈ ಅನುಭವವು ಷಡ್ವಿಧ ಭಕ್ತಿಯಿಂದ ಷಟ್ಸ್ಥಲ ಮಾರ್ಗವಾಗಿ ಪೂರ್ಣವಾಗುವದು. ಆ ಇಷ್ಟಲಿಂಗವು ಶಿವನ ಸಕಲ ರೂಪವು ಈ ಲಿಂಗವನ್ನು ಕಣ್ಣಿನಿಂದ ನೋಡಿದ ಮಾತ್ರವಲ್ಲ, ಅವನ ಸೇವೆಯನ್ನು ಮಾಡಿ, ಉತ್ತಮ ಸ್ಥಿತಿಯನ್ನು ಅಂಗನು ಹೊಂದುತ್ತಾನೆ. ಮಹದೇವನು ಈಗ ಲಿಂಗರೂಪಾಗಿರುವನು. ಜ್ಞಾನಿಗಳು ಈ ರೂಪವನ್ನೆ ಬ್ರಹ್ಮವೆನ್ನುವರು.

ವೀರಶೈವರಲ್ಲಿ ವಿವಿಧ ವೃತ್ತಿ:— ವೀರಶೈವರು ಕೈಗಾರಿಕೆ, ಶಿಕ್ಷಣ ಮತ್ತು ಕಾಯಕ ಇವುಗಳಿಂದ ಬೆಣ್ಣೆ, ತುಪ್ಪ, ಬೆಲ್ಲ, ಮೆಣಸು, ಜೀರಿಗೆ, ಬೇಳೆ ಮೊದಲಾದ ಹೆಸರುಗಳನ್ನು ಮನೆತನಕ್ಕೆ ಇಟ್ಟುಕೊಳ್ಳುವ ವಾಡಿಕೆಯುಂಟು. ಏನೆಂದರೆ ವಿಭೂತಿಯವರು, ಭೃಂಗಿಯವರು, ವಸ್ತ್ರದವರು, ಬಣ್ಣದವರು, ಓಲೆಯವರು, ಓದಿಸುವವರು, ಕಾಳೆಯವರು, ಕರಣಿಯವರು, ನಮ್ಮೋಳದವರು, ಕಂಬಿಯವರು, ದಬಾನದವರು, ಕಂತೆ ಇಡುವವರು, ಉದ್ಧರಣೆಯವರು, ಶಬ್ದಮಣಿಯವರು, ಅರವಟ್ಟಿಗೆಯವರು, ಓಲೇಕಾರರು, ಕುಲಕರಣಿಯವರು, ಗೌಡರು, ಅರ್ಚಕರು, ಪತ್ರಿಯವರು, ಶೀಲವಂತರು, ಶೆಟ್ಟಿಯವರು, ಆರಾಧ್ಯರು, ಕೈಕೋಳದವರು ಇದಲ್ಲದೆ ಕಲಿಖ್ಯಾತರು, ಗುಂಡಗೊಪ್ಪರಿಗೆಯವರು, ಮುಳ್ಳಾವಿಗೆಯವರು, ಘಂಟಿ ಕಾಯಕದವರು, ಮೂಕ ವೃತ್ತಿಯವರು, ಶಂಖದವರು, ಕರಪಲ್ಲವಿಯವರು, ಸಿದ್ಧಾಟಿಗೆಯವರು, ಏಕದಾರಿಯವರು, ದಮಡಿಯವರು, ಆಸನ ಕಾಯಕದವರು ಗದ್ದುಗೆಯವರು, ಸಾರುವವರು, ಸಾರಿಸಾಂಡರು, ಬಡಿಗರು ಎಂಬುವವರು ತರತರದ ಕಾಯಕವನ್ನು ಕೈಕೊಂಡು ವಿಚಿತ್ರ ವೇಷಧಾರಿಗಳಾಗಿದ್ದರೂ ಎಲ್ಲರೂ ಒಂದೇ ಎಂಬ ಜಾತಿ ಭಾವ ವೀರಶೈವರಲ್ಲಿರಬೇಕು.

ವಿವಿಧ ಜಾತಿಯವರು ವೀರಶೈವರಾದದ್ದು:— ಬಸವಣ್ಣನವರ ಕಾಲದಲ್ಲಿ ಆಧ್ಯಾತ್ಮ ಪೀಠವೆಂದೆನಿಸಿರ್ದ ಅನುಭವ ಮಂಟಪದಲ್ಲಿ ಜ್ಞಾನವೃದ್ಧರೂ, ವಯೋವೃದ್ಧರೂ ಆದ ಮಾದಾರ ಚನ್ನಯ್ಯನೂ, ಡೋಹರ ಕಕ್ಕಯ್ಯನೂ

ಅವರೊಳಗಿನ ಪ್ರಮುಖ ಶರಣರು ಡೋಹರ ಕಕ್ಕಯ್ಯನು ತನ್ನ ಆಧ್ಯಾತ್ಮಿಕ ಶರಣನೆಂದೂ, ಮಾದಾರ ಚನ್ನಯ್ಯನನ್ನು ತನ್ನ ಮುತ್ತಯ್ಯನೆಂದೂ ಹೊಗಳಿದ್ದಾನೆ.

ಸೆಟ್ಟಿಯೆಂಬೆನೆ ಸಿರಿಯಾಳನ
ಮಡಿವಾಳನೆಂಬೆನೆ ಮಾಚಯ್ಯನ
ಡೋಹರನೆಂಬೆನೆ ಕಕ್ಕಯನ್ನ
ಆನು ಹಾರುವನೆಂದಡೆ ಕೂಡಲಸಂಗಯ್ಯ ನಗುವನಯ್ಯ.

ನಾನು ಶ್ರೇಷ್ಠನೆಂಬ ಭಾವನೆ ಹಿತದೃಷ್ಟಿಯಿಂದ ಘಾತಕವಾದುದು. ಜನಸಂಗದಲ್ಲಿ ಅಪರಿಶುದ್ಧತ್ವವನ್ನು ಕಲ್ಪಿಸಿ ಶ್ವಪಚರು, ನೀಚರು, ಕುಲಹೀನರು, ಸುರಾಪಾನಿಗಳು, ಮಾಂಸಭಕ್ಷಕರು ಎಂದು ಹೀಯಾಳಿಸುವದಕ್ಕಿಂತ ಆ ಜನಾಂಗಕ್ಕೆ ಆ ದುರ್ಮಾರ್ಗವನ್ನು ತಪ್ಪಿಸಿ ಅವರಿಗೆ ತಕ್ಕ ಬೋಧೆಗೈದು ಲಿಂಗಧಾರಣೆ ಮಾಡಿ ವೀರಶೈವ ಮತಕ್ಕೆ ತೆಗೆದುಕೊಳ್ಳುವದು ಒಳ್ಳೆಯದು.

ಬಸವಣ್ಣನವರ ಉಜ್ವಲ ಭಾವನೆ, ಉತ್ಕಟವಾದ ಶಿವಭಕ್ತಿ, ವಿಶ್ವಕುಟುಂಬದಲ್ಲಿ ಪ್ರೇಮ, ಧಾರ್ಮಿಕಾಚರಣೆಯಲ್ಲಿ ವಿಶಾಲ ಹೃದಯ, ಜನಾಂಗ ಸೇವೆಯಲ್ಲಿ ಆಸಕ್ತಿ, ಹೀನ ಕುಲಜರನ್ನು ಉತ್ತಮ ಕುಲಜರನ್ನು ಮಾಡುವ ಆಚರಣೆ, ನಿರುಪಮ ಉತ್ಸಾಹಶಕ್ತಿ, ಅತುಲ ಸ್ವಾರ್ಥತ್ಯಾಗ ಇದ್ದುದರಿಂದ ಪಾಂಡ್ಯ, ಚೇರ, ಚೋಳ, ಕೇರಳ, ಕುಂತಳ, ಗುರ್ಜರ, ಉತ್ಕಲ, ವಂಗ, ಕಾಶ್ಮೀರ, ನೇಪಾಳದಿಂದ ಶಿವಭಕ್ತರು ಬರುತ್ತಿದ್ದರು. ಬಸವೇಶ್ವರನಿಗೆ ಮೊದಲಿಗನಾದ ಜೇಡರ ದಾಸಿಮಯ್ಯನು ನೇಯಿಕಾರನು, ಶಂಕರ ದಾಸಿಮಯ್ಯನು ಸಿಂಪಿಗನು, ಸಮಕಾಲಿಗನಾದ ಮಡಿವಾಳ ಮಾಚಯ್ಯನು ಅಗಸನು, ಮೇದಾರ ಕೇತಯ್ಯನು ಬುಟ್ಟಿ ಹೆಣೆಯುವವನು, ಢಕ್ಕೆಯ ಬೊಮ್ಮಣ್ಣನು ಡೊಳ್ಳು ಬಡಿಯುವವನು, ತುರುಗಾಯಿ ರಾಮಣ್ಣನು ದನಕಾಯುವವನು, ಸುಂಕದ ಬಂಕಣ್ಣನು ಸುಂಕಿಗನು, ಕಿನ್ನರಿ ಬೊಮ್ಮಣ್ಣನು ಅಕ್ಕಸಾಲಿಗನು, ಒಕ್ಕಲು ಮುದ್ದಯ್ಯನು ಹೊಲಮಾಡುವವನು, ಜೋಧರ ಮಾದಣ್ಣನು ಸಿಪಾಯಿಯು, ಡೋಹರ ಕಕ್ಕಯ್ಯನು ತೊಗಲುಗಾರನು, ಮಾದಾರ ಚನ್ನಯ್ಯನು ಮೊಚ್ಚೆಗಾರನು, ತಳವಾರ ರಾಮಿದೇವನು ತಳವಾರನು, ವೈದ್ಯ ಸಂಗಣ್ಣನು ವೈದ್ಯನು, ಕಿರಾತ ಸಂಗಯ್ಯನು ಬೇಡರವನು,

ನುಲಿಯ ಚಂದಯ್ಯನು ಹುಲ್ಲುಹಗ್ಗ ಮಾಡುವವನು, ಸೂಜಿಕಾಯಕದ ರಾಮಿ ತಂದೆ ಸೂಜಿಗಾರನು, ಮಲಹರಕಾಯಕದ ಚಿಕ್ಕದೇವಯ್ಯನು ಹಳೆಯ ಹಂಚು ಹಿತ್ತಾಳೆ ಸಾಮಾನು ಮಾರುವವನು, ಬಾಚಿ ಕಾಯಕದ ಬಸಪ್ಪನು ಬಡಗಿಯು, ಸತ್ತಿಗೆ ಕಾಯಕದ ರಾಮಿತಂದೆಯು ಕೊಡೆಹಿಡಿಯುವವನು, ಕನ್ನಡಿ ಕಾಯಕದ ಅಮ್ಮಿತಂದೆಯು ಕನ್ನಡಿಗಾರನು, ಕದಿರ ಕಾಯಕದ ಕಿಮ್ಮವ್ವೆ ನೂಲುವವಳು, ಕೊಟ್ಟಣದ ಸೋಮವ್ವೆ ಕುಟ್ಟುವವಳು, ಅಯ್ದಕ್ಕಿ ಮಾರಯ್ಯನು ಹಕ್ಕಲಾಯುವವನು. ಇತ್ಯಾದಿ ಶಿವಶರಣರು ೧೨ ನೆಯ ಶತಮಾನದಲ್ಲಿ ಬಣ್ಣ, ಭಾಷೆ, ಕುಲ ಜಾತಿ, ಪ್ರಾಯ, ಲಿಂಗಸ್ಥಾನ, ಉದ್ಯೋಗ ಭೇದಗಳನ್ನು ಕಿತ್ತೊಗೆದು ಸಹಸಂಕ್ತಿ ಭೋಜನ, ಲಗ್ನಸಂಬಂಧವಾದ ಕಾರ್ಯದಲ್ಲಿ ಏಕೀಭವಿಸಿ ನಡೆದ ಶಿವಶರಣರ ಗೋಷ್ಠಿಯನ್ನು ನೋಡಿದರೆ ಈಗಿನ ರಾಜಕೀಯ ಸಮಾಜದ ಸುಧಾರಕರು ಹಿರಿ ಹಿರಿ ಹಿನ್ನತ್ತಿರುವರೆಂಬುದರಲ್ಲಿ ಸಂದೇಹವಿಲ್ಲ. ಅಂದಿನ ಶರಣರು ಎಲ್ಲರನ್ನು ಸಮಾನ ದೃಷ್ಟಿಯಿಂದ ಕಂಡು ಜನಜೀವನದ ಎಲ್ಲ ಅಂಗಗಳ ಮೇಲೂ ತಮ್ಮ ಪ್ರಭಾವಮುದ್ರೆಯನ್ನೊತ್ತಿರುವರು. ಅಲ್ಲಿ ಲಿಂಗವಂ ಧರಿಸಿದ ಪ್ರತಿಯೊಂದು ಮತಕ್ಕೂ ಸತ್ಯದ ಸ್ಪಷ್ಟ ಆವಿಷ್ಕರಣದ ಹಿರಿಯ ಸ್ಥಾನವನ್ನು ಕಲ್ಪಿಸಿಕೊಟ್ಟಿದೆ.

ಪ್ಲೇಟೋ ಸಂಗ್ರಹಿಸಿರುವ ಸೊಕ್ರೇಟೀಸನ, ತಮಿಳು ನಾಡಿನ ಸಂಘ ಸಾಹಿತ್ಯಗಳನ್ನು, ಪರ್ಶಿಯಾ ದೇಶದ ಸೂಫಿ ಸಾಹಿತ್ಯಗಳನ್ನು ವೀರಶೈವ ಮತದ ಸಾಹಿತ್ಯಸೃಷ್ಟಿಗೆ ಹೋಲಿಸಬಹುದು. ಮಾನವನಿಗೆ ಸರ್ವ ವ್ಯಾಪಕತೆಯ ಅರಿವು ಬೇಕು. ಜಾತಿಯಿಂದ ಹಿರಿತನವೆಂಬುದನ್ನು ಹರಿದು, ವ್ಯಕ್ತಿಯಿಂದ ಆಚಾರದಿಂದ ಚಿತ್ತಶುದ್ಧಿಯಿಂದ ಉತ್ತಮ ವರ್ಗವೆಂದು ತಿಳಿಯಬೇಕು. ಇದಕ್ಕೆ ಬಸವಣ್ಣನವರು:—

> ವ್ಯಾಸ ಬೋಯಿತಿಯ ಮಗ, ಮಾರ್ಕಂಡೇಯ ಮಾತಂಗಿಯ ಮಗ, ಮಂಡೋದರಿ ಕಪ್ಪೆಯ ಮಗಳು. ಕುಲವನರಸದಿರಿಂಭೋ. ಕುಲದಿಂದ ಮುನ್ನೇನಾದರಿಂಭೋ. ಸಾಕ್ಷಾತ್ ಅಗಸ್ತ್ಯ ಕಬ್ಬಲಿಗ, ದೂರ್ವಾಸ ಮುಚ್ಚಿಗ, ಕಶ್ಯಪ ಕಮ್ಮಾರ, ಕೌಂಡಿಲ್ಯವೆಂಬ ಋಷಿ ಮೂರುಲೋಕವನರಿಯೆ ನಾಯಿದ ಕಾಣಿರೋ. ನಮ್ಮ ಕೂಡಲಸಂಗಮದೇವನ ವಚನವಿಂತೆಂದುದು ಶ್ವಪಚೋಪಿಯಾದರೇನು ಶಿವಭಕ್ತನೇ ಕುಲಜನೆಂಬೋ.

ಹೀನ ಕುಲದಲ್ಲಿ ಜನಿಸಿದರೂ ಲಿಂಗಧಾರಣೆಯಿಂದ ಹಿರಿಮೆಯವನಾಗುತ್ತಾನೆ. ಬಸವಣ್ಣನವರ ಕಾಲಕ್ಕೆ ಮುಂಚೆ ಕೂಡ ೬೩ ಪುರಾತನರು ಶಿವಭಕ್ತಿ ಪ್ರಶಸ್ತಿಯನ್ನು ಪಡೆದಿದ್ದರು. ಇವರು ಹಿಂದೂ ಸಮಾಜದ ಎಲ್ಲ ಕುಲ, ಜಾತಿ ಪ್ರತಿನಿಧಿಗಳೂ ಉಂಟು. ಬಸವೇಶ್ವರಾದಿಯಾದ ಶರಣರು ಇವರ ಪ್ರಭಾವವನ್ನು ಕೊಂಡಾಡುತ್ತಾರೆ.

ವೀರಶೈವ ಧರ್ಮದ ಪ್ರಕಾರ ಸ್ತ್ರೀ ಪುರುಷರು ಸಮಾನ ಹಕ್ಕುಳ್ಳವರಾದ್ದರಿಂದ ಪುರುಷರಂತೆ ಸ್ತ್ರೀಯರೂ ಲಿಂಗಧಾರಣೆ ಮಾಡುತ್ತಿರ್ದರು.

ಅಮಳ ಶಿವಭಕ್ತಿಗೆ ವಿಮಳ ಬೋಧೆಯು ತುಂಬಿ |
ವಿಮಳ ಜಂಗಮಕೆ ನೀಡಿ ಮುಕ್ತಿಯು ಪಡೆದ |
ವಿಮಳ ದೇವಿಯೆ ಶರಣಾಗು ||

ಪ್ರಬುದ್ಧರಾದವರಿಗೆ ಲಿಂಗಧಾರಣೆ ಮಾಡುವ ಕಾರ್ಯವನ್ನು ವಿಮಳಾದೇವಿ ಕೈಕೊಂಡಿದ್ದಳು. ಇವಳಿಂದ ಅನೇಕರು ಲಿಂಗಧಾರಣವನ್ನು ಹೊಂದಿ ಪುನೀತರಾದರು. ರಾಘವಾಂಕ ಕಾವ್ಯದಲ್ಲಿ ಸುಜ್ಞಾನ ದೀಕ್ಷೆಯನ್ನು ಕೊಡುವ ವಿಮಳಾದೇವಿಯೆಂಬ ಉಲ್ಲೇಖವಿದೆ. ಮಠಾಧಿಕಾರಿಗಳು ಮಾಡುತ್ತಿದ್ದ ಕಾರ್ಯಗಳನ್ನು ಭಕ್ತಾದಿಗಳಿಗೆ ಮಾಡುತ್ತಿದ್ದಳು.

ಲಿಂಗೋಪನಿಷತ್ತಿನಲ್ಲಿ :—

ಚತುರ್ವರ್ಣಾನಾಂ ಧಾರಣಂ ಕುರ್ಯಾತ್ |
ಪಶುಪಕ್ಷಿ ಮೃಗ ಕೀಟಕ ಧಾರಣಮುಚ್ಯತೇ |

ಚತುರ್ವರ್ಣದವರಿಗೂ ಲಿಂಗಧಾರಣೆ ಮಾಡಬಹುದು. ಮತ್ತು ಪಶು, ಪಕ್ಷಿ, ಮೃಗ, ಕೀಟಕ ಇವುಗಳಿಗೂ ಕೂಡ ಲಿಂಗಧಾರಣ ಹೇಳಿರುತ್ತೆ. ಇದಕ್ಕೆ ಸಾಕ್ಷಿ ಕಲಬುರ್ಗಿ ಜಿಲ್ಲೆಗೆ ಸೇರಿದ ಯಾತಗಿರಿಯಿಂದ ಆಜ್ಞೇಯಕ್ಕೆ ೧೫ ಮೈಲು ದೂರವಿರುವ ಏಲೇಶ್ವರದಲ್ಲಿರ್ದ ಏಲೇಶ ಕೇತಯ್ಯನು ಹೊಲಕ್ಕೆ ಲಿಂಗಮುದ್ರೆ, ದನಗಳಿಗೆ ಲಿಂಗಮುದ್ರೆ ಹೀಗೆ ಎಲ್ಲಕ್ಕೂ ಹಾಕಿ ದನಗಳಿಗೆ ಸಹ ಲಿಂಗಾರ್ಪಿತವಾದ ಹೊಟ್ಟು ಮೇವು ನೀರನ್ನು ಉಣಿಸುತ್ತಿದ್ದುದು ಆತನ ಕಥೆಯಿಂದ ತಿಳಿಯಬಹುದು.

ಆಯಾ ಜಾತಿಗೆ ಲಿಂಗಧಾರಣೆ ಮಾಡುವ ಕ್ರಮಃ— ಬ್ರಾಹ್ಮಣನಿಗೆ ೩ ವರ್ಷ, ಕ್ಷತ್ರಿಯನಿಗೆ ೬ ವರ್ಷ, ವೈಶ್ಯನಿಗೆ ೯ ವರ್ಷ, ಶೂದ್ರನಿಗೆ ೧೨ ವರ್ಷವೆಂದು ಕಾಲಪರಿಮಿತಿ ನೋಡಿ ಯೋಗ್ಯರಾದವರಿಗೆ ಲಿಂಗಧಾರಣ ಮಾಡುತ್ತಿದ್ದರು. ಪ್ರಮಥರು, ರೇಣುಕಾದಿ ಗಣಾಧೀಶ್ವರರು ಯುಗ ಪಥ ಸೃಷ್ಟಿಯುಳ್ಳವರು. ಇತ್ತೀಚೆಗೆ ಲಿಂಗಧಾರಣರಾದ ಡೋಹರ ಕಕ್ಕಯ್ಯ, ಸಮಗಾರ ಹರಳಯ್ಯ, ಹೊಲೆಯರ ಶಿವನಾಗಮಯ್ಯ, ಮಾದಾರ ಚನ್ನಯ್ಯ ಮುಂತಾದವರೂ ಯುಗಪಥ ಸೃಷ್ಟಿಯವರೆಂದು ಹೇಳಬಹುದು. ಇವರು ಅಸ್ಪೃಶ್ಯರಿದ್ದಾಗ್ಯೂ ಇವರ ಕುಲಗಳನ್ನು ಆಡಬೇಕಾದುದಿಲ್ಲ. ಶಾಸ್ತ್ರಾನು ಸಾರವಾಗಿ ಶಕ್ಕ ಸಂಸ್ಕಾರಗಳನ್ನು ಕಾಲ ಕಾಲಕ್ಕೆ ಹೊಂದುತ್ತಾ ಹೋಗಿ ಕಡೆಗೆ ಉದ್ಧಾರವಾಗುವವರೆಲ್ಲ ಕ್ರಮಸೃಷ್ಟಿಯವರು.

ಲಿಂಗಧಾರಿಯಲ್ಲಿ ಜಾತಿಸಂಬಂಧವಾದ ಕರ್ಮವಿಲ್ಲ:—

ಲಿಂಗೋಪನಿಷತ್

ಅನುಗ್ರಹ ಲಿಂಗೇಷು ಶಕ್ತಿಕಾಪಾಲೇಷು ಸರ್ವಂ ಸಂಕರಂ ವಿದ್ಯಾತ್ ।
ಜಾತಿ ವಿಷಯಾನ್ ತ್ಯಜೇತ್ ಶ್ರೌತಾ ಶ್ರೌತೇಷು ಧಾರಣಂ।
ವೇದೋಕ್ತ ವಿಧಿನಾಶ್ರೌತಂ ಶೃತಿರಹಿತ ಮಶ್ರೌತಂ ।
ಕುರ್ವಪರ್ಣೇಷು ಧಾರಣಂ ಕೈಲಾಸ ಸಿದ್ಧಿರ್ಭವತಿ ।

ಲಿಂಗವಂತರಲ್ಲಿ ಭೇದಾಭೇದಗಳನ್ನೆಣಿಸದೆ ಲಿಂಗವಂತಳು ಒಂದೇ ಎಂದು ತಿಳಿಯುವುದಲ್ಲದೆ ಶ್ರದ್ಧಾ ಭಕ್ತಿಯಿಂದ ಲಿಂಗದಲ್ಲಿ ಪ್ರೇಮವುಂಟಾಗಿ ಆ ಪ್ರೇಮದಿಂದ ಇತರ ಸರ್ವಜಾತಿ ವರ್ಣಾದಿ ಧರ್ಮಗಳು ಅಳಿದು ಹೋಗಿ ಲಿಂಗಧಾರಣದಿಂದ ಶುದ್ಧ ಶರೀರಿಯಾಗುವನು.

"ಲಿಂಗಧಾರಣ ಮಾತ್ರೇಣ ಶಿವತ್ವ ಪ್ರಾಪ್ತಿರೇವಹಿ" ಎಂಬ ಶ್ರೀಮತ್ ಪಾರಮೇಶ್ವರ ವಚನವು ಲಿಂಗ ಕಳೆಯು ಅಂತರಂಗವನ್ನು ವ್ಯಾಪಿಸಲು ಬರುವ ಅಡ್ಡಿಗಳನ್ನು ದೂರ ಮಾಡಲು ಗುರುವು ಬೇಕು. ಗುರುವಿನಿಂದಲೇ ಲಿಂಗಧಾರಣೆ ಎಂಬುದನ್ನು ಸರ್ವರೂ ತಿಳಿಯಬೇಕು.

ಸೂಕ್ಷ್ಮಾಗಮವು ಲಿಂಗದಲ್ಲಿ ಪ್ರಾಣವನ್ನು ನಿಕ್ಷೇಪಿಸಿ, ಪ್ರಾಣದಲ್ಲಿ ಲಿಂಗ ವನ್ನು ನಿಕ್ಷೇಪಿಸಿ ಗುರುವು ಶಿಷ್ಯನ ಅಂಗದ ಮೇಲೆ ಲಿಂಗವನ್ನು ಧರಿಸ

ಬೇಕೆಂದು ಹೇಳಿದೆ. ನಾವು ಬಸವಣ್ಣನವರ ಕಾಲವನ್ನು ನೋಡಿದಲ್ಲಿ ಅವ ಕುಲವನ್ನಾದರೂ ಪರೀಕ್ಷಿಸಿ ಲಿಂಗಧಾರಣ ಮಾಡುತ್ತಿರ್ದರು. ಏಕೆಂದರೆ ಮಾನವನ ಜೀವಿತದಲ್ಲಿ ಕ್ರಮಸೃಷ್ಟಿಯೆಂತಲೂ ಯುಗಪಥ ಸೃಷ್ಟಿಯೆಂತಲೂ ಎರಡು ವಿಧವುಂಟು. ಡೋಹರ ಕಕ್ಕಯ್ಯ, ಸಮಗಾರ ಹರಳಯ್ಯ, ಶಿವ ನಾಗಮಯ್ಯ, ಮಾದಾರ ಚನ್ನಯ್ಯ, ಅಂಬಿಗರ ಚೌಡಯ್ಯ, ಹಡಪದ ಅಪ್ಪಣ್ಣ, ಢಕ್ಕೆಯ ಬೊಮ್ಮಣ್ಣ, ಸುಂಕದ ಬಂಕಣ್ಣ, ಜೇಡರ ಮಾದಣ್ಣ ಮೊದಲಾದವರು ಯುಗಪಥ ಸೃಷ್ಟಿಯವರು. ಇವರಲ್ಲಿ ಊಟ ಉಡಿಗೆ, ದೇಹ ಸಂಬಂಧಗಳು ನಡೆಯಲು ಆತಂಕವಿರಲಿಲ್ಲ. ವೀರಶೈವರು ವ್ಯಕ್ತಿತ್ವವನ್ನು ಅವಲಂಬಿಸದೆ ತತ್ವಗಳ ಬುನಾದಿಯ ಮೇಲೆ ನಿಂತು ಸಮಾಜ, ಧರ್ಮ, ವ್ಯಕ್ತಿ, ಪ್ರಗತಿಗಳೆಲ್ಲವನ್ನೂ ಸಮಾನ ದೃಷ್ಟಿಯಿಂದ ಅನುಲಕ್ಷಿಸಿ ಬಸವಣ್ಣನವರಂತೆಯೇ ಶುದ್ಧತ್ವರಾದವರನ್ನು ಲಿಂಗಧಾರಣೆ ಮಾಡಿ ಮತಕ್ಕೆ ಸೇರಿಸಿ ಕೊಳ್ಳಬೇಕು.

ಸರ್ಪಭೂಷಣ ಶಿವಯೋಗಿಗಳು ಉತ್ತರಾಣ್ಯದಲ್ಲಿ ಎಷ್ಟೋ ಜನಕ್ಕೆ ಲಿಂಗಧಾರಣೆ ಮಾಡಿರುತ್ತಾರೆ. ೩೧–೬–೪೭ ರಲ್ಲಿ ಯಮ್ಮಿಗನೂರು ಗ್ರಾಮ ಬಳ್ಳಾರಿ ತಾಲ್ಲೂಕು ಇಲ್ಲಿ ರೆಡ್ಡಿ ಜನರಿಗೆ ಲಿಂಗಧಾರಣೆ ಮಾಡಿರುವರು. ಮತ್ತು ಉತ್ತರಾಣ್ಯದ ಹಾನಗಲ್ಲು ತಾಲ್ಲೂಕ ವನಗನಹಳ್ಳಿ ಗ್ರಾಮದಲ್ಲಿ ವಾಸ ಮಾಡುತ್ತಿರ್ದ ವೀರಶೈವರು ಕೋಮುವಾರು ಗಲಭೆಗೆ ಸಿಲ್ಕಿ ಸ್ಥಳ ವನ್ನು ಬಿಟ್ಟು ಕೊಳ್ಳೇಗಾಲದ ತಾಲ್ಲೂಕ ಗೋಪಿಶೆಟ್ಟಿಯೂರಿನಲ್ಲಿದ್ದು ವೀರ ಶೈವ ಜನಾಂಗವು ಅವರನ್ನು ದೂರೀಕರಿಸಿದ್ದರಿಂದ ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು ಮುರುಘರಾಜೇಂದ್ರ ಮಹಾ ಸ್ವಾಮಿಯವರ ಶೂನ್ಯ ಸಿಂಹಾಸನದ ಶಾಖಾನುವರ್ತಿಗಳೂ ಆದ ಶ್ರೀ ಬಸವಲಿಂಗ ಸ್ವಾಮಿಗಳು ಸದಾಶಿವಪುರ ಮಠ ಆತ್ತೂರ ತಾಲ್ಲೂಕ ಸೇಲಂ ಜಿಲ್ಲಾ ಇವರ ಕೃಪಾಶ್ರಯ ದಲ್ಲಿ ಲಿಂಗಧಾರಣೆ ಮಾಡಲು ೧–೧೧–೧೯೪೭ ರಲ್ಲಿ ಬೆಂಗಳೂರು ಸರ್ಪ ಭೂಷಣ ಮಠದ ಬ್ರ. ಶ್ರೀ. ವೇ. ಮಹದೇವ ಸ್ವಾಮಿಯವರ ಪಾದಪೂಜಾ ಕಾರ್ಯ ನೆರವೇರಿಸಲು ಶ್ರೀ ಜಗದ್ಗುರು ಸುತ್ತೂರು ವೀರ ಸಿಂಹಾಸನ ಮಠಾಧೀಶ್ವರರಾದ ಶ್ರೀ ಶಿವರಾತ್ರಿ ರಾಜೇಂದ್ರ ಸ್ವಾಮಿಯವರಿಂದ ಶ್ರೀಗುರು ಸ್ವಾಮಿಯವರಿಗೆ ಪಟ್ಟಾಧಿಕಾರವೂ, ದೇವನೂರು ಶ್ರೀಮನ್ನಿರಂಜನ ಪ್ರಣವ ಸ್ವರೂಪಿಗಳಾದ ಶ್ರೀ ತೋಂಟದಾರ್ಯ ಸ್ವಾಮಿಯವರಿಂದ ಗ್ರಾಮದ ಸದ್ಭ ಕ್ತರಿಗೆ ಬ್ರಹ್ಮೋಪದೇಶವೂ ನಡೆದುದರ ಮೇಲೆ ವೀರಶೈವರು ಏಕೀಕರಿಸಿ ನಡೆಯುತ್ತಾರೆ.

ಆಯಾ ಜಾತಿಗೆ ಲಿಂಗಧಾರಣೆ ಮಾಡುವ ಕ್ರಮಃ— ಬ್ರಾಹ್ಮಣನಿಗೆ ೩ ವರ್ಷ, ಕ್ಷತ್ರಿಯನಿಗೆ ೬ ವರ್ಷ, ವೈಶ್ಯನಿಗೆ ೯ ವರ್ಷ, ಶೂದ್ರನಿಗೆ ೧೨ ವರ್ಷವೆಂದು ಕಾಲಪರಿಮಿತಿ ನೋಡಿ ಯೋಗ್ಯರಾದವರಿಗೆ ಲಿಂಗಧಾರಣ ಮಾಡುತ್ತಿದ್ದರು. ಪ್ರಮಥರು, ರೇಣುಕಾದಿ ಗಣಾಧೀಶ್ವರರು ಯುಗ ಪಥ ಸೃಷ್ಟಿಯುಳ್ಳವರು. ಇತ್ತೀಚಿಗೆ ಲಿಂಗಧಾರಣರಾದ ಡೋಹರ ಕಕ್ಕಯ್ಯ, ಸಮಗಾರ ಹರಳಯ್ಯ, ಹೊಲೆಯರ ಶಿವನಾಗಮಯ್ಯ, ಮಾದಾರ ಚೆನ್ನಯ್ಯ ಮುಂತಾದವರೂ ಯುಗಪಥ ಸೃಷ್ಟಿಯವರೆಂದು ಹೇಳಬಹುದು. ಇವರು ಅಸ್ಪೃಶ್ಯರಿದ್ದಾಗ್ಯೂ ಇವರ ಕುಲಗಳನ್ನು ಆಡಬೇಕಾದುದಿಲ್ಲ. ಶಾಸ್ತ್ರಾನು ಸಾರವಾಗಿ ತಕ್ಕ ಸಂಸ್ಕಾರಗಳನ್ನು ಕಾಲ ಕಾಲಕ್ಕೆ ಹೊಂದುತ್ತಾ ಹೋಗಿ ಕಡೆಗೆ ಉದ್ಧಾರವಾಗುವವರೆಲ್ಲ ಕ್ರಮಸೃಷ್ಟಿಯವರು.

ಲಿಂಗಧಾರಿಯಲ್ಲಿ ಜಾತಿಸಂಬಂಧವಾದ ಕರ್ಮವಿಲ್ಲ:—

ಲಿಂಗೋಪನಿಷತ್

ಅನುಗ್ರಹ ಲಿಂಗೇಷು ಶಕ್ತಿಕಾಪಾಲೇಷು ಸರ್ವಂ ಸಂಕರಂ ವಿದ್ಯಾತ್ ।
ಜಾತಿ ವಿಷಯಾನ್ ತ್ಯಜೇತ್ ಶ್ರೌತಾ ಶ್ರೌತೇಷು ಧಾರಣಂ।
ವೇದೋಕ್ತ ವಿಧಿನಾಶ್ರೌತಂ ಶೃತಿರಹಿತ ಮಶ್ರೌತಂ ।
ಕುರ್ಮಪರ್ಣೇಷು ಧಾರಣಂ ಕೈಲಾಸ ಸಿದ್ಧಿರ್ಭವತಿ ।

ಲಿಂಗವಂತರಲ್ಲಿ ಭೇದಾಭೇದಗಳನ್ನೆಣಿಸದೆ ಲಿಂಗವಂತರು ಒಂದೇ ಎಂದು ತಿಳಿಯುವುದಲ್ಲದೆ ಶ್ರದ್ಧಾ ಭಕ್ತಿಯಿಂದ ಲಿಂಗದಲ್ಲಿ ಪ್ರೇಮವುಂಟಾಗಿ ಆ ಪ್ರೇಮದಿಂದ ಇತರ ಸರ್ವಜಾತಿ ವರ್ಣಾದಿ ಧರ್ಮಗಳು ಅಳಿದು ಹೋಗಿ ಲಿಂಗಧಾರಣದಿಂದ ಶುದ್ಧ ಶರೀರಿಯಾಗುವನು.

"ಲಿಂಗಧಾರಣ ಮಾತ್ರೇಣ ಶಿವತ್ವ ಪ್ರಾಪ್ತಿರೇವಹಿ" ಎಂಬ ಶ್ರೀಮತ್ ಪಾರಮೇಶ್ವರ ವಚನವು ಲಿಂಗ ಕಳೆಯು ಅಂತರಂಗವನ್ನು ವ್ಯಾಪಿಸಲು ಬರುವ ಅಡ್ಡಿಗಳನ್ನು ದೂರ ಮಾಡಲು ಗುರುವು ಬೇಕು. ಗುರುವಿನಿಂದಲೇ ಲಿಂಗಧಾರಣೆ ಎಂಬುದನ್ನು ಸರ್ವರೂ ತಿಳಿಯಬೇಕು.

ಸೂಕ್ಷ್ಮಾಗಮವು ಲಿಂಗದಲ್ಲಿ ಪ್ರಾಣವನ್ನು ನಿಕ್ಷೇಪಿಸಿ, ಪ್ರಾಣದಲ್ಲಿ ಲಿಂಗ ವನ್ನು ನಿಕ್ಷೇಪಿಸಿ ಗುರುವು ಶಿಷ್ಯನ ಅಂಗದ ಮೇಲೆ ಲಿಂಗವನ್ನು ಧರಿಸ

ಬೇಕೆಂದು ಹೇಳಿದೆ. ನಾವು ಬಸವಣ್ಣನವರ ಕಾಲವನ್ನು ನೋಡಿದಲ್ಲಿ ಅವ ಕುಲವನ್ನಾದರೂ ಪರೀಕ್ಷಿಸಿ ಲಿಂಗಧಾರಣ ಮಾಡುತ್ತಿರ್ದರು. ಏಕೆಂದರೆ ಮಾನವನ ಜೀವಿತದಲ್ಲಿ ಕ್ರಮಸೃಷ್ಟಿಯೆಂತಲೂ ಯುಗಪಥ ಸೃಷ್ಟಿಯೆಂತಲೂ ಎರಡು ವಿಧವುಂಟು. ಡೋಹರ ಕಕ್ಕಯ್ಯ, ಸಮಗಾರ ಹರಳಯ್ಯ, ಶಿವ ನಾಗಮಯ್ಯ, ಮಾದಾರ ಚನ್ನಯ್ಯ, ಅಂಬಿಗರ ಚೌಡಯ್ಯ, ಹಡಪದ ಅಪ್ಪಣ್ಣ, ಢಕ್ಕೆಯ ಬೊಮ್ಮಣ್ಣ, ಸುಂಕದ ಬಂಕಣ್ಣ, ಜೋದರ ಮಾದಣ್ಣ ಮೊದಲಾದವರು ಯುಗಪಥ ಸೃಷ್ಟಿಯವರು. ಇವರಲ್ಲಿ ಊಟ ಉಡಿಗೆ, ದೇಹ ಸಂಬಂಧಗಳು ನಡೆಯಲು ಆತಂಕವಿರಲಿಲ್ಲ. ವೀರಶೈವರು ವ್ಯಕ್ತಿತ್ವವನ್ನು ಅವಲಂಬಿಸದೆ ತತ್ವಗಳ ಬುನಾದಿಯ ಮೇಲೆ ನಿಂತು ಸಮಾಜ, ಧರ್ಮ, ವ್ಯಕ್ತಿ, ಪ್ರಗತಿಗಳೆಲ್ಲವನ್ನೂ ಸಮಾನ ದೃಷ್ಟಿಯಿಂದ ಅನುಲಕ್ಷಿಸಿ ಬಸವಣ್ಣನವರಂತೆಯೇ ಶುದ್ಧತ್ವರಾದವರನ್ನು ಲಿಂಗಧಾರಣೆ ಮಾಡಿ ಮತಕ್ಕೆ ಸೇರಿಸಿಕೊಳ್ಳಬೇಕು.

ಸರ್ಪಭೂಷಣ ಶಿವಯೋಗಿಗಳು ಉತ್ತರಾಣ್ಯದಲ್ಲಿ ಎಷ್ಟೋ ಜನಕ್ಕೆ ಲಿಂಗಧಾರಣೆ ಮಾಡಿರುತ್ತಾರೆ. ೩೧-೬-೪೭ ರಲ್ಲಿ ಯಮ್ಮಿಗನೂರು ಗ್ರಾಮ ಬಳ್ಳಾರಿ ತಾಲ್ಲೂಕು ಇಲ್ಲಿ ರೆಡ್ಡಿ ಜನರಿಗೆ ಲಿಂಗಧಾರಣೆ ಮಾಡಿರುವರು. ಮತ್ತು ಉತ್ತರಾಣ್ಯದ ಹಾನಗಲ್ಲು ತಾಲ್ಲೂಕ ವನಗನಹಳ್ಳಿ ಗ್ರಾಮದಲ್ಲಿ ವಾಸಮಾಡುತ್ತಿರ್ದ ವೀರಶೈವರು ಕೋಮುವಾರು ಗಲಭೆಗೆ ಸಿಲ್ಕಿ ಸ್ಥಳವನ್ನು ಬಿಟ್ಟು ಕೊಳ್ಳೇಗಾಲದ ತಾಲ್ಲೂಕ ಗೋಪಿಶೆಟ್ಟಿಯೂರಿನಲ್ಲಿದ್ದು ವೀರಶೈವ ಜನಾಂಗವು ಅವರನ್ನು ದೂರೀಕರಿಸಿದ್ದರಿಂದ ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು ಮುರುಘರಾಜೇಂದ್ರ ಮಹಾಸ್ವಾಮಿಯವರ ಶೂನ್ಯ ಸಿಂಹಾಸನದ ಶಾಖಾನುವರ್ತಿಗಳೂ ಆದ ಶ್ರೀ ಬಸವಲಿಂಗ ಸ್ವಾಮಿಗಳು ಸದಾಶಿವಪುರ ಮಠ ಆತ್ತೂರ ತಾಲ್ಲೂಕ ಸೇಲಂ ಜಿಲ್ಲಾ ಇವರ ಕೃಪಾಶ್ರಯದಲ್ಲಿ ಲಿಂಗಧಾರಣೆ ಮಾಡಲು ೧-೧೧-೧೯೪೩ ರಲ್ಲಿ ಬೆಂಗಳೂರು ಸರ್ಪಭೂಷಣ ಮಠದ ಬ್ರ. ಶ್ರೀ. ವೇ. ಮಹದೇವ ಸ್ವಾಮಿಯವರ ಪಾದಪೂಜಾ ಕಾರ್ಯ ನೆರವೇರಿಸಲು ಶ್ರೀ ಜಗದ್ಗುರು ಸುತ್ತೂರು ವೀರ ಸಿಂಹಾಸನ ಮಠಾಧೀಶ್ವರರಾದ ಶ್ರೀ ಶಿವರಾತ್ರಿ ರಾಜೇಂದ್ರ ಸ್ವಾಮಿಯವರಿಂದ ಶ್ರೀಗುರು ಸ್ವಾಮಿಯವರಿಗೆ ಪಟ್ಟಾಧಿಕಾರವೂ, ದೇವನೂರು ಶ್ರೀಮನ್ನಿರಂಜನ ಪ್ರಣವ ಸ್ವರೂಪಿಗಳಾದ ಶ್ರೀ ತೋಂಟದಾರ್ಯ ಸ್ವಾಮಿಯವರಿಂದ ಗ್ರಾಮದ ಸದ್ಭಕ್ತರಿಗೆ ಬ್ರಹ್ಮೋಪದೇಶವೂ ನಡೆದುದರ ಮೇಲೆ ವೀರಶೈವರು ಏಕೀಕರಿಸಿ ನಡೆಯುತ್ತಾರೆ.

ಮತ್ತು ಸ್ವಸ್ತಿ ಶ್ರೀ ಶಾಲಿವಾಹನ ಶಕಾಬ್ಧ ೧೮೭೦ನೆಯ ಸರ್ವ ಧಾರಿ ಸಂವತ್ಸರದ ಮಾರ್ಗಶಿರ ಶುಕ್ಲಪಕ್ಷ ೧೧ನೇ ಭಾನುವಾರ ಮತ್ತು ೧೨ ಸೋಮವಾರ ಈ ಶುಭ ದಿವಸದಲ್ಲಿ ಮೈಸೂರು ಅರಮನೆ ಗವಿಮಠಾ ಧ್ಯಕ್ಷರಾದ ಶ್ರೀಮನ್ನಿರಂಜನ ಪ್ರಣವಸ್ವರೂಪಿಗಳು ಶ್ರೀ ||ಶ್ರೀ|| ಗೌರೀ ಶಂಕರ ಮಹಾಸ್ವಾಮಿಗಳ ದಿವ್ಯ ಸಮ್ಮುಖದಲ್ಲಿ ಶ್ರೀ ಜಗದ್ಗುರು ರೇಣುಕಾ ಚಾರ್ಯ ಪರಂಪರಾಗತ ಸುತ್ತೂರು ವೀರಸಿಂಹಾಸನ ಮಠಾಧೀಶ್ವರರಾದ ಶ್ರೀ ಶಿವರಾತ್ರಿ ರಾಜೇಂದ್ರ ಮಹಾಸ್ವಾಮಿಗಳವರ ಘನ ಅಧ್ಯಕ್ಷತೆಯಲ್ಲಿ ಶಿವ ದೀಕ್ಷಾ ಮಹೋತ್ಸವವು ಕೊಯಮುತ್ತೂರು ಜಿಲ್ಲಾ ಗೋಪಿಶೆಟ್ಟಿ ಪಾಳ್ಯ, ತಾಲ್ಲೂಕ ಕೊಂಡಯಾನಪಾಳ್ಯ ಶ್ರೀ. ಎಸ್. ಸುಬ್ಬಯ್ಯಗೌಡರ ಮನೆಯಲ್ಲಿ ವಿದ್ಯುಕ್ತವಾಗಿ ನಡೆಯಲ್ಪಟ್ಟಿದೆ.

ಬಸವಣ್ಣನವರು ಲಿಂಗಧಾರಣೆಯೆಂಬ ಕೃಪಾಛತ್ರದ ನೆರಳಿನಲ್ಲಿ ಅನೇಕ ಮತಸ್ಥರಿಗೆ ಲಿಂಗವಂ ಧರಿಸಿ ಹಸ್ತಪರುಷ ನೋಟಪರುಷಗಳಿಂದ ಕುಲ ಭೇದಾದಿಗಳಂ ದೂರಟ್ಟಿ ವೀರಶೈವ ಮತಸ್ಥರನ್ನಾಗಿ ಮಾಡಿದರೋ ಅದೇ ರೀತಿಯಲ್ಲಿ ಗುರುವರ್ಗದವರು ಲಿಂಗಧಾರಣೆಯಂ ಮಾಡಿ ವೀರಶೈವ ಮತಕ್ಕೆ ಸೇರಿಸಿಕೊಳ್ಳುವದು ಶ್ಲಾಘನೀಯವಾಗಿರುತ್ತದೆ.

ನಡೆನುಡಿಗಳು ಆಚಾರದಿಂದ ವ್ಯತ್ಯಸ್ತವಾಗುತ್ತವೆ. ಶೂದ್ರನು ಆಚರಣೆ ಯಿಂದ ವೀರಶೈವನಾಗಬಲ್ಲನು. ವೀರಶೈವನು ಅನಾಚಾರಣೆಯಿಂದ ಶೂದ್ರ ನಾಗಬಲ್ಲನು. ಇಹಲೋಕವನ್ನು ಸ್ವರ್ಗವನ್ನಾಗಿಯೂ ಸ್ವರ್ಗವನ್ನು ಇಹ ಲೋಕ ಮಾಡುವುದೂ ಮಾನವನ ಗುರಿ. ಇದರಂತೆಯೇ ದೇವರು ಮನು ಷ್ಯನಾಗಿಯೂ, ಮನುಷ್ಯನು ದೇವರಾಗಿಯೂ ಆಗಬಹುದು. ಮನುಷ್ಯನಲ್ಲಿ ಸತ್ಯಮಿಥ್ಯೆಗಳು ಲಿಂಗಧಾರಿಯಾದವನು ಜಾತಿಸಂಬಂಧವಾದ ಕರ್ಮಗಳನ್ನು ಬಿಡಬೇಕು. ವೇದೋಕ್ತಮಾರ್ಗ (ಶ್ರೌತ) ವೇದವಲ್ಲದ ಮಾರ್ಗ (ಅಶ್ರೌತ) ಗಳಲ್ಲಿಯೂ ಲಿಂಗಧಾರಣವುಂಟು. ವೇದೋಕ್ತ ವಿಧಿಯಿಂದ ಮಾಡಿದರೆ ಶ್ರೌತವೆಂದೂ, ಅದಿಲ್ಲದೆ ಮಾಡುವದಕ್ಕೆ ಅಶ್ರೌತವೆಂದು ಹೆಸರು. ಸಮಸ್ತ ವರ್ಣದವರಿಗೂ ಲಿಂಗಧಾರಣ ಮಾಡುವುದು. ಶಾಸ್ತ್ರವಿರುದ್ಧವಲ್ಲ.

ಧಾರಣಂ ದೇಹಂ ಪ್ರಣವಸ್ವರೂಪಂ ।

ಲಿಂಗಧಾರಣ ದೇಹವು ಪ್ರಣವಸ್ವರೂಪವಾಗಿರುತ್ತದೆ.

ಧಾರಣಂ ದೇಹಂ ಬ್ರಹ್ಮಸ್ವರೂಪಂ ।
ಲಿಂಗಧಾರಣ ದೇಹವು ವೇದಸ್ವರೂಪವಾಗಿರುತ್ತದೆ.

ಧಾರಣಂ ದೇಹಂ ಶಿವ ಸ್ವರೂಪಂ ।
ಲಿಂಗಧಾರಣವುಳ್ಳ ದೇಹವು ಶಿವಸ್ವರೂಪವಾಗಿರುತ್ತದೆ.

ಶಿರಸಿ ಬಾಣಂ ಬಹುನಾಭಿ ಪೀಠ ಪ್ರಕೃತಿರೂಪಕಂ ದೇಹಂ ।

ಯಾವನ ದೇಹದಲ್ಲಿ ಶಿರಸ್ಸು ಬಾಣವೆಂದೂ ತೋಳು, ನಾಭಿ ಇವು ಪ್ರಕೃತಿ ರೂಪವೆಂದೂ ಭಾವಿಸಿ ಇರುವದಿಲ್ಲವೋ ಅಂಥವನ ದೇಹವನ್ನು ಶ್ರೇಷ್ಠವೆಂದು ನೋಡಬಾರದು.

ಪ್ರಾಣಾದಿ ಲಿಂಗಸ್ವರೂಪಂ । ಗುರೋರ್ಲಿಂಗಂ । ಗುರು ಸಂಭವಾತ್ಮಕಂ ।
ಲಿಂಗಂ ಪ್ರಗುರೋಃ । ಪ್ರಥಮಂ ಪ್ರಣಾಪ್ರತತಿ ।

ಲಿಂಗಧಾರಣ ಮಾಡಿದವನ ಪ್ರಾಣವೇ ಮೊದಲಾದುದು ಲಿಂಗಸ್ವರೂಪವಾಗಿರುವುದು. ಗುರುವಿನಿಂದ ಲಿಂಗವಂ ಪಡೆಯಬೇಕು. ಗುರುವನ್ನಾಗಿ ಮಾಡುವ ಸ್ವರೂಪವುಳ್ಳ ಲಿಂಗವು ಮುಂದಿನ ಗುರುವಿಗೂ ಕೊಡಲ್ಪಡುತ್ತದೆ. ಲಿಂಗವಂ ಕೊಟ್ಟ ಗುರುವು ಮುಂದಿನ ಗುರುವಿಗೆ ನಮಸ್ಕರಿಸಬೇಕು.

ಜಾತಿ ಕುಲಗಳು ಕೀಳಾಗುವುದು ಮೇಲಾಗುವುದು ಏತರಿಂದ:—

ದೇವ ನಿಮ್ಮ ಪೂಜಿಸಿ ಚೆನ್ನನ ಕುಲ ಚನ್ನಾಯಿತು ।
ದೇವ ನಿಮ್ಮ ಪೂಜಿಸಿ ದಾಸನ ಕುಲ ದೆಸೆವಡೆಯಿತ್ತು ।
ದೇವ ನಿಮ್ಮ ಪೂಜಿಸಿ ಮಾಚಯ್ಯ ನಿಮ್ಮಡಿಯಾದ ।
ನೀನೊಲಿದ ಕುಲಕ್ಕೆ ನೀನೊಲಿದ ಹೊಲೆಯಂಗೆ
ಮೇರೆಯುಂಟೇ ದೇವಾ ।

ಗುರುವಿನಿಂ ಅಂಗದ ಮೇಲೆ ಲಿಂಗಧಾರಣೆ ಮಾಡಿದ್ದರಿಂದ ಕೀಳು ಕುಲವೆಂದು ಎಣಿಸಿದ ಹಿಂದೂಜನರಲ್ಲನೇಕರನ್ನು ಬಸವಣ್ಣನವರು ಮೇಲಾಗುವಂತೆ ಮಾಡಿದರು. ಜನತೆಯಲ್ಲಿ ಐಕ್ಯ ಮತ, ಒಮ್ಮತಿ, ಸಮ್ಮತಿ ಇವುಗಳೆಲ್ಲ ಲಿಂಗಧಾರಣೆಯಲ್ಲಿ ಹರಿದು ಹೋಗಬೇಕು. ಮನಸ್ಸಿನ ಅತುಲ ಶಾಂತಿ ಸುಖಶಾಂತಿ ಸುಖವನ್ನು ಎಲ್ಲರಿಗೂ ಧಾರೆಯೆರೆಯಬೇಕೆಂದು ಬಸವಣ್ಣನ ಹಿರಿಮೆ. ಶಿವನ ಕಡೆಗೆ ಮನಸ್ಸಿರುವವನು ಕುಲಜನು. ಶಿವನಿಂದ ದೂರ

ವಿರುವವನು ಹೊಲೆಯನು ಎಂಬುದು ಶರಣರ ಮಾತು. ನಾವು ರೂಪುಗಳನ್ನು ನೆನಹುಗೊಂಡು ಧರ್ಮ ಒಂದೆಂಬುದನ್ನೂ, ದೇವರು ಒಬ್ಬನೆಂಬುದನ್ನೂ ತಿಳಿಯದೆ ಜ್ಞಾನಶಕ್ತಿಯನ್ನು ಹಾಳು ಮಾಡಿಕೊಳ್ಳುವದು ಮಾನವನ ದುರ್ಗುಣ. ಪರಮಾತ್ಮನು ಲಿಂಗರೂಪನೆಂದೂ ಆತನೊಡನೆ ಪರಿಜ್ಞಾನವನ್ನು ಪಡೆದು ಲಿಂಗದಲ್ಲಿ ಮನಸ್ಸನ್ನು ಲೀನಗೊಳಿಸುವುದು ಮಾನವನ ದೃಷ್ಟಿ. ಆತನು ಕಾಯಸಹಿತವಿದ್ದರೂ ಕಾಯ ಲಿಂಗದಲ್ಲಿ ಬೆರೆದರೂ ಲಿಂಗಾಂಗಿ ಸಮನ್ವಯ ದೃಷ್ಟಿಯಿಲ್ಲದಿದ್ದರೆ ಆತನು ನಿಜೈಕ್ಯನೆಂದಾಗಲೀ, ಜೀವನ್ಮುಕ್ತನೆಂದಾಗಲಿ, ಲಿಂಗಾಂಗಿಯೆಂದಾಗುವುದಿಲ್ಲ. ಪ್ರತಿಯೊರ್ವ ಲಿಂಗಾಯಿತನು ಆವಾಗಲೂ ಎಡಬಿಡದೆ ಏಕೋದೇವಾರಾಧನೆಯಿಂದ ಲಿಂಗದೊಳು ಬೆರೆಯಬೇಕು.

ಕೀಳು ಕುಲ ಮತ್ತು ಮೇಲು ಕುಲವೆಂಬುದಾಗಿಯೂ, ಹೊಲೆಯ, ಹಾರುವ ಎಂದು ನಿರ್ಧರಿಸುವದು ಅವರ ಹುಟ್ಟಿನ ಗುಣವಲ್ಲ, ಬಾಳಿನ ಗುಣವೆಂದು ಅವರನ್ನು ಲಿಂಗಾಂಗಿಗಳಾಗಿ ಮಾಡಿದರು. ಜಾತಿಭೇದವೆಣಿಸದೆ ಏಕ ರೀತಿ ಕಂಡರು. ಲಿಂಗವಂತನಾದರೂ ಮನಮುಟ್ಟಿ ಅನ್ಯಕ್ಕರಸಬಾರದೆಂಬ ವಿಚಾರ ಭಾವ ಲಿಂಗಾಂಗಿಗಳದು.

ಇದಕ್ಕೆ ಬಸವಣ್ಣನವರು: —

ಶ್ವಪಚನಾದಡೇನು ಲಿಂಗವಿದ್ದವನೇ ಕುಲಜ
ನಂಬಿಯೂ ನಂಬದಿದ್ದರೆ ಸಂದೇಹಿ ನೋಡಾ
ಕಟ್ಟಿದಡೇನು ಮುಟ್ಟಿದಡೇನು ಮನಮುಟ್ಟಿದನ್ನಕ್ಕ
ಭಾವಶುದ್ಧವಿಲ್ಲದವಂಗೆ ಭಕ್ತಿ ನೆಲೆಗೊಳ್ಳದು
ಕೂಡಲಸಂಗಮದೇವ ನೀನೊಲಿದಂಗಲ್ಲದೆ
ಹೊಲೆಯುಂಟೆ ಲಿಂಗವಿದ್ದೆಡೆಯಲ್ಲಿ
ಕುಲವುಂಟೇ ಜಂಗಮವಿದ್ದೆಡೆಯಲ್ಲಿ
ಎಂಜಲುಂಟೇ ಪ್ರಸಾದವಿದ್ದೆಡೆಯಲ್ಲಿ
ಇಂತೀ ಅಪವಿತ್ರದ ನುಡಿಯ ನುಡಿವ ಸೂತಕವೇ ಪಾತಕ.
ನಿಷ್ಕಳಂಕ, ನಿಜೈಕ್ಯ, ತ್ರಿವಿಧ ನಿರ್ಣಯ ಕೂಡಲಸಂಗಮದೇವ
ನಿಮ್ಮ ಶರಣರಿಗಲ್ಲದಿಲ್ಲ.

ಹರಭಕ್ತರಲ್ಲಿ ಜಾತಿಭೇದವಿಲ್ಲವೆಂಬುದು ಬಸವಣ್ಣನ ಮತ. ವೀರಶೈವ ಧರ್ಮಿಗಳು ಪ್ರತಿಯೊರ್ವರು ಬೇರೂರಿರಬೇಕು. ಇದಕ್ಕೆ ಬಸವೇಶ್ವರರು:—

ದೇವಲೋಕ ಮರ್ತ್ಯಲೋಕವೆಂಬುದು ಬೇರಿಲ್ಲ ಕಾಣಿಭೋ
ಸತ್ಯವ ನುಡಿವುದೇ ದೇವಲೋಕ ಮಿಥ್ಯವ ನುಡಿವುದೇ ಮರ್ತ್ಯಲೋಕ
ಆಚಾರವೇ ಸ್ವರ್ಗ. ಅನಾಚಾರವೇ ನರಕ ಕೂಡಲಸಂಗಮದೇವಾ
ನೀವೇ ಪ್ರಮಾಣ.

ಈ ವಚನದ ಸಾರವನ್ನರಿತು ಲೋಕಾಲೋಕಗಳ ವಿಚಾರವನ್ನು ತಿಳಿದರೆ ಮಾನವನ ಸ್ವಾಭಾವಿಕ ಚಿತ್ತ ಗೊತ್ತಾಗುತ್ತದೆ. ಕನಿಷ್ಟ ಸ್ಥಿತಿಯಲ್ಲಿದ್ದರೂ, ನೀತಿ, ನಿಯಮ, ಲಿಂಗಧಾರಣೆ ಇವುಗಳಿಂದ ಉತ್ತುಮತ್ವ ಪಥ ಸಿದ್ಧಿಯಾಗುತ್ತದೆ. ಆದರೆ ಹೊಲೆಯ, ಡೋಹರ, ಚಿಪ್ಪಲಿಗ ಎಂಬ ಹೀನತ್ವವನ್ನು ಕಲ್ಪಿಸಬಾರದು. ಹೊಲೆಯಂಬುವದು ಗರ್ಭ. ಈ ಗರ್ಭದಲ್ಲಿ ಮಾನವನು ನವಮಾಸ ಮುಳುಗಾಡಿರುತ್ತಾನೆ. ಹುಟ್ಟಿದ ಮೇಲೆ ಲಿಂಗಧಾರಣೆಯಂ ಹೊಂದಿ ಶರಣತ್ವ ಸಂಪಾದಿಸಬಹುದು. ಹೀಗಿದ್ದರೆ ಕೀಳೆಂಬ ನುಡಿ ಹರಿದು ಹೋಗುವದು.

ಹೊಲೆಗಂಡಲ್ಲದೆ ಪಿಂಡದನೆಲೆಗಾಶ್ರಯವಿಲ್ಲ.
ಜಲಬಿಂದು ದಿನ ವ್ಯವಹಾರ ಒಂದೇ
ಆಸೆಯಾಮಿಷ ಹರುಷ ವಿಷಯಾದಿಗಳೆಲ್ಲ ಒಂದೆ
ಏನ ನೋಡಿ ಏನ ಕೇಳಿ ಏನು ಫಲ
ಕುಲಜನೆಂಬುದಕ್ಕೆ ಆವುದು ದೃಷ್ಟ
ಸಪ್ತ ಧಾತು ಸಮಂ ಪಿಂಡಂ | ಸಮಯೋನಿ ಸಮುದ್ಭವಂ !
ಆತ್ಮ ಜೀವ ಸಮಾಯುಕ್ತಂ | ವರ್ಣಾನಾಂಕಿಂ ಪ್ರಯೋಜನಂ ।
ಇದು ಕಾರಣ ಕೂಡಲಸಂಗಮದೇವ ಲಿಂಗಸ್ಥಲವನರಿದವನೇ
ಕುಲಜನು.

ಮಾನವ ಜನ್ಮದಲ್ಲಿ ಹುಟ್ಟಿನಿಂದ ಕುಲಪನರಸಲು ಸಾಧ್ಯವಿಲ್ಲ. ನಡೆ ನುಡಿಗಳಿಂದ, ಆಚಾರ ಶೀಲತೆಯಿಂದ, ಕಸಬಿನಿಂದ ಕುಲಜಾತಿಗಳರಸಬಹುದು. ಹೀನ ಕುಲದಲ್ಲಿ ಹುಟ್ಟಿದವನಾದರೂ ತನ್ನ ಬಾಳಿನ ಹಿರಿಮೆಯಾದ ಲಿಂಗಾಯತ ಮತದಿಂದ ಹಿರಿಯಕುಲವಾಗಬಹುದು.

ಲಿಂಗಾಯತರಲ್ಲಿ ಶ್ರೇಷ್ಠ ಕನಿಷ್ಠವೆಂಬ ಭಾವನೆಯನ್ನು ಸಮಾಜವು ಮರೆಯಬೇಕು. "ಅಂಗದ ಮೇಲೆ ಲಿಂಗವುಳ್ಳವರನ್ನೆಲ್ಲಾ ಸಂಗಮೇಶ್ವರನೆಂಬೆ" ಎಂಬಂತೆ ಲಿಂಗವುಳ್ಳವರನ್ನೆಲ್ಲ ಸಮಾಜವು ಒಂದೇ ಎಂದು ಭಾವಿಸಬೇಕು. ಮಹದೇಶ್ವರನು ಪೂರ್ವಕಾಲದಲ್ಲಿ ಬೇಡರಿಗೆ ಲಿಂಗವನ್ನು ಧರಿಸಿದುವುದರಿಂದ ಬೇಡಗಂಪಣದವರೆಂದು ಲಿಂಗಾಯತರ ಧರ್ಮವನ್ನನುಸರಿಸಿ ವೀರಶೈವರಲ್ಲೇ ಕೂಡಿ ಬಾಳುವರು. ಇದರಂತೆ ಕೈಕೋಳದವರೆಂದು ಹೆಸರನ್ನಿಟ್ಟುಕೊಂಡಿರುವ ಒಂದು ಪಂಗಡದವರು ವೀರಶೈವರಲ್ಲೇ ಹೆಣ್ಣು ತರುವ ಕೊಡುವ ಸಂಪ್ರದಾಯಸ್ಥರಾಗಿ ಪಟ್ಟದ ಶ್ರೀಗಳವರಿಂದಲೇ ಲಿಂಗಧಾರಣ ಮಾಡಿಸಿಕೊಳ್ಳುವ ಊಟೋಪಚಾರಗಳಲ್ಲಿ ವರ್ತಿಸುತ್ತಾರೆ. ಕೊಡುವ ಕೊಂಬುವದರಲ್ಲಿ ವೀರಶೈವರಲ್ಲನೇಕರು ಭಿನ್ನತ್ವ ಕಲ್ಪಿಸಿಕೊಂಡಿರುತ್ತಾರೆ. ನಮ್ಮ ಸಮಾಜದಲ್ಲಿ ಹಿರಿಯ ಕಿರಿಯ ಭಾವತ್ವವನ್ನು ಕಲ್ಪಿಸುತ್ತಿರ್ದ ಸ್ಪೃಶ್ಯಾಸ್ಪೃಶ್ಯತೆಯನ್ನು ತೊಡೆದು ಹಾಕಲು ಬಸವಣ್ಣನವರೇ ಮೊದಲಿಗರು. ಈ ಮಹಾನುಭಾವರು ಗುರುತ್ವಕ್ಕೆ ಬೆಲೆಯಿತ್ತಿರುವರು.

ಗುರುಬ್ರಹ್ಮಾ ಗುರುವಿಷ್ಣುಃ ಗುರುದೇವ ಮಹೇಶ್ವರಃ ।
ಗುರುಸಾಕ್ಷಾತ್ಪರಬ್ರಹ್ಮಾ ತಸ್ಮೈ ಶ್ರೀಗುರುವೇ ನಮಃ ॥

ಗುರುಗಳೆಂದರೆ "ಭೂರ್ಭುವಸ್ಸುವಃ" ಈ ಮೂರು ಲೋಕಗಳಲ್ಲಿಯೂ ದೇವತೆಗಳಿಗೂ ಮನುಷ್ಯರಿಗೂ ಸಹ ಧರ್ಮವನ್ನು ವಿಧಿಸತಕ್ಕ ಪೂಜ್ಯರು. ಈ ಬ್ರಹ್ಮಾಂಡವೆಂಬ ರಾಜ್ಯಕ್ಕೆ ಸಾರ್ವಭೌಮನಾದ ಈಶ್ವರಾಂಶವೇ ಗುರುವು ಎಂಬದಾಗಿ ಹೇಳಿರುತ್ತಾರೆ. ವೀರಶೈವರಲ್ಲಿ ಜಾತ್ಯಂಧಗಳಂ ತೊಲಗಿಸಿ ಸಮಾಜೋನ್ನತೆಯಂ ಕಲ್ಪಿಸಿ ದೇಶದೇಶದಲ್ಲಿ ಸಂಚರಿಸಿ ಲಿಂಗಾಯತ ತತ್ವವಂ ಪ್ರಕಟಗೊಳಿಸಿ ಅನಾಚಾರ ಮಾರ್ಗದಲ್ಲಿ ನಡೆಯುವರಂ ಆಚಾರ ವರ್ಗಕ್ಕೇರಿಸಿ ತತ್ವರಹಸ್ಯಾರ್ಥಂಗಳಂ ತಿಳಿಸುವವರೇ ಗುರುವರ್ಗದವರು.. ಮೈಲಾರ ಬಸವೇಶ್ವರರು ಅಷ್ಟಾವರಣ ವಾರ್ಧಿಕದಲ್ಲಿ—

ಭವಿತನವ ಕಳೆದು ಭಕ್ತನ ಮಾಡಿ ತನುತ್ರಯಕೆ ।
ತ್ರಿವಿಧದೀಕ್ಷೆಯನಿತ್ತು ತ್ರಿವಿಧ ಗುಣಗಳ ಕಳೆದು ।
ತ್ರಿವಿಧ ತನುವಿಗೆ ತ್ರಿವಿಧ ಲಿಂಗಮಂ ನೆಲೆಗೊಳಿಸಿ ತ್ರಿವಿಧವಾಚಾರವರುಪಿ ।
ತ್ರಿವಿಧ ಪೂಜೆಯ ಪೇಳಿ ತ್ರಿವಿದಾರ್ಪಣವ ತಿಳುಹಿ ।
ತ್ರಿವಿಧ ಶೇಷನುಂಬ ತ್ರಿವಿಧ ಸುಖಸಮರತಿಯ ।
ನವಿರತಂ ದಯೆಗೈದು ಭವಗೇಡಿ ಎನಿಸಿದೈ ಅವಿರಳಸಿ ಗುರುಸಮುಷ್ಟೀ ॥

ಎಂದು ಹೇಳುವರು. ಈಗ ಪ್ರಚಾರದಲ್ಲಿರುವ ಹಿಂದೂಮತ, ಬೌದ್ಧ ಮತ, ಪಾರಶೀಮತ, ಕ್ರೈಸ್ತಮತ, ಮಹಮ್ಮದೀಯ ಮತಗಳನ್ನು ಸ್ಥಾಪಿಸುವುದಕ್ಕೆ ಒಬ್ಬೊಬ್ಬ ಅವತಾರಿಗಳು ಅವತರಿಸಿ ಜನ್ಮವೆತ್ತಿದಂತೆಯೇ ಈಶ್ವರಾನುಗ್ರಹದಿಂದ ವೀರಶೈವರಲ್ಲೂ ಲೀಲಾವಿಭೂತಿಗಳು ಅವತರಿಸಿ ಯುಗ ಯುಗಗಳಲ್ಲಿಯೂ ಲಿಂಗಧಾರಣ ತತ್ವಬೋಧೆ ಮಾಡುತ್ತಲೇ ಇರುವರು.

ಕಾಲವು ವ್ಯತ್ಯಸ್ತವಾದಂತೆ ಧರ್ಮವೂ ವ್ಯತ್ಯಾಸನಾಗಬೇಕಾಗಿರುವದರಿಂದ ಆಗಾಗ್ಗೆ ಮಹಿಮರು ಅವತರಿಸಿ ಧರ್ಮವನ್ನು ತಿದ್ದುಪಾಡು ಮಾಡುವರು. " ಧಾರಣಾದ್ಧರ್ಮ ಮಿತ್ಯಾಹುಃ ಧರ್ಮೋಧಾರಯತಿ ಪ್ರತಿಪ್ರಜಾಃ " ಎಂಬಂತೆ ಪ್ರತಿಯೊಬ್ಬ ಮಾನವನಿಗೂ ಧರ್ಮ ಯಾವುದೆಂದರೆ ಅವನು ಇರುವ ಸ್ಥಿತಿಯಿಂದ ಉನ್ನತ ಸ್ಥಿತಿಗೆ ಎತ್ತಲು ಯಾವುದು ಸಹಕಾರಿಯೋ ಎಂಬುದನ್ನು ಮೊದಲು ತಿಳಿಯಬೇಕು. ಜ್ಞಾನಸೋಪಾನದಲ್ಲಿರುವ ಮನುಷ್ಯರಲ್ಲಿ ಕೆಲವರು ಕೆಳಗಿನ ಅಂತಸ್ಥಿನಲ್ಲಿಯೂ, ಕೆಲವರು ಮಧ್ಯ ಅಂತಸ್ಥಿನಲ್ಲಿಯೂ ಇರುತ್ತಾರೆ. ಇವರ ಯೋಗ್ಯತಾ ಕ್ರಮಗಳು ಧರ್ಮಸ್ಥಾನಗಳಲ್ಲಿ ವ್ಯತ್ಯಸ್ತವಾಗುತ್ತದೆ. ವೀರಶೈವ ಮತದಲ್ಲಿ ಲಿಂಗಧಾರಣೆಯಿಂದ ಎಲ್ಲರನ್ನೂ ಸಮಾನತ್ವವನ್ನು ಹೇಳಬಹುದು. ಜ್ಞಾನದೀಕ್ಷಾ ಬೋಧೆಯಲ್ಲಿ:—

ಶಿವಭಕ್ತಿ। ಧರೋಮರ್ತ್ಯ ಶ್ವಂಡಾಲಃ ಪುಲ್ಕಸೋಪಿವಾ ।
ನಾರೀ ನರೋವಾ ಷಂಡೋವಾ ಸದ್ಯೋಮುಕ್ತಿಮವಾಪ್ನುಯಾತ್ ।
ಲಿಂಗಧಾರೀ ಮಹಾಯೋಗೀ ಲಿಂಗಧಾರೀ ಸದಾಶಿವಃ ।
ಲಿಂಗಧಾರೀ ಮಹಾಲಿಂಗೀ ಸಲಿಂಗೀನಾ ಪ್ರಸಂಶಯಃ ॥

ಶಿವಭಕ್ತಿಯನ್ನು ಧರಿಶಿದ ಮನುಷ್ಯನು ಚಂಡಾಲನಾಗಲಿ, ಪುಲ್ಕಸನಾಗಲಿ, ಹೆಂಗುಸಾಗಲಿ, ನಪುಂಸಕನಾಗಲಿ, ಆ ಕ್ಷಣವೇ ನಿವೃತ್ತಿ ಮಾರ್ಗದವನಾಗಲಿ ಸಂಸಾರದಿಂದ ಬಿಡುಗಡೆಯನ್ನು ಹೊಂದಿದವನಾಗುತ್ತಾನೆ. ಇದಕ್ಕೆ ಸಂಶಯವಿಲ್ಲ.

ಲಿಂಗಧಾರಿಯಾದ ಶಿವಭಕ್ತನು ಮಹಾಯೋಗಿಯು, ಲಿಂಗ ಧಾರಿಯು ಸದಾಶಿವನೆಂಬ ದೇವನು, ಲಿಂಗ ಧಾರಿಯು ಮಹಾಲಿಂಗ ಸಂಬಂಧವುಳ್ಳವನು, ಇಂಥವನೇ ಲಿಂಗಿ ಎನ್ನಿಸಿಕೊಳ್ಳಲ್ಪಡುವನು. ಇದಕ್ಕೆ ಸಂಶಯವಿಲ್ಲ.

ಅಂಗ ಲಿಂಗ ವಿಹೀನಶ್ಚ ಬ್ರಾಹ್ಮಣೋ ಶುದ್ಧ ಏವಚ ।
ಅಂಗ ಲಿಂಗ ಧರಶ್ಶೂದ್ರೋ ಬ್ರಾಹ್ಮಣೋ ಭಗವತ್ತರ ॥

ದೇಹದಲ್ಲಿ ಪ್ರಾಣಲಿಂಗವಿಲ್ಲದಿದ್ದರೆ ಬ್ರಾಹ್ಮಣನು ಅಶುದ್ಧನು. ಅಂಗದಲ್ಲಿ ಲಿಂಗಧಾರಿಯಾದ ಶೂದ್ರನೂ ಸಹ ಶ್ರೇಷ್ಠನಾದ ಬ್ರಾಹ್ಮಣನಾಗಿರುತ್ತಾನೆ. ಬ್ರಹ್ಮಜ್ಞಾನಿಯೆಂಬುದಕ್ಕೆ ಲಿಂಗಧಾರಣ ಮಾಡುವುದರಿಂದ ಸ್ಥೂಲತನು ಶುದ್ಧವಾಗಿರುವದು. ಈ ಗುರುತು ಇಲ್ಲದವರಿಗೆ ಬ್ರಹ್ಮತ್ವವು ಬ್ರಹ್ಮಜ್ಞಾನವು ಸಿದ್ಧಿಸುವುದಿಲ್ಲ. ಲಿಂಗವನ್ನು ಧರಿಸಲ್ಪಟ್ಟ ಗುರುಜಂಗಮರೇ ಲಿಂಗಾಂಗಿಗಳಿಗೆ ದೇವರಲ್ಲದೆ ಅನ್ಯ ದೇವರಿಲ್ಲ. ಇದಕ್ಕಾಗಿ ಬಸವಣ್ಣನವರು,

ಇಬ್ಬರು ಮೂವರು ದೇವರೆಂದು ಉಬ್ಬಿ ಮಾತನಾಡಬೇಡವೋ
ದೇವ ಒಬ್ಬನೇ ಕಾಣಿರೋ ಇಬ್ಬರೆಂಬುದು ಹುಸಿ ನೋಡಾ
ಕೂಡಲಸಂಗಮದೇವನಲ್ಲದಿಲ್ಲೆಂದಿತ್ತು ವೇದ.

ಇಂತೀ ದೇವನು ಒಬ್ಬನೆಂದೇ ಹೇಳುವುದು ಶಿವಾನುಭವ ಕ್ರಿಯೆಯು.

ಇಷ್ಟಲಿಂಗದಲ್ಲಿ ಮನವ ನೆಟ್ಟನೆಯೆ ನೆಲೆಗೊಳಿಸಿ ।
ಅಷ್ಟ ವಿಧ ಸಕೀಲಗಳನರಿದು ಚರಿಸಲ್ಕೆ ।
ಇಷ್ಟಮಹಲಿಂಗದೊಳಗೈಕ್ಯ ॥

ಇಷ್ಟಲಿಂಗದಲ್ಲಿ ಮನಸ್ಸನ್ನು ಚೆನ್ನಾಗಿ ನೆಲೆಗೊಳಿಸಿ, ಲಿಂಗದ ಸಕೀಲುಗಳನ್ನು ತಿಳಿದು ನಡೆಯಲು ಇಷ್ಟಲಿಂಗದ ರೂಪವಾದ ಮಹಾಲಿಂಗದಲ್ಲಿ ತಾನು ಕೂಡಿದವನಾಗುತ್ತಾನೆ. ಈ ಇಷ್ಟಲಿಂಗವ ಧಾರಣೆ ಮಾಡಿಕೊಂಡು ಸದ್ಗುರೂಪದೇಶ ಪಡೆದ ಸದ್ಭಕ್ತನು ಹುಟ್ಟುವ ಭವಗಳನ್ನು ಹೋಗಲಾಡಿಸಿಕೊಳ್ಳುವನು.

## ಭಕ್ತಿಯೋಗೋಪನಿಷತ್

ಆದಿ ಪರಮ ಶಿವಲಿಂಗಾಂಗ ಸಾಮರಸ್ಯ ಭಕ್ತಿಯೋಗಂ ವ್ಯಾಖ್ಯಾಸ್ಯಾಮಃ ಶಿವಃ ಪ್ರಾಣಲಿಂಗಃ ಶಿವಭಕ್ತಸ್ಯ ಸೇವಾ ಶಿವಪ್ರಸಂಗೇ ಮತಿರಸ್ಯ ಸರ್ವದಾ ಶಿವಪ್ರಸಾದಸ್ಯ ಧೃತಿರ್ನಿರಂತರಂ ಪರೋಪಕಾರಂ ಶಿವಕಾರ್ಯಂ ವಿಜಸ್ತ್ಯಾತ್ ॥

ಶ್ರೇಷ್ಠವಾದ ಶಿವಲಿಂಗ ಮತ್ತು ಅಂಗದ ಕೂಡುವಿಕೆಯುಳ್ಳ ಭಕ್ತಿಯೋಗವನ್ನು ಹೇಳುತ್ತದೆ. ಶಿವನೇ ಪ್ರಾಣವು. ಶಿವಭಕ್ತನ ಸೇವೆಯಲ್ಲಿ

ಶಿವನ ವಿಷಯದ ವಾತುಕತೆಯಲ್ಲಿ ಯಾವಾಗಲೂ ಬುದ್ಧಿ, ಯಾವಾಗಲೂ ಶಿವನ ಪ್ರಸಾದವನ್ನು ಸೇವಿಸುವ ಧೈರ್ಯ ಇವುಗಳೆಲ್ಲ ಇದ್ದು, ಪರೋಪಕಾರವನ್ನು ಶಿವಕಾರ್ಯವೆಂದು ಚಿಂತಿಸಬೇಕು.

## ಋಗ್ವೇದೋಪನಿಷತ್

ಶಿವ ಏವ ಗುರುಃ ಗುರುಃ ಗುರುದೇವಶ್ಶಿವಃ । ಶಿವ ಏವ ಲಿಂಗಂ ಉಭಯೋರ್ಮಿಶ್ರ ಪ್ರಕಾಶತ್ವಾತ್ । ಪ್ರಾಣತ್ವಾನ್ ಮಹೇಶ್ವರಃ ಶಿವ ಗುರುಸ್ವರೂಪೋ ಮಾಹೇಶ್ವರಃ ತಸ್ಮಾನ್ ಮಾಹೇಶ್ವರಾತ್ ಪರಂ ನಾಸ್ತಿ ॥

ಶಿವನೇ ಗುರುವು, ಗುರುದೇವನೇ ಶಿವನು, ಶಿವನೇ ಲಿಂಗವು, ಗುರು ಮತ್ತು ಲಿಂಗ ಈ ಇಬ್ಬರೂ ಸೇರಿ ಲಿಂಗದ ಪ್ರಕಾಶವಾಗುವುದರಿಂದ ಇವರಿಬ್ಬರ ಪ್ರಾಣರೂಪವಾಗಿ ಮಹೇಶ್ವರನು ಶಿವ ಗುರು ಇವರಿಬ್ಬರ ಸ್ವರೂಪವೂ ಮಹೇಶ್ವರನು ಆದುದರಿಂದ ಮಹೇಶ್ವರನಿಗಿಂತ ಹೆಚ್ಚಿನವರು ಯಾರೂ ಇಲ್ಲ. ಲಿಂಗಧಾರಣವು ವೀರಶೈವರಿಗೆ ಇರುವಂತೆ ಇತರ ಶೈವರಿಗೂ ಲಿಂಗಧಾರಣೆ ಮಾಡಿ ವೀರಶೈವ ಮತಕ್ಕೆ ತೆಗೆದುಕೊಳ್ಳಬಹುದು. ಇದಕ್ಕೆ ಪ್ರಮಾಣ ಗ್ರಂಥಗಳುಃ— (೧) ಪರಮೇಶ್ವರಾಗಮ (೨) ಸೂತ ಸಂಹಿತೆ (೩) ಭೀಮಾಗಮೇ (೪) ಅಮೃತ ಭಾಷ್ಯ (೫) ಋಗ್ವೇದ (೬) ಯಜುರ್ವೇದ (೭) ಸಾಮವೇದ (೮) ಅಥರ್ವಣವೇದ (೯) ಯೋಗಜಾಗಮ (೧೦) ಕಾಮಿಕಾಗಮೇ (೧೧) ವಾತುಲಾಗಮೇ (೧೨) ಪ್ರಸ್ತಾರ ಸಂಗ್ರಹ (೧೩) ಮಕುಟಾಗಮ ಮತ್ತು ಬಸವಾದಿ ಪ್ರಮಥರ ಶರಣರ ವಚನಗಳಲ್ಲೂ ಇತರ ಜನಕ್ಕೆ ಲಿಂಗಧಾರಣೆ ಮಾಡಿ ವೀರಶೈವ ಮತಕ್ಕೆ ಸೇರಿಸಿಕೊಳ್ಳಬಹುದೆಂದು ದೃಷ್ಟಾಂತರಗಳಿವೆ. ಇತರ ಶೈವರಂತೆಯೇ ಶೂದ್ರರು ಬ್ರಾಹ್ಮಣರಾಗುವರೆಂಬುದಾಗಿ ಆಧಾರಗಳಿರುತ್ತವೆ. ಶ್ರೀ ಭೃಗುಮಹರ್ಷಿಯು "ನ ವಿಶೇಷೋಸ್ತಿ ವರ್ಣಾನಾಂ ಸರ್ವಂ ಬ್ರಾಹ್ಮಮಿದಂ ಜಗತ್ (ಮಹಾ ಭಾರತ ಶಾಂತಿಪರ್ವ ೧೮೮ನೆಯ ಅಧ್ಯಾಯ) ಇಲ್ಲಿ ಹೇಳಿರುವುದು.

"ಅನ್ಯಜದ್ಬ್ರಾಹ್ಮಣಾ ನೇವ ಪೂರ್ವಂ ಬ್ರಹ್ಮಪ್ರಜಾಪತೀನ್

ಕಾಲಕ್ರಮೇಣ ಜಂದೊಂದು ವ್ಯಾಪಾರವನ್ನವಲಂಬಿಸಿ ನಾನಾವರ್ಣದವರಾದರು. ಇದೇ ತತ್ವ ಬಸವಣ್ಣನವರಲ್ಲಿ ಬೇರೂರಿತ್ತು. "ಕಾಶಿಕಮ್ಮಾರನಾದ ಬೀಸಿ ಮಡಿವಾಳನಾದ" ಎಂಬ ಶೃತಿ ಹೇಳುತ್ತದೆ. ಯಾ ವಿದಾ

ಯಕವಾದ ಮೂಲ ವೇದಮಂತ್ರವು— "ವಿಶ್ವೋದೇವಸ್ಯನೇತುರ್ಮರ್ತೋ ಪುರೀತ (ತೃಣೀತ) ಸಂಖ್ಯಂ ಮನುಷ್ಯರೆಲ್ಲರೂ ಜಗದೀಶ್ವರನಾದ ದೇವನ ಸಖ್ಯವನ್ನು ವರಿಸಿತಕ್ಕದು. ಎಂಬ ಇತರ ಪ್ರಮಾಣವಿರುವಾಗ ವೀರಶೈವರು ಇತರರನ್ನು ಲಿಂಗಾಯಿತರನ್ನಾಗಿ ಏಕೆ ಮಾಡಿಕೊಳ್ಳಬಾರದು?

ವೀರಶೈವರು ಸಮಾಜಿ ಸಂಘದಲ್ಲಿ ಟೊಂಕ ಕಟ್ಟಿ ಭವಿಪಾಕಗಳಿಗೆ ದರಿ ಭವಿಗಳಂ ಭಕ್ತರಂ ಮಾಡಲು ಸಾಧಿಸಬೇಕು. ಬ್ರಹ್ಮವಿದ್ಯಾ ಸಮಾಜಕ್ಕೆ ಪುರಾಣ ಪ್ರಸಿದ್ಧರಾದ ದೇವಾಸಿ ಮತ್ತು ಮರು ಎಂಬ ಮಹರ್ಷಿಗಳು ಆತ್ಮಜ್ಞಾನವನ್ನು ಸಂಪಾದಿಸಲು ದಾರಿತೋರಿದ್ದರಿಂದ ಬ್ಲಾಪಟಿಸ್ಕಿ ಮತ್ತು ಆಲ್ಕಾಟರವರು ಮುಂದು ವರಿಸಿದಂತೆ ಬಸವೇಶ್ವರರು, ರೇಣುಕಾದಿ ಪ್ರಮಥರು ವೀರಶೈವ ಸಮಾಜವನ್ನು ಮುಂದುವರಿಸಿದರು. ಅದರಂತೆ ನಮ್ಮೀ ಸಮಾಜದ ಗುರುವರ್ಗದವರು ಭಕ್ತವರ್ಗದವರು ಸೇರಿ ಶಾಸ್ತ್ರ ವಿಚಾರಗಳನ್ನು ತಿಳಿಸಿ ಪ್ರಾಚೀನ ಪದ್ಧತಿಗಳನ್ನು ಆಚರಣೆಗೆ ತಂದರೆ ಸುಖಕರವೂ ಫಲಕಾರಿಯೂ ಆಗುವುದು. ಅನೇಕರು ಶಾಸ್ತ್ರಾಧಾರಗಳನ್ನರಿಯದೆ ಲಿಂಗಧಾರಣ ಕ್ರಮವು ಅಶಾಸ್ತ್ರೀಯ ಮಾರ್ಗವೆಂದು ಅಭಿಪ್ರಾಯಪಡು ವರು. ಅಂಥವರಿಗೆ ಶಾಸ್ತ್ರೀಯ ಮಾರ್ಗ ತಿಳಿಯಪಡಿಸಬೇಕು. ಅಲ್ಲಲ್ಲಿ ವೀರಶೈವ ಪ್ರಮುಖರು ಉಪನ್ಯಾಸಗಳ ಮೂಲಕವಾಗಲಿ ಶಾಸ್ತ್ರಾಧಾರಣ ಮೂಲಕವಾಗಲಿ ತಿಳಿಯದ ಜನಾಂಗಕ್ಕೆ ತಿಳಿಯಪಡಿಸತಕ್ಕದು ಉತ್ತಮ.

ವಿಚಾರ ಮಾಡಿ ನೋಡಿದರೆ ನಮ್ಮ ವೀರಶೈವ ಮತೀಯರು ಮತ ಧರ್ಮ ವಿಚಾರದಲ್ಲೂ ಸಂಘ ಧರ್ಮನಿರ್ಣಯದಲ್ಲೂ ಇಷ್ಟಾನುಸಾರ ವರ್ತಿಸುವರು. ಭೇದಾದಿಗಳನ್ನು ಕಲ್ಪಿಸುವರು, ಲಿಂಗಧಾರಣೆ ಮಾಡಿಸಿಕೊಂಡ ಪ್ರತಿಯೊರ್ವರೂ ಭೋಜನಾದಿಗಳನ್ನು ಮಾಡುವುದು, ವಿವಾಹಮಾಡಿಕೊಳ್ಳುವದನ್ನೂ ಶಾಸ್ತ್ರಸಮ್ಮತಿಯಂತೆ ಆಚರಣೆ ಮಾಡಿಕೊಳ್ಳಬಹುದು. ಇದರಲ್ಲೊಂದೂ ಆಕ್ಷೇಪವಿಲ್ಲ. ಇದಕ್ಕೆ ಬಸವೇಶ್ವರರು—

ದೇವ ದೇವ ಬಿನ್ನಪವ ಅವಧಾರು
ವಿಪ್ರ ಮೊದಲು ಅಂತ್ಯಜ ಕಡೆಯಾಗಿ
ಶಿವಭಕ್ತರಾದವರನ್ನೆಲ್ಲ ಒಂದೇ ಯಂಬೆ
ಹಾರುವ ಮೊದಲು ಅಂತ್ಯಜ ಕಡೆಯಾಗಿ

ಭವಿಯಾದವರನೊಂದೇ ಯೆಂಬೆ. ಹೀಗೆಂದು
ನಂಬುವದೆನ್ನ ಮನವು. ಈ ನುಡಿದ ನುಡಿಯೊಳ
ಗೆಳ್ಳುಮೊನೆಯಷ್ಟು ಸಂದೇಹವುಳ್ಳೊಡೆ ಹಲ್ಲುದೋರ
ಮೂಗು ಕೊಯ್ಯ ಕೂಡಲಸಂಗಮದೇವ.

ಎಂಬುದಾಗಿ ಹೇಳಿರುವರು. ಲಿಂಗಧಾರಿಗಳಲ್ಲಿನ ಪಂಗಡಗಳಲ್ಲಿ ಲಿಂಗ ಧಾರಣೆಯಾದವರಲ್ಲಿ ಕುಲಜಾತಿಗಳನ್ನರಸಬಾರದು. ಇವೇ ವೀರಶೈವ ತತ್ವ. ಇದನ್ನರಿತು ನಮ್ಮ ಸಮಾಜದವರು ಏಕೀಕರಣತೆಯನ್ನು ಕೈಕೊಂಡು ಹಿಂದುಳಿದವರನ್ನು ಹಿಂದಕ್ಕೆ ನೂಕದೆ ಮುನ್ನುಗ್ಗುವರನ್ನು ಹಿಂದಕ್ಕೆ ತಳ್ಳದೆ ಸರ್ವ ಸಮಾನತ್ವದಲ್ಲಿರುವವೆಂಬುದೇ ಈ ಲೇಖನದ ಉದ್ದಿಶ್ಯ.

# ಅನುಭಾವ.

(ಲೇ:-ಚಂದ್ರಶೇಖರಯ್ಯ ಶಿವರುದ್ರಯ್ಯಾ ಶಿವಪ್ಪಯ್ಯನಮಠ ಚೊಳಚಗುಡ್ಡ)

ಅನುಭಾವವೆಂದೊಡೆ ಅಧ್ಯಾತ್ಮದ ಬಗ್ಗೆ ಅಥವಾ ಶಿವಯೋಗದ ಬಗ್ಗೆ ಸರಿಯಾದ ಜ್ಞಾನದ ಅನುಭವ ಹೊಂದುವದೇ ಅನುಭಾವ; ಅರ್ಥಾತ್ ಶಿವಾನುಭವ. ಮೊದಲು ಗ್ರಂಥಗಳ ಅಭ್ಯಾಸ ಮಾಡಿ ಬಲ್ಲವರ ಸಂಗಡ ಚರ್ಚಿಸಿ, ತನಗೆ ತಿಳಿದದ್ದನ್ನು ತನ್ನಾಚರಣೆಯಲ್ಲಿಳಿಸಿ ಅನುಭವ ಮಾಡಿ ಕೊಳ್ಳುವವನೇ ಶಿವಾನುಭವಿ.

ಓದುಜ್ಞಾನಕ್ಕಿಂತ ಅನುಭವಿಗಳಿಂದ ಪಡೆಯುವ ಜ್ಞಾನವು ಹೆಚ್ಚು ಒಳ್ಳೇದು. ಮತ್ತು ಮನಸ್ಸಿನ ಮೇಲೆ ಒಳ್ಳೇ ಪರಿಣಾಮಕಾರಿ. ಈ ಬಗ್ಗೆ ಮಹಾನುಭಾವ ಬಸವಣ್ಣನವರು ಅನ್ನುವದೇನಂದರೆ, "ಗುರುಪದೇಶ ಮಂತ್ರ ವೈದ್ಯ, ಜಂಗಮ ಉಪದೇಶ ಶಸ್ತ್ರವೈದ್ಯ ನೋಡಾ, ಭವರೋಗವ ಕಳೆವ ಪರಿಯ ನೋಡಾ. ಕೂಡಲಸಂಗನ ಶರಣರ ಅನುಭಾವ ಮಡಿವಳನ ಕಾಯಕದಂತೆ"

ಸ್ವಾಭಾವಿಕವಾಗಿ ಮಾನವ ಭವರೋಗದಿಂದ ಪೀಡಿತನಾಗಿ ದುಃಖಿ ಯಾಗಿರುವ ಮನುಷ್ಯರಿಗೆ ಒದಗಿದ ಹಲಕೆಲವು ರೋಗಗಳು ಯಾವ ಪ್ರಕಾರ ಮಾಂತ್ರಿಕ ಶಕ್ತಿಯಿಂದ ವಾಸಿಯಾಗುವವೋ ಹಾಗೆ ಭಕ್ತನಾದವನಿಗೆ ಗುರುವಿನ ಉಪದೇಶವು ಮಾಂತ್ರಿಕ ಔಷಧವಾಗಿದೆ. ಕೆಲವು ರೋಗಗಳು ಕೇವಲ ಔಷಧೋಪಚಾರಕ್ಕೆ ಗುಣವಾಗದೆ ಶಸ್ತ್ರಚಿಕಿತ್ಸೆಯಿಂದ ಗುಣವಾ ಗುವ ಹಾಗೆ ಹೆಚ್ಚು ಕಲುಷಿತವಾದ ನರನ ಹೃದಯವು ಜಂಗಮನ ಉಪ ದೇಶವೆಂಬ ಶಸ್ತ್ರ ಚಿಕಿತ್ಸೆಯಿಂದ ತೀವ್ರ ಪರಿಶುದ್ಧವಾಗುವದು. ಅಗಸನು ಮಾಡುವ ಗಂಜಿಯಿಂದ ಅತಿ ಮಲಿನ ಬಟ್ಟೆಗಳು ಶುಭ್ರವಾಗುವ ಹಾಗೆ ಶರಣರ ಒಡನಾಟದಿಂದ ಲಭಿಸುವ ಅನುಭವ ಎಂಬ ಗಂಜಿಯಿಂದ ಮನದ ಮಾಲಿನ್ಯಹೋಗಿ ಮಾನವ ಶುದ್ಧ ಜೀವಿಯಾಗುವ. ಮಾಯಯ ಬಂಧನದಿಂದ ಬಿಡುಗಡೆಯಾಗುವ ನಿರ್ಮೋಹಿಯಾಗುವ ಲಿಂಗ ಪ್ರೇಮಿ ಎನಿಸುವ, ಪತಿ ತರನ್ನು ಪಾವನ ಮಾಡಲು ಗುರುಜಂಗಮರ ಉಪದೇಶಕ್ಕಿಂತಲೂ ಶರಣರ

ಅನುಭವಾಮೃತವೇ ತೀವ್ರ ಪರಿಣಾಮಮಾಡುವದು. ಗುರುಜಂಗಮರು ಪ್ರತಿದಿನ ನಮಗೆ ದೊರೆಯುವದು ಸಾಧ್ಯವಿಲ್ಲ. ಆದ್ದರಿಂದ ಅವರ ಉಪದೇಶವು ಸದಾ ಸರ್ವರಿಗೂ ಲಭಿಸವದು ಶಕ್ಯವಿದೆಂಬದನ್ನು ಎತ್ತಿ ಹೇಳುವದೇ ವಚನದ ತಾತ್ಪರ್ಯ.

ಶರಣರ ಅನುಭಾವವು ತ್ರಿಕರಣಗಳನ್ನು ಶುದ್ಧಮಾಡುವದಲ್ಲದೆ ಕರಕ್ರಿಯುಗಳನ್ನು ಸುಡುವದು. ಭಕ್ತಿಭಾವವು ದಿಟವಾಗಿ ಪುಟಗೊಳ್ಳುವದು. ಶಿವನಡಿಗೆ ಸರಳವಾಗಿ ಕರೆದೊಯ್ಯುವದು. ಆದರೆ ಈ ಅನುಭಾವವು ದೊರೆಯಬೇಕಾದರೆ ಶಿವಾಂಶಿಗಳಾದ ಸುವಿಚಾರಿಗಳಿಗೆ ಸಾಧ್ಯ. ಮಿಕ್ಕವರಿಗೆ ಅಸಾಧ್ಯ. ಶಿವಭಕ್ತಿ, ಶಿವಜ್ಞಾನ, ಲಿಂಗಸ್ಥಲ, ಜಂಗಮ ಸ್ಥಲ, ಪಾದೋದಕ ಪ್ರಸಾದ ಸ್ಥಲಗಳು ಅಳವಡುವದು ಶಿವಶರಣರಿಗಷ್ಟೇ. ನರಕದಲ್ಲಿ ಬೀಳುವ ಕರ್ಮಿಗಳಿಗೆ ಅಳವಡದು. ಇದನ್ನೇ ಶ್ರೀ ಬಸವಣ್ಣನವರ ಇನ್ನೊಂದು ವಚನವು ಪುಷ್ಟೀಕರಿಸುವದು. " ಆದಿಯಲ್ಲಿ ಶಿವಬೀಜವಿಲ್ಲದವರಿಗೆ ವೇದ್ಯವಾಗದು. ಶಿವಜ್ಞಾನ, ಶಿವಭಕ್ತಿ, ಲಿಂಗಸ್ಥಲವಳವಡದು; ಜಂಗಮಸ್ಥಲವಳವಡದು; ಪಾದೋದಕ ಪ್ರಸಾದಸ್ಥಲವಳವಡದು ನರಕದಲ್ಲಿ ಬೀಳುವ ಕರ್ಮಿಗಳಿಗೆ ಕೂಡಲಸಂಗಮದೇವಾ.

ಅನೇಕ ದಿವಸ ಅಡವಿ ಅರಣ್ಯಗಳಲ್ಲಿ ಕುಳಿತು ತಪಸ್ಸು ಮಾಡಿ ಪಡೆದ ಪುಣ್ಯ ಫಲವಾಗಲೀ ಅಥವಾ ಬಹುಕಾಲದ ವರೆಗೆ ಗುರುವಾದ ಸೇವೆ ಮಾಡಿ ದೊರಕಿಸಿದ ಅನುಗ್ರಹವಾಗಲೀ, ಮಹಿಮರ ಮಾತುಗಳಿಂದ ಸದಾ ಲಿಂಗ ಪೂಜೆಯಲ್ಲಿ ತಾದಾತ್ಮ್ಯನಾಗಿ ಹೊಂದುವ ಲಿಂಗಾನಂದವಾಗಲೀ, ಜಂಗಮ ತೃಪ್ತಿಯೇ ಮುಖ್ಯ ಧ್ಯೇಯವೆಂದು ತಿಳಿದಾಚರಿಸುವ ದಾಸೋಹಂ ಭಾವವೃತವಾಗಲೀ ಒಂದು ನಿಮಿಷ ಶರಣರ ಅನುಭಾವ ಕೇಳಿದ್ದಕ್ಕೆ ಸಮವಾಗಲಾರದೆಂದು ಶಿವಶರಣರ ಮತ. ಅಂದರೆ ಶರಣರ ಸಂಗದಿಂದ ದೊರೆಯುವ ಅನುಭಾವದಿಂದ ನಿರಾಯಾಸವಾಗಿ ಗುರುಲಿಂಗಜಂಗಮ ಸೇವೆ ಮಾಡಲಿಕ್ಕೆ ತೀವ್ರ ತಕ್ಕವನಾಗುವ; ತತ್ಪರನಾಗುವ. ಅನುಭಾವದ ಅನ್ನುವಿನಿಂದ ಭಕ್ತನಿಗೆ ಎಲ್ಲವೂ ಸಹಜ ಸಾಧ್ಯ. ಇದನ್ನೇ ಶ್ರೀ ಚನ್ನ ಬಸವಣ್ಣನವರು ತಮ್ಮ ವಚನದಲ್ಲಿ ಬಹು ಸುಂದರವಾಗಿ ರೂಪಿಸುತ್ತಾರೆ. "ಅನಂತ ಕಾಲದಲ್ಲಿ ಹೋಗಿ ತರುಮರಾದಿಗಳಲ್ಲಿ ತಪಮಿರುವದನು ಒಂದು ದಿನ ಗುರುಚರಣ ಸೇವೆ ಸಾಲದೇ ಅಯ್ಯ ? ಅನಂತ ಕಾಲ ಗುರುಚರಣ ಸೇವೆ ಮಾಡುವದು ಒಂದು ದಿನ ಲಿಂಗ ಪೂಜೆ ಸಾಲದೇ ಅಯ್ಯ ? ಅನಂತ ಕಾಲ

ಲಿಂಗ ಪೂಜೆ ಮಾಡುವದನು ಒಂದು ದಿನ ಜಂಗಮ ತೃಪ್ತಿ ಸಾಲದೆ ಅಯ್ಯ? ಅನಂತ ಕಾಲ ಜಂಗಮ ತೃಪ್ತಿಮಾಡುವದನು ಒಂದು ನಿಮಿಷ ನಿಮ್ಮ ಶರಣರ ಅನುಭಾವ ಸಾಲದೇ ಕೂಡಲಸಂಗಮದೇವ"

ಬಸವಣ್ಣನವರ ಕಾಲದಲ್ಲಿಯೇ ಶಿವಾನುಭವದ ಪರಂಪರೆವು ಬಳಿಕೆಯಲ್ಲಿ ಬಂದಿತೆಂದು ತಿಳಿಯಕೂಡದು. ಇವರಕಿಂತಲೂ ಪೂರ್ವದ ಶಿವಶರಣರು ಶಿವಾನುಭವದ ಮಹತ್ವವನ್ನು ಬಲ್ಲವರಾಗಿದ್ದರೆಂಬುದಕ್ಕೆ ದೇವರದಾಸಿಮಯ್ಯಗಳ ವಚನಗಳೇ ತಕ್ಕ ಉದಾಹರಣೆಯಾಗಿವೆ. ಅವುಗಳನ್ನು ಇಲ್ಲಿ ಉದಾಹರಿಸಿದೆ.

"ಠರಿಯನಿತ್ತಡೆ ಒಲ್ಲೆ, ಸಿರಿಯನಿತ್ತಡೆ ಒಲ್ಲೆ, ಹಿರಿದಪ್ಪ ರಾಜ್ಯವನಿತ್ತಡೆ ಒಲ್ಲೆ. ನಿಮ್ಮ ಶರಣರ ಸೂಳ್ನುಡಿಯ ಒಂದರಗಳಿಗೆ ಇತ್ತಡೆ ನಿಮ್ಮನಿತ್ತೆ ಕಾಣಾ ರಾಮನಾಥ"

"ನಡೆಗೀಲಿಲ್ಲದ ಬಂಡಿ ಹೊಡೆಗೆಡುವದು ಮಾಬದೆ ? ಕಡೆಗೀಲು ಬಂಡಿಗಾಧಾರ. ಕಡುದರ್ಪವೇರಿದ ಒಡಲೆಂಬ ಬಂಡಿಗೆ ವೃಡಶರಣರ ನುಡಿಗಡಣವೇ ಕಡೆಗೀಲು ಕಾಣಾ ರಾಮನಾಥಾ"

ಈ ಪ್ರಕಾರ ಪೂರ್ವದ ಶಿವಶರಣರು ಶಿವಾನುಭವದ ಮರ್ಮವನ್ನು ಮತ್ತು ಮಹತ್ವವನ್ನು ಚನ್ನಾಗಿ ಬಲ್ಲವರಾಗಿದ್ದರೆಂಬುದು ಅವರ ವಚನಗಳೇ ಪ್ರತ್ಯಕ್ಷ ಪ್ರಮಾಣ. ಮಾನವನ ಪ್ರಗತಿಗೆ, ಸಮಾಜ ಸುಧಾರಣೆಗೆ ಶಿವಾನುಭವ ಪ್ರಸಾರವು ಅತ್ಯವಶ್ಯ. ಇದನ್ನು ಸಾಧಿಸಬೇಕಾದರೆ ವಚನ ವಾಙ್ಮಯ ಅಭ್ಯಾಸವು ಮನೆಮನೆಗಳಲ್ಲಿ ವ್ಯಕ್ತಿ ವ್ಯಕ್ತಿಗಳಲ್ಲಿ ನಡಿಯಬೇಕು. ಬೆಳಿಯಬೇಕು. ಬೆಳೆದು ಉಳಿಯಬೇಕು. ಈ ಚಟವು ಸ್ವಾಭಾವಿಕವಾಗಿ ಮೂಡಿ ಬರಬೇಕಾದರೆ ವಚನ ಗ್ರಂಥಗಳ ಪ್ರಸಾರವೇ ಮುಖ್ಯ.

ಸುಮಾರು ೩೦ ವರ್ಷಗಳಿಂದ ಶಿವಾನುಭವ ಮಾಸಪತ್ರಿಕೆ ಮತ್ತು ಶಿವಾನುಭವ ಗ್ರಂಥಮಾಲೆಯು ತನ್ನ ಶಕ್ತಿಮೀರಿ ವಚನವಾಙ್ಮಯ ಸೇವೆಯನ್ನು ಮಾಡುತ್ತ ಬಂದಿದೆ. ಈಗಲೂ ಮಾಡುತ್ತಲಿದೆ. ಶಿವಾನುಭವ ಮಾಸಪತ್ರಿಕೆಗೆ ಸಾವಿರಗಟ್ಟಲೇ ಚಂದಾದಾರರು ಇಲ್ಲದಿರುವದೂ ಶಿವಾನುಭವ ಗ್ರಂಥಮಾಲೆಯು ಎಷ್ಟೋ ಮಹತ್ವದ ಪುಸ್ತಕಗಳು ಪುನರ್ಮುದ್ರಣ ಕಾಣದೆ

ಉಪಲಬ್ಧವಿಲ್ಲದಿರುವದೂ, ಇದ್ದ ಬಿದ್ದ ಪುಸ್ತಕಗಳು ಮಾರಾಟವಾಗದೇ ಇರುವದು ವಿಶಾಪದ ಸಂಗತಿಯು. ಅಲ್ಲದ ಸಲ್ಲದ ಕಾರ್ಯಗಳಿಗೆ ನಮ್ಮೆಲ್ಲರ ಹಣವು ಹೊಳೆಯಾಗಿ ಹರಿಯುತ್ತಿದ್ದರೂ ಇತ್ತ ಲಕ್ಷ್ಯ ಪೂರೈಸದಿರುವದು ಅಜ್ಞಾನದ ಪರಮಾವಧಿ. ಆದ್ದರಿಂದ ಇದನ್ನೆಲ್ಲ ಮನದಂದು ಪ್ರತಿಯೊಬ್ಬ ವೀರಶೈವನು ಶಿವಾನುಭವ ಪತ್ರಿಕೆಗೆ ಮತ್ತು ಶಿವಾನುಭವ ಗ್ರಂಥ ಮಾಲೆಗೆ ಚಂದಾದಾರರಾಗಿ ಪೋಷಿಸುವದಲ್ಲದೆ ಶುಭಪ್ರಸಂಗಗಳಲ್ಲಿ ಶಿವಾನುಭವ ಗ್ರಂಥ ಮಾಲೆಗೆ ಶಕ್ತ್ಯಾನುಸಾರ ದೇಣಿಗೆಗಳನ್ನು ಸಲ್ಲಿಸುವ ಕ್ರಮವನ್ನು ಕೈಕೊಂಡಲ್ಲಿ ವಚನವಾಙ್ಮಯ ಪ್ರಸಾರವು ಭರದಿಂದ ನಡೆಯುವದಲ್ಲದೆ ಅನುಭಾವಕ್ಕೆ ಅವಕಾಶವುಂಟಾಗಿ ಸಮಾಜದಲ್ಲಿ ನವಚೈತನ್ಯವುಂಟಾಗುವದರಲ್ಲಿ ಸಂದೇಹವಿಲ್ಲ.

# ವೀರಶೈವ ಮಹಾಸಭೆಗೆ ಸೂಚನೆಗಳು.

(ಬರೆದವರು:— ಶ್ರೀ ಶಿವಾನಂದಸ್ವಾಮಿಗಳು ಗವಿಮಠ–ತೆಗ್ಗಿಹಳ್ಳಿ)



ಇಲ್ಲಿಯ ವರೆಗೆ ೧೬ ವೀರಶೈವ ಮಹಾಸಭೆಗಳು ಆದವು. ಬಹುತರ ಮೊದಲಿನ ಸಭೆಗಳಲ್ಲಿ ಕೆಲವು ಠರಾವುಗಳನ್ನು ಪಾಸು ಮಾಡಿದ್ದು ಮಾತ್ರ ಕಂಡು ಬರುವದು. ಇಷ್ಟರಿಂದ ವೀರಶೈವರ ಏಳ್ಗೆಯಾಗುವದು ಕಠಿಣ. ಯಾಕಂದರೆ ನಾವು ಸುಧಾರಿಸಿದವರಲ್ಲ, ಸುಶಿಕ್ಷಿತರಲ್ಲ, ಸಾಹಸಿಗಳಲ್ಲ, ನಮ್ಮಲ್ಲಿ ಸಂಘಟನೆ ಇಲ್ಲ, ನಾವು ಒಬ್ಬರನ್ನೊಬ್ಬರು ಕಂಡರೆ ಸೇರುವದಿಲ್ಲ, ನಮ್ಮಲ್ಲಿ ಜಾತಿಗಳು ಬಹಳ. ಇನ್ನೂ ನಮ್ಮಲ್ಲಿ ಮುಟ್ಟಬೇಡೆಂಬ ಅಸ್ಪೃಶ್ಯತೆಯು ಮನೆಮಾಡಿಕೊಂಡಿದೆ. ನಮ್ಮಲ್ಲಿ ಒಕ್ಕಟ್ಟಿಲ್ಲ. ಮುಂದೆ ಹೋಗುವವರಿಗೆ ನೆರವಾಗದೆ ಎಳೆದು ಹಿಂದೆ ಒಗೆಯುವ ಚಟವು ನಮ್ಮಲ್ಲಿ ಮನೆ ಮಾಡಿಕೊಂಡು ಕುಳಿತಿದೆ. ಹೀಗೆ ಅನೇಕ ಕಾರಣಗಳ ಮೂಲಕ ನಮಗೆ ರಾಜಕಾರಣಗಳಲ್ಲಿ ಸ್ಥಾನಗಳೇ ಇಲ್ಲ. ಅದೇಕೆ? ಗ್ರಾಮಪಂಚಾಯತಿ, ಮುನಸಿಪಾಲ್ಟಿ, ಲೋಕಲ್‌ಬೋರ್ಡಗಳಲ್ಲಿ ಬಹು ಸಂಖ್ಯಾಕ ಮೆಂಬರರು ನಮ್ಮವರೇ ಇದ್ದರೂ ಕೂಡ ಸರಪಂಚ, ಪ್ರೆಸಿಡೆಂಟ ಚೇರಮನ್ ಮೊದಲಾದ ಮಹತ್ವದ ಸ್ಥಾನಗಳು ಅನ್ಯ ಅಲ್ಪಸಂಖ್ಯಾಕರ ಪಾಲಿಗೆ ಹೋಗುತ್ತಿರುವದು ನಮಗೆ ಕಾಣುವದು. ಇದರ ಇಂಗಿತವೇನು? ವಿಚಾರಿಸಿದರೆ ಮೇಲಿನ ಹೀನಗುಣಗಳು ನಮ್ಮಲ್ಲಿ ಮನೆಮಾಡಿಕೊಂಡಿರುವದಕ್ಕೆ ಸಾಕ್ಷಿಯಾಗಿರುವವು. ಹೀಗಾದ ಮೇಲೆ ಹೆಚ್ಚಿನ ಎಮ್. ಎಲ್. ಎ., ಎಮ್. ಪಿ. ಗಳ ಗತಿಯೇನು. ಮಂತ್ರಿಗಳ ಸ್ಥಾನ ಸಿಗುವದು ಎಂಥ ದುಸ್ತರ, ಎಂಬುದನ್ನು ಇದರಮೇಲಿಂದ ವಿಚಾರಿಸಿದರೆ ಸಾಕು. ಹೀಗಾಗಿ ನಮ್ಮ ಜನರಿಗೆ ಎಲ್ಲಿಯೂ ಸ್ಥಾನಗಳೇ ಇಲ್ಲ. ಬರೇ ಸೇವಾವೃತ್ತಿಯ ಕೆಳಗಿನ ನೌಕರಿಗಳೂ ಕೂಡ ದುಸ್ತರವಾಗಹತ್ತಿವೆ. ಆ ನೌಕರಿಗಳಿಗೂ ಕೂಡ ಅನೇಕ ಎಡರು ತೊಡರು ಕಂಟಕಗಳು ಸಹ ಬರುತ್ತಿರುವದು ಕಂಡುಬರುತ್ತಿರುವದು. ಇದಕ್ಕೆಲ್ಲ ನಮ್ಮಲ್ಲಿ ಸಂಘಟನೆ ಸಹನೆಗಳಿಲ್ಲದ್ದೇ ದೊಡ್ಡ ಕಾರಣವಾಗಿದೆ. ವೀರಶೈವ ಮಹಾಸಭೆಯವರು ಈ ಸಂಘಟನೆಯ ಬಗ್ಗೆ ಪ್ರಯತ್ನಿಸುವದು ಅವಶ್ಯವಿದೆ.

(೧) ೧೬ನೇ ಮಹಾಸಭೆಯ ಅಧ್ಯಕ್ಷರು ಮೊದಲಿನ ಅಧ್ಯಕ್ಷರಿಗಿಂತ ಹೆಚ್ಚಿಗೆ ಕೆಲಸ ಮಾಡಿದ್ದು ವರದಿಯ ಮೇಲಿಂದ ಕಂಡುಬರುವದು. ಇವರ ಕಡೆಯಿಂದ ಹೆಚ್ಚಿಗೆ ಕೆಲಸ ಆಗುವದರಲ್ಲಿ ಸಂದೇಹವಿಲ್ಲ. ಯಾವ ಕೆಲಸ ವಾದರೂ ಇವರ ಕಡೆಯಿಂದ ಸಹಜ ಸಾಧಿಸುವದು. ವರದಿಯ ಮೇಲಿಂದ ವಿಚಾರಿಸಿದರೆ ಇವರು ಹೆಚ್ಚಿನ ಕಾರ್ಯಗಳನ್ನು ಸಾಧಿಸಿದ್ದು ಕಂಡುಬರು ವದು ಹೀಗಿದ್ದರೂ ಮುಂದಿನ ವೀರಶೈವ ಸಭೆಗೆ ಬೇರೆಯವರನ್ನು ಅಧ್ಯಕ್ಷ ರನ್ನಾಗಿ ಆರಿಸಬೇಕೆಂಬ ವಿಚಾರ ನಡೆದದ್ದು ಬಹು ಖೇದಕರವೇ ಸರಿ. ಯಾರ ಕಡೆಯಿಂದ ವಿಶೇಷ ಕೆಲಸಗಳಾಗುವವೋ ಅವರನ್ನು ಆರಿಸುವದು ಸಭೆಯವರ ಕರ್ತವ್ಯವಾಗಿದೆ. ಈಗಿನ ಅಧ್ಯಕ್ಷರಲ್ಲಿ ಜನಾನುರಾಗವಿದೆ. ಜನ ಅವರ ಮೇಲೆ ನಂಬಿಗೆ ಶ್ರದ್ಧೆಯುಳ್ಳವರಾಗಿದ್ದಾರೆ. ಇಂಥವರಿಂದ ವೀರ ಶೈವರ ಏಳ್ಗೆಯು ಸ್ವಾಭಾವಿಕವಾಗಿ ಆಗುವದು. ಸನ್ಯಾಸಿಗಳು ಇರುವದ ರಿಂದ ಅನೇಕ ಕಡೆ ಸ್ವಾಭಾವಿಕ ಪ್ರವಾಸ ಮಾಡಬೇಕಾಗುವದು. ಹೀಗಾಗಿ ಕಾರ್ಯ ಮಾಡಲಿಕ್ಕೆ ಇವರಿಗೆ ಅನುಕೂಲವಾದಷ್ಟು ಅನ್ಯ ಸಂಸಾರಿಕ ಅಧ್ಯಕ್ಷರಿಂದ ಆಗುವದು ಶಕ್ಯವಿಲ್ಲ. ಹಿಂದಿನ ಯಾವ ಅಧ್ಯಕ್ಷರು ಎಷ್ಟು ಕಾರ್ಯ ಮಾಡಿದ್ದಾರೆ? ಎಷ್ಟು ಪ್ರವಾಸ ಮಾಡಿದ್ದಾರೆ? ಸಭೆಯ ಕಾಲಕ್ಕಷ್ಟೇ ಹಾರ ತುರಾಯಿಗಳಿಗೆ ಒಪ್ಪುವರು. ಸಭೆ ಮುಗಿದ ಬಳಿಕ ಅವರೆಲ್ಲಿ? ಜನವೆಲ್ಲಿ? ಯಾರಿಗೂ ಸಂಪರ್ಕವೇ ಇಲ್ಲದಾಗುವದು. ಅದಕ್ಕೆ ಈಗಿನ ಅಧ್ಯಕ್ಷರನ್ನೇ ಆರಿಸುವದು ಒಳಿತೆಂದು ನಮ್ಮ ಅಭಿಪ್ರಾಯವಿದೆ. ಒಂದು ವೇಳೆ ಇದಾಗದಿದ್ದರೆ ಪುನಃ ಸಂಸಾರಿ ಅಧ್ಯಕ್ಷರನ್ನು ಆರಿಸದೆ ಯೋಗ್ಯ ಜನಪ್ರಿಯ ಸನ್ಯಾಸಿಗಳನ್ನೇ ಸದಾ ಅಧ್ಯಕ್ಷರನ್ನಾಗಿ ಆರಿಸುವದು ಬಹು ಶ್ರೇಯಸ್ಕರವೇ ಸರಿ. ಅವರಿಂದಲೇ ಈ ಕಾರ್ಯವು ವಿಶೇಷವಾ ಗುವದು. ಅವರ ಮೇಲೆ ಜನರ ಪ್ರೇಮ ಸ್ವಾಭಾವಿಕವಾಗಿರುವದು. ಅದಕ್ಕೆ ಇಂಥ ಅಧ್ಯಕ್ಷರು ಹೇಳಿದ ಮಾತುಗಳನ್ನು ಜನರು ಕೇಳುವದು ಸಹಜವಿದೆ. ಅದಕ್ಕೆ ಅಧ್ಯಕ್ಷರನ್ನು ಆರಿಸುವಲ್ಲಿ ಸಕಲರೂ ಜಾಣತನ ಉಪಯೋಗಿಸಬೇಕು. ಇದು ಧಾರ್ಮಿಕ ಸಭೆ. ಇದಕ್ಕೆ ಧಾರ್ಮಿಕ ಪುರು ಷರೇ ಅಧ್ಯಕ್ಷರಿರುವದು ಅವಶ್ಯವಿದೆ. ಸಂಸಾರಿಗಳಿಂದ ಈ ಕಾರ್ಯವು ಅಷ್ಟು ಸಾಧಿಸುವದು ಎಂದೂ ಶಕ್ಯವಿಲ್ಲ. ಸನ್ಯಾಸಿಗಳು ಬೇಡಿಕೊಂಡಾ ದರೂ ಕೂಡ ಕಾರ್ಯ ಮಾಡುವರು. ಸಂಸಾರ, ಹೆಂಡಿರು, ಮಕ್ಕಳು, ಹೊಲ, ಮನೆ, ಬೆಳೆ, ಮಳೆ ಮೊದಲಾದ ಯಾವದರ ಚಿಂತೆ ಇಲ್ಲದಿರುವ

ದರಿಂದ ಅವರಿಂದ ಸಮಾಜದ ಈ ಕೆಲಸವು ವಿಶೇಷವಾಗುವದೆಂದು ಎಲ್ಲರಿಗೂ ಸಹಜ ಅನಿಸುವದಿಲ್ಲವೇ? ಬರೀ ಮಾನಕ್ಕಾಗಿ ಅಧ್ಯಕ್ಷರಾಗುವ ಸಂಸಾರಿಗಳು ಹೆಚ್ಚಾಗಿ ಕೆಲಸ ಮಾಡಲು ಸಾಧಿಸುವದಿಲ್ಲ. ಅಧ್ಯಕ್ಷರನ್ನು ಮೇಲಿನ ಸೂಚನೆಗಳಂತೆ ಆರಿಸಬೇಕೆಂದು ವಿನಂತಿಸುವೆವು.

(೨) ಹೆಚ್ಚಾಗಿ ಸಭೆ, ಸಮ್ಮೇಲನ, ಮಾತು, ಪುರಾಣ, ವ್ಯಾಖ್ಯಾನ ಕೀರ್ತನಗಳಲ್ಲಿ ಕಾಲಕಳೆಯದೆ ವಿಧಾಯಕ ಕಾರ್ಯಕ್ರಮಗಳನ್ನು ಕೈಕೊಳ್ಳಬೇಕು. ನಮ್ಮ ಸಮಾಜದಲ್ಲಿಯ ದೋಷಗಳನ್ನು ತಿದ್ದಲಿಕ್ಕೆ ಕಾರ್ಯದಿಂದಲೇ ಯತ್ನಿಸಬೇಕು.

(೩) ಜಾತಿಯ ಭೇದವಂತೂ ಮನೆಮಾಡಿಕೊಂಡಿದೆ. ಇನ್ನೂ ನಮ್ಮಲ್ಲಿ ಕೆಲವು ಜಾತಿಯವರು ಸಹ ಪಂಕ್ತಿಗೆ ಒಪ್ಪುವದಿಲ್ಲ. ಇದಕ್ಕೆ ಹೋದಲ್ಲಿ ಅಧ್ಯಕ್ಷರು ಸಹ ಭೋಜನವನ್ನು ಏರ್ಪಡಿಸಬೇಕು.

(೪) ಕನ್ಯಗಳನ್ನೂ ಒಬ್ಬರಿಗೊಬ್ಬರು ಕೊಡುವಂತೆ ಯತ್ನಿಸಬೇಕು. ಅಧ್ಯಕ್ಷರು ಸ್ವತಃ ಅಂಥ ವಧುವರರನ್ನು ಕೂಡಿಸಿ ಲಗ್ನ ಮಾಡಬೇಕು. ಪ್ರತಿ ವರ್ಷ ೨-೩ ಇಂಥ ಲಗ್ನಗಳಾದರೂ ಆಗಬೇಕು.

(೫) ಶರಣರ ತತ್ವಗಳನ್ನು ಹೆಚ್ಚಾಗಿ ಪ್ರಚಾರ ಮಾಡಬೇಕು. ವಚನಗಳ ಚಿಕ್ಕ ಚಿಕ್ಕ ಹೊತ್ತಿಗೆಗಳು ಅಗ್ಗವಾಗಿ ಎಲ್ಲರಿಗೂ ಸಿಗುವಂತೆ ಆಗಬೇಕು. ಇದಕ್ಕೆ ಸಭೆಯವರು ಹಣ ಕೂಡಿಸಿ ಖರ್ಚುಮಾಡಬೇಕು.

(೬) ವೀರಶೈವರ ಅಂದರೆ ಶರಣರ ತತ್ವಗಳ ಸಂಕ್ಷೇಪಯಾದಿಯನ್ನು ಚಿಕ್ಕಪುಸ್ತಕಗಳ ರೂಪದಲ್ಲಿ ಪ್ರಕಟಿಸಬೇಕು. ಅವೆಲ್ಲ ಸಾಮಾನ್ಯರಿಗೂ ಕೂಡ ತಿಳಿಯುವಂತೆ ಇರಬೇಕು.

(೭) ಜಗತ್ತಿನಲ್ಲಿ ಪ್ರತಿ ಸಮಾಜದ ದರ್ಶನ ಗ್ರಂಥಗಳಿರುವವು. ಸಾಂಖ್ಯ, ಚಾರ್ವಾಕ, ಬೌದ್ಧ, ಜೈನ, ಮಹಮ್ಮದಿ, ಕ್ರಿಸ್ತ, ಶೈವ. ವೈಷ್ಣವ, ಗಾಣಪತ್ಯ, ಶಾಕ್ತ, ದ್ವೈತ, ಅದ್ವೈತ, ವಿಶಿಷ್ಟಾದ್ವೈತ ಮೊದಲಾದವರ ದರ್ಶನ ಗ್ರಂಥಗಳಿರುವವು. ಇನ್ನೂ ಹೊಸ ದರ್ಶನಗಳೂ ಸಹ ಹುಟ್ಟಹತ್ತಿರುವವು. ಅರವಿಂದ ದರ್ಶನ, ಸಾಯಿದರ್ಶನ, ಮೇಹರಬಾಬಾದರ್ಶನ, ರಮಣದರ್ಶನ, ಮೊದಲಾದ ದರ್ಶನಗಳುಂಟು. ಅವಕ್ಕೆಲ್ಲ ಸರಕಾರದ ಮನ್ನಣೆ ಸಿಕ್ಕಿದೆ. ನಾವು ಪುರಾತನರು, ನಮ್ಮ ಸಂಸ್ಕೃತಿ, ಪುರಾತನದ್ದು. ಆದರೂ ನಮ್ಮ ದರ್ಶನಕ್ಕೆ ಇನ್ನೂ ಸ್ಥಾನ ಲಭಿಸಿಲ್ಲ. ನಮ್ಮದು ಜಗತ್ತಿನಲ್ಲೇ ಶ್ರೇಷ್ಠ ದರ್ಶನ. ಅದೇ ನಮ್ಮ ಶಕ್ತಿವಿಶಿಷ್ಟಾದ್ವೈತ ದರ್ಶನವು. ಇಂಥ ದರ್ಶನದ ಬಗ್ಗೆ ಇಂಗ್ಲೀಷಿನಲ್ಲಿ ಯೋಗ್ಯ ತ್ಯಾಗಿ, ಅನುಭವಿಕ, ಪಂಡಿತ,

ತಪಸ್ವಿಗಳ ಕಡೆಯಿಂದ ಬರೆಯಿಸಿ ಸರಕಾರದವರ ಮನ್ನಣೆ ಪಡಕೊಂಡು ಉಳಿದವರಂತೆ ದರ್ಶನ ಗ್ರಂಥಗಳಲ್ಲಿ ಸೇರಿಸಬೇಕು.

(೮) ನಮ್ಮ ಸಮಾಜದಲ್ಲಿಯ ಅಸಂಖ್ಯ ಜನರು ಪರರ ತತ್ವಗಳಿಗೆ ಮಾರು ಹೋಗುತ್ತಿರುವದು ಬಹಳೇ ಬೆಳೆದಿದೆ. ಇದರಿಂದ ನಮ್ಮ ಸಂಸ್ಕೃತಿಗೆ ಚ್ಯುತಿ ಬಂದಿದೆ. ನಮ್ಮ ಶರಣರ ತತ್ವಗಳಿಗೆ ಮನ್ನಣೆ ಇಲ್ಲವೆಂತಾಗಿದೆ. ಸದಾ ನಮ್ಮ ಸಮಾಜದ ಮೇಲೆ ದಾಳಿ ನಡಿಸಿದವರು:— ಇಂಚಗೇರಿ ಸಮಾಜ, ಮಾನಿಸಮಾಜ, ಪಂಢರಪೂರ ವಾರಕರಿ ಸಮಾಜ, ಸಂತ ಸಮಾಜ, ಅರವಿಂದ ಸಮಾಜ, ಮುಹಮ್ಮದೀಯ ಸಮಾಜ, ಕ್ರಿಸ್ತ ಸಮಾಜ, ಅದ್ವೈತ ಅಂದರೆ ಮಾಯಾವಾದಿ ಸಮಾಜ. ಮೊದಲಾದ ಅನೇಕ ಸಮಾಜಗಳು ನಮ್ಮ ಸಂಸ್ಕೃತಿ ತತ್ವಗಳಿಗೆ ಬಹಳೇ ಆತಂಕ ಒಡ್ಡುತ್ತಿರುವರು. ಇದನ್ನು ಹೋಗಲಾಡಿಸಲು ಮಹಾ ಸಭೆಯವರು ಬಹುವಾಗಿ ಯತ್ನಿಸಬೇಕು. ದೇಶ ಕಾಲ ಪರಿಸ್ಥಿತಿಗೆ ತಕ್ಕಂತೆ ನಮ್ಮಲ್ಲಿ ಬದಲಾವಣೆ ಮಾಡಿ ಅನ್ಯರಿಗೆ ಮಾರು ಹೋಗದಂತೆ ತಡೆಯುವದು ನಮ್ಮೆಲ್ಲರ ಆದ್ಯ ಕರ್ತವ್ಯವಾಗಿದೆ. ಹಳ್ಳಿ ಹಳ್ಳಿಗೆ ಬೋಧಕರನ್ನು ಉಪದೇಶಕರನ್ನು ಕಳುಹಿಸಬೇಕು. ಅವರಂತೆ ನಮ್ಮಲ್ಲಿಯೂ ಕೆಲವು ನಿತ್ಯದ ಕಾರ್ಯಕ್ರಮಗಳನ್ನು ಕೈಕೊಳ್ಳಲು ಬೋಧಿಸಬೇಕು.

(೯) ಅಕ್ಕನ ಬಳಗ, ಅಣ್ಣನ ಬಳಗ, ಶರಣರ ಬಳಗಗಳನ್ನು ಹಳ್ಳಿ ಹಳ್ಳಿಗೂ ತಗೆಯಬೇಕು. ಇವೆಲ್ಲವುಗಳ ಬಗ್ಗೆ ಯೋಗ್ಯ ನಿಯಮಾವಲಿಯನ್ನು ಹಾಕಿ ಕೊಡಬೇಕು. ಶರಣರ ತತ್ವ, ಶರಣರ ಚರಿತ್ರೆಗಳನ್ನು ಹೇಳುತ್ತಿರಬೇಕು. ಈ ಬಳಗಗಳಲ್ಲಿ ಅನ್ಯರ ತತ್ವ ಚಿಂತೆಗಳನ್ನು ಹೇಳುವದು ನಮಗೆ ಅನೇಕ ಕಡೆಗೆ ಕಂಡು ಬಂದಿದೆ. ಇದನ್ನೆಲ್ಲ ಹೋಗಲಾಡಿಸಲು ಮಹಾ ಸಭೆಯು ಯತ್ನಿಸಬೇಕು.

(೧೦) ಶಿವಾನುಭವ ಮಂಟಪಗಳನ್ನು ಹೆಚ್ಚೆಚ್ಚಾಗಿ ಎಲ್ಲ ಊರುಗಳಲ್ಲಿ ಸ್ಥಾಪಿಸಬೇಕು.

(೧೧) ವಿರಕ್ತ-ಪಟ್ಟ, ಭಕ್ತ-ಮಹೇಶ ಎಂಬ ಬಡಿದಾಟವನ್ನು ತೊರೆದು ಯೋಗ್ಯರಾದವರು ಜಾತಿಭೇದವಿಲ್ಲದೆ ಅಕ್ಕನ ಬಳಗ, ಅಣ್ಣನ ಬಳಗ, ಶಿವಾನುಭವ ಮಂಟಪಗಳನ್ನು ಪದ್ಧತಿಯ ಪ್ರಕಾರ ನಡಿಸಿಕೊಂಡು ಹೋಗಬೇಕು. ಇದರಂತೆ ಮಹಾ ಸಭೆಯವರು ಆಜ್ಞೆಯ ಪ್ರಕಟನೆಗಳನ್ನು ಹೊರಡಿಸಬೇಕು.

(೧೨) ವಿರಕ್ತ–ಪಟ್ಟ, ಭಕ್ತ–ಮಹೇಶ, ಬಸವನ ಬಣ–ಪಂಚಾಚಾರಿ ಬಣಗಳು ಹೋಗುವಂತೆ ಎಲ್ಲರನ್ನೂ ವರ್ಷಕ್ಕೊಮ್ಮೆಯಾದರೂ ಕೂಡಿಸಿ, ಭೇದ ಅಳಿಯುವಂತೆ ಮಾಡಬೇಕು.

(೧೩) ಪಟ್ಟ ವಿರಕ್ತರನ್ನು ತಯಾರ ಮಾಡುವಂಥ ಒಂದು ಯೋಗ್ಯ ಜಾತ್ಯತೀತ ಗುರುಕುಲವನ್ನು ತೆರೆಯಬೇಕು. ಅಲ್ಲಿ ಯೋಗ್ಯರಾದ ಎಲ್ಲ ವೀರಶೈವ ವಟುಗಳಿಗೆ ಸರಿಯಾದ ಪ್ರವೇಶವಿರಬೇಕು. ಅವರನ್ನೇ ಮಠ ಗಳಿಗೆ ಅಧಿಕಾರಿಗಳನ್ನಾಗಿ ಮಾಡಬೇಕು. ಈಗ ಇದ್ದ ಗುರುಕುಲಗಳನ್ನು ಮಾರ್ಪಡಿಸಿ ಸಕಲ ವೀರಶೈವರ ಯೋಗ್ಯ ವಟುಗಳನ್ನು ಅವುಗಳಲ್ಲಿ ತಕ್ಕೊ ಳ್ಳುವಂತೆ ಏರ್ಪಾಡಾಗಬೇಕು. ಅದರಂತೆ ಮಹಾ ಸಭೆಯವರು ಯತ್ನಿ ಸಬೇಕು.

(೧೪) ವೀರಶೈವರಿಗೆ ಆಗಮಗಳೂ ಸಹ ಧಾರ್ಮಿಕ ಗ್ರಂಥಗಳೆಂದ ಎಲ್ಲರೂ ಹೇಳುತ್ತಿರುವರು. ಆದರೆ ಆ ಗ್ರಂಥಗಳು ಎಲ್ಲಿ ಇರುವವು ತಿಳಿ ಯದಾಗಿದೆ? ಅವೆಲ್ಲ ಸಂಸ್ಕೃತ ಗ್ರಂಥಗಳು. ಅವುಗಳನ್ನು ಕನ್ನಡಕ್ಕೆ ಅನು ವಾದಿಸಿ ಎಲ್ಲರಿಗೂ ಸಿಗುವಂತೆ ಮಹಾಸಭೆಯು ಯತ್ನಿಸುವದು ಒಳ್ಳೇ ಸೂಕ್ತವಾಗಿದೆ.

(೧೫) ವೀರಶೈವರ ಭಾಷೆ ಕನ್ನಡ, ಕನ್ನಡಕ್ಕೆ ವಚನಗಳೇ ಕಳಸ ಪ್ರಾಯ. ಅವುಗಳು ಇನ್ನೂ ಅನೇಕ ಕಡೆಗಳಲ್ಲಿ ಹಾಗೇ ತಾಡವಾಲೆಗಳಲ್ಲಿ ಪೂಜೆಗೊಳ್ಳುತ್ತಿರುವವೆಂದು ತಿಳಿದುಬಂದಿದೆ. ಅವುಗಳನ್ನು ಶೋಧಿಸಿ, ತಿದ್ದಿ, ಅಚ್ಚುಹಾಕಲಿಕ್ಕೆ ಒಂದು ಏರ್ಪಾಡನ್ನು ಮಾಡಬೇಕು. ಅಂದರೆ ನಮ್ಮ ಸಂಸ್ಕೃತಿ ಬಾಳಿ ಬೆಳೆದು ಉಳಿಯುವದು.

(೧೬) ಕೆಲವು ಗ್ರಂಥಗಳನ್ನು ಪುನಃ ಮುದ್ರಿಸಬೇಕಾಗಿರುವದು. ಆ ವ್ಯವಸ್ಥೆಯನ್ನಾದರೂ ಇವರೇ ಮಾಡಿದರೆ ನೆಟ್ಟಗೆ.

(೧೭) ನಮ್ಮಲ್ಲಿ ಶರಣರ ಸಾಹಿತ್ಯವನ್ನೂ ಪ್ರಚಾರ ಮಾಡುವ ಮಾಸಿಕಗಳು ಕಡಿಮೆ. ಹೆಸರು ಶರಣಸಾಹಿತ್ಯ ಎಂದು ಇಟ್ಟುಕೊಂಡರೂ ಶರಣರ ತತ್ವ, ಚರಿತೆ, ವಚನಗಳನ್ನೇ ಬರೆಯದೆ ಹೊರಗಿನವರದನ್ನೇ ಹೊರ ಗಿನ ವ್ಯಕ್ತಿ ವರ್ಣನೆಯನ್ನೇ ಬರೆಯುವರು. ಇದಕ್ಕೆ ಯೋಗ್ಯ ಕ್ರಮ ಕೈಕೊಂಡು ವೀರಶೈವ ಸಂಸ್ಕೃತಿಗೆ ಪೋಷಕವಾಗಿರುವ ಪತ್ರಿಕೆಗಳಿಗೆ ನೆರ ವಾಗಬೇಕು. ಅಲ್ಲದೆ ಅವುಗಳನ್ನೇ ತರಿಸುವಂತೆ ಪ್ರಚಾರ ಮಾಡಬೇಕು.

(೧೮) ನಮ್ಮಲ್ಲಿ ಧಾರ್ಮಿಕ ಮೂಢ ನಂಬಿಗೆಗಳು ಬಹಳೇ ಇರುವವು. ಅವುಗಳನ್ನು ಕಳೆಯಲು ಯೋಗ್ಯ ಪ್ರಚಾರ ನಡಿಸಬೇಕು. ಅಲ್ಲದೆ ಅದರಂತೆ ಕಾರ್ಯವನ್ನೂ ಮಾಡಬೇಕು.

(೧೯) ನಮ್ಮಲ್ಲಿ ಆಗಿ ಹೋದ ಮಹಾಪುರುಷರ ಅಂದರೆ ಶರಣ ಶರಣೆಯರ ಸ್ಮಾರಕಗಳಿರುವವು. ಅವುಗಳನ್ನು ಸಂರಕ್ಷಿಸುವದು, ಅವುಗಳ ದುರಸ್ತಿ, ಅವುಗಳ ಪೂಜೆ, ಪುಣ್ಯತಿಥಿ ಜಯಂತಿಗಳು ಆಗುವಂತೆ ನೋಡಿಕೊಳ್ಳಬೇಕು. ಅಲ್ಲದೆ ಅವುಗಳ ಜೀರ್ಣೋದ್ಧಾರವನ್ನು ಸಹ ಮಾಡಿಸಬೇಕು. ಇದರಂತೆ ಸರಕಾರಕ್ಕೆ ಎಚ್ಚರಿಸಬೇಕು. ಸರಕಾರದವರು ನೆರವಾಗುವಂತೆ ಮಾಡಬೇಕು.

(೨೦) ವೀರಶೈವ ಮಹಾಪುರುಷರ ( ಹಿಂದಿನ, ಇಂದಿನ ) ಜೀವನ ಚರಿತೆಯನ್ನು ಸಂಕ್ಷೇಪವಾಗಿ ಬರೆಯಿಸಿ ಪ್ರಕಟಿಸಬೇಕು.

(೨೧) ಕನ್ನಡ ಪ್ರಾಂತ ರಚನೆಯಾಯಿತು. ಆದರೂ ಇನ್ನೂ ಕನ್ನಡಿಗರಾದ ಎಷ್ಟೋ ವೀರಶೈವರು ಮರಾಠಿ, ತಮಿಳು, ತೆಲಗು ಮೊದಲಾದ ಭಾಷೆಯವರಲ್ಲಿ ಹಂಚಿ ಹೋಗಿದ್ದಾರೆ. ಅವರನ್ನು ಬರಮಾಡಿಕೊಳ್ಳಲು ಸದಾ ಕಾಂಗ್ರೇಸದ ಕೂಡ, ಸರಕಾರದ ಕೂಡ ಸಹಕರಿಸಿ ಯತ್ನಿಸಬೇಕು. ಅಲ್ಲಿಯ ವರೆಗೆ ಅವರಿಗೂ ನಮಗೂ ಸದಾ ಸಂಬಂಧವಾಗುವಂತೆ ನಡೆದುಕೊಳ್ಳಬೇಕು. ಅಲ್ಲಿ ಕನ್ನಡ ಶಾಲೆಗಳನ್ನು ಹೆಚ್ಚಾಗಿ ತೆರೆಯುವಂತೆ ಅವರಿಗೆ ಪ್ರೋತ್ಸಾಹಿಸಬೇಕು. ವಚನಗಳು ಅವರಲ್ಲಿ ಬಳಕೆಯಲ್ಲಿ ಬರಬೇಕು. ಅದಕ್ಕಾಗಿ ಮರಾಠಿ, ತೆಲಗು, ತಮಿಳುಗಳಲ್ಲಿ ವಚನಗಳನ್ನು ಅನುವಾದಿಸಿ ಅವರಿಗೆ ದೊರೆಯುವಂತೆ ಸಹ ಸಭೆಯು ಯತ್ನಿಸಬೇಕು.

(೨೨) ಸಂಸ್ಕೃತ ಕಲಿಯಲಿಕ್ಕೆ ಕಾಶಿ ಮೊದಲಾ ಕಡೆಗಳಲ್ಲಿ ಹೋಗಿ ನಮ್ಮವರು ಬರೇ ಶೈವ ಪದ್ಧತಿಗಳನ್ನೇ ಕಲಿತು ಬಂದು ಪ್ರಚಾರ ನಡಿಸುವರು. ಇದರಿಂದ ನಮ್ಮಲ್ಲಿ ಬಹಳೇ ಭೇದಗಳಾದುದು ಕಂಡು ಬರುವದು. ಅದಕ್ಕೆ ಆ ಗುರುಕುಲಗಳಲ್ಲಿ ವಚನಗಳ ಅಭ್ಯಾಸವೂ ಕೂಡ ನಡೆಯಬೇಕು. ಆ ಗುರುಕುಲಗಳಲ್ಲಿ ಹಚ್ಚತಕ್ಕ ಪುಸ್ತಕಗಳನ್ನು ಸಭೆಯು ನಿಶ್ಚಯ ಮಾಡಬೇಕು. ಅವೆಲ್ಲ ಶಕ್ತಿ ವಿಶಿಷ್ಟಾದ್ವೈತ ತತ್ವದ ಮೇಲೆ ಇರಬೇಕು.

(೩೩) ನಮಗೆ ಪಂಚಾಚಾರ್ಯರೂ ಬೇಕು, ಶರಣರೂ ಬೇಕು. ಇವರೆಲ್ಲರೂ ವೀರಶೈವರ ಉದ್ಧಾರಕ್ಕಾಗಿ ಹೆಣಗಿದವರು. ಒಬ್ಬರನ್ನು ಒಬ್ಬರು ತೆಗಳಿದರೆ, ಇನ್ನೊಬ್ಬರು ಇನ್ನೊಬ್ಬರನ್ನು ತೆಗಳುವದು ಸಹಜವದೆ. ಅದಕ್ಕೆ ಇಬ್ಬರನ್ನೂ ನಾವು ಮನ್ನಿಸಲಿಕ್ಕೆ ಎಲ್ಲರೂ ಕಲಿಯಬೇಕು. ಅದರಂತೆ ಮಹಾ ಸಭೆಯವರು ಯತ್ನಿಸಬೇಕು. ಕಾರ್ಯಕ್ರಮಗಳನ್ನೂ ಇಡಬೇಕು. ಇನ್ನು ಮುಂದೆ ವೀರಶೈವರಿಗಾಗಿ ದುಡಿಯುವ ಮಹಾಪುರುಷರಂದ ತ್ಯಾಗಿಗಳೂ ಕೂಡ ನಮಗೆ ಬೇಕೇಬೇಕು. ನಾವು ಬಲ್ಲ ಯೋಗ್ಯರಾದ ತ್ಯಾಗಿ ಮಹಾಪುರುಷರನ್ನು ಮನ್ನಿಸಿ, ಪುಣ್ಯತಿಥಿ, ಜಾತ್ರೆ, ಜಯಂತಿಗಳನ್ನು ಮಾಡಲಿಕ್ಕೇಬೇಕು. ಇದನ್ನು ನಾವೆಲ್ಲರೂ ಕಲಿಯುವದು ಒಳಿತೇ ಸರಿ.

(೩೪) ಗ್ರೂಪ್ ಕಾಂಗ್ರೆಸ, ತಾಲೂಕ ಕಾಂಗ್ರೆಸ, ಜಿಲ್ಲಾ ಕಾಂಗ್ರೆಸ ಪ್ರಾಂತಿಕ ಕಾಂಗ್ರೆಸ, ದೇಶದ ಕಾಂಗ್ರೆಸ ಹೇಗೆ ಏರ್ಪಾಡಾಗಿರುವವೋ ಅದರಂತೆ ಮಹಾ ಸಭೆಯ ಶಾಖೆ, ಉಪಶಾಖೆಗಳು ಇದ್ದು, ಅದರಲ್ಲಿಯಂತೆ ವ್ಯವಸ್ಥೆ ಇರಬೇಕು. ಪ್ರತಿಯೊಂದು ಸಂಸ್ಥೆಯವರು ಮಹಾ ಸಭೆಗೆ ವಾರ್ಷಿಕ ವರದಿಯನ್ನು ಒಪ್ಪಿಸಬೇಕು. ವರ್ಷಕ್ಕೊಮ್ಮೆ ಮಹಾ ಸಭೆ ನೆರೆದು ಎಲ್ಲರ ಕಾರ್ಯಗಳನ್ನು ಪರಿಶೀಲಿಸಬೇಕು. ಅವುಗಳಿಗೆ ಯೋಗ್ಯ ಸಲಹೆ ಕೊಡಬೇಕು. ಇದೆಲ್ಲ ಚಳುವಳಿ ಚಟುವಟಿಕೆಗಳು ಮಾತ್ರ ಧಾರ್ಮಿಕಕ್ಕೆ ಸಂಬಂಧಿಸಿದವುಗಳೇ ಇರಬೇಕು. ಅಕ್ಕನ ಬಳಗ, ಅಣ್ಣನ ಬಳಗ, ಶಿವಾನುಭವ ಮಂಟಪಗಳೇ ಈ ಕಾರ್ಯ ಮಾಡಬೇಕು. ಅವರೇ ಮೆಂಬರರನ್ನು ಮಾಡಬೇಕು. ಅವರೇ ಮೇಲಿನಂತೆ ಯಾವತ್ತೂ ವ್ಯವಸ್ಥೆಯನ್ನು ಮಾಡಬೇಕು. ಮಹಾಸಭೆಯವರೇ ಆಜ್ಞೆಗಳನ್ನೂ, ಪ್ರಕಟನೆಗಳನ್ನೂ, ಸೂಚನೆಗಳನ್ನೂ ಛಾಪಿಸಿ ಎಲ್ಲ ಸಂಘ ಸಂಸ್ಥೆಗಳಿಗೆ ಕಳಿಸುವ ಏರ್ಪಾಡಿರಬೇಕು. ಎಲ್ಲವೂ ಈಗಿನ ಕಾಂಗ್ರೆಸಿನಂತೆ ವ್ಯವಸ್ಥೆಯುಳ್ಳದ್ದಿರಬೇಕು.

(೩೫) ನಮ್ಮಲ್ಲಿ ಕಾಯಕಕ್ಕೆ ಮಹತ್ವ ಕೊಟ್ಟಷ್ಟು ಇನ್ನಾರಲ್ಲಿಯೂ ಕೊಟ್ಟಿಲ್ಲ. ಅದಕ್ಕಂತೇ ಕಾಯಕವೇ ಕೈಲಾಸ. ಕಾಯಕದಲ್ಲಿ ನಿರತನಾದರೆ ಲಿಂಗಪೂಜೆ ಮರೆಯಬೇಕು, ಜಂಗಮ ಮುಂದಿದ್ದಡೆ ಹಂಗುಹರಿಯಬೇಕು, ಗುರುಜಂಗಮಕ್ಕೂ ಕಾಯಕಬೇಕು, ಎಂದು ಹೇಳಿದ್ದಾರೆ. ಆದರೆ ನಮ್ಮಲ್ಲಿ ನಿತ್ಯ ಕೋರಾನ್. ಹಿಟ್ಟು, ರೊಟ್ಟಿ, ಜೋಳ ಬೇಡಿಕೊಳ್ಳುವವರ ಸಂಖ್ಯೆ ಹೆಚ್ಚಾಗಿದೆ. ಅದೇ ಅವನ ಉದ್ಯೋಗವಾಗಿದೆ. ಇದನ್ನು

ಸಭೆಯವರು ಹೋಗಲಾಡಿಸಿ ಅವರು ಉದ್ಯೋಗ ಮಾಡುವಂತೆ ಪ್ರೋತ್ಸಾಹಿಸಬೇಕು. ಅದರಂತೆ ಸಭೆಗಳಲ್ಲಿ ಹೇಳಬೇಕು. ಪ್ರಕಟನೆಗಳನ್ನು ಹೊರಡಿಸಬೇಕು. ಹೋದಬಂದಲ್ಲಿ ತಿಳಿಸಬೇಕು. ನಮ್ಮ ಸಮಾಜವು ಕಾಯಕದ ಮೇಲೆ ನಿಂತಿದೆ. ಅದರಿಂದಲೆ ಸುಖಶಾಂತಿಗಳು ಸಿಗುವವು. ನಿರುದ್ಯೋಗಿಗಳಿಂದ ಸರ್ವ ಅನಿಷ್ಟಗಳು ಬರುವವು. ಅದಕ್ಕೆ ಬೇಡಿಕೊಳ್ಳುವದನ್ನು ಬಿಡಿಸಿ, ಕಾಯಕಕ್ಕೆ ಹಚ್ಚಬೇಕು. ಇನ್ನು ದಾಸೋಹ, ಪುಸ್ತಕಗಳ ಪ್ರಕಟನೆ, ಸಮಾಜ ಕೆಲಸ, ವಿದ್ಯಾ ಪ್ರಸಾರ ನಿಲಯ ಮೊದಲಾದ ಜನಹಿತ ಕಾರ್ಯಕ್ಕೆ ಬೇಕಾದಷ್ಟು ಬೇಕಾದಂತೆ ಬೇಡಿಕೊಳ್ಳಲು ಅಡ್ಡಿ ಇಲ್ಲೆಂದು ಹೇಳಬೇಕು. ಇದರಂತೆ ಪ್ರಚಾರವೂ ಕೂಡ ನಡೆಯಬೇಕು.

(೨೬) ನಮ್ಮಲ್ಲಿ ಮಡಿ ಮೈಲಿಗೆ, ಮುಡಚಟ್ಟು ಮೊದಲಾದವುಗಳಿಲ್ಲೆಂದು ಎಲ್ಲರೂ ಹೇಳುವರು. ಅದರಂತೆ ವಚನಗಳನ್ನು ಹಾಡುವರು. ಆದರೆ ನಡೆಯುವವರು ಬಹು ಕಡಿಮೆ. ಲಿಂಗಾಂಗಿಗಳೆಲ್ಲ ಒಂದೇ. ಲಿಂಗದೇವರು ನಮ್ಮ ಅಂಗದ ಮೇಲೆ ಇರುತ್ತಿರುವಾಗ ನಮಗೆ ಮೈಲಿಗೆಗಳೆಲ್ಲಿ? ಜಗತ್ತಿನ ಯಾವ ಉಳಿದ ಸಮಾಜದವರ ಅಂಗದ ಮೇಲೆ ದೇವರನ್ನು ಕಟ್ಟಿಕೊಂಡಿಲ್ಲ. ಅವರು ಕೂಡ ಮೈಲಿಗಿ ಮುಡಚಟ್ಟುಗಳನ್ನು ಪಾಲಿಸುವದಿಲ್ಲ. ದೇವರನ್ನು ಧರಿಸಿದ ನಮಗೇಕೆ ಮೈಲಿಗೆ ಎಂಬ ತತ್ವವನ್ನು ಸಭೆಯವರು ಪ್ರಚಾರ ಮಾಡಬೇಕು. ಅದರಂತೆ ನಡೆಯಬೇಕು.

(೨೭) ಯೋಗ್ಯತೆಯ ಮೇಲೆ ತ್ಯಾಗ, ವೈರಾಗ್ಯ, ಸೇವೆ, ತಪ, ಬ್ರಹ್ಮಚರ್ಯ ಪಾಲನ, ವಿದ್ಯ ಮೊದಲಾದವುಗಳ ಮೇಲೆ ಗುರುಜಂಗಮತ್ವಗಳು ಬರಬೇಕು. ಒಂದೇ ಜಾತಿಗೆ ಅವು ಮೀಸಲಾಗಬಾರದು. ಎಲ್ಲ ವೀರಶೈವರಿಗೂ ಇಂಥ ಹಕ್ಕುಬಾಧ್ಯತೆಗಳಿರುವವೆಂದು ಸಭೆಯವರು ಪ್ರಚಾರವನ್ನು ಮಾಡಬೇಕು.

(೨೮) ನಮ್ಮ ಸಮಾಜದಲ್ಲಿ ಅನೇಕರು ಸಮಾಜದ ಕೆಲಸಗಳನ್ನು ಮಾಡಿದ್ದಾರೆ. ಶಾಲೆ ಕಾಲೇಜಗಳನ್ನು ಸ್ಥಾಪಿಸಲಿಕ್ಕೆ ಯತ್ನಿಸಿದ್ದಾರೆ. ಅನೇಕ ಪುಸ್ತಕಗಳನ್ನು ಪ್ರಕಟಿಸಿದ್ದಾರೆ. ಅನೇಕ ಪ್ರಸಾದ ನಿಲಯಗಳನ್ನು ತೆಗೆದಿದ್ದಾರೆ. ಅನೇಕ ಸಾಮಾಜಿಕ ಕಾರ್ಯಗಳನ್ನು ಮಾಡಿದ್ದಾರೆ. ಅವರೆಲ್ಲರಿಗೂ ಪ್ರಶಸ್ತಿ ಪತ್ರಗಳನ್ನಾಗಲೀ ಬಿರುದು ಬಾವುಲಿಗಳನ್ನಾಗಲೀ ಕೊಟ್ಟು,

ಪ್ರತಿ ಮಹಾಸಭೆಯಲ್ಲಿ ಮನ್ನಿಸಬೇಕೆಂದು ಸೂಚಿಸುವೆವು ಅಂದರೆ ದುಡಿಯುವವರಿಗೆ ಪ್ರೋತ್ಸಾಹ ಸಿಗುವದು. ಆದರಿಂದ ಸಮಾಜವೂ ಕೂಡ ಅವರನ್ನು ಹೆಚ್ಚಾಗಿ ಮನ್ನಿಸುವದು.

(೨೯) ನಮ್ಮಲ್ಲಿ ಲಗ್ನದ ಕಾಲಕ್ಕೆ ನೂಲು ನುಸಿ, ಮೂರು ಗಂಡರು, ಆರು ಗಂಡರು, ಗುಗ್ಗಳ, ಹಾಲಗಂಬ, ಪಿಂಜಣಿಗಿ ಮೊದಲಾದವುಗಳ ಸಲುವಾಗಿ ಜಗಳಾಡಿ, ಗೊಂದಲ ಹಾಕಿ, ಲಗ್ನದ ವೇಳೆಯನ್ನೇ ತಪ್ಪಿಸಿಬಿಡುವರು. ಆದಕ್ಕೆ ಲಗ್ನದ ಯೋಗ್ಯ ಸುಲಭ ಸೋಯಿ ಪದ್ಧತಿಯನ್ನು ಪ್ರಚಾರ ಮಾಡಲು ಚಿಕ್ಕ ಹೊತ್ತಿಗೆಯನ್ನು ಬರೆಯಿಸಿ ಪ್ರಕಟಿಸಬೇಕು. ಅದರಲ್ಲಿ ತಕ್ಕಷ್ಟು ಮಂತ್ರಗಳಿರಬೇಕು. ಅವು ಕನ್ನಡದಲ್ಲಿದ್ದರೆ ಬಹಳೇ ಒಳಿತು. ಇದರಂತೆ ಪ್ರಕಟನೆಗಳನ್ನು ತೆಗೆದು ಪ್ರಚಾರ ಮಾಡುವದು ಅವಶ್ಯವಿರುವದು.

(೩೦) ಮುಸಲ್ಮಾನರಲ್ಲಿ ಸುಂತಿ, ಬ್ರಾಹ್ಮಣರಲ್ಲಿ ಮುಂಜವಿ ಇರುವಂತೆ ನಮ್ಮಲ್ಲಿ ಪ್ರತಿಯೊಬ್ಬ ವೀರಶೈವನಿಗೂ ಅಯ್ಯಾಚಾರವನ್ನು ಮಾಡೇ ತೀರಬೇಕೆಂದು ವಿಧಿಸಬೇಕು. ಲಗ್ನವನ್ನು ಪ್ರತಿಯೊಬ್ಬರು ಮಾಡುವಂತೆ ಅಯ್ಯಾಚಾರವನ್ನು ಮಾಡಿಕೊಳ್ಳಬೇಕೆಂದು ಸಕಲ ವೀರಶೈವರಿಗೂ ವಿಧಿಸುವಂತೆ ಯತ್ನಿಸಬೇಕು. ಇದರಿಂದ ಅವರಿಗೆ ಮಂತ್ರೋಪದೇಶ ಸಿಕ್ಕು ಪರರ ಕಡೆಗೆ ಅಂದರೆ ೮ ನೇ ಮುದ್ದೆಯಲ್ಲಿ ಹೇಳಿದಂತೆ ಪಾರು ಹೋಗುವದು ನಿಲ್ಲುವದು. ಇದು ೮-೧೦ ವರ್ಷಗಳಲ್ಲೇ ಆಗಬೇಕೆಂದು ವಿಧಿಸಬೇಕು. ಈಗ ಅಯ್ಯಾಚಾರವನ್ನು ಕೆಲವೇ ಅಯ್ಯಗಳು ಮಾಡುವದುಂಟು. ಪ್ರತಿಯೊಬ್ಬ ವೀರಶೈವನಿಗೆ ಲಿಂಗಧಾರಣೆ ಮಾಡುವಂತೆ ಪ್ರತಿಯೊಬ್ಬ ವೀರಶೈವನಿಗೂ ಅಯ್ಯಾಚಾರ ಮಾಡಿಸಿಯೇ ತೀರಬೇಕೆಂದು ಪ್ರಚಾರ ನಡಿಸಬೇಕು.

(೩೧) ಧರ್ಮಭ್ರಷ್ಟರಾದವರನ್ನು ದೀಕ್ಷೆ ಮಾಡಿ ಪುನಃ ಬನವಾಡಿಕೊಳ್ಳಲು ಎತ್ತುಗಡೆ ನಡೆಯಬೇಕು. ಪರಮತದವರು ಸ್ವಸಂತೋಷದಿಂದ ಬರುವಂತಿದ್ದರೆ ಅವರನ್ನೂ ಬರಮಾಡಕೊಳ್ಳಬೇಕು. ಇದಕ್ಕೆ ಯೋಗ್ಯ ವ್ಯವಸ್ಥೆ ಮಾಡದೇಕು,

(೩೨) ಇತ್ತಿತ್ತಲಾಗಿ ವೀರಶೈವರು ಸರ್ವಧರ್ಮ ಪರಿಷತ್ತನ್ನು ಸ್ವಂತ ಖರ್ಚು ಮಾಡಿ ನೆರಿಸುವರು. ಅದರಲ್ಲಿ ಶೈವ, ವೈಷ್ಣವ, ಬೌದ್ಧ, ಜೈನ,

ಮಹಮ್ಮದಿ, ಕ್ರೈಸ್ತ ಧರ್ಮಗಳನ್ನು ಪ್ರತಿಪಾದನ ಮಾಡುವವರನ್ನು ತರಿಸಿ ಎಲ್ಲರ ಕಡೆಯಿಂದ ಉಪನ್ಯಾಸ ಮಾಡಿಸಿ ಸರ್ವಧರ್ಮದ ತತ್ವಗಳು ಒಂದೇ ಎಂದು ಕಟ್ಟಕಡೆಗೆ ಸಿದ್ಧಾಂತವನ್ನು ಸಿದ್ಧಮಾಡುವರು. ಇದರಿಂದ ಎಲ್ಲ ಧರ್ಮಗಳು ಒಂದೇ ಎಂದಮೇಲೆ ವೀರಶೈವರು ಮಹಮ್ಮದಿ ಕ್ರೈಸ್ತ ಧರ್ಮಗಳನ್ನು ಸ್ವೀಕರಿಸಲು ಏನು ಅಡ್ಡಿ ಎಂದು ವಿಚಾರಿಸಿ? ಆ ಧರ್ಮಗಳಿಗೆ ಜನ ಹೋಗಹತ್ತುವದು ಸ್ವಾಭಾವಿಕ. ಯಾಕಂದರೆ ಅಲ್ಲಿ ಅಷ್ಟು ನಿಯಮ ನಿಷ್ಠೆ, ಕಟ್ಟುನಿಟ್ಟುಗಳು ಇಲ್ಲ. ವಿಷಯರಾಮಿಗೆ ವಿಷಯ ಸುಖಕ್ಕೆ ಜಯನಿಗೆ ಅಲ್ಲಿ ವಿಶೇಷ ಆಸ್ಪದವಿರುವದು. ಸರ್ವಧರ್ಮ ಸಮ್ಮೇಲನ ಕೂಡಿಸಿ ಸಕಲರಲ್ಲಿ ವೀರಶೈವವೇ ಶ್ರೇಷ್ಠತತ್ವಗಳುಳ್ಳದ್ದೆಂದು ಸಿದ್ಧಮಾಡಿ ತೋರಿಸುವಂತಿದ್ದರೆ ಮಾತ್ರ ಕೂಡಿಸಲಿಕ್ಕೆ ಅಡ್ಡಿ ಇಲ್ಲ. ಅದರಂತೆ ಮಹಾಸಭೆಯವರು ಆದೇಶವನ್ನೀಯಬೇಕು. ಸಕಲರೂ ಒಂದೇ ಎಂದು ಸಿದ್ಧಮಾಡಿ ತಲೆದೂಗಿ ಬರುವಂತಿದ್ದರೆ ಸರ್ವಧರ್ಮಗಳ ಸಮ್ಮೇಲನ ಕೂಡಿಸಬಾರದು. ಕೂಡಿಸಿದರೆ ಏನು ಅನಾಹುತ ಆಗುವದೆಂದು ವಿವರಿಸಿ ಒಂದು ಪ್ರಕಟನೆ ಹೊರಡಿಸಿ ಅವುಗಳನ್ನು ತಡೆಯಬೇಕೆಂದು ಸಭೆಗೆ ಸೂಚಿಸದೆ ಇರಲಾರೆವು. ಸಾಧಿಸಿದರ ಇದರ ಬಗ್ಗೆ ಒಂದು ವಿಸ್ತೃತ ಲೇಖನವನ್ನು ಬರೆಯುವೆನು.

(೩೩) ವೀರಶೈವ ಮತತತ್ವ ರೂಪಿಸುವ ಪ್ರಮಾಣ ಗ್ರಂಥ ರಚನೆ ಬರೆಯಲು ಕೇಳಿಕೊಂಡಿದ್ದು ಸರಿ ಎನಿಸದು. ಇದರ ಮೇಲಿಂದ ಹಿಂದೆಂದೂ ಪ್ರಮಾಣ ಗ್ರಂಥಗಳಿಲ್ಲೆಂದು ಒಪ್ಪಿಕೊಂಡಂತಾಗುವದು. ಅಲ್ಲದೆ ವೀರಶೈವವು ಒಂದು ವ್ಯವಸ್ಥಿತ ಧರ್ಮವಲ್ಲೆಂದು ಹೇಳಿದಂತೆ ಆಗುವದು. ವಿರಕ್ತರು ಒಂದು ಬರೆಯಿಸಿದರೆ ಪಟ್ಟದವರು ಮತ್ತೊಂದು ಬರೆಯಿಸಬೇಕೆಂದು ವಿಚಾರ ನಡೆದಿದೆಯೆಂದು ಬಲ್ಲವರ ಕಡೆಯಿಂದ ಕೇಳಿ ತಿಳಿದುಕೊಳ್ಳಲಾಗಿದೆ. ಅದಕ್ಕೆ ಮತ್ತಷ್ಟು ಬಣಗಳನ್ನು ಬೆಳಿಸಿದಂತೆ ಆಗುವದು. ಈಗ ಬಣಗಳು ತಾವಾಗಿಯೇ ಆರಹತ್ತಿರುವವು. ಮತ್ತೆ ಅವುಗಳಿಗೆ ಪುಟ ಕೊಟ್ಟಂತಾಗುವದು. ಅದಕ್ಕೆ ಗ್ರಂಥರಚನೆಯು ಅವಶ್ಯಕತೆ ಎನಿಸುವದಿಲ್ಲ. ಇದನ್ನು ಮಹಾಸಭೆಯವರು ವಿಚಾರಿಸಬೇಕೆಂದು ಸೂಚಿಸುವೆವು.

(೩೪) ನಮ್ಮಲ್ಲಿ ಕೆಲವು ಭಕ್ತರ ಮಠಗಳಿರುವವು. ಅಲ್ಲಿ ಕೆಲವು ಪಂಡಿತರೂ, ಅನುಭವಿಕರೂ, ಜ್ಞಾನಿಗಳೂ, ತಪಸ್ವಿಗಳೂ ಇರುವರು.

ನಮ್ಮಲ್ಲಿ ಕೆಲವು ಸಂಘ ಸಂಸ್ಥೆಗಳೂ ಇರುವವು. ಇವರೆಲ್ಲರೂ ಸ್ವತಂತ್ರ ರೀತಿಯಿಂದ ಕಾರ್ಯ ಮಾಡುತ್ತಿರುವರು. ಇವರೆಲ್ಲರನ್ನು ಮಹಾ ಸಭೆಯು ವರು ಬರಮಾಡಿಕೊಂಡು ಎಲ್ಲರೂ ಒಂದಾಗಿ ಏಕಮುಖದಿಂದ ಕೆಲಸ ಮಾಡಿದರೆ ಕೆಲಸಕ್ಕೆ ಮಹತ್ವ ಬರುವದು. ಕೆಲಸವೂ ಆಗುವದು. ಅವ ರಲ್ಲಿ ಹಾಗೂ ಸಭೆಯುವರಲ್ಲಿ ವಿಚಾರವಿನಿಮಯ ಮಾಡಿಕೊಂಡು ಏಕಾಭಿ ಪ್ರಾಯ ಮಾಡಿಕೊಂಡು ಕಾರ್ಯವನ್ನು ಮಾಡಿದರೆ ಬಹು ಶ್ರೇಯಸ್ಕರ ವೆನಿಸುವದು. ಅದರಿಂದ ನಮ್ಮಲ್ಲಿ ಸಂಘಟನೆ ಬೆಳೆಯುವದು. ಒಬ್ಬರೊ ಬ್ಬರು ಭೆಟ್ಟಿಯಾಗುವದರಿಂದ ಪ್ರೇಮ ಬೆಳೆದು ಒಬ್ಬರು ಮತ್ತೊಬ್ಬರ ನಿಂದೆ, ಟೀಕೆ ಮಾಡುವದು ಉಳಿದು ಸಂಘಶಕ್ತಿ ಬೆಳೆಯುವದು.

(೩೫) ಸಭೆಗಳಲ್ಲಿ, ಲೇಖದಲ್ಲಿ, ಪುರಾಣದಲ್ಲಿ, ಪತ್ರಿಕೆಗಳಲ್ಲಿ ಒಬ್ಬರು ಇನ್ನೊಬ್ಬರಿಗೆ ಬೈದು, ಟೀಕೆ ನಿಂದೆಗಳನ್ನು ವೈಯಕ್ತಿಕವಾಗಿಯೇ ಮಾಡು ವರು. ಅವುಗಳ ಬಗ್ಗೆ ಮಹಾ ಸಭೆಯುವರು ಜಾಗ್ರತೆ ಮಾಡಬೇಕು. ಅದರಂತೆ ಪ್ರಕಟನೆಗಳನ್ನು ಹೊರಡಿಸಿ ಇವುಗಳನ್ನು ಬಂದು ಮಾಡಲಿಕ್ಕೆ ಯತ್ನಿಸುವದು ಶ್ರೇಯಸ್ಕರ. ಇದರಿಂದಲೇ ಬಣಗಳು ಹೆಚ್ಚಾಗಿ ಬೆಳೆ ಯುತ್ತಿರುವದು ಕಾಣುವದು. ವೈಯಕ್ತಿಕ ನಿಂದೆ, ಟೀಕೆ, ಬೈಗಳುಗಳು ಹಿಂದುಳಿದ ಸಮಾಜದವರಲ್ಲಿ ನಡೆಯುತಕ್ಕವುಗಳೇ ಸರಿ. ನಾವು ಮುಂದು ವರಿದವರೆಂದು ತೋರಿಸಲಿಕ್ಕೆ ಇವುಗಳನ್ನು ಬಿಡುವದು ಲೇಸು.

ನನಗೆ ಹೊಳೆದಂಥ ಸೂಚನೆಗಳನ್ನು ಮಾಡಿದ್ದೇನೆ. ಇವುಗಳಲ್ಲಿ ಯೋಗ್ಯ ಕಂಡವುಗಳನ್ನು ಸ್ವೀಕರಿಸಬಹುದು. ಈ ಎಲ್ಲ ಸೂಚನೆಗಳಂತೆ ನಡೆದುದಾದರೆ ನಮ್ಮ ಸಮಾಜವು ಸರ್ವಾಂಗಸುಂದರವಾಗುವದರಲ್ಲಿ ಸಂದೇ ಹವಿಲ್ಲ ಮಹಾ ಸಭೆಯು ಬರೇ ಠರಾವುಗಳನ್ನು ಪಾಸು ಮಾಡಿಕೊಂಡರೆ ತನ್ನ ಕರ್ತವ್ಯವನ್ನು ಮಾಡಿದಂತೆ ಆಗುವದಿಲ್ಲ. ಇದಕ್ಕೆ ಹಣದ ಸುರಿ ಮಳೆ ಬೇಕು. ನಮ್ಮಲ್ಲಿ ಧನಿಕರು ಅನೇಕರಿದ್ದಾರೆ. ಮನಸ್ಸು ಮಾಡಿ ದರೆ ಬೇಕಾದಷ್ಟು ದುಡ್ಡು ಕೊಡುವದು. ಅನೇಕ ಶಿರಿವಂತ ಮಠಗ ಳಿರುವವು. ಅವರೆಲ್ಲರು ತನು ಮನ ಧನಗಳಿಂದ ನೆರವಾಗಿ ಮಾಡಿದರೆ ನಮ್ಮ ಸಮಾಜವು ಘನತೆಯನ್ನು ಪಡೆಯುವದು. ನಮ್ಮ ಸಮಾಜ ಕ್ಕಿಂತಲೂ ಚಿಕ್ಕದಾದ ಯಹೂದಿಗಳು ಇಸ್ರಾಯಿಲ್ ರಾಜ್ಯವನ್ನು ಕಟ್ಟಿ

ದ್ದಾರೆ. ಯಾಕಂದರೆ ಅವರಲ್ಲಿ ಸಂಘಟನೆ ಇದೆ. ಧನವೂ ಇದೆ. ನಮ್ಮಲ್ಲಿ ಧನವಿದ್ದರೂ ಸಂಘಟನೆ ಇಲ್ಲ, ಸಾಹಸವಿಲ್ಲ. ಜಾತೀಯತೆ ಹೆಚ್ಚಾಗಿರುವದು. ಹೀಗಾಗಿ ನಮಗೆ ಎಲ್ಲಯೂ ಸ್ಥಾನವಿಲ್ಲ. ಅದಕ್ಕಾಗಿ ಯತ್ನಿಸಿರಿ, ಸ್ಥಾನ ಗಳಿಸಿರಿ, ಸಮಾನತೆಯನ್ನು ನೆಲೆಗೊಳಿಸಿರಿ. ಅಂದರೆ ಸುಖ ಸಿಗುವದು. ಇಲ್ಲವಾದರೆ ಈಗಿನಕಿಂತ ಹೀನ ಸ್ಥಿತಿ ಮುಂದೆ ಬರುವದು ನಮ್ಮ ಸಮಾಜಕ್ಕೆ. ಅದಕ್ಕೆ ಎಲ್ಲ ಜಾತ್ಯತೀತ ಸಂಘಟನೆಗಾಗಿ ಹೆಣಗಿರಿ ಅಂದರಾಯಿತು.

# ನುಲಿಯ ಚಂದಯ್ಯನವರ ಗದ್ದುಗೆ.

(ಲೇಖಕ:— ಶ್ರೀ. ಎನ್. ಪಿ. ಶಿವಲಿಂಗಪ್ಪ, ಸ್ಕೂಲ ಮಾಸ್ತರ ನುಲೇನೂರ)

---

ಚಿತ್ರದುರ್ಗ ಜಿಲ್ಲೆ ಹೊಳಲ್ಕೆರೆ ತಾಲೂಕು ರಾಮಗಿರಿ ಹೋಬಳಿ, ನುಲೆನೂರು ಗ್ರಾಮದ ಕೆರೆ ಏರಿಯ ಮೇಲೆ ಶ್ರೀ ಶಿವಶರಣ ನುಲಿಯ ಚಂದಯ್ಯನವರ ಗದ್ದುಗೆಯಿದೆ ಎಂದು ಯಜಮಾನರು ತಲೆತಲಾಂತರದಿಂದ ಹೇಳುತ್ತಿದ್ದರು. ಆ ಗದ್ದುಗೆಯು ನೆಲಸಮವಾಗಿ ಗುರ್ತುಹಚ್ಚಲು ಯಾವ ಆಧಾರಗಳು ಇರಲಿಲ್ಲ. ಅಂದಾಜ ಜಾಗ ಮಾತ್ರ ಗೊತ್ತಿತ್ತು. ಗ್ರಾಮಸ್ತರಿಗೆ ಶ್ರೀ ಶರಣರುದಯ ಉಂಟಾಗಿ ತಾ|| ೧೬-೧೧-೫೬ (ದುರ್ಮುಖಿ ಸಂ|| ಕಾರ್ತಿಕ ಶುದ್ಧ ೧೩) ನೆಯ ಶುಕ್ರವಾರ ಜೀರ್ಣೋದ್ಧಾರ ಮಾಡಲು ಶಂಕುಸ್ಥಾಪನೆ ಮಾಡಿದರು. ಆಯಾದ ಆವರಣವನ್ನು ಅಗತೆ ಮಾಡಿದಾಗ ಗದ್ದುಗೆ ದೊರೆತು, ಅದರಲ್ಲಿ ಶ್ರೀ ಶರಣರ ಅಸ್ಥಿ, ಜಪಸರ, ರುದ್ರಾಕ್ಷಿ, ವಿಭೂತಿ, ಕಾವಿಕಲ್ಲು ದೊರೆತವು. ಪುನಃ ಕಲ್ಲಿನ ಗದ್ದುಗೆ ಕಟ್ಟಿ ಸದರಿ ಸಾಮಾನುಗಳನ್ನು ಶಾಸ್ತ್ರೋಕ್ತವಾಗಿ ಅದರಲ್ಲಿಟ್ಟು ಸ್ಥಾಪನೆ ಮಾಡಿರುತ್ತೇವೆ. ಅಂದಿನಿಂದ ಪೂಜೆ, ಕಂತೆಭಿಕ್ಷ ನಡೆಯುತ್ತಿದೆ.

ನಮ್ಮ ಗ್ರಾಮದಲ್ಲಿ ಪ್ರತಿವರ್ಷ ಆಶ್ವೀಜ ಶುದ್ಧ ಮೊದಲನೆ ಸೋಮವಾರ ನೂಲಿಯ ಚಂದಯ್ಯನವರ ಜಾತ್ರೆ ನಡೆಯುತ್ತ ಇದೆ. ಆಗ ಸಾವಿರಾರು ಜನರಿಗೆ ಸಂತರ್ಪಣೆ ನಡೆಯುತ್ತದೆ. ಈ ವಿಚಾರವನ್ನು ತಾವು ಈ ತಿಂಗಳ ಶಿವಾನುಭವ ಪತ್ರಿಕೆಗೆ ಪ್ರಕಟಿಸಿ ಪ್ರಚಾರ ಮಾಡಬೇಕಾಗಿ ನಮ್ಮ ಗ್ರಾಮದಪರವಾಗಿ ನಿಮಗೆ ಬೇಡುತ್ತೇನೆ.

## ನುಲೇನೂರು ಗ್ರಾಮದ ಪತ್ತೆ.

(೧) ಈ ಗ್ರಾಮವು ಹರಿಹರ ಬೆಂಗಳೂರು, ರೇಲ್ವೆ ರಸ್ತೆಯ ಪಕ್ಕದಲ್ಲಿ ಹೊಳಲ್ಕೆರೆ-ರಾಮಗಿರಿ ಸ್ಟೇಶನ್‌ಗಳ ಮಧ್ಯ ಇದೆ. ನುಲೇನೂರಿನಲ್ಲಿ ಅರಸೀಕೆರೆಯಿಂದ ಹರಿಹರಕ್ಕೆ ಹೊರಡುವ ಲೋಕಲ್ ಟ್ರೈನು ನಿಲ್ಲುತ್ತದೆ.

(೨) ಚಿತ್ರದುರ್ಗ-ಶಿವಮೊಗ್ಗ ಘಾಟು ಮಾರ್ಗದಲ್ಲಿ ಹೊಳಲ್ಕೆರೆ ರೇಲ್ವೆ ಸ್ಟೇಶನ ಬಳಿ ಇಳಿದರೆ ದಕ್ಷಿಣಕ್ಕೆ ೨ತ್ತಿ ಮೈಲ ದೂರವಿದೆ ಮತ್ತು ಹೊಳಲ್ಕೆರೆ ರೇಲ್ವೆ ಸ್ಟೇಶನ್ನಿನಿಂದ ಬಸಾಪುರದ ಮಾರ್ಗವಾಗಿ ನುಲೇನೂರುವರೆಗೆ ರಸ್ತೆ ಆಗಿದೆ. ಕಾರುಗಳು ಬರಬಹುದು. ಬಸ್ ಸೌಕರ್ಯವಿಲ್ಲ.

---

# ರಾ. ಬ. ಹಳಕಟ್ಟಿಯವರು

(ಲೇ:- ರೇವಣಶಿದ್ಧಪ್ಪ ಶೀಲವಂತ, ಹುನಗುಂದ.)



ಶ್ರೀ ಹಳಕಟ್ಟಿಯವರು ಅಸಾಧಾರಣವಾದ ಶಕ್ತಿಯಿಂದ ವಚನ ವಾಙ್ಮಯದ ಸೇವೆಯನ್ನು ಅಪಾರವಾಗಿ ಮಾಡಿರುವರು. ಅವರ ಯೋಗ್ಯ ಪ್ರತಿಫಲ ಅವರಿಗೆ ಇನೂ ದೊರೆಯಲಾರದ್ದಕ್ಕೆ ನನಗೆ ಬಹಳ ದುಃಖವಾಗುತ್ತಿದೆ. ಅವರ ಸಹಾಯದ ಬಗ್ಗೆ ಅನೇಕ ಸ್ವಾಮಿಗಳೂ, ಶ್ರೀಮಂತರೂ ಮತ್ತು ಯಾವತ್ತರೂ ಮುಕ್ತಮನಸ್ಸಿನಿಂದ ಧಾವಿಸಿ ಬರಲೆಂದು ಜಗದೀಶನಲ್ಲಿ ನಾನು ಅಂಗಲಾಚಿ ಬೇಡಿಕೊಳ್ಳುತ್ತೇನೆ. ಈ ಪತ್ರದ ಜೊತೆಗಿದ್ದ ಮೂರು ವಚನ ಮತ್ತು ಲೇಖನನ್ನು "ಶಿವಾನುಭವ" ಪತ್ರಿಕೆಯಲ್ಲಿ ತಾವು ತೀವ್ರ ಪ್ರಸಿದ್ಧಿಸುವಿರಾಗಿ ನಂಬಿದ್ದೇನೆ.

"ಶ್ರೀ ಬಸವಣ್ಣನವರು ಮಾನವರೆಂಬೆನೆ? ಅಪಾರ ಲಿಂಗಭಕ್ತಿಯ ಮಾಡಿ ಅಮರರಾದಕಾರಣ ಭಕ್ತರೆಂದೆನಿಸಿದರಯ್ಯಾ. ಶ್ರೀ ಬಸವಣ್ಣನವರು ಭಕ್ತರೆಂಬೆನೆ, ಅಖಂಡಜ್ಞಾನ ಸಂಪಾದಿಸಿಕೊಂಡು ಶ್ರೀಚನ್ನಬಸವಣ್ಣನವರಿಗ ಗುರುಗಳಾದ ಕಾರಣ ಮಾಹೇಶ್ವರರೆನಿಸಿದರಯ್ಯಾ. ಶ್ರೀಬಸವಣ್ಣನವರು ಮಾಹೇಶ್ವರರೆಂಬೆನೆ, ಸತ್ಯ, ಶುದ್ಧ, ಸಿದ್ಧಪ್ರಸಾದವ ಕೊಂಡು ಲೋಕಕ್ಕೆ ಹಿತಪ್ರಸಾದವ ನೀಡಿದಕಾರಣ ಪ್ರಸಾದಿಯಾದರಯ್ಯಾ. ಶ್ರೀಬಸವಣ್ಣನವರು ಪ್ರಸಾದಿಯಾದರೆಂಬೆನೆ, ಇಂಥ ಪ್ರಸಾದವನುಂಡು ಸುಖಿಸುತ್ತಿರುವ ಭಕ್ತರ ಸಂತೋಷವೇ ತಮ್ಮ ಸ್ವಸಂತೋಷವೆಂದು ತಿಳಿದು ಆಚರಿಸಿದ ಕಾರಣ ಪ್ರಾಣಲಿಂಗಿಯಾದರಯ್ಯಾ. ಶ್ರೀಬಸವಣ್ಣನವರು ಪ್ರಾಣಲಿಂಗಿಯಾದರೆಂಬೆನೆ ವಿಶ್ವದೊಳು ಸಕಲ ಜೀವಿಗಳಲ್ಲಿ ಪರಮಾತ್ಮನ ಸಾಕ್ಷಾತ್ಕಾರವನ್ನು ಕಂಡು ನಲಿದುದರಿಂದ ಶರಣರೆಂದೆನಿಸಿದರಯ್ಯಾ. ಶ್ರೀ ಬಸವಣ್ಣನವರು ಶರಣರೆಂಬೆನೆ, ಕೋಟಿ ಸೂರ್ಯ ಪ್ರಕಾಶಿಕ್ಕಿಂತ ಮಿಗಿಲಾದ ಪ್ರಕಾಶದಲ್ಲಿ ಬೆರೆದ ಕಾರಣ ಐಕ್ಯವಾದರಯ್ಯಾ. ಶ್ರೀ ಬಸವಣ್ಣನವರು ಐಕ್ಯವಾದರೆಂಬೆನೆ ದೊಡ್ಡ ಪ್ರಕಾಶದೊಳು ತಮ್ಮ ಪ್ರಕಾಶವ ಬೆರಸಿ, ತಮ್ಮದನ್ನಾಗಿರಿಸಿಕೊಂಡು ಲೋಕಕ್ಕೆ ಮಾರ್ಗದರ್ಶನ ಮಾಡುತ್ತಿರುವ (ನಿಮ್ಮ ಘನಕ್ಕೆ) ಶ್ರೀಬಸವಣ್ಣನವರ ಘನಕ್ಕೆ ಮಿಗಿಲುಂಟೇನಯ್ಯಾ. ಕೋಟಿಕಲ್ಲ ಶ್ರೀ ಹೊಳೆಹುಚ್ಚೇಶ್ವರಾ."

ಹೆಣ್ಣಾದರೇನು–ಗಂಡಾದರೇನು ? ಆತ್ಮಜ್ಯೋತಿ ಪ್ರಕಾಶದ ಮಹತ್ವನರಿಯಿರಯ್ಯಾ. ಲಿಂಗಪ್ರಕಾಶವೇ ಸ್ವಪ್ರಕಾಶವಾಗಿ ಬೆಳಗಿಸುವ ಶರಣ–ಶರಣಿಯರ ಘನವನರಿಯಿರಯ್ಯಾ. ಇಂತಪ್ಪ ಶರಣಿಯಾದ ಸಜ್ಜಲಗುಡ್ಡದ ಶ್ರೀ ಶರಣಮ್ಮನವರ ದಿವ್ಯ ಪ್ರಕಾಶವ ಕಂಡು ಬದುಕಿದೆನಯ್ಯಾ ಕೋಟೇಕಲ್ಲ ಶ್ರೀಹೊಳೆಹುಚ್ಚೇಶ್ವರಾ.

ಗುಣ ಹೀನನಲ್ಲಿ ಹಣವಿದ್ದೊಡೆ, ಅತಿ ಉಚ್ಚನೆಂದು ಕರೆವುದೀ ಮರುಳ ಲೋಕದಲ್ಲಿ ನೋಡಿರಯ್ಯಾ. ಗುಣವಂತನಲ್ಲಿ ಹಣವಿಲ್ಲದೊಡೆ ಹೆಣನೆಂದು ತುಚ್ಛಿಸುವರೀ ಲೋಕದಲ್ಲಿ ನೋಡಿರಯ್ಯಾ. ಹಣಘನವೆಂಬೆನೆ–ಗುಣಘನವೆಂಬೆನೆಂಬುದನರಿಯದೀ ಮಾಜಜಗವೆಲ್ಲ ಕೆಟ್ಟುಹೋಯಿತ್ತು ನೋಡಾ ಕೋಟೆಕಲ್ಲ ಶ್ರೀ ಹೊಳೆಹುಚ್ಚೇಶ್ವರಾ.

ನವಮೈಸೂರ ರಾಜ್ಯವು ಉದಯವಾಗಿರುವ ಈ ಶುಭಸಮಯದಲ್ಲಿ, ವಿಶ್ವಧರ್ಮದ ಪ್ರತೀಕವಾದ ವೀರಶೈವ ಧರ್ಮವು ವಿಕಸಿತವಾಗಿ ಜಾಜ್ವಲ್ಯಮಾನವಾಗಿ ಪ್ರಕಾಶಿಸುವದುಬೇಡವೇ ? ಇಂಥ ಶ್ರೇಷ್ಠ ಧರ್ಮವಾದ ವೀರಶೈವ ಧರ್ಮಕ್ಕೆ ಮಹಾನುಭಾವರಾದ ಶ್ರೀಬಸವಣ್ಣನವರು ಮಾರುಹೋದುದರಲ್ಲಿ ಆಶ್ಚರ್ಯವೇನಿಲ್ಲ- ಮಾರುಹೋದುದು ಇಷ್ಟೇಅಲ್ಲ, ಅದನ್ನು ಅವರು ಪೂರ್ಣ ಅರಗಿಸಿಕೊಂಡು ತಮ್ಮ ನಡೆ ನುಡಿಯಿಂದ, ವೀರಶೈವ ಧರ್ಮಕ್ಕಷ್ಟೇ ಅಲ್ಲ, ಇಡೀ ಜಗತ್ತಿಗೆ ಮೇಲ್ಪಂಕ್ತಿಹಾಕಿರುವರೆಂದರೆ ಅತಿಶಯೋಕ್ತಿಯಾಗಲಿಕ್ಕಿಲ್ಲ.

ಇಂಥ ಮಹಾನುಭಾವರಾದ ಶ್ರೀ ಬಸವಣ್ಣನವರನ್ನೊಳಗೊಂಡ ಅನೇಕ ಶರಣ ಶರಣಿಯರ ಹೃದಯಕಮಲದಿಂದ ಹೊರಹೊಮ್ಮಿದ ವಚನರತ್ನಗಳು ರಾಶಿ ರಾಶಿಯಾಗಿ ಎಲ್ಲೋ ಮೂಲೆಯಲ್ಲಿ ೭–೮ ನೂರು ವರುಷಗಳ ವರೆಗೆ ಮುಚ್ಚಿದ್ದವು. ಅವನ್ನು ಶೋಧಿಸುವದಕ್ಕಾಗಿ ರಾ॥ ಬ॥ ಶ್ರೀ ಹಳಕಟ್ಟಿಯವರು ತಮ್ಮ ಸಂಸಾರ ಸುಖವನ್ನೇ ತ್ಯಾಗ ಮಾಡಿ, ತಮ್ಮ ದೇಹವನ್ನೇ ಸವಸಿ ಸವಸಿ ಸಣ್ಣ ಮಾಡಿಕೊಂಡು ಬಹಳ ಪರಿಶ್ರಮದಿಂದ ಎಷ್ಟೋ ರತ್ನಗಳನ್ನು ಹೊರದೆಗೆದಿದ್ದಾರೆ. ಹೊರದೆಗೆಯುವದಿಷ್ಟೇ ಅಲ್ಲ; ಜಗತ್ತಿನ ಪ್ರತಿಮಾನವರ (ಸ್ತ್ರೀ–ಪುರುಷರ) ಹೃದಯಕಮಲವರಳಿಟ್ಟು ಪ್ರಕಾಶಿಸುವಂತೆ ಮಾಡಿದ್ದಾರೆ. ಇಂಥ ದಿವ್ಯ ಪ್ರಕಾಶದ ಬೆಳಕಿನಲ್ಲಿ ಮುಕ್ತಿಯ ಮಾರ್ಗವನ್ನು ತೋರಿಸುವಂತೆ ಸಹಾಯ ಮಾಡಿದ್ದಾರೆ. ಆದುದರಿಂದ ರಾ॥ ಬ॥

ಶ್ರೀ ಹಳಕಟ್ಟಿಯವರ ಉಪಕಾರ ಜಗತ್ತಿನ ನಾವೆಲ್ಲರೂ ಎಷ್ಟು ಸ್ಮರಿಸಿದರೂ ಕಡಿಮೆಯೇ. ಈಗ ಅವರು ಅರ್ಧದಷ್ಟು ರತ್ನಗಳನ್ನು ಹೊರದೆಗೆದಿದ್ದಾರೆ. ಉಳಿದವುಗಳನ್ನು ಹೊರದೆಗೆಯಬೇಕಾಗಿದೆ. ಇವರು ಮಾಡಿರುವ ವಚನವಾಙ್ಮಯ ಸೇವೆಯೂ ಬಹಳವಾಗಿದೆ. ಸತ್ಯವಾದಿಗಳಿಗೆ ಕಷ್ಟಗಳು ಬಹಳವಿದ್ದಂತೆ ಸಹನಶೀಲತೆಯು ಅದಕ್ಕಿಂತ ಇಮ್ಮಡಿಯಾಗಿ ಹೆಚ್ಚು ಇರುತ್ತದೆ. ಇಂಥ ಮಹಾನ್ ವ್ಯಕ್ತಿಗಳಾದ ಇವರಿಗೆ ಸಹಾಯ ನಿಧಿ ಕೂಡಿಸಲಿಕ್ಕೆ ಕೆಲವು ಸ್ವಾಮಿಗಳೂ ಮತ್ತು ಸಮಾಜದವರೂ ಮುಂದೆ ಬರುತ್ತಿರುವದು ನೋಡಿ ಬಹು ಸಂತೋಷವೆನಿಸಲಿಕ್ಕೆಹತ್ತಿದೆ. ಆದಷ್ಟು ತ್ವರಿತಗತಿಯಿಂದ ಬಹಳವಾಗಿ ಹಣ ಕೂಡಿಸುವಂತಾಗಬೇಕು. ಇವರಿಗೆ ಲಕ್ಷ ಕೋಟಿಗಟ್ಲೆ ರೂಪಾಯಿ ನಿಧಿ ಕೂಡಿಸಿಕೊಟ್ಟರೂ ಕಮ್ಮಿಯೇ ಸರಿ. ಇವರು ಹೊರದೆಗೆದ ಒಂದೊಂದು ವಚನಗಳು ಕೋಟಿಗಿಂತಲೂ ಮಿಗಿಲಾದವು ಇರುತ್ತವೆ. ಇವರ ಬಗ್ಗೆ ಇಡೀ ನವಮೈಸೂರ ರಾಜ್ಯದಲ್ಲೆಲ್ಲಾ ಅನೇಕ ನಿಧಿಸಂಸ್ಥೆಯನ್ನಾಗಲಿ, ಇಲ್ಲವೆ ಅಖಿಲ ಭಾರತ ವೀರಶೈವ ವಚನ-ವಾಙ್ಮಯ ವಿಕಾಸ ಸಂಸ್ಥೆಯನ್ನು ನಿರ್ಮಿಸಿಕೊಂಡು ಇದರ ಮೂಲಕ ಕೋಟ್ಯಾಂತರ ಹಣ ಕೂಡಿಸಿ, ರಾ॥ ಬ॥ ಹಳಕಟ್ಟಿಯವರಂಥ ಸೇವಾ ಧುರಂಧರರಿಗೆ ಅಜೀವ ಪೋಷಕರಾಗುವಂತಾಗಬೇಕು. ಮತ್ತು ಇಂಥವರ ಸ್ಮಾರಕವು ಕಡೆತ.ಕ ..ಳಿಯುವಂತಾಗಬೇಕು. ನಮ್ಮ ವಚನ-ವಾಙ್ಮಯದ ಪ್ರಚಾರವನ್ನು ರಾಷ್ಟ್ರದ ಎಲ್ಲ ಭಾಷೆಯಲ್ಲಿ ಪ್ರಚಾರವಾಗುವಂತಾಗಬೇಕು. ಇಂಥ ಮಹತ್ತರವಾದ ಕಾರ್ಯಕ್ಕೆ ಎಲ್ಲ ಸ್ವಾಮಿಗಳೂ ( ಗುರು-ವಿರಕ್ತ ) ಎಲ್ಲ ಶ್ರೀಮಂತರೂ ಮತ್ತು ಎಲ್ಲ ಸಾಹಿತಿಗಳೂ ಒಂದುಗೂಡಿ ಇಂಥದೊಂದು ದೊಡ್ಡ ಉಚ್ಚ ಸಂಸ್ಥೆಯನ್ನು ಬೇಗನೇ ಅಸ್ತಿತ್ವದಲ್ಲಿ ಬರಲೆಂದು ನನ್ನ ಪ್ರಾರ್ಥನೆ. ಎಷ್ಟೋ ಸ್ವಾಮಿಗಳು, ಎಷ್ಟೋ ಜನ ಶ್ರೀಮಂತರು ಹಣವನ್ನು ನೀರಿನಂತೆ ನೂರೆಂಟು ವಿಲಾಸಭೋಗಗಳಿಗಾಗಿ ಸೂರೆ ಮಾಡುತ್ತಾರೆ. ಆದರೆ ಇಂಥ ಮಹತ್ವದ ಕಾರ್ಯಕ್ಕೆ ಯಾರೂ ಕೊಡಲಿಕ್ಕೆ ಮುಂದೆ ಬಾರದಿದ್ದುದು ನೋಡಿ ನನಗೆ ಬಹಳ ನಾಚಿಕೆಯಾಗುತ್ತಿದೆ. ನಮ್ಮ ರಾಷ್ಟ್ರದಲ್ಲಿ ಶ್ರೀಮಂತ ಮಠಾಧೀಶ್ವರರಿಗೇನೂ ಕೊರತೆ ಇಲ್ಲ. ಮತ್ತು ಶ್ರೀಮಂತರಿಗೂ ಕೊರತೆ ಇಲ್ಲ. ಆದರೆ ಇಂಥ ಮಹತ್ವದ ಕಾರ್ಯಕ್ಕಾಗಿ ಹಣ ಕೊಡಲಿಕ್ಕೆ ಮನಸ್ಸು ಮಾತ್ರ ಕೊರತೆ ಇದೆ. ಶ್ರೀಮಂತರು ದೊಡ್ಡ ಮನಸ್ಸಿನಿಂದ

ತ್ಯಾಗಮಯಿಯಾದ ಶ್ರೀ ಹಳಕಟ್ಟಿಯವರ ಎಲ್ಲ ಕಾರ್ಯಕ್ಕೆ ಹಣವನ್ನು ಧಾರೆ ಎರೆದರೆ ಲಿಂಗರಾಜ ದೇಸಾಯಿಗಳವರಂತೆ ಕೀರ್ತಿಶಾಲಿಗಳಾಗುವರು. ಈಗಿನ ಕಾಲದಲ್ಲಿ ಸ್ವಾಮಿಗಳವರ ಪಾತ್ರ ಅಪಾರವಿದೆ. ಅವರು ಮನಸ್ಸು ಮಾಡಿದರೆ ಬೇಕಾದಷ್ಟಾದರೂ ಕೂಡಿಸಬಹುದು. ಶ್ರೀಮಂತರಾದರೂ ಸಹ ಕಡಿಮೆ ಇಲ್ಲ. ಒಬ್ಬೊಬ್ಬರೇ ಶ್ರೀ ಹಳಕಟ್ಟಿಯಂಥವರನ್ನು ಎತ್ತಿ ಹಿಡಿಯುವ ಹಣದ ಬಲವುಳ್ಳವರಿದ್ದಾರೆ. ದಯಾಘನನಾದ ಪರಮೇಶ್ವರನು ಸ್ವಾಮಿಗಳಿಗೂ, ಶ್ರೀಮಂತರಿಗೂ ಮತ್ತು ಇತರರಿಗೂ ನಮ್ಮ ವೀರಶೈವ ಸಂಸ್ಕೃತಿಯ ಪ್ರತೀಕವಾದ ವಚನ-ವಾಙ್ಮಯದ ಸೇವೆಯು ರಾಷ್ಟ್ರದಲ್ಲಿ ಬಹುಮುಖವಾಗಿ ನಡೆಯುವಂತೆ ಮಾಡುವದಕ್ಕೋಸ್ಕರ ರಾ॥ ಬ॥ ಶ್ರೀ ಹಳಕಟ್ಟಿಯವರಿಗೆ ಸಹಸ್ರ ಮುಖವಾಗಿ ಹಣ ಸಹಾಯ ನೀಡುವ ಸದ್ಬುದ್ಧಿಯನ್ನು ಸಕಲರಿಗೂ ದೇವರು ದಯಪಾಲಿಸಲೆಂದು ಜಗದೀಶನಲ್ಲಿ ನನ್ನ ಅನನ್ಯ ಪ್ರಾರ್ಥನೆ.

# ಶಿವಶರಣರ ಮಾರ್ಗ.

[ಮೈಸೂರು ವಿಶ್ವವಿದ್ಯಾನಿಲಯವು ಪ್ರಸಿದ್ಧಿಸುವ "ಪ್ರಬುದ್ಧ ಕರ್ನಾಟಕ"ದ ಪ್ರಕಟನಾಧಿಕಾರಿಗಳ ಒಪ್ಪಿಗೆಯಿಂದ ಪ್ರಸಿದ್ಧಿಸಲ್ಪಟ್ಟಿದೆ. ಈ ಲೇಖವು ಈ ಪತ್ರಿಕೆಯ ಸಂಪುಟ ೩೮ ಸಂಚಿಕೆ ೩ರಲ್ಲಿ ಬಂದಿದೆ. ಇದರ ಲೇಖಕರು ಶ್ರೀ ಪ್ರೊ|| ಸ. ಸ. ಮಾಳವಾಡ, ಎಮ್. ಎ. ಇವರು ಇದ್ದಾರೆ. -ಸಂಪಾದಕ.]



ಕರ್ನಾಟಕದಲ್ಲಿ ೧೨ನೇಯ ಶತಮಾನದ ಮಧ್ಯಭಾಗದಲ್ಲಿ ಒಂದು ದೊಡ್ಡ ಕ್ರಾಂತಿಯು ನಡೆಯಿತು. ಆಗ ಉಕ್ಕೇರುವ ಮಹಾ ಸಮುದ್ರದಂತೆ ಒಂದು ಮಹಾಪ್ರವಾಹ ಹರಿದುಬಂದಿತು. ಅದು ನಾಡಿನ ಕೊಳೆಯನ್ನೆಲ್ಲ ತೊಳೆಯಿತು. ಆ ಮಹಾಪೂರವು ನಮ್ಮ ಜೀವನದ ಅನೇಕ ರಂಗಗಳಲ್ಲಿ ಸ್ವಚ್ಛತೆಯನ್ನು, ಅಚ್ಚುಕಟ್ಟುತನವನ್ನು, ಬಲವನ್ನು, ಬೆಳಕನ್ನು, ಸಮತೆಯನ್ನು ತಂದುಕೊಟ್ಟಿತು. ಅಂತಹ ಅದ್ಭುತಶಕ್ತಿಯ ಪ್ರವಾಹವೆಂದರೆ ಶಿವಶರಣರಿಂದ ಅಂದು ನಮ್ಮ ನಾಡಿನಲ್ಲಿ ನಡೆದ ಕ್ರಾಂತಿಯಾಗಿದೆ. ನೀರು ಸಹಜವಾಗಿ ಹರಿಯುವದಕ್ಕೆ ಅಡೆತಡೆಯುಂಟಾದರೆ ಕೊಳಚೆ ತಲೆದೋರುತ್ತದೆ. ಅದನ್ನು ಹೊಡೆದೋಡಿಸಲು ಮಹಾಪೂರವೇ ಬೇಕು. ಅಂತಹ ಮಹಾಪೂರವಾಗಿ ಪರಿಣಮಿಸಿದುದು ಆಗಿನ ಶಿವಶರಣರ ನುಡಿವಳಿ; ನಡೆವಳಿ.

ಶಿವಶರಣರ ನುಡಿಗಡಣವು ವಚನಸಾಹಿತ್ಯವಾಗಿ ಕನ್ನಡ ಸಾಹಿತ್ಯಕ್ಕೆ ಹೊಸ ಹಾದಿಯನ್ನು ಹಾಕಿಕೊಟ್ಟಿತು. ಶರಣರ ನಡೆವಳಿಯು ಅಂದಿನ ಧಾರ್ಮಿಕ, ಸಾಂಸ್ಕೃತಿಕ ರಂಗಗಳಲ್ಲಿ ಅದ್ಭುತವಾದ ಪರಿವರ್ತನೆಯನ್ನು ತಂದಿತು. ಶರಣರ ವಿಚಾರಸರಣಿ ನಮ್ಮ ನಾಡಿನಲ್ಲಿ ಹೊಸದೊಂದು ಬೆಳಕನ್ನು ಹರಿಯಿಸಿತು. ಆ ವಿಚಾರ ಸರಣಿಯ ಹಿಂದೆ ಅಡಗಿದ ಲೋಕಕಲ್ಯಾಣಭಾವ ಜನತೆಯನ್ನು ತನ್ನತ್ತ ಒಲಿಸಿಕೊಂಡಿತು. ಮಂಕಾಗಿದ್ದ ಜನಸಾಮಾನ್ಯಕ್ಕೆ ಶಿವಶರಣರ ನಡೆವಳಿಯು ಹೊಸ ಆಶೋತ್ತರಗಳನ್ನು ದಯಪಾಲಿಸಿ ನವೀನ ಮಾರ್ಗದರ್ಶನ ಮಾಡಿಸಿತು. ಜನತಾ ಶಿಕ್ಷಣದ ಹೊಸ ದೃಷ್ಟಿಯೊಂದು ಆಗ ತಲೆದೋರಿತು. ಶಿವಶರಣರ ಅನುಭಾವ ಸಂಪತ್ತು ನಾಡಿನ ಜನತೆಗೆ ದೈವೀಕೃಪೆಯನ್ನು ಒದಗಿಸಿತು. ಜನಶಕ್ತಿಯು ಸಂಘಟಿತವಾಗಿ ರಾಜಕೀಯ ಪಲ್ಲಟವೂ ಆಗ ನಡೆಯಿತು.

ಧರ್ಮ, ಸಮಾಜ, ಸಾಹಿತ್ಯ, ಶಿಕ್ಷಣ, ಸಂಸ್ಕೃತಿ ಈ ರಂಗಗಳಲ್ಲಿ ರಾಜಕೀಯ, ಆರ್ಥಿಕ, ನೈತಿಕ ಕ್ಷೇತ್ರಗಳಲ್ಲಿ ಪಲ್ಲಟವನ್ನು ಏಕಕಾಲಕ್ಕೆ ತಂದುಕೊಟ್ಟ ಶಿವಶರಣರ ಮಾರ್ಗವು ಜಗತ್ತಿನ ಇತಿಹಾಸದಲ್ಲಿ ವಿಶಿಷ್ಟವಾಗಿದೆಯೆನ್ನಬಹುದು.

ಜೀವನದಲ್ಲಿ ಧರ್ಮವು ಎಂದಿಗೂ ಮಾನವನ ಉಸಿರಾಗಿದೆ. ಜಗತ್ತಿನ ಇತಿಹಾಸದಲ್ಲಿ ಹೊಸ ಧರ್ಮಗಳು ಹೊಸ ಆಶೋತ್ತರಗಳನ್ನು, ಉತ್ಸಾಹವನ್ನು ಕಲ್ಪಿಸಿವೆ. ದೈವೀಶಕ್ತಿಯು ಏಕರೂಪವಾಗಿಯೇ ಪ್ರಕಟವಾಗುವುದಿಲ್ಲ. ಆದುದರಿಂದ ಧರ್ಮದ ವೈವಿಧ್ಯಕ್ಕೆ ಯಾವಾಗಲೂ ಅವಕಾಶವುಂಟು. ನಮ್ಮ ಜೀವನದ ಸಮಸ್ಯೆಗಳೂ ವಿವಿಧ. ಅಂತೆಯೇ ಅವುಗಳಿಗಾಗಿ ನಾವು ಕಂಡುಕೊಳ್ಳುವ ಉತ್ತರಗಳು ವಿವಿಧವಾಗುತ್ತವೆ. ಮಾನವನ ಸ್ವಭಾವದಲ್ಲಿ ವೈವಿಧ್ಯವಿದೆ. ಅಲ್ಲದೆ ಪರಿಸ್ಥಿತಿಯು ಭಿನ್ನತೆಯೂ ಧಾರ್ಮಿಕ ಭಿನ್ನತೆಯನ್ನು ರೂಪಿಸುತ್ತದೆ. ಹೀಗಾಗಿ ನಮ್ಮ ನಾಡಿನಲ್ಲಿ ಈ ಮೊದಲು ಹಲವು ಧರ್ಮಗಳು ಉದಯವಾಗಿದ್ದರೂ ಶಿವಶರಣರ ಮಾರ್ಗವು ಹೊಸದಾಗಿ ರೂಪುಗೊಂಡಿತು. ಹಳೆಯದನ್ನು ಸರಿಯಾಗಿ ಬಳಸಿಕೊಳ್ಳುವುದಕ್ಕೆ ಆಗದೆ ಇದ್ದಾಗ ಹೊಸ ಧರ್ಮದ ಉದಯ ಅನಿವಾರ್ಯವೆಂದು ತೋರುತ್ತದೆ. ಮಾನವನು ಅಭಯ, ರಕ್ಷಣೆ, ಶಾಂತಿಗಾಗಿ ಧರ್ಮಕ್ಕೆ ಶರಣು ಹೋಗುತ್ತಾನೆ. ಕಾಲಾಂತರಲ್ಲಿ ಅವುಗಳನ್ನು ಪಡೆಯಲು ಅಸಮರ್ಥನಾಗುತ್ತಾನೆ. ಆಗ ಹೊಸ ಬೆಳಕು ಬೇಕೆಂದೆನಿಸುತ್ತದೆ.

ಕಣ್ಣಿಗೆ ಕಾಣುವ ಜಗತ್ತು ಕಾಣದೆ ಇರುವ ಸೂಕ್ಷ್ಮ ಜಗತ್ತಿನ ಒಂದು ಸಣ್ಣ ಅಂಶವಾಗಿದೆಯೆಂಬ ಮಾತನ್ನು ನಾವು ಮರೆಯಬಾರದು. ಸೂಕ್ಷ್ಮ ಜಗತ್ತಿನೊಂದಿಗೆ ಸಮನ್ವಯ ಪಡೆದುಕೊಳ್ಳುವುದು ಮಾನವನ ಗುರಿಯಾಗಿದೆ. ಆದರೆ ಈ ಗುರಿಯನ್ನು ಮರೆತ ಮಾನವತೆ ಅನೇಕ ಸಲ ಅಡ್ಡಹಾದಿ ಹಿಡಿದಿದೆ; ಕಂಗೆಟ್ಟಿದೆ. ಹೀಗೆ ಕಂಗೆಟ್ಟಿರುವಾಗ ಹೊಸ ಮಾರ್ಗ ಪಡೆಯಬೇಕೆಂದು ಜನತೆ ಕಾತರಗೊಳ್ಳುತ್ತದೆ. ಧರ್ಮವು ಕೇವಲ ತತ್ತ್ವಜ್ಞಾನವಾಗಿ ಇಲ್ಲವೆ ವ್ರತನಿಯಮಗಳ ಕರ್ಮಜಾಲವಾಗಿ ಬಳಕೆಯಾಗುತ್ತಿರುವಾಗ ಮಾನವನು ತನ್ನ ಗುರಿಯನ್ನು ತಪ್ಪುತ್ತಾನೆ. ತಾನು ಒಪ್ಪಿಕೊಂಡ, ಇಲ್ಲವೇ ಜನ್ಮದಿಂದ ಅಂಟಿಕೊಂಡ ಧರ್ಮದ ಬಗೆಗೆ ಉತ್ಸಾಹ ಕಡಿಮೆಯಾಗುತ್ತದೆ. ಧರ್ಮದ ಹೆಸರಿನಲ್ಲಿ ನಡೆದ, ಗುರಿಯನ್ನು ತಪ್ಪಿದ

ಕೋಲಾಹಲ ಜೀವನದಲ್ಲಿ ವಿಷಮತೆಯನ್ನು ತರುತ್ತದೆ. ಅಂತಹ ವಿಷಮತೆಯನ್ನು ಹೊಡೆದೋಡಿಸುವ ಕ್ರಾಂತಿಯು ಅವಶ್ಯಕತೆಯುಂಟಾಗುತ್ತದೆ. ಶಿವಶರಣರ ಮಾರ್ಗವು ಇಂತಹ ಅವಶ್ಯಕತೆಯಿಂದ ರೂಪುಗೊಂಡ ಧರ್ಮವಾಗಿದೆ. ಅದು ಕೇವಲ ಧರ್ಮವಾಗಲಿಲ್ಲ. ಮಾನವನ ಕಲ್ಯಾಣಕ್ಕಾಗಿ ಅವಶ್ಯವೆನಿಸುವ ವಿವಿಧ ರಂಗಗಳಲ್ಲಿ ಕ್ರಾಂತಿಯನ್ನು ರೂಪಿಸಿದ ಮಹಾ ಪೂರವಾಗಿದೆ.

ದೇವ, ಮಾನವ, ಸೃಷ್ಟಿ ಇವುಗಳ ವಿವೇಚನೆ ಎಲ್ಲ ಧರ್ಮಗಳ ಮೂಲಭೂತ ವಿಷಯವಾಗಿದೆ. ಇಹಲೋಕದ ಬಾಳು ಪರಮಾರ್ಥದ ಅಖಂಡಾನಂದ ಇವುಗಳ ತಾರತಮ್ಯವೂ ಎಲ್ಲ ಧರ್ಮಗಳಲ್ಲಿ ಪ್ರಮುಖವಾಗಿ ಅಡಕವಾಗಿರುತ್ತದೆ. ಇಹದ ಬಾಳು ಸುಖಮಯವಾಗಬೇಕೆಂದು ಧರ್ಮಾಚರಣೆಯನ್ನು ಒಪ್ಪಿಕೊಳ್ಳುವುದೂ ಉಂಟು. ಇಲ್ಲವೆ ಪಾರಮಾರ್ಥಿಕ ಸುಖದ ಸಲುವಾಗಿ ಸಂಸಾರದ ಲೋಪದುಃಖಗಳನ್ನು ಸಹಿಸಬೇಕೆಂಬ ಸಮಾಧಾನವನ್ನು ಧರ್ಮ ಒದಗಿಸಬಹುದು. ಅಥವಾ ಇಹದ ಜೀವನವು ಕ್ಷಣಭಂಗುರವಾದುದರಿಂದ ಅದನ್ನು ಕಡೆಗಣಿಸಿ ಪರಮಾರ್ಥವನ್ನು ಪಡೆಯಬೇಕೆಂಬ ಹವಣಿಕೆಯೂ ಕಾಣಬಹುದು. ಆದರೆ ಶಿವಶರಣರ ಮಾರ್ಗವು ಇವೆಲ್ಲಕ್ಕಿಂತ ಬೇರೆಯಾದ ಸಂದೇಶವನ್ನು ಅಳವಡಿಸಿಕೊಂಡಿದೆ. ಇಹದ ಬಾಳನ್ನು ಸುಂದರಗೊಳಿಸುವದರ ಮೂಲಕವೇ ಪರಮಾರ್ಥವನ್ನು ಗಳಿಸಬೇಕೆಂಬುದೇ ಆ ಸಂದೇಶ. ಇಂತಹ ಸಂದೇಶವನ್ನು ತಮ್ಮ ಜೀವನದಲ್ಲಿ, ಆಚರಣೆಯಲ್ಲಿ ತೋರಿಸಿಕೊಟ್ಟ ಶಿವಶರಣರ ಚರಿತ್ರೆಗಳು ಉದ್ಬೋಧಕವಾಗಿವೆ. ಅಂತಹ ಒಂದು ಸಂದೇಶವನ್ನು ರಮಣೀಯವಾದ ಮಾತುಗಳಲ್ಲಿ ಉಸುರಿದಾಗ ಅದೇ ವಚನಸಾಹಿತ್ಯವಾಗಿ ಹರಿಯಿತು. ಆ ಮಾತುಗಳಲ್ಲಿ ಆಳವಾದ ಅನುಭವ, ತೀಕ್ಷ್ಣವಾದ ವಿಚಾರ, ಪ್ರಾಂಜಲವಾದ ವಿಚಾರ, ಅನುಭವಗಳ ವಿನಿಮಯ, ನಡೆವಳಿಗಳ ಬೆಂಬಲ ಇವುಗಳ ಸಮನ್ವಯವಿತ್ತು. ಅಂತೆಯೇ ವಚನಸಾಹಿತ್ಯವು ಶ್ರೇಷ್ಠ ಸಾಹಿತ್ಯವಾಗಿರುವದರ ಜೊತೆಗೆ ಅರ್ಥವತ್ತಾದ, ಪರಿಣಾಮಕಾರಿಯಾದ, ಫಲಪ್ರದವಾದ, ಅನುಭಾವವಾಣಿಯಾಗಿ ಬೆಳೆದು ಬಂದಿತು.

ತಮ್ಮ ಜೀವನದಿಂದ, ಸಂದೇಶದಿಂದ, ಬೋಧೆ ಸಾಧನೆಗಳಿಂದ ಶಿವಶರಣರು ತಾವು ಸ್ವತಂತ್ರರು, ವೀರರು, ಧೀರರು, ಮಾನವತೆಯ ಮಂಗಲ

ಕಾಂಕ್ಷೆಗಳು ಎಂಬುದನ್ನು ತೋರಿಸಿಕೊಟ್ಟಿದ್ದಾರೆ. ಸೃಷ್ಟಿಯ ಅದ್ಭುತಶಕ್ತಿಗಳ ಭಯದ ಮೂಲಕ ತಲೆದೋರಿದ ಮಾನವನ ಧಾರ್ಮಿಕ ಮನೋಭಾವವು ಕಾಲಾನುಕ್ರಮದಲ್ಲಿ ವಿವಿಧವಾಗಿ ವಿಕಾಸಗೊಂಡಿದೆ. ವಸ್ತುನಿಷ್ಠ ದೃಷ್ಟಿಯೇ ಆಂತರಿಕ ಮನೋಭಾವವಾಗಿ ಬುದ್ಧಿಯನ್ನೇ ಆಧಾರವಾಗಿಟ್ಟುಕೊಂಡು ಬೆಳವಣಿಗೆ ಹೊಂದಿದ ಒಂದು ಧಾರ್ಮಿಕ ವಿಚಾರಪರಂಪರೆಯಿದೆ. ಅದು ತತ್ತ್ವವಿವೇಚನೆಯ ಫಲವನ್ನು ಒದಗಿಸಿದೆ. ಆಂತರಿಕ ಚಿಂತನೆಯು ಅತೀತ ವಸ್ತುವಿನ ಸಾನ್ನಿಧ್ಯಕ್ಕಾಗಿ ಹೃದಯವನ್ನು ಆಧಾರವಾಗಿಟ್ಟುಕೊಂಡು ವಿಕಾಸಗೊಂಡ ಧಾರ್ಮಿಕದೃಷ್ಟಿಯು ಇನ್ನೊಂದಿದೆ; ಇದು ಅನುಭಾವ ದೃಷ್ಟಿ. ಬುದ್ಧಿಯ ಮೂಲಕ ತತ್ತ್ವವಿವೇಚನೆಯಲ್ಲಿ ಕೊನೆಗೊಳ್ಳುವ ರೀತಿಗಿಂತ ಇದು ಬೇರೆಯಾಗಿದೆ. ಭಾವದ ಉತ್ಕಟತೆಯಿಂದಾಗಿ ಪರಮಾತ್ಮನ ನಾಮಸ್ಮರಣೆ ರೂಪ ದರ್ಶನ ಇವುಗಳಿಂದ ತಲ್ಲೀನತೆಯನ್ನು ಪಡೆಯುವ ಭಕ್ತಿಮಾರ್ಗವೂ ಮತ್ತೊಂದು ತೆರನಾಗಿ ಹೊರಹೊಮ್ಮಿದೆ. ಬುದ್ಧಿಗಮ್ಯ ತತ್ತ್ವವಿವೇಚನೆಯನ್ನು ಭಾವಗಮ್ಯ ತಲ್ಲೀನತೆಯೊಂದಿಗೆ ಸಮನ್ವಯಿಸಿಕೊಂಡು ಅಂತರಾತ್ಮನ ಮೂಲಕ ವೇದ್ಯವಾಗುವ ಪರಮಾತ್ಮನ ಸಾನ್ನಿಧ್ಯ ಸಾಕ್ಷಾತ್ಕಾರಗಳತ್ತ ಸಾಗಿರುವ ಅನ್ಯಭಾವ ಮಾರ್ಗದಲ್ಲಿ ಶಿವಶರಣರು ನಡೆದಿದ್ದಾರೆ.

ಅದೃಶ್ಯಶಕ್ತಿಗಳ ಉಪಾಸನೆಗಾಗಿ ಸ್ತುತಿ ಪ್ರಾರ್ಥನೆಗಳಿಂದ ರೂಪುಗೊಂಡ ಧಾರ್ಮಿಕ ಸಾಹಿತ್ಯದ ಪರಂಪರೆಯು ನಮ್ಮ ದೇಶದಲ್ಲಿದೆ. ಅದು ಮುಂದೆ ತತ್ತ್ವವಿವೇಚನೆಯತ್ತ ಹೊರಳಿ ಬುದ್ಧಿಶಕ್ತಿಯ ಹೆಚ್ಚಳದಲ್ಲಿ ಕೊನೆಗೊಂಡಿದೆ. ಉಪಾಸನೆಗಾಗಿ ರೂಪುಗೊಂಡ ವ್ರತನಿಯಮ ಕರ್ಮಗಳು ಬೆಳೆದುಬಂದವು. ಮುಂದೆ ಈ ಕರ್ಮಕಾಂಡದ ಅತಿರೇಕವಾಗಿ ಈ ಮಾರ್ಗ ಫಲಪ್ರದವಲ್ಲವೆಂಬ ಭಾವನೆಯು ಅಂಕುರವಾಯಿತು. ಅದು ಬೆಳೆದುಬಂದಾಗ ಕರ್ಮಜಾಲದ ಬಗೆಗೆ ವಿರುದ್ಧದೆಸೆಯಲ್ಲಿ ಪ್ರತಿಕ್ರಿಯೆ ಹೊರಹೊಮ್ಮಿತು. ಬುದ್ಧಿಶಕ್ತಿಯ ತಾತ್ವಿಕ ವಿವೇಚನೆಯು ತರ್ಕದ ಜಾಲಕ್ಕೆ ಬಿದ್ದು ತನ್ನ ಪ್ರಯೋಜನವನ್ನು ಕಳೆದುಕೊಂಡಿತು. ಇಹದ ಸುಖದ ಸಾಧನೆಗಳ ಹಂಬಲ ಹೆಚ್ಚಿ ಕರ್ಮಕಾಂಡವು ಅತಿರೇಕಕ್ಕೆಳೆಯಿತು. ಬುದ್ಧಿಗಮ್ಯ ತತ್ತ್ವವಿವೇಚನೆಯು ತರ್ಕದ ಜಾಲದಲ್ಲಿ ಸಿಕ್ಕಿಕೊಂಡಿತು. ಇಹಲೋಕದ ಬಗೆಗೆ ತಲೆದೋರಿದ ಜಿಗುಪ್ಸೆಯು ಸಂಸಾರದಿಂದ ಸಿಡಿದು ನಿಲ್ಲುವ ಶುಷ್ಕ ಸನ್ಯಾಸವಾಗಿ ಪರಿಣಮಿಸಿತು. ಹೀಗೆ ಕರ್ಮ, ಜ್ಞಾನ, ಸನ್ಯಾಸ ಇವುಗಳು ಒಂದಿಲ್ಲೊಂದು ದೃಷ್ಟಿಯಲ್ಲಿ ಜನತೆಗೆ ಅತೃಪ್ತಿಯನ್ನು ತಂದುವು. ಒಮ್ಮೆ ಜನತೆಯು ಭಾವಾ

ವೇಶದ ಭಕ್ತಿಮಾರ್ಗದತ್ತ ಸಾಗಿತ್ತು. ಆದರೆ ಭಾವಶನ್ಯತೆ, ಭಗವಂತನ ಉಪಾಸನೆ, ಪರವಶತೆ ಇವುಗಳು ವಿಕೃತಿಗೊಂಡ ಮೂರ್ತಿಪೂಜೆ, ಕೀಳು ಬಗೆಯ ಲೋಲುಪತೆಗಳಾಗಿಯೂ ಪರಿಣಮಿಸಹತ್ತಿದವು. ಕರ್ಮ, ಜ್ಞಾನ, ವೈರಾಗ್ಯ, ಭಕ್ತಿಗಳು ಜೀವಾತ್ಮ ಪರಮಾತ್ಮರನ್ನು ಒಂದುಗೂಡಿಸುವ ಸಾಧನ ಗಳೇನೋ ಅಹುದು. ಆದರೆ ಅವುಗಳ ಪ್ರಯೋಗವು ಅತಿರೇಕ ವಿಕೃತಿಗ ಳಲ್ಲಿ ಕೊನೆಗೊಂಡು ಮಾನವನು ಅತೃಪ್ತಿಗೊಂಡುದನ್ನು ಧಾರ್ಮಿಕ ಇತಿ ಹಾಸಗಳಲ್ಲಿ ನಾವು ಮತ್ತೆ ಮತ್ತೆ ಕಾಣುತ್ತೇವೆ. ಸಮತೂಕ ತಪ್ಪಿ ವಿಷಮತೆ ತಲೆದೋರಿ ಮಾನವನ ಸುಖದ ಹಸಿವು ಹಿಂಗದೆ ಮಾನವತೆಯು ಕಂಗೆಟ್ಟು ದನ್ನು ಇತಿಹಾಸವು ಹೇಳುತ್ತಿದೆ.

ಹೀಗೇಕೆ ನಡೆಯುತ್ತಿರಬಹುದೆಂಬುದು ವಿಚಾರಿಸಬೇಕಾದ ಪ್ರಶ್ನೆಯಾ ಗಿದೆ. ಆದಿಕಾಲದಿಂದಲೂ ಮಾನವನು ಆನಂದ ಸುಖಗಳಿಗಾಗಿ ಹಂಬಲಿ ಸುತ್ತಿದ್ದಾನೆ. ಅದಕ್ಕಾಗಿ ಧರ್ಮವನ್ನು ಬೆಂಬತ್ತಿದ್ದಾನೆ. ಹೀಗಿದ್ದರೂ ಈ ಸಮಸ್ಯೆ ಬಗೆಹರಿದಿಲ್ಲವೇಕೆ ? ಮೇಲ್ಕಂಡ ಆವುದೊಂದು ಸಾಧನವೂ ಉಚಿ ತವೇ ಅಹುದು. ಆದರೆ ಅವುಗಳ ಅತಿರೇಕ ವಿಕೃತಿಗಳೇ ಮಾನವನನ್ನು ವಿಫಲಗೊಳಿಸಿವೆಯೆನ್ನಬೇಕು. ಈ ಅತಿರೇಕ ವಿಕೃತಿಗಳನ್ನು ಅಳಿಸುವ ಹಾದಿ ಯೊಂದು ದೊರೆತರೆ ಮಾನವನ ಅತೃಪ್ತಿಯು ಕೊನೆಗೊಳ್ಳಬಹುದು. ಇಂತಹ ಒಂದು ಹಾದಿಯನ್ನು ಹಾಕಿ ಕೊಡುವುದೇ ಶಿವಶರಣರ ಕ್ರಾಂತಿಯ ಗುರಿ ಯಾಗಿದ್ದಿತೆಂದು ಹೇಳಬಹುದು. ಕರ್ಮ, ಜ್ಞಾನ, ವೈರಾಗ್ಯ, ಭಕ್ತಿ ಇವು ಗಳ ಸಮನ್ವಯವೇ ಅಂತಹ ಹಾದಿಯಾಗಿತ್ತು. ಈ ಸಮನ್ವಯ ಮಾರ್ಗದ ಸಾಧನೆಯಿಂದ ತಲೆದೋರಿದ ಅನುಭಾವ ದೃಷ್ಟಿಯೇ ಶಿವಶರಣರ ಬಾಳಿನ ಹಾಗು ವಾಣಿಯ ಸಂದೇಶವಾಗಿದೆ. ಅಂತಹ ಒಂದು ಸಂದೇಶ ನಮ್ಮ ನಾಡಿನಲ್ಲಿ ೧೨ನೆಯ ಶತಮಾನದಲ್ಲಿ ಮೊಳಗಿತು. ಜನಜೀವನದ ನಾಡಿ ಯನ್ನು ತಟ್ಟಿತು. ಜನತೆಯಲ್ಲಿ ಹೊಸ ಆಶೋತ್ತರಗಳನ್ನು ತಂದಿತು. ಕಂಗೆಟ್ಟ ಜನತೆಗೆ ದಿಕ್ಸೂಚಿಯಾಯಿತು. ಧಾರ್ಮಿಕ ರಂಗವು ಇದುವರೆಗೆ ಒದಗಿಸಿದ ಅತೃಪ್ತಿಯನ್ನು ಹೊಡೆದೋಡಿಸುವ ಆಶ್ವಾಸನವನ್ನು ಕೊಟ್ಟಿತು. ಧರ್ಮದ ಹಾದಿಯನ್ನು ಸುಗಮಗೊಳಿಸಿತು. ಸಾಮಾಜಿಕ ರಂಗವನ್ನು ಹಸ ನುಗೊಳಿಸಿತು. ಪ್ರಜಾಪ್ರಭುತ್ವದ ಸಮಾಜರಚನೆಯನ್ನು ರೂಪುಗೊಳಿಸಿತು. ಸಾಹಿತ್ಯದ ಮಾರ್ಗವನ್ನು ವಿಶಾಲಗೊಳಿಸಿತು. ಆರ್ಥಿಕ ರಂಗವನ್ನು ಭದ್ರ ಗೊಳಿಸಿತು. ಸಮತೆಯನ್ನು ಸಾಧಿಸುವಲ್ಲಿ ಮುಂದುವರೆಯಿತು. ಸರ್ವರಿಗೂ

ಸರ್ವ ರಂಗಗಳಲ್ಲಿಯೂ ಸುಖವನ್ನು ಕೋರುವ ಶಿವಶರಣರ ಹೊಸ ಸಂದೇಶವು ಅಂದು ಪ್ರಬಲಶಕ್ತಿಯಾಗಿ ಪರಿಣಮಿಸಿತು. ಸಫಲತೆಯ ಆಶ್ವಾಸನದಿಂದೊಡಗೂಡಿದ ನವೀನ ಜಾಗೃತಿಯನ್ನು ನಮ್ಮ ನಾಡಿನಲ್ಲಿ, ನಮ್ಮ ಧರ್ಮದಲ್ಲಿ, ಸಮಾಜದಲ್ಲಿ, ಸಾಹಿತ್ಯದಲ್ಲಿ ಅಂದು ಒಡಮೂಡಿಸಿತು. ಧಾರ್ಮಿಕ ರಂಗದಲ್ಲಿ ಶಿವಶರಣರ ಮಾರ್ಗದ ಪ್ರತಿಭಟನೆಯು ಪ್ರಭಾವಶಾಲಿಯಾಗಿ ಪರಿಣಮಿಸಿತು. ಅಂತಹ ಪ್ರಭಾವಶಾಲಿಯಾದ ಶಿವಶರಣರ ಮಾರ್ಗವನ್ನು ಅರಿತುಕೊಳ್ಳುವದು, ಅದರಲ್ಲಿ ಅಡಕವಾಗಿರುವ ಸಂದೇಶವನ್ನು ವಿವೇಚಿಸುವದು, ಆ ಪ್ರಬಲಶಕ್ತಿಗೆ ಕಾರಣರಾದ ಶಿವಶರಣರ ಬಾಳಿನ ರಹಸ್ಯವನ್ನು ಆ ಕ್ರಾಂತಿಯ ಫಲಗಳನ್ನು ಗುರುತಿಸುವದು ಪ್ರಯೋಜನಕಾರಿಯಾಗುವದು.

ನಮ್ಮ ದೇಶದ ಧಾರ್ಮಿಕ ಇತಿಹಾಸದಲ್ಲಿ ಕಾಲಾನುಕಾಲಕ್ಕೆ ವಿವಿಧ ವಾದ ಪ್ರತಿಭಟನೆಗಳನ್ನು ಕಾಣುತ್ತೇವೆ. ಕರ್ಮಕಾಂಡದ ಅತಿರೇಕದಲ್ಲಿ ರೂಪುಗೊಳ್ಳುತ್ತಿದ್ದ ವೈದಿಕ ಧರ್ಮ ಪರಂಪರೆಯು ಉಪನಿಷತ್ತುಗಳಲ್ಲಿಯೇ ಪ್ರತಿಭಟನೆಯನ್ನು ಎದುರಿಸಬೇಕಾಯಿತು. ಐಹಿಕ ಸುಖಭೋಗಗಳ ಪ್ರಾಪ್ತಿಗಾಗಿ ಯಜ್ಞಯಾಗಾದಿಗಳನ್ನು ಕೈಕೊಳ್ಳುವ ಪರಂಪರೆಯು ಮಾನವನನ್ನು ಎತ್ತರದ ಹಂತಕ್ಕೆ ಒಯ್ಯುವದಿಲ್ಲವೆಂಬುದನ್ನು ಕಂಡುಕೊಳ್ಳಲಾಯಿತು. ಅಲ್ಲದೆ ಯಜ್ಞದ ಹೆಸರಿನಲ್ಲಿ ನಡೆಯುವ ಪಶುವಧೆಯು ಕಾಲಾನುಕ್ರಮದಲ್ಲಿ ಜನತೆಯ ಜುಗುಪ್ಸೆಗೆ ಕಾರಣವಾಗಿರಬಹುದು. ಆಗ ಆತ್ಮಜ್ಞಾನದ ಹಂಬಲು ತಲೆದೋರಿ ಜ್ಞಾನಸಾಧನೆಯಲ್ಲಿ ಪರಾಕಾಷ್ಠೆಯನ್ನು ಕಂಡು ಉಪನಿಷತ್ತುಗಳು ಉದಯವಾದವು. ಐಹಿಕ ಸುಖದ ಮಾಯೆಯ ತೆರೆಯನ್ನು ಸರಿಸಿ ಶುದ್ಧ ಆತ್ಮಜ್ಞಾನಕ್ಕಾಗಿ ಹಂಬಲಿಸಿದ ಪರಬ್ರಹ್ಮನ ಚಿಂತನೆಯ ಉತ್ಕೃಷ್ಟ ಫಲಗಳನ್ನು ಜನತೆಯು ಉಪನಿಷತ್ತುಗಳ ಮೂಲಕ ಪಡೆಯಿತು. ಅನೇಕವಾದ ಭವ್ಯಶಕ್ತಿಗಳ ಉಪಾಸನೆಗೆ ಪ್ರತಿಯಾಗಿ ಸರ್ವಶಕ್ತ ಭಗವಂತನ ಅರಿವು, ಚಿಂತನೆಗಳ ಮಾರ್ಗವನ್ನು ಉಪನಿಷತ್ತುಗಳು ತೆರೆದವು. ಕರ್ಮಕಾಂಡ ಹಿಂದೆ ಸರಿದು ಜ್ಞಾನಕಾಂಡವು ಮುಂದರಿಯಹತ್ತಿತು. ಕಾಲಚಕ್ರ ಉರುಳಿತು. ತರ್ಕಪ್ರಕಾಂಡತೆ ಬೆಳೆಯಿತು. ಬುದ್ಧಿಶಕ್ತಿಯೇ ಮಾನವನ ವಿಚಾರಸರಣಿಯ ಪರಮುಗಮ್ಯವೆಂಬುದು ಬಲಿಯಿತು. ಕಣ್ಣಿಗೆ ಕಾಣುವ ಜಗತ್ತು ಮಿಥ್ಯ, ಕಾಣದ ಬ್ರಹ್ಮ ಸತ್ಯ ಎಂಬ ಸಂದೇಶ ಹಾಗೂ ಬುದ್ಧಿಯಲ್ಲಿಯೇ ಕೊನೆಗಾಣುವ ಮಾರ್ಗ ಜನತೆಗೆ ಬೇಸರವನ್ನುಂಟುಮಾಡುವ ಕಾಲವು ಬಂದಿತು. ಆಗ ಹಿಂದಿನ ಸಂದೇಶ ಜನತೆಯಲ್ಲಿ ಬೇರೂರಿ ಬೆಳೆ

ಯಲು ಸಾಧ್ಯವಾಗಲಿಲ್ಲ. ಹೀಗಾಗಿ ಕರ್ಮಕಾಂಡದ ಬಗೆಗೆ ತಲೆದೋರಿದ ನಿರುತ್ಸಾಹ, ಜ್ಞಾನಕಾಂಡಕ್ಕೂ ಅಂಟಿಕೊಳ್ಳಹತ್ತಿತ್ತು. ವೈದಿಕ ಸಾಂಪ್ರದಾಯದ ಪರಂಪರೆಯಲ್ಲಿ ಭಗವದ್ಗೀತೆಯ ಸಂದೇಶವು ಒಂದು ಮಹತ್ವದ್ದಾದ ಪ್ರತಿಭಟನೆಯಾಗಿ ಮುಂದೆ ಬಂದಿತು. ಕರ್ಮ, ಜ್ಞಾನ, ಭಕ್ತಿಗಳನ್ನು ಸಮನ್ವಯಿಸಿಕೊಂಡ ಫಲಾಪೇಕ್ಷೆಯಿಲ್ಲದ ನಿಷ್ಕಾಮಕರ್ಮವನ್ನು, ಸೃಷ್ಟಿ, ಸೃಷ್ಟಿಕರ್ತರ ಬಗೆಗೆ ಖಚಿತ ಜ್ಞಾನವನ್ನು, ಭಗವಂತನ ಬಗೆಗೆ ಮಾನವನು ಸಲ್ಲಿಸಬೇಕಾದ ಭಕ್ತಿಯನ್ನು ವಿವೇಚಿಸುವ ತರ್ಕಶುದ್ಧ ಹಾಗೂ ಚಿರಂತನ ಮೌಲ್ಯವುಳ್ಳ ಸಂದೇಶವನ್ನು ಭಗವದ್ಗೀತೆಯು ತಂದಿತು. ಅಂದು ಅರ್ಜುನನಿಗೆ ಒದಗಿದ ಮೋಹವನ್ನು, ಮಾನವನಿಗೆ ಆಗಾಗ ಒದಗುವ ಮೋಹವನ್ನು ಹೊಡೆದೋಡಿಸುವಲ್ಲಿ ಗೀತೆ ಕೃತಕೃತ್ಯವಾಯಿತು. ನಮ್ಮ ದೇಶದ ಸಂಸ್ಕೃತಿಯ ಉತ್ಕೃಷ್ಟ ಫಲರೂಪಿಯಾದ ಕೃತಿಯಾಗಿ ನಮಗೆ ಉಳಿದುಬಂದಿದ. ಆದರೆ ಅದೊಂದು ಮಾರ್ಗವಾಗಿ, ಸಾಂಪ್ರದಾಯವಾಗಿ ಜನತೆಯಲ್ಲಿ ಬೆಳೆದು ಬರಲಿಲ್ಲ. ಚಿಂತನಪರ ಗ್ರಂಥವೆಂದು ಅದರ ಯೋಗ್ಯತೆ ಹಿರಿದಾಯಿತು.

ವೈದಿಕಧರ್ಮಕ್ಕೆ ವ್ಯತಿರಿಕ್ತವಾದ ಪ್ರಬಲ ಪ್ರತಿಭಟನೆಯು ಬೌದ್ಧ, ಜೈನ ಧರ್ಮಗಳಿಂದ ಉಂಟಾಗಿದೆ. ವೇದಗಳ ಕರ್ಮ, ಉಪನಿಷತ್ತುಗಳ ತರ್ಕ ಇವುಗಳಿಂದ ಜನತೆಗೆ ಸುಖಶಾಂತಿಗಳು ಲಭಿಸಲಿಲ್ಲವೆಂದು ಗಂಭೀರ ಚಿಂತನಪರನಾದ ಬುದ್ಧದೇವ ಜಗತ್ತಿನಲ್ಲಿಯ ದುಃಖಗಳ ಬೇರನ್ನೇ ಕಿತ್ತೊಗೆಯುವ ಹಾದಿಯನ್ನು ಕಂಡು ಹಿಡಿಯಲು ಹೊರಟ. ಅಹಿಂಸೆಯ ಅಸ್ತಿವಾರವನ್ನು ಹಾಕಿಕೊಂಡ ಜೈನಮತವು ರೂಪುಗೊಂಡಿತು. ಆದರೆ ಈ ಎರಡು ಧರ್ಮಗಳೂ ಸನ್ಯಾಸವೇ ಕೊನೆಯ ಗುರಿಯಾಗಿ ರೂಪುಗೊಂಡವು. ಹೀಗೆ ವೈದಿಕಧರ್ಮವು ಉಪನಿಷತ್ತು, ಭಗವದ್ಗೀತೆ, ಬೌದ್ಧ, ಜೈನಧರ್ಮ ಇವುಗಳ ಮೂಲಕ ಒಂದಿಲ್ಲೊಂದು ಬಗೆಯ ಪ್ರತಿಭಟನೆಯನ್ನು ಎದುರಿಸಿದೆ. ಕರ್ನಾಟಕದ ಶಿವಶರಣರ ಮಾರ್ಗವು ಇನ್ನೊಂದು ಮಹತ್ತರವಾದ ಪ್ರತಿಭಟನೆಯಾಗಿ ರೂಪುಗೊಂಡಿದೆ. ನವೀನತೆ, ಕೆಚ್ಚು, ಆಕರ್ಷಕತೆ, ಸಫಲತೆ, ವಿಧಾಯಕ ಯೋಜನೆ, ಗಂಭೀರ ವಿಚಾರಮಂಥನದಿಂದ ಹೊರಹೊಮ್ಮಿದ ಮಾರ್ಗದರ್ಶನ, ಸಾಮೂಹಿಕ ಪ್ರಯೋಗದ ಸಫಲತೆ, ದೈವೀಸಾಕ್ಷಾತ್ಕಾರದ ಜ್ಯೋತಿ, ಪರಿಣಾಮಕಾರಿ ಪ್ರಯೋಗದ ಮನವರಿಕೆ, ಸುಲಭವಾದ ಸಕಲ

ರಿಗೂ ಸಾಧ್ಯವೆನ್ನುವ ಸಾಧನೆಯ ರೀತಿ, ಹಿಂದಿನ ಪರಂಪರೆಯಲ್ಲಿಯ ಗುಣಾಂಶಗಳ ಸಮೀಕರಣ, ಲೋಪಗಳ ನಿರ್ಮೂಲನ, ಉದಾತ್ತ ಸಂದೇಶದ ಬೋಧನೆ ಸಾಧನೆಗಳೆರಡನ್ನೂ ಸಾಮೂಹಿಕವಾಗಿ ಕೈಕೊಂಡ ಪರಿಣಾಮಕಾರಿ ಪ್ರಯೋಗ, ಆ ಪ್ರಯೋಗದಲ್ಲಿ ನಿರತರಾದ ಅನೇಕ ವ್ಯಕ್ತಿಗಳ ಉಜ್ವಲ ತೇಜಸ್ಸು, ಮಾನವನ ಬಾಳಿನ ಎಲ್ಲ ರಂಗಗಳನ್ನು ಏಕಕಾಲಕ್ಕೆ ಸಮುಚಿತ ವಾಗಿ ರೂಪಿಸುವ ಪ್ರತ್ಯಕ್ಷ ಮಾರ್ಗದ ಆಶ್ವಾಸನೆ, ಇವೆಲ್ಲವುಗಳ ಮೂಲಕ ಶಿವಶರಣರ ಮಾರ್ಗವು ಒಂದು ಅನುಪಮವಾದ ಕ್ರಾಂತಿಯಾಗಿ ಪರಿಣಮಿ ಸಿದೆ. ಅದು ಒಂದು ಅರ್ಥಪೂರ್ಣ ಪ್ರತಿಭಟನೆಯಾಗಿ, ಜಾಗತಿಕ ಧಾರ್ಮಿಕ ಇತಿಹಾಸದಲ್ಲಿ ಸ್ಥಾನ ಪಡೆಯುತ್ತಿದೆ. ಜನತೆಯನ್ನು ಎಚ್ಚರಿಸಿ, ಹುರುಪು ಗೊಳಿಸಿ, ಸತ್ಕಾರ್ಯಕ್ಕಾಗಿ ಪ್ರೇರಿಸಿ ಪ್ರಬಲವಾದ ಜನಶಕ್ತಿಯನ್ನು ಸಂಘ ಟಿಸಿ, ನುಡಿ, ನಡೆ, ವಿಚಾರದೃಷ್ಟಿಕೋನ ಇವುಗಳಲ್ಲಿ ವಿಲಕ್ಷಣವಾದ ನವೀ ನತೆಯನ್ನು ತಂದು ಹೊಸಬಗೆಯ ಬಾಳನ್ನು ರೂಪಿಸಿ, ನವೀನ ಸಮಾಜವನ್ನು ರಚಿಸಿ, ಲೋಕಕಲ್ಯಾಣ ಕಾರ್ಯದಲ್ಲಿ ಆ ಮಾರ್ಗವು ಮುಂದುವರಿಯಿತು. ಒಂದು ಕ್ರಾಂತಿಯಿಂದ ಹೀಗೆ ವಿವಿಧ ಹಾಗೂ ಕಲ್ಯಾಣಕರವಾದ ಪ್ರಯೋ ಜನಗಳು ಫಲಿಸಿದ ಉದಾಹರಣೆಗಳು ಜಗತ್ತಿನ ಇತಿಹಾಸದಲ್ಲಿ ವಿರಳವಾಗಿವೆ. ಇಂತಹ ಒಂದು ಅನುಪಮ ಕ್ರಾಂತಿಯು ಕರ್ನಾಟಕದಲ್ಲಿ ೧೨ನೆಯ ಶತ ಮಾನದಲ್ಲಿ ನಡೆಯಿತು. ರಾಜಕೀಯ ವಿಷಮತೆಯಿಂದಾಗಿ ಆ ಕ್ರಾಂತಿ ದೀರ್ಘಕಾಲದ ವರೆಗೆ ಬೆಳೆದು ಬರಲಿಲ್ಲ. ಅಲ್ಪಕಾಲಿಕವಾಗಿದ್ದರೂ ಶಿವಶರ ಣರ ಕ್ರಾಂತಿಯು ಬೆಳಸಿದ ಸಂಘಟಿಸಿದ ಶಕ್ತಿವಿಶೇಷಗಳು ಬಹು ಪರಿಣಾಮ ಕಾರಿಯಾಗಿ ಪರಿಣಮಿಸಿವೆ. ೧೫ನೆಯ ಶತಮಾನದ ವರೆಗೆ ಆ ಶಕ್ತಿಪ್ರವಾ ಹವು ಗುಪ್ತಗಾಮಿನಿಯಾಗಿ ಹರಿದಂತಿದೆ. ೧೫ನೆಯ ಶತಮಾನದಲ್ಲಿ ಮಗು ದೊಮ್ಮೆ ಪ್ರಬಲ ಸಂಘಟನೆಯೊಂದು ರೂಪುಗೊಂಡಿದೆ. ಕರ್ನಾಟಕದ ಸಾಹಿತ್ಯ, ರಾಜಕೀಯ ಇತಿಹಾಸ, ಧಾರ್ಮಿಕ ಪರಂಪರೆ, ಸಾಮಾಜಿಕ ರಚನೆ, ಜನತೆಯ ಸಂಸ್ಕೃತಿ ಇವುಗಳಿಗೆಲ್ಲ ಹೊಸ ದಿಸೆಯನ್ನು ಶಿವಶರಣರ ಮಾರ್ಗವು ಕಲ್ಪಿಸಿಕೊಟ್ಟಿದೆ. ಆಧುನಿಕ ಯುಗದ ಅನೇಕ ಬಗೆಯ ವಿಚಾರ ಪ್ರಣಾಲಿಯು ೮೦೦ ವರುಷಗಳ ಹಿಂದಿನ ಈ ಕ್ರಾಂತಿಯಲ್ಲಿ ಅಡಕವಾಗಿದ್ದುದನ್ನು ನಾವು ಇಂದು ಗುರುತಿಸುತ್ತೇವೆ, ಅರ್ಥಾತ್ ಇಂದಿನ ಭಾರತದ ಆಶೋತ್ತರಗಳನ್ನು ಕರ್ನಾಟಕವು ೮೦೦ ವರುಷಗಳ ಹಿಂದೆಯೇ ರೂಪಿಸುವಲ್ಲಿ ಮುನ್ನಡೆದು ದನ್ನು ನಾವು ಕಾಣುತ್ತೇವೆ. ಇಂದಿನ ಯುಗದ ಮಹಾತ್ಮರ, ಹಾಗೂ

ಮಹರ್ಷಿಗಳ ದೃಷ್ಟಿ, ಬೋಧನೆ ಸಾಧನೆಗಳ ಸಾರವನ್ನು ಶಿವಶರಣರ ಮಾರ್ಗವು ಒಳಗೊಂಡಿತ್ತೆನ್ನಬಹುದು. ಈ ದೂರದೃಷ್ಟಿ, ದಿವ್ಯದೃಷ್ಟಿ ಇವುಗಳಿಂದ ಕೂಡಿದ ಶಿವಶರಣರ ಮಾರ್ಗವು ಉದಾತ್ತವೂ, ತೇಜಸ್ವಿಯೂ, ಮಂಗಲಕರವೂ ಎಂಬುದನ್ನು ಒಪ್ಪಿಕೊಳ್ಳಬೇಕಾಗುತ್ತದೆ. ಇಂತಹ ಶಿವಶರಣರ ಮಾರ್ಗದ ಹಿರಿಮೆಯನ್ನು ಅರಿತುಕೊಳ್ಳುವಲ್ಲಿ ದೇಶದ ನಾಡಿನ ಮಂಗಲ ಚಿಂತನೆಯಿದೆಯೆನ್ನಬಹುದು. ಬೀದಿಯಲ್ಲಿ ಬಿದ್ದ ಮಾಣಿಕ್ಯ ಹೊಳಿದ್ದು ನಿಧಾನವಾಗಿ ನಮ್ಮ ಕಣ್ಮರೆಯಾದಂತೆ ತೋರಬಹುದು. ಅಂತಹ ಮಾಣಿಕ್ಯವನ್ನು ಗುರುತಿಸಿಕೊಳ್ಳಬೇಕಾದುದು ನಮ್ಮ ಕರ್ತವ್ಯ. ಅದನ್ನು ಪಡೆದು ಅದರ ಪ್ರಯೋಜನವನ್ನು ರೂಢಿಸಿಕೊಳ್ಳುವಲ್ಲಿ ಮಾನವಕುಲದ ಕಲ್ಯಾಣವು ಅಡಕವಾಗಿದೆ. ಶಿವಶರಣರ ಮಾರ್ಗವನ್ನು ಸರಿಯಾಗಿ ಅರಿತುಕೊಂಡು ಅಳವಡಿಸಿಕೊಳ್ಳುವುದಾದರೆ ಮಾನವಕುಲದ ಐಕ್ಯ, ಸುಖ, ಶಾಂತಿಗಳು ಕೇವಲ ಕಲ್ಪನೆಯಾಗಿ ಉಳಿಯಬಾರವು. ಇಂತಹ ಕಲ್ಪನೆಗಳನ್ನು ಕುರಿತು ಹೆಚ್ಚಾಗಿ ಚರ್ಚೆ ನಡೆದಿರುವ ಈ ಯುಗದಲ್ಲಿ ಶಿವಶರಣರ ಮಾರ್ಗದ ಮನನವು ಎಂದಿಗಿಂತಲೂ ಇಂದು ಹೆಚ್ಚು ಅವಶ್ಯಕವೆಂದು ತೋರುತ್ತಿದೆ.

# ಅನುಭವ ಪದ



ಮನಕೆ ಮನನ ತರ್ಕಮಾಡಿ ತಿಳಿದು ನೋಡೆಲೊ !
ನರಕದೊಳು ಬಿದ್ದು ಹೊರಳಾಡಬೇಡೆಲೊ !
ಗುರುಮಾರ್ಗ ಹಿಡಿಯೆಲೊ ॥ಪಲ್ಲ॥

(೧) ನಂದು–ನಿಂದು ಆಶೆ–ಮಾಯೆ ಮಮತೆ ಬಹಳೆಲೊ !
ಅಲ್ಲ ಶರಿ ! ಮಕ್ಕಳುಮರಿ ಯಾರಿಗ್ಯಾರೆಲೊ !
ಆರಿಗಾರೆಲೊ !
ಗುರುಮಾರ್ಗ ಹಿಡಿಯೆಲೊ !

(೨) ಬಾಡಿಗಿ ಜಾಗಾ ನಂದು–ಅಂತಿ ಹೆಂಗ ನೋಡೆಲೊ !
ಹೇಗೆ ನೋಡೆಲೊ
ವತನ–ಜಾಗಾ ಒಲ್ಲೆನಂದರೆ ಬಿಟ್ಟೀತು ಹೆಂಗಲೊ
ಹೇಗೆ ಬಿಟ್ಟೀತು ಹೇಳೆಲೊ !
ಅಲ್ಲಿ ಶೋಧ ಮಾಡೆಲೊ

(೩) ಗಾದಿ–ಲೋಡು ಪಲ್ಲಂಗ–ಮಚ್ಛರದಾನಿ ಸುಳ್ಳೆಲೊ !
ಸದಾ-ಇರುವದು ನಿನ್ನ ಮನೆ ಯಾವಕಡೆ
ತಿಳಿದು ನೋಡೆಲೆ !
ಅಲ್ಲಿ ಶೋಧಮಾಡೆಲೊ !

(೪) ಮನಕೆ–ಮನನ ತರ್ಕ ಮಾಡಿ ತಿಳಿದು ನೋಡೆಲೊ
ನರಕದೊಳು ಬಿದ್ದು ಹೊರಳಾಡಬೇಡೆಲೊ !
ಗುರುಮಾರ್ಗ ಹಿಡಿಯೆಲೊ

(೧)

॥ ಕಂದ ॥

ಶ್ರೀ ಮತ್ಸದ್ಗುರುನಾಥಾ ।
ಕೋಮಲ ಚರಿತಾ ! ಪುನೀತವರ ಶುಭಗಾತ್ರಾ !
ಕಾಮಿತ ಫಲವನ್ನೀಯ್ವೆ !
ಸ್ವಾಮಿ ! ಶ್ರೀಗುರು ಮಡಿವಳ ಶಿವಯೋಗೀಂದ್ರಾ ! (೧)

ಮಡಿವಾಳೇಶ್ವರ ಸ್ವಾಮಿಯೆ !
ಮಡಿಯಾಗಿರುವಂಥ ನಿನ್ನ ಚರಣಾಂಬುಜದೊಳ್ !!
ಮಡಿಮಡಿಯಿಂ ಪೊಡಮಡುವೆಂ
ಮಡಿಯದ ಸಂಪದವನಿತ್ತು ಪೊರೆ ಜಗದೊಡೆಯಾ ! (೨)

ಜಯ ! ಜಯ ! ಸದ್ಗುರುನಾಥಾ !
ನಯದಿಂ ನಿನ್ನನ್ನು ನಮಿಸಿ ಪಾಡುತ್ತಿಹೆವು !!
ರಯದಿಂದೆಮ್ಮನು ಪೊರೆಯ್ವೆ !
ಜಯ ! ಜಯ ! ಶ್ರೀಗುರು ಮಡಿವಳ ಶಿವಯೋಗೀಂದ್ರಾ ! (೩)

(೨)

ವಾರ್ಧಿಕ

ಭಾರತದಿ ಹೆಸರಾಂತ ಶ್ರೀ ಮಡಿವಳೇಶ್ವರನ
ಚಾರುತರ ಶಾಂತಮಯ ಗದ್ದುಗೆಯು ತಾಣದಿಂ
ಪೂರಿಜನ ನಿಕರದಿಂ ಶಿವಶರಣರಿಂ ಶಾನೆ ಮಾಂಗಲ್ಯವಾಗಿರ್ಪುದು !
ಸುರಸ ಸಂಗೀತ ಸಾಹಿತ್ಯ ಸತ್ಕಲೆಗೆ ಸಾ-
ಧಾರಮಾಗಿರ್ದ ವರಕರ್ಣಾಟ ಪ್ರಾಂತದೊಳ್
ಗರಗವಿದು ಗಿರಿರಾಜ ಶಂಕರನ ಪ್ರತ್ಯಕ್ಷ ಕೈಲಾಸವಾಗಿರ್ಪುದು (೧)

ಪರಿಶುದ್ಧಮಯವಾದ ವರಬಿಲ್ವ ವನಗಳಿಂ
ಪರಿಪಕ್ವವಾಗಿರುವ ಮಾಕಂದ ಬನಗಳಿಂ
ಪರಮ ಸುಂದರವಾದ ಸಂಜೀವ ಶಿಕ್ಷಣದ ಸತ್ಕೇಂದ್ರ ಸಾಲೆಯಿಂದೆ

ಗರಗವಿಷು ದೊಡವಾಡ, ತಡಕೋಡ, ಬೆಟಗೇರಿ,
ಉರುತರದ ವ್ರೀಹಿಗಳು ಬೆಳೆಯುತಿಹ ಕೋಟೂರು,
ವರದ ಮಂಗಳಗಟ್ಟಿ, ಹಂಗರಕ್ಕಿ ಮೊದಲಾದ ಗ್ರಾಮಗಳ ಗಡಣದಿಂದೆ
(೨)

ಆರೋಗ್ಯಸಂಪತ್ತಿಗಾಧಾರವಾಗಿರುವ
ನೀರು ಹವೆ ನೆಲಗಳಿಂ ಗದುಗಗಳ ಗುಂಪಿನಿಂ
ಧಾರುಣಿಗೆ ಮಿಗಿಲಾದ ಧಾನ್ಯವಂ ಬೆಳೆಯುತಿಹ ಹೆಸರಾಂತ
ಹೊಲಗಳಿಂದೆ
ಗರಗವಿದು ಕರುಣಾಳು ಸಂಪನ್ನ ಕ್ರಾಂತಿಯುತ
ಗುರುಗಳಿಂ ಮಾಂಗಲ್ಯಕರವಾದ ಮಠಗಳಿಂ
ಹರಳಯ್ಯ ಕಕ್ಕಯ್ಯ ಕೇತಯ್ಯರಂ ಪೋಲ್ವ ಮಾಮಹಿಮರಿಂದೆ (೩)

ಬಣಜಿಗರ ಬೃಂದದಿಂ ಬ್ರಾಹ್ಮಣರ ಕೇರಿಯಿಂ
ಬಣಗಾರ ಬಳಗದಿಂ ನೇಕಾರ ನಿಕರದಿಂ
ಪಣಿಗಾರ ಮೇಳದಿಂ ಮೇಧಾವಿ ಜನಗಳಿಂ ಮಿಗಿಲಾದ ಕೃಷಿಕರಿಂದೆ
ಕರಣಿಕರ ಸಂಘದಿಂ ಗೌಡರಾ ಗಡಣದಿಂ
ಹಿರಿಕಿರಿಯ ಕಾಯಕದಿ ಹೆಸರಾಂತ ಶಬರದಿಂ
ಗರಗವಿದು ಗಂಗಾ ಪ್ರವಾಹದೊಲು ಮಾಂಗಲ್ಯಕರವಾಗಿ
ಹೊಳೆಯುತಿಹುದು (೪)

-ಆನಂದ ಕವಿ, ಗುರಗುಂದ

---

## ರಾ|| ಬ|| ಡಾಕ್ಟರ, ಫ. ಗು. ಹಳಕಟ್ಟಿಯವರ
### ಸನ್ಮಾನ ನಿಧಿಗೆ ಹಣ ಕೊಟ್ಟವರು.

ರಾ|| ಬ|| ಡಾಕ್ಟರ ಫ. ಗು. ಹಳಕಟ್ಟಿಯವರಿಗೆ ಕೆಳಗೆ ಕಾಣಿಸಿದ ಮಾಹನೀಯರು ನಿಧಿಯನ್ನು ಶ್ರೀ ಮ. ನಿ. ಪ್ರ. ಮೃತ್ಯುಂಜಯ ಸ್ವಾಮಿಯವರ ಕಡೆಗೆ ಕೊಟ್ಟವರ ಯಾದಿಃ—

(೧) ಪದ್ಮನಾಥ ೧ ರೂ. (೨) ಶ್ರೀನಿವಾಸರಾವ ೧ ರೂ. (೩) ಅಣ್ಣಾಜಿ ರಾವ ೧ ರೂ. (೪) ಹಾಕುರ್ಜಿ ೧ ರೂ. (೫) ಶೀತಾರಾಮರಾವ ೧ ರೂ. (೬) ಮುಹಬತರಾವ ೫ ರೂ. (೭) ವೀರಯ್ಯನವರು ೫ ರೂ. (೮) ಕೊಟ್ರಪ್ಪನವರು ೫ ರೂ. (೯) ಗುರುಸಿದ್ದಯ್ಯನವರು ೫ ರೂ. (೧೦) ಅಪ್ಪಯ್ಯನವರು ೧೫ ರೂ. (೧೧) ವೀರಭದ್ರಯ್ಯ ಸ್ವಾಮಿಗಳು ೫ ರೂ. (೧೨) ಪಟ್ಟದ ದೇವರು ೫ ರೂ. (೧೩) ಶ್ರೀ ಷಡಕ್ಷರ ದೇವರು ೫ ರೂ. (೧೪) ಚಂದ್ರಶೇಖರ ಪಟ್ಟದ ದೇವರು ೫ ರೂ. (೧೫) ಪಾಲಾಕ್ಷಯ್ಯನವರು ೫ ರೂ. (೧೬) ಬಸವಂಣೇಗೌಡ್ರು ೫ ರೂ. (೧೭) ಗುರುಶಿದ್ದ ಸ್ವಾಮಿಗಳು ೫ ರೂ. (೧೮) ಶಿವಮೂರ್ತಿ ಸ್ವಾಮಿಗಳು ೫ರೂ. (೧೯) ಶಿವಬಸವ ಸ್ವಾಮಿಗಳು ೫ರೂ. (೨೦) ಮಹಾಲಿಂಗ ಸ್ವಾಮಿಗಳು ೫ ರೂ. (೨೧) ಗಂಗಾಧರ ದೇವರು ೫ ರೂ. (೨೨) ರಾಮದುರ್ಗ ಸ್ವಾಮಿಗಳು ೫ ರೂ. (೨೩) ಮುನ್ನೊಳ್ಳಿ ಸ್ವಾಮಿಗಳು ೫ ರೂ. (೨೪) ರೋಣದ ಸ್ವಾಮಿಗಳು ೫ ರೂ. (೨೫) ಚಿಕ್ಕೋಡಿ ಸ್ವಾಮಿಗಳು ೫ ರೂ. (೨೬) ಬೈಲಹೊಂಗಲ ಸ್ವಾಮಿಗಳು ೫ ರೂ. (೨೭) ಕಡಕೋಳ ಸ್ವಾಮಿಗಳು ೫ ರೂ. (೨೮) ಜಡಿ ಸ್ವಾಮಿಗಳು ೧೦ ರೂ. (೨೯) ಕಲ್ಯಾಣ ಸ್ವಾಮಿಗಳು ೫ ರೂ. (೩೦) ತಡವಲಗಾ ಸ್ವಾಮಿಗಳು ೫ ರೂ. (೩೧) ಶಿವಪುರ ಸ್ವಾಮಿಗಳು ೫ ರೂ. (೩೨) ಕೊಳಟನೂರ ಸ್ವಾಮಿಗಳು ೫ ರೂ. (೩೩) ಮಲ್ಲನಕೇರಿ ಸ್ವಾಮಿಗಳು ೫ ರೂ. (೩೪) ಶಿರಸಿ ಸ್ವಾಮಿಗಳು ೫ ರೂ. (೩೫) ಶಿತ್ತೂರ ಸ್ವಾಮಿಗಳು ೫ ರೂ. (೩೬) ಕಲ್ಯಾಣ ಸ್ವಾಮಿಗಳು ಹುಬ್ಬಳ್ಳಿ ೫ ರೂ. (೩೭) ಗಿರಿಸಾಗರ ಪಟ್ಟದ್ದೇವರು ೫ ರೂ. (೩೮) ಪುರದ ಪಟ್ಟದ್ದೇವರು ೫ ರೂ. (೩೯) ಶಿವರುದ್ರಯ್ಯ ಸ್ವಾಮಿಗಳು ೨ ರೂ. (೪೦) ನರನೂರ ಮಾಸ್ತರರು

೫ ರೂ. (೪೧) ಟೆಂಗಿನ ಮಠದ ಸ್ವಾಮಿಗಳು ೫ ರೂ. (೪೨) ಆಲಮಟ್ಟಿ ಪಟ್ಟದ್ದೇವರು ೫ ರೂ. (೪೩) ನಾಗಭೂಷಣ ಸ್ವಾಮಿಗಳು ೫ ರೂ. (೪೪) ಅಂದಾನೆಯ ಸ್ವಾಮಿಗಳು ೫ ರೂ.

ರಾ|| ಬ|| ಡಾಕ್ಟರ ಫ. ಗು. ಹಳಕಟ್ಟಿಯವರಿಗೆ ಕೆಳಗೆ ಕಾಣಿಸಿದ ಮಹನೀಯರು ನಿಧಿಯನ್ನು ಶ್ರೀತ್ಯಾಗವೀರ ಶಿ. ಶಿ. ಚಿತ್ತರಗಿಯವರ ಕಡೆಗೆ ಕೊಟ್ಟವರ ಯಾದಿಯು.

(೧) ಶ್ರೀಮತಿ ಪಾರ್ವತಿದೇವಿ ಹುಂಬರವಾಡಿ ಅಧ್ಯಕ್ಷಣಿ ದುರದುಂಡೇಶ್ವರ ಮಠ ಅಕ್ಕನಬಳಗ ಚಿಕ್ಕೋಡಿ ೧೦೧ ರೂ. (೨) ಚಿಕ್ಕೋಡಿ ಚರುತಿಮಠದ ಅಕ್ಕನಬಳಗ ೧೦ ರೂ. (೩) ಚಿಕ್ಕೋಡಿ ಎಮ್. ಎಲ್. ಊರವರಿಂದ ೫ ರೂ. (೪) ವಿಜಯ ಮಹಾಂತೇಶ ಹಾಯಸ್ಕೂಲ ಹುನಗುಂದ ೩೩ ರೂ. ೧೩ ಆಣೆ. (೫) ಗಂಡುಮಕ್ಕಳ ಕನ್ನಡಶಾಳಾ ರೋಣ ೨೫ ರೂ. (೬) ಶ್ರೀ ಯತ್ತಿಮನಿ ಸಬ್ಬಜಜ್ಜರು ಹೊನ್ನಾವರ ೧೦ ರೂ. (೭) ಚಾವಣಗೇರಿ ಲಿಂಗೇಶ್ವರರ ಮಠದ ಭಕ್ತಜನರಿಂದ ೬೫ ರೂ. (೮) ರೋಣದ ಇಂಗ್ಲೀಷ ಶಾಳಾ ಊರ ಅಕ್ಕನಬಳಗದವರಿಂದ ೪೫ ರೂ. ಒಟ್ಟು ಜಮಾ ೧೮೪ ರೂ. ೧೩ ಆ.

ಮುಧೋಳ
೨—೧೨—೧೯೫೬

ತ್ಯಾಗವೀರ ಶಿ. ಚಿತ್ತರಗಿ,
ಗೌರವ ಕಾರ್ಯದರ್ಶಿ,
ರಾ|| ಬ|| ಫ. ಗು. ಹಳಕಟ್ಟಿಯವರ
ನಿಧಿಯ ಕಮಿಟಿ, ಮುಧೋಳ

